ಹೊಸ ವರ್ಷದ ಶುಭಾಶಯಗಳು

# ಹೊಸತು

ಜನವರಿ ೨೦೧೦

ಬೆಲೆ : ರೂ. ೩೫




ನೆಮ್ಮದಿಯ ನಾಳೆ ನಮ್ಮದು

ರಾಷ್ಟ್ರೀಯ ಜೀವವೈವಿಧ್ಯ ವರ್ಷ

ವಿಶೇಷ ಸಂಚಿಕೆ




# ಬಿಡಿಎ–ಆಧುನಿಕ ಬೆಂಗಳೂರಿನ ಶಿಲ್ಪಿ



ಶ್ರೀ ಬಿ.ಎಸ್. ಯಡಿಯೂರಪ್ಪ
ಸನ್ಮಾನ್ಯ ಮುಖ್ಯಮಂತ್ರಿಗಳು

ಬೆಂಗಳೂರು ಜಗತ್ತಿನಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಕೆಲವೇ ಮಹಾ ನಗರಗಳಲ್ಲೊಂದು. 2021ರ ವೇಳೆಗೆ ಇಲ್ಲಿಯ ಜನಸಂಖ್ಯೆ 1 ಕೋಟಿ ತಲುಪಲಿದೆ. ಭಾರತದ ತಂತ್ರಜ್ಞಾನ ರಾಜಧಾನಿ, ಸಿಲಿಕಾನ್ ವ್ಯಾಲಿ ಬೆಂಗಳೂರು ರಾಷ್ಟ್ರದ ಆರ್ಥಿಕ ಬೆಳವಣಿಗೆಯಲ್ಲಿ ಅತಿ ಮುಖ್ಯ ಪಾತ್ರ ವಹಿಸುತ್ತಿದೆ. ಬೆಂಗಳೂರಿನ ಈ ಭಾರೀ ಮುನ್ನಡೆಗೆ ಇಲ್ಲಿನ ವಿದ್ಯಮಿಕ-ಬೌದ್ಧಿಕ ಸಾಮರ್ಥ್ಯಗಳು, ನಿರಂತರ ಪ್ರಗತಿಪರ ಖಾಸಗೀ, ಸರ್ಕಾರೀ ಕಾರ್ಯ ಚಟುವಟಿಕೆಗಳೇ ಕಾರಣ.

ಇಂದು ಅಂತರರಾಷ್ಟ್ರೀಯ ಮಹಾನಗರವಾಗುತ್ತಿರುವ ಬೆಂಗಳೂರಿನ ರಭಸದ ಬೆಳವಣಿಗೆಗೆ ಅಗತ್ಯವಾದ ಭಾರಿ ಪ್ರಮಾಣದ ವಸತಿ ಸೌಲಭ್ಯ, ರಸ್ತೆ, ಉತ್ತಮ ಸಾರಿಗೆ ವ್ಯವಸ್ಥೆ, ಮೌಲ್ಯಾಧಾರಿತ ಸೇವೆ ಸೌಕರ್ಯಗಳನ್ನು ಒದಗಿಸುವ ಕಾರ್ಯಗಳು ನಿರಂತರವಾಗಿ ಅಷ್ಟೇ ರಭಸದಿಂದ ಸಾಗುತ್ತಿವೆ.

ಬೆಂಗಳೂರಿನ ಸಮರ್ಪಕ ಬೆಳವಣಿಗೆ, ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿಯೇ ಜನ್ಮ ತಳೆದ ಬಿಡಿಎ (ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ) ತನ್ನ 30 ವರ್ಷಗಳ ಸಾರ್ಥಕ ಜೀವನಾವಧಿಯಲ್ಲಿ ಮಹಾನಗರದ ಬೆಳವಣಿಗೆಗೆ ಹೊಸ ತಿರುವು ನೀಡಿ, ಬೆಂಗಳೂರಿನ ಸರ್ವಾಂಗೀಣ ಅಭಿವೃದ್ಧಿಯ ಆಧಾರಸ್ತಂಭವಾಗಿ ಬೆಳೆದು ನಿಂತಿದೆ.

## ವಸತಿ ಸೌಲಭ್ಯ ಪೂರೈಕೆಯಲ್ಲಿ ಬಿಡಿಎ ಇಷ್ಟು ವರ್ಷಗಳಲ್ಲಿ ಸಾಧಿಸಿರುವ ಅಪೂರ್ವ ಸಾಧನೆಗಳು.

- ನಿರ್ಮಿಸಿರುವ ಬಡಾವಣೆಗಳು - ಮಲ್ಲೇಶ್ವರಂ, ಬಸವನಗುಡಿ, ಮೊದಲ್ಗೊಂಡು ಏಷ್ಯದ ಅತಿದೊಡ್ಡ ಮತ್ತು ಅತ್ಯುತ್ತಮ ಯೋಜಿತ ಬಡಾವಣೆಗಳಾದ ಜಯನಗರ, ಕೋರಮಂಗಲ, ಬಿಟಿಎಂ, ಎಚ್‌ಎಸ್‌ಆರ್, ಆರ್‌ಎಂವಿ, ಇಂದಿರಾನಗರ, ಎಚ್‌ಬಿಆರ್, ವಿಜಯನಗರ, ಎಚ್‌ಆರ್‌ಬಿಆರ್, ಬಿಎಸ್‌ಕೆ ಬಡಾವಣೆಗಳು ಇತ್ತೀಚಿನ ಅರ್ಕಾವತಿ ಬಡಾವಣೆಯವರೆಗೆ ಸುಮಾರು 62 ಬಡಾವಣೆಗಳನ್ನು ರೂಪಿಸಿದೆ. ಇದರ ಮೂಲಕ ಸುಮಾರು 2 ಲಕ್ಷ ವಸತಿ ನಿವೇಶನಗಳನ್ನು ಸೃಷ್ಟಿಸಿದೆ.
- ನಗರದ ಸಮತೋಲನವಾದ ಬೆಳವಣಿಗೆಗೆ ಮತ್ತು ಸಾಂಸ್ಕಿಕ ಚಟುವಟಿಕೆಗಳಿಗಾಗಿ ನಾಗರಿಕರ ಸೌಲಭ್ಯದ (ಸಿಎ) ನಿವೇಶನಗಳನ್ನು ರೂಪಿಸಿ ನಗರಕ್ಕೆ ಒಂದು ಹೊಸ ರೂಪ ಕೊಟ್ಟಿದೆ. ನ್ಯಾಷನಲ್ ಪಬ್ಲಿಕ್ ಸ್ಕೂಲ್, ಸೋಫಿಯಾ ಹೈಸ್ಕೂಲ್, ಪ್ರೆಸಿಡೆನ್ಸಿ ಸ್ಕೂಲ್, ಸ್ಟೆಲ್ಲಾ ಮೇರಿಸ್ ಸ್ಕೂಲ್, ಬೆಥಾನಿ ಸ್ಕೂಲ್ ಮುಂತಾದ ಹೆಸರಾಂತ ಶಾಲೆಗಳು ಹಾಗೂ ನ್ಯಾಷನಲ್ ಕಾಲೇಜ್, ಮೌಂಟ್ ಕಾರ್ಮೆಲ್ ಕಾಲೇಜ್, ವಿಜಯ ಕಾಲೇಜ್, ಜ್ಯೋತಿ ನಿವಾಸ್ ಕಾಲೇಜ್, ಎನ್‌ಐಎಫ್‌ಟಿ, ಐಎಸ್‌ಎಸ್ ಶಿಕ್ಷಣ ಸಂಸ್ಥೆಗಳು, ರಮಣ ಮಹರ್ಷಿ ಅಕಾಡೆಮಿ ಫಾರ್ ಬ್ಲೈಂಡ್, ಎಸ್‌ಎಂಕೆಆರ್‌ವಿ ಮುಂತಾದ ಪ್ರತಿಷ್ಠಿತ ಕಾಲೇಜುಗಳಿಗೆ ನಿವೇಶನಗಳನ್ನು ಒದಗಿಸಿದೆ.
- ನಾಗರಿಕರ ಮನರಂಜನೆ, ಸೌಕರ್ಯ, ಆರೋಗ್ಯ, ಕಲೆ, ಸಾಹಿತ್ಯ, ಸಂಸ್ಕೃತಿಯ ಪ್ರವರ್ಧನೆಗೂ ಬಿಡಿಎ ಆದ್ಯತೆ ನೀಡಿದೆ. ಕ್ಲಬ್‌ಗಳು, ಅಂಚೆ ಕಚೇರಿಗಳು, ಕ್ರೀಡಾಂಗಣ, ರಂಗಮಂದಿರ ಆಸ್ಪತ್ರೆಗಳಿಗೆ ಸೂಕ್ತ ನಿವೇಶನ ನೀಡಿದೆ. ಮೋದಿ ಆಸ್ಪತ್ರೆ, ಬೆಂಗಳೂರು ಕಿಡ್ನಿ ಫೌಂಡೇಶನ್, ಬೆಂಗಳೂರು ವೈದ್ಯಕೀಯ ಮತ್ತು ಕ್ಯಾನ್ಸರ್ ಸಂಶೋಧನಾ ಕೇಂದ್ರ ಮುಂತಾದ ಆಸ್ಪತ್ರೆಗಳು, ಚೌಡಯ್ಯ ಸ್ಮಾರಕ ಭವನ, ರಂಗ ಶಂಕರ, ಲಲಿತಕಲಾ ಮಂದಿರದಂತಹ ಸಾಂಸ್ಕೃತಿಕ ಕೇಂದ್ರಗಳು ಮುಂತಾದವುಗಳು ಬಿಡಿಎ ರೂಪಿಸಿರುವ ಸಿಎ ನಿವೇಶನಗಳಲ್ಲಿ ತಲೆಯುತ್ತಿವೆ.

## ಪರಿಸರ ಕಾಳಜಿ

- ಎಲ್ಲಾ ವಸತಿ ಪ್ರದೇಶಗಳಲ್ಲಿ ಉದ್ಯಾನಗಳ ನಿರ್ಮಾಣ ಮತ್ತು ಬಯಲು ಸ್ಥಳಗಳ ಅನುಕೂಲಕ್ಕೆ ವ್ಯವಸ್ಥೆ.
- ಕೆರೆಗಳ ಸಂರಕ್ಷಣೆ - ನಗರದ ಸೌಂದರ್ಯ ಮತ್ತು ವಾತಾವರಣ ಕಾಪಾಡಲು ಪ್ರಯತ್ನ, ಲಾಲ್‌ಬಾಗ್, ಬೆನ್ನಿಗಾನಹಳ್ಳಿ ಮತ್ತು ಅಗರ ಕೆರೆಗಳ ನವೀಕರಣ ಮತ್ತು ನಿರ್ವಹಣೆ.

## ಮೂಲ ಸೌಕರ್ಯ ಅಭಿವೃದ್ಧಿಗೆ ಆದ್ಯಗಮನ

- ಇಂದಿರಾನಗರ, ಬನಶಂಕರಿ, ಎಚ್‌ಎಸ್‌ಆರ್ ಬಡಾವಣೆ, ಎಚ್‌ಬಿಆರ್ ಬಡಾವಣೆ ಮುಂತಾದ ವಿವಿಧ ಬಡಾವಣೆಗಳಲ್ಲಿ 15 ವಾಣಿಜ್ಯ ಸಂಕೀರ್ಣಗಳ ನಿರ್ಮಾಣ.
- ನಗರದ ವಾಹನ ಸಂಚಾರ ದಟ್ಟಣೆಯನ್ನು ತಪ್ಪಿಸಲು ಮತ್ತು ವಾಹನಗಳ ಸುಲಲಿತ ಸಂಚಾರಕ್ಕಾಗಿ ಹೊರ ವರ್ತುಲ ರಸ್ತೆ ನಿರ್ಮಾಣದ ಜೊತೆಗೆ ಹಲವಾರು ಸಂಚಾರ ವ್ಯವಸ್ಥೆ. ಡೈರಿ ವೃತ್ತ, ವೈಟ್‌ಫೀಲ್ಡ್ ರಸ್ತೆ, ಕೇಂದ್ರ ರೇಷ್ಮೆ ಮಂಡಳಿ, ಹೆಬ್ಬಾಳ, ಆನಂದರಾವ್ ವೃತ್ತ, ವಿಮಾನ ನಿಲ್ದಾಣ ರಸ್ತೆ ಮತ್ತು ಜಯದೇವ ಆಸ್ಪತ್ರೆ ಜಂಕ್ಷನ್‌ನಲ್ಲಿ ಏಳು ಹೊಸ ಗ್ರೇಡ್ ಸೆಪರೇಟರ್‌ಗಳ ನಿರ್ಮಾಣ.

## ವಿಶೇಷ ಚಟುವಟಿಕೆಗಳು

- ಬಿಡಿಎ ಆಧುನಿಕತೆಯ ವಾತಾವರಣಕ್ಕೆ ಸರಿಸಾಟಿಯಾಗಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಣೆ ಮಾಡುತ್ತಾ ಸಾಗಿದೆ. ಆರೋಗ್ಯ ಕ್ಷೇತ್ರಕ್ಕೂ ಅಡಿ ಇಟ್ಟಿದೆ. ಬೌರಿಂಗ್ ಆಸ್ಪತ್ರೆಯಲ್ಲಿ ಅಪಘಾತ ತುರ್ತು ಚಿಕಿತ್ಸಾ ವಿಭಾಗ ನಿರ್ಮಿಸಿದೆ.
- ಆಧುನಿಕ ಸ್ವರೂಪದ ತ್ಯಾಜ್ಯ ನೀರಿನ ಸಂಸ್ಕರಣಾ ಸ್ಥಾವರದ ಸ್ಥಾಪನೆ ಮೂಲಕ ಲಾಲ್‌ಬಾಗ್ ಮತ್ತು ಕಬ್ಬನ್ ಪಾರ್ಕ್‌ನಲ್ಲಿ ಮಾಲಿನ್ಯ ನೀರು ಶುದ್ಧೀಕರಣದಲ್ಲಿ ಹೊಸ ಅಧ್ಯಾಯ ಆರಂಭಿಸಿದೆ.
- ಲಾಲ್‌ಬಾಗ್ ಗಾಜಿನ ಮನೆ ಮತ್ತು ಗಾಂಧಿ ಭವನವನ್ನು ನವೀಕರಿಸಿ ಐತಿಹಾಸಿಕ ಸ್ಮಾರಕಗಳ ಸಂರಕ್ಷಣಾ ಕಾರ್ಯಕ್ಕೂ ತನ್ನನ್ನು ತೊಡಗಿಸಿಕೊಂಡಿದೆ.

## ದೂರದೃಷ್ಟಿಯ ಯೋಜನೆಗಳು

- ಪೆರಿಫೆರಲ್ ವರ್ತುಲ ರಸ್ತೆ ನಿರ್ಮಾಣದ ಮೂಲಕ ಸಂಚಾರ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಪರಿವರ್ತನೆ ತರುವ ನಿಟ್ಟಿನಲ್ಲಿ ಬಿ.ಡಿ.ಎ. ಕಾರ್ಯೋನ್ಮುಖವಾಗಿದೆ.

## ನಗರದ ಸುತ್ತ ಹೊಸ ಬಡಾವಣೆಗಳು

- ನಗರದ ಹೊರವಲಯದಲ್ಲಿ ಸುಮಾರು 56 ಗ್ರಾಮಗಳನ್ನು ಒಳಗೊಂಡಂತೆ ಐದು ಪರಿಸರ ಸ್ನೇಹಿ ಬಡಾವಣೆ ನಿರ್ಮಿಸಲು ನಿರ್ಧರಿಸಿದೆ. ಭೂ ಮಾಲೀಕರ ಸಕ್ರಿಯ ಪಾಲ್ಗೊಳ್ಳುವಿಕೆ ಮತ್ತು ಸಹಕಾರದೊಡನೆ ಈ ಕಾರ್ಯ ಸಾಧನೆ.
- ಸಾರ್ವಜನಿಕರಿಗೆ ವಿವಿಧ ಅಳತೆಗಳ 90,000 ನಿವೇಶನಗಳ ಹಂಚಿಕೆಗೆ ಯೋಜನೆ.
- ಈಗಾಗಲೇ ಕೆಂಪೇಗೌಡ ಬಡಾವಣೆ ನಿರ್ಮಾಣದ ಪ್ರಕ್ರಿಯೆ ಆರಂಭವಾಗಿದೆ.

## ಕೆರೆಗಳ ಸಮಗ್ರ ಅಭಿವೃದ್ಧಿ

- ಕೆರೆಗಳ ಸಮಗ್ರ ಅಭಿವೃದ್ಧಿಗಾಗಿ ಸಣ್ಣ ನೀರಾವರಿ ಮತ್ತು ಜಿಲ್ಲಾ ಪಂಚಾಯತ್ ಒಟ್ಟು 12 ಕೆರೆಗಳನ್ನು ಬಿಡಿಎಗೆ ವಹಿಸಿದೆ. ಅಭಿವೃದ್ಧಿಪಡಿಸಲಾಗುವ ಕೆರೆಗಳು - ಉಲ್ಲಾಳ, ಮಲ್ಲತ್ತಹಳ್ಳಿ, ಕೊಮ್ಮಘಟ್ಟ, ರಾಮಸಂದ್ರ, ಜಕ್ಕೂರು, ಪಟೇನಹಳ್ಳಿ, ಸಂಪಿಗೆಹಳ್ಳಿ, ವೆಂಕಟೇಶ್‌ಪುರ, ಸೋಮಾಪುರ, ಕೋಣಸಂದ್ರ, ತಲಗಟ್ಟಪುರ ಮತ್ತು ಕೊತ್ತನೂರು ಕೆರೆಗಳು.

## ಪರಿಷ್ಕೃತ ಮಾಸ್ಟರ್ ಯೋಜನೆ 2015

- ಮುಂಬರುವ ಹತ್ತು ವರ್ಷಗಳಿಗೆ ಈ ಯೋಜನೆ. 1,219.50 ಚ.ಕಿ.ಮೀ.ಗಳ ಸ್ಥಳೀಯ ಯೋಜನಾ ಪ್ರದೇಶ ಈ ಯೋಜನೆಗೆ ಸೇರ್ಪಡೆ. ಗ್ರೇಟರ್ ಬೆಂಗಳೂರು ಪ್ರದೇಶವೂ ಇದಕ್ಕೆ ಸೇರ್ಪಡೆ.



**ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ**

ಟಿ. ಚೌಡಯ್ಯ ರಸ್ತೆ, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು-20
www.bdabangalore.org

ಬಿಡಿಎ ಮುಂದಾಳತ್ವದಲ್ಲಿ ಬೆಂಗಳೂರು ಅಭಿವೃದ್ಧಿ ಪಥದಲ್ಲಿ








## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

## "... ಎದ್ದೇಳಿ... ಗ್ರಾಹಕರೇ... ಎದ್ದೇಳಿ..."

# ರಾಷ್ಟ್ರೀಯ ಗ್ರಾಹಕರ ದಿನಾಚರಣೆ - 2009

**ದಿನಾಂಕ : 24-12-2009**

## ಗ್ರಾಹಕರ ಹಕ್ಕುಗಳು

1) ರಕ್ಷಣೆಯ ಹಕ್ಕು (Right to Safety)
2) ಆಯ್ಕೆಯ ಹಕ್ಕು (Right to Choose)
3) ಮಾಹಿತಿ ಪಡೆಯುವ ಹಕ್ಕು (Right to Information)
4) ದೂರು ನೀಡುವ ಹಕ್ಕು (Right to be Heard)
5) ಪರಿಹಾರ ಪಡೆಯುವ ಹಕ್ಕು (Right to Redressal)
6) ಗ್ರಾಹಕರ ಶಿಕ್ಷಣ ಹಕ್ಕು (Right to Consumer Education)

ಧ್ಯೇಯ :- ''ಹಣಕಾಸಿನ ಅರಿವು - ಖರ್ಚು ವೆಚ್ಚದ ಉಳಿವು''

"Be Financially Literate — Save Your Investments"

* * * * *

**ಎಂ. ಮದನ್ ಗೋಪಾಲ್**, ಭಾ.ಆ.ಸೇ.,
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ,
ಕರ್ನಾಟಕ ಸರ್ಕಾರ, ಬೆಂಗಳೂರು



**ಹೆಚ್. ಆರ್. ಶ್ರೀನಿವಾಸ**, ಭಾ.ಆ.ಸೇ.,
ಆಯುಕ್ತರು,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ,
ಕರ್ನಾಟಕ ಸರ್ಕಾರ, ಬೆಂಗಳೂರು




ಸಂಪುಟ-೧೧ ಸಂಚಿಕೆ - ೬ ಜನವರಿ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**URL : www.navakarnataka.com**
**http://navakarnataka.blogspot.com**
**http://hosathu.blogspot.com**

# ಸಂಪಾದಕೀಯ

ಇದು 'ಹೊಸತು'ವಿನ ಹನ್ನೊಂದನೆಯ ವರ್ಷದ ಮಧ್ಯ ಭಾಗದಲ್ಲಿ ಹೊರಬರುತ್ತಿರುವ ಸಂಚಿಕೆ. ಅಂತೆಯೇ, ಹತ್ತನೆಯ ವಿಶೇಷ ಸಂಚಿಕೆ. ಎಂದಿನಂತೆ ನಮ್ಮೆಲ್ಲ ಸ್ನೇಹಿತರ ಸಹಕಾರದಿಂದ ಇದು ರೂಪುಗೊಳ್ಳಲು ಸಾಧ್ಯವಾಗಿದೆ. ನಮ್ಮ ಓದುಗರು ಮತ್ತು ಲೇಖಕರ ಬಳಗ ಹಾಗೂ ಜಾಹಿರಾತು ನೀಡಿರುವ ಎಲ್ಲ ವ್ಯಕ್ತಿಗಳು ಮತ್ತು ಸಂಸ್ಥೆಗಳು ಈ ಸಂಚಿಕೆಗೆ ಬೆಂಬಲವಾಗಿ ನಿಂತಿದ್ದಾರೆ. ಅವರಿಗೆಲ್ಲಾ ನಮ್ಮ ಹೃತ್ಪೂರ್ವಕ ವಂದನೆಗಳು.

ಹಲವು ವಿದ್ವಾಂಸರ ವಿಚಾರಪೂರಿತ ಲೇಖನಗಳಲ್ಲದೆ ಮೌಲಿಕವಾದ ಕತೆ-ಕವನ-ಹಾಸ್ಯಬರಹಗಳು ಪ್ರತಿ ವರ್ಷದಂತೆಯೇ ಈ ಬಾರಿಯೂ ನಮ್ಮ ವಾರ್ಷಿಕ ಸಂಚಿಕೆಗೆ ಮೆರುಗು ನೀಡಿವೆ. ವಿಶೇಷವೆಂದರೆ ಈ ಬಾರಿ ಐದು ಸಂದರ್ಶನ ಲೇಖನಗಳು, ಒಂದು ಮಹಿಳಾ ಗೋಷ್ಠಿಯ ಚರ್ಚೆ ಮತ್ತು ಎರಡು ಸಮಗ್ರ ಅವಲೋಕನಗಳು ಈ ಸಂಚಿಕೆಯಲ್ಲಿ ಸೇರಿವೆ. ಇಲ್ಲಿಯ ಸಂದರ್ಶನಗಳು ಲೋಕಾಭಿರಾಮವಾದ ಮಾತುಕತೆಗಳು, ಸಂಭಾಷಣೆಗಳು, ವೈಯಕ್ತಿಕ ಸಾಧನೆಗಳ ಪರಿಚಯ, ಇತ್ಯಾದಿಯಲ್ಲ. ಆಯಾ ವಿಷಯಗಳಿಗೆ ಸಂಬಂಧಿಸಿದ ಸರ್ವಾಂಗೀಣ ಚರ್ಚೆಯ ರೂಪದಲ್ಲಿ ಹೊರಹೊಮ್ಮಿರುವ ವಿಶ್ಲೇಷಣೆಗಳು, ಸಮಸ್ಯೆಗಳನ್ನೆದುರಿಸಲು ಕಂಡುಕೊಳ್ಳಬೇಕಾದ ಹಾದಿಗಳು, ಜನಸಮುದಾಯದ ದೃಷ್ಟಿಯಿಂದ ಪ್ರಸ್ತುತವಾದ ಪರಿಹಾರಾತ್ಮಕವಾದ ಸೂಚನೆಗಳು ಪ್ರತಿ ಸಂದರ್ಶನದಲ್ಲೂ ಕೇಂದ್ರ ಸ್ಥಾನದಲ್ಲಿವೆ. ಇಂದಿನ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ತುರ್ತುಗಳ ಹಿನ್ನೆಲೆಯಲ್ಲಿ ನಮ್ಮ ಸಂಸ್ಕೃತಿ, ಶಿಕ್ಷಣ, ಕಲೆ, ವಿಜ್ಞಾನ, ಮತ್ತು ಸಹಕಾರ ತತ್ವಗಳ ನಿರೂಪಣೆಯ ಮೂಲಕ ಸಾಮಾಜಿಕ-ಆರ್ಥಿಕ-ರಾಜಕೀಯ ಜವಾಬ್ದಾರಿಗಳ ಅಗಾಧತೆಯನ್ನು ಮನದಟ್ಟು ಮಾಡಿಕೊಡುವಂತಹ ಸಂದರ್ಶನಗಳು ಇಲ್ಲಿವೆ. ಸಂದರ್ಶನಗಳನ್ನು ಸಂಯೋಜಿಸಿ ನಡೆಸಿಕೊಟ್ಟ ಎಲ್ಲ ಮಿತ್ರರಿಗೂ ನಾವು ಋಣಿಗಳು. ವಿಶ್ವವಿಖ್ಯಾತ ಚಿಂತಕ ನೋಮ್ ಚೋಮ್‌ಸ್ಕಿಯನ್ನು ಈ ಸಂಚಿಕೆಗಾಗಿ ಶ್ರೀ ಕೆ. ಎಸ್. ಪಾರ್ಥಸಾರಥಿಯವರು ಖುದ್ದಾಗಿ ಭೇಟಿಯಾಗಿ ಸಂದರ್ಶಿಸಿದ್ದಾರೆ. ಇದು ಖಂಡಿತ ಅಪರೂಪದ ವಿಷಯ, 'ಹೊಸತು'ವಿಗೆ ಹೆಮ್ಮೆಯ ಸಂಗತಿ. ಬೇರೆ ಸಂದರ್ಶನಗಳು ಸಹ ಮೌಲ್ಯಯುತವಾದುವೆಂದು ನಮ್ಮ ಓದುಗರು ಒಪ್ಪುತ್ತಾರೆಂಬ ಭರವಸೆ ಇದೆ. ಇಂದು ಹೇರಳವಾಗಿ ಚರ್ಚೆ-ವಿವಾದಗಳಿಗೆ ವಸ್ತುವಾಗಿರುವ ವಸ್ತ್ರ ಸಂಹಿತೆಯ ಬಗ್ಗೆ ಬೇರೆಬೇರೆ ಕ್ಷೇತ್ರಗಳ ಆರೇಳು ಮಂದಿ ಕಾರ್ಯಕರ್ತರು ಸಮಕಾಲೀನ ಒತ್ತಡಗಳನ್ನು ಕುರಿತು ವಿಮರ್ಶಿಸಿದ್ದಾರೆ, ಅದು ಮಹಿಳೆಯರ ಪ್ರಶ್ನೆಯೇ ಏಕಾಗಿದೆ ಎಂಬುದನ್ನು ಪ್ರಶ್ನಿಸಿದ್ದಾರೆ, ಸಾಂಸ್ಕೃತಿಕ ದೃಷ್ಟಿಯನ್ನು ಪ್ರತಿಫಲಿಸಿದ್ದಾರೆ. ಇಡೀ ವರ್ಷದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಘಟನೆಗಳು, ಅವುಗಳ ಪರಿಣಾಮ, ನಮ್ಮ ದೇಶದ ಪಾತ್ರ, ನಮ್ಮ ಸೋಲು-ಗೆಲುವುಗಳು ಮತ್ತು ಅವೆಲ್ಲದರ ಹಿನ್ನೆಲೆಯಲ್ಲಿ ನಮ್ಮ ಮುಂದಿರುವ ಸವಾಲುಗಳನ್ನೆದುರಿಸುವ ಬಗೆ, ಇವನ್ನೆಲ್ಲಾ ಸೂಕ್ಷ್ಮವಾಗಿ ಮತ್ತು ಸವಿವರವಾಗಿ ಶ್ರೀ ಮುರಳೀಧರ್ ಮತ್ತು ಶ್ರೀ ಸೀಯಾರ್ಕೆ ತೆರೆದಿಟ್ಟಿರುವುದು ಓದುಗರನ್ನು ತಾರ್ಕಿಕ-ಚಾರಿತ್ರಿಕ ಚಿಂತನೆಗೆ ಹಚ್ಚುವುದರಲ್ಲಿ ಫಲಕಾರಿಯಾಗುತ್ತದೆಂಬ ನಂಬಿಕೆ ನಮ್ಮದು. ಒಟ್ಟಿನಲ್ಲಿ, ಕತೆ-ಕವನ-ಲೇಖನ ಮುಂತಾದುವೆಲ್ಲಾ ಸೇರಿದಂತೆ ಈ ಸಂಚಿಕೆಯ ಸಾಮಗ್ರಿಯು ಕ್ರಿಯಾತ್ಮಕ ಹೆಜ್ಜೆಗಳಿಗೆ ತುಸು ಚಿಂತನೆಯನ್ನು ಒದಗಿಸಿಕೊಟ್ಟಿದೆಯೆಂದು ಭಾವಿಸುತ್ತೇವೆ.

ವಾರ್ಷಿಕ ಸಂಚಿಕೆಗೆ ಪ್ರಕಾಶಕರು ಎಷ್ಟು ಪುಟಗಳನ್ನು ಮೀಸಲಿರಿಸಿದರೂ ಸಾಲದೆಂಬ ನಮ್ಮ ಆಕ್ಷೇಪ ಹೊಸದೇನಲ್ಲ; ಆದರೆ ಎಲ್ಲವನ್ನೂ ಈ ಒಂದು ಸಂಚಿಕೆಯಲ್ಲಿ ಹೇಳಿಬಿಡಬೇಕೆಂಬ ಅವಸರವೂ ಇಲ್ಲ. ಆದಾಗ್ಯೂ, ಈ ಸಂಚಿಕೆಯಲ್ಲಿ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಮುರಳೀಧರ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಿಶೇಷಾಂಕ | ರೂ. ೩೫/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ತಿಂಗಳ ಪತ್ರಿಕೆ
ಹೊಸತು



ನವಕರ್ನಾಟಕ ಪ್ರಕಾಶನ

# ಸಂಪಾದಕೀಯ

ಪ್ರಕಟವಾಗಬೇಕಾಗಿದ್ದ ಕೆಲವು ಬರಹಗಳು ಹಾಗೇ ಉಳಿದಿವೆ. ಕಾರಣಾಂತರಗಳಿಂದ ಅದು ಅನಿವಾರ್ಯ. ಅವನ್ನು ಬರುವ ಸಂಚಿಕೆಗಳ ಪ್ರಕಟಿಸಲಾಗುತ್ತದೆ. ಅದಕ್ಕೆ ಲೇಖಕರ ಮತ್ತು ಓದುಗರ ಸಮ್ಮತಿ ಬೇಡುತ್ತೇವೆ.

* * *

ಕರ್ನಾಟಕದ ರೆಡ್ಡಿ ಸೋದರರು, ತಮಿಳುನಾಡಿನ ಎ. ರಾಜ ಮತ್ತು ಝಾರ್ಖಂಡ್‌ನ ಮಧು ಕೋಡ ಇಂದು ರಾಷ್ಟ್ರದ ಲಾಂಛನಗಳ ಭ್ರಷ್ಟತೆಯು ಎಷ್ಟು ಆಳವಾಗಿದೆಯೆಂಬುದರ ಒಂದು ಸಂಕೇತ ಇದು. ಅಂಬಾನಿ ಲಪಟಾಯಿಸಿರುವ ಅನಿಲ, ಪಾಸ್ಕೋ ಕಬಳಿಸಲಿರುವ ಒರಿಸ್ಸಾ ಖನಿಜ ಮತ್ತು ಅಂತಹ ಬೇರೆ ನೂರಾರನ್ನು ಸೇರಿಸಿದರೆ ಸ್ವಿಟ್ಜರ್ಲೆಂಡಿನ ಬ್ಯಾಂಕುಗಳು ಫಲವತ್ತಾಗಿರುವುದರ ಕಾರಣ ತಿಳಿಯುತ್ತದ ದೇಶದ್ರೋಹದ ಆಪಾದನೆ ಮಾಡಲು ಹಿಂದೆಲ್ಲಾ ಹಿಂಜರಿಕೆ ಇರುತ್ತಿತ್ತು. ಈಗ ಅಂಥದೇನೂ ಉಳಿದಿಲ್ಲ. ದೊಡ್ಡ ರಾಜಕೀಯ ಪಕ್ಷಗಳಲ್ಲಿ ವಿಷಯದಲ್ಲಿ ಸಮಾನತೆ ಇದೆ. ಅವನ್ನೆಲ್ಲಾ ನಿಯಂತ್ರಿಸುವವರು ಕಳ್ಳ ಖದೀಮರು ಎಂಬ ಭಾವನೆ ಹರಡುತ್ತಿದೆ. ರೆಡ್ಡಿ ಬಂಧುಗಳ ಮಾತ ಕರ್ನಾಟಕದಲ್ಲಿ ಭಾಜಪಕ್ಕೆ ಶ್ರುತಿವಾಕ್ಯ; ಮೋಹನ ಭಾಗವತ್ ಪಾಪ, ಹೆಸರಿಗಷ್ಟೇ ಅಧ್ವರ್ಯು. ಮಧು ಕೋಡ ಕಾಂಗ್ರೆಸ್-ಬಿಜೆಪಿ ಎರಡಕ ಸೇರಿದವನು. ಇನ್ನು ಎ. ರಾಜನ ರಾಜತ್ವ ಹೇಳುವುದೇ ಬೇಡ : ಒಂದೊಂದು ಹಗರಣದಲ್ಲೂ ೬೦,೦೦೦ ಕೋಟಿ ಹೊಡೆಯುವ ಭೂಪ ನಮ್ಮದು ಎಂತಹ ದೇಶ ಆಗಿಹೋಗಿದೆ ! ಉಪನ್ಯಾಸ ನೀಡಲು ೫೦೦೦ ವರ್ಷಗಳ ಇತಿಹಾಸ, ಉನ್ನತ ಸಂಸ್ಕೃತಿ, ಗೀತೆ, ವೇದ, ಎಲ್ಲಾ ಇವ ಮಾತೆಯರು-ಸ್ವಾಮಿಗಳು-ರವಿಶಂಕರ-ಭಾಗವತ್ ಎಲ್ಲಾ ದೇಶವನ್ನು ಉದ್ಧಾರ ಮಾಡುವವರೇ. ವ್ಯಕ್ತಿತ್ವ, ಪ್ರಾಮಾಣಿಕತೆ, ಕಾಳಜಿ, ಯಾವುದ ಇಲ್ಲದ ಕ್ರಿಮಿಗಳು ದೇಶವನ್ನು ''ಮುನ್ನಡೆಸುವುದು'' ಹೀಗೆಯೇ. ಅದರ ಬಗ್ಗೆ ಅನುಮಾನ ಬೇಡ.

ಚಿದಂಬರಂ ಹೇಳಿದ್ದನ್ನೇ ಪ್ರಣವ ಮುಖರ್ಜಿ ಹೇಳಿದ್ದಾರೆ, ಅದನ್ನೇ ನಾಳೆ ಮನಮೋಹನ ಸಿಂಗ್ ಹೇಳುತ್ತಾರೆ. ಮೂರು ಜನ ಆಶಯವೂ ಒಂದೇ : ದೇಶವನ್ನು ಫ್ಯಾಸಿಸ್ಟ್ ಹಿಂಸೆಗೆ ಗುರಿಮಾಡುವುದು. ಪ್ರಣವ ಶಿಖಾಮಣಿ ಎಡಪಕ್ಷಗಳಿಗೆ ಹೇಳುತ್ತಾರೆ, ನಮ್ಮ ನೀ ಸರಿಯಿಲ್ಲವೆನಿಸಿದರೆ ಚುನಾವಣೆಯಲ್ಲಿ ಗೆದ್ದುಬಂದು ಅವನ್ನು ಬದಲಿಸಿ, ಎಂದು. ನವರತ್ನ ಸಾರ್ವಜನಿಕ ಉದ್ದಿಮೆಗಳನ್ನು ಖಾಸಗಿಯವರಿ ಹಂಚಬೇಕೆನ್ನುವ ಸರ್ಕಾರದ ನೀತಿಯನ್ನು ಟೀಕಿಸಿದವರಿಗೆ ಇದು ಉತ್ತರ ! ಜನರ ಸಂಪತ್ತೆಂದರೆ ಅವರಿಗೆ ಎಷ್ಟು ಅನಾದರ ! ಚುನಾವ ಗೆಲ್ಲದಿದ್ದರೆ ಪ್ರಜಾಪ್ರಭುತ್ವದಲ್ಲಿ ಜನರಿಗೆ, ಜನಪ್ರತಿನಿಧಿಗಳಿಗೆ, ಬೇರೆ ಇನ್ನಾವ ಪಾತ್ರವೂ ಇಲ್ಲವೆ ? ಅಮೆರಿಕಾಕ್ಕೆ ದೇಶವನ್ನು ಒತ್ತೆಯಿಡುವವರನ ಧಿಕ್ಕರಿಸಲು ಸಹ ಅವರಿಗೆ ಕರ್ತವ್ಯವಿರುವುದಿಲ್ಲವೆಂದರ್ಥವೆ ? ಅಮೆರಿಕಾದ ಅಧ್ಯಕ್ಷರನ್ನು ಇಷ್ಟು ಬಾರಿ ಭೇಟಿ ಮಾಡಿದ್ದಾರಲ್ಲಾ ನಮ್ಮ ದೇಶ ಪ್ರಧಾನಿಗಳು, ಎಂದಾದರೂ ಯಾರಾದರೂ ಭೋಪಾಲಿನ ಕೊಲೆಪಾತಕಿ ಆಂಡರ್ಸನ್ ಎಂಬುವವನನ್ನು ನಮ್ಮ ದೇಶಕ್ಕೆ ಒಪ್ಪಿಸಬೇಕೆಂದ ಒತ್ತಾಯಿಸುವುದಿರಲಿ, ಸೂಚನೆಯನ್ನಾದರೂ ನೀಡಿದ್ದಾರೆಯೆ ? ಇದು ಪ್ರಜಾಪಾತಕಿಗಳ ಲಕ್ಷಣ, ಪ್ರಜಾಪ್ರಭುತ್ವದ ಲಕ್ಷಣವಲ್ಲ. ಹೋಗಲಿ ಚುನಾವಣೆಗಳಲ್ಲಿ ಗೆಲ್ಲಲು ಎಲ್ಲರೂ ನೂರು-ನೂರು ಕೋಟಿಗಳನ್ನು ಎಲ್ಲಿಂದ ತರಬೇಕೆಂದು ಮುಖರ್ಜಿ ನಿರೀಕ್ಷಿಸುತ್ತಾರೆ ? ವಿರೋಧ ಪಕ್ಷಗಳ ಚುನಾವಣೆಗಾಗಿ ಐದು ವರ್ಷ ಮೂಕರಾಗಿ ಕೂತಿದ್ದು ಮುಖರ್ಜಿ ಬಣದ ದ್ರೋಹವನ್ನು ಮನ್ನಿಸುತ್ತಿರಬೇಕೆ ? ಹಾಗಿದ್ದರೆ, ಜನರ ಚಳುವಳಿಗಳನ್ನು ನಡೆಸುವುದೂ ವ್ಯರ್ಥ ಮತ್ತು ತಪ್ಪು ಎಂದಾಯಿತು : ಅವರೂ ಮತ ಚಲಾಯಿಸಲು ಸಹನೆಯಿಂದ ಕೈಕಟ್ಟಿ ಕುಳಿತಿರಬೇಕು ಅಷ್ಟೆ. ದೆಹಲಿಯ ಬಳಿ ಗುಡಗಾಂವ್‌ನಲ್ಲಿ ಒಂದು ಕಾರ್ಮಿಕ ಸಂಘ ಮಾಡಹೊರಟರೆ ದಬ್ಬಾಳಿಕೆ ನಡೆಸುವ ಮಾಲಿಕ ಮತ್ತು ಅವನನ ಪೋಷಿಸುವ ಸರ್ಕಾರ ಒಬ್ಬ ಪಾರ್ಲಿಮೆಂಟ್ ಸದಸ್ಯನನ್ನು (ಗುರುದಾಸ್ ದಾಸ್‌ಗುಪ್ತ) ದಸ್ತಗಿರಿ ಮಾಡುತ್ತದೆ ! ದೇಶದ ಜನ ನಾಟಕ ಪ್ರೇಕ್ಷಕರಂತೆ ರಂಗದ ಮೇಲೆ ನಡೆಯುತ್ತಿರುವುದನ್ನು ಸುಮ್ಮನೆ ನೋಡುತ್ತಿರಬೇಕು, ಅವರು ರಂಗಸ್ಥಳಕ್ಕೆ ಹತ್ತಬಾರದು, ಎಂದು ಹೇಳು ಮುಖರ್ಜಿ - ದಂಡು ರೂಪಿಸುತ್ತಿರುವ ತತ್ವವನ್ನು ನಕ್ಸಲೀಯರ ತತ್ವದೊಂದಿಗೆ ಹೋಲಿಸಿದರೆ ಇಬ್ಬರೂ ಒಂದೇ ನೆಲೆಯವರೆಂದ ತಿಳಿಯುತ್ತದೆ. ''ನಾವು ಮಾಡುವುದೇ ಹೀಗೆ, ನೀವೇನು ಬೇಕಾದರೂ ಹೇಳಿಕೊಳ್ಳಿ'' ಎಂದು ಚಿದಂಬರಂ-ಪ್ರಣವ್ ಹೇಳುವಂತೆ ನಕ್ಸಲರು ಹೇಳುತ್ತಾರೆ. ಹಾಗಾದರೆ, ಅವರನ್ನೇಕೆ ದೂಷಿಸಬೇಕೆಂಬುದನ್ನು ಚಿದಂಬರಂ ವಿವರಿಸಲಿ. ದೇಶದಲ್ಲಿ ಘರ್ಷಣೆಯು ಸರ್ಕಾರ ಮತ್ತು ನಕ್ಸಲ ನಡುವೆ ಮಾತ್ರ ಎಂದಾದರೆ ಇತರರೆಲ್ಲಾ ಇದ್ದೂ ಇಲ್ಲದಂತಹ ವ್ಯಕ್ತಿಗಳು, ಪಕ್ಷಗಳು, ಶಕ್ತಿಗಳು. ಪ್ರಜಾಪ್ರಭುತ್ವವನ್ನು ಫ್ಯಾಸಿಸ್ಟ್ ಯಂತ್ರವನ್ನಾಗಿಸು ಮನಮೋಹನ-ಚಿದಂಬರಂ-ಪ್ರಣವ್ ಹುನ್ನಾರವನ್ನು ಸೋಲಿಸುವುದು ೨೦೧೦ರಲ್ಲಿ ಪ್ರಜೆಗಳ ಆದ್ಯ ಹೊಣೆಯಾಗಿದೆ. ಪ್ರಣವ್ ಗ್ಯಾಂಗಿ ರುಚಿಸದಿದ್ದರೂ ಜನರು ಹೋರಾಟಗಳನ್ನು ತೀವ್ರವಾಗಿ ನಡೆಸುತ್ತಿರುತ್ತಾರೆ. ಏಕೆಂದರೆ ಅವರಿಗೆ ನೈಜ ಪ್ರಜಾಪ್ರಭುತ್ವದಲ್ಲಿ ನಿಷ್ಠೆ ಇದೆ.

## ಈ ತಿಂಗಳು

ಜೈರಾಮ್ ರಮೇಶ್ ಎಂಬ ಸುಂದರಾಂಗನೊಬ್ಬ ಕೇಂದ್ರ ಸಚಿವ. ಆತ ಅಮೆರಿಕಾದ ದಾಸನಾಗಲು ಸಂಪೂರ್ಣವಾಗಿ ಅರ್ಹ ಕೋಪನ್‌ಹೇಗನ್‌ನಲ್ಲಿ ಅಭಿವೃದ್ಧಿಶೀಲ ದೇಶಗಳ ಸಾಲಿನಲ್ಲಿ ನಿಲ್ಲುವುದನ್ನು ಬಿಟ್ಟು ಅಮೆರಿಕಾ ಪಾದದಡಿಯಲ್ಲಿ ನಲಿಯಬೇಕೆಂದು ಈತ ಸಲಹೆ. ಪರಿಸರ ಸಂರಕ್ಷಣೆಗೆ, ಮಾನವಕುಲದ ಹಿತಕ್ಕೆ ಇದೇ ನಿಚ್ಚಳವಾದ ಹಾದಿಯೆಂದು ಈತ ಪ್ರಧಾನಿಗೆ ಸಲಹೆ ನೀಡಿದ್ದುದು ಅಕ್ಷಮ್ಯ. ಅರ ಸಂರಕ್ಷಣೆಗಿಂತಲೂ ಅಮೆರಿಕಾ ಸಂರಕ್ಷಣೆ ಈತನಿಗೆ ಹೆಚ್ಚು ಪ್ರಿಯವಾದ್ದು. ಇತ್ತೀಚೆಗೆ ಈ ಸಚಿವರು ಭೋಪಾಲ್‌ಗೆ ಹೋಗಿದ್ದಾಗ 'ಅನಿಲ ದುರಂತ ಆಗಿಹೋದ ಕತೆ, ಯೂನಿಯನ್ ಕಾರ್ಬೈಡ್ ಈಗಿಲ್ಲ, ಈಗಿನ ಡೌ ಕೆಮಿಕಲ್ಸ್ ಎಂಬ ಕಂಪನಿಯು ಅನಿಂದ್ಯವಾದ್ದು, ಜನರು ಇಂದಿನ ಯುಗ ಹೊಂದಿಕೊಳ್ಳಬೇಕು' ಎಂದೆಲ್ಲಾ ಸಂದೇಶ ನೀಡಿದ್ದರು. ಭೋಪಾಲ್‌ನಲ್ಲಿ ಈಗ ವಿಷವೇನೂ ಉಳಿದಿಲ್ಲವೆಂದು ಜನರಿಗೆ ಸಾಧಿಸಿ ತೋರಿಸಲ ಈತ ಯೂನಿಯನ್ ಕಾರ್ಬೈಡ್ ಕಾರ್ಖಾನೆ ಇದ್ದಲ್ಲಿಗೆ ಹೋಗಿ ಮಣ್ಣನ್ನು ನಾಟಕೀಯವಾಗಿ ಕೈಗೆತ್ತಿಕೊಂಡು ಕೂಗಿಕೊಂಡ : ''ನೋಡಿ, ಎಲ್ಲಿ ವಿಷ ? ನಾನಿನ್ನೂ ಬದುಕಿದ್ದೇನೆ.'' ಭೋಪಾಲಿನಲ್ಲಿ ಸತ್ತ ಸಾವಿರಾರು ಜನಕ್ಕೆ, ಬದುಕಿಯೂ ಸತ್ತಂತಿರುವ ಲಕ್ಷಗಟ್ಟಲೆ ಜನಕ್ಕೆ, ಈ ಬದುಕಿರು ಮನುಷ್ಯನ ಭಾವನೆಗಳು ಅರ್ಥವಾಗಬೇಕು, ದೇಶದ ನಾಯಕರಲ್ಲಿ ನಾಚಿಕೆಯ ಲವಲೇಶವೂ ಉಳಿದಿಲ್ಲ, ಎಂದು.



* * *

ಬೆಟ್ಟ ಅಗೆದು ಇಲಿ ಹಿಡಿದ ಎಂಬುದು ಕ್ಲೀಶೆ ಆಗಿಹೋಗಿದೆಯಾದ್ದರಿಂದ ಲಿಬರ್ಹಾನ್ ಎಂಬ ನ್ಯಾಯಾಧೀಶರು ಅಯೋಧ್ಯೆ ತನಿಖೆಯ ನಂತರ ಬೆಟ್ಟದಷ್ಟು ಹಣ, ಕಾಲ, ಸಾಕ್ಷಿ, ಎಲ್ಲಾ ಅಗೆದು-ಬಗೆದು ಒಂದು ಸತ್ತ ಇರುವೆಯನ್ನು ತಂದು ತೋರಿಸಿದ್ದಾರೆ. ಎಲ್ಲರಿಗು ಗೊತ್ತಿರುವುದನ್ನು ಹೇಳುವುದು ಸರ್ವಜ್ಞನ ಲಕ್ಷಣ ಎನ್ನುವುದಕ್ಕೆ ಇದೊಂದು ಉದಾಹರಣೆ. ಯಾರು ಧ್ವಂಸಕೃತ್ಯಕ್ಕೆ ಕಾರಣರಾಗಿದ್ದರೊ ಅವರನ್ನು ಶಿಕ್ಷಿಸಬೇಕೆಂದು ಈ ತನಿಖಾಧಿಕಾರಿಗಳಿಗೆ ಏಕೆ ಹೊಳೆಯಲಿಲ್ಲವೋ ತಿಳಿಯದು. ಆದರೆ ಶಿಕ್ಷಿಸಬೇಕಾದ್ದು ಮಸೀದಿ ಉರುಳಿಸಿದ್ದು ಮಾತ್ರವಲ್ಲ, ಅದರ ಪರಿಣಾಮವಾಗಿ ಮುಂಬೈನಲ್ಲಿ ಸಾವಿರಾರು ಜನ ಹತ್ಯೆಗೊಳಗಾದರಲ್ಲ, ಅದಕ್ಕಾಗಿಯೂ ಶಿಕ್ಷೆ ನೀಡಬೇಕಾಗುತ್ತದ

# ಸಂಪಾದಕೀಯ

ಂದು ಕುತೂಹಲದ ಸಂಗತಿ ಇದೆ : ಮಸೀದಿ ಉರುಳಿಸುವ ವೀರರ ಚಿತ್ರಗಳು ಹತ್ತಾರಿವೆ. ಆದರೆ ಉರುಳಿಸುವ ಪ್ರಕ್ರಿಯೆ ಜಾರಿಯಲ್ಲಿದ್ದಾಗ ಂದೊಂದು ಗಂಟೆಗೂ ಬೇರೆಬೇರೆ ಹಂತಗಳು ಇದ್ದಿರಬೇಕಲ್ಲವೆ ? ಅಂತಹ ಚಿತ್ರಗಳು ಯಾವುವೂ ಏಕೆ ಪ್ರಚಾರಕ್ಕೆ ಬಂದಿಲ್ಲ? ಅದಕ್ಕೆ ೂಹೆಯ ಒಂದು ಉತ್ತರ ಹೀಗಿದೆ: ಮೊದಲ ಅಂಕ ಆದಮೇಲೆ ವೀರರೆಲ್ಲಾ ಕೆಳಗಿಳಿದರು, ನಂತರ ಇಂಪ್ಲೋಷನ್ ಎಂಬ ತಂತ್ರವನ್ನು ಳವಡಿಸಿ ಡೈನಮೈಟ್‌ಗಳ ಬಳಕೆಯಿಂದ ಮಸೀದಿಯನ್ನು ನೆಲಸಮ ಮಾಡಲಾಯಿತು. ಇದು ಹೌದೇ ಎಂದು ಲಿಬರ್ಹಾನ್ ಆಯೋಗ ಳಿಯಪಡಿಸಬೇಕಾಗಿತ್ತು. ತಿಳಿಸುವುದಕ್ಕಿಂತ ತಿಳಿಸದಿರುವುದೇ ಅದರ ಪರಿಣತಿಯ ಲಕ್ಷಣ.

*　　　*　　　*

ನೊಬೆಲ್ ಶಾಂತಿ ಪುರಸ್ಕೃತ ಅಮೆರಿಕಾ ಅಧ್ಯಕ್ಷ ಒಬಾಮಾ ಶಾಂತಿದೂತನಾಗಿ ಆಫ್ಘಾನಿಸ್ತಾನಕ್ಕೆ ಕೇವಲ ಮೂವತ್ತು ಸಾವಿರ ಅಧಿಕ ಸೈನಿಕರನ್ನು ಳಿಸುತ್ತಿರುವುದರಿಂದ ಅವರ ಶಾಂತಿ ಪಾರಿತೋಷಕವು ಕಪ್ಪಾಗುವುದಿಲ್ಲವಂತೆ. ಏಕೆಂದರೆ ನಾಗರಿಕ ಸಮಾಜ ಯಾವಾಗಲೂ ''ನ್ಯಾಯಯುತ ುದ್ಧ'' ಮಾಡುತ್ತಿರಲೇ ಇರಬೇಕಾದುದು ವಿಶ್ವನಿಯಮ. ಹಾಗೆಂದು ಒಬಾಮಾ ಹೇಳಿದ್ದಾರೆ. ಯಾವುದು ''ನ್ಯಾಯಯುತ'' ಎಂಬುದಷ್ಟೇ ಂದಿಗ್ಧದ ಪ್ರಶ್ನೆ. ತಮ್ಮ ತೈಲ ಸಂಪತ್ತನ್ನು ರಕ್ಷಿಸಿಕೊಳ್ಳಲು ಇರಾಕಿನ ಜನ ತಮಗೆ ತಿಳಿದ ರೀತಿಯಲ್ಲಿ ಹೋರಾಡುವುದು ನ್ಯಾಯಯುತ ನಿಸಿಕೊಳ್ಳುವುದಿಲ್ಲವೆ ? ಅಮೆರಿಕಾದ ಒಬ್ಬ ಸೈನಿಕ ಸತ್ತರೆ ಇಷ್ಟೊಂದು ಧರ್ಮಾಕ್ರೋಶ ವ್ಯಕ್ತಪಡಿಸುವ ಒಬಾಮಾಗೆ ಇರಾಕಿನ ಎರಡು ಲಕ್ಷ ಂದಿಯ ಹತ್ಯೆ ಕೂಡ ''ನ್ಯಾಯಯುತ'' ಎನಿಸಿಬಿಟ್ಟಿದೆ. ಶಾಂತಿ ಮತ್ತು ನ್ಯಾಯ ಎಂಬುವಕ್ಕೆ ನೊಬೆಲ್ ಸಮಿತಿ ಹೊಸ ಭಾಷ್ಯ ಬರೆದಿದೆ.

*　　　*　　　*

ಹಿಂದು ಧರ್ಮದ ನಮ್ಮ ಕೃತ್ರಿಮ ರಕ್ಷಕರಂತೆ ಇಲ್ಲದ ತಂಟೆ ಮಾಡುವವರು ಇಂಗ್ಲೆಂಡಿನಲ್ಲಿಯೂ ಇದ್ದಾರೆ. ಅವರು ಜ್ಞಾನದ ದ್ವೇಷಿಗಳು, ಡ್ಡು ಮತಧರ್ಮದ ಪೋಷಕರು. ನಮ್ಮಲ್ಲಿ ಬಳಕೆಯಾಗುವ ತಂತ್ರ ಸರಳವಾದ್ದು. ಉದಾಹರಣೆಗೆ, ಗೀತೆ ಅಥವಾ ಕುರಾನ್ ಅಥವಾ ಬೈಬಲ್ ಗೆಗೆ ಚಾರಿತ್ರಿಕ-ವೈಚಾರಿಕ-ವೈಜ್ಞಾನಿಕ ವಿಮರ್ಶೆಯನ್ನು ಮಾಡಿದರೆ ಅದನ್ನು ನಿಗ್ರಹಿಸಲು ಯಾರೋ ದೇವತೆಯನ್ನು ಮೈಮೇಲೆ ಆರೋಪಿಸಿ ೊಂಡು ತನ್ನ ಮನಸ್ಸಿಗೆ ಅದರಿಂದ ನೋವುಂಟಾಗುತ್ತದೆಯಾದ್ದರಿಂದ ಅಂತಹ ವಿಮರ್ಶೆ ಮಾಡಕೂಡದೆಂದು ಕೂಗಬಹುದು, ಅದು ್ಯಾಯಾಲಯಕ್ಕೆ ಕೇಳಿಸುತ್ತದೆ, ಅದು ಅವಿವೇಕದ ಆಜ್ಞೆ ಹೊರಡಿಸುತ್ತದೆ. ಬ್ರಿಟನ್ನಿನಲ್ಲೂ ನ್ಯಾಯಾಲಯವೇ ಇಂಥವರಿಗೆ ರಕ್ಷಾಕವಚ. ಂಶೋಧನೆಯಲ್ಲಿ ನಿರತಳಾದ ವಿಜ್ಞಾನಿಯೊಬ್ಬಳು ಅವೈಜ್ಞಾನಿಕ ನಂಬಿಕೆಯೊಂದನ್ನು ಟೀಕಿಸುತ್ತಾಳೆನ್ನಿ. ಯಾವನೋ ''ಕ್ರೈಸ್ತ ಧರ್ಮ ರಿಪಾಲಕ'' ಅವಳ ವಿರುದ್ಧ ಮಾನನಷ್ಟ ಮೊಕದ್ದಮೆ ಹೂಡುತ್ತಾನೆ, ತನ್ನ ದೈವನಂಬಿಕೆಗೆ ಧಕ್ಕೆ ತಂದಳೆಂದು ಆಪಾದಿಸುತ್ತಾನೆ. ಹಿಂದಿನ ಾಲದಲ್ಲಿ ಪೋಪನ ನೇತೃತ್ವದಲ್ಲಿ ಪಾಷಂಡಿಗಳನ್ನು ಸುಡುತ್ತಿದ್ದರು, ಈಗ ಮೊಕದ್ದಮೆಗಳ ಮುಖಾಂತರ ಅಂತಹವರ ನಾಲಿಗೆಗಳನ್ನು ತ್ತರಿಸುತ್ತಾರೆ ! ವಿಧಾನ ಬೇರೆ, ಪರಿಣಾಮ ಒಂದೇ.

ದಿನಾಂಕ ೮-೧೨-೨೦೦೯ರಂದು ಆಕಾಶವಾಣಿಯಲ್ಲಿ ಶ್ರೀಮತಿ ಸುಮಂಗಲ ಮುಮ್ಮಿಗಟ್ಟಿಯವರು ಒಂದು ಚರ್ಚೆಯನ್ನು ಆಯೋಜಿಸಿದ್ದರು. ೋಟಾ-ವಿಜ್ಞಾನಿಗಳು ಜನರನ್ನು ಶೋಷಿಸುವ ಕುಬುದ್ಧಿಯನ್ನು ಚರ್ಚೆಯಲ್ಲಿ ಭಾಗವಹಿಸಿದ್ದ ಡಾ॥ ಎಚ್. ಆರ್. ಕೃಷ್ಣಮೂರ್ತಿ, ಾ॥ ಎಚ್. ಆರ್. ರಾಮಕೃಷ್ಣ ರಾವ್ ಮತ್ತು ಡಾ॥ ವೈ. ಸಿ. ಕಮಲ ತೆರೆದಿಟ್ಟರು. ಇನ್ನೆರಡು ವರ್ಷಗಳಲ್ಲಿ ಪ್ರಳಯವಾಗಿ ಪ್ರಪಂಚ ಲ್ಲವಾಗುವುದಂತೆ ! ಅದಕ್ಕೆ ವೈಜ್ಞಾನಿಕ ವಿವರಣೆಗಳಿವೆಯಂತೆ ಮತ್ತು ಅದನ್ನು ಬಂಡವಾಳವನ್ನಾಗಿಸಿಕೊಂಡು ವಿಜ್ಞಾನ ವಿರೋಧಿ ಬುದ್ಧಿವಂತರು ಣವನ್ನು ದೋಚುತ್ತಿದ್ದಾರಂತೆ. ಪ್ರಪಂಚವನ್ನು ಉಳಿಸಲು ಸದ್ಯದಲ್ಲೇ ಯಜ್ಞಗಳನ್ನು ರಾಮಚಂದ್ರಪುರದ ಮಠ ಸರ್ಕಾರದ ಹಣದಿಂದ ಆಯೋಜಿಸಲು ಡ್ಡಿಯಿಲ್ಲ. ಪ್ರಣಯದ ಬಗ್ಗೆ ಮಾತನಾಡಿ ಹಣ ಮಾಡಿದವರಿದ್ದರು (ಸಿನಿಮಾ ಮಾಧ್ಯಮದಲ್ಲಿ), ಆದರೆ ಈಗ ಪ್ರಳಯದ ಇಲ್ಲದ ಭೀತಿಯನ್ನು ಧಾರವಾಗಿಟ್ಟುಕೊಂಡೂ ಹಣ ಮಾಡಬಹುದು. ಪರಮಾವಧಿ ಮೌಢ್ಯವನ್ನು ಪ್ರಚಾರ ಮಾಡುವ ವಿಜ್ಞಾನಿಗಳು ಕೂಡ ನಮ್ಮಲ್ಲಿದ್ದಾರೆ. ಈಗ ವರಿಗೆ ರಾಜಕೀಯ ಬೆಂಬಲವೂ ದೊರೆತಿದೆ. ಆದ್ದರಿಂದ ಜ್ಞಾನದ ಭವಿಷ್ಯ ಕರಾಳವಾಗುತ್ತಿದೆಯೆಂದು ನಂಬಬೇಕೆ ? ಇಲ್ಲ, ಏಕೆಂದರೆ ವಿಶ್ವವು ಸಾವಿರಾರು ವರ್ಷಗಳಿಂದ ಇಂತಹ ಮೌಢ್ಯವನ್ನು ಎದುರಿಸುತ್ತಲೇ ಬಂದಿದೆ ಮತ್ತು ಅದು ಮುಂದುವರಿಯುತ್ತಿದೆ. ಪ್ರಳಯವು ನಿಶ್ಚಯವಾದ್ದರಿಂದ ೂಮಿಯನ್ನು ಕಡಿಮೆ ಬೆಲೆಗೆ ಮಾರಿಬಿಡುತ್ತಿದ್ದಾರಂತೆ. ಇದೀಗ ಒಳ್ಳೆಯ ಸಮಯ, ಬಳ್ಳಾರಿ ರೆಡ್ಡಿ ಸೋದರರು ಓಡಿಹೋಗಿ ಭೂಮಿಯನ್ನು ೊಂಡು ನಾಳೆ ಅದರಲ್ಲಿ ಚಿನ್ನ ತೆಗೆಯಬಹುದು. ಅದರ ಸ್ವಲ್ಪ ಭಾಗವನ್ನು ರವಿಶಂಕರ ಗುರೂಜಿಗೆ ನೀಡಿ ಪುನೀತರಾಗಬಹುದು !

*　　　*　　　*





ಪ್ರಸ್ತುತ ಸಂಚಿಕೆಯಲ್ಲಿ ಡಾ॥ ಎಚ್. ಆರ್. ಕೃಷ್ಣಮೂರ್ತಿಯವರು ವಿದೇಶಿ ವಿಶ್ವವಿದ್ಯಾನಿಲಯಗಳ ಹಾವಳಿ ಬಗ್ಗೆ ಬರೆದಿದ್ದಾರೆ. ಡಿಸೆಂಬರ್ ೯ರಂದು ಬೆಂಗಳೂರಿನಲ್ಲಿ ಸರ್ಕಾರವು ಒಂದು ಸಭೆಯನ್ನು ನಡೆಸಿತು. ವಿದೇಶಿ ಶಿಕ್ಷಣ ಇಲ್ಲದೆ ಸೊರಗುತ್ತಿರುವ ಭಾರತೀಯರಿಗೆ ಈ ಕೂಡಲೆ ಅದನ್ನು ಇಲ್ಲೇ ಒದಗಿಸಲು ಏರ್ಪಾಟು ಮಾಡುವ ಯೋಜನೆ ಚರ್ಚೆಯ ವಿಷಯ. ವಿಕಾಸ ಸೌಧದಲ್ಲಿ ನಡೆದ ಈ ಸಭೆಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಬಂಡವಾಳ ಹೂಡಲು ಹೊಂಚು ಹಾಕುತ್ತಿರುವ ''ವಿದೇಶಿ ತಜ್ಞರು'' ತಮ್ಮ ಬಂಡವಾಳದ ವಿಕಾಸದ ಬಗ್ಗೆ ಆಶಾಭಾವನೆ ತಾಳಿದ್ದಾರೆ. ದೊಡ್ಡ ಊರುಗಳಲ್ಲಿ ವಿದೇಶಿ ಮಾಲ್‌ಗಳಲ್ಲಿ ದೊರಕುವ ಮಾಲುಗಳಂತೆ ನಾಳೆ ನಮ್ಮ ನಗರಗಳಲ್ಲಿ ಕೇಂಬ್ರಿಜ್, ಯೇಲ್ ಎಲ್ಲಾ ಜನ್ಮ ತಾಳುತ್ತವೆ. ಗಿರಾಕಿಗಳು ಮಾಲಿಗೆ ಮಾರುಹೋಗುವಂತೆ ಈ ಆಧುನಿಕ ಯೇಲ್‌ಗಳಿಗೆ ಮಕ್ಕಳನ್ನು ದೂಡುವ ಪರಿಪಾಠ ಬೆಳೆಯುತ್ತದೆ. ಚಿಕ್ಕಪುಟ್ಟ ಅಂಗಡಿಗಳಂತೆ ನಮ್ಮ ಕಾಲೇಜುಗಳು ಮುಚ್ಚಿಕೊಳ್ಳುತ್ತವೆ. ಆಗ ಶಿಕ್ಷಣ ಉಳಿಯುವುದು ಯಾರಿಗೆ ?

(೧೨ನೇ ಪುಟಕ್ಕೆ)





















# ಪರಿವಿಡಿ

# ಪರಿವಿಡಿ



---


ಮುಖಚಿತ್ರ : ಅಂತಾರಾಷ್ಟ್ರೀಯ ಜೀವಿವೈವಿಧ್ಯ ವರ್ಷ - ೨೦೧೦
ಚಿತ್ರ : ಸಹಕಾರ : ಡಾ|| ಎನ್. ಎಸ್. ಲೀಲಾ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಈ ಸಂಚಿಕೆಯ ಚಿತ್ರಗಾರರು : ಸೃಜನ್, ಶ್ರೀಹರಿ
ಕಮಲಂ ಅರಸು, ಆಚಾರ್ಯ, ಹುಸೇನಿ, ರವಿ ಅಜ್ಜೀಪುರ
ಬಿ. ವಿಲ್ಸನ್, ಕೆ. ಕೆ. ಮಕಾಳಿ, ಜಿ. ಎಂ. ಬೊಮ್ನಳ್ಳಿ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

*ಈ ತಿಂಗಳು (೭ನೇ ಪುಟದಿಂದ)*

ಲಕ್ಷ ಸುರಿಯುವ ಸಾಮರ್ಥ್ಯವಿರುವವರಿಗೆ. ಇದು ನಮ್ಮ ಅಭಿವೃದ್ಧಿ ಮಾದರಿಯೆಂದರೆ ಜನರಿಗೆ ಸ್ವಲ್ಪ ವಿವೇಚನೆ ಮತ್ತು ಕೋಪದ ಅವಶ್ಯಕತೆ ಇದೆಯೆಂದರ್ಥ.

*   *   *

ಮಾನ್ಯರೆನಿಸಿಕೊಳ್ಳಲು ತವಕಿಸಬೇಕಾಗಿದ್ದ ಶ್ರೀ ಯಡಿಯೂರಪ್ಪನವರು ಅದರ ಅಗತ್ಯವಿಲ್ಲವೆಂದು ಅದನ್ನು ಕೈಬಿಟ್ಟಿದ್ದಾರೆ. ಅವರ ಸರ್ಕಾರದ ನಡತೆಯಲ್ಲಿ ಇದು ಸ್ಪಷ್ಟವಾಗುತ್ತಿದೆ. ಮಠಗಳಿಗೆ, ರಾಷ್ಟ್ರೋತ್ಥಾನಕ್ಕೆ, ಕೋಟಿಗಟ್ಟಲೆ ಸುರಿದು ಸಂಸ್ಕೃತಿ ರಕ್ಷಣೆ ಮಾಡುತ್ತಿರುವಾಗ ಅಕಾಡೆಮಿಗಳು ಬೇಕೇಕೆ ? ಆದ್ದರಿಂದ ಅವಕ್ಕೆ ಹಣ ಬಿಡುಗಡೆ ಮಾಡಲು ಸಚಿವರಿಗೆ ಅಗತ್ಯ ಕಂಡಿಲ್ಲ. ಇದರ ಹಿಂದೆ ಇನ್ನೊಂದು ಸೂಕ್ಷ್ಮವೂ ಇರಬಹುದು. ಅವರ ''ಸಂಸ್ಕೃತಿ ಮಾದರಿ'' ಯನ್ನು ಎತ್ತಿಹಿಡಿಯುವ ಮೂರ್ಖರಿಲ್ಲದ ಅಕಾಡೆಮಿಗಳಿಗೆ ಬೆಂಬಲ ನೀಡುವುದು ಸ್ವ-ವಿರೋಧ ಆಗಿ ಬಿಡುತ್ತದೆಂಬ ಹವಣಿಕೆ ಇರಬೇಕು. ಆ ಮಾದರಿಗೆ ಭಿನ್ನರಾದವರು ಬರುವಂತಹ ಸಂದರ್ಭವಿದ್ದರೆ ಅವರನ್ನು ''ನಕ್ಸಲ್-ಸಮರ್ಥಕ''ರೆಂದು ಬಣ್ಣಿಸಿ ಅವರಿಗೆ ಗುಂಡಿಟ್ಟು ಹೊಡೆಯಬಹುದು. ಇದು ಹಳೆಯ ಸೂತ್ರ. ನಾಯಿಯೊಂದನ್ನು ಕೊಲ್ಲುವ ಖಿಷಿ ಇದ್ದರೆ ಅದನ್ನು ಹುಚ್ಚು ನಾಯಿಯೆಂದು ಕರೆದರೆ ಆಯಿತು, ಅಷ್ಟೆ. ನಮ್ಮ ಮಾಧ್ಯಮಗಳು ವ್ಯಕ್ತಿಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯ, ಎಂದೆಲ್ಲಾ ದೊಡ್ಡದೊಡ್ಡ ವ್ಯಾಖ್ಯಾನಗಳನ್ನು ಗಂಭೀರವಾಗಿ ಮಾಡುತ್ತವೆ. ಆದರೆ ಸರ್ಕಾರದ ದೇಣಿಗೆಯ ಭಾರದಡಿ ಸಿಲುಕಿಕೊಂಡು ಅವಕ್ಕೆ ಮೌಲ್ಯಗಳು ಗೌಣವಾಗಿವೆ. ಮೈಸೂರಿನ ರಂಗಾಯಣದ ನಿರ್ದೇಶಕ ಹುದ್ದೆಯನ್ನು ಪ್ರೊ|| ಲಿಂಗದೇವರು ಹಳೆಮನೆ ಅವರಿ ನೀಡಲು ತೀರ್ಮಾನಿಸಲಾಗಿದೆಯೆಂದು ಸರ್ಕಾರ ವಕ್ತಾರರು ಪ್ರಕಟಿಸಿದರು. ಮಾನ್ಯ ಹಳೆಮನೆ ಅವರು ಸ್ಥಾನಕ್ಕೆ ಅಭ್ಯರ್ಥಿಯಾಗಿ ಅರ್ಜಿಯನ್ನೇನೂ ಸಲ್ಲಿಸಿರಲಿಲ್ಲ ಆದರೂ ಸರ್ಕಾರವು ಅವರ ಆಯ್ಕೆಯನ್ನು ಪ್ರಕಟಿಸಿ ನಂತರ ಅವರ ವ್ಯಕ್ತಿತ್ವದ ಹತ್ಯೆಗೆ ಹಾತೊರೆಯುತ್ತಿದ ಅವರನ್ನು ''ನಕ್ಸಲ್- ಸಮರ್ಥಕ''ರೆಂದೋ ಅಥವಾ ನಕ್ಸಲರಿಗೆ ಪರಿಚಿತರೆಂದೋ ಸಂಶೋಧನೆ ನಡೆ ಗುಲ್ಲೆಬ್ಬಿಸಿರುವ ಸರ್ಕಾರವು ೧೯೫೦ರ ದಶಕದ ಅಮೆರಿಕಾ ಮೆಕಾರ್ತಿ ಅನೀತಿಯನ್ನು ಅನುಸರಿಸುತ್ತಿದೆ. ನಕ್ಸಲರ ವಿರುದ್ಧ ಒಂದು ಆಪಾದನೆ ಅವರು ಜನರನ್ನು ವಿನಾಕಾರಣ ಹಿಂಸಿಸುತ್ತಾರೆ ಮತ್ತು ಸಂಹರಿಸುತ್ತಾರೆ ಎಂಬುದು. ಯಡಿಯೂರಪ್ಪನವರ ಸರ್ಕಾ ಪ್ರೊ|| ಲಿಂಗದೇವರು ಅವರಿಗೆ ಮಾಡುತ್ತಿರುವುದೂ ಅದೇ: ವ್ಯಕ್ತಿತ್ವದ ವಧೆ ಮತ್ತ ನಿರ್ದೇಶಕತ್ವದ ಸಂಹಾರ. ಸರ್ಕಾರವು ೨೦೦೯ರಲ್ಲಿ ಅನುಸರಿಸಿದ ಅತ್ಯಂತ ಖಂಡನೀಯ ದುರ್ಮಾರ್ಗಗಳಲ್ಲಿ ಇದೂ ಒಂದು. ಇದೇ ಚಾಳಿ ಮುಂದುವರಿದರೆ ೨೦೧೦ ಹೇ ತಾನೆ ಶುಭವರ್ಷವಾದೀತು ! ಅದನ್ನು ಅಶುಭದಿಂದ ಹೊರತರಲು ಏನು ಮಾಡಬೇಕೆಂದು ಜನರು, ವಿಶೇಷವಾಗಿ ವಿದ್ವಜ್ಜನರು, ಆಲೋಚನೆ ಮಾಡಿ ಕ್ರಿಯೆಯಲ್ಲಿ ತೊಡಗಲ ೨೦೧೦ ಹುರುಪು ನೀಡಲೆಂದು ಆಶಿಸೋಣ.

ಶಾಂತಿ ಮತ್ತು ಸೌಹಾರ್ದತಾ ಸಂಘಟನೆ ಹಾಗೂ ಶ್ರೀಮತಿ ಸರೋಜಮ್ಮ – ಟಿ. ಆರ್. ರೇವಣ್ಣ ಟ್ರಸ್ಟ್ ವತಿಯಿಂದ ಸಾರ್ವಜನಿಕ ವಾಚನಾಲಯವೊಂದನ್ನು ತುಮಕೂರಿನಲ್ಲಿ ಸ್ಥಾಪಿಸಲಾಗಿದೆ. ಹಿತೈಷಿಗಳು ವಾಚನಾಲಯಕ್ಕೆ ವಿವಿಧ ಬಗೆಗಳ ಪ್ರಗತಿಪರ ಸಾಹಿತ್ಯ ಕೃತಿಗಳನ್ನು ಕೊಡುಗೆಯಾಗಿ ನೀಡಲು ಕೋರಲಾಗಿದೆ.

*ವಿಳಾಸ : ೬ನೇ ಅಡ್ಡರಸ್ತೆ, ಸಂಪಿಗೆ ರಸ್ತೆ,*
*ಚನ್ನಬಸವೇಶ್ವರ ಬಡಾವಣೆ, ಉಪ್ಪಾರಹಳ್ಳಿ,*
*ತುಮಕೂರು - ೫೭೨ ೧೦೨*
*ದೂರವಾಣಿ: ೦೮೧೬-೬೫೪೧೯೭*

## ಬದ್ ದುವಾ

ದಯಾಮಯನಾದ ಅಲ್ಲಾಹುವೇ
ಯಾವ ಗಳಿಗೆಯೂ ನಿನಗೆ ಪುರುಸೊತ್ತು ಇಲ್ಲವೆಂದು
ರಾತ್ರಿಗೆ ಚಂದ್ರನನ್ನ
ಹಗಲಿಗೆ ಸೂರ್ಯನನ್ನು
ನದಿ ಒಣಗದ ಹಾಗೆ ಮಳೆಯನ್ನ
ಬೀಜದೊಳಗೆ ನಾಳಿನ ಜೀವವನ್ನ
ಕಾಪಿಟ್ಟು ಕಾಯುತ್ತಿರುವ ನಿನ್ನ
ಕಂಡವರಿಗಷ್ಟೆ ಗೊತ್ತು ನಿನಗೆ ಹೊತ್ತು ಗೊತ್ತಿಲ್ಲವೆಂದು.
ಮೀನುಗಳು ಈಜುವಂತೆ
ಹಕ್ಕಿಗಳು ಹಾರುವಂತೆ
ಸುಂಟಿಗದ ಹುಳು ನೆಲದಲ್ಲಿ ನೂರು ಕಾಲಿದ್ದೂ ತೆವಳುವಂತೆ
ಸಕಲ ಜೀವ ರಾಶಿಗಳಿಗೆ ಅವವುಗಳ ಇಷ್ಟಾನಿಷ್ಟದಂತೆ
ಬದುಕಲು ಕಲಿಸುತ್ತಿರುವ ನಿನಗೆ ಪುರುಸೊತ್ತಿಲ್ಲವೆಂದು
ಇಷ್ಟರ ನಡುವೆ
ಇರುವೆ ಕಾಲಿನ ಗೆಜ್ಜೆಯ ಸಪ್ಪಳಕ್ಕೆ ಕಂಪಿಸುವ ನೀನು
ಬಾಗ್ದಾದ್‌ನ ಬಾಂಬಿಗೆ ಕಿವುಡಾಗಿರುವ
ನಿನ್ನ ಇಚ್ಛೆಗೂ ಮೀರಿ ನಿನ್ನ ಹೆಸರಲ್ಲಿ ನಡೆಯುತ್ತಿರುವ
ಹಿಂಸೆಗೆ ಕುರುಡಾಗಿರುವ ನಿನ್ನ ಕಷ್ಟ
ನವೆಯಾದರೆ ನಚ್ಚಗೆ ಕರೆದುಕೊಳ್ಳುವುದಕ್ಕೂ ನಿನಗೆ ಪುರುಸೊತ್ತು
ಇಲ್ಲವೆಂಬ ಸತ್ಯ ಆ ದರವೇಸಿಗಳಿಗಷ್ಟೆ ಗೊತ್ತು
ಪ್ರೀತಿಸಲು ಮನುಷ್ಯರಿಗೆ ಮಾತು ಕೊಟ್ಟೆ
ಅಂದಿನಿಂದ ಯುದ್ಧಗಳ ಮಧ್ಯಸ್ತಿಕೆಯಲ್ಲಿ ಕಾಲ ಕಳೆಯುತ್ತಿರುವೆ
ಲೋಕ ಲೋಕಗಳೆಲ್ಲಾ ನಿನ್ನ ಪ್ರಾರ್ಥಿಸುತ್ತಿರುವ ನಮಾಜಿನ ಈ ವೇಳೆ
ಬಾಗ್ದಾದಿನ ಹೊರಗೆ ಮಕ್ಕಳಾಡುತ್ತಿದ್ದ
ಮರಳು ಗುಡ್ಡ ಬಿಕೋ ಎನ್ನುತ್ತಿದೆ ಪ್ರಭುವೇ
ಅಲ್ಲಿ ಚಿಕ್ಕ ತಾಯಿಯೊಬ್ಬಳು ಮರಳಲ್ಲಿ ಹುಡುಕುತ್ತಿದ್ದಾಳೆ
ನೆನ್ನೆ ಆಡಿದ್ದ ತನ್ನ ಹಸುಗೂಸಿನ ಪುಟ್ಟ ಪಾದವನ್ನ
ಮಣ್ಣೊಳಗೆ ಮಲಗಿರುವ ಮಗುವ ತಲೆ ಸವರುವ ತಾಯ ಕೈ ಬೆರಳಲ್ಲಿ
ಮೂಡುತ್ತಿದೆ ಅವ್ಯಕ್ತ ಲಿಪಿ
ದೂರಮ್ಮ ದೂರು
ಗಾಳಿ ಕನಿಕರಿಸಿ ಆ ಗೆರೆಗಳನ್ನು ಅಳಿಸುವ ಮುನ್ನ
ಬಿಡುವಿಲ್ಲದ ಓ ಅಲ್ಲಾಹುವೇ ದಯಮಾಡಿ ಓದಿಬಿಡು ಆ ಮನವಿಯನ್ನ
ಇಲ್ಲವಾದರೆ ರಬೀಯಾ ಓದಿ ಹೇಳುತ್ತಾಳೆ ಲೋಕಕ್ಕೆ
ಅಲ್ಲಾಹುವಿನ ತಾಯಿ ಬಂಜೆಯಾಗಲಿ
ಎಂಬ ಆ ತಾಯಿಯ ಶಾಪವನ್ನ.

**ಡಾ|| ಕೆ. ವೈ. ನಾರಾಯಣಸ್ವಾಮಿ**
ಕನ್ನಡ ಪ್ರಾಧ್ಯಾಪಕರು, ಸರ್ಕಾರಿ ವಿಜ್ಞಾನ ಕಾಲೇಜು, ನೃಪತುಂಗ ರಸ್ತೆ, ಬೆಂಗಳೂರು - ೫೬೦ ೦೦೧

# ೨೦೦೯

# ಅಳಿದ ಸಂವತ್ಸರ – ಅಳಿಯದ ಪರಿಣಾಮಗಳು

■ **ಮುರಳೀಧರ್**

**ಏಷ್ಯಾ ಖಂಡದ ಅಗ್ನಿಕುಂಡಗಳು**

ಜಗತ್ತು ಇಂದು ಎದುರಿಸುತ್ತಿರುವ ಬಹುತೇಕ ಸಮಸ್ಯೆಗಳಿಗೆ ಅಮೆರಿಕಾ ನೇರ ಹೊಣೆಗಾರನಾಗಿದೆ. ತಾನು ಪ್ರಪಂಚದ ನೈತಿಕ ಪೊಲೀಸ್ ಎಂದು ಮೆರೆಯುತ್ತಾ ಇತರೆ ರಾಷ್ಟ್ರಗಳ ವಿಷಯಗಳಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ತನ್ನ ಮೂಗು ತೂರಿಸುತ್ತಾ ಬಂದಿದ್ದ ಅಮೆರಿಕಾ ಈಗ ತಾನೇ ಬಲೆಯಲ್ಲಿ ಸಿಲುಕಿ ಸಹಾಯಕ್ಕಾಗಿ ಅರಚುತ್ತಿದೆ. ಹಿಂದಿನ ಅಧ್ಯಕ್ಷ ಮತ್ತು ನಮ್ಮ ಪ್ರಧಾನಿಯವರ ಪರಮಾಪ್ತ ಮಿತ್ರ ಜಾರ್ಜ್ ಬುಷ್ ಹುಟ್ಟುಹಾಕಿದ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸಮಸ್ಯೆಗಳ ಸುಳಿಯಲ್ಲಿ ನೂತನ ಅಧ್ಯಕ್ಷ ಬರಾಕ್ ಒಬಾಮ ಸಿಕ್ಕಿ ವಿಲ-ವಿಲ ಒದ್ದಾಡುತ್ತಿದ್ದಾರೆ. ಇರಾಕ್‌ನಿಂದ ಸೈನ್ಯವನ್ನು ವಾಪಸ್ಸು ಕರೆಸುವೆನೆಂದು ಹೇಳಿದ್ದ ಒಬಾಮ ಈಗ ಮೂವತ್ತು ಸಾವಿರ ಸೈನಿಕರನ್ನು ಆಫ್ಘಾನಿಸ್ತಾನಕ್ಕೆ ಕಳುಹಿಸಲು ತೀರ್ಮಾನಿಸಿದ್ದಾರೆ! ಉಗ್ರಗಾಮಿಗಳನ್ನು ತಯಾರಿಸಿದ ಅಮೆರಿಕಾ ಈಗ ಅವರನ್ನು ಮಟ್ಟಹಾಕಲು ದೊಡ್ಡ ಬೆಲೆಯನ್ನು ತೆರಬೇಕಾಗಿದೆ. ಆಫ್ಘಾನಿಸ್ತಾನದಲ್ಲಿರುವ ಅಲ್‌ಖೈದ, ತಾಲಿಬಾನ್, ಮುಜಾಹಿದ್ದೀನ್ ಉಗ್ರಗಾಮಿಗಳಿಗೆ ಪಾಕಿಸ್ತಾನದ ಸೈನ್ಯದ ಬೆಂಬಲವಿದೆ. ದಕ್ಷಿಣ ಬಲೂಚಿಸ್ತಾನ ಉಗ್ರಗಾಮಿಗಳ ಇನ್ನೊಂದು ತವರೂರು. ಅಂದರೆ ಪಾಕಿಸ್ತಾನದ ಬೆಂಬಲವಿಲ್ಲದೆ ಅಮೆರಿಕಾ ಆಫ್ಘಾನಿಸ್ತಾನ ಮತ್ತು ಬಲೂಚಿಸ್ತಾನದಲ್ಲಿ ಅಡಗಿರುವ ಉಗ್ರವಾದಿಗಳನ್ನು ನಿಗ್ರಹಿಸಲು ಸಾಧ್ಯವಿಲ್ಲ. ಅದಕ್ಕಾಗಿ ಪಾಕಿಸ್ತಾನದ ಸರ್ಕಾರವನ್ನು ರಮಿಸುವ ನೀತಿ ಮುಂದುವರಿಸುತ್ತಿದೆ. ಪಾಕಿಸ್ತಾನಕ್ಕೆ ಅಪಾರವಾಗಿ ಹಣ ಸಹಾಯ ಮಾಡುತ್ತಿದೆ. ಆಫ್ಘಾನಿಸ್ತಾನದ ಸರ್ಕಾರವನ್ನಾಗಲಿ, ಪಾಕಿಸ್ತಾನದ ಸರ್ಕಾರವನ್ನಾಗಲಿ ವಾಷಿಂಗ್‌ಟನ್‌ನಿಂದ ನಡೆಸುವ ಅಥವಾ ನಿಯಂತ್ರಿಸುವ ಹುನ್ನಾರವೇನೂ ಇಲ್ಲವೆಂದು ಬರಾಕ್ ಒಬಾಮ ಘೋಷಿಸಿದ್ದರೂ, ಈ ರಾಷ್ಟ್ರಗಳ ಜನತೆ ಈ ಬೆಳವಣಿಗೆಯನ್ನು ಅತ್ಯಂತ ಗುಮಾನಿಯಿಂದ ನೋಡುತ್ತಿದೆ. ಉಗ್ರಗಾಮಿಗಳಿಗೆ ಆಶ್ರಯ ನೀಡುತ್ತ ಬಂದಿದ್ದ ಪಾಕಿಸ್ತಾನ ಅಮೆರಿಕಾಕ್ಕೆ ಸಮೀಪವಾಗುತ್ತಿದ್ದಂತೆ ಉಗ್ರಗಾಮಿಗಳ ಕ್ರೋಧಕ್ಕೆ ಬಲಿಯಾಗುತ್ತಿದೆ. ಪಾಕಿಸ್ತಾನ, ಬಲೂಚಿಸ್ತಾನ ಮತ್ತು ಆಫ್ಘಾನಿಸ್ತಾನ ಈ ವರ್ಷದ ಅಗ್ನಿಕುಂಡಗಳಾಗುವ ಎಲ್ಲ ಸೂಚನೆಗಳೂ ಸ್ಪಷ್ಟವಾಗಿ ಕಂಡುಬರುತ್ತಿವೆ. ಅಂದರೆ ೨೦೧೦ ರಕ್ತಸಿಕ್ತ ವರ್ಷವಾಗಬಹುದು. ಭಾರತವೂ ಕೂಡ ಇದರ ನೇರ ಪರಿಣಾಮಗಳನ್ನು ...ರಿಸಬೇಕಾಗಬಹುದು. ಇಷ್ಟು ಸಾಲದೆಂಬಂತೆ 'ಶಾಂತಿದೂತ' ಒಬಾಮ 'ಶಾಂತಿಗಾಗಿ ಯುದ್ಧ' ಮಾಡಲು ಅಮೆರಿಕಾ ಯಾವಾಗಲೂ ಬದ್ಧವೆಂದಿದ್ದಾರೆ. ಅಲ್‌ಖೈದ ...ಲೀಬಾನ್‌ಗಳ ಕಾರ್ಯಾಚರಣೆ ಕೇವಲ ಆಫ್ಘಾನಿಸ್ತಾನ, ಬಲೂಚಿಸ್ತಾನ, ಪಾಕಿಸ್ತಾನಗಳಿಗೆ ಮಾತ್ರ ಸೀಮಿತವಾಗಿಲ್ಲ. ಯೆಮನ್, ಸೋಮಾಲಿಯ ಇತ್ಯಾದಿ ರಾಷ್ಟ್ರಗಳಲ್ಲೂ ನೆಲೆಸಿ...ರು ಹಂದಿ ಜ್ವರದಂತೆ ಅಮೆರಿಕಾ ಮಾತ್ರವಲ್ಲದೆ ಪ್ರಪಂಚದ ಅನೇಕ ರಾಷ್ಟ್ರಗಳಲ್ಲಿ ಆತಂಕ ಮೂಡಿಸಿದೆ. ಪಾಕಿಸ್ತಾನದಲ್ಲಿರುವ ಅಣ್ವಸ್ತ್ರಗಳು ಈ ಉಗ್ರಗಾಮಿಗಳಿಗೆ ಸಿಕ್ಕರೆ ಅದು ...ಗತ್ತಿನ ವಿನಾಶಕ್ಕೆ ನಾಂದಿಯಾಗಬಹುದೆಂಬ ಶಂಕೆ ದಿನೇ ದಿನೇ ಹೆಚ್ಚುತ್ತಿದೆ. ಒಟ್ಟಾರೆ ೨೦೧೦ ಆತಂಕ, ಸಂಶಯಗಳ ವರ್ಷವಾಗುವುದರಲ್ಲಿ ಸಂದೇಹವಿಲ್ಲ.

**...ಗ್ರಗಾಮಿ ಪ್ರಭಾಕರನ್ ಅಂತ್ಯ**

ಭಾರತದ ನೆರೆ ರಾಷ್ಟ್ರ ಶ್ರೀಲಂಕಾದಲ್ಲಿ ಸುಮಾರು ಇಪ್ಪತ್ತೈದು ವರ್ಷಗಳಿಂದ ಸಿಡಿಯುತ್ತಿದ್ದ ಗುಂಡಿನ ಮಳೆ ನಿಂತಿದೆ. ಎಲ್.ಟಿ.ಟಿ.ಈ.ಯ ಪ್ರಭಾಕರನ್ ಹತನಾಗಿದ್ದಾನೆ. ಇವನ ...ಚರರೂ ಸತ್ತಿದ್ದಾರೆ. ಸಹಸ್ರಾರು ಶ್ರೀಲಂಕಾದ ತಮಿಳರು ಸತ್ತಿದ್ದಾರೆ. ಲಕ್ಷಾಂತರ ಜನ ನಿರಾಶ್ರಿತರಾಗಿದ್ದಾರೆ, ನಿರ್ವಸಿತರಾಗಿದ್ದಾರೆ. ರಾಜೀವ್ ಗಾಂಧಿ, ಸಿರಿಮಾವೊ

೨೦೦೮ರ ಅಂತ್ಯದಲ್ಲಿ ಉಲ್ಬಣಗೊಂಡ ಆರ್ಥಿಕ ಬಿಕ್ಕಟ್ಟು ತನ್ನ ಕರಾಳ ಛಾಯೆಯನ್ನು ೨೦೦೯ರ ಉದ್ದಗಲಕ್ಕೂ ಹಬ್ಬಿಸಿ ಜಗತ್ತಿನ ಬಹುತೇಕ ರಾಷ್ಟ್ರಗಳನ್ನು ತಲ್ಲಣಗೊಳಿಸಿ, ನೋವು-ನರಳಿಕೆಯನ್ನು ಭವಿಷ್ಯಕ್ಕೆ ಸಾಗಿಸಿತು. ೧೯೯೦ರಲ್ಲಿ ಸೋವಿಯತ್ ಒಕ್ಕೂಟದ ವ್ಯವಸ್ಥೆಯ ಪತನದ ನಂತರ ತಾನೇ ಏಕಚಕ್ರಾಧಿಪತಿಯೆಂದು ಬೀಗಿ ಮೆರೆಯುತ್ತಿದ್ದ ಅಮೆರಿಕಾವನ್ನು ದಿಕ್ಕೆಡಿಸಿ, ಕಂಗೆಡಿಸಿದ ವರ್ಷ - ೨೦೦೯. ಪ್ರಪಂಚದ ಅತಿದೊಡ್ಡ ಆತಂಕವಾದಿ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಅಧಿಕಾರದಿಂದ ನಿರ್ಗಮಿಸಿದ್ದು ಗತಿಸಿದ ವರ್ಷದ ಒಂದು ವಿಶೇಷ ಘಟನೆ. ಅಷ್ಟರಲ್ಲಿ ಈತ ಅಮೆರಿಕಾ ಮಾತ್ರವಲ್ಲ ಇಡೀ ಜಗತ್ತಿನ ಆರ್ಥಿಕ-ರಾಜಕೀಯ ವ್ಯವಸ್ಥೆಯನ್ನೇ ಕಲುಷಿತಗೊಳಿಸಿದ್ದ. ಜಗತ್ತಿನ ಇಂದಿನ ಅನೇಕ ಸಮಸ್ಯೆಗಳ ರೂವಾರಿ ಈತ. ಬರಾಕ್ ಒಬಾಮ ಅಮೆರಿಕಾದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡು ಜಾರ್ಜ್ ಬುಷ್ ಸೃಷ್ಟಿಸಿದ ಎಲ್ಲ ಸಮಸ್ಯೆಗಳಿಗೆ ಮತ್ತು ಪರಿಣಾಮಗಳಿಗೆ ಹೊಣೆಗಾರನಾದ ವರ್ಷ - ೨೦೦೯. ಅಮೆರಿಕಾದ ಜನತೆಗೆ ನೋವಿನ ನಡುವೆಯೂ ಆಸೆಯ ಗರಿಮೂಡಿಸಿ ಜನಮನವನ್ನು ಗೆದ್ದಿದ್ದ ಒಬಾಮ ಅಷ್ಟೇ ವೇಗವಾಗಿ ತನ್ನ ಜನಪ್ರಿಯತೆಯನ್ನು ಹಾಗೂ ವರ್ಚಸ್ಸನ್ನು ಕಳೆದುಕೊಂಡದ್ದು ವರ್ಷದ ವಿಶೇಷ. ಸುಮಾರು ಅರವತ್ತೈದು ಲಕ್ಷ ಉದ್ಯೋಗಗಳು ನಾಶಹೊಂದಿ ಅಮೆರಿಕಾದ ಜನ ತತ್ತರಿಸಿದ್ದಾರೆ. ನೆಲಕಚ್ಚಿರುವ ಉದ್ದಿಮೆಗಳನ್ನು ಪುನಶ್ಚೇತನಗೊಳಿಸಲು ಕೋಟಿ ಕೋಟಿ ಡಾಲರ್‌ಗಳನ್ನು ಅಮೆರಿಕಾದ ಸರ್ಕಾರ ಖರ್ಚು ಮಾಡುತ್ತಿದೆ. ಅಮೆರಿಕಾದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಜಗತ್ತಿನ ಎಲ್ಲ ರಾಷ್ಟ್ರಗಳು ತಮ್ಮ ಸೇವೆ ಸಲ್ಲಿಸುತ್ತಿವೆ. ನಮ್ಮ ದೇಶದ ಪ್ರಧಾನಮಂತ್ರಿ ಮನಮೋಹನ ಸಿಂಗ್. ವಿತ್ತ ಮಂತ್ರಿ ಪ್ರಣಬ್ ಮುಖರ್ಜಿ ಮತ್ತು ಯೋಜನಾ ಆಯೋಗದ ಮಾಂಟೆಕ್ ಸಿಂಗ್ ಅಹ್ಲುವಾಲಿಯ ಅಮೆರಿಕಾದ ಉದ್ಧಾರಕ್ಕೆ ನಮ್ಮ ದೇಶದ ಎಲ್ಲ ಸಂಪತ್ತನ್ನು ಮೀಸಲಿಟ್ಟಿದ್ದಾರೆ. ಎಂಟು ಶ್ರೀಮಂತ ರಾಷ್ಟ್ರಗಳ ಗುಂಪು ಈಗ ಭಾರತವೂ ಸೇರಿದಂತೆ ಇಪ್ಪತ್ತು ರಾಷ್ಟ್ರಗಳ ಗುಂಪಾಗಿ ಪರಿವರ್ತಿತವಾಗಿರುವುದು ಇದಕ್ಕೊಂದು ನಿದರ್ಶನ.

ಬಂಡಾರನಾಯ್ಕೆ ಸೇರಿದಂತೆ ಹಲವಾರು ನಾಯಕರು ಪ್ರಭಾಕರನ್ ಉಗ್ರವಾದಕ್ಕೆ ಬಲಿಯಾಗಿದ್ದಾರೆ. ತಮಿಳರ ರಾಷ್ಟ್ರೀಯ ಸಮಸ್ಯೆಯನ್ನು ಬಂದೂಕಿನ ಕೋವಿಯ ಮೂಲಕ ಪರಿಹರಿಸಿಕೊಳ್ಳುವ ಎಲ್.ಟಿ.ಟಿ.ಈ.ಯ ಪ್ರಯತ್ನ ವಿಫಲಗೊಂಡಿದೆ. ಆದರೆ ಶ್ರೀಲಂಕಾದ ತಮಿಳರ ರಾಷ್ಟ್ರೀಯತೆಯ ಪ್ರಜ್ಞೆ ಇನ್ನೂ ನಂದಿಲ್ಲವೆಂಬುದನ್ನು ಶ್ರೀಲಂಕಾ ಸರ್ಕಾರ ಅರಿಯಬೇಕು. ಮತ್ತು ಅವರ ಸಮಸ್ಯೆಗಳನ್ನು ಬಗೆಹರಿಸಬೇಕು. ಶ್ರೀಲಂಕಾದ ಅಧ್ಯಕ್ಷ ರಾಜಪಕ್ಷೆ ಅವಧಿಗಿಂತ ಮುಂಚೆಯೆ ಅಧ್ಯಕ್ಷಸ್ಥಾನಕ್ಕೆ ಚುನಾವಣೆ ನಡೆಸಲು ನಿರ್ಧರಿಸಿದ್ದಾರೆ. ಜನವರಿ ೨೬, ೨೦೧೦ರಂದು ಚುನಾವಣೆ ನಡೆಯಲಿದೆ. ಚುನಾವಣೆಯಲ್ಲಿ ಆರಿಸಿಬಂದಲ್ಲಿ ಅಲ್ಲಿನ ಪಾರ್ಲಿಮೆಂಟ್‌ನ ಚುನಾವಣೆ ನಡೆಸಲು ಮತ್ತು ಅಲ್ಲಿನ ಸಂವಿಧಾನಕ್ಕೆ ಮೂಲಭೂತ ಬದಲಾವಣೆಗಳನ್ನು ತರುವ ಯೋಜನೆಯನ್ನು ಹೊಂದಿದ್ದಾರೆ. ಶ್ರೀಲಂಕಾದ ರಾಜಕೀಯದಲ್ಲಿ ಅನೇಕ ಕಂಪನಗಳನ್ನು ನಿರೀಕ್ಷಿಸಬಹುದಾಗಿದೆ.



**ಬಂಡವಾಳಶಾಹಿಯ ಬಿಕ್ಕಟ್ಟು**

ಜಾಗತೀಕರಣ ಅನೇಕ ಹುಚ್ಚು ಅಲೆಗಳನ್ನು ಹುಟ್ಟುಹಾಕಿ ಜಗತ್ತಿನ ಆರ್ಥಿಕ ವ್ಯವಸ್ಥೆಯನ್ನೇ ಬುಡಮೇಲು ಮಾಡಿದ್ದು ಕಳೆದ ವರ್ಷದ ವಿಶಿಷ್ಟ ಬೆಳವಣಿಗೆ. ಸರ್ಕಾರ ತಮ್ಮ ಮೇಲೆ ಯಾವ ನಿಯಂತ್ರಣವನ್ನೂ ಹೇರಬಾರದೆಂದು, ಮಾರುಕಟ್ಟೆ ಆರ್ಥಿಕತೆ ತನ್ನ ದಿಕ್ಕನ್ನು ತಾನೇ ನಿರ್ಧರಿಸಿಕೊಳ್ಳುತ್ತದೆಂದು ವಾದಿಸುತ್ತಿದ್ದ ಖಾಸಗಿ ಮಾಲೀಕರು ಮತ್ತು ಖಾಸಗೀಕರಣದ ದಳ್ಳಾಳಿಗಳು ನೆಲಕಚ್ಚಿ ಸರ್ಕಾರದ ಸಹಾಯ ಯಾಚಿಸಿದ್ದು ಜಾಗತೀಕರಣದ ಆರ್ಥಿಕ ನೀತಿಗಳ ದಿವಾಳಿತನಕ್ಕೆ ಸಾಕ್ಷಿ. ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ ಉತ್ಕೃಷ್ಟ ಮಾದರಿಯೆಂದೇ ಕರೆಯಲ್ಪಡುತ್ತಿದ್ದ ಜಪಾನ್ ಈಗ ಆರ್ಥಿಕ ಬಿಕ್ಕಟ್ಟಿಗೆ ಸಿಕ್ಕಿ ನಲುಗಿಹೋಗಿದೆ. ಇತ್ತೀಚೆಗೆ ನಡೆದ ಚುನಾವಣೆಯಲ್ಲಿ ನೂತನವಾಗಿ ಚುನಾಯಿತರಾಗಿರುವ ಪ್ರಧಾನ ಮಂತ್ರಿ ಇಲ್ಲಿಯವರೆಗೂ ಅನುಸರಿಸಿದ ಅಮೆರಿಕಾ ಮಾದರಿಯ ಆರ್ಥಿಕ ವ್ಯವಸ್ಥೆಗೆ ತಿಲಾಂಜಲಿ ಕೊಡುವುದಾಗಿ ಹೇಳಿದ್ದಾರೆ. ಹೀಗೆ ಪ್ರಪಂಚದ ಹಲವಾರು ರಾಷ್ಟ್ರಗಳು ಬಂಡವಾಳಶಾಹಿ ಆರ್ಥಿಕ ವ್ಯವ... ಹೊಸ ಪರ್ಯಾಯಗಳ ಬಗ್ಗೆ ಆಲೋಚಿಸುತ್ತಿವೆ. ದಕ್ಷಿಣ ಅಮೆರಿಕಾ ... ಕ್ಯೂಬಾ, ವೆನಿಜುವೆಲ, ಬೊಲಿವಿಯಾ, ನಿಕರಾಗುವ, ಚಿಲಿ, ಬ್ರೆಸಿ... ಈಕ್ವೆಡಾರ್, ಅರ್ಜೆಂಟೈನಾ, ಉರುಗ್ವೆ ಇತ್ಯಾದಿ ರಾಷ್ಟ್ರಗಳು ತಮ್ಮ... ಆದ ಒಕ್ಕೂಟ ರಚಿಸಿ, ಅಮೆರಿಕಾದ ಹಿಡಿತದಿಂದ ದೂರಸರಿಯುತ್ತಿ... ಅದಕ್ಕೆ ಭಿನ್ನವಾಗಿ ಭಾರತ ಅಮೆರಿಕೆಯ ತೆಕ್ಕೆಗೆ ಸರಿಯುತ್ತಿದೆ.

**ಉದ್ಯೋಗರಹಿತ ಆರ್ಥಿಕ ಚೇತರಿಕೆ**

ಜಾಗತಿಕ ಆರ್ಥಿಕ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಚೇತರಿಸಿಕೊಳ್ಳುತ್ತಿರು... ಸೂಚನೆ ಕಂಡುಬಂದಿದ್ದರೂ, ಅದಕ್ಕನುಗುಣವಾಗಿ ಉದ್ಯೋಗಗ... ಸೃಷ್ಟಿಯಾಗುತ್ತಿಲ್ಲವೆಂಬುದು ಕಾಳಜಿಯ ವಿಷಯ. ಭಾರತದಂತ... ಜನಭರಿತ ರಾಷ್ಟ್ರಗಳಲ್ಲಿ ಆರ್ಥಿಕ ಬೆಳವಣಿಗೆಯೊಂದಿ... ಅದಕ್ಕನುಗುಣವಾಗಿ ಉದ್ಯೋಗಗಳು ಸೃಷ್ಟಿಯಾಗದಿದ್ದರೆ ಬೆಳವಣಿಗೆಯ ಎಲ್ಲ ಲಾಭಗ... ಕೆಲವೇ ಕೆಲವರ ಪಾಲಾಗುತ್ತವೆ. ಜಾಗತೀಕರಣದ ಆರ್ಥಿಕ ನೀತಿಗಳು ಭಾರತದ... ಬೆಳವಣಿಗೆಯನ್ನು ತಂದಂತೆ ಕಂಡರೂ ಅದು ಜನಸಾಮಾನ್ಯರನ್ನು ತಲುಪಿಲ್ಲ ಮ... ಅವರ ಜೀವನ ಮಟ್ಟವನ್ನು ಏರಿಸಿಲ್ಲ. ಅದರ ಬದಲು ಗ್ರಾಮೀಣ-ನಗರಗ... ಬಡವ-ಶ್ರೀಮಂತರ ನಡುವಿನ ಕಂದಕವನ್ನು ಹೆಚ್ಚಿಸಿದೆ. ಕಳೆದ ಎರಡು ದಶಕಗಳ... ನಾವು ಕಂಡದ್ದು ಉದ್ಯೋಗರಹಿತ ಬೆಳವಣಿಗೆ. ಈಗ ನಾವು ಕಾಣುತ್ತಿರುವುದು ಉದ್ಯೋ... ರಹಿತ ಚೇತರಿಕೆ. ಇದು ನಮ್ಮ ಸಮಾಜದಲ್ಲಿ ನಡೆಯುತ್ತಿರುವ ಸಂಘರ್ಷಗಳ... ತೀವ್ರಗೊಳಿಸುವುದನ್ನು ನಿರೀಕ್ಷಿಸಬಹುದು.

**ಎಡಪಕ್ಷಗಳು ಮತ್ತು ಸ್ವವಿಮರ್ಶೆ**

೨೦೦೮ರಲ್ಲಿ ಎಡಪಕ್ಷಗಳು ತಮ್ಮ ಬೆಂಬಲವನ್ನು ಹಿಂತೆಗೆದುಕೊಂಡ ನಂ... ಯು.ಪಿ.ಎ. ಕೇಂದ್ರದಲ್ಲಿ ಅಧಿಕಾರ ಉಳಿಸಿಕೊಳ್ಳಲು ನಡೆಸಿದ ಕುತಂತ್ರಗಳು ಭಾರತ... ರಾಜಕೀಯ ಚರಿತ್ರೆಯ ಒಂದು ಕಳಂಕ ಅಧ್ಯಾಯವೆಂದು ಹೇಳಬಹುದು. ನಂ... ೨೦೦೯ರ ಏಪ್ರಿಲ್-ಮೇ ತಿಂಗಳುಗಳಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕಾಂಗ್ರೆ...



ತ್ವದ ಯು.ಪಿ.ಎ. ಮತ್ತೆ ಅಧಿಕಾರಕ್ಕೆ ಬಂದುದು ಪರ್ಯಾಯದ ಅಭಾವದಿಂದ. ಗೆಯೆ, ಎಡಪಕ್ಷಗಳು ಬಹಳಷ್ಟು ಸ್ಥಾನಗಳನ್ನು ಕಳೆದುಕೊಂಡದ್ದು ಅನುಕೂಲಸಿಂಧು ನಾವಣಾ ಹೊಂದಾಣಿಕೆಗಳಿಂದಾಗಿ. ಕರ್ನಾಟಕದಲ್ಲಿ ದೇವೇಗೌಡರ ಜನತಾ ದಳದ , ತಮಿಳುನಾಡಿನಲ್ಲಿ ಜಯಲಲಿತಳ ಎ.ಐ.ಡಿ.ಎಂ.ಕೆ.ಯ ಸಖ್ಯ, ಆಂಧ್ರಪ್ರದೇಶದಲ್ಲಿ ದ್ರಬಾಬು ನಾಯ್ಡು ಅವರ 'ತೆಲುಗು ದೇಶಂ'ನ ಸಖ್ಯ, ಕೇರಳದಲ್ಲಿ ಮದಾನಿಯ , ಇವೆಲ್ಲಾ ಜನತೆಯಲ್ಲಿ ವಿಶ್ವಾಸ ತರಿಸುವಂತಹವಾಗಿರಲಿಲ್ಲ. ಈ ಪಕ್ಷಗಳ ರ್ಯಕರ್ತರಲ್ಲೇ ಅನುಮಾನಗಳು ಹುಟ್ಟಿಕೊಂಡಿದ್ದವು. ಎಡಪಕ್ಷಗಳ ಈ ಚುನಾವಣಾ ರು ಭಾರತೀಯ ಜನತಾ ಪಕ್ಷದೊಡನೆ ಹಿಂದೆ ಕೈಜೋಡಿಸಿದ್ದವರು. ಇವರೊಂದಿಗಿನ ನಾವಣಾ ಮೈತ್ರಿ ಎಡಪಕ್ಷಗಳ ವರ್ಚಸ್ಸಿಗೆ ಧಕ್ಕೆ ತಂದಿತು. ಜೊತೆಗೆ ಕೇರಳದಲ್ಲಿ ರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ನಾಯಕರ ಬಹಿರಂಗ ಕಚ್ಚಾಟ, ಲವ್‌ಲೀನ್ ರಣ, ಇತ್ಯಾದಿಗಳು ಮತ್ತು ಪಶ್ಚಿಮ ಬಂಗಾಳದಲ್ಲಿ ನಂದಿಗ್ರಾಮ ಮತ್ತು ಸಿಂಗೂರ್‌ನಲ್ಲಿ ರಂಗ ಸರ್ಕಾರದ ವಿರುದ್ಧ ನಡೆದ (ಮಮತಾ-ಮಾವೋವಾದಿ ಯೋಜಿತ ?) ೇರಾಟಗಳು ಎಡಪಕ್ಷಗಳ ಸೈದ್ಧಾಂತಿಕ ನೆಲೆಯನ್ನೇ ಪ್ರಶ್ನಿಸುವಂತಾಯಿತು. ಭೂ ಾರಣೆಗಾಗಿ ದೇಶದಾದ್ಯಂತ ಧೀಮಂತ ರೈತಹೋರಾಟಗಳಿಗೆ ನಾಯಕತ್ವ ಕೊಟ್ಟಿದ್ದ ತ್ತು ಅನುಪಮ ತ್ಯಾಗ ಬಲಿದಾನಗಳಿಗೆ ಹೆಸರಾಗಿದ್ದ ಎಡಪಕ್ಷಗಳು ಪಶ್ಚಿಮ ಗಾಳದಲ್ಲಿ ರೈತರ ಭೂಮಿಯ ವಿಷಯದಲ್ಲಿ ತಮ್ಮ ಹೆಸರು ಕೆಡಿಸಿಕೊಂಡದ್ದು ಒಂದು ಂತ. ಮಾಧ್ಯಮದ ಹುಚ್ಚು ಪ್ರಚಾರದಿಂದಾಗಿ, ನಂದಿಗ್ರಾಮ ಮತ್ತು ಸಿಂಗೂರಿನಲ್ಲಿ ದ ಘಟನೆಗಳು ಇಡೀ ರಾಷ್ಟ್ರದ ಜನತೆಯ ಗಮನ ಸೆಳೆದುವು. ಹಾಗೆ ನೋಡಿದರೆ, ೇಷ ಆರ್ಥಿಕ ವಲಯಕ್ಕೆ ಅಗಾಧ ಪ್ರಮಾಣದ ಭೂಮಿಯನ್ನು ರೈತರಿಂದ ಕಿತ್ತುತ್ತಿರುವ ರಾಜ್ಯ ಸರ್ಕಾರಗಳೂ ವಿರೋಧ-ಪ್ರತಿಭಟನೆಗಳನ್ನು ಎದುರಿಸುತ್ತಿವೆ. ಇತ್ತೀಚೆಗೆ ದ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಹರಿಯಾಣ ರಾಜ್ಯ ಮತ್ತು ಮಹಾರಾಷ್ಟ್ರದ ರ್ಭ ಕ್ಷೇತ್ರಗಳಲ್ಲಿ ಹೆಚ್ಚು ಸ್ಥಾನಗಳಿಸದೆ ರೈತರ ಆಕ್ರೋಶಕ್ಕೆ ತುತ್ತಾಗಿದ್ದು ಕಾಣುತ್ತದೆ. ಸ್ಸಾ ರಾಜ್ಯದಲ್ಲಿ ವಿದೇಶಿ ಕಂಪನಿ ಪಾಸ್ಕೋಗೆ ಕೊಟ್ಟಿರುವ ಭೂಮಿಯ ಬಗ್ಗೆ ದೀರ್ಘ ೇರಾಟ ನಡೆಯುತ್ತಿದೆ. ಭೂಮಿಯೇ ಜೀವನೋಪಾಯವಾಗಿರುವ ರೈತರು ಅದನ್ನು ಯುವ ಪ್ರಯತ್ನವನ್ನು ಅದು ಯಾವ ಪಕ್ಷದ ಸರ್ಕಾರವೇ ಮಾಡಲಿ, ಪ್ರಬಲವಾಗಿ ೋಧಿಸುತ್ತಾರೆ. ಅವರಿಗೆ ಹೋರಾಟವೇ ದಾರಿ.

**ಮ ಬಂಗಾಳ-ವಾಮರಂಗಕ್ಕೆ ಹೊಸ ಸವಾಲು**

ಪಶ್ಚಿಮ ಬಂಗಾಳದಲ್ಲಿ ಎಡರಂಗದಿಂದ ಪದೇ ಪದೇ ಚುನಾವಣೆಯಲ್ಲಿ ಸೋಲನ್ನು ಭವಿಸಿದ್ದ ತೃಣಮೂಲ ಕಾಂಗ್ರೆಸ್‌ನ ಮಮತಾ ಬ್ಯಾನರ್ಜಿ ಇತ್ತೀಚೆಗೆ ನಡೆದ ೋಕಸಭೆ ಮತ್ತು ಕೆಲವು ವಿಧಾನ ಸಭೆಯ ಸ್ಥಾನಗಳಿಗೆ ನಡೆದ ಚುನಾವಣೆಯಲ್ಲಿ ಗೆದ್ದು ಪ್ರಭಾವ ವಿಸ್ತರಿಸಿಕೊಂಡಿರುವುದನ್ನು ಕಾಣಬಹುದು. ಕಾಂಗ್ರೆಸ್ - ತೃಣಮೂಲ ಗ್ರೆಸ್‌ನ ಚುನಾವಣಾ ಮೈತ್ರಿ ಇಬ್ಬರಿಗೂ ಲಾಭ ತಂದುಕೊಟ್ಟಿದೆ. ಈಗ ಕೇಂದ್ರದಲ್ಲಿ ಲ್ವೆ ಖಾತೆಯ ಮಂತ್ರಿಯಾಗಿರುವ ಮಮತಾ ಬ್ಯಾನರ್ಜಿ ಇನ್ನೂ ಎರಡು ವರ್ಷ ಕಾರಾವಧಿಯಿರುವ ಎಡರಂಗ ಸರ್ಕಾರವನ್ನು ವಜಾಮಾಡಬೇಕೆಂಬ ಬೇಡಿಕೆ ಟ್ಟಿದ್ದಾರೆ. ಈಗಿರುವ ಅನುಕೂಲಕರ ಪರಿಸ್ಥಿತಿಯ ಲಾಭ ಪಡೆಯುವ ಕಾತುರ. ಇದಕ್ಕೆ ರ್ವಭಾವಿಯಾಗಿ ಕೇಂದ್ರ ಗೃಹಮಂತ್ರಿ ಚಿದಂಬರಂರವರು ಒಂದು ಸಮಿತಿಯನ್ನು ಿ, ಪಶ್ಚಿಮ ಬಂಗಾಳದ ಪರಿಸ್ಥಿತಿಯನ್ನು ಪರಿಶೀಲಿಸಲು ಅಲ್ಲಿಗೆ ಕಳುಹಿಸಿರುವುದು ಹಾಗೂ ಇತರೆ ವಿರೋಧ ಪಕ್ಷಗಳನ್ನು ರೊಚ್ಚಿಗೆಬ್ಬಿಸಿದೆ. ಲೋಕಸಭೆಯಲ್ಲಿ ಭಾರಿ ಂದಲ ನಡೆಯುತ್ತಿದೆ. ಇನ್ನು ಮಮತಾ ಬ್ಯಾನರ್ಜಿ ಪಶ್ಚಿಮ ಬಂಗಾಳದಲ್ಲಿ ಎಡಪಕ್ಷಗಳ ಭಟನೆ ಎದುರಿಸಬೇಕು. ಅಂದರೆ, ಪಶ್ಚಿಮ ಬಂಗಾಳದಲ್ಲಿ ಎಡರಂಗ ಸರ್ಕಾರಕ್ಕೆ ೦ ಕೂಡ ಸಮಸ್ಯೆಯ ವರ್ಷವಾಗುವ ಎಲ್ಲ ಪರಿಕರಗಳಿವೆ.

**ಮಾವೋವಾದಿಗಳ ಪ್ರಭಾವ**

ಸಿಂಗೂರು ಮತ್ತು ನಂದಿಗ್ರಾಮದ ಘಟನೆಗಳಲ್ಲಿ ಮಮತಾ ಬ್ಯಾನರ್ಜಿಯವರ ಪಾತ್ರ ಪ್ರಮುಖವಾಗಿದ್ದರೂ, ಮಾವೋವಾದಿಗಳ ಪಾತ್ರವೇನೂ ಕಡಿಮೆ ಇರಲಿಲ್ಲ. ದಿನೇ ದಿನೇ ತಮ್ಮ ಪ್ರಭಾವ ವಿಸ್ತರಿಸಿಕೊಳ್ಳುತ್ತಿರುವ ಮಾವೋವಾದಿಗಳು ಪಶ್ಚಿಮ ಬಂಗಾಳದ ಸರ್ಕಾರಕ್ಕೆ ದೊಡ್ಡ ಸವಾಲಾಗಿದ್ದಾರೆ. ಈಗಾಗಲೇ ಮಾವೋವಾದಿಗಳು ಪಶ್ಚಿಮ ಬಂಗಾಳ, ಒರಿಸ್ಸಾ, ಬಿಹಾರ, ಜಾರ್ಖಂಡ್, ಛತ್ತೀಸ್‌ಗಢ, ಮಹಾರಾಷ್ಟ್ರ, ಹರಿಯಾಣ, ಕರ್ನಾಟಕ, ಆಂಧ್ರ ಪ್ರದೇಶ ಇತ್ಯಾದಿ ರಾಜ್ಯಗಳಲ್ಲಿ ಬೇರೂರಿ, ಸಹಸ್ರಾರು ಸದಸ್ಯರನ್ನು ಮತ್ತು ಹಿತೈಷಿಗಳನ್ನು ಹೊಂದಿದೆ. ಇಪ್ಪತ್ತು ಸಾವಿರಕ್ಕೂ ಹೆಚ್ಚಿನ ಕೆಂಪು ಸೈನ್ಯವನ್ನು ಹೊಂದಿದ್ದಾರೆ. ಗೃಹ ಮಂತ್ರಾಲಯದ ಒಂದು ವರದಿಯ ಪ್ರಕಾರ ೨೦೦೧ನೇ ಇಸವಿಯಲ್ಲಿ ೫೬ ಜಿಲ್ಲೆಗಳಲ್ಲಿ ಬೇರೂರಿದ್ದ ಮಾವೋವಾದಿಗಳು ೨೦೦೯ರಲ್ಲಿ ರಾಷ್ಟ್ರದ ೬೨೬ ಜಿಲ್ಲೆಗಳ ಪೈಕಿ ೨೨೩ ಜಿಲ್ಲೆಗಳಲ್ಲಿ ತಮ್ಮ ಸಂಘಟನೆಗಳನ್ನು ಹೊಂದಿದ್ದಾರೆ. ಇದರ ವ್ಯಾಪಕ ಬೆಳವಣಿಗೆಯನ್ನು ಚಿದಂಬರಂ ಗಂಭೀರವಾಗಿ ತೆಗೆದುಕೊಂಡಿದ್ದಾರೆ. ಮಾವೋವಾದಿಗಳು ನಮ್ಮ ದೇಶದ ಆಂತರಿಕ ಭದ್ರತೆಗೆ ಶತ್ರುಗಳು ಎಂದು ಬಾಲಿಶವಾಗಿ ನುಡಿದಿದ್ದಾರೆ. ಮಾವೋವಾದಿಗಳ ವೃದ್ಧಿಸುತ್ತಿರುವ ಬೆಳವಣಿಗೆಯನ್ನು ಎಡಪಕ್ಷಗಳು ಹೆಚ್ಚು ಗಂಭೀರವಾಗಿ ಪರಿಗಣಿಸಬೇಕು. ಮಾವೋವಾದಿಗಳ ಹಿಂಸಾಚಾರ ಖಂಡನೀಯ. ಕೆಲವು ಭೂ ಮಾಲೀಕರನ್ನು, ಪೊಲೀಸರನ್ನು, ರಾಜಕೀಯ ಕಾರ್ಯಕರ್ತರನ್ನು ಕೊಂದಾಕ್ಷಣ ವ್ಯವಸ್ಥೆ ಬದಲಾಗುವುದಿಲ್ಲ. ಮಾರ್ಕ್ಸ್‌ವಾದ ವೈಯಕ್ತಿಕ ಹತ್ಯೆಯನ್ನು ವಿರೋಧಿಸುತ್ತದೆ. ಹೀಗಿದ್ದೂ ಯಾವ ಕಾರಣಗಳಿಗಾಗಿ ಬಡಜನರು, ಭೂಹೀನ ರೈತರು, ಬುಡಕಟ್ಟಿನ ಜನರು, ಪರಿಶಿಷ್ಟ ವರ್ಗ ಹಾಗೂ ಜಾತೀಯ ಜನರು ಮಾವೋವಾದಕ್ಕೆ ಆಕರ್ಷಿತರಾಗುತ್ತಿದ್ದಾರೆಂದು ಅರಿಯಲು ಪ್ರಯತ್ನಿಸಿದಲ್ಲಿ ಈ ಜನರು ಸಮಾಜದಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಗಂಭೀರತೆಯ ಅರಿವಾಗಬಹುದು. ಮಾವೋವಾದಿಗಳು ಎಡಪಕ್ಷಗಳ ಜಾಗವನ್ನು ಆಕ್ರಮಿಸುತ್ತಿದ್ದಾರೆಂಬ ವಿಶ್ಲೇಷಣೆ ಅಸಮಂಜಸವಲ್ಲ. ಯಾವುದೇ ಚಳುವಳಿ ಅಥವಾ ಹೋರಾಟ ಪ್ರಬಲವಾಗಿ ಹಾಗೂ ವಿಸ್ತಾರವಾಗಿ ಬೆಳೆದಿದೆಯೆಂದರೆ ಅದಕ್ಕೆ ಪೂರಕವಾದ ವಸ್ತುಸ್ಥಿತಿ ಸಮಾಜದಲ್ಲಿದೆ ಎಂದರ್ಥ. ಬಡತನ, ರೈತರ ಭೂ ಹೋರಾಟಗಳು, ಕೃಷಿಕ್ಷೇತ್ರದ ನಿರ್ಲಕ್ಷ್ಯ, ಕಾಡು ಮತ್ತು ಖನಿಜ ಸಂಪತ್ತಿನ ಲೂಟಿ, ಅಸಮಾನತೆ, ಇತ್ಯಾದಿಗಳು ಹೆಚ್ಚಾದಂತೆ ಹೋರಾಟ ಅನಿವಾರ್ಯವಾಗುತ್ತದೆ. ಮಾವೋವಾದಿಗಳು ಇವರಿಗೆ ಆಪ್ತರಾಗುತ್ತಾರೆ. ಈ ವಸ್ತುಸತ್ಯವನ್ನರಿಯದೆ ಮಾವೋವಾದಿಗಳನ್ನು ದಮನ ಮಾಡುತ್ತೇವೆಂದು ಸೈನ್ಯ ಸಜ್ಜು ಮಾಡಿದ್ದೇ ಆದರೆ ಅದರ ಪರಿಣಾಮ ಘೋರವಾಗಬಹುದು. ಇದು ೨೦೦೯ ಸಮಾಜದ ಮುಂದಿಟ್ಟಿರುವ ಪ್ರಮುಖ ಪ್ರಶ್ನೆ.

ಹಿಂದೆ ಕಾಂಗ್ರೆಸ್ ಬೆಂಬಲ ಪಡೆದು ಜಾರ್ಖಂಡ್ ರಾಜ್ಯದ ಮುಖ್ಯಮಂತ್ರಿಯಾಗಿದ್ದ ಮಧು ಕೋಡ ಎಂಬುವನು ಹೇಗೆ ರಾಷ್ಟ್ರದ ಖನಿಜ ಸಂಪತ್ತನ್ನು ಲೂಟಿ ಮಾಡಿ ಮತ್ತು ಮಾಡಿಸಿ ಸಹಸ್ರಾರು ಕೋಟಿ ರೂಪಾಯಿಗಳೊಡೆಯನಾದ ಎಂಬ ಕಥೆ ಕೇಳಿದರೆ ಈ ದೇಶದಲ್ಲಿರುವುದು ಪ್ರಜೆಗಳಿಂದ, ಪ್ರಜೆಗಳಿಗಾಗಿ ಮತ್ತು ಪ್ರಜೆಗಳಿಗೋಸ್ಕರ ಇರುವ ಪ್ರಜಾಪ್ರಭುತ್ವವಲ್ಲವೆಂದು ಗೋಚರವಾಗುತ್ತಿದೆ. ಹಾಗೆಯೆ ಲೋಕಸಭೆ ಮತ್ತು ವಿಧಾನ ಸಭೆ ಚುನಾವಣೆಗೆ ನಿಲ್ಲುವ ಬಹುತೇಕ ಅಭ್ಯರ್ಥಿಗಳ ಆಸ್ತಿಗಳ ವಿವರಣೆ ನೋಡಿದರೆ ಗಾಬರಿಯಾಗುತ್ತದೆ. ನಮ್ಮದು ವಿಶೇಷ ರೀತಿಯ ಪ್ರಜಾಪ್ರಭುತ್ವ: ಅಧಿಕಾರದಿಂದ ಹಣ ಮತ್ತು ಹಣಕ್ಕಾಗಿ ಅಧಿಕಾರ.

**ಕರ್ನಾಟಕ - ಕಮಲ - ವಿಲ-ವಿಲ**

ತಿರುಪತಿಯ ತಿಮ್ಮಪ್ಪನು ಇದಾವುದರ ಪರಿವೆಯೂ ಇಲ್ಲದೆ ಕೋಟಿ ಕೋಟಿ ಹಣ ಕಮಾಯಿಸುತ್ತಿದ್ದಾನೆ. ಬಳ್ಳಾರಿಯ ಗಣಿ ಲೂಟಿ ಅಪಖ್ಯಾತಿಯ ಜನಾರ್ದನ ರೆಡ್ಡಿ ಸುಮಾರು ನಲವತ್ತೆರಡು ಕೋಟಿ ರೂಪಾಯಿ ಮೌಲ್ಯದ ಬಂಗಾರದ ಕಿರೀಟವನ್ನು

ಸಮರ್ಪಿಸಿ, ಭಗವಂತನ ಕೃಪೆಗೆ ಪಾತ್ರನಾದನೆಂದು ಹೇಳಲಾಗಿದೆ. ಹೀಗಿದ್ದಾಗ್ಯೂ ಇವರಿಗೆ ಸಂಕಟವೇಕೆ ತಂದ ವೆಂಕಟರಮಣ ಎಂಬುದು ಯಕ್ಷಪ್ರಶ್ನೆಯಾಗಿದೆ. ಆಂಧ್ರದ ಮುಖ್ಯಮಂತ್ರಿಯಾಗಿದ್ದ ಕಾಂಗ್ರೆಸ್‌ನ ರಾಜಶೇಖರ ರೆಡ್ಡಿ ಬಳ್ಳಾರಿಯ ರೆಡ್ಡಿ ಸಹೋದರರ ಜೊತೆ ಹಣಕಾಸಿನ ವ್ಯವಹಾರದಲ್ಲಿ, ಗಣಿ ವ್ಯವಹಾರದಲ್ಲಿ ಭಾಗಸ್ಥನಾಗಿದ್ದುದರಿಂದ ಕೇಂದ್ರದ ಕಾಂಗ್ರೆಸ್ ನಾಯಕರ ಕೆಂಗಣ್ಣಿನಿಂದ ರಕ್ಷಿಸಿಕೊಂಡು ಬಂದಿದ್ದು ಈಗ ರಾಜಶೇಖರ ರೆಡ್ಡಿಯವರ ದುರ್ಮರಣದಿಂದಾಗಿ ಕೇಂದ್ರ ಸರ್ಕಾರಕ್ಕೆ ಸ್ವಲ್ಪ ಧೈರ್ಯ ಬಂದಂತಿದೆ. ಗಣಿ-ದಣಿಗಳು ಕರ್ನಾಟಕದಲ್ಲಿ ಯಡ್ಯೂರಪ್ಪನವರ ಸರ್ಕಾರ ಉರುಳಿಸಬೇಕು; ಇಲ್ಲದಿದ್ದಲ್ಲಿ ಗಣಿ ಹಗರಣದ ತನಿಖೆಗೆ ತಯಾರಾಗಬೇಕೆಂದು ರೆಡ್ಡಿ ಸಹೋದರರ ಮೇಲೆ ಒತ್ತಡವಿತ್ತೆಂದು ವದಂತಿಯಿತ್ತು.

**ಗಣಿ ರಾಷ್ಟ್ರೀಕರಣ**

ಕರ್ನಾಟಕದ ರಾಜಕೀಯ ಈಗ ಸಾಕಷ್ಟು ಗೊಂದಲಮಯವಾಗಿದೆ. ಯಡ್ಯೂರಪ್ಪನವರು ರೆಡ್ಡಿ ಸಹೋದರರ ಬೇಡಿಕೆಗಳನ್ನು ಈಡೇರಿಸಿ ಅಧಿಕಾರ ಉಳಿಸಿಕೊಂಡಿದ್ದಾರೆ. ಕೆಲಸ ಕಳೆದುಕೊಂಡ ಅವರ ಆಪ್ತೆ ಶೋಭಾ ಕರಂದ್ಲಾಜೆಯ ಬಗ್ಗೆ ಅವರು ಕಣ್ಣೀರಿಟ್ಟಿದ್ದಾರೆ. ಆಪರೇಷನ್ ಕಮಲದ ಮೂಲಕ ಗದ್ದುಗೆಯೇರಿದ ಭಾರತೀಯ ಜನತಾ ಪಕ್ಷ ಕೇವಲ ಒಂಬತ್ತು ತಿಂಗಳಲ್ಲಿ ಮುಗ್ಗರಿಸಿ ಎದ್ದಿರುವುದು, ಪಕ್ಷದಲ್ಲಿನ ಒಳಜಗಳಗಳು ಈಗ ಬೀದಿ ಜಗಳಗಳಾಗಿರುವುದು, ಮುಖ್ಯಮಂತ್ರಿಗಳು ಗಣಿ-ದಣಿಗಳ ಹಿಡಿತದಿಂದ ಹೊರಬರಲು ಮಾಡುತ್ತಿರುವ ಸಾಹಸಗಳು, ಇತ್ಯಾದಿಗಳ ಸರಣಿ ಮಾಲೆ ಈ ಪಕ್ಷಕ್ಕೆ ಮತ ಹಾಕಿದವರ ಮನಸ್ಸನ್ನೇ ಕೆಡಿಸಿದೆ. ಗಣಿ ರಾಷ್ಟ್ರೀಕರಣದ ಕೂಗು ಹೊಸ ಬಿರುಗಾಳಿಯನ್ನೇ ಎಬ್ಬಿಸುತ್ತಿದೆ. ಕರ್ನಾಟಕವನ್ನು ಇನ್ನೊಂದು ಗುಜರಾತನ್ನಾಗಿ ಮಾಡುತ್ತೇನೆಂದು ಕೊಟ್ಟ ಮಾತನ್ನು ಯಡ್ಯೂರಪ್ಪ ಉಳಿಸಿಕೊಂಡಿದ್ದಾರೆ. ಗುಜರಾತ್‌ನಂತೆ ಕರ್ನಾಟಕವೂ ಕೂಡ ಈಗ ಲಂಚ-ರುಷುವತ್ತುಗಳಿಗೆ ಹೆಸರುವಾಸಿಯಾಗಿದೆ. ಮಂಗಳೂರು, ಪುತ್ತೂರು, ಭಟ್ಕಳ, ಉಡುಪಿ ಇತ್ಯಾದಿ ಕಡೆಗಳಲ್ಲಿ ಸಂಘಪರಿವಾರದ ರಾಮಸೇನೆ, ಹಿಂದು ಜಾಗರಣ ವೇದಿಕೆಯವರು ನಡೆಸುತ್ತಿರುವ ಕೋಮು ದಾಳಿಗಳು ಗುಜರಾತ್‌ನ ಕೋಮುಗಲಭೆಗಳಿಗೆ ಸರಿಸಮಾನವಾಗಿವೆ. ಮಹಿಳೆಯರ ಮೇಲಿನ ದೌರ್ಜನ್ಯ ಹೆಚ್ಚುತ್ತಿದೆ. ಅಧಿಕಾರದ ಲಾಲಸೆ – ಹಣ ಕೋಮುಗಲಭೆ ಇವರ ದಿನಚರಿಯಾಗಿದೆ. ಚರ್ಚ್ ಮತ್ತು ಮಸೀದಿಗಳನ್ನು ಕೆಡವುವು ಈ ರಾಜ್ಯದ ದಿನನಿತ್ಯದ ಸುದ್ದಿಯಾಗಿದೆ. ಕರ್ನಾಟಕದ ಜನತೆ ಇವರ ದುರಾಡಳಿತ ಬೇಸತ್ತಿದೆ, ದೇವೇಗೌಡರ ಕುಟುಂಬದ ರಾಜಕೀಯದಿಂದಲೂ ಬೇಸತ್ತಿದೆ. ಕಾಂಗ್ರೆ ಒಡೆದ ಮನೆಯಾಗಿದೆ. ಕರ್ನಾಟಕದ ರಾಜಕೀಯ ಅನಿಶ್ಚಿತತೆ ದಟ್ಟವಾಗುತ್ತಿ ೨೦೧೨ರಲ್ಲಿ ಆ ಪ್ರಳಯ ಆಗದಿದ್ದರೂ ಇಲ್ಲಂತೂ ಈ ಪ್ರಳಯ ನಡೆದೇ ಇದೆ.

ಕರ್ನಾಟಕದಲ್ಲಿ ಮಾತ್ರವಲ್ಲ, ಬಹುತೇಕ ರಾಜ್ಯಗಳ ಜನತೆ ಭಾರತೀಯ ಜನ ಪಕ್ಷವನ್ನು ನಿರಾಕರಿಸುತ್ತಿದೆ. ಚುನಾವಣೆಗಳಲ್ಲಿನ ಸತತ ಸೋಲುಗಳು ಈ ಪಕ್ಷದ ಆಂತರಿಕ ಭಿನ್ನಾಭಿಪ್ರಾಯಗಳನ್ನು ಬಹಿರಂಗಗೊಳಿಸಿವೆ. ೧೯೯೨ರ ಡಿಸೆಂಬರ್ ೬ರಂ ಸಂಘಪರಿವಾರದವರು ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿಯನ್ನು ಕೆಡವಿದ ಬ ವಿಚಾರಣೆ ನಡೆಸಲು ಕೇಂದ್ರ ಸರ್ಕಾರ ಲಿಬರ್ಹಾನ್ ಆಯೋಗವನ್ನು ರಚಿಸಿ ಸುಮಾರು ಹದಿನೇಳು ವರ್ಷಗಳ ನಂತರ ಆಯೋಗ ಜೂನ್‌ನಲ್ಲಿ ವರದಿ ನೀಡಿ ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಯಲ್ಲಿ ಪ್ರಕಟಗೊಂಡ ವರದಿಯ ಕೆಲವು ಭಾಗ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರ ಲಿಬರ್ಹಾನ್ ವರದಿಯನ್ನು ಲೋಕಸಭೆ ಮ ರಾಜ್ಯಸಭೆಗಳ ಮುಂದೆ ಮಂಡಿಸಿದೆ. ಆದರೆ ಲಿಬರ್ಹಾನ್ ವರದಿ ಹೊಸ ವಿಷ ಗಳನ್ನೇನೂ ಹೊರತಂದಿಲ್ಲ. ಅಟಲ್ ಬಿಹಾರಿ ವಾಜಪೇಯಿ ಡಿಸೆಂಬರ್ ೫, ೧೯೯೨ರಂ ಲಕ್ನೊದಲ್ಲಿ ಅಯೋಧ್ಯೆ-ರಾಮಮಂದಿರ-ಬಾಬ್ರಿ ಮಸೀದಿ ಕುರಿತು ಮಾಡಿದ ಉ ಭಾಷಣ, ಅದ್ವಾನಿಯವರ ದೇಶದಾದ್ಯಂತ ಕೋಮುಗಲಭೆ ಸೃಷ್ಟಿಸಿದ ಕುಪ್ರಸಿ ರಥಯಾತ್ರೆ, ಆ ಸಮಯದಲ್ಲಿ ಉತ್ತರ ಪ್ರದೇಶದ ಮುಖ್ಯಮಂತ್ರಿಯಾಗಿದ್ದ ಕಲ್ಯಾಣ್ ಸಿಂ ಭಾರತದ ಸರ್ವೋಚ್ಚ ನ್ಯಾಯಾಲಯಕ್ಕೆ ಕೊಟ್ಟ ಸುಳ್ಳು ವಾಗ್ದಾನ, ಅದ್ವಾನಿ, ಮು ಮನೋಹರ ಜೋಶಿ, ಉಮಾ ಭಾರತಿ, ವಿಶ್ವ ಹಿಂದು ಪರಿಷತ್‌ನ ಎ. ಕೆ. ಸಿಂಘಾ ಸಂಘಪರಿವಾರದ ಕರಸೇವಕರು ಬಾಬ್ರಿ ಮಸೀದಿಯನ್ನು ಕೆಡವಿದ್ದು, ನಂತರ ಇ ದುರದೃಷ್ಟಕರ ಘಟನೆಯೆಂದು ಅದ್ವಾನಿ ಮೊಸಳೆ ಕಣ್ಣೀರು ಸುರಿಸಿದ್ದು, ಇವ ನಡೆಯುತ್ತದೆಂದು ತಿಳಿದೂ ಪ್ರಧಾನ ಮಂತ್ರಿ ನರಸಿಂಹ ರಾವ್ ದಿವ್ಯ ಮೌನ ವಹಿ



...ರ್ಕ್ಷ್ಯದಿಂದ ಕುಳಿತದ್ದು, ಅಂದಿನ ಕೇಂದ್ರ ಗೃಹಮಂತ್ರಿ ಎಸ್. ಬಿ. ಚವ್ಹಾಣ್ ತಾನು ಈ ಎಲ್ಲವನ್ನು ...ರದರ್ಶನದಲ್ಲಿ ನೋಡಿ ತಿಳಿದುಕೊಂಡೆನೆಂದು ಹೇಳಿದ್ದು, ನಂತರ ದೇಶದಾದ್ಯಂತ ನಡೆದ ಕೋಮು ...ಭೆಗಳಲ್ಲಿ ಸಹಸ್ರಾರು ಅಮಾಯಕರು ಮೃತರಾದದ್ದು, ಮುಂಬಯಿಯಲ್ಲಿ ದಾವೂದ್ ಇಬ್ರಾಹಿಂನ ಕಡೆಯವರು ...ಣಿ ಬಾಂಬ್ ಸ್ಫೋಟಿಸಿದ್ದು ಇವೆಲ್ಲ ಎಲ್ಲರಿಗೂ ತಿಳಿದ ವಿಚಾರಗಳು. ಇದಕ್ಕಾಗಿ ಹದಿನೇಳು ವರ್ಷಗಳು ...ಯಬೇಕಿರಲಿಲ್ಲ, ಆಯೋಗದ ವರದಿ ಕೂಡ ಯಾರಿಗೂ ಬೇಕಿರಲಿಲ್ಲ. ಆಯೋಗ ಕೂಡ ಬಾಬ್ರಿ ಮಸೀದಿಯನ್ನು ...ವಿದ ಜನರ ವಿರುದ್ಧ ಯಾವ ಕ್ರಮ ತೆಗೆದುಕೊಳ್ಳಬೇಕೆಂದು ತಿಳಿಸಿಲ್ಲ. ಕೆಲವು ಶಿಫಾರಸ್ಸುಗಳನ್ನು ಮಾಡಿದೆ. ಕೇಂದ್ರ ...ರ್ಕಾರ ಕೆಲವು ಶಿಫಾರಸ್ಸುಗಳನ್ನು ಕಾರ್ಯಗತಗೊಳಿಸುವುದಾಗಿ ತಿಳಿಸಿದೆ. ನಮ್ಮ ದೇಶದ ಸಂವಿಧಾನದ ಮೂಲ ...ಣಗಳಲ್ಲೊಂದಾದ ಧರ್ಮನಿರಪೇಕ್ಷತೆಯ ಮೌಲ್ಯಕ್ಕೆ ಅಪಚಾರವೆಸಗಿದ, ಕೋಮುಗಲಭೆಗಳನ್ನು ಹುಟ್ಟು ...ಕಿದ, ಸಹಸ್ರಾರು ಅಮಾಯಕರ ಜೀವ ತೆಗೆದ ಜನರು ಈ ವ್ಯವಸ್ಥೆಯಲ್ಲಿ ಏನೂ ಮಾಡದವರಂತೆ ಹದಿನೇಳು ...ರ್ಷಗಳು ಕಳೆದಿದ್ದಾರೆಂದರೆ ಈ ದೇಶದ ನ್ಯಾಯ ವಿತರಣಾ ವ್ಯವಸ್ಥೆಯ ಬಗ್ಗೆ ನಂಬಿಕೆ ಹೋಗುತ್ತದೆ.

**...ಯಾಂಗ- ಈಗ ಕಟಕಟೆಯಲ್ಲಿ**

ನ್ಯಾಯ, ನ್ಯಾಯಾಂಗ, ನ್ಯಾಯವಿತರಣಾ ವ್ಯವಸ್ಥೆ ಎಂದ ಕೂಡಲೇ ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ...ಯಾಧೀಶ ನ್ಯಾಯಮೂರ್ತಿ ದಿನಕರನ್ ನಮ್ಮ ಕಣ್ಮುಂದೆ ಬರುತ್ತಾರೆ. ನಮ್ಮ ದೇಶದಲ್ಲಿ ಜನತೆಗೆ ನ್ಯಾಯಾಂಗದ ...ೕಲೆ ಭಾರಿ ಭರವಸೆ. ಆದರೆ ಜಾಗತೀಕರಣದ ಪ್ರಕ್ರಿಯೆಯಲ್ಲಿ ಶಾಸಕಾಂಗ ಮತ್ತು ಕಾರ್ಯಾಂಗ ಎಷ್ಟು ಕಲುಷಿತ ...ಂಡಿದೆಯೊ ನ್ಯಾಯಾಂಗ ಅಷ್ಟೇ ಕಲುಷಿತಗೊಂಡಿದೆಯೆಂದು ಒಪ್ಪಿಕೊಳ್ಳುವವರ ಸಂಖ್ಯೆ ನ್ಯಾಯಮೂರ್ತಿ ...ಕರನ್ ಪ್ರಕರಣದ ನಂತರ ಹೆಚ್ಚುತ್ತಿದೆ. ನ್ಯಾಯಾಂಗದ ಮೇಲೆ ನಂಬಿಕೆ ಮತ್ತು ಗೌರವ ಕಡಿಮೆಯಾಗುತ್ತಿದೆ. ...ಯಮೂರ್ತಿ ದಿನಕರನ್ ಮೇಲೆ ತಮಿಳುನಾಡಿನ ವಕೀಲರು ಮಾಡಿರುವ ಆರೋಪಗಳಿಗೆ ಸಾಕಷ್ಟು ಪುರಾವೆ ...ಒದಗಿಸಿದ್ದಾರೆ. ತಮಿಳುನಾಡಿನ ಸರ್ಕಾರ ಇವರು ಜಮೀನು ಒತ್ತುವರಿ ಮಾಡಿ ಕೊಂಡಿರುವುದನ್ನು ತನಿಖೆ ಮಾಡಿ ಒಪ್ಪಿ ...ಂಡಿದೆ. ಸಾಮಾನ್ಯ ನೌಕರ ಹೀಗೆ ಮಾಡಿದ್ದರೆ ಅವನನ್ನು ಅಮಾನತ್ತಿನಲ್ಲಿಡಲಾಗುತ್ತಿತ್ತು. ಆದರೆ ನ್ಯಾಯಮೂರ್ತಿ ...ಯಪೀಠದಲ್ಲಿ ಕುಳಿತು ನ್ಯಾಯ ನಿರ್ಣಯ ಮಾಡುತ್ತಿದ್ದರು! ಈ ಪ್ರಕರಣದಿಂದಾಗಿ ನ್ಯಾಯಾಂಗದ ವರ್ಚಸ್ಸು ...ಮೆಯಾಗಿರುವುದಂತೂ ನಿರ್ವಿವಾದ. ಉನ್ನತ ನ್ಯಾಯಾಲಯಗಳಿಗೆ ನ್ಯಾಯಾಧೀಶರನ್ನು ನೇಮಕ ಮಾಡುವ ...ದ್ಧತಿ ಹೆಚ್ಚು ಹೆಚ್ಚು ಪಾರದರ್ಶಕವಾಗಿರಬೇಕು ಎಂಬ ವಾದಕ್ಕೆ ಈಗ ಹೆಚ್ಚು ಪುಷ್ಟಿ ದೊರೆತಿದೆ. ಸರ್ವೋಚ್ಚ ...ಯಾಲಯವೇ ಈಗ ಕಟಕಟೆಯಲ್ಲಿ ನಿಂತಿದೆ. ನ್ಯಾಯಾಧೀಶರು ಕೂಡ ಮಾಹಿತಿ ಹಕ್ಕಿನ ಕಾಯ್ದೆಯ ವ್ಯಾಪ್ತಿಗೆ ...ಬೇಕೆಂಬುದನ್ನು ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳು ವಿರೋಧಿಸಿದ್ದಾರೆ. ಈ ಬಗ್ಗೆ ...ಹಲಿ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ರವೀಂದ್ರ ಭಟ್ ನ್ಯಾಯಾಧೀಶರು ಮಾಹಿತಿ ಹಕ್ಕಿನ ಕಾನೂನಿಗೆ ...ಪಡಲ್ಪಡುತ್ತಾರೆ ಎಂದು ಕೊಟ್ಟಿರುವ ತೀರ್ಪು ಚರಿತ್ರಾರ್ಹ ಮತ್ತು ಸ್ವಾಗತಾರ್ಹ. ಆದರೆ ಈ ತೀರ್ಪಿನ ಬಗ್ಗೆ ...ರ್ವೋಚ್ಚ ನ್ಯಾಯಾಲಯವೇ ಮೇಲ್ಮನವಿ ಸಲ್ಲಿಸಿರುವುದು ಖಂಡನಾರ್ಹ. ನ್ಯಾಯಾಧೀಶರು ಅಧಿಕಾರ ...ಕರಿಸುವ ಸಮಯದಲ್ಲಿ ತಮ್ಮ ಮತ್ತು ತಮ್ಮ ಕುಟುಂಬದವರ ಆಸ್ತಿಯ ವಿವರಗಳನ್ನು ಸ್ವ-ಇಚ್ಛೆಯಿಂದ ಕೊಡುತ್ತಿಲ್ಲ; ...ದ್ದರಿಂದ ಈ ಬಗ್ಗೆ ಹೊಸ ಕಾನೂನು ಮಾಡಬೇಕಾದ್ದು ಅನಿವಾರ್ಯ. ಕರ್ನಾಟಕ ಉಚ್ಚ ನ್ಯಾಯಾಲಯದ ...ಯಮೂರ್ತಿ ಶೈಲೇಂದ್ರ ಕುಮಾರ್ ಸ್ವ-ಇಚ್ಛೆಯಿಂದ ತಮ್ಮ ಆಸ್ತಿ ವಿವರಣೆ ಕೊಟ್ಟು ನ್ಯಾಯಾಂಗಕ್ಕೆ ಗೌರವ ...ಸಿದ್ದಾರೆ ಮತ್ತು ನ್ಯಾಯಾಂಗದಲ್ಲಿ ನಡೆಯುತ್ತಿರುವ ಅವ್ಯವಹಾರಗಳ ಬಗ್ಗೆ ನಿರ್ಭೀತಿಯಿಂದ ಮಾತನಾಡಿ ಎಲ್ಲರ ...ಚ್ಚುಗೆಗೆ ಪಾತ್ರರಾಗಿದ್ದಾರೆ. ನ್ಯಾಯಾಂಗದ ಘನತೆ ಮತ್ತು ಗೌರವ ಉಳಿದು ಬೆಳೆಯಬೇಕೆಂದರೆ ನ್ಯಾಯಮೂರ್ತಿ ...ೕಂದ್ರ ಕುಮಾರ್, ರವೀಂದ್ರ ಭಟ್ ಅಂತಹವರ ಸಂಖ್ಯೆ ಹೆಚ್ಚಬೇಕು.

**...ವಾಮಾನ ಶೃಂಗಸಭೆ**

ಡೆನ್‌ಮಾರ್ಕ್ ದೇಶದ ರಾಜಧಾನಿ ಕೋಪನ್‌ಹೆಗನ್ ೨೦೦೯ರಲ್ಲಿ ಎಲ್ಲರ ಗಮನ ಸೆಳೆದ ಸುಂದರ ನಗರ. ...ಮಾರು ೧೯೦ ರಾಷ್ಟ್ರಗಳ ಹವಾಮಾನ ಶೃಂಗಸಭೆ ನಡೆದ ನಗರ. ಜಗತ್ತಿನ ಶ್ರೀಮಂತ ರಾಷ್ಟ್ರಗಳು ವಾತಾವರಣವನ್ನು ಕಲುಷಿತಗೊಳಿಸಿದ ದೋಷಿಗಳು. ಅಮೆರಿಕಾ ಇಂದಿಗೂ ವಾಯುಮಾಲಿನ್ಯಕ್ಕೆ ಕಾರಣವಾದ ಪ್ರಮುಖ ರಾಷ್ಟ್ರವಾಗಿದೆ. ಈಗ ಚೀನ, ಭಾರತ, ಬ್ರೆಜಿಲ್ ಇತ್ಯಾದಿ ರಾಷ್ಟ್ರಗಳಲ್ಲಿ ಹೆಚ್ಚು ಕೈಗಾರಿಕೀಕರಣದಿಂದಾಗಿ ವಾತಾವರಣದಲ್ಲಿ ಇಂಗಾಲದ ಮಟ್ಟ ಸಹಜವಾಗಿ ಹೆಚ್ಚುತ್ತಿದೆ. ಏರುತ್ತಿರುವ ವಾತಾವರಣದ ಉಷ್ಣತೆ, ಇಂಗಾಲ ಹೊರಸೂಸುವಿಕೆ, ಸಮುದ್ರದ ಮಟ್ಟದ ಏರಿಕೆ, ಕರಗುತ್ತಿರುವ ಹಿಮರಾಶಿ, ಸೊರಗುತ್ತಿರುವ ಕಾಡು ಇವೆಲ್ಲ ಪ್ರಪಂಚದ ಎಲ್ಲ ರಾಷ್ಟ್ರಗಳಲ್ಲೂ ಆತಂಕ ಮತ್ತು ಗಾಬರಿ ಹುಟ್ಟಿಸಿರುವ ವಿಷಯವಾಗಿದೆ. ಇದು ಬಂಡವಾಳಶಾಹಿ ಅವ್ಯವಸ್ಥೆಯ ಕೊಡುಗೆ. ಈ ವ್ಯವಸ್ಥೆಯಲ್ಲಿ ಎಲ್ಲ ಸಮಸ್ಯೆಗಳಿಗೂ ಪರಿಹಾರ ಕೊಡುವ ಶಕ್ತಿಯಿದೆಯೆಂದೂ, ಮಾಲಿನ್ಯ ನಿಯಂತ್ರಣ ಕಾನೂನೇನಾದರೂ ತಂದಲ್ಲಿ ಅದು ಆರ್ಥಿಕ ಬೆಳವಣಿಗೆಯ ಮೇಲೆ ದುಷ್ಪರಿಣಾಮ ಬೀರುತ್ತದೆಂದೂ ಹಲವರು ವಾದಿಸುತ್ತಿದ್ದಾರೆ. ಭಾರತ ೨೦೨೦ರ ಹೊತ್ತಿಗೆ ಸುಮಾರು ೨೦%ರಷ್ಟು ಇಂಗಾಲದ ಹೊರಸೂಸುವಿಕೆಯನ್ನು ತಡೆಗಟ್ಟಲು ಪ್ರಯತ್ನಿಸುವುದಾಗಿ ಹೇಳಿರುವುದು ಈಗ ಭಾರಿ ಚರ್ಚೆಗೆ ಗ್ರಾಸವಾಗಿದೆ. ಹವಾಮಾನ ವೈಪರೀತ್ಯಗಳ ಬಗ್ಗೆ ಕೋಪನ್‌ಹೆಗನ್‌ನಲ್ಲಿ ಸರ್ವಾನುಮತ ನಿರ್ಣಯ ಬಾರದೆ ಹೋಗಿ ಏನೋ ಒಂದು ತೇಪೆದಾರಿ ಸಮ್ಮತಿಯ ನಾಟಕ ನಡೆದಿದೆ.

**ಪ್ರತ್ಯೇಕತೆಯ ಕೂಗು**

ಆಂಧ್ರಪ್ರದೇಶ ಈಗ ಹತ್ತಿ ಉರಿಯುತ್ತಿದೆ. ತೆಲಂಗಾಣ ಪ್ರದೇಶ ಪ್ರತ್ಯೇಕ ರಾಜ್ಯವಾಗಬೇಕೆಂಬ ಬೇಡಿಕೆ ಸುಮಾರು ನಲವತ್ತು ವರ್ಷ ಹಳೆಯದು. ತೆಲಂಗಾಣ ರಾಷ್ಟ್ರೀಯ ಸಮಿತಿಯ ನಾಯಕ ಕೆ. ಚಂದ್ರಶೇಖರ ರಾವ್ ಆಮರಣಾಂತ ಉಪವಾಸ ಕುಳಿತ ಸಂದರ್ಭದಲ್ಲಿ ಹಬ್ಬಿದ ಹಿಂಸಾಚಾರದ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರ ತೆಲಂಗಾಣ ರಾಜ್ಯದ ಬೇಡಿಕೆಗೆ ದಿಢೀರನೆ ಒಪ್ಪಿಗೆ ನೀಡಿದೆ. ಅವಕಾಶವಾದಿ ರಾಜಕಾರಣಿಯಾದ ಚಂದ್ರಶೇಖರ ರಾವ್ ರಾತ್ರೋರಾತ್ರಿ ತೆಲಂಗಾಣದ ಗಾಂಧಿಯಾಗಿ ರೂಪಾಂತರಗೊಂಡ. ಆಂಧ್ರದ ವಿಭಜನೆಯನ್ನು ವಿರೋಧಿಸಿ, ವಿಧಾನ ಸಭಾ ಸದಸ್ಯರು ಮತ್ತು ಲೋಕಸಭಾ ಸದಸ್ಯರು ರಾಜೀನಾಮೆ ನೀಡಿದ್ದಾರೆ. ಕೇಂದ್ರ ಸರ್ಕಾರಕ್ಕೆ ಇದು ನುಂಗಲಾರದ ತುತ್ತಾಗಿದೆ. ಆಂಧ್ರಪ್ರದೇಶ ಮುಂದಿನ ದಿನಗಳಲ್ಲಿ ತೀವ್ರ ಹಿಂಸಾಚಾರಕ್ಕೊಳಗಾಗುವ ಸಂಭವ ಹೆಚ್ಚುತ್ತಿದೆ. ಈ ಹಿನ್ನೆಲೆಯಲ್ಲೇ ಭಾರತದ ಇತರೆ ಪ್ರದೇಶಗಳಲ್ಲಿ ಪ್ರತ್ಯೇಕತೆಯ ಕೂಗು ಹೆಚ್ಚುತ್ತಿದೆ. ಗೂರ್ಖಾ ಲ್ಯಾಂಡ್, ಬುಂದೇಲ್ ಖಂಡ್, ಪೂರ್ವಾಂಚಲ್, ವಿದರ್ಭ, ಪಶ್ಚಿಮ ಉತ್ತರ ಪ್ರದೇಶ, ಹೀಗೆ ಹಲವಾರು ಹೊಸ ರಾಜ್ಯಗಳ ಬೇಡಿಕೆಗೆ ತೆಲಂಗಾಣ ನಾಂದಿ ಹಾಡಿದೆ. ಭಾಷಾವಾರು ಪ್ರಾಂತ್ಯಗಳ ರಚನೆಯ ತತ್ತ್ವದ ಜಾಗದಲ್ಲಿ ವಿಭಜನೆಯ ಕೂಗು ಮೊಳಗುತ್ತಿದೆ. ರಾಜ್ಯ ಪುನರ್ವಿಂಗಡಣೆಯ ಪ್ರಶ್ನೆಯನ್ನು ಇಡಿಯಾಗಿ ಪುನರ್ವಿಮರ್ಶಿಸಿಕೊಳ್ಳಬೇಕಾದ ಅಗತ್ಯವು ಈಗ ನಮ್ಮ ದೇಶದಲ್ಲಿ ಹೆಚ್ಚಿದೆ.

೨೦೧೦ – ಹವಾಮಾನದ ಬ್ಯೂರೋನ ಅನುಮಾನದ ಪ್ರಕಾರ ಅತಿ ಹೆಚ್ಚು ಉಷ್ಣತೆಯನ್ನು ಕಾಣುವ ವರ್ಷ. ಆದರೆ ಭಾರತದ ರಾಜಕೀಯ ಉಷ್ಣತೆ, ಸಾಮಾಜಿಕ ಸಂಘರ್ಷ ೨೦೧೦ರಲ್ಲಿ ಏರುವುದರಲ್ಲಿ ಯಾವುದೇ ಅನುಮಾನವಿಲ್ಲ.

**ಮುರಳೀಧರ್**
ನಂ. ೨೩, ೫ನೇ ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು - ೫೬೦ ೦೦೩

ಕರ್ನಾಟಕದ ಸಾಂಸ್ಕೃತಿಕ ಲೋಕದಲ್ಲಿ ಶ್ರೀಮತಿ ಮಾಯಾರಾವ್ ಅವರದು ಬಹಳ ದೊಡ್ಡ ಹೆಸರು. ದೇಶ-ವಿದೇಶಗಳಲ್ಲಿ ಅವರು ನೀಡಿರುವ ಪ್ರದರ್ಶನಗಳು ಹಲವು. ಎಲ್ಲವೂ ಅನನ್ಯವೇ. ''ಹೆಣ್ಣಾಗಿ ಹುಟ್ಟಿದ್ದು ಎಂದೂ ಬೇಸರ ತರಲಿಲ್ಲ''ವೆಂದು ಗಟ್ಟಿಯಾಗಿ ಹೇಳುವ ಮಾಯಾ ಅವರು ಎದುರಿಸಿದ ಅಡಚಣೆಗಳು ಮತ್ತು ಸವಾಲುಗಳು ಅವರನ್ನೆಂದೂ ಕಂಗಾಲಾಗಿಸಲಿಲ್ಲ. ರಷ್ಯದಲ್ಲಿ ಮೂರು ವರ್ಷ ಉನ್ನತ ತರಬೇತಿ ಪಡೆದ ಇವರು ಹೇಳುತ್ತಾರೆ: ''ಬೇರೆಡೆ ನೃತ್ಯ ಕಲಿಸುವುದೆಂದರೆ ಏನನ್ನೋ ಹೇಳಿಕೊಡುವುದೆಂಬುದು ಪ್ರಮುಖವಾಗಿರುತ್ತದೆ. ರಷ್ಯದಲ್ಲಿ ಹಾಗಲ್ಲ. ಅಲ್ಲಿ ನನ್ನಲ್ಲಿರುವ ಪ್ರತಿಭೆ ಮತ್ತು ಕ್ರಿಯಾವಂತಿಕೆಯನ್ನು ಹೊರಗೆಳೆಯುವುದು ಶಿಕ್ಷಣದ ಉದ್ದೇಶವಾಗಿತ್ತು.'' ತಮ್ಮ ಶಿಷ್ಯರಿಂದ ಶ್ರೀಮತಿ ಮಾಯಾ ರಾವ್ ಅವರು ಕಲಾಪ್ರತಿಭೆಯನ್ನು ವಿಪುಲವಾಗಿ ಹೊರ ಹೊಮ್ಮಿಸಿದ್ದಾರೆ ಮತ್ತು ಅದಕ್ಕೂ ಅಧಿಕವಾಗಿ ತುಂಬಿಸಿಕೊಟ್ಟಿದ್ದಾರೆ.



# ಮಾಯಾರಾವ್:

## ಬದುಕು-ನೃತ್ಯ: ನಡಿಗೆ, ನಾಟ್ಯದ ತಿಲ್ಲಾನ

ಅವರು 'ಹೊಸತು'ಗೆ ಸಂದರ್ಶನ ನೀಡಲು ಒಪ್ಪಿದ್ದು ನಮಗೆ ಸಂತೋಷದ ಸಂಗತಿ. ೨೦೦೯ರ ಅಕ್ಟೋಬರ್ ೩೧ರಂದು ಶ್ರೀಮತಿ ಎಂ. ಆರ್. ಕಮಲ, ಡಾ॥ ವಿಜಯಾ ಮತ್ತು ಡಾ॥ ಜಿ. ರಾಮಕೃಷ್ಣ ಶ್ರೀಮತಿ ಮಾಯಾರಾವ್ ಅವರನ್ನು ಅವರ ಮನೆಯಲ್ಲೇ ಸಂದರ್ಶಿಸಿದರು. ಸಂದರ್ಶನದಲ್ಲಿ ಮುಖ್ಯಪಾತ್ರ ವಹಿಸಿ ನಂತರ ಲೇಖನವನ್ನು ಸಿದ್ಧಗೊಳಿಸಿಕೊಟ್ಟವರು ಕವಯಿತ್ರಿ ಮತ್ತು ಕಾಲೇಜು ಅಧ್ಯಾಪಕಿ ಶ್ರೀಮತಿ ಕಮಲ. ಸಂದರ್ಶನಕ್ಕೆ ಪೂರ್ಣ ಸಹಕಾರ ನೀಡಿದ ಡಾ॥ ವಿಜಯಾ ಸಹ ಸಂದರ್ಶನದಲ್ಲಿ ಪಾಲ್ಗೊಂಡಿದ್ದಾರೆ. ಶ್ರೀಮತಿ ಪುಷ್ಪ ಸಹ ಉಪಸ್ಥಿತರಿದ್ದರು.

ಛಾಯಾಚಿತ್ರಗಳು : ಡಾ॥ ಜಿ. ರಾಮಕೃಷ್ಣ ಮತ್ತು ಮಾಯಾರಾವ್ ಅವರ ಸಂಗ್ರಹದಿಂದ

**ಹೊ**ಸತು : ನೃತ್ಯ ಒಲಿದು ಬಂದಿದ್ದು ಹೇಗೆ, ಅದಕ್ಕೆ ಏನಾದರೂ ಪ್ರೇರಣೆ, ರ್ಧತೆ ಇತ್ತೆ? ಅದೂ ನಾಟ್ಯ ಕಲೆಯ ಕುರಿತು ಅಷ್ಟಾಗಿ ಸಾಮಾಜಿಕ ಮನ್ನಣೆ ಇರದ ಲದಲ್ಲಿ?

**ಮಾಯಾ ರಾವ್ :** ಕಲಿಯುವಾಗ ನಾನು ಇಷ್ಟೆಲ್ಲ ಯೋಚನೆ ಮಾಡಲೇ ಇಲ್ಲ. ತ್ಯ ಕಲೀಬೇಕು ಅನ್ನೋ ತೀವ್ರವಾದ ಆಸೆ ಇತ್ತು ಅಷ್ಟೆ. ಎಷ್ಟೋ ಜನ ನೀವು ೊಡ್ಡ ಕ್ರಾಂತಿಕಾರಿ, ಬಂಡಾಯ ಮನೋಧರ್ಮದವರು ಅಂತೆಲ್ಲ ಹೇಳ್ತಾರೆ. ಆ ಯಸ್ಸಲ್ಲಿ ಕಲೀಬೇಕು ಅನ್ನೋದು ಬಿಟ್ಟು ಬೇರೆ ಏನೂ ಗೊತ್ತಾಗಿರಲಿಲ್ಲ. ನೃತ್ಯ ಿತು ಪ್ರದರ್ಶನ ಮಾಡೋದು ಅಷ್ಟು ಸುಲಭವಾಗಿರಲಿಲ್ಲ ಅನ್ನೋದು ನಿಜ. ದರೆ ಸಂಗೀತ ಕಲಿಯೋದಕ್ಕೆ ಅಡ್ಡಿ ಇರಲಿಲ್ಲ. ನನಗೆ ಸಂಗೀತ ಇಷ್ಟ ಇರಲಿಲ್ಲ. ಆ ಯಸ್ಸೇ ವಿಚಿತ್ರ ನೋಡಿ. ಗುರುಗಳು ಇಷ್ಟವಾಗದೆ ಇದ್ರೆ ಕಲಿಯೋ ವಿಷಯಾನೂ ಷ್ಟವಾಗೋಲ್ಲ. ನಾನು ಚೆನ್ನಾಗಿಯೇ ಹಾಡ್ತಿದ್ದೆ. ದಿಲ್‌ರುಬಾ ಸಹ ನುಡಿಸ್ತಿದ್ದೆ. ದರೂ ಅದ್ಯಾಕೋ ಸಂಗೀತದ ಬಗ್ಗೆ ನನಗೆ ಒಲವು ಮೂಡಲೇ ಇಲ್ಲ.

**ಹೊ :** ನಿಮ್ಮ ಆಸಕ್ತಿಗೆ ಪೋಷಕರ ಸಹಕಾರ ಹೇಗಿತ್ತು? ಸ್ವಲ್ಪ ನಿಮ್ಮ ಕುಟುಂಬದ ನ್ನೆಲೆ ಹೇಳ್ತೀರ?

**ಮಾ :** ನನ್ನ ತಂದೆ ಸಂಜೀವ ರಾವ್. ಅವರು ಸಿವಿಲ್ ಇಂಜಿನಿಯರ್. ತಾಯಿ ಲಿತಾಬಾಯಿ ಗೃಹಿಣಿ. ನಾವು ಆರು ಜನ ಮಕ್ಕಳು. ಉದಯಶಂಕರ್ ಅವರ ತ್ಯವೇ ನೃತ್ಯ ಕಲಿಕೆಗೆ ಸ್ಫೂರ್ತಿ ನೀಡಿದ್ದು. ಆಗಿನ ಪ್ರಖ್ಯಾತ ನೃತ್ಯ ಕಲಾವಿದ ಶ್ರೀ ಮ್‌ಗೋಪಾಲ್ ಅವರ ತಂಡದಲ್ಲಿ ಕಥಕ್ ನೃತ್ಯ ಕಲಾವಿದ ಸೋಹನ್‌ಲಾಲ್ ದ್ದರು. ರಾಮ್‌ಗೋಪಾಲ್ ಕಥಕ್, ಕಥಕ್ಕಳಿ, ಭರತನಾಟ್ಯ ಎಲ್ಲ ಮಾಡ್ತಿದ್ರು. ೋಹನ್‌ಲಾಲ್ ಅವರು ನನ್ನ ತಂಗಿಯರಾದ ಚಿತ್ರಾ ಮತ್ತು ಉಮಾಗೆ ನೃತ್ಯ ಪಾಠ ್ರರಂಭಿಸಿದ್ದರು. ಅವರ ವಯಸ್ಸು ಅದಕ್ಕೆ ಸೂಕ್ತವಾಗಿತ್ತು. ಒಬ್ಬಳಿಗೆ ೪ ಮತ್ತೊಬ್ಬಳಿಗೆ ವರ್ಷ. ನನಗಾಗ ೧೪ ವರ್ಷ. ನಾನು ಸಾರ್ವಜನಿಕವಾಗಿ ನೃತ್ಯ ಮಾಡೋದಿಲ್ಲ ಂತ ನನ್ನ ತಂದೆಗೆ ಭಾಷೆ ಕೊಟ್ಟಿದ್ದರಿಂದ ಕಲಿಯೋದಕ್ಕೆ ಅನುಮತಿ ಸಿಕ್ಕಿತ್ತು. ಆದರೆ ವರಿಗೆ ಕೊಟ್ಟ ಮಾತನ್ನು ನಾನು ಉಳಿಸಿಕೊಳ್ಳಲಿಲ್ಲ. ನನಗೆ ಭರತನಾಟ್ಯ ಕಲಿಯೋದಕ್ಕೆ ಷ್ಟ ಇರಲಿಲ್ಲ. ೧೯೪೨ರಲ್ಲಿ ಗುರು ಸೋಹನ್‌ಲಾಲ್ ಅವರ ಬಳಿ ಅತ್ಯಂತ ಂಭೀರವಾಗಿ ಕಥಕ್ ಕಲಿಯೋದಕ್ಕೆ ಶುರು ಮಾಡಿದೆ. ಎರಡು ವರ್ಷ ಕಲಿತಿರ ಬಹುದು. ಆಮೇಲೆ ನಮ್ಮ ಗುರುಗಳು ಉದಯಶಂಕರ್ ಅವರಿಂದ ಪ್ರೇರೇಪಿತರಾಗಿ ಿಮಾ ಮಾಡೋದಕ್ಕೆ ಅಂತ ಮುಂಬಯಿಗೆ ಹೊರಟುಹೋದರು.

**ಹೊ :** ನಿಮ್ಮ ಜೊತೆ ಮತ್ಯಾರು ಕಲೀತಿದ್ರು? ಚಂದ್ರಶೇಖರ್, ಲೀಲಾ ಮನಾಥನ್ ಇದ್ದರಾ?

**ಮಾ :** ಇಲ್ಲ. ನಾನು ಕಲಿಯೋದಕ್ಕೆ ನೃತ್ಯಶಾಲೆಗೆ ಹೋಗ್ತಿರಲಿಲ್ಲ. ಗುರುಗಳೇ ಮ್ಮ ಮನೆಗೆ ಬರ್ತಿದ್ರು. ಲೀಲಾ ಅವರು ಮೊದಲು ಭರತನಾಟ್ಯ ಕಲೀತಿದ್ರು. ನಮ್ಮ ದೆಗೆ ನಾನು ಸಾರ್ವಜನಿಕವಾಗಿ ಪ್ರದರ್ಶನ ಮಾಡೋದಿಲ್ಲ ಅಂತ ಮಾತು ೊಟ್ಟಿದ್ದೆನಲ್ಲ. ಬೇರೆ ಹುಡುಗೀರ ಜೊತೆ ಹೋಗುವಂತಿರಲಿಲ್ಲ. ಆದರೆ ಗೊತ್ತಾಗದ ಗೆ ಕಾಲೇಜಿನಲ್ಲಿ ಕಾರ್ಯಕ್ರಮ ಕೊಡ್ತಿದ್ದೆ. ಆವಾಗ 'ಸ್ಟೂಡೆಂಟ್ಸ್ ಫೆಡರೇಷನ್' ತ್ತಲ್ವಾ? ನಾನು, ಸೂರ್ಯನಾರಾಯಣರಾವ್, ವಿಮಲಾ (ರಂಗಾಚಾರ್) ಎಲ್ಲ ದರಲ್ಲಿ ಇದ್ದೆವು. ಮನೆಯಿಂದ ಸಂಗೀತ ಕಾರ್ಯಕ್ರಮ ಅಂತ ಹೇಳಿಕೊಂಡು ್‌ರುಬಾ ತಗೊಂಡು ಹೋಗ್ತಿದ್ದೆ. ಆಗಲೇ ನಾನು ಕೆಲವು ಬ್ಯಾಲೆಗಳನ್ನು ಮಾಡಿದ್ದೆ. ಕಾಲದಲ್ಲಿ ಹುಡುಗರು-ಹುಡುಗಿಯರು ಒಟ್ಟಾಗಿ ಪಾತ್ರ ಮಾಡೋ ಹಾಗಿರಲಿಲ್ಲ. ಡುಗಿಯರೇ ಹುಡುಗರ ಪಾತ್ರವನ್ನು ನಿರ್ವಹಿಸುತ್ತಿದ್ದರು. ಸಣ್ಣಗೆ, ಎತ್ತರವಾಗಿದ್ದವರು ಡುಗನ ಪಾತ್ರವನ್ನು ಸಾಮಾನ್ಯವಾಗಿ ಮಾಡ್ತಿದ್ದರು. ನಾನೂ ಮಾಡಿದ್ದೇನೆ.

**ಹೊ :** ನಿಮ್ಮ ಓದು-ಬರಹ, ಸುತ್ತಲಿನ ಪರಿಸರ ಹೇಗಿತ್ತು?

**ಮಾ :** ನಾನು ಓದಿದ್ದು ಮಹಾರಾಣಿ ಕಾಲೇಜಿನಲ್ಲಿ. ಆಗ ಬಡ ಮಕ್ಕಳಿಗಾಗಿ ಣ ಸಂಗ್ರಹಿಸೋದಕ್ಕೆ ಒಂದು ಪ್ರದರ್ಶನವನ್ನು ಇಟ್ಟುಕೊಂಡಿದ್ದೆವು. ಮಾಯಣದ 'ಸೀತಾ ಹರಣ' ಎಂಬ ಭಾಗಕ್ಕೆ ನಾನೇ ನೃತ್ಯ ಸಂಯೋಜಿಸಿದ್ದೆ. ರ್ಯಕ್ರಮ ಕೊಡೋ ದಿನ ಸಂಗೀತದವರು ಬರಲೇ ಇಲ್ಲ. ನಮಗೆಲ್ಲ ಅಳು ಂದುಬಿಟ್ಟಿತ್ತು. ಜಯಲಕ್ಷಮ್ಮಮ್ಮಣ್ಣಿ ಅಂತ ಪ್ರಿನ್ಸಿಪಾಲರು ಇದ್ದರು. ಮಲ್ಲಾರಾಧ್ಯ ವರ ಮಗಳು ಸುಂದರಳ ಹಾಡಿಗೆ ವಾದ್ಯಗೋಷ್ಠಿಗೆಂದು ಬಂದಿದ್ದ ನಟರಾಜ್ ವರನ್ನು ಕೇಳಿಕೊಂಡರು. ನಾನು ಹೀಗೆ ಸಿನಿಮೀಯವಾಗಿ ನಟರಾಜ್ ಅವರನ್ನು ೇಟಿಯಾಗಿದ್ದು. ನಾವು ಸ್ವಲ್ಪ ಹೊತ್ತು ಗ್ರೀನ್ ರೂಮಿನಲ್ಲಿ ಅಭ್ಯಾಸ ಮಾಡಿಕೊಂಡು



ಮಾಯಾರಾವ್, ಶಂಭುಮಹಾರಾಜ್, ಚಿತ್ರಾ



ಹೊಯ್ಸಳ ವೈಭವ



ರಾಷ್ಟ್ರಪತಿ ಆರ್. ವೆಂಕಟರಾಮನ್ ಅವರಿಂದ ಅಕಾಡೆಮಿ ಪ್ರಶಸ್ತಿ ಸ್ವೀಕರಿಸುತ್ತಿರುವ ಮಾಯಾರಾವ್. ಮಧ್ಯದಲ್ಲಿರುವವರು ಗಿರೀಶ್ ಕಾರ್ನಾಡ್

ಪ್ರದರ್ಶನ ಮಾಡಿದ್ದು. ಅಲ್ಲಿಂದ ಮುಂದೆ ನಟರಾಜ್ ಅವರನ್ನು ಆಗಾಗ್ಗೆ ಭೇಟಿಯಾಗ್ತಿದ್ದೆ. ಅವರು ನನ್ನ ಬ್ಯಾಲೆಗಳಿಗೆ ಸಹಾಯ ಮಾಡ್ತಿದ್ರು. ಅವರ ಹತ್ರ ಬಾಗಲೂರು ಕೃಷ್ಣಮೂರ್ತಿ, ಆನೂರು ಸೂರಿ ಅಂತಹ ದೊಡ್ಡ ದೊಡ್ಡ ವಿದ್ವಾಂಸರೆಲ್ಲ ಇದ್ದರು.

**ಹೊ** : ನೀವು ನಟರಾಜ್ ಅವರನ್ನು ಮದುವೆ ಮಾಡಿಕೊಳ್ಳುವುದಕ್ಕೆ ಅಷ್ಟು ದಿನ ಯಾಕೆ ಕಾಯಬೇಕಾಯ್ತು?

**ಮಾ** : ನನಗೆ ಎಷ್ಟು ಕಲಿತರೂ ಮತ್ತಷ್ಟು ಕಲೀಬೇಕು ಅನ್ನುವ ಹುಚ್ಚು. ನಾನು ದೆಹಲಿಯಲ್ಲಿದ್ದೆ. ಅವರು ಬೆಂಗಳೂರಿನಲ್ಲಿದ್ದರು. ಅಕಾಡೆಮಿ, ಚಳವಳಿ ಇತ್ಯಾದಿಗಳಲ್ಲಿ ಮುಳುಗಿಹೋಗಿದ್ದರು. ಇನ್ನೊಂದು ಕಾರಣ : ನಾವು ಸಾರಸ್ವತ ಬ್ರಾಹ್ಮಣರು, ಕೊಂಕಣಿ ಮನೆ ಮಾತು. ನಟರಾಜ್ ಅವರು ಅಯ್ಯರ್. ಜೊತೆಗೆ ನನ್ನ ತಂದೆ ಸತ್ತ ಮೇಲೆ ನಮ್ಮ ಆರ್ಥಿಕ ಪರಿಸ್ಥಿತಿ ಅಷ್ಟು ಚೆನ್ನಾಗಿರಲಿಲ್ಲ. ನಮ್ಮ ಅಮ್ಮನಿಗೆ ನನ್ನ ತಂಗಿಯರಿಗೆ ಗಂಡು ಸಿಗುತ್ತೋ ಇಲ್ಲವೋ ಅನ್ನುವ ಭಯ ಬೇರೆ ಇತ್ತು.

**ಹೊ** : ಆ ವಯಸ್ಸಿನಲ್ಲಿಯೇ ನೃತ್ಯ-ನಾಟಕಗಳ ಸಂಯೋಜನೆಯ ಬಗ್ಗೆ ಆಸಕ್ತಿ ಬೆಳೆದಿದ್ದು ಹೇಗೆ?

**ಮಾ** : ಅದೂ ಒಂದು 'ಪ್ಯಾಷನ್' ಅನ್ನಬಹುದು. ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿಯಾಗಿದ್ದ ನನಗೆ ಕಾವ್ಯ, ನಾಟಕಗಳ ಬಗ್ಗೆ ತೀವ್ರವಾದ ಆಸಕ್ತಿಯಿತ್ತು, ಹೀಗಾಗಿ ವಸ್ತುಗಳನ್ನು ಸುಲಭವಾಗಿ ಆರಿಸಿಕೊಳ್ತಿದ್ದೆ. 'ಪಿಗ್ಮೇಲಿಯನ್' ಕಥೆಯಿದೆಯಲ್ಲ, ತ.ರಾ.ಸು. ಅವರು ಅದಕ್ಕೆ ಸಾಹಿತ್ಯ ಬರೆದುಕೊಟ್ಟಿದ್ದರು. ಮತ್ತೆ ೧೯೪೯ರಲ್ಲಿ 'ಇಂಟರ್ ನ್ಯಾಷನಲ್ ಲೇಬರ್ ಆರ್ಗನೈಸೇಷನ್'ಗೆ ನೃತ್ಯ-ನಾಟಕವನ್ನು ಸಂಯೋಜಿಸಿದ್ದೆ. ಹಿರಣ್ಣಯ್ಯ ಅನ್ನುವವರು ವಸ್ತುವನ್ನು ಕೊಟ್ಟಿದ್ದರು. ಅದಕ್ಕೂ ತ.ರಾ.ಸು. ಅವರದ್ದೇ ಸಾಹಿತ್ಯ. 'ಅನ್ನಮ್ ಬಹುಕುರ್ವೀತ' ಅಂತ. ಅದೊಂದು ಉಪನಿಷತ್ ವಾಕ್ಯ. ನಾವು ನೃತ್ಯ ಮಾಡುವಾಗ ಹಿಂದೆ ಪರದೆಯ ಮೇಲೆ ಜೋಳದ ತೆನೆ ತೋರಿಸಿ ಹೊಸ ಪ್ರಯೋಗವನ್ನು ಮಾಡಿದ್ದೆವು. ನಗರದಲ್ಲಿ ಕೈಗಾರಿಕೆಗಳು ಪ್ರಾರಂಭವಾದಾಗ ರೈತರೆಲ್ಲ ಹಳ್ಳಿಯನ್ನು ಬಿಟ್ಟು ಪಟ್ಟಣಕ್ಕೆ ಬಂದರು. ಅದರಿಂದ ಆಹಾರದ ಸಮಸ್ಯೆ ಪ್ರಾರಂಭವಾಯಿತು. ಕುಟುಂಬಗಳು, ಸಂಬಂಧಗಳೆಲ್ಲ ಛಿದ್ರವಾದವು. ರೈತರು ಭೂಮಿ ಮತ್ತು ಬೆಳೆಯನ್ನು ಗೌರವಿಸಬೇಕು ಅನ್ನುವ ಸಂದೇಶ ಈ ನೃತ್ಯ-ನಾಟಕದಲ್ಲಿತ್ತು.

**ಹೊ** : ನಿಮಗೆ ಶಂಭು ಮಹಾರಾಜರಂತಹ ಹಿರಿಯ ಗುರುಗಳ ಮಾರ್ಗದರ್ಶ[...] ದೊರೆತಿದ್ದು ಹೇಗೆ?

**ಮಾ** : ಜೈಪುರದ ಪ್ರಸಿದ್ಧವಾದ 'ಮಹಾರಾಣಿ ಗಾಯತ್ರಿ ದೇವಿ ಶಾಲೆ'ಯಲ್ಲಿ ನನ[...] ಇಂಗ್ಲಿಷ್ ಶಿಕ್ಷಕಿ ಕೆಲಸ ೧೯೫೧ರಲ್ಲಿ ಸಿಕ್ಕು. ಈ ಅವಕಾಶವನ್ನು ಉಪಯೋಗಿಸಿಕೊಂ[...] ಜೈಪುರದಲ್ಲಿ ಕಥಕ್ ಕಲೀಬೇಕು ಅನ್ನುವುದು ನನ್ನ ಉದ್ದೇಶವಾಗಿತ್ತು. ಅಷ್ಟು ಹೊತ್ತಿ[...] ದೊಡ್ಡ ಗುರುಗಳೆಲ್ಲ ಜೈಪುರವನ್ನು ಬಿಟ್ಟು ಹೊರಟುಹೋಗಿದ್ದರಿಂದ ಒಂದೆರ[...] ವರ್ಷ ಬ್ರಹ್ಮಾನಂದ ಗೋಸ್ವಾಮಿ ಸಂಸ್ಥೆಯಲ್ಲಿ ಕಥಕ್ ಕಲಿತೆ. ದೆಹಲಿಯಲ್ಲಿ ಕಥ[...] ಕಲಿಯುವುದಕ್ಕೆ ವಿದ್ಯಾರ್ಥಿ ವೇತನ ಕೊಡ್ತಾರೆ ಅಂತ ನನ್ನ ಸೋದರ ಸಂಬಂಧಿಯಿಂ[...] ತಿಳಿದು ಅರ್ಜಿ ಹಾಕಿದೆ. ಇಂಗ್ಲಿಷ್ ಶಿಕ್ಷಕ ವೃತ್ತಿ ಸ್ವಲ್ಪ ಬೇಸರವಾಗಿತ್ತು. ಶ್ರೀಲಂಕಾದಲ್ಲಿ[...] ನನ್ನ ಸೋದರ ನನ್ನನ್ನು ಆಹ್ವಾನಿಸಿದ್ದರಿಂದ ಅಲ್ಲಿಗೆ ಹೋಗಿ ಚಿತ್ರಸೇನಾ ಅವರಿಂ[...] ಕ್ಯಾಂಡಿಯನ್ ನೃತ್ಯವನ್ನು ಕಲಿತೆ. ಸಂದರ್ಶನಕ್ಕೆ ಕೇವಲ ಮೂರು ದಿನ ಇದೆ ಎನ್ನುವಾ[...] ನನಗೆ ದೆಹಲಿಯಿಂದ ಕರೆ ಬಂದಿದೆ ಅನ್ನುವ ವಿಷಯ ಗೊತ್ತಾಯ್ತು. ಕೊನೆಗೆ ಅಣ್ಣ ನ[...] ತೊಳಲಾಟ ನೋಡಿ ವಿಮಾನದಲ್ಲಿ ನನ್ನನ್ನು ಕಳಿಸಿದರು. ದಕ್ಷಿಣ ಭಾರತದಿಂ[...] ಬಂದವಳು ನಾನೊಬ್ಬಳೇ! ಉಳಿದವರೆಲ್ಲ ಗುರುಗಳು, ತಬಲಾ ಸಮೇತ ಒಳ್ಳೇ ಸಿದ್ಧ[...] ಮಾಡಿಕೊಂಡು ಬಂದಿದ್ದರು. ನನಗೆ ಆತಂಕವಾಗಿತ್ತು. ಹಲವಾರು ಬ್ಯಾಲೆಗಳಿಗೆ ನೃ[...] ಸಂಯೋಜನೆ ನಾನು ಮಾಡಿದ್ದು ಸಂದರ್ಶಕರ ಗಮನ ಸೆಳೆಯಿತು. ನೃತ್ಯವ[...] ಚೆನ್ನಾಗೇ ಮಾಡಿ ತೋರಿಸಿದೆ. ಹೀಗೆ ನನಗೆ ವಿದ್ಯಾರ್ಥಿ ವೇತನ ಸಿಕ್ಕಿ ಶಂಭು ಮಹಾರಾಜರ ಶಿಷ್ಯಳಾದೆ.

**ಹೊ** : ಅಂಥ ಗುರುವನ್ನು ಪಡೆದ ಪ್ರಸಂಗ ನೆನಪಿದೆಯಾ?

**ಮಾ** : ಸಂಗೀತ ನಾಟಕ ಅಕಾಡೆಮಿ ಕಛೇರಿಯಲ್ಲಿಯೇ ನಾನು ನಮ್ಮ ಗುರುಗಳ[...] ಭೇಟಿಯಾಗಿದ್ದು. ಬಂದವರೆ 'ಯಾರು ಆ ಹುಡುಗಿ? ಅವಳಿಗೋಸ್ಕರ ನಾನು ಲಕ[...] ಬಿಟ್ಟು ಈ ಊರಿಗೆ ಬರಬೇಕಾಯ್ತು?' ಅಂದರು. ನಾನು ನಮಸ್ಕಾರ ಅಂದೆ. ಕಾಲು ಮು[...] ನಮಸ್ಕಾರ ಮಾಡೋದಕ್ಕೆ ಹೊಳೆಯಲಿಲ್ಲ 'ನಾನೂ ಸಾವಿರಾರು ಮೈಲಿ ದೂರದಿಂದ ನಿ[...]



ಹೊಯ್ಸಳ ವೈಭವ



ತ್ರಿರ ಕಲಿಯೋದಕ್ಕೆ ಬಂದಿದ್ದೇನೆ' ಅಂದುಬಿಟ್ಟೆ. ಇದು ಪ್ರೊಫೆಸರ್ ಮತ್ತು ಅವರ ವಿದ್ಯಾರ್ಥಿ ನಡುವಣ ಸಂಬಂಧ ಅಲ್ಲ ಂತ ಅವರು ಸ್ವಲ್ಪ ಖಾರವಾಗಿ ಹೇಳಿದರು. ಆಗ ನಾನು ಅವರ ಕಾಲು ಮುಟ್ಟಿ ನಮಸ್ಕಾರ ಮಾಡಿದ್ದು.

ಒಂದು ಸಲ ಪಾಠ ಹೇಳಿಕೊಡುವಾಗ ತಲೆಯ ಮೇಲಿನ ಮುಸುಕು (ಗೂಂಗಟ್) ಹೇಗೆ ತೆಗೆಯಬೇಕು ನ್ನೋದನ್ನು ಹೇಳಿಕೊಡ್ತಿದ್ರು. ನನಗೆ ವೇಗವಾಗಿ ತೆಗೆಯೋದಕ್ಕೆ ಬರಲಿಲ್ಲ. 'ದಕ್ಷಿಣ್ ಕಿ ಬಡ್‌ತಮೀಜ್ ಔರತೇ ನ್‌ಕೋ ಗೂಂಗಟ್ ಲೇನಾ ನಹೀ ಆತಾ' ಅಂದರು. ನನಗೆ ಬಡ್‌ತಮೀಜ್ (ನಡವಳಿಕೆ ಗೊತ್ತಿಲ್ಲದವರು) ಅಂದರೆ ಂಬ ಕೆಟ್ಟ ಪದ ಅನ್ನಿಸಿತು. ಹಿಂದಿ ಬೇರೆ ಸರಿಯಾಗಿ ಬರ್‍ತಿರ್‍ಲಿಲ್ಲ. ನಾನೂ ಸಿಟ್ಟಿನಿಂದ ನಾಗಪುರದ ದಕ್ಷಿಣದವರಿಗೆ ಲೆಗೆ ಮುಸುಕು ಹಾಕಿಕೊಳ್ಳೋದು ಗೊತ್ತಿಲ್ಲದೇ ಇರಬಹುದು; ಆದರೆ ನಾಗಪುರದ ಉತ್ತರದವರು ತಲೆಗೆ ಚೆನ್ನಾಗಿ ಸುಸುಕು ಹಾಕಿಕೊಂಡು ಸೊಂಟ ಪ್ರದರ್ಶನ ಮಾಡ್ತಾರೆ ಅಂದುಬಿಟ್ಟಿದ್ದೆ, ಮರುದಿನ ಎದುರುತ್ತರ ಕೊಟ್ಟಿದ್ದಕ್ಕೆ ಕ್ಷಮೆ ಳಿದೆ. ಅವರು ಗಂಭೀರವಾಗಿ ತೆಗೆದುಕೊಳ್ಳದೆ ತಮಾಷೆಯಾಗಿ ನಕ್ಕುಬಿಟ್ಟಿದ್ದರು.

**ಹೊ** : ಕಥಕ್ ವೈಶಿಷ್ಟ್ಯಗಳೇನು ?

**ಮಾ** : ಕಥೆ ಹೇಳುವವನೇ ಕಥಕ. ನೃತ್ಯ ಶೈಲಿಯಲ್ಲಿ ಕಥೆ ಹೇಳೋದು. ಹಿಂದೆ ದೇವಸ್ಥಾನಗಳಲ್ಲಿ ಪುರಾಣವನ್ನು ಳುವಾಗ ನೃತ್ಯದ ಮುದ್ರೆಗಳನ್ನು ಉಪಯೋಗಿಸ್ತಿದ್ರು. ಅಂಥವರ ಒಂದು ಪುಟ್ಟ ಗುಂಪು ಇತ್ತು. ಮೊಗಲರ ಆಕ್ರಮಣದ ಮಯದಲ್ಲಿ ಇವರೆಲ್ಲ ಭೂಗತರಾಗಿದ್ದರು. ಉದಾರ ಮನೋಭಾವದ ದೊರೆಗಳು ಬಂದಾಗ ತಂತ್ರ, ಪದಚಲನೆ ಲ್ಲವನ್ನು ಹಾಗೇ ಇಟ್ಟುಕೊಂಡು ಶೈಲಿಯಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸ ಮಾಡಿಕೊಂಡು ಪ್ರದರ್ಶನ ಮಾಡ್ತಿದ್ದರು. ಮೂಲ ದೇ. ಕೃಷ್ಣ, ರಾಧೆಯ ಮುದ್ರೆ ಕಥಕ್‌ನಲ್ಲಿದೆ ಅಂತ ನಮ್ಮ ಗುರುಗಳು ಹೇಳ್ತಿದ್ರು. ದೇವಸ್ಥಾನಗಳ ಮೇಲೆ ಆಕ್ರಮಣ ಡಿದಾಗ ಈ ಕಲಾವಿದರು ಎಲ್ಲೋ ಬಚ್ಚಿಟ್ಟುಕೊಂಡಿದ್ದರು. ಅಕಬರ್‌ನ ಸಮಯದ ತನಕ ಕಾದು ಹೊರಬಂದರು. ಜಹಾನ್, ಜಹಾಂಗೀರ್ ಅವರು ಸ್ವಲ್ಪ ಉದಾರ ಮನೋಭಾವದವರು. ಈ ಕಲಾವಿದರು 'ತತ್ಕಾರ್' ಮತ್ತು ಕ್ಕರ್'ನ ತೋರಿಸುತ್ತಿದ್ದರು. ಅದಕ್ಕೆ ಕಾರಣ ಇತ್ತು. ಆದರೆ ಜನರು ಕಥಕ್‌ನಲ್ಲಿ ಅಭಿನಯ ಇಲ್ಲ ಅಂದುಬಿಡ್ತಾರೆ. ಭಿನಯಕ್ಕೆ ತುಂಬಾ ಪ್ರಾಮುಖ್ಯ ಇದೆ. ತತ್ಕಾರ್, ಚಕ್ಕರ್‌ಗಳೆಲ್ಲ ಹೆಚ್ಚು ಚಪ್ಪಾಳೆಗಾಗಿ ಅಂತ ಗುರುಗಳು ಹೇಳ್ತಿದ್ರು.

**ಹೊ** : ನೀವು ಹಿಂದೆ ರೈತರ ಹಿತ ಕಾಯಲು ನೃತ್ಯ ರೂಪಿಸಿದ್ದಿರಿ. ಇವತ್ತು ನಮ್ಮಲ್ಲಿ 'ಫ್ಲೋರಿಕಲ್ಚರ್', ಕಾಂಟ್ರ್ಯಾಕ್ಟ್ ರ್ಮಿಂಗ್' ಮಾಡ್ತಿರೋದು ತಮ್ಮ ಗಮನಕ್ಕೆ ಬಂದಿದೆ. ಈ ಬಗ್ಗೆ ನಿಮ್ಮ ಅಭಿಪ್ರಾಯ ಏನು ?

**ಮಾ** : ಬಡ ಜನರು ಶ್ರೀಮಂತರಾದರೆ ತಪ್ಪೇನು, ಯಾಕೆ ಅವಕಾಶ ಕೊಡಬಾರದು ಎಂದು ಕೆಲವರು ಹೇಳ್ತಾರೆ. ನಮ್ಮ ಶದ ಕಾರ್ಮಿಕರು ಹೊರದೇಶಗಳಿಗೆ ಹೋಗಿ ಎಷ್ಟು ಕಷ್ಟ ಪಡ್ತಿದ್ದಾರೆ ಅನ್ನೋದನ್ನು ನನ್ನ ಶಿಷ್ಯನೊಬ್ಬ ಹೇಳ್ತಿದ್ದ. ಯಾರು ಪ್ಪಂದ ಮಾಡಿಕೊಂಡಿರ್‍ತಾರೋ ಅವರಿಗೆ ಲಾಭ, ಬಡಜನರಿಗಲ್ಲ. ಇದು ಬಂಡವಾಳಶಾಹಿ ಧೋರಣೆ.

**ಹೊ** : ನೃತ್ಯ ಕೂಡ ಒಂದು ತರಹ ಹಣದ ಮೇಲೆ ನಿಂತಿದೆಯಲ್ಲವಾ ?

**ಮಾ** : ಹೌದು. ಅದಕ್ಕೆ ಪೋಷಕರು ಬೇಕು. ಈಗ ನೃತ್ಯ ಗುರುಗಳು ವಾರಕ್ಕೆ ಮೂರು 'ಅರಂಗೇಟ್ರಮ್' ಂಗಪ್ರವೇಶ) ಮಾಡಿಸ್ತಿದ್ದಾರೆ! ದೇವದಾಸಿಯರಿಗೆ ಕಲಾ ಪೋಷಕರ ಅನಿವಾರ್ಯತೆಯಿಂದ ಅರಂಗೇಟ್ರಮ್ ಕಾಗಿತ್ತು. ಈಗಿನವರಿಗೆ ಅದರ ಅವಶ್ಯಕತೇನೇ ಇಲ್ಲ. ನಾನು ಸಂಗೀತ-ನೃತ್ಯ ಅಕಾಡೆಮಿ ಅಧ್ಯಕ್ಷೆಯಾಗಿದ್ದಾಗ ೀಷಕರನ್ನು ಕರೆಸಿ ಹೇಳಿದ್ದೆ. ಅವರು ಗುರುಗಳ ಮೇಲೆ ಹೇಳ್ತಾರೆ. ಗುರುಗಳು ಶಿಷ್ಯರ ಮೇಲೆ ಹೇಳ್ತಾರೆ. ಈ ಬಗ್ಗೆ ಖನವನ್ನು ಸಹ ಬರೆದಿದ್ದೇನೆ.

**ಹೊ** : ನೀವು ಭರತನಾಟ್ಯ ನಂಗಿಷ್ಟ ಇರಲಿಲ್ಲ ಅಂದ್ರಲ್ಲ ಯಾಕೆ ?

**ಮಾ** : ನನಗೆ ಅದರಲ್ಲಿ ಸ್ವಲ್ಪ ಮಡಿವಂತಿಕೆಯಿದೆ ಅನ್ನಿಸಿತ್ತು. ಮುದ್ರೆಗಳಿಗೆ ಜಾಸ್ತಿ ಪ್ರಾಧಾನ್ಯ. ಸ್ವಾಂಟೇನಿಟಿಗೆ ವಕಾಶ ಕಡಿಮೆ. ಭರತನಾಟ್ಯದಲ್ಲಿ 'ವರ್ಣ' ಇಲ್ಲದೆ ಕಾರ್ಯಕ್ರಮ ಮಾಡೋದು ಕಷ್ಟ. ಎಲ್ಲಾ ಬಹಳ ಸ್ವರೂಪದಲ್ಲೇ, ಅದೇ ಕ್ರಮದಲ್ಲೇ ಆಗಬೇಕೆಂಬ ಆಗ್ರಹ ನನಗೆ ಹಿಡಿಸುವುದಿಲ್ಲ.

**ಹೊ** : ಪದ್ಮಾ ಸುಬ್ರಹ್ಮಣ್ಯ ಅವರು ಅದರ ಎಲ್ಲ ಆಯಾಮಗಳನ್ನು ಸಮರ್ಥವಾಗಿ ತೋರಿಸಿದ್ದಾರಲ್ವಾ ?

**ಮಾ** : ಅವರದ್ದು ಭರತನಾಟ್ಯ ಶೈಲಿಯಾದರೂ ಕಥಕ್, ಮಣಿಪುರಿ ಎಲ್ಲ ಬರುತ್ತೆ. ಅವರೇ ತಮ್ಮದು 'ಭಾರತ ಶ್ಯಂ' ಅಂತಾರೆ.

**ಹೊ** : ನೀವು ಜಾನಪದದ ವಸ್ತುಗಳನ್ನು ತಗೊಂಡು ಸಂಯೋಜನೆ ಮಾಡಿದ್ದೀರಿ ಅಲ್ವಾ ? ಅದನ್ನು ಕಥಕ್‌ನಲ್ಲಿ ಹೇಗೆ ನಿಭಾಯಿಸ್ತೀರಾ ?

**ಮಾ** : ಜಾನಪದ ಲೋಕದ ಡಾ॥ ಎಚ್. ಎಲ್. ನಾಗೇಗೌಡರಿಗಾಗಿ ನಾನು 'ಅರ್ಜುನ್ ಜೋಗಿ' ಮಾಡಿದ್ದೆ. ಅವರೇ ಸಾಹಿತ್ಯ ಕೊಟ್ಟಿದ್ದರು. ನಾನು ಅದರಲ್ಲಿ ಯಕ್ಷಗಾನ, ಮಣಿಪುರಿ, ಒಡಿಸ್ಸಿ ಎಲ್ಲಾ ಸೇರಿಸಿದ್ದೆ. ಅರ್ಜುನ ತೀರ್ಥಯಾತ್ರೆಗೆ ಹೋಗ್ತಾನಲ್ಲಾ, ಮಣಿಪುರಕ್ಕೆ ಹೋದಾಗ ಮಣಿಪುರಿ, ಆಂಧ್ರಕ್ಕೆ ಹೋದಾಗ ಒಡಿಸ್ಸಿ ... ಹೀಗೆ. ನಾನು ಭರತನಾಟ್ಯವನ್ನಾಗಲಿ, ಯಕ್ಷಗಾನವನ್ನಾಗಲಿ ತೋರಿಸುವಾಗ ಆ ಪ್ರಕಾರವನ್ನು ಹೇಗೆ ತೋರಿಸಬೇಕೋ ಹಾಗೇ ತೋರಿಸಿದ್ದೀನಿ. ಯಕ್ಷಗಾನ ಶೈಲಿಯಲ್ಲಿ 'ಹೊಯ್ಸಳ ವೈಭವ' ಅಂತ ಮಾಡಿದ್ದೆ. ವಿಷ್ಣುವರ್ಧನನ ಒಡ್ಡೋಲಗವೇ ಮೊದಲ ದೃಶ್ಯ. ಅಲ್ಲಿರುವ ಶಿಲ್ಪ ಕಲೆಯನ್ನು ಅಧ್ಯಯನ ಮಾಡಿಯೇ ಕಿರೀಟ ಮುಂತಾದವನ್ನೆಲ್ಲ ಮಾಡಿಸಿದ್ದೆವು. 'ಹೊಯ್ಸಳ ವೈಭವ' ಮಾಡಿದಾಗ ಭರತನಾಟ್ಯದ ಭಾಗವನ್ನು ಹೇಳಿಕೊಡುವುದಕ್ಕೆ ಮೈಸೂರು ಶೈಲಿ ಭರತನಾಟ್ಯ ಗುರುಗಳಾದ ರಾಧಾಕೃಷ್ಣ ಅವರನ್ನೇ ದೆಹಲಿಗೆ ಕರೆಸಿದ್ದೆ. ಹಾಗಾಗಿ ಕಷ್ಟವಾಗಲಿಲ್ಲ.

**ಹೊ** : ಅಮೀರ್ ಖುಸ್ರು ಬರೆದದ್ದನ್ನು ನೃತ್ಯಕ್ಕೆ ಅಳವಡಿಸಿದ್ದೀರಿ ಅಲ್ವಾ ?

**ಮಾ** : ಅಮೀರ್ ಖುಸ್ರು ಅವರ ವಂಶಜರು ಹುಟ್ಟಿದ್ದು ಸೋವಿಯತ್ ಯೂನಿಯನ್‌ನ ತಜಕಿಸ್ತಾನ್‌ದಲ್ಲಿ. ಜಲಾಲುದ್ದೀನ್ ಆಸ್ಥಾನದಲ್ಲಿ ತಜಕಿಸ್ತಾನ್ ನೃತ್ಯ ಕಲಾವಿದರು ಅಭಿನಯಿಸುತ್ತಿದ್ದರು. ಅಲ್ಲಿ 'ನುಸ್ರತ್' ಅನ್ನುವ ಹೆಣ್ಣು ಮಗಳು ಅಮೀರ್ ಖುಸ್ರು ಕವಿತೆಯನ್ನು ತಗೊಂಡು ನೃತ್ಯ ಮಾಡ್ತಿದ್ದಳು. ಅವಳದ್ದು ತಜಕಿಸ್ತಾನ್ ಜಾನಪದ ನೃತ್ಯ ಶೈಲಿ. ಅದರಿಂದ ಆಕರ್ಷಿತಳಾಗಿ ಅಮೀರ್ ಖುಸ್ರು ಅವರನ್ನು ರಂಗಕ್ಕೆ ತಂದೆ.

**ಹೊ** : ಕಥಕ್‌ಗೆ 'ಸಾಂಪ್ರದಾಯಿಕ ವಿಮರ್ಶಕರು' ಇಲ್ವಾ ?

**ಮಾ :** ಇಲ್ಲ ಬಿ. ವಿ. ಕೆ. ಶಾಸ್ತ್ರಿ ಇರುವವರೆಗೆ ಇತ್ತು. ಈಗ ಯಾರೂ ಇಲ್ಲ.

**ಹೊ :** ಇದು ಜಾಹಿರಾತುಗಳ ಯುಗ. ನೃತ್ಯಕ್ಕೆ ಸತ್ವಕ್ಕಿಂತ ಹೆಚ್ಚಾಗಿ ಪ್ರಚಾರ ಬೇಕಾಗಿದೆ. ನಿಮ್ಮ ಅಭಿಪ್ರಾಯ ಏನು ?

**ಮಾ :** ದಿಸ್ ಈಸ್ ದಿ ಏಜ್ ಆಫ್ ಲೌಡ್ ಸ್ಪೀಕರ್ಸ್. ಪ್ರಚಾರ ತಕ್ಕಮಟ್ಟಿಗೆ ಬೇಕೇ ಬೇಕು. ಕಲಾವಿದನಿಗೂ ಜನಪ್ರಿಯವಾಗಬೇಕು ಅನ್ನುವ ಆಸೆ ಇರುತ್ತಲ್ವಾ ? ಹಿಂದೆ ಮಹಾರಾಜರ ಆಸ್ಥಾನದಲ್ಲಿ ಎಂತೆಂಥ ದೊಡ್ಡ ಕಲಾವಿದರೆಲ್ಲ ಇದ್ದರು. ರಾಜ ಅವರಿಗೆ ಹೊರಗಡೆ ಕಾರ್ಯಕ್ರಮ ಕೊಡೋದಕ್ಕೆ ಅವಕಾಶ ಕೊಡ್ತಾನೇ ಇರಲಿಲ್ಲ. ದೊರೆಸ್ವಾಮಿ ಅಯ್ಯಂಗಾರ್ ಅವರು 'ಹೊರಗೆ ಬಂದಿದ್ದರಿಂದಲೇ ನಾನು ಜನಪ್ರಿಯವಾದೆ' ಅಂತಿದ್ರು. ತಿಟ್ಟೆ ಕೃಷ್ಣಯ್ಯಂಗಾರ್ ಅಂತಹ ದೊಡ್ಡ ವಿದ್ವಾಂಸರಿಗೆ ೯೨ನೇ ವಯಸ್ಸಿಗೆ ಪ್ರಶಸ್ತಿ ಬಂತು. ಅದೂ ನಾವೆಲ್ಲ ಗಲಾಟೆ ಮಾಡಿದ ಮೇಲೆ. ಇಲ್ಲದಿದ್ರೆ ವೆಂಕಟಲಕ್ಷ್ಮಮ್ಮನಂತಹ ಹಿರಿಯ ಕಲಾವಿದರು ವೃದ್ಧಾಪ್ಯದಲ್ಲಿ ಯಾಕೆ ಹೊರಗೆ ಬರಬೇಕಿತ್ತು ? ಕೆಲವರು ಊಟ, ಬಟ್ಟೆ, ವಸತಿ ಸಿಗುತ್ತೆ ಅಂತ ಸುಮ್ಮನಿದ್ದರು. ರಾಜರ ಕಾಲ ಮುಗಿದ ಮೇಲೆ ಬಹಳಷ್ಟು ಕಲಾವಿದರು ಹೊರಗೆ ಬಂದಿದ್ದು. ಹೀಗಾಗಿ ಮೈಸೂರು ಶೈಲಿ ನೃತ್ಯದ ಬಗ್ಗೆ ಅಷ್ಟು ಪ್ರಚಾರ ಸಿಗಲೇ ಇಲ್ಲ. ಅರಮನೆಯಲ್ಲಿ ಮದುವೆ, ಅರಿಶಿನ-ಕುಂಕುಮದ ಸಮಯದಲ್ಲಿ ನೃತ್ಯ ಮಾಡ್ತಿದ್ದೆವು ಅಂತ ಜೇಜಮ್ಮ ಅವರೇ ಹೇಳ್ತಿದ್ದರು. ತಂಜಾವೂರು ದೊರೆಗಳು ಹೀಗೆ ಕಲಾವಿದವರನ್ನು ಹಿಡಿದಿಟ್ಟಿರಲಿಲ್ಲ. ಅದಕ್ಕೇ ಅವರಿಗೆ ಬೇಕಾದಷ್ಟು ಪ್ರಚಾರ ಸಿಕ್ಕಿತು.

**ಹೊ :** ಸಾಮಾಜಿಕ ವಸ್ತುಗಳನ್ನು ಅಳವಡಿಸಿಕೊಂಡು ಯಾವ ಪ್ರಯೋಗ ಮಾಡಿದ್ದೀರಿ ?

**ಮಾ :** ನೃತ್ಯದಲ್ಲಿ 'ನಾಟ್ಯಧರ್ಮಿ' ಮತ್ತು 'ಲೋಕಧರ್ಮಿ' ಅಂತ ಇದೆ. ಲೋಕಧರ್ಮಿಯಲ್ಲಿ ಕಟು ವಾಸ್ತವ ಲೋಕವನ್ನು ತೋರಿಸುವುದಕ್ಕೆ ಅವಕಾಶ ಇದೆ. ನಾನು 'ವಧು ದಹನ್' ಅಂತ ವರದಕ್ಷಿಣೆಯ ಬಗ್ಗೆ ಮಾಡಿಸಿದ್ದೆ. ನಾವೀಗ ನಮ್ಮ ಶಾಲೆಯಲ್ಲಿ ಪ್ರತೀ ವಿದ್ಯಾರ್ಥಿಗೂ ಒಂದೊಂದು 'ಕೇಸ್ ಸ್ಟಡಿ' ಮಾಡೋದಕ್ಕೆ ಕೊಡ್ತೀವಿ. ಇತ್ತೀಚೆಗೆ ನಮ್ಮ ವಿದ್ಯಾರ್ಥಿಗಳು 'ಸಲಿಂಗಕಾಮದ' ಬಗ್ಗೆಯೂ ನೃತ್ಯ-ನಾಟಕ ಮಾಡಿದ್ರು. ಒಬ್ಬಳು ಹುಡುಗಿಗೆ ಪೋಷಕರು ಬಲವಂತವಾಗಿ ಮದು ಮಾಡ್ತಾರೆ. ಸ್ವಲ್ಪ ದಿನಗಳಲ್ಲಿ ಅವಳ ಗಂಡನಿಗೆ ಅವಳು ಇನ್ನೊಂ ಹುಡುಗಿಯೊಂದಿಗೆ ಅಗತ್ಯಕ್ಕಿಂತ ಹೆಚ್ಚು ಒಡನಾಟದಲ್ಲಿರೋದು ಅನುಮಾ ಹುಟ್ಟಿಸುತ್ತೆ. ಈ ರೀತಿ ಒಂದು ಮಾನಸಿಕ ಸಂಘರ್ಷ ನಡೀತಿರುವಾಗ ಸರ್ವೋ ನ್ಯಾಯಾಲಯದ ತೀರ್ಪು ಹೊರಬೀಳುತ್ತೆ. ಆಗ ಆ ಹೆಣ್ಣು ಮಗಳು ತಾನು ಬಯಸಿ ಹಾಗೆ ಬದುಕಬಹುದು ಅನ್ನುವ ಭರವಸೆಯನ್ನು ತಾಳ್ತಾಳೆ.

ಈಗ 'ಮೌಲ್ಯಯುತ ಶಿಕ್ಷಣ'ದ ಬಗ್ಗೆ ಚರ್ಚೆ ನಡೀತಾ ಇದೆ. ನಾವು ಶಾಲಾ ಕಾಲೇಜಿನ ಹುಡುಗರಿಗೆ ತೋರಿಸಬೇಕು ಅಂತ 'ಸಾರೇ ಜಹಾಂ ಸೇ' ಮಾಡಿದ್ದೀವಿ ರಾಕೇಶ್ ಶರ್ಮ ಬಾಹ್ಯಾಕಾಶದಿಂದ ಶ್ರೀಮತಿ ಇಂದಿರಾ ಗಾಂಧಿಯವರೊಂದಿ ಮಾತನಾಡಿದ್ದನ್ನು ಹಾಗೇ ಉಪಯೋಗಿಸಿಕೊಂಡಿದ್ದೇವೆ. ರಾಕೇಶ್ ಶರ್ಮ ಅವ ಮಗಳು ನನ್ನ ಮಗಳಿಗೆ ಪರಿಚಯವಿದ್ದುದರಿಂದ ಅನುಮತಿ ಪಡೆದುಕೊಂಡೆ ಯಾವುದೇ ಆಕ್ರಮಣಕ್ಕೆ ಬಗ್ಗದ ಹಿಮಾಲಯದ ಬೆಟ್ಟಗಳ ತರಹ ಹುಡುಗರು ಮ ಹುಡುಗಿಯರು ನಿಂತಿರ್ತಾರೆ. ನಮ್ಮ ನದಿಗಳು ಇತ್ತೀಚೆಗೆ ವಿವಾದವನ್ನು ಹುಟ್ಟಿಸುತ್ತಿ ಆದರೆ ನಾವು ನದಿಯನ್ನು ಸಂತೋಷದಿಂದ ವಿಹರಿಸುವ ಸ್ಥಳ ಅನ್ನುವ ತೋರಿಸಿದ್ದೀವಿ. ಗುಜರಾತ್‌ನ ಹಿಂಸೆಯ ಹಿನ್ನೆಲೆಯಲ್ಲಿ ಸರ್ವ ಧರ್ಮ ಸಮನ್ವಯ ಬಗ್ಗೆ ಹೇಳಿದ್ದೀವಿ.

**ಹೊ :** ಯಾವುದಾದರೂ ಕನ್ನಡ ಸಾಹಿತ್ಯ ಕೃತಿಯನ್ನು ತೆಗೆದುಕೊಂ ಸಂಯೋಜನೆ ಮಾಡಿದ ಅನುಭವವನ್ನು ಹೇಳಿ.

**ಮಾ :** ಅ.ನ.ಕೃ. ಅವರ 'ಜಗಜ್ಯೋತಿ ಬಸವೇಶ್ವರ' ಮಾಡಿದ್ದೇನೆ ಮ ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ'ನ ಕೆಲವು ಭಾಗಗಳು. ಹಿಂದಿ ಸರೋಜಿನಿ ಮಹಿಷಿ ಅವರು ಅನುವಾದ ಮಾಡಿದ್ದರು. ಮೈಸೂರಿನಲ್ಲಿ ಕುವೆಂ ಅವರ ಸಮ್ಮುಖದಲ್ಲಿಯೇ ಕನ್ನಡದಲ್ಲಿ ಮಾಡಿದ್ದೆವು. ಗುಬ್ಬಚ್ಚಿ ತನ್ನ ಮರಿಗಳಿಗೆ ಗುಟು ನೀಡುವುದನ್ನು ನೋಡಿ ದಶರಥ ತನಗೆ ಮಕ್ಕಳ ಸಂತೋಷವಿಲ್ಲವೆಂದು ನೊಂ ಕೊಳ್ಳುವ ಭಾಗ. ಮಮತೆಯ ಸುಳಿ ಮಂಥರೆ, ಚಂದ್ರನಖಿಯ ಪ್ರಸಂಗ ಮತ್ತು ಸೀ

ಯುಂವರ... ಎಲ್ಲ ೪೫ ನಿಮಿಷದಲ್ಲಿ! ಆ ಗುಬ್ಬಚ್ಚಿ ರಿಗಳಿಗೆ ಗುಟುಕು ನೀಡುವ ಸನ್ನಿವೇಶ ಕುವೆಂಪು ವರಿಗೆ ತುಂಬಾ ಇಷ್ಟವಾಗಿತ್ತು.

**ಹೊ :** ನೀವು ಕಲಿತಿದ್ದಕ್ಕೂ ಮತ್ತು ನಿಮ್ಮ ಶಿಷ್ಯರಿಗೆ ವು ನೀಡುತ್ತಿರುವ ಶಿಕ್ಷಣಕ್ಕೂ ವ್ಯತ್ಯಾಸ ಏನು ?

**ಮಾ :** ನಾನು ರಷ್ಯದಲ್ಲಿ ಇದ್ದಾಗ ಕಲಿತಿದ್ದು ಎಂದರೆ ಯಾವುದನ್ನೂ ನಾವು ನಕಲು ಮಾಡ ರದು ಎಂದು. ಅಮೆರಿಕನ್ನರು, ಯುರೋಪಿಯನ್ನರು ಲು ಮಾಡುವುದನ್ನು ಇಷ್ಟಪಡ್ತಾರೆ. ಆದರೆ ಷ್ಯನ್ನರಿಗೆ ಪ್ರತಿಯೊಬ್ಬರಲ್ಲೂ ಇರುವ ಸತ್ವವನ್ನು ರ ತೆಗೆಯುವುದೇ ನಿಜವಾದ ಕಲಿಕೆ. ವಿದ್ಯಾರ್ಥಿ ಗೆ ಅಂತಹ ವಾತಾವರಣವನ್ನು ಮೂಡಿಸುವುದಕ್ಕೆ ನು ಪ್ರಯತ್ನಪಡ್ತೀನಿ.

**ಹೊ :** ರಾಜ್ಯದಲ್ಲಿ ಸಾಂಸ್ಕೃತಿಕ ಉತ್ಸವಗಳು ನಡೀತಿವೆ. ಪಿ ಉತ್ಸವ, ಹೊಯ್ಸಳ ಉತ್ಸವ ಇತ್ಯಾದಿ... ಇದರ ವಶ್ಯಕತೆ ಎಷ್ಟರಮಟ್ಟಿಗಿದೆ ?

**ಮಾ :** ಉತ್ಸವಗಳು ಇರಬೇಕು. ಸಂಗೀತ-ನೃತ್ಯ ಾಡೆಮಿ ಅಧ್ಯಕ್ಷೆಯಾಗಿದ್ದಾಗ ನಾನೇ ಪಟ್ಟದಕಲ್ಲಿನಲ್ಲಿ ತ್ಸವ ಶುರು ಮಾಡಿದ್ದು. ಈ ಉತ್ಸವಗಳು ನಮಗೂ ದು ಬಗೆಯಲ್ಲಿ ಶಿಕ್ಷಣ ನೀಡುತ್ತವೆ. ಅಲ್ಲಿನ ಕಲೆಯ ಬಗ್ಗೆ ತಿಳಿದುಕೊಳ್ಳಬಹುದು. ನಾನು ಮತ್ತು ಮಲಾ ಸೇರಿ ಸ್ಥಳಗಳನ್ನು ಆಯ್ಕೆ ಮಾಡಿದ್ದೆವು. ಲ್ಲವನ್ನೂ ಬೆಂಗಳೂರಿನಲ್ಲಿಯೇ ಏರ್ಪಾಡು ಮಾಡಿ ಸರು ಬರೋದಿಲ್ಲ ಅಂತ ದೂರೋದರಲ್ಲಿ ಅರ್ಥವೇ ಲ್ಲ. ಹಳ್ಳಿಯ ಜನ ಅದೆಷ್ಟು ಉತ್ಸಾಹದಲ್ಲಿ ಅಲಂಕಾರ ಾಡಿಕೊಂಡು ಟ್ರ್ಯಾಕ್ಟರ್, ಎತ್ತಿನಬಂಡಿಗಳಲ್ಲಿ ಬರ್ತಾ ದ್ದರು, ಗೊತ್ತಾ. ಅದೊಂದು ಸಂಭ್ರಮ, ಅವರಿಗೆ ಕಲೆ ಉಣಿಸುವ ಜವಾಬ್ದಾರಿ ನಮ್ಮದು.

**ಹೊ :** ಅವರಿಗೆ ಕಲೆಯಲ್ಲಿ ಅಭಿರುಚಿ ಇದೆ ನ್ನಿಸುತ್ತಾ ?

**ಮಾ :** ಹೌದು. ಅದೇ ನಾನು ಹೇಳಹೊರಟಿದ್ದು. ಂದು ಸಲ ಸೋಮನಾಥ ಪುರದಲ್ಲಿ ಬಸವರಾಜ ಜಗುರು ಅವರ ಸಂಗೀತವನ್ನು ಮಧ್ಯಾಹ್ನದ ಮಯದಲ್ಲಿ ಇಟ್ಟಿದ್ದೆವು. ಅವರು ಈ ರಾಗಿ ಮುದ್ದೆ ತಿನ್ನುವವರ ಮುಂದೆ ಮಟ ಮಟ ಮಧ್ಯಾಹ್ನ ಹಾಡಬೇಕಲ್ಲ ಅಂತಿದ್ದರು. ನಾನು ಸಾರಂಗ ರಾಗವನ್ನು ನಿಮ್ಮ ಬಾಯಿಂದ ಕೇಳಬೇಕು, ಅದಕ್ಕಾಗಿ ಈ ಏರ್ಪಾಡು ಅಂತ ಹೇಳಿದೆ. ಆ ರಾಗವನ್ನು ಮಧ್ಯಾಹ್ನವೇ ಹಾಡೋದು. ಕಛೇರಿ ಶುರುವಾಯಿತು. ಏನು ಬಸವಣ್ಣನವರ ಒಂದು ವಚನ ಝಾಡಿಸಲಾ, ಅಥವಾ ದಾಸರದ್ದೋ ಅಂತ ರಾಜಗುರು ಅವರು ಜನರನ್ನು ಕೇಳಿದರು. ಜನರೆಲ್ಲ 'ಶಾಸ್ತ್ರೀಯ ಸಾರ್' ಎಂದು ಕೂಗಿದರು. ಕಛೇರಿ ಮುಗಿದ ಮೇಲೆ ರಾಜಗುರು ಅವರೇ 'ಮಾಯಾ ರಾವ್, ನಿಮಗೆ ನಿಜವಾಗ್ಲೂ ಒಂದು ಬಹುಮಾನ ಕೊಡಬೇಕು' ಅಂದರು. ಹಳ್ಳಿಯ ಜನರಿಗೆ ಪಟ್ಟಣದವರಿಗಿಂತ ಹೆಚ್ಚಿನ ಕಲಾಭಿರುಚಿ ಇದೆ. ಜವಾನ್‌ಗಳಿಗೂ ಹೀಗೆ ಕೆಟ್ಟ ಕೆಟ್ಟ ಕಾರ್ಯಕ್ರಮಗಳನ್ನು ತೋರಿಸಿ ಕಡೆಗಣಿಸುತ್ತಾರೆ. ನಟರಾಜ್ ಅವರು ಒಂದು ಸಲ ಜಮ್ಮುವಿಗೆ 'ಸೇನಾ ಸಿಬ್ಬಂದಿ'ಗೆ ಕಾರ್ಯಕ್ರಮ ರೂಪಿಸಿ ಕರೆದುಕೊಂಡು ಹೋಗಿದ್ದರು. ನಮ್ಮ ಜೊತೆ ಮೈಸೂರು ಅನಂತಸ್ವಾಮಿ, ಶ್ಯಾಮಲಾ ಜಾಗೀರ್‌ದಾರ್ ಸಹ ಇದ್ದರು. ಕರಗ, ಕಂಸಾಳೆ, ಯಕ್ಷಗಾನ ಎಲ್ಲ ಇತ್ತು. ಎರಡು ಗಂಟೆ ಕಾರ್ಯಕ್ರಮ ಕೊಟ್ಟಮೇಲೆ ಪರದೆ ಹಾಕೋದಕ್ಕೆ ಅವರು ಬಿಡಲೇ ಇಲ್ಲ. ಸಿನಿಮಾ ಹಾಡು ಕೇಳಿಸಿದ್ರಾಯ್ತು ಅಂತ ಸುಮ್ಮನೆ ಧೋರಣೆಯಿಂದ ಹೇಳಿಬಿಡ್ತಾರೆ. ನಿಜವಾಗಿ ಹೇಳಬೇಕು ಅಂದ್ರೆ ಹಳ್ಳಿಯವರು ಕಲೆಯ ಚೈತನ್ಯವನ್ನು ಹೃದಯದಲ್ಲಿ ತುಂಬಿಕೊಳ್ಳುತ್ತಾರೆ.

**ಹೊ :** ಸಿನಿಮಾದಲ್ಲಿ ಕೆಲಸ ಮಾಡಲು ನೀವು ಹೋಗಲಿಲ್ವಾ ?

**ಮಾ :** ನಮ್ಮ 'ಹೊಯ್ಸಳ ವೈಭವ'ವವನ್ನು ನೋಡಿದ ಮರುದಿನ ಗಿರೀಶ್ ಕಾರ್ನಾಡ್ ಅವರು ತಮ್ಮ ಸಾಕ್ಷ್ಯ ಚಿತ್ರಕ್ಕೆ ನೃತ್ಯ ಸಂಯೋಜನೆ ಮಾಡಿಕೊಡಲು ಕೇಳಿದ್ದರು. ಆದರೆ ಹಳ್ಳಿಯ ಪಾತ್ರಧಾರಿಗಳೇ ಬೇಕು ಎಂದುದರಿಂದ ಮಾಡಲಿಲ್ಲ. ಜೊತೆಗೆ ನನಗೆ ಸಿನಿಮಾದ ಬಗ್ಗೆ ಅಷ್ಟೇನು ಒಲವಿಲ್ಲ. ಶಂಭು ಹೆಗಡೆಯವರು ಹೇಳುತ್ತಿದ್ದ ಮಾತು ಈಗಲೂ ನಿಜ ಅನ್ನಿಸುತ್ತೆ. ಥಿಯೇಟರ್ ಅನುಭವದ



ಸಂತೋಷವೇ ಬೇರೆ. ನಮಗೆ ಪ್ರೇಕ್ಷಕರು ಸ್ಥಳದಲ್ಲಿಯೇ ಪ್ರತಿಕ್ರಿಯೆ ತೋರಿಸಿಬಿಡ್ತಾರೆ. ಯಾರೂ ಇಲ್ಲದ ಕ್ಯಾಮರ ಮುಂದೆ ಮಾಡೋದು, ಆಮೇಲೆ ಯಾರು ಪ್ರತಿಕ್ರಿಯೆ ತೋರಿಸಿದರೂ ಅಂತಾನು ಗೊತ್ತಾಗದೇ ಇರೋದು ಖುಷಿ ನೀಡುವುದಿಲ್ಲ.

* * *

ಅಪಾರ ಅನುಭವವಿರುವ ಶ್ರೀಮತಿ ಮಾಯಾ ರಾವ್ ಅವರೊಡನೆ ಎರಡು ಗಂಟೆಗೂ ಹೆಚ್ಚು ಕಾಲ ಕಳೆದು ಅವರೊಡನೆ ಹತ್ತಾರು ವಿಷಯಗಳನ್ನು ಕುರಿತು ಮಾತನಾಡಿದ್ದು ಒಂದು ಅಪೂರ್ವ ಸಂಗತಿ ಎನಿಸುತ್ತದೆ. ಕಡೆಯಲ್ಲಿ ಅವರೇ ಮಾಡಿದ ಟೀ ಸವಿರುಚಿ ಬೇರೆ. ನಡಿಗೆ-ನಾಟ್ಯ, ಕಥೆ-ಕಥಕ್, ಆಯ್ದು ಸವೆಸಿದ ತಮ್ಮ ಬದುಕಿನ ದಾರಿ... ಹೀಗೆ ತಮ್ಮ ಅನುಭವವನ್ನು ಸುದೀರ್ಘವಾಗಿ ಹಂಚಿಕೊಂಡ ಮಾಯಾ ರಾವ್ ಆದಾಗ ತಮ್ಮ ಪಾಲಿನ ನೃತ್ಯ ಮುಗಿಸಿ ರಂಗದ ಮರೆಯಲ್ಲಿ ತುಸು ನೆಮ್ಮದಿಯ ಉಸಿರು ಬಿಡುತ್ತ ವಿಶ್ರಾಂತಿ ಪಡೆಯುತ್ತಿರುವ ಕಲಾವಿದೆಯಂತೆ ಕಂಡರು. ಅವರ ಕಲೆ ಮತ್ತು ಬದುಕಿನ ಅನುಭವದ ನೆನಪುಗಳ ಸವಿಯ ಬೆಚ್ಚಗಿನ ಉಸಿರನ್ನು ಬೊಗಸೆಯಲ್ಲಿ ಹಿಡಿದು ಅವರ ಮನೆಯಿಂದ ಹೊರಬಂದೆವು.



ಸಂದರ್ಶನ ಲೇಖನ : ಎಂ. ಆರ್. ಕಮಲ
ನಂ. ೪೦೫, 'ಉಮಾಶಂಕರ', ೧ನೇ 'ಎನ್' ಬ್ಲಾಕ್
೧೯ನೇ 'ಜಿ' ಮುಖ್ಯರಸ್ತೆ, ರಾಜಾಜಿನಗರ
ಬೆಂಗಳೂರು - ೫೬೦ ೦೧೦



ಮನುಷ್ಯ ಬದುಕ ಬಯಸಿದರೆ
ಈ ಭೂಮಿಯ ಮೇಲೆಯೇ ಬದುಕಬೇಕು -
ಸ್ವರ್ಗ ಜೀವನದೆಲ್ಲ ಪ್ರಶ್ನೆಗಳ ಬದಿಗೊತ್ತಿ.
ಆತ್ಮಚೈತನ್ಯ ರೆಕ್ಕೆಗೆದರಿ ದೇವಲೋಕಕ್ಕೇರಿ
ಭೂಮಿಯನು ಮರೆಯದಂತಿರಲಿ.
ಸಾವಿಗೆ ಪಕ್ಕಾದ ನಾವು ಮರ್ತ್ಯರಲ್ಲವೆ ?
ನಮಗೆ ದಕ್ಕಿದ ಬದುಕಿನ ವ್ಯಾಪ್ತಿ ಕಿರಿದು;
ಅಷ್ಟರಲ್ಲೇ ಕಲಿಯಬೇಕಾದುದ ಕಲಿತು,
ಸುಖ ಪಡಬಹುದು ಬೇಕಾದಷ್ಟು.
ಹಾಗೆ ನೋಡಿದರೆ, ಮೂರು ತಲೆಮಾರು ಸಾಕಷ್ಟು ದೀರ್ಘಾವಧಿ -
ಮಾನವನ ಹುಚ್ಚು-ವಿವೇಕ ಎರಡೂ ತೂಗಿ ನೋಡುವುದಕ್ಕೆ.
ಹೀಗೊಬ್ಬ ಜಾಣ ನಿಡುಗಾಲ ಬಾಳಿದರೆ
ಮಾದರಿಗಳು, ನೀತಿ-ನಿಯತ್ತು , ರಾಜಕೀಯ ಬದಲಾವಣೆ -
ಎಲ್ಲದಕ್ಕೂ ಅವನು ಸಾಕ್ಷಿ.
ಮೂರು ತಲೆಮಾರುಗಳ ಏಳು-ಬೀಳುಗಳ ಕಂಡು
ತೃಪ್ತಿಯಲಿ ಮೇಲೆದ್ದು, 'ಚೆನ್ನಾಗಿತ್ತು ಪ್ರದರ್ಶನ' ಎಂದು
ಹೇಳುತ್ತಲೇ ಹೋಗಿಬಿಡಬಹುದು – ತೆರೆಯು ಬಿದ್ದಾಗ.

# ಭೂಮಿ-ಸಂಬಂಧ



ನಾವು ಮರ್ತ್ಯರು; ಮಣ್ಣಿನೊಡಹುಟ್ಟಿ, ಮಣ್ಣಿನೊಡಬಾಳಿದವರು.
ತಾತ್ಕಾಲಿಕ ಅತಿಥಿಗಳಾಗಿ
ಈ ಸುಂದರ ಭೂಮಿಗಿಳಿದು ಬಂದುದಕೆ,
ನಮ್ಮ ಸ್ಥಿತಿಗಿನಿತು ಮರುಗಬೇಕಿಲ್ಲ,
ಕತ್ತಲೆ ಗವಿಯಾಗಿದ್ದರೂ ಪರವಿಲ್ಲ, ಸುಧಾರಿಸಿ
ಉತ್ತಮಗೊಳಿಸಬಹುದು;
ಕೃತಘ್ನರಾಗುವದು ಮಾತ್ರ ಬೇಡ.
ನೆಲಮಾಳಿಗೆಯ ಬದಲು ಈ ಚೆಲುವಿನಿಳೆಯಲ್ಲಿ
ಶತಮಾನದುದ್ದಕೂ ಬಾಳಿ ಬದುಕಿದ್ದೇವೆ.
ಮಹತ್ವಾಕಾಂಕ್ಷೆ ಅತಿಯಾಗಿ ಒಮ್ಮೊಮ್ಮೆ
ನಮ್ಮ-ಉದಾರ ಭೂಮಿಯನು ಕಡೆಗಣಿಸುತ್ತೇವೆ.
ಆದರೂ ಈ ಭೂಮಾತೆ ಜೊತೆ ಭಾವ ಬಂಧುರತೆ
ನೈಜ ಪ್ರೀತಿಯನುಭೂತಿ ತಡೆದಿರಬೇಕು.

ಈ ದೇಹ-ಆತ್ಮದ ಹಂಗಾಮಿ ನೆಲೆಯ ಬಗೆಗೆ
ಆಧ್ಯಾತ್ಮಿಕ ಸಾಮರಸ್ಯ ದೃಷ್ಟಿ ನಮಗೆ ಬೇಕಲ್ಲವೆ ?

ಈ ವಿಶಾಲ ಐಹಿಕ ಬದುಕನಿಡಿಯಾಗಿ ತೆಗೆದಪ್ಪಿರುವ
ನಮ್ಮೊಳಗೆ ಒಂದು ಬಗೆ ಪಾಶವ ಸಂದೇಹವಾದ, ಹಾಗೆಯೇ
ಪ್ರಾಣಿ ಸಹಜ ನಂಬಿಕೆಯೂ ಬೇಕು.

ಏನೇ ಇರಲಿ, ಭೂಮಿ ಸತ್ಯ, ಸ್ವರ್ಗ ಮಿಥ್ಯ.
ವಾಸ್ತವದ ಭೂಮಿ, ಕಾಲ್ಪನಿಕ ಸ್ವರ್ಗದ ನಡುವೆ
ಮನುಷ್ಯ ಹುಟ್ಟಿಬಂದಿಹನಲ್ಲ -
ಎಂಥಾ ಸುದೈವಿ !

**ಚೆನ್ನವೀರ ಕಣವಿ**
'ಚೆಂಬೆಳಕು', ಕಲ್ಯಾಣನಗರ, ಧಾರವಾಡ - ೫೮೦ ೦೦೭














**ಪುಸ್ತಕ ಪ್ರಕಾಶನ**

91, 9ನೇ ಮುಖ್ಯರಸ್ತೆ

ಸರಸ್ವತಿಪುರಂ

ಮೈಸೂರು - 570 009

ಫೋನ್ : 0821-2545774






ಅಂಚೆ ಮೂಲಕ ತರಿಸಿಕೊಳ್ಳುವವರಿಗೆ :

**ಪುಸ್ತಕ ಪ್ರಕಾಶನ**

ಬುಕ್‌ಪೋಸ್ಟ್ ಸರ್ವೀಸ್

ಪಿ. ಬಿ. ನಂ. 58, ಮೂಡಿಗೆರೆ

ಚಿಕ್ಕಮಗಳೂರು ಜಿಲ್ಲೆ-577132

ಫೋನ್ : 08263-228353, 240202

ಮೊಬೈಲ್ : 94482 03730

e-mail : praghu2@sancharnet.in














ಪುಸ್ತಕ ಬೆಲೆ ಪಟ್ಟಿ - 2009*

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ :**

| | |
|---|---|
| ಕಿರಗೂರಿನ ಗಯ್ಯಾಳಿಗಳು | 69.00 |
| ಕರ್ವಾಲೊ | 81.00 |
| ಚಿದಂಬರ ರಹಸ್ಯ | 138.00 |
| ಸಹಜ ಕೃಷಿ | 51.00 |
| ಪರಿಸರದ ಕತೆ | 78.00 |
| ಮಿಸ್ಸಿಂಗ್ ಲಿಂಕ್ | 72.00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 87.00 |
| ಜುಗಾರಿ ಕ್ರಾಸ್ | 138.00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 57.00 |
| ಫ್ಲೈಯಿಂಗ್ ಸಾಸರ್ಸ್ (1) | 63.00 |
| ಫ್ಲೈಯಿಂಗ್ ಸಾಸರ್ಸ್ (2) | 63.00 |
| ಕಾಡಿನ ಕತೆಗಳು 1, 2, 3, 4 ಪ್ರತಿಯೊಂದೂ | 57.00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | 80.00 |
| ಕನ್ನಡನಾಡಿನ ಹಕ್ಕಿಗಳು (1) - ಮಿಂಚುಳ್ಳಿ | 69.00 |
| (2) - ಹೆಜ್ಜೆ ಮೂಡದ ಹಾದಿ | 69.00 |
| ಹಕ್ಕಿ-ಪುಕ್ಕ | 300.00 |
| ಅಣ್ಣನ ನೆನಪುಗಳು | 150.00 |
| ಹುಲಿಯೂರಿನ ಸರಹದ್ದು | 75.00 |
| ಅಬಚೂರಿನ ಪೋಸ್ಟಾಫೀಸು | 72.00 |
| ಮಿಲನಿಯಮ್ (1) - ಹುಡುಕಾಟ | 57.00 |
| ಮಿಲನಿಯಮ್ (2) - ಜೀವನ ಸಂಗ್ರಾಮ | 63.00 |
| ಮಿಲನಿಯಮ್ (3) - ಪೆಸಿಫಿಕ್ ದ್ವೀಪಗಳು | 63.00 |
| ಮಿಲನಿಯಮ್ (4) - ಚಂದ್ರನ ಚೂರು | 57.00 |
| ಮಿಲನಿಯಮ್ (5) - ನೆರೆಹೊರೆಯ ಗೆಳೆಯರು | 57.00 |
| ಮಿಲನಿಯಮ್ (6) - ಮಹಾಯುದ್ಧ (1) | 63.00 |
| ಮಿಲನಿಯಮ್ (7) - ಮಹಾಯುದ್ಧ (2) | 63.00 |
| ಮಿಲನಿಯಮ್ (8) - ಮಹಾಯುದ್ಧ (3) | 57.00 |
| ಮಿಲನಿಯಮ್ (9) - ದೇಶ ವಿದೇಶ (1) | 60.00 |
| ಮಿಲನಿಯಮ್ (10) - ದೇಶ ವಿದೇಶ (2) | 60.00 |
| ಮಿಲನಿಯಮ್ (11) - ದೇಶ ವಿದೇಶ (3) | 57.00 |
| ಮಿಲನಿಯಮ್ (12) - ದೇಶ ವಿದೇಶ (4) | 63.00 |
| ಮಿಲನಿಯಮ್ (13) - ವಿಸ್ಮಯ ವಿಶ್ವ (1) | 63.00 |
| ಮಿಲನಿಯಮ್ (14) - ಮಹಾಪಲಾಯನ | 63.00 |
| ಮಿಲನಿಯಮ್ (15) - ವಿಸ್ಮಯ ವಿಶ್ವ (2) | 63.00 |
| ಮಿಲನಿಯಮ್ (16) - ಅಡ್ವೆಂಚರ್ | 63.00 |
| ಮಾಯಾಲೋಕ - 1 | 198.00 |
| ಹಕ್ಕಿಗಳ ಗ್ರೀಟಿಂಗ್ ಕಾರ್ಡ್ (30 ಬಗೆಗಳು) ಒಂದು ಕಾರ್ಡ್ ಬೆಲೆ | 13.00 |
| The Stories of My Environment | 144.00 |
| ಪಾಕ ಕ್ರಾಂತಿ ಮತ್ತು ಇತರ ಕತೆಗಳು | 60.00 |
| ವ್ಯಕ್ತಿ ವಿಶಿಷ್ಟ ಸಿದ್ಧಾಂತ ಮತ್ತು ಯಮಳ ಪ್ರಶ್ನೆ | 51.00 |
| ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು | 60.00 |
| ವಿಮರ್ಶೆಯ ವಿಮರ್ಶೆ | 150.00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಶ್ರೀ ಪ್ರದೀಪ ಕೆಂಜಿಗೆ :**

| | |
|---|---|
| ವಿಸ್ಮಯ (1) (2) (3) ಪ್ರತಿಯೊಂದೂ | 63.00 |
| ಪ್ಯಾಪಿಲಾನ್ (1) (2) ಪ್ರತಿಯೊಂದೂ | 132.00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಡಾ|| ವಿ. ವಿ. ಬೆಳವಾಡಿ :**

| | |
|---|---|
| ನಡೆಯುವ ಕಡ್ಡಿ! ಹಾರುವ ಎಲೆ! | 63.00 |

**ಶ್ರೀ ಪ್ರದೀಪ ಕೆಂಜಿಗೆ :**

| | |
|---|---|
| ಬರ್ಮುಡಾ ಟ್ರ್ಯಾಂಗಲ್ | 57.00 |
| ಅದ್ಭುತ ಯಾನ | 60.00 |

**ಶ್ರೀ ಜಿ. ಪಿ. ಬಸವರಾಜು**

| | |
|---|---|
| ಭೂಕಂಪದ ಅಂತರಂಗ | 40.00 |

**ಶ್ರೀ ಎಮ್. ಶಿವಕುಮಾರ್**

| | |
|---|---|
| ಸೈಕಲ್ ಪಾಲ | 40.00 |
| ಯೋಗಿ ಮತ್ತು ಅಪ್ಸರೆ | 66.00 |
| ಕಂಪ್ಯೂಟರ್ ಕಲಿಯಿರಿ | 135.00 |

**ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣಗೌಡರು :**

| | |
|---|---|
| ಅಚ್ಚಕನ್ನಡ ನುಡಿಕೋಶ | 360.00 |

**ಶ್ರೀ ನರೇಂದ್ರ ರೈ ದೇರ್ಲ :**

| | |
|---|---|
| ಸಾಯುವ ಕೃಷಿ | 51.00 |

**ಶ್ರೀ ಕೃಪಾಕರ - ಸೇನಾನಿ :**

| | |
|---|---|
| ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 93.00 |
| **ಶ್ರೀ ಕೃಷ್ಣ ಆಲನಹಳ್ಳಿ :** ಗೋಡೆ | 66.00 |

**ಡಾ|| ಎಸ್. ಎಂ. ವೃಷಭೇಂದ್ರ ಸ್ವಾಮಿ :**

| | |
|---|---|
| ತರಗತಿಗಳಲ್ಲಿ ಕುವೆಂಪು | 180.00 |

**ಶ್ರೀ ದೇವನೂರು ಮಹಾದೇವ**

| | |
|---|---|
| ಕುಸುಮಬಾಲೆ | 60.00 |

**ಶ್ರೀಮತಿ ತಾರಿಣಿ ಚಿದಾನಂದ :**

| | |
|---|---|
| ಮಗಳು ಕಂಡ ಕುವೆಂಪು | 300.00 |

**ಶ್ರೀಮತಿ ಪದ್ಮಾಶ್ರೀರಾಮು :**

| | |
|---|---|
| ಗಿಡಗಂಟೆಯ ಕೊರಳು | 69.00 |

* ಹೊಸ ಆವೃತ್ತಿ (Edition) ಬಿಡುಗಡೆಗೊಂಡಾಗ್ಯೂ ಮುಖಪುಟ ಬೆಲೆಯಲ್ಲಿ ವ್ಯತ್ಯಾಸವಿರುವುದು.

# ಕರ್ನಾಟಕದ ರಾಜಕೀಯ ಎತ್ತ ಸಾಗಿದೆ?

‘ಅದೊಂದು ದೊಡ್ಡ ಸಂತೆ. ಅಲ್ಲಿ ‘ಪ್ರಜಾಪ್ರಭುತ್ವ’ ಎಂಬ ಹೆಸರುಳ್ಳ ತಾಯಿಯನ್ನು ತಂದು ನಿಲ್ಲಿಸಿದ್ದಾರೆ! ತುರುಬನೆಳೆಯುವ ಕೈಯೊಂದು ! ಹೆಂಡಯೆರಚುವ ಮಾನಗೇಡಿ ಮನಸ್ಸು ಇನ್ನೊಂದು ಕಡೆ! ತೊಟ್ಟಿರುವ ಬಟ್ಟೆಯ ಗುಂಡಿಬಿಚ್ಚುವ ನೀಚ ಕೈಯೊಂದು ಕಡೆ! ಹಿಡಿದು ಕೇಳುವ ತಿಯವರಿಲ್ಲ! ಯಾಕೆಂದರೆ ಸಂತೆಗೆ ಸಂತೆಯೇ ಅಮಲೇರಿ ಕುಣಿಯುತ್ತಿದೆ. ಲಜ್ಜೆ ೇರಿದ ಲುಚ್ಚ ದಂಡುಗಳ ದರಬಾರೇ ನಡೆದಿದೆ! ಸೆರಗೆಳೆಯಲೂ ಮುಂದಾಗಿವೆ ನೀಚ ಳು! ಈ ತಾಯಿಗಂಡ ಜನ ತಾವು ಬಿಚ್ಚಹೊರಟಿರುವುದು ಸ್ವಂತ ತಾಯಿಯ ಸೀರೆ ಬುದನ್ನೂ ಅರಿಯದಷ್ಟು ನೀಚರು. ಬೆತ್ತಲಾಗುವುದಕ್ಕೆ ಒಂದೇ ಸುತ್ತು ಇದ್ದಾಗ, ಹಾಭಾರತದ ಕತೆಯಲ್ಲಿ ಬರುವ ದ್ರೌಪದಿ ‘ಕೃಷ್ಣಾ’ ಎಂದು ಕಣ್ಮುಚ್ಚಿ ುಗಿದಿದ್ದಳಂತೆ! ಸಂತೆಯಲ್ಲಿ ಮಾನಭಂಗಕ್ಕೊಳಗಾದ ಈ ತಾಯಿಗೆ ಆ ಬಿಕೆಯೂ ಇಲ್ಲ! ಯಾಕೆಂದರೆ ಇಲ್ಲಿ ಯಾರು ಕೃಷ್ಣ, ಯಾರು ದುಶ್ಯಾಸನ ಎಂಬ ್ಯೇ ಅವಳಿಗೆ ಅನುಮಾನವಿದೆ. ಎಲ್ಲರೂ ತೊಟ್ಟಿರುವುದು ಅವನ ವೇಷವೇ ರುವಾಗ ರಕ್ಷಣೆ ಎಲ್ಲಿ?'' – ವಿಧಾನಸಭೆಯ ಇತ್ತೀಚಿನ ಮಹಾಚುನಾವಣೆಗಳಲ್ಲಿ ಯುತ್ತಿರುವ ಅಬ್ಬುಗೇಡಿ ಅವಾಂತರಗಳನ್ನು ನೋಡಿದ ಮತ್ತು ಕೇಳಿದ ದರ್ಭಗಳಲ್ಲಿ ನನ್ನ ಮನಸ್ಸು ಮಾತನಾಡಿಕೊಂಡದ್ದು ಹೀಗೆ.

ಜೀವಮಾನದಲ್ಲೇ ಕಂಡ ಅತ್ಯಂತ ಕ್ರೂರ ರಾಜಕೀಯ ಘಟನೆಗಳಂತೆ ಇತ್ತೀಚಿನ ಲ್ಕಾರು ಉಪ ಚುನಾವಣೆಗಳು ನನಗೆ ಕಂಡಿವೆ. ಪ್ರಜಾಪ್ರಭುತ್ವದಲ್ಲಿ ೇಲು-ಗೆಲುವುಗಳ ಅನುಭವ ಯಾವ ರಾಜಕೀಯ ಪಕ್ಷಗಳಿಗೂ ಹೊಸತಲ್ಲ. ನಾವಣೆಯೆಂದರೆ ಒಂದರ್ಥದಲ್ಲಿ ಯುದ್ಧವೇ. ಯುದ್ಧದಲ್ಲಿ ಸೋಲು-ಗೆಲವು, ತ್ರ-ಪ್ರತಿತಂತ್ರಗಳೆಲ್ಲ ಸಾಮಾನ್ಯ ಸಂಗತಿಗಳೇ. ಆದರೆ ಇವೆಲ್ಲ ಎಲ್ಲಿವರೆಗೆ ? ಜನತಾ ಾರ್ದನನ ಅಂತಿಮ ತೀರ್ಪು ಹೊರಬೀಳುವವರೆಗೆ. ಆದರೆ ಇತ್ತೀಚೆಗೆ ನಾವು ಟಬಂದ ಮಹಾಚುನಾವಣೆಯ ನಂತರ ಜನತಾ ಜನಾರ್ದನನ ತೀರ್ಪನ್ನೂ ಮೀರಿ ್ಮ ರಾಜಕೀಯ ಪಕ್ಷಗಳು ನಡೆದುಕೊಂಡ ರೀತಿ ಎಂಥದ್ದು?... ಈ ಪ್ರಶ್ನೆಗಳನ್ನು ಗಿಟ್ಟುಕೊಂಡಾದರೂ ಕರ್ನಾಟಕದ ರಾಜಕೀಯ ಸಾಗುತ್ತಿದೆ ? ಎಂಬ ಬಗ್ಗೆ ಕನಿಷ್ಠಪಕ್ಷ ನಮ್ಮ ಬುದ್ಧಿ ವಿಗಳ ಮಟ್ಟದಲ್ಲಾದರೂ ಒಂದಷ್ಟು ಕ್ತ ಚರ್ಚೆ ನಡೆಯಬೇಕಿತ್ತಲ್ಲವೇ ?... ‘ಬುದ್ಧಿಜೀವಿಗಳೆಂದರೆ ಯಾರು ?’ ಈ ಬಗ್ಗೆ ವ್ಯಾಖ್ಯಾನಿಸುವುದಕ್ಕೆ ಇದು ಸಂದರ್ಭವಲ್ಲ. ಅವರ ಸಂಖ್ಯೆ ಇತ್ತೀಚಿನ ವರ್ಷಗಳಲ್ಲಿ ತೀರಾ ಕಡಿಮೆಯಾಗುತ್ತಿದೆ ಎಂಬುದನ್ನಷ್ಟೇ ಹೇಳಬಲ್ಲೆ. ಒಂದು ಕಾಲದಲ್ಲಿ ಬುದ್ಧಿಜೀವಿಗಳೆಂದು ನಂಬಿಕೆ ಹುಟ್ಟಿಸಿದ ಜನವೇ ಕಾಲಕ್ರಮೇಣ ಸಮಯಸಾಧಕರೂ, ಅವಕಾಶವಾದಿಗಳೂ ಆಗಿರುವುದಕ್ಕೆ ಹೇರಳ ಉದಾಹರಣೆಗಳಿವೆ. ಈ ಎಲ್ಲ ನಿರಾಶೆಗಳ ಮಧ್ಯೆಯೂ ನಾಡಿನುದ್ದಗಲ-ರಾಷ್ಟ್ರದುದ್ದಗಲ ಒಂದಷ್ಟು ಪರಿಪಕ್ವ ಮೆದುಳುಗಳು, ಮಾಗಿದ ಮನಸುಗಳು ಈಗಲೂ ಇವೆ. ಅವರಾದರೂ ಕನಿಷ್ಠಪಕ್ಷ ತಾವು ನಿಂತ ನೆಲದಲ್ಲಿ ಇತ್ತೀಚಿನ ದುಷ್ಟ ರಾಜಕೀಯ ಬೆಳವಣಿಗೆಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ದಾಖಲಿಸಬೇಕಾಗಿದೆ. ಅಪರೂಪಕ್ಕೆ ಅಲ್ಲೊಬ್ಬ ಇಲ್ಲೊಬ್ಬ ಬಿಟ್ಟರೆ ಉಳಿದವರಾರೂ ಈ ಬಗ್ಗೆ ತಲೆಕೆಡಿಸಿಕೊಂಡಂತೆ ನನಗೆ ಕಂಡಿಲ್ಲ. ‘ಮಾಧ್ಯಮ’ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಮಿತ್ರರಲ್ಲೂ ಕೂಡ ಬಹಳಷ್ಟು ಮಂದಿ ಮನಸ್ಸಾಕ್ಷಿಯನ್ನೇ ಮಾರಿಕೊಂಡವರಂತೆ ವ್ಯವಹರಿಸಿದ್ದು ಈ ದೇಶದ ಡೆಮೊಕ್ರಸಿಯ ಬಗ್ಗೆ ಚಿಂತಿಸುವಂತೆ ಮಾಡಿದೆ. ಅಂಗರಕ್ಷಕರೇ ಪ್ರಧಾನಿಯ ಕೊಲೆ ಮಾಡಿದ ಚರಿತ್ರೆ ಬರೆದ ದೇಶದಲ್ಲಿ ‘ಪ್ರಜಾಪ್ರಭುತ್ವದ ಕಾವಲುಗಾರ’ರಿಂದ ಎಲ್ಲವನ್ನೂ ನಿರೀಕ್ಷಿಸುವಂತಿಲ್ಲವೆಂಬ ಸಂದೇಶ ದಂತಿದೆ – ಇಂದಿನ ಮಾಧ್ಯಮಮಿತ್ರರ ನಡವಳಿಕೆ!

ಕರ್ನಾಟಕದ ವಿಧಾನಸಭೆಗೆ ನಡೆದ ಇತ್ತೀಚಿನ ಮಹಾಚುನಾವಣೆಯಲ್ಲಿ ಅತೀ ದೊಡ್ಡ ಪಕ್ಷವಾಗಿ ಹೊರಹೊಮ್ಮಿದ್ದು, – ಈಗ ಆಡಳಿತ ನಡೆಸುತ್ತಿರುವ ಭಾರತೀಯ ಜನತಾ ಪಕ್ಷ. ಹಾಗೆ ನೋಡಿದರೆ, ಅದು ಹೇಳಿಕೊಳ್ಳುವಂಥ ಆಘಾತಕಾರೀ ಸಂಗತಿಯೇನೂ ಆಗಿರಲಿಲ್ಲ. ಪ್ರಮುಖ ಪ್ರತಿಸ್ಪರ್ಧಿ ಪಕ್ಷಗಳಾದ ಕಾಂಗ್ರೆಸ್ ಮತ್ತು ಜೆ.ಡಿ.ಎಸ್.ಗಳಲ್ಲಿ ‘ನನ್ನ ಎರಡು ಕಣ್ಣು ಹೋದರೂ ಪರವಾಗಿಲ್ಲ, ನಿನ್ನ ಒಂದು ಕಣ್ಣನ್ನಾದರೂ ತೆಗೆದೇ ತೀರುತ್ತೇನೆ’ ಎಂಬಂಥ ಮನೋಭಾವದವರು ದೊಡ್ಡ ಸಂಖ್ಯೆಯಲ್ಲಿದ್ದಾರೆ ಎಂಬ ಬಾತ್ಮಿ ಬರತೊಡಗಿದಾಗಲೇ ಚುನಾವಣೆಯ ಪರಿಣಾಮವನ್ನು ನನ್ನಂಥವನು ಊಹಿಸಿಯಾಗಿತ್ತು. ಮೇಲಾಗಿ ಒಂದು ಪ್ರಬಲ ಸಮುದಾಯ ಈ ಚುನಾವಣೆಯನ್ನು ಅಕ್ಷರಶಃ ಜಾತಿರಾಜಕಾರಣವಾಗಿಯೇ ಪರಿಗಣಿಸಿದ್ದರಿಂದ ಅವರ

**ಕರ್ನಾಟಕದ ರಾಜಕೀಯ ಬೆಳವಣಿಗೆಯನ್ನು ಸೂಕ್ಷ್ಮವಾಗಿ ಗಮನಿಸಿದವರಿಗೆ ಒಂದು ಸತ್ಯವಂತೂ ಸ್ಪಷ್ಟವಾಗಿರಲೇಬೇಕು : ಈಗ ಜನಮನದಲ್ಲಿ ಗುಪ್ತಗಾಮಿನಿಯಂತೆ ಹರಿಯುತ್ತಿರುವ ಅಸಂತೋಷ, ಅಸಹನೆಯೆಂಬ ಜ್ವಾಲಾಮುಖಿಯು ಇಂದಲ್ಲ ನಾಳೆ ಈ ಕತ್ತಲ ಲೋಕದ ಖದೀಮರನ್ನು ಆಪೋಶನ ತೆಗೆದುಕೊಳ್ಳುವ ಸಾಧ್ಯತೆಗಳು ಇಲ್ಲದಿಲ್ಲ. ಜೊತೆಜೊತೆಗೇ, ಈಗೇನು ನಡೆಯುತ್ತಿವೆಯಲ್ಲ, ಈ ದುಷ್ಟ ರಾಜಕೀಯ ಹುನ್ನಾರುಗಳು ಪ್ರಜಾಪ್ರಭುತ್ವದ ಅಸ್ತಿತ್ವಕ್ಕೇ ಸವಾಲಾಗಿ ಪರಿಣಮಿಸುವ ಮೂಲಕ ಖಂಡಿತವಾಗಿಯೂ ತುರ್ತುಸ್ಥಿತಿಯ ಸಂದರ್ಭದಲ್ಲಿ ವ್ಯಾಪಿಸಿದ ರೀತಿಯ ಇನ್ನೊಂದು ವ್ಯಾಪಕ ಜನಾಂದೋಲನಕ್ಕೆ ಆಹ್ವಾನ ನೀಡಲಿದೆಯೆ ?**

■ ವಿಷ್ಣು ನಾಯ್ಕ



ಬೆಂಬಲಕ್ಕಿದ್ದ ಪಕ್ಷ ಗೆಲುವಿನ ಅಂಚಿಗಾದರೂ ಬಂದು ನಿಲ್ಲುತ್ತದೆ ಎಂಬುದಾಗಿ ಊಹಿಸಲಾಗಿತ್ತು. ಎಲ್ಲಕ್ಕಿಂತ ಮಿಗಿಲಾಗಿ, ನಮ್ಮ ಮಾಜಿ ಮಹಾಪ್ರಧಾನಿಯೊಬ್ಬರು ಕರ್ನಾಟಕದ ಅಂಗಳದಲ್ಲಿ ಆಡಿ ಮುಗಿಸಿದ ಕೆಟ್ಟ ರಾಜಕೀಯದಾಟ ಭವಿಷ್ಯದ ಪರಿಣಾಮವನ್ನು ಬರೆದೇ ಇಟ್ಟಿತ್ತು.

ಅಂದು ಪೂರ್ಣ ಬಹುಮತಕ್ಕೆ ಒಂದೆರಡೇ ಸಂಖ್ಯೆಗಳ ಕೊರತೆಯಿತ್ತೆಂಬುದು ನಿಜ. ಈ ರಾಜ್ಯಕ್ಕೊಂದು ಸದೃಢ ಸರಕಾರ ಬೇಕಿತ್ತೆಂಬುದೂ ನಿಜ. ಆದರೆ ಆಯ್ಕೆಯಾಗಿ ಬಂದ ಸ್ವತಂತ್ರ ಅಭ್ಯರ್ಥಿಗಳಿದ್ದರಲ್ಲ?... ರಾಷ್ಟ್ರಮಟ್ಟದಲ್ಲೂ ಹಿಂದೆ ಒಂದೆರಡು ಬಾರಿ ಇಂಥ ರಾಜಕೀಯ ಬಿಕ್ಕಟ್ಟು ಎದುರಾಗಿ, ಅದನ್ನು ಇಚ್ಛಾಶಕ್ತಿಯ ಮೂಲಕ ಪರಿಹರಿಸಿಕೊಂಡ ಉದಾಹರಣೆಗಳೂ ಇದ್ದವಲ್ಲ! ನಿನ್ನೆ ಹೊತ್ತುಕಂತುವ ವರೆಗೆ ರಾಜಕೀಯ ಪಕ್ಷವೊಂದರ ತಾಜಾ ತಾಜಾ ಶಾಸಕನಾದವನೊಬ್ಬ ಬೆಳಗಾಗುವುದರೊಳಗೆ ಆಳುವ ಪಕ್ಷ ಸೇರುತ್ತಾನೆಂದರೆ, ಇದು ಯಾರಿಗೆ ಮಾಡಿದ ಅವಮಾನ ? ಎದುರಾಳಿ ಪಕ್ಷಕ್ಕೇ ? ಅಲ್ಲ, ಅಲ್ಲ, ಮತದಾರನ ಬೆನ್ನಿಗೆ ಇರಿದ ಚೂರಿ ! 'ಪ್ರಜಾಸತ್ತೆ' ಎಂಬ ತಾಯಿಯ ನಿಜವಸ್ತ್ರಾಪಹರಣ !

ಕರ್ನಾಟಕದಲ್ಲಿ ರಾಜಕೀಯ ಪೈಪೋಟಿ ಈಗ ಯಾವ ಮಟ್ಟಕ್ಕೆ ಇಳಿದಿದೆ ಗೊತ್ತೇ ? ಕೋಟಿಗಳ ಒಡೆಯನಲ್ಲದೆ ಬೇರಾರೂ ಇಂದು ವಿಧಾನಸಭಾ ಚುನಾವಣೆಯನ್ನು ಎದುರಿಸಲಾರರು ! ಮತದಾರನೂ ಎಷ್ಟು ಕೆಟ್ಟು ಹೋಗಿದ್ದಾನೆ ಅಥವಾ ಅವನನ್ನು ಕೆಡಿಸಿದ್ದಾರೆ ಎನ್ನುವದಕ್ಕೆ ಕಣ್ಣಳತೆಯಲ್ಲೇ ನಡೆದ ಒಂದೆರಡು ಉದಾಹರಣೆ ಕೊಟ್ಟರೆ ಸಾಕೆನಿಸುತ್ತದೆ.

ನೂರೆಂಟು ಇತರೇ ಕಾರ್ಯಗಳ ಒತ್ತಡದ ಮಧ್ಯೆಯೂ ೧೯೯೩.ರಿಂದ ಸಾಕ್ಷರತಾ ಆಂದೋಲನದಲ್ಲಿ ಮನಮುಟ್ಟಿ ತೊಡಗಿಸಿಕೊಂಡವರಲ್ಲಿ ನಾನೂ ಒಬ್ಬ. ಅಂದಿನಿಂದ ಇಂದಿನವರೆಗೆ ಅದನ್ನೊಂದು ಜನಾಂದೋಲನವಾಗಿ ನನ್ನ ಜಿಲ್ಲೆಯಮಟ್ಟಿಗಾದರೂ ರೂಪಿಸುವುದಕ್ಕಾಗಿ ಶ್ರಮ-ಸಮಯಗಳನ್ನೂ, ಬುದ್ಧಿ-ಬೆವರನ್ನೂ ಕೊಟ್ಟಿದ್ದೆ. ಈಗ ಅದು ಕ್ರಿಯಾತ್ಮಕ ಸಾಕ್ಷರತೆಯ ಸ್ವರೂಪತಾಳಿ ಮುಂದುವರಿಕೆ ಶಿಕ್ಷಣ ಕೇಂದ್ರಗಳಾಗಿ, ಒಂದರ್ಥದಲ್ಲಿ– 'ಪವರ್ ಆಫ್ ಲಿಟರಸಿ' (ಸಾಕ್ಷರತಾ ಶಕ್ತಿ) ಯಾಗಿದೆ ಎಂದು ಬೀಗಿದ್ದೆ ಕೂಡ !

ಆದರೆ ಇತ್ತೀಚಿನ ಚುನಾವಣೆಗಳಲ್ಲಿ ಶಕ್ತಿ ರಾಜಕಾರಣವು ಕೆಲವು ಮುಂದುವರಿಕೆ ಶಿಕ್ಷಣ ಕೇಂದ್ರಗಳನ್ನೂ 'ಹೈಜಾಕ್' ಮಾಡಿತೆಂದೂ ಕೇಳಿದಾಗ ನಿಜಕ್ಕೂ ಆಘಾತವಾಯಿ ಇದು ಒಂದು ಕತೆಯಾದರೆ, ಇದೇ ಸಾಕ್ಷರತಾ ಆಂದೋಲನದ ಉಪ-ಉ ಎಂಬಂತೆ ರಾಜ್ಯಾದ್ಯಂತ ಇತ್ತೀಚಿನ ದಶಕದಲ್ಲಿ ಹುಟ್ಟಿಕೊಂಡ ಮಹಿಳಾ ಸ್ವಸಹಾ ಸಂಘಗಳಲ್ಲೂ ಕೂಡ ಒಂದಷ್ಟು ಇದೇ ದಾರಿ ಹಿಡಿದದ್ದು ಆತ್ಮಘಾತುಕ ಕೃತ್ಯವಾಗಿ ನ ಕಂಡದ್ದಿದೆ. ಒಂದು ಕಾಲಕ್ಕೆ ಹೆಬ್ಬೆಟ್ಟು ಒತ್ತುತ್ತಿದ್ದವರು ಸಾಕ್ಷರತೆ ಮತ್ತು ಸ್ವ-ಸಹಾ ಸಂಘಗಳ ಬಲದಿಂದ ಸ್ವಂತ ಉದ್ಯೋಗಕ್ಕೆ ಇಳಿದು, ಕುಡುಕ ಗಂಡಂದಿರ ಧೈರ್ಯವಾಗಿ ಎದುರಿಸುತ್ತ ಕುಟುಂಬ ನಿರ್ವಹಣೆ ಮಾಡತೊಡಗಿದ್ದನ್ನೂ, ರಾಷ್ಟ್ರೀ ಬ್ಯಾಂಕುಗಳಲ್ಲಿ ಸಾಲುಗಟ್ಟಿ ನಿಂತು ಸ್ವತಂತ್ರವಾಗಿ ಆರ್ಥಿಕ ವ್ಯವಹಾರ ನಡೆಸುತ್ತಿದ್ದದ ಕಂಡು ಬೀಗಿದ ನನ್ನೆದೆಗೇ ಬಾಂಬು ಇಟ್ಟಂತೆ ಸ್ವಸಹಾಯ ಸಂಘದ ಕೆಲವು ಸೋದರಿಯ ದುಡ್ಡಿಗೆ ಶರಣಾಗಿಬಿಟ್ಟರೆಂದು ನಂಬಲರ್ಹ ಮೂಲಗಳಿಂದ ಕೇಳಿ ದಂಗಾಗಿದ್ದೆ.

ಕರ್ನಾಟಕದ ರಾಜಕೀಯ ಎತ್ತ ಸಾಗುತ್ತಿದೆ ಎಂಬ ಬಗ್ಗೆ ಪ್ರಾಮಾಣಿಕವ ಚಿಂತಿಸುವವರು ಈಗ ನಮ್ಮ ಹಳ್ಳಿಗಳ ಮರಿಪುಢಾರಿಗಳು ಏನಾಗುತ್ತಿದ್ದಾರೆ ಎಂಬಲ್ಲಿ ಅಧ್ಯಯನ ಆರಂಭಿಸಬೇಕಾಗಿದೆ. ಒಂದು ಕಾಲಕ್ಕೆ ರಾಜಧಾನಿಗಳಲ್ಲಿ ಮ ಮಿಂಚುತ್ತಿದ್ದ ದುಷ್ಟ ಮನಸ್ಸುಗಳು ಈಗ ಗ್ರಾಮೀಣ ಜಗತ್ತನ್ನು ಆವರಿಸಿಕೊಂಡಿ ಯಾವ ಸದುದ್ದೇಶದಿಂದ ವಿಕೇಂದ್ರೀಕರಣ ವ್ಯವಸ್ಥೆ ಬಂತೋ, ಆ ವ್ಯವಸ್ಥೆಯ ರಾಜಕೀಯ ನೀಚಮನಸುಗಳು ನಾಶ ಮಾಡಿಬಿಟ್ಟಿವೆ. ಒಂದು ಕಾಲದಲ್ಲಿ ದೇಶ ಮಾದರಿಯಾಗಿ ನಿಂತಿದ್ದ ಕರ್ನಾಟಕದ ಪಂಚಾಯತ್ ರಾಜ್ ವ್ಯವಸ್ಥೆ ಈಗ ನಗೆಪಾಟ ಗೂಡಾಗಿದೆ. ಅಲ್ಲಿಯೂ ಶಕ್ತಿ ರಾಜಕಾರಣ, ಬಹಿರಂಗ ಖರೀದಿ, ಬೆನ್ನಿಗೇ ಇರಿಯ ದುಷ್ಟಬುದ್ಧಿಗಳ ದರಬಾರು !... ಬೆಂಗಳೂರಿನಲ್ಲಿ ಅಧಿಕಾರ ಬದಲಾದ ಮರುದಿನ ಗ್ರಾಮ ಪಂಚಾಯತ್, ಜಿಲ್ಲಾ ಪಂಚಾಯತ್‌ಗಳಲ್ಲೂ ಕೋತಿಗಳ ಜಿಗಿದಾಟ !

ಈ ನಾಡಿಗಾಗಲಿ, ಈ ದೇಶಕ್ಕಾಗಲಿ ನಿಜವಾಗಿ ಬಡತನ ಇದೆಯೇ ಎಂಬುದ ನಾವೆಲ್ಲ ಬುದ್ಧಿ ತೆರೆದಿಟ್ಟು ಯೋಚಿಸಬೇಕಾಗಿದೆ. ತಿರುಪತಿಯಲ್ಲಿ ೫೦ ಸಾ ಕೋಟಿಗಿಂತ ಹೆಚ್ಚು ಬೆಲೆ ಬಾಳುವ ಚಿನ್ನವಿದೆಯೆಂದು ಕೇಳಿದ್ದೇನೆ. ಈ ದೇಶದಲ್ಲಿ ಹ ಸಾವಿರ ಕೋಟಿಗಿಂತ ಹೆಚ್ಚು ಸಂಪತ್ತಿರುವ ನೂರಾ ಇಪ್ಪತ್ತೇಳು ಶ್ರೀಮಂತರಿದ್ದಾರೆ ಮೂರು ವರ್ಷಗಳಷ್ಟು ಹಿಂದೆಯೇ ಓದಿದ ನೆನಪು ! ಇವೆಲ್ಲ ಸರಕಾರ ಬಿಡುಗ ಮಾಡಿದ ಅಧಿಕೃತ ಹೇಳಿಕೆಯಿಂದ ಬೆಳಕಿಗೆ ಬಂದ ವಿಚಾರ. ಇದಕ್ಕಿಂತ ಎಷ್ಟೋ ಪ ಹೆಚ್ಚು ಸಂಪತ್ತಿರುವ ಸಾವಿರಾರು ಕಪ್ಪು ಹಣದ ಖದೀಮರಿದ್ದಾರೆ. ತಿರುಪತಿಯ ದೇವಸ್ಥಾನಗಳಿಗೆ ದುಡ್ಡು-ಬಂಗಾರ ಸುರಿಯುವವರೂ ಇವರೇ. ಇಂದು ಆಥಿ ಸಂಕಷ್ಟ ಈ ರಾಜ್ಯದಲ್ಲಾಗಲೀ, ದೇಶದಲ್ಲಾಗಲೀ ಇರುವುದು ಮಠ-ಮಂದಿರ-ಚಚು ಮಸೀದಿಗಳಿಗಲ್ಲ; ಸರಕಾರ ಅನುದಾನ ಕೊಡಲು ಮುಂದಾದರೂ ಸ್ವೀಕರಿ ಡೊನೇಶನ್‌ಗಳ ಮೂಲಕ ಆಂಗ್ಲ ಮಾಧ್ಯಮ ಶಾಲೆಗಳನ್ನು ನಡೆಸುವವರಿಗಲ್ಲ; ಚುನಾವಣೆಯಲ್ಲಿ ೧೫ ಲಕ್ಷ ಆಸ್ತಿ ಘೋಷಣೆ ಮಾಡಿದವನೇ ಮುಂ ಚುನಾವಣೆಯಲ್ಲಿ ೧೫೦ ಕೋಟಿ ಆಸ್ತಿ ಘೋಷಿಸುತ್ತಾನೆ. ನಡುವಿನ ಐ ವರ್ಷಗಳಲ್ಲೇ ಇಷ್ಟೊಂದು ಸಂಪತ್ತು ಆತನಿಗೆ ಎಲ್ಲಿಂದ ಬಂತು ಎಂಬುದಾಗಿ ಚುನಾವಣಾ ಆಯೋಗವೂ ಸೇರಿದಂತೆ – ಯಾರೂ ಈವರೆಗೆ ಕೇಸು ಹಾಕಿದ್ದನ್ನು ನಾ ಕೇಳಿಲ್ಲ. ಈ ಹಣವೆಲ್ಲ ಜನತೆಯ ಮೂಲಭೂತ ಅವಶ್ಯಕತೆಗಳಿಗೆ ದೊರಕುವು ಯಾವಾಗ ? ಹಾಗೆ ಮಾಡಬೇಕಾದವರು ಯಾರು ?... ಹೀಗೆ ಸದಾಕಾ ಶ್ರೀಮಂತಿಕೆಯನ್ನು ಅನುಭವಿಸುತ್ತಲೇ ಬಂದ, ದರಬಾರು ನಡೆಸುತ್ತಲೇ ಬ ವರ್ಗವೊಂದನ್ನು ನಾವು ಸಹಿಸಿಕೊಂಡು ಬಂದಿದ್ದೇವಲ್ಲ, ನಮಗೇನಾಗಿದೆ ?

ಕರ್ನಾಟಕದ ರಾಜಕೀಯ ಬೆಳವಣಿಗೆಯನ್ನು ಸೂಕ್ಷ್ಮವಾಗಿ ಗಮನಿಸಿದವ ಒಂದು ಸತ್ಯವಂತೂ ಸ್ಪಷ್ಟವಾಗಿರಲೇಬೇಕು : ಈಗ ಜನಮನದಲ್ಲಿ ಗುಪ್ತಗಾಮಿನಿಯ ಹರಿಯುತ್ತಿರುವ ಅಸಂತೋಷ, ಅಸಹನೆಯೆಂಬ ಜ್ವಾಲಾಮುಖಿಯು ಇಂದಲ್ಲ ನಾ ಈ ಕತ್ತಲ ಲೋಕದ ಖದೀಮರನ್ನು ಆಪೋಶನ ತೆಗೆದುಕೊಳ್ಳುವ ಸಾಧ್ಯತೆ ಇಲ್ಲದಿಲ್ಲ. ಜೊತೆಜೊತೆಗೇ, ಈಗೇನು ನಡೆಯುತ್ತಿವೆಯಲ್ಲ, ಈ ದುಷ್ಟ ರಾಜಕೀ ಹುನ್ನಾರುಗಳು ಪ್ರಜಾಪ್ರಭುತ್ವದ ಅಸ್ತಿತ್ವಕ್ಕೇ ಸವಾಲಾಗಿ ಪರಿಣಮಿಸುವ ಮೂ ಖಂಡಿತವಾಗಿಯೂ ತುರ್ತುಸ್ಥಿತಿಯ ಸಂದರ್ಭದಲ್ಲಿ ವ್ಯಾಪಿಸಿದ ರೀತಿಯ ಇನ್ನೊಂ ವ್ಯಾಪಕ ಜನಾಂದೋಲನಕ್ಕೆ ಆಹ್ವಾನ ನೀಡಲಿದೆ ಎಂದೇ ನನ್ನೆಣಿಕೆ.


ವಿಷ್ಣು ನಾಯ್ಕ
'ಪರಿಮಳ', ಅಂಬಾರಕೊಡ್ಲ, ಅಂಕೋಲ - ಉತ್ತರ ಕನ್ನಡ ಜಿಲ್ಲೆ

ಅದೊಂದು ದಿನ ಯಾವ ಮುನ್ಸೂಚನೆಯೂ ಇಲ್ಲದೆ ''ಮಹಾಬಲೇಶ್ವರಕ್ಕೆ ೋಗಬೇಕು ಅಂತಿದ್ದೆಯಲ್ಲಾ, ಹೋಗುವ, ನಾಳೆನೇ ಹೊರಡು'' ಎಂದ ರವಿ.

''ಆಂ... ನಿಜವಾಗ್ಲೂ'' ಉದ್ಗರಿಸಿದಳು ವಿಮಲಾ.

''ನೂರಕ್ಕೆ ನೂರೂ ನಿಜ. ಹೊರಟುಬಿಡುವ. ಎಷ್ಟು ವರ್ಷದಿಂದ ಹೇಳ್ತಾ ಇದ್ದೀಯ. ್ಯಾಕೋ... ಕಾಲ ಕೂಡೇ ಬರಲಿಲ್ಲ... ಎಷ್ಟೆಲ್ಲ ಊರು ಸುತ್ತಿದ್ದೀವಿ. ಇದೊಂದು ನಿನ್ಗೆ ೇರ್ಸೋಕೇ ಆಗ್ಲಿಲ್ಲ. ಅದೂ ಒಂದು ಮುಗ್ದು ಹೋಗ್ಲಿ... ನಿನ್ಗೆ ಅದ್ನ ನೋಡ್ಲೇಬೇಕು ್ನೋ ಆಸೆ ಇದೆ ಅನ್ನೋದೇ ಇತ್ತೀಚಿನವರ್ಗೂ ಅದ್ಯಾಕೋ ನನ್ನ ಗಮನಕ್ಕೇ ದಿರ್ಲಿಲ್ಲ... ಹೂಂ... ಏನ್ ರೆಡಿ ತಾನೇ.''

ಏನು ತಾನೆ ಹೇಳಿಯಾಳು ವಿಮಲಾ ? ಅಲ್ಲಿಗೆ ಹೋಗಬೇಕು ಎಂಬುದು ಅವಳ ಶಕಗಳ ಕಾಲದ ಕನಸು. ಅಲ್ಲೇನಿದೆ ಅಂತ ಕೇಳಿದರೆ ಆಕೆಗೆ ಗೊತ್ತಿಲ್ಲ. ತನ್ನನ್ನು ಬಿಟ್ಟು ು ಸಹೋದ್ಯೋಗಿಗಳ ಜೊತೆಗೆ ಹೋಗಿ ಬಂದಾಗಲೆಲ್ಲ, ಅವಳಿಗೆ ಅದೇನೋ ದು ಆಸೆ; ತಾನೂ ಅವನೊಂದಿಗೆ ಹೋಗಬೇಕು ಅಂತ. ಆದರೆ ರವಿಯ ಯಾವ ೋದ್ಯೋಗಿಗಳೂ ಅವರವರ ಸಂಸಾರವನ್ನು ಕರೆತರಲು ಸಿದ್ಧರಿಲ್ಲದ್ದರಿಂದ ಆತ ಹಾಯಕ. ಕೆಲವೊಮ್ಮೆ ಆಫೀಸಿನ ಡ್ಯೂಟಿ ಮೇಲೆ ಅಲ್ಲಿಗೆ ಹೋಗುವಾಗ, ಡದಿಯನ್ನು ಕರೆದೊಯ್ಯುವ ಮನಸ್ಸಿದ್ದರೂ, ಕಚೇರಿಯ ಕೆಲಸದ ಜೊತೆ ವೈಯಕ್ತಿಕ ಸಗಳನ್ನು ಬೆರೆಸುವುದು ಆತನಿಗೆ ಇಷ್ಟವಿಲ್ಲ. ಹೀಗಾಗಿ ಯಾವತ್ತೂ ಇಬ್ಬರೂ ತೆಯಾಗಿ ಮಹಾಬಲೇಶ್ವರಕ್ಕೆ ಹೋಗಲಾಗಿರಲೇ ಇಲ್ಲ.

''ಅಲ್ಲಿ ಏನೇನಿದೆ ?'' ಅವಳದು ಯಾವತ್ತೂ ಒಂದೇ ಪ್ರಶ್ನೆ.

''ಏನಿದೆ ? ಸುತ್ತಲೂ ಗುಡ್ಡ-ಬೆಟ್ಟ, ಹಸಿರು, ಬುಡಕಟ್ಟು ಜನಾಂಗದವರು, ಚಳಿ... ಮ್ಮೆ ನೋಡುವಂಥದ್ದು. ಹೋಗೋಣಂತೆ ಇರು'' ಎಂಬುದು ರವಿಯ ತಣ್ಣನೆಯ ಉತ್ತರ.

ವಿಮಲಾ ಮಾತ್ರ ತಾನು ಸಿನಿಮಾದ ದೃಶ್ಯಗಳಲ್ಲಿ ಕಂಡ ಅಲ್ಲಿಯ ಪ್ರಕೃತಿ ಚಿತ್ರಕ್ಕೆ ತನ್ನ ನೆಯ ಮೆರುಗನ್ನೂ ಸೇರಿಸಿ, ಅಲ್ಲಿಯ ಒಂದೊಂದು ಸುಂದರ ತಾಣಗಳಲ್ಲಿ ರವಿಯ ುಲ್ಲಿ ಕೈತೂರಿಸಿ, ಒಂದಿಷ್ಟು ಆತನ ಭುಜಕ್ಕೆ ಒರಗಿದಂತೆ ಹೆಜ್ಜೆ ಜೊತೆ ಹೆಜ್ಜೆ ಹಾಕುತ್ತಾ ೆಯುವುದನ್ನು ಕಲ್ಪಿಸಿಕೊಳ್ಳುತ್ತಾ ರೋಮಾಂಚನಗೊಳ್ಳುತ್ತಿದ್ದಳು. ಆದರೆ ಈ ಕನಸು ು ಖಾಸಗಿಯಾಗಿತ್ತೆಂದರೆ, ಅದು ಅವಳ ವಿನಾ ಯಾರ ಗಮನಕ್ಕೂ ಬಾರದಷ್ಟು ಆಪ್ತವಾಗಿ, ಜೋಪಾನವಾಗಿ ಸುಭದ್ರವಾಗಿತ್ತು. ತಮ್ಮ ವಿವಾಹದ ಆರಂಭದ ದಿನಗಳಲ್ಲೇ ಅಲ್ಲಿಗೆ ಹೋಗಬೇಕು ಎಂದು ವಿಮಲಾ ಕನಸಿದಾಕೆ. ಆದರೆ, ಎಲ್ಲರ ಬದುಕಿನಂತೆ ವಿವಾಹದ ಜೊತೆಜೊತೆಗೇ ಹೆಗಲೇರಿದ ಜವಾಬ್ದಾರಿಗಳನ್ನು ಇಬ್ಬರೂ ಎಷ್ಟು ಒಪ್ಪಿಕೊಂಡರೆಂದರೆ, ಈ ಕನಸು ಅವಳಿಗೆ ಮರೆತೇಹೋಗಿತ್ತು. ಮನೆಗೆ ಬಂದ ಯಾರಾದರೂ ಮಾತಿನ ಮಧ್ಯೆ ತಾವು ಹನಿಮೂನ್‌ಗೆಂದು ಊಟಿ, ಕೊಡೈಕೆನಾಲ್ ಮುಂತಾದೆಡೆ ಹೋದುದನ್ನು ಹೇಳಿದಾಗಲೆಲ್ಲ ರವಿ, ''ಅಯ್ಯೋ, ನೀನೇ ವಾಸಿ... ನಾನು ಇವಳನ್ನು ಎಲ್ಲಿಗೂ ಕರೆದೊಯ್ಯಲು ಆಗಲೇ ಇಲ್ಲ'' ಎಂದು ಉದ್ಗರಿಸುತ್ತಿದ್ದ. ಪಕ್ಕದಲ್ಲೇ ಈಕೆ ಇದ್ದರೆ, ಆತನ ಉದ್ಗಾರದಲ್ಲಿ ಅಳುಕಿನ ಎಳೆಗಳು ಇಣುಕಿದವೇ ಎಂದು ಹುಡುಕಿ, ತಾನೂ ಅಳುಕಿ, ಒಮ್ಮೊಮ್ಮೆ ಹೇಳಿದವರ ಭಾಗ್ಯಕ್ಕೆ ಕರುಬಿ, 'ಹೋದರಾಯ್ತು ಬಿಡು' ಎಂದು ತನ್ನ ಮನದ ಜೊತೆ ಆತನಿಗೂ ಸಮಾಧಾನ ಹೇಳಿಕೊಳ್ಳುತ್ತಿದ್ದಳು. ಅಂತಹ ಒಂದು ಸಂದರ್ಭ ಹೀಗೆ ಇಷ್ಟು ಅನಿರೀಕ್ಷಿತವಾಗಿ ಎದುರಾದೀತು ಎಂದು ವಿಮಲಾ ಕಲ್ಪಿಸಿಕೊಳ್ಳದ ಹೊತ್ತಲ್ಲಿ ಗಂಡನ ಪ್ರಸ್ತಾವ ಎದುರಾಗಿತ್ತು.

ಒಂದು ಕ್ಷಣ ಎದೆ ಝಿಲ್ ಎಂದು, ಮೈ ಎಲ್ಲ ನವಿರೆದ್ದು, ಪುಟ್ಟ ಹುಡುಗಿಯಂತೆ ಕುಳಿತಲ್ಲಿಂದ ಎದ್ದು ಓಡಿಹೋಗಿ, ಆತನನ್ನು ತಬ್ಬಿ ಮುದ್ದುಗರೆಯುವಂತಾಯ್ತು. ಉಹೂಂ... ಅದೆಲ್ಲ ಸಾಧ್ಯವೇ ? ಹಾಗೆಲ್ಲ ಈ ಇಳಿವಯಸ್ಸಿನಲ್ಲಿ ಮಾಡಿದರೆ ಆತನೇ ಏನೆಂದುಕೊಂಡಾನು ಎಂದೂ ಆಕೆಗೆ ಅನಿಸಿತು. ತನ್ನ ಮನಸ್ಸಿಗೂ ದೇಹಕ್ಕೂ ಸ್ಪಂದನೆಯಲ್ಲಿ ಇರುವ ವ್ಯತ್ಯಾಸ ಮೊತ್ತಮೊದಲ ಬಾರಿಗೆ ಅವಳ ಅರಿವಿಗೆ ಬಂದು, ಹಾಗೇ ಕುಳಿತಳು. ಎದುರಿದ್ದ ಯಾರಿಗೂ ಅವಳ ಈ ಹೋರಾಟದ ಒಂದೆಳೆಯೂ ಅರಿವಿಗೆ ಬಾರದಷ್ಟು ಅವಳ ಮುಖ ಶಾಂತವಾಗಿ, ನಿರ್ಭಾವುಕವಾಗಿತ್ತು.

''ಈಗ, ಇಷ್ಟು ಬೇಗ ಪ್ರವಾಸದ ತೀರ್ಮಾನ ಮಾಡ್ಲಿಕ್ಕೆ ಕಾರಣ ಏನು ?'' ಎಂದಳು ವಿಮಲಾ.

''ಕಾರಣ ಅಂತ ಏನಿಲ್ಲ, ಹೇಗೂ ನಾಲ್ಕು ದಿನ ರಜೆ ಇತ್ತು. ಬೇಜಾರೂ ಆಗಿತ್ತು. ಕಳೆದ ಸಲ ನೀನು ಹೇಳಿದ್ದೂ ನೆನಪಿತ್ತು. ಆಗ್ಲೇ ಹೇಳಿದ್ನಲ್ಲ, ಯಾವತ್ತೋ ಹೋಗ್ಬಹುದಿತ್ತು ನಾವು. ಅದೇನು ದೊಡ್ಡ ವಿಷಯ ಅಲ್ಲ, ಅದ್ಯಾಕೋ ಆಗ್ಲಿಲ್ಲ ಅಷ್ಟೆ. ಇನ್ನೇನು...''



# ಗೆರೆಗಳು

ಡಾ|| ಸಬಿಹಾ ಭೂಮೀಗೌಡ

''ಮತ್ತೆ... ಅದ್ಕೆಲ್ಲ ಹಣದ ವ್ಯವಸ್ಥೆ...'' ಮಾತನ್ನು ಅಳುಕುತ್ತ ನುಂಗಿಕೊಂಡಳು.

''ಹೂಂ....ತೆಗ್ದೀಯಲ್ಲ ನಿನ್ನ ರಗಳೇ....ಹಣದ ಚಿಂತೆ ನಿನಗ್ಯಾಕೆ ? ಅದ್ನ್ಯಾಗೋ ಮಾಡಿದ್ರಾಯ್ತು, ನಿನ್ ಮನಸ್ ಹೇಳು'' ಎಂದ ರವಿ.

ತನ್ನ ಮನಸ್ಸನ್ನು ಹೇಳಬೇಕೇ ? ಕೇಳಲು ಆತ ಸಿದ್ಧನಾಗಿದ್ದಾನೆಯೇ ಎಂದುಕೊಂಡಳು. ಯಾಕೆಂದರೆ, ತಾನು ಮನದ ಎಳೆಎಳೆಗಳನ್ನು ಬಿಚ್ಚಿಡಲು ಒಮ್ಮೊಮ್ಮೆ ಹೊರಟಾಗಲೂ ''ಅದ್ಯಾಕೆ ಹಾಗೆ ಹಿಂಜಿ ಹಿಂಜಿ ಮಾತಾಡ್ತೀ ? ಏನ್ ಬೇಕು ಅದನ್ನ ನೇರವಾಗಿ ಹೇಳಿದ್ರೆ ಆಗಲ್ವಾ ನಿಂಗೆ'' ಎನ್ನುತ್ತಿದ್ದ. ಅದನ್ನು ಕೇಳಿದಾಗಲೆಲ್ಲ ಅವಳ ಭಾವನೆಗಳು ಮುದುಡಿ, ಮಾತು ತೊದಲಿ, ಹೇಳಬೇಕಾದ್ದನ್ನು ನುಂಗಿಕೊಂಡು, ಆ ಕ್ಷಣಕ್ಕೆ ಇನ್ನೇನೋ ಹೇಳಿ ವಿರಮಿಸುತ್ತಿದ್ದಳು. 'ಈಗ ಹೋಗಲು ಮನಸ್ಸು ಇದೆಯಾ' ಎಂದು ಕೇಳುತ್ತಿದ್ದಾನೆ ! ನಾಳೆಯೇ ಹೊರಡಬೇಕಂತೆ. ಅಯ್ಯೋ, ಅಯ್ಯೋ... ಅದು ಹ್ಯಾಗೆ ಸಾಧ್ಯ ? ದಶಕಗಳ ಕಾಲದ ಕನಸು ಕಣ್ಮುಂದೆ ನಿಂತಿರುವಾಗ, ನಿಂತ ಮೆಟ್ಟಿನಲ್ಲಿ ಹೊರಡೋದಾದರೂ ಹ್ಯಾಗೆ ? ಏನೆಲ್ಲ ತಯಾರಿ ಮಾಡೋದಿದೆ ತಾನು. ದಾರಿ ಬುತ್ತಿಗೆಂದು ಕರಿದ ತಿಂಡಿಗಳು, ಉಂಡೆಗಳನ್ನು ಒಯ್ಯಬೇಕಲ್ಲ; ಮತ್ತೆ ಯಾವ ಯಾವ ಸೀರೆ ಒಯ್ಯಬೇಕು, ಡ್ರೆಸ್ ಒಯ್ಯಬೇಕು, ಅವನ್ನೆಲ್ಲ ಒಗೆದು ಇಟ್ಟಿದೆಯಾ ? ಇಸ್ತ್ರಿ ಹಾಕಿದೆಯಾ ? ನೋಡಬೇಕು, ಇಲ್ಲ ಅಂದ್ರೆ ಈಗ ಅದಕ್ಕೆಲ್ಲ ಸಮಯ ಎಲ್ಲಿದೆ ?... ಮತ್ತೆ ಇದೆಲ್ಲಕ್ಕಿಂತ ತನ್ನ ಗೆಳತಿಯರಿಗೆ, ತವರಿನವರಿಗೆ ತಾನು ಹೀಗೆ ಹೋಗ್ತಾ ಇದ್ದೀನಿ ಅನ್ನೋದನ್ನ ಹೇಳಬೇಕು, ಅವರ ಕಂಗಳು ಅರಳುವುದನ್ನು, ಅವರು ತನ್ನನ್ನು ರೇಗಿಸುವುದನ್ನು ಅನುಭವಿಸುವ, ಸುಖಿಸುವ ಕನಸಿಗೆ ಈಗ ಅವಕಾಶ ಎಲ್ಲಿದೆ ? ಅವರಿಗೆಲ್ಲ ಹೇಳದೇ ಹೋಗೋದ್ರಲ್ಲಿ ಮಜಾ ಆದ್ರೂ ಎಲ್ಲಿದೆ ? ಎಂದೆನಿಸಿತು. ಹಾಗಂತ ಒಲ್ಲೆ ಎನ್ನೋಣವೇ ಎಂದರೆ, ಕಾಲಬುಡಕ್ಕೆ ಅದೃಷ್ಟ ಬಂದು ಬಿದ್ದಾಗ, ಒದ್ದು, ಮತ್ತೆ ಅದಕ್ಕಾಗಿ ಹಂಬಲಿಸಿದಂತಾಗುವುದಿಲ್ಲವೇ ಎಂದೂ ಅನ್ನಿಸಿತು.

''ಯಾರೆಲ್ಲ ಹೋಗೋದು... ನಾವು ಇಬ್ರೇನಾ ? ಅಥ್ವಾ...'' ಮೆಲ್ಲಗೆ ಏನೋ ನೆನಪಾಗಿ ಕೇಳಿದಳು.

''ಯಾಕೆ ? ನಾವು ಇಬ್ರೇ ಹೋಗ್ಬೇಕು ಅಂತ ನಿನ್ನ್ ಆಸೆನಾ...'' ಎಂಬ ರವಿಯ ಪ್ರಶ್ನೆಗೆ ಏನು ಉತ್ತರಿಸಬೇಕು ಎಂದೇ ಆಕೆಗೆ ಗಲಿಬಿಲಿ. ಅವಳ ಮನಸ್ಸು 'ಹೌ... ಎಂದು ಉತ್ತರಿಸಲು ತವಕಿಸಿದರೆ, ಇಷ್ಟು ವರ್ಷಗಳ ಒಡನಾಟದಿಂದ ಅವನ ಸ್ವಭಾ... ಅರಿತ ಬುದ್ಧಿ, ಆ ಉತ್ತರ ಅವನಿಗೆ ಒಪ್ಪಿತವಾಗದೆಂದು ತಿಳಿಹೇಳಿತು. ಹೀಗ... ವಿಮಲಾ ಮೌನಕ್ಕೆ ಶರಣಾದಳು.

''ನೋಡು... ಇಬ್ರೇ ಹೋಗ್ಬೇಕು ಅಂದ್ರೆ ಹೋಗೋಣ. ನಂದೇ... ತಕರಾರಿಲ್ಲ, ಆದ್ರೆ ಅದು ದೂರಾಬಾರದ ಊರು; ಕಾಣದ ಜಾಗ್ದಲ್ಲಿ ಗಾಡಿ ಕೆಟ್ಟು ನಿ... ಏನ್ ಮಾಡೋದು ? ನಾನೊಬ್ನೆ ಅದ್ನ ರಿಪೇರಿ ಮಾಡ್ಬೇಕು. ಅಥ್ವಾ ಕಾಡಲ್ಲಿ ಕ... ನಿಂತಿತು ಅಂತಿಟ್ಕೋ. ಆಗ, ನಾನು ನಿನ್ ಬಗ್ಗೆ ಗಮನ ಕೊಡ್ಬೇಕೋ, ಗಾಡಿ ರಿಪೇ... ಬಗ್ಗೆ ಗಮನ ಕೊಡ್ಬೇಕೋ ? ನೀನೇ ಹೇಳು... ಅದ್ಕೇ ಜೊತೇಲಿ ಇಬ್ರಿಗೂ ಪರಿಚ... ಇರೋ ಒಂದು ಕುಟುಂಬ ಇದ್ರೆ... ನಮ್ಗೂ ಸಹಾಯ ಆಗತ್ತೆ. ಅಷ್ಟಕ್ಕೂ ಹಗಲ... ಸುತ್ತಾಡಿದ್ರೂ, ರಾತ್ರಿ ಖಾಸಗಿ ಸಮಯ ನಮ್ಗೆ ಇದ್ದೇ ಇರತ್ತಲ್ಲ. ಏನಂತೀ ? ನೀ... ನಿರ್ಣಯ ಮಾಡು. ನನ್ದೇನೂ ಇಲ್ಲ'' ಎಂದ.

ವಿಮಲಾ ತನ್ನ ಕಲ್ಪನಾಲೋಕದ ಎತ್ತರದಿಂದ ಒಂದಿಷ್ಟು ಕೆಳಕ್ಕಿಳಿದಳು. 'ಓ...ಇ... ತಮ್ಮ ಖಾಸಗಿ ಪ್ರವಾಸ ಅಲ್ಲ' ಎಂದು ಪೆಚ್ಚೆನ್ನಿಸಿತು. ಆತನ ತರ್ಕ ಮತ್ತು ವ್ಯವಹಾರಜ್ಞ... ತಿಳಿಸುವ ಪ್ರಯಾಣದ ನಡುವಿನ ಆತಂಕ ಮತ್ತು ಒತ್ತಡಗಳನ್ನೂ ತಾನು ನಿರ್ಲಕ್ಷಿಸುವಂತಿ... ಹೀಗಿರುವಾಗ, ಆತನ ಸಲಹೆಯನ್ನು ಒಪ್ಪದಿರಲು ಸಾಧ್ಯವೇ ಎಂದುಕೊಂಡ... 'ಏನನ್ನಾದರೂ ಪಡೆಯಬೇಕಾದರೆ, ಇನ್ನೇನನ್ನೋ ಕಳೆದುಕೊಳ್ಳಬೇಕು' ಎಂಬ ಸ... ಅದ್ಯಾಕೋ ಅವಳಿಗೆ ನೆನಪಿಗೆ ಬಂದು, ಮೊದಲ ರಾಜಿಗೆ ಸಿದ್ಧಳಾದಳು.

ಮರುದಿನವೇ ಅವಸರದಲ್ಲಿ ಇವರು ಹೊರಟದ್ದೂ ಆಯ್ತು, ಇವರೊಂ... ಒಂದು ಕುಟುಂಬವನ್ನು ಜೊತೆಗೆ ಹೊರಡಿಸಿದ್ದೂ ಆಯ್ತು. ಆ ಗಡಿಬಿಡಿಯ... ವಿಮಲಾ ತನ್ನ ಓರ್ವ ಗೆಳತಿಗೆ ತನ್ನ ಪ್ರವಾಸದ ವಿಷಯವನ್ನು ಅರುಹಿ, ಅವಳ... ಶುಭಾಶಯ ಸ್ವೀಕರಿಸಿ, ಪುಳಕಿತಳಾಗುವುದನ್ನು ತಪ್ಪಿಸಿಕೊಳ್ಳಲಿಲ್ಲ. ಹಗಲೆಲ್ಲ ಪ್ರಯಾ... ಮಾಡಿ, ರಾತ್ರಿ ವೇಳೆಗೆ ದಾರಿಮಧ್ಯೆಯ ಬೆಳಗಾವಿಯಲ್ಲಿ ತಂಗಿದರು. ರಾತ್ರಿ ಅಷ್ಟೊ... ರವಿಯ ದೂರವಾಣಿ ಕಿಣಗುಟ್ಟಿತು.

ಆ ಕಡೆಯಿಂದ ಬಂದ ಸ್ನೇಹಿತರ ಕರೆಗೆ, ಉತ್ಸಾಹದಿಂದ ಪ್ರತಿಕ್ರಿಯಿಸುತ್ತಿದ್ದ ಆತನ
ಖವನ್ನೇ ಅಚ್ಚರಿಯಿಂದ ನೋಡತೊಡಗಿದಳು ವಿಮಲಾ. ಕ್ಷಣಕ್ಷಣಕ್ಕೂ ಅರಳುವ,
ಲಕಗೊಳ್ಳುವ, ಒಂದಿಷ್ಟು ಹೌದೋ ಅಲ್ಲವೋ ಎಂಬಂತೆ ನಾಚುವ ಭಾವಗಳು ಅಲ್ಲಿ
ರ್ಸತೊಡಗಿದಾಗ, ಆತನನ್ನು ಹೊಸದಾಗಿ ನೋಡುವಂತೆ ನೋಡತೊಡಗಿದಳು.
ರೆ ತಾನು ಮಾತ್ರವಲ್ಲ, ಈತನೂ ತನ್ನ ಗೆಳೆಯರಿಗೆ ಪ್ರವಾಸದ ಸುದ್ದಿ ಮುಟ್ಟಿಸಿದ್ದಾನೆ!
ವರೆ, ತನ್ನಂತೆ ಅವನಿಗೂ ತಮ್ಮ ಈ ನಿಡುಗಾಲದ ದಾಂಪತ್ಯದ ಹಾದಿಯಲ್ಲಿ ಮೊದಲ
ರಿಗೆ ಜೊತೆಗಾತಿ ಕೇಳಿದ ಊರಿಗೆ ಕರೆದೊಯ್ಯುವ ಸಂಭ್ರಮ ಅನುಭವಿಸುತ್ತಿದ್ದಾನೆ!
ರವಾಗಿಲ್ಲವೇ, ತನ್ನವನಿಗೂ ಒಂದಿಷ್ಟು ನಾಚುವಿಕೆ ಬರುತ್ತದೆ' ಎಂದು ಅವಳಿಗೆ
ಸತೊಡಗಿತು. ಅಷ್ಟರಲ್ಲಿ ಆ ಕಡೆಯ ಯಾವ ಮಾತಿಗೋ,

''ಹೌದು ಕಣಯ್ಯಾ, ಈಗ ಹನಿಮೂನ್ ಮಾಡ್ತಾ ಇದ್ದೀವಿ. ನೀವು ನಿಮ್ಮ ಮದ್ವೆ
ದ್ದಲ್ಲೇ ಎಲ್ಲೆಲ್ಲೋ ಕರ್ಕೊಂಡು ಹೋಗಿದ್ರಿ. ನಾನು ಈಗ ಈ ವಯಸ್ಸಲ್ಲಿ... ಹ್ಹ ಹ್ಹ
... ಇಳಿವಯಸ್ಸಿನ ಹನಿಮೂನ್ ಚೆನ್ನಾಗಿರುತ್ತೆ... ಹೂಂ ಹೂಂ... ಬಂದಾಗ
ತಾಡೋಣ'' ಎನ್ನುತ್ತಿದ್ದ.

'ಹನಿಮೂನ್' ಪದ ಕೇಳಿದ ವಿಮಲಾಗೆ ತಕ್ಷಣ ಮೈ ಎಲ್ಲ ಮರಗಟ್ಟಿದಂತೆ
ಸವಾಗತೊಡಗಿತು. ರಪ್ಪನೆ ಕೆನ್ನೆಗೆ ಯಾರೋ ಏಟು ಕೊಟ್ಟಷ್ಟು ಮನಸ್ಸು
ಂದಿತು. ಅದರೊಂದಿಗೆ ಮೈಗೆಲ್ಲ ಹೇಸಿಗೆ ಮೆತ್ತಿಕೊಂಡ ಅನುಭವವೂ
ತೊಡಗಿತು. ತಾನು ದಶಕಗಳಿಂದ ಖಾಸಗಿಯಾಗಿ ಕಟ್ಟಿಕೊಂಡ, ಕಾಪಾಡಿ
ಂಡು, ಜತನ ಮಾಡಿಕೊಂಡು ಬಂದಿದ್ದ ಒಂದು ಸುಕೋಮಲ ಭಾವ, ಬದುಕು,
ಲ್ಲ! ಬದುಕಿನ ಒಂದು ಮಧುರ ಕ್ಷಣವೊಂದು ಹೀಗೆ ಸಾರ್ವಜನಿಕರ ಬಾಯ
-ಅಡಿಕೆಯಾಗಿ, ಸಾರ್ವಜನಿಕವಾಗಿ ಚರ್ಚಿಸುವ ಒಂದು
ಗತಿಯಾಗಿ ಪರಿವರ್ತನೆಗೊಂಡದ್ದು ಅವಳನ್ನು ತೀವ್ರವಾಗಿ
ಸಿಗೊಳಿಸಿತು. ಅವಳ ಮುಖ ಕಳೆಗುಂದಿ, ನಿಸ್ತೇಜ
ಯಿತು. ದೂರವಾಣಿಯಿಂದ ಇತ್ತ ತಿರುಗಿ ವಿಮಲಳತ್ತ
ೀಡಿದ ರವಿಯ ಮುಖದಲ್ಲಿ ಪ್ರಶ್ನಾರ್ಥಕ ಚಿಹ್ನೆ
ೂಡಿತು. ''ಏನಾಯ್ತು? ಯಾಕೆ ಹೀಗಿದ್ದೀ'' ಎಂದ.

''ಏನಾಯ್ತು? ಹೇಗಿದ್ದೀನಿ? ಚೆನ್ನಾಗೇ ಇದ್ದೀನಲ್ಲ.''

''ಸುಮ್ ಸುಮ್ನೆ ಯಾಕೆ ಹೇಳ್ತೀ? ಅತ್ತಿಂದ ಇತ್ತ
ಂಗುವಷ್ಟರಲ್ಲಿ ನಿನ್ ಮೂಡ್‌ಗೆ ಏನಾಯ್ತು? ನನ್ಗೆ
್ ಹಾವಭಾವ ಅರ್ಥ ಮಾಡಿಕೊಳ್ಳೊ ಶಕ್ತಿ ಇಲ್ಲ
ಕ್ಕೊಂಡಿದ್ದೀಯಾ? ಇದುವರ್ಗೆ ಕಿಲಕಿಲ
ತಿದ್ದವ್ಳು ಅಷ್ಟು ಫಕ್ಕನೆ...''

ಇನ್ನು ಸುಮ್ಮನಿರುವುದು ಸರಿಯಲ್ಲ
ದು ಮೆಲ್ಲಗೆ ಹೇಳಿದಳು, ''ಅದೇನು
ತ್ತೆ ನೀವ್ ಮಾತಾಡ್ತಾ ಇದ್ದದ್ದು?''

''ಏನ್ ಮಾತಾಡಿದ್ವಿ? ಆಡಬಾರದ್ದ್ ಏನೂ ಆಡಿದ್
ಪಿಲ್ಲ ನಂಗೆ.''

''ಹೂಂ ಹೂಂ ಮಾಡೋದೆಲ್ಲ ಮಾಡಿಬಿಟ್ಟ್...''

''ಏನ್ ಒಗಟಿನ್ಹಂಗೆ ಮಾತಾಡ್ತೀ; ಏನಿದ್ರೂ ನೆಟ್ಗೆ ನೇರಾನೇರ ಹೇಳೋಕೇನ್ ನಿಂಗೆ.''

''ಅದೇ...ಅದೇ...ಫೋನ್‌ನಲ್ಲಿ ಮಾತಾಡ್ತಿದ್ದಿರಲ್ಲ...''

''ಈ ರಾಗ ಬಿಟ್ಟು ಹೇಳ್ತಿಯಾದ್ರೆ ಹೇಳು ಇಲ್ಲಾಂದ್ರೆ...''

''ಥೂ... ಅಸಹ್ಯ... ಹನಿಮೂನು ಗಿನಿಮೂನು ಅಂತೆಲ್ಲ ಹೀಗೆ ಗಟ್ಟಿಯಾಗಿ ಹರಾಜಿಗೆ
ಪ್ರ ಥರಾ ಮಾತಾಡೋದ? ಅದೂ ಇಷ್ಟು ಗಟ್ಟಿದನೀಲಿ? ಹೇಳ್ಕೊಂಡ್
ಂವಂಥ ವಿಷಯಾನಾ ಅದು?... ಸಮೀಪ ಇದ್ದವ್ರಿಗೆ ಏನ್ ಅನ್ಸುತ್ತೆ ಅಂತನಾದ್ರೂ...''
ಳ ಮಾತು ಪೂರ್ಣವಾಗುವ ಮೊದಲೇ ಆತ ಜೋರಾಗಿ ನಕ್ಕುಬಿಟ್ಟ.

ಅದನ್ನು ಕಂಡಾಗ, ವಿಮಲಾಳ ಕಣ್ಣು ತುಂಬುತ್ತ ಬಂತು. ಅದನ್ನು ಕಂಡು ಸರಕ್ಕನೆ
ನಿಲ್ಲಿಸಿ, ''ಇಲ್ನೋಡು, ನಾನು ಮಾತಾಡಿದ್ರಲ್ಲಿ ಅಸಭ್ಯ ಅನ್ನೋದು ಏನೂ ಇಲ್ಲ. ಸ್ನೇಹಿತ್ರ
ಇಷ್ಟು ತಮಾಷೆನೂ ಮಾಡ್ಬಾರ್ದು ಅಂದ್ರೆ, ಜೀವನ್ದಲ್ಲಿ ಮಜಾನಾದ್ರೂ ಎಲ್ಲಿರತ್ತೆ?
ಕನ್ಹಂಗೆ ಕುಳಿತಿರ್‌ಬೇಕು ಅಷ್ಟೆ. ಅದಲ್ದೆ, ನೀನು ಪಟ್ಟದಲ್ಲಿ ಬೆಳೆದವ್ಳು. ನಿಮ್
ಗಸ್ರ ವಿಚಾರ ಹೆಂಗೋ ನಂಗೊತ್ತಿಲ್ಲ, ನಾವಂತೂ ಸಣ್ಣ ಗುಂಪಿನಲ್ಲಿ ಹೀಗೆ ತಮಾಷೆ
ಡ್ಕೊಳ್ಳೋದು ಮಾಮೂಲು. ಅದಲ್ದೆ ನಾನು ಬೀದೀಲಿ ಮಾತಾಡಿದ್ನ... ರೂಂನಲ್ಲಿ
ಕೂತಲ್ವ ಮಾತಾಡಿದ್ದು... ಬಿಡು ಬಿಡು... ಈ ವಿಚಾರದಲ್ಲಿ ನನ್ನು ನಿನ್ನು ಅಭಿಪ್ರಾಯ
ಯಾವತ್ತೂ ಕೂಡಿಬರೋದಿಲ್ಲ. ನಾನಂತೂ ನಿನ್ ಮಾತು ಒಪ್ಪೋಕೆ ತಯಾರಿಲ್ಲ.''

ರವಿಯ ಬಿಗಿದ ತುಟಿಗಳು ಇಷ್ಟಿಷ್ಟೇ ಸಡಿಲಗೊಂಡವು. ಕಣ್ಣುಗಳು ನಗುವನ್ನು ಉಗುಳತೊಡಗಿದವು. ಅವಳನ್ನು ಹತ್ತಿರಕ್ಕೆ ಎಳೆದುಕೊಂಡು, ''ಖಾಸಗಿತನ ನಮ್ಮಿಬ್ರಿಗೆ ಮಾತ್ರ ಅಲ್ಲಲ್ಲ... ಅವ್ರಿಗೂ ಸಂಬಂಧಿಸಿದ್ದೇ ತಾನೇ?... ಮತ್ತೆ ಒಂದ್ ಮಾತು ನೆನಪಿಟ್ಕೋ... ನನ್ ಮೇಲೆ ನಂಬಿಕೆ ಇಡು... ನಾನೇನೂ ಹಗುರದ ವ್ಯಕ್ತಿ ಅಲ್ಲ.''

''ಛೆ... ಛೆ... ನಾನೆಲ್ಲಿ ಹಾಗಂದೆ?''

''ಅದ್ನೆಲ್ಲ ಅನ್ಬೇಕಾಗಿಲ್ಲ... ತಿಳೀತದೆ... ನೀನ್ ಇದ್ಕೆಲ್ಲ ಚಿಂತೆ ಮಾಡೋದು ಬಿಟ್ಟು, ಹತ್ರ ಬಾ.''

''ನಿಮ್ಗೆ ಗಂಡಸ್ರಿಗೆಲ್ಲ ಇದೊಂದೇ ನೆನಪಾಗೋದು. ಹನಿಮೂನ್ ಅಂದ್ರೂ ಇದೇ ನಿಮ್ಗೆ...ಇದು ಬಿಟ್ಟ್ ಬೇರೆ ಏನಾದ್ರೂ ಇದೇಯಾ?''

''ಬೇರೆ ಏನ್ ಬೇಕು ನಿಂಗೆ?... ಅದೇ ಸುಮ್ನೆ ಹತ್ರ ಕುಂತ್ಕೋ, ಕೈಯಲ್ಲಿ ಕೈಹಿಡ್ಕೊಂಡು ಓಡಾಡು....'' ಅವನ ಮಾತಲ್ಲಿ ಗೇಲಿ ಸ್ಪಷ್ಟವಾಗಿ ಇಣುಕಿತು.



ಹೌದು... ಅದ್ರಲ್ಲಿ ತಪ್ಪೇನು? ಮದುವೆಯ ಆರಂಭದ ದಿನಗಳ ಸರಸ ದಿನಗಳೆದಂತೆ ಮಾಸಬೇಕೇಕೆ? ಇಂದಿಗೂ ಆತನ ಸಾಮೀಪ್ಯ ತನಗೆ ಅಗಾಧ ಹಿತ ನೀಡುತ್ತದೆ ಎಂದಾದರೆ, ಆತನಿಗೇಕೆ ಅದು ಬೇಡ? ಅಂದು ಆರಂಭದ ದಿನಗಳಲ್ಲಿ ಮುಟ್ಟಿಸಿಕೊಳ್ಳುವ, ಮುಟ್ಟುವ ಕ್ರಿಯೆಯಲ್ಲಿ ಮುಜುಗರಗಳು ತನ್ನಲ್ಲಿ ತುಂಬಿಕೊಂಡಾಗ, ಅದಕ್ಕಾಗಿ ಒತ್ತಾಯಿಸುತ್ತಿದ್ದ ಆತನೇ, ಈಗ ಅದಕ್ಕಾಗಿ ತಾನು ಹಪಹಪಿಸಿದರೂ ಜಡ್ಡುಗಟ್ಟುತ್ತಿರುವುದು ಯಾಕೆ?... ಮಕ್ಕಳ ಜೊತೆಯ ಆತನ ಸರಸ, ಅವರನ್ನು ಮುಟ್ಟಿ, ತಟ್ಟಿ, ರೇಗಿಸಿ ಆತ ಪಡುವ ಸುಖಗಳೆಲ್ಲ ಒಂದು ಕಾಲದಲ್ಲಿ ತನಗೆ ಮಾತ್ರ ಮೀಸಲಾಗಿತ್ತಲ್ಲವೇ. ಈಗ ಅಂಥ ಕ್ಷಣಗಳಲ್ಲಿ ತನಗೂ ಸಮಪಾಲು ಇರಲಿ ಎಂದು ಕಣ್ಣಲ್ಲಿ ಆಸೆ ತುಂಬಿ ನಿಂತರೆ, ಕಾಣದಂತೆ ಮಾಡುತ್ತಾನಲ್ಲ. ಇದೇನು ತನ್ನ ಮನಸ್ಸೇ ಕೆಟ್ಟಿದೆಯೆ? ತನ್ನ ಅಪೇಕ್ಷೆಗಳೇ ವಿಪರೀತದವುಗಳೇ ಎಂದು ಕೊಂಡಳು. ನೋವಿದ್ದ ಹಲ್ಲಿನೆಡೆಗೇ ನಾಲಗೆ ಸರಿಯುವಂತೆ ಮನಸ್ಸು ಮತ್ತೆ ಮೂಲದ ವಿಚಾರದತ್ತಲೇ ಹೊರಳಿತು... ಈತನಿಗೆ ಇಂತಹ ಖಾಸಗಿ ಕ್ಷಣಗಳನ್ನು ಹೀಗೆ ಬೀದಿಯಲ್ಲಿ ಚೆಲ್ಲಾಡಲು ಹೇಗೆ ತಾನೆ ಮನಸ್ಸು ಬಂತು? ಅಷ್ಟಕ್ಕೂ ತನ್ನೊಂದಿಗೆ ಮಹಾಬಲೇಶ್ವರಕ್ಕೆ ಬರುವ ಪ್ರಯಾಣದ ಸುಖವನ್ನು ಅನುಭವಿಸುವುದು ಆತನಿಗೆ ಹೆಚ್ಚು ಸುಖದ್ದೋ? ಅಥವಾ ಕೊನೆಗೂ ತಾನು ಮಡದಿಯ ಅಪೇಕ್ಷೆಯನ್ನು ಈಡೇರಿಸುವುದಕ್ಕೆ ಸಾಧ್ಯವಾಯ್ತಲ್ಲ ಎಂಬ ವಿಚಾರವೇ ಹೆಚ್ಚು ಸುಖ ನೀಡುತ್ತದೆಯೋ? ಎಂಬ ಪ್ರಶ್ನೆ ಅವಳನ್ನು ತಿನ್ನತೊಡಗಿತು. ಹೀಗಾಗಿ ಹಾಸಿಗೆಗೆ ಒರಗಿದಾಗ, ಎಂದಿನಂತೆ ನೀಡಿದ ಆತನ ತೋಳು ಬೇಡವೆನಿಸಿ, ಹಾಸಿಗೆಯ ಒಂದು ತುದಿಯಲ್ಲಿ ಒರಗಿಕೊಂಡುಬಿಟ್ಟಳು. 'ತಗೋ ನಿನ್ನ ಹನಿಮೂನು' ಎಂದು ಮನದಲ್ಲಿ ಹೇಳುವುದನ್ನೇನೂ ಬಿಡಲಿಲ್ಲ. ಈಗ ಎರಡನೆಯ ರಾಜಿಗೆ ವಿಮಲಾ ಸಿದ್ಧಳಾದಳು.

ಮತ್ತೆ ಆರಂಭಗೊಂಡ ಪಯಣ, ನಿಲುಗಡೆಗೊಂಡದ್ದು ಮಧ್ಯಾಹ್ನಕ್ಕೆ. ದಾರಿಯುದ್ದಕ್ಕೂ ಪ್ರಕೃತಿಯ ಸಿರಿ ಎಲ್ಲರ ಮನವನ್ನೂ ಸೂರೆಗೊಂಡಿತ್ತು. ಹಿಂದಿನ ದಿನದ ರೇಜಿಗೆಯನ್ನು ಸಂಪೂರ್ಣ ಅಳಿಸಿಹಾಕಿತ್ತು. ಅಲ್ಲಲ್ಲಿ ನಿಂತು ಫೋಟೋ ಕ್ಲಿಕ್ಕಿಸಿ ಸಂಭ್ರಮಿಸಿದರು.

ರವಿಯೊಂದಿಗೆ ತಾನು ಒರಗಿನಿಂತು ಫೋಟೋ ತೆಗೆಸಿಕೊಳ್ಳುವ ಬಯಕೆ ಈಕೆಯಲ್ಲಿ ತುಂಬಿ ತುಳುಕಾಡುತ್ತಿತ್ತು. ಆತನೋ ಎಲ್ಲರೊಂದಿಗೆ ಓಡಾಡುತ್ತ, ಎಲ್ಲರ ಫೋಟೋ ಹೊಡೀತಾ, ಹೊಟ್ಟೆ ತುಂಬಿಸಿಕೊಳ್ತಾ ಇದ್ದ. ಆತನ ಕೈಯಲ್ಲಿದ್ದ ಕ್ಯಾಮರಾ ಕಿತ್ತುಕೊಂಡ ವಿಮಲಾ, ರವಿಯ ಫೋಟೋ ತೆಗೆಯಹೊರಟಾಗ, ''ಬಾ ಬಾ ತಡವಾಗುತ್ತೆ... ಇನ್ನೂ ಅದೆಷ್ಟು ದೂರ ಇದೆ'' ಎಂದ. ಪುಳಕ್ಕನೆ ತುಂಬಿದ ಕಣ್ಣನ್ನು ಕಂಡೊಡನೆ, ''ಹೋಗ್ಲಿ, ತೆಗೆದುಬಿಡು'' ಎಂದು ಬಂದ. ಈಕೆಯೋ, ಉಕ್ಕಿ ಬಂದ ಹಾಲಿಗೆ ನೀರು ಚೆಲ್ಲಿದಂತಾದ ಭಾವಗಳಿಂದ, ''ಬೇಡ ಬಿಡು'' ಎಂದು ಹೊರಟುಬಿಟ್ಟಳು. ''ಮುಟ್ಟಿದರೆ ಮುನಿಯಂತಾಡುವೆ'' ಎಂದೆಂದು ಆತನೂ ಚುರುಕು ಮುಟ್ಟಿಸಿದ.

ಒಂದು ಕ್ಷಣಕ್ಕೆ ಒರಟನಂತೆ ವರ್ತಿಸುವ, ಮರುಕ್ಷಣವೇ ಒಂದಿಷ್ಟು ತನ್ನ ಮನಸ್ಸನ್ನು ಓದಿ, ಸ್ಪಂದಿಸಲು ಪ್ರಯತ್ನಿಸುವ ಆತನನ್ನು ಅರ್ಥೈಸುವುದೇ ವಿಮಲಾಗೆ ಕಷ್ಟವಾಗುತ್ತಿತ್ತು. ಸಮಾಜದಲ್ಲಿ ಯಾರ ಮುಂದಾದರೂ ಆತನ ಬಗ್ಗೆ ದೂರು ಹೇಳೋಣವೆಂದರೆ, ಯಾರಿದ್ದಾರೆ? ಇದ್ದಾರು ಒಬ್ಬಿಬ್ಬರು. ಆದರೆ, ಹೇಳುವುದಾದರೂ ಏನನ್ನು? ತನಗೆ ಘನವೆನಿಸುವ ಸಂಗತಿಗಳು ಅವರ ದೃಷ್ಟಿಯಲ್ಲಿ ಕೇವಲ ಕ್ಷುಲ್ಲಕ! (ಕೇಳಿದರೆ ನಕ್ಕುಬಿಟ್ಟಾರು). ಅಂಥವರಲ್ಲಿ ಹೇಳಿ ಸುಖವಿದೆಯೇ? ತನಗಾದರೂ ಬೆರಳೆಣಿಸುವಂಥ ದೋಷಗಳು ಆತನಲ್ಲಿ ಇವೆ ಅನಿಸಿದೆಯೇ? ಉಹೂಂ... ಇಲ್ಲ, ಇವೆ ಅನಿಸಿದ ದೋಷಗಳೂ ಆತನಲ್ಲಿ ಮಾತ್ರ ಕಾಣುವಂಥವಲ್ಲ; ಎಲ್ಲರಲ್ಲೂ ಹೆಚ್ಚುಕಡಿಮೆ ಪ್ರಮಾಣದಲ್ಲಿ ಹಾಜರಿರುವಂಥವೇ. ಹೀಗಾಗಿ ಅತ್ತ ಇತ್ತಲ, ಗೆಳತಿಯರ, ಸಮಾಜದ ಹತ್ತಾರು ದಾಂಪತ್ಯಗಳ ಕುರಿತು ತಿಳಿದ ಅಷ್ಟಿಷ್ಟು ಮಾತುಗಳಿಂದ, ತನಗೆ ಅವನ ಬಗ್ಗೆ ಹೇಳಬಹುದಾದ ಗಂಭೀರವಾದ ದೂರು ಯಾವುದೂ ಇಲ್ಲ. ಆದರೂ....ಇಷ್ಟೆಲ್ಲ ಪ್ರೀತಿ, ಅಭಿಮಾನ, ಅಕ್ಕರೆಗಳ ನಡುವಲ್ಲೂ ಏನೋ ಒಂದು ಕೊರತೆ, ಬಾಯಾರಿಕೆ ಆತನ ಬಗ್ಗೆ ತನ್ನಲ್ಲಿ ಉಳಿದೇಬಿಟ್ಟಿದೆಯಲ್ಲ ಎಂದುಕೊಳ್ಳುತ್ತಾಳೆ. ಅಂತಹ ಕ್ಷಣಗಳಲ್ಲಿ ಗೆಳತಿ ಮಂಜುಳಾ ನೆನಪಾಗುತ್ತಾಳೆ. ಕೆಲವು ವರ್ಷಗಳ ಮುಂಚೆಯೇ ಇಂತಹುದೇ ಒಳಗುದಿಯನ್ನು ಆಕೆ ತನ್ನ ಮುಂದೆ ತೆರೆದಿಟ್ಟಿದ್ದಳಲ್ಲ! ಅದರ ಬಿಸಿ ಆಗ ತನ್ನನ್ನು ತಟ್ಟಿರಲಿಲ್ಲ! ಬಹುಶಃ ಇದು ಬಹುತೇಕರ ಬದುಕಿನ ಸತ್ಯವೇನೋ ಎಂದುಕೊಂಡಳು ವಿಮಲಾ.

ಎಲ್ಲರೂ ಬಂದು ನಿಂತದ್ದು, ಬೆಟ್ಟ ಹತ್ತಲು ಇದ್ದ ರೋಪ್‌ರೈಲಿನ ಮು
ಗಂಟೆಗಟ್ಟಲೆ ಕಾದು, ರೈಲು ಬಂದಾಗ ಎಲ್ಲರೂ ಓಡತೊಡಗಿದರು. ಗುಂ
ಕೊನೆಯವಳಾಗಿ ಉಳಿದ ವಿಮಲಳನ್ನು ಅಧಿಕಾರಿ, ಒಂದು ಬೋಗಿಗೂ, ರವಿ
ಇನ್ನೊಂದು ಬೋಗಿಗೂ ಹಾಕಿಬಿಟ್ಟ. ಹಾಂ ಹೂಂ, ಬೇಕು, ಬೇಡ ಎನ್ನುವ ಮೊ
ಆದ ಈ ವರ್ಗೀಕರಣಕ್ಕೆ ಬಾಯಿ ಕಳೆದುಕೊಂಡು ವಿಮಲಾ ತನ್ನನ್ನೇ ಮರೆತುಬಿ
ತನ್ನ ಪಕ್ಕದಲ್ಲಿದ್ದವರತ್ತ ನೋಡಿದಳು. ಯುವ ದಂಪತಿಗಳ ಜೋಡಿ, ಕಣ್ಣಲ್ಲಿ
ಹುದುಗಿಸಿ ಕುಳಿತಿದ್ದಾರೆ. ಇನ್ನೊಂದೆಡೆ ಅಕ್ಕ-ತಂಗಿಯರು ಹರಟೆಯಲ್ಲಿ ಮುಳುಗಿದ
ರವಿ ಅಧಿಕಾರಿಯ ಬಳಿ 'ನಾವಿಬ್ರೂ...' ಅಂತೇನೋ ಹೇಳುವುದು
ಆಶಾಭಾವದಿಂದ ಅತ್ತ ನೋಡಿದಳು. ಉಹೂಂ. ನೋಡ್ರೀ... ಜಾಗ ಇ
ಕೂತ್ಕೋಬೇಕು. ಅಷ್ಟಕ್ಕೂ ಕಾಲುಘಂಟೆಯ ಪ್ರಯಾಣ. ಮತ್ತೆ ಒಟ್ಗೇ ಇರ್ತೀ
ಎನ್ನುತ್ತ ಸಾಗಿದ. ರವಿ ನಿರುಪಾಯನಾಗಿ, ತನಗೆ ತೋರಿದ ಜಾಗಕ್ಕೆ ಹೋಗಿ,
ಮಕ್ಕಳ ಜೊತೆ ಮಾತಾಡ್ತಾ, ಅದುವರೆಗಿನ ಪ್ರಕರಣವನ್ನೇ ಮರೆತುಬಿಟ್ಟಂತೆ ಕಂಡ.

'ಅಯ್ಯೋ, ಈ ಸುಖವನ್ನು ಸುರಿದುಕೊಳ್ಳುವುದಕ್ಕಾಗಿ ತಾನು ಇಲ್ಲಿ
ಬಂದದ್ದಾಯ್ತೇ' ಎಂಬ ಭಾವ ಒಳಗಿನಿಂದ ಒತ್ತಿಬರುತ್ತಿದ್ದಂತೆ, ವಿಮಲಾಳ ಕಣ್ಣು
ಗೊಳ್ಳತೊಡಗಿತು. 'ಅತ್ತ ಇತ್ತ ಹಿಂದೆ ಮುಂದೆ ಎಲ್ಲರೂ ತಮ್ಮ ತಮ್ಮ ಪ್ರಿಯರೊಂ
ಬಾಂಧವರೊಂದಿಗೆ ನಗುತ್ತ ಪ್ರಯಾಣದ ಮೋಜನ್ನು ಅನುಭವಿಸುತ್ತಿದ್ದರೆ,
ಮಾತ್ರ ಹೀಗೆ ಒಬ್ಬಂಟಿಯಾಗಿ, ವಿರಹಿಣಿಯಂತೆ, ತಬ್ಬಲಿಯಂತೆ ಪ್ರಯಾಣ ಮ
ಬೇಕಾಯ್ತೇ? ಇದು ಹನಿಮೂನಿನ ಒಂದು ಸ್ಯಾಂಪಲ್ಲೇ? ಇದಕ್ಕಿಂತ ಸಾವಿರಪ
ಹಿತವಾಗಿ ಸುಖವಾಗಿ ಮನೆಯಲ್ಲೇ ಇದ್ದೆವಲ್ಲ. ಸಾವಿರ ಸಾವಿರಗಳನ್ನು ಸುರಿದು
ದುಃಖ ಅನುಭವಿಸಲು ಇಲ್ಲಿವರೆಗೆ ಬರಬೇಕಿತ್ತೇ'? ಹೀಗೆ ಒಂದರ
ಒಂದರಂತೆ ನುಗ್ಗಿದ ಭಾವಗಳ ಒತ್ತಡ ತಾಳಲಾರದೆ, ವಿಮಲಾ ಅಕ್ಷರಶಃ ಕಣ್ಣೀರ್ಗರೆ
ತೊಡಗಿದಳು. ಆದರೆ ಅದ್ಯಾವುದಕ್ಕೂ ಹತ್ತಿರದವರು ಗಮನಕೊಡದಿರುವ
ಅವಳಲ್ಲಿ ಒಂದು ರೀತಿಯ ಬಿಡುಗಡೆಯನ್ನೂ, ತಬ್ಬಲಿತನವನ್ನೂ ಏಕಕಾ
ಉಂಟುಮಾಡಿದವು. ಬೆಟ್ಟದ ತುದಿಗೆ ಹೋಗಿ ರೈಲು ನಿಂತಾಗ, ಮುಂದೆ

ೀಡಲೂ ಉತ್ಸಾಹವೇ ಉಳಿಯದೆ ವಿಮಲಾ ಕುಳಿತುಬಿಟ್ಟಳು. ಗುಂಪಿನವರೆಲ್ಲ ದಾಗ, ಮತ್ತೆ ರೈಲು ಬೇಡ, ಮೆಟ್ಟಲ್ಲಿ ಇಳಿಯೋದೆ ಸರಿ ಎಂದು ನಿರ್ಧಾರವಾಯ್ತು. ಾವರೇನು' ಎಂದೇ ಹೊರಟ ಅವಳ ಹತ್ತಿರ ಬಂದು ರವಿ ತನ್ನ ಕೈನೀಡಿದ. ಒಮ್ಮೆ ನ ಮುಖವನ್ನೇ ನೋಡಿದಳು. 'ಹೂಂ' ಎಂದು ಆತ ತಲೆ ಅಲ್ಲಾಡಿಸಿದೊಡನೆ, ರೆಗಿನ ದುಮ್ಮಾನಗಳೆಲ್ಲ ಹತ್ತಿಯಷ್ಟು ಹಗುರಾಗಿ ನೂರಾರು ಮೆಟ್ಟಿಲುಗಳನ್ನು ಅವನ ೀಳಲ್ಲಿ ಕೈ ಸಿಲುಕಿಸಿ ವಿಮಲಾ ಇಳಿಯತೊಡಗಿದಳು.

''ಇದೇ ನೋಡಿ ಮಹಾಬಲೇಶ್ವರ'' ಎಂದ ರವಿ.

ಕಣ್ಣರಳಿಸಿ ನೋಡಿದಳೀಕೆ. ''ಇಲ್ಲಿ ಏನೇನು ನೋಡುವ ಜಾಗಗಳಿವೆ'' ಎಂದಳು.

''ನೋಡೋಕೆ ಏನಿದೆ ? ಹಾಗೆ ವಿಶೇಷ ಏನಿಲ್ಲ. ದಾರಿಯುದ್ದಕ್ಕೂ ನೋಡಿದ್ದೇ ಇಲ್ಲೂ.''

''ವಿಸಿಟಿಂಗ್ ಸ್ಪಾಟ್ ಅಂತ ಇಲ್ವಾ ?''

''ಯಾಕಿಲ್ಲ, ಗೈಡ್‌ನ ಕೇಳಿದ್ರೆ ಹತ್ತಾರು ಜಾಗ ಹೇಳ್ತಾರೆ. ಎಲ್ಲಾ ಇದರ್ದ್ದೇ ಒಂದೊಂದು ಬಿ. ಬಂದಿರೋದ್ಕೆ ಸುಮ್ನೆ ಒಂದೆರಡು ಜಾಗ ನೋಡಿದ್ರೆ ಮುಗೀತು. ಅಷ್ಟಕ್ಕೂ ಸೀಸನ್ ಮುಗೀತು. ಅಡ್ಡಾಡೋ ಹಾಗೇ ಇರಲ್ಲ. ಬನ್ರಿ ಬನ್ರಿ... ಬೇಗ್ಬೇಗ ಡು, ಒಂದು ಜಾಗ ನೋಡೋಕೆ ಹೋಗೋಣ.''

''ನಾವಿಲ್ಲಿ ಎಷ್ಟು ಹೊತ್ತು ಇರೋದು ?''

''ನಾಳೆ ಮಧ್ಯಾಹ್ನದವರ್ಗೂ ಎಷ್ಟು ಬೇಕೋ ತಿರ್ಗಾಡಿ ಧ್ಯಾಹ್ನಕ್ಕೆ ರೈಟ್ ಎಬೌಟ್ ಟರ್ನ್.''

ಆಗಲೇ ಸಮಯ ನಾಲ್ಕಾಗುತ್ತ ಬಂದಿತ್ತು. ಎಲ್ಲರೂ ರದಲ್ಲೇ ಇದ್ದ ಕೊಳದೆಡೆಗೆ ಸಾಗಿದರು. ಇವರಿಗಿಂತ ಂಚಿತವಾಗಿ ಅಲ್ಲಿಗೆ ತಲುಪಿದ್ದ ಕೆಲವರು ಆಗಲೇ ೀಣಿಗಳಲ್ಲಿ ವಿಹರಿಸುತ್ತಿದ್ದರು. ದೋಣಿ ವಿಹಾರ ಮಾಡ್ತಾ ಹತ್ತಾರು ಜೋಡಿಗಳನ್ನು ನೋಡ್ತಾ ಕಾಲ ಕಳೆಯೋದೇ ಅನಿಸಿತು. ಪಕ್ಕದಲ್ಲಿ ಕೂತ ರವಿಯ ಸಾಮೀಪ್ಯ ೀಯ ಸುಖ ನೀಡಿದಂತಿತ್ತು. ಮಾತಾಡದೆಯೂ ಎಷ್ಟೋ ತಾಡಿದಂಥ ಅನುಭವ. ಪಕ್ಕದಲ್ಲೇ ಕೂತ ಆತನ ಕೈ ಲೆ ಕೈ ಹಾಕಬೇಕು, ತೋಳು ಹಿಡಿಯಬೇಕು ಎಂಬ ಂಕ್ಷೆ ಒಂದು ಕಡೆಗಾದರೆ, ಅದರ ಮೇಲೆ ನಿಯಂತ್ರಣ ತ್ಯ ಎಂಬ ವಿವೇಚನೆ ಇನ್ನೊಂದು ಕಡೆಗೆ. ಅವನಿಗೂ ತಹ ಅಪೇಕ್ಷೆಗಳು ಏಳುವುದಿಲ್ಲವೇ ? ಇದ್ದೂ ನಿಯಂತ್ರಿಸಿ ಳ್ಳುತ್ತಾನೆಯೇ ಅಥವಾ ಅವನಿಗೆ ಇದೆಲ್ಲ ಎಳಸುತನ ಸುತ್ತದೆಯೇ, ಹಾಗಿದ್ದರೆ ಅವನಿಗೇ ಬೇಡದ್ದನ್ನು ಒತ್ತಾಯಿಸಿ ಸುವುದರಲ್ಲಿ ಮತ್ತು ಪಡೆಯುವುದರಲ್ಲಿ ಹಿತವಿದೆಯೇ ?ಸುಖವಿದೆಯೇ ? ಹೀಗೆ ತಪ್ಪುಗಳ, ನಾಗರಿಕ ಅನಾಗರಿಕತೆಗಳ ತರ್ಕದಲ್ಲಿ ಸಮಯ ಮುಗಿದೂ ಹೋಯ್ತು. ಅದೇ ಮೊದಲ ಬಾರಿಗೆ ಸಮಯವೊಂದು ಮರೀಚಿಕೆಯಾಗಿ ಆಕೆಗೆ ಕಾಣ ಡಗಿತು. ದಶಕಗಳ ಕಾಲದ ಕನಸಿನ ಊರಿಗೆ ಬಂದರೂ, ಅಲ್ಲಿ ತನಗಿರುವುದು ಲ ಇಪ್ಪತ್ತನಾಲ್ಕು ಗಂಟೆಗಳ ಅವಕಾಶ. ಏನೇನು ನೋಡಲಿ, ಏನೇನು ಮಾಡಲಿ ? ಗೆ ಸಮಯವನ್ನು ತನಗೆ ಬೇಕಾದಂತೆ ಬಗ್ಗಿಸಲಿ ? ಎಂದು ವಿಮಲಾಗೆ ಅನಿಸ ಡಗಿತು. 'ಇದೆಲ್ಲಿಯ ಭೂತವಪ್ಪಾ' ಎಂದೂ ಅಂದುಕೊಂಡಳು. ದಿನವೂ ಅಲಾರಂ ಡೆದೊಡನೆ ಏಳು, ಗಂಟೆಯ ಮುಳ್ಳಿನ ಜೊತೆ ಮುಟ್ಟಾಟ ಆಡುವಂತೆ, ತಿಂಡಿ ಡು, ಅಡುಗೆ ಮಾಡು, ಆಫೀಸಿಗೆ ಓಡು, ಅಲ್ಲಿಯ ಒತ್ತಡಗಳನ್ನು ನಿಭಾಯಿಸು, ಕೆ ಬರುವಾಗಲೇ ತರಕಾರಿ ತಾ, ಕಾಫಿ ಮಾಡು, ರಾತ್ರಿ ಅಡುಗೆ ಮಾಡು, ಬಡಿಸು... ಥೂ ಥೂ... ಬರೀ ಇದೇ ಓಟವೇ ಆಯ್ತು. ನಾಲ್ಕು ದಿನ ರಜೆ ಇದೆ ಅಂತ ಬಂದ್ರೆ, ಲ್ಲೂ ಇದೇ ಮುಟ್ಟಾಟವೇ ಆಯ್ತಲ್ಲ. ಇದೂ ಒಂದು ಬದುಕೇ ಎಂದುಕೊಂಡಳು.

ಇಲ್ಲಿಗೆ ತಾನು ಬರಬೇಕೆಂದು ಕನಸಿದ್ದಾದರೂ ಯಾಕೆ ಎಂದು ತನ್ನನ್ನೇ ಕೇಳಿ ಂಡಳು. ಯಾರಿಗೂ ಹೇಳದ, ಹೇಳಲಾಗದ, ಯಾರೊಂದಿಗೂ ಹಂಚಿಕೊಳ್ಳಲಾಗದ ದು ಆಸೆ ಅವಳನ್ನು ಇಲ್ಲಿಯವರೆಗೆ ಎಳೆದುತಂದಿತ್ತು. ಅದು ನಾಲ್ಕೈದು ವರ್ಷಗಳ ದಿನ ಸಂಗತಿ. ಅವಳು, ರವಿ ಮತ್ತು ಮಗಳು ಬಿಳಿಗಿರಿರಂಗನ ಬೆಟ್ಟಕ್ಕೆ ಹೋಗಿದ್ದರು. ಯ ವಾತಾವರಣದ ಅರಿವಿದ್ದು, ಸಾಕಷ್ಟು ತಯಾರಿ ಮಾಡಿಕೊಂಡೇ ೀಗಿದ್ದರು. ಆದರೂ ಇವರು ಹೋದ ಹಿಂದಿನ ದಿನ ಮಳೆಬಿದ್ದ ಕಾರಣ, ಾವರಣವು ಮರಗಟ್ಟಿಸುವಂಥ ತಣ್ಣಗಿತ್ತು. ಸ್ವೆಟರ್, ಶಾಲು, ಟೋಪಿಯನ್ನು ಹೊದ್ದೂ ಗಡಗಡ ನಡುಗುತ್ತಿದ್ದ ಮಗಳು ಓಡಿ ಹೋಗಿ ಅಪ್ಪನ ಎದೆಯಲ್ಲಿ ಹುದುಗಿಕೊಂಡಿದ್ದಳು. ಅವಳನ್ನು ಹೀಗೆ ತಬ್ಬಿಕೊಂಡು ಸಂಭ್ರಮಿಸುತ್ತಿದ್ದ ಗಂಡನತ್ತ ನೋಡಿದಾಗ, ತನ್ನನ್ನು ನೋಡಿ ಕಣ್ಣು ಹೊಡೆದಿದ್ದ. ಆ ಕ್ಷಣಕ್ಕೆ ಅವಳ ಜಾಗದಲ್ಲಿ ತಾನಿದ್ದಿದ್ರೆ ಅಂತ ತನಗನಿಸಿದಂತೆಯೇ ಅವನಿಗೂ ಅನಿಸಿದೆ ಎಂದು ಅವಳ ಮನಸ್ಸು ಹೇಳಿತ್ತು. ಈ ಬಾರಿಯ ಪ್ರವಾಸದಲ್ಲಿ ಅಂತಹ ಒಂದು ಝುಮ್ಮೆನ್ನಿಸುವ ಕ್ಷಣಕ್ಕಾಗಿ, ಅನುಭವಕ್ಕಾಗಿ ಆಕೆ ಹಪಹಪಿಸುತ್ತಿದ್ದಳು. ಇವೆಲ್ಲ ನೆನಪಾಗತೊಡಗಿದಂತೆ ಕ್ಷಣಕ್ಷಣಕ್ಕೂ ವಿಮಲಾ ಅಸ್ವಸ್ಥಳಾಗತೊಡಗಿದಳು. ತನ್ನ ಬದುಕಿನ ಅಮೂಲ್ಯ ಕ್ಷಣಗಳು, ಕನಸಿನ ಅಮೂಲ್ಯ ತುಣುಕುಗಳು ಹೀಗೆ ತನ್ನ ತೆಕ್ಕೆಗೆ ಸಿಗದೆ, ಅಮೂರ್ತದಂತೆ ಬಯಲಾಗುತ್ತ ಹೋಗುವುದನ್ನು ತಾಳಿಕೊಳ್ಳುವ ಶಕ್ತಿ ಅವಳಲ್ಲಿ ಇಲ್ಲವಾಯಿತು. ಆ ದಿನವನ್ನು, ಕ್ಷಣವನ್ನು, ಆ ಕ್ಷಣದೊಂದಿಗೆ ಜೊತೆಗಾರನೊಂದಿಗಿನ ಸಾಮೀಪ್ಯವನ್ನು ಹಿಡಿದಿಡಲು ಬಯಸಿದಳು. ಅವಳು ಏನೇನೋ ಹೇಳಬಯಸಿದ್ದಳು, ಆತನಿಂದ ಕೇಳಬಯಸಿದ್ದಳು. ಆದರೆ ಹಾಸಿಗೆಗೆ ಬರುವವರೆಗೂ ಅವರದು ಸಾರ್ವಜನಿಕ ಬದುಕಾಗಿತ್ತು; ಅದಕ್ಕಾಗಿ ಸ್ವನಿಯಂತ್ರಣ ಇಬ್ಬರಿಗೂ ಅನಿವಾರ್ಯವಾಗಿತ್ತು. ರಾತ್ರಿ ಆತ ತೋಳು ನೀಡಿದಾಗ, ಅದರ ಮೇಲೆ ಕಣ್ಣೀರಿನ ಎರಡು ಬಿಂದುಗಳು ಉರುಳಿದವು. ರವಿಗೆ ಉದ್ವಿಗ್ನಗೊಳ್ಳಲು ಅಷ್ಟೇ ಸಾಕಾಯ್ತು. ಬೆರಳಿಂದ ಮುಟ್ಟಿ ನೋಡಿದ. ಅವಳ ನಿಯಂತ್ರಣವನ್ನು ಮೀರಿ ಹೊರಚಿಮ್ಮಿದ ಕಣ್ಣೀರು ಆತನನ್ನು ವ್ಯಗ್ರನನ್ನಾಗಿಸಿತು.

''ಸಾರಿ, ಸಾರಿ, ನಾನು ಅಳ್ತಾ ಇಲ್ಲ.. ಸುಮ್ನೇ...'' ಅವಳು ತೊದಲತೊಡಗಿದಳು.

''ಥತ್... ತೆಗ್ದಿಯಲ್ಲ ನಿನ್ನ ಹಳೇ ರಾಗ. ಎಲ್ಲಿಗೆ ಹೋದ್ರೂ ನಿಂದು ಇದೇ ಗೋಳು. ನನ್ ಮೂಡ್ ಎಲ್ಲ ಹಾಳ್‌ಮಾಡ್ದೆ. ಈ ಸುಖಕ್ಕೆ ಇಲ್ಲಿಗ್ಯಾಕೆ ಬರ್ಬೇಕು ಅಂತ ಹೇಳ್ತಿದ್ದೆ? ಅದೇನ್ ನಿಂಗೆ ಬೇಕಿತ್ತು ಅಂತ ನೆಟ್ಗೆ ಒದರಿದ್ರೆ ಅದ್ನ ಮಾಡ್‌ಬಹ್ದು. ಅದ್ ಬಿಟ್ಟು... ಅಳೋದ್ ಬಿಟ್ಟು ಮಾತಾಡೋಕೆ ಬರಲ್ವಾ ನಿಂಗೆ... ಒಟ್ನಲ್ಲಿ ಯಾಕಾದ್ರೂ ಬಂದೆ ಅಂತ ಅನ್ನಿಬಿಡ್ತೀಯಾ'' ಆತ ಅಬ್ಬರಿಸುತ್ತಲೇ ಹೋದ; ಈಕೆ ಕನಸಿನ ಶಿಖರದಿಂದ ಪ್ರಪಾತಕ್ಕೆ ಜಾರುತ್ತಲೇ ಹೋದಳು.

ಮತ್ತೆ ಬೆಳಗು. ಹೊಸ ಬೆಳಕು ತಂದೀತೆ ಎಂದು ನಸುಕಿನಲ್ಲೇ ಎದ್ದ ವಿಮಲಾ ಪೂರ್ವದತ್ತ ಮುಖ ಮಾಡಿ ಕಿಟಕಿ ಬಳಿ ಕೂತಳು. ತಮ್ಮನ್ನು ಹುಡುಕಿ ಬಂದ ಗೈಡ್‌ಗೆ ''ನೋಡಪ್ಪ, ನಾವು ಹನ್ನೆರಡು ಗಂಟೆಗೆ ವಾಪಸ್ ಹೋಗ್ಬೇಕು. ಅಷ್ಟರಲ್ಲಿ ಎಷ್ಟು ಜಾಗ ತೋರ್ಸೋಕೆ ಸಾಧ್ಯನೋ ತೋರ್ಸು'' ಎಂದರು.

ಹೀಗೆ ಅಲ್ಲಿಯ ಅಷ್ಟಿಷ್ಟು ತಾಣಗಳನ್ನು ನೋಡಿದ್ದಾಯ್ತು. ತನ್ನನ್ನು ಒಟ್ಟು ಪ್ರಕ್ರಿಯೆಯಿಂದ ಕಳಚಿಕೊಳ್ಳುವಲ್ಲಿ ಸಫಲಳಾದ ವಿಮಲಾಗೆ ಈಗ ಅಲ್ಲಿನ ಯಾವುದೂ ಪುಳಕವನ್ನು ನೀಡುತ್ತಿಲ್ಲ; ಕುತೂಹಲವನ್ನು ಹುಟ್ಟಿಸುತ್ತಿಲ್ಲ. ಅದುವರೆಗೆ ಜೊತೆಜೊತೆಯಾಗಿ ಬರುತ್ತಿದ್ದ ಅವಳು ಕಟ್ಟಿದ್ದ ಕನಸು ಇಂದು ಅವಳ ಜೊತೆ ಇರಲಿಲ್ಲ. ಹೀಗಾಗಿ ಎಲ್ಲವೂ, ಎಲ್ಲರೂ ನಿಚ್ಚಳವಾಗಿ ಕಾಣತೊಡಗಿದ್ದರು. ನಿನ್ನೆ ಅತ್ಯಂತ ಕ್ರೂರಿಯಾಗಿ ಕಂಡ ರವಿಯೂ ಇಂದು ಅವಳ ಕ್ಷಮೆಗೆ ಅರ್ಹನೆನಿಸಿದ್ದ! ಹತ್ತಾರು ಬಾರಿ ಮಹಾಬಲೇಶ್ವರವನ್ನು ಕಂಡಿದ್ದ ರವಿಗೆ, ಅಲ್ಲಿ ಯಾವ ಉತ್ಸಾಹ ಇಲ್ಲದ್ದು ಸಹಜ; ತಾನಾದರೋ ಈ ಜಾಗಗಳ ನೆಪದಲ್ಲಿ ತನ್ನ ಒಂದೊಂದು ಕನಸಿನ ತುಣುಕುಗಳನ್ನು ಹೆಣೆಯುತ್ತ, ಸವಿಯುತ್ತ, ಅವನೊಡನೆ ಅದರ ಪಲುಕುಗಳನ್ನು ತೆರೆದಿಡುತ್ತ, ಅವನನ್ನು ತನ್ನ ಜಗತ್ತಿನೊಳಗೆ ಕರೆತರಬೇಕೆಂದು ಕೊಂಡಿದ್ದಳು. ಆದರೆ ಅದಕ್ಕೆ ಅವರು ಬಂದ ರೀತಿ, ಸಮಯ, ಪರಿಸರ ಪೂರಕವಾಗಿರಲಿಲ್ಲ ಎಂದು ಅರಿಯುವುದು ಈಗ ಅವಳಿಗೆ ಸಾಧ್ಯವಾಗತೊಡಗಿತು. ಜೊತೆಜೊತೆಗೆ ವಿಷಾದದ ಎಳೆಯೊಂದು ಕಂಡೂ ಕಾಣದಂತೆ ಅವಳ ತುಟಿಗಳ ಮೇಲೆ ಸುಳಿದು ಮಾಯವಾಯ್ತು.

ಡಾ|| ಸಬಿಹಾ ಭೂಮೀಗೌಡ
ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು.

**ಲೋಡ್‌ಶೆಡ್ಡಿಂಗ್ ಮತ್ತೆ**



ಅಂದ್ರೆ... ರಾಜ್ಯದಲ್ಲಿ ಸರ್ಕಾರ ಇದೆ ಅಂತಾಯ್ತು ?! ಸರ್ಕಾರವೇ ಇಲ್ಲ ಅಂತಿದ್ರಿ...?

೨೧ನೆಯ ಶತಮಾನದ ಮೊದಲನೆಯ ದಶಕದ ಕೊನೆಯನ್ನು ನಾವು ಪ್ರವೇಶಿಸುತ್ತಿದ್ದೇವೆ. ಪ್ರಕೃತಿ ವಿಕೋಪಗಳು, ಹವಾಮಾನ ಬದಲಾವಣೆ, ಅನಾವೃಷ್ಟಿ, ಅತಿವೃಷ್ಟಿ, ನೆರೆಹಾವಳಿ, ಚಂಡಮಾರುತ ಮೊದಲಾದವುಗಳು ಹಾಗೂ ಮನುಷ್ಯನು ತಿಳಿದೋ ತಿಳಿಯದೆಯೋ ಪರಮಾಣು ಸ್ಫೋಟ, ರಾಸಾಯನಿಕ ಇಂಧನಗಳ ದುರ್ಬಳಕೆ ಇತ್ಯಾದಿಗಳಿಂದ ತನಗೆ ತಾನೇ ಸೃಷ್ಟಿಸಿಕೊಳ್ಳುತ್ತಿರುವ ಅಪಾಯಗಳು ಎಲ್ಲವೂ ಇಂದು ಭೂಗೋಳವನ್ನೇ ಕಾಡುತ್ತಿರುವುದು ಕಂಡುಬರುತ್ತದೆ. ಇವನ್ನೆಲ್ಲಾ ಸಂಪೂರ್ಣ ತಡೆಯುವುದಕ್ಕೆ ಸಾಧ್ಯವಾಗದಿದ್ದರೂ ಸಹ ಅವುಗಳಿಂದಾಗುವ ದುಷ್ಪರಿಣಾಮಗಳನ್ನು ಕಡಿಮೆ ಮಾಡಬಹುದಾಗಿದೆ. ಅಲ್ಲದೆ ಅವುಗಳಿಗೆ ಬಲಿಯಾದವರಿಗೆ ಸಾಂತ್ವನ, ಪುನರ್ವಸತಿ ಮತ್ತು ಭವಿಷ್ಯತ್ತಿನ ಬದುಕು ನೀಡುವ ಸಾಮರ್ಥ್ಯ, ಶಕ್ತಿ ಮತ್ತು ತಿಳುವಳಿಕೆ ಮನುಷ್ಯ ಸಂಕುಲಕ್ಕೆ ಇಂದು ಸಾಕಷ್ಟು ಇದೆ. ಆದರೆ ಸ್ವಾರ್ಥ, ಸ್ವಂತ ಲಾಭ ಗಳಿಕೆಯ ಹಂಬಲ ಮತ್ತು ಪ್ರಪಂಚವನ್ನೇ ತನ್ನ ಅಂಕಿತದಲ್ಲಿರಿಸಿಕೊಳ್ಳುವ ಅಧಿಕಾರಲಾಲಸೆ ಮೊದಲಾದುವುಗಳು ಅಂತಹ ಪ್ರಯತ್ನವನ್ನು ಮೊಟಕುಗೊಳಿಸುತ್ತವೆ. ಇದು ಇಂದಿನ ಪರಿಸ್ಥಿತಿಯ ಒಂದು ಮುಖ.

ಮನುಷ್ಯನು ಒಂದಾಗಿ ಚಿಂತಿಸಿ, ಜೊತೆಗೂಡಿ ಎಲ್ಲರಿಗೂ ಪ್ರಯೋಜನಕರವಾಗುವ ಮಾರ್ಗ ಅನುಸರಿಸುವ ಅಗತ್ಯವಿದೆ. ಅದನ್ನು ತಿಳಿದು ಸಹ ಪರಸ್ಪರ ಪೈಪೋಟಿ ಮತ್ತು ಬಡಿದಾಟ-ಹೊಡೆದಾಟಗಳ ಹಾಗೂ ವಿನಾಶಕಾರಿ ಯುದ್ಧಗಳ ದಾರಿಯಲ್ಲಿ ತಾವು ಸರ್ವಶಕ್ತರೆಂದು ಭಾವಿಸುವ ಕೆಲವು ದೇಶಗಳ ಪ್ರಭುತ್ವಗಳು ವಿಶ್ವವನ್ನು ವಿನಾಶದ ಅಂಚಿಗೆ ತಲುಪಿಸುತ್ತಿರುವುದು ಇನ್ನೊಂದು ಮಗ್ಗುಲು.

ಕಲಹಗಳಿಗೆ ಕಾರಣವಾಗುವಂತೆ ವರ್ತಿಸುವ ಕೋಲಾಹಲಗಳು ದಿನೇ ದಿ ತೀವ್ರಗೊಳ್ಳುತ್ತಿರುವುದು. ಇಂತಹ ದ್ವಂದ್ವಾತ್ಮಕ ಪ್ರಕ್ರಿಯೆಯ ನಡುವೆ ಏಕತೆಯ ಪ ಸಹಬಾಳ್ವೆಯ ಮೂಲಕ ಎಲ್ಲರ ಶ್ರೇಯಸ್ಸನ್ನೂ, ಜಾಗತಿಕ ಕ್ಷೇಮವನ್ನೂ ಸಾಧಿಸು ನಮ್ಮ ಕ್ರಿಯಾಶಕ್ತಿ ಮತ್ತು ಮನೋಸ್ಥಿತಿಯನ್ನು ರೂಪಿಸುವ ಅವಶ್ಯಕತೆ ಇಂದು ನ ಮುಂದೆ ಇದೆ. ಇದರಲ್ಲಿ ಹೊಸತೇನೂ ಇಲ್ಲ. ಸ್ವಾತಂತ್ರ್ಯಪೂರ್ವದಲ್ಲಿಯೂ, ಸ್ವಾತಂ ನಂತರದ ಮೊದಲ ಕಾಲಘಟ್ಟಗಳಲ್ಲಿಯೂ ಈ ಮಾರ್ಗವನ್ನು ಭಾರತದಲ್ಲಿ ಕಮ್ಯುನಿಸ್ಟ್ ಪುರೋಗಾಮಿ ಪ್ರಜಾಪ್ರಭುತ್ವ ವಾದಿಗಳು, ಎಡಪಂಥೀಯರು, ವಿಜ್ಞಾನಿಗ ಕಲಾವಿದರು, ಸದ್ಭಾವನೆಯುಳ್ಳ ಎಲ್ಲರೂ ಸಹ ಬೆಳೆಸಿದ್ದರೆನ್ನುವುದನ್ನು ಇಂದು ನ ನೆನಪಿಗೆ ತರಬೇಕಾಗುತ್ತದೆ. ಹಾಗೂ ಇಂದಿನ ಪರಿಸ್ಥಿತಿಯಲ್ಲಿ ಮೇಲೆ ಹೇಳಿದಂ ಪುರೋಗಮನದ ಹಾದಿಯಲ್ಲಿ ಜನರನ್ನು ಒಂದುಗೂಡಿಸುವ ಮತ್ತು ಮುನ್ನಡೆಸ ಕರ್ತವ್ಯವನ್ನು ನಾವಿಂದು ಪುನರುಜ್ಜೀವನಗೊಳಿಸಿ ನಿಧಾನವಾಗಿಯಾದರೂ ದೃಢವ ಹೆಜ್ಜೆಗಳಿಂದ ಮುಂದಕ್ಕೆ ಒಯ್ಯುವ ಕರ್ತವ್ಯವನ್ನು ಕೈಗೊಳ್ಳಬೇಕಾಗಿದೆ.

ಈ ಪ್ರಕ್ರಿಯೆಗೆ ಆರಂಭದ ಹೆಜ್ಜೆಗಳಾಗಿ ಕೆಲವು ಸೂಚನೆಗಳನ್ನು 'ಹೊಸ ಪತ್ರಿಕೆಯ ಪಂಕ್ತಿಗಳಲ್ಲಿ ಸಂಕ್ಷಿಪ್ತವಾಗಿ ನೀಡಲು ಅಪೇಕ್ಷಿಸುತ್ತೇನೆ.

ಸ್ವಾತಂತ್ರ್ಯ ಗಳಿಸಿದ ಬಳಿಕ ಅರ್ಧಶತಕವನ್ನು ನಾವು ದಾಟಿದ್ದೇವೆ. ಇಂದಿನ ನ ಭಾರತ ಸ್ವಾತಂತ್ರ್ಯಪೂರ್ವದ ಭಾರತದಂತಿಲ್ಲ. ಜನಸಂಖ್ಯೆಯ ಶೇ. ೫೦ ಭಾಗ ವರ್ಷಗಳಿಗಿಂತ ಕಡಿಮೆ ವಯಸ್ಸಿನವರಾಗಿದ್ದಾರೆ. ಇಂದಿನ ಪರಿಸ್ಥಿತಿಯಲ್ಲಿ ಮನುಷ

# ನಿರೀಕ್ಷೆ ಮತ್ತು ನಡವಳಿಕೆ

## — ಕೆಲವು ಅನಿಸಿಕೆಗಳು



ಮನುಷ್ಯನು ಒಂದಾಗಿ ಚಿಂತಿಸಿ, ಜೊತೆಗೂಡಿ ಎಲ್ಲರಿಗೂ ಪ್ರಯೋಜನಕರವಾಗುವ ಮಾರ್ಗ ಅನುಸರಿಸುವ ಅಗತ್ಯವಿದೆ. ಅದನ್ನು ತಿಳಿದು ಸಹ ಪರಸ್ಪರ ಪೈಪೋಟಿ ಮತ್ತು ಬಡಿದಾಟ-ಹೊಡೆದಾಟಗಳ ಹಾಗೂ ವಿನಾಶಕಾರಿ ಯುದ್ಧಗಳ ದಾರಿಯಲ್ಲಿ ತಾವು ಸರ್ವಶಕ್ತರೆಂದು ಭಾವಿಸುವ ಕೆಲವು ದೇಶಗಳ ಪ್ರಭುತ್ವಗಳು ವಿಶ್ವವನ್ನು ವಿನಾಶದ ಅಂಚಿಗೆ ತಲುಪಿಸುತ್ತಿರುವುದು ಪ್ರಶ್ನಾರ್ಹವಾಗಿದೆ.

ಇಂತಹ ಸನ್ನಿವೇಶದಲ್ಲಿ ಅತಿ ಪ್ರಾಚೀನ ಸಂಸ್ಕೃತಿ ಇರುವಂತಹ ದೇಶಗಳಲ್ಲಿ ಒಂದಾದ ಭಾರತವು ಅಸಹಾಯಕತೆಗೆ ಸಿಲುಕಿ ಈ ಗಂಡಾಂತರವನ್ನು ಶಮನ ಮಾಡುವ ತನ್ನ ಪಾತ್ರವನ್ನು ನಿರ್ವಹಿಸಲಾಗದೆ ಇರುವಂತಹ ಸ್ಥಿತಿ ಗೋಚರಿಸುತ್ತಿದೆ. ನೆರೆಹೊರೆಯ ದೇಶಗಳ ಜೊತೆಗೆ ಸ್ನೇಹ, ಸೌಹಾರ್ದತೆ, ಶಾಂತಿ ಮತ್ತು ಸಹಕಾರಗಳಿಂದ ಕೂಡಿದ ಸಂಬಂಧಗಳನ್ನು ಬೆಳೆಸತಕ್ಕ ಈ ಕಾಲದಲ್ಲಿ ಪರಸ್ಪರ ತಿಕ್ಕಾಟಗಳಿಗೆ ಗುರಿಯಾಗುತ್ತಿರುವುದು ಅಪಾಯದ ಸಂಕೇತವಾಗಿದೆ. ಅನ್ಯರನ್ನು ಬಡಿದಾಡಿಸಿ ತಾನು ಲಾಭ ಗಳಿಸುವ ತಂತ್ರಗಳಲ್ಲಿ ಪಳಗಿದ ಅಮೆರಿಕಾದಂತಹ ಸಾಮ್ರಾಜ್ಯವಾದಿಗಳ ಹುನ್ನಾರಗಳು ಮೇಲುಗೈ ಸಾಧಿಸುವ ಅಪಾಯವನ್ನು ನಮಗೆ ನಾವೇ ತಂದುಕೊಳ್ಳುತ್ತಿದ್ದೇವೆ. ಒಂದು ಕಾಲದಲ್ಲಿ ಸ್ವಾತಂತ್ರ್ಯದ ಹೋರಾಟದಲ್ಲಿ ಒಂದುಗೂಡಿದ್ದ ನಾವು ಇದೀಗ ಆಂತರಿಕ ಹೊಯ್ದಾಟಗಳಿಂದ ಮತ್ತೆ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಅಪಾಯಕ್ಕೆ ಗುರಿಯಾಗುತ್ತಿದ್ದೇವೆ ಎಂದು ತೋರುತ್ತದೆ. ಭಾಷೆ, ಪ್ರದೇಶ, ಜಾತಿ, ಧರ್ಮ,ಲಿಂಗ ಇತ್ಯಾದಿ, ಇತ್ಯಾದಿ ಮನುಷ್ಯ ಮನುಷ್ಯರೊಳಗಿರುವಂತಹ ಸ್ವಾಭಾವಿಕವಾದ ಹಾಗೂ ಪರಂಪರಾಗತವಾದ ವ್ಯತ್ಯಾಸಗಳು ಇರುವಾಗಲೇ ನಾವು ಒಂದೇ ರಾಷ್ಟ್ರದವರೆಂಬ ಮತ್ತು ನಮ್ಮ ಬೆಳವಣಿಗೆಯೂ, ಪ್ರಗತಿಯೂ ಪರಸ್ಪರ ಹೊಂದಾಣಿಕೆ ಮತ್ತು ಏಕತೆಯ ಮೂಲಕ ಮಾತ್ರ ಸಾಧ್ಯವೆಂಬ ತಿಳುವಳಿಕೆ ನಮ್ಮಲ್ಲಿ ಇನ್ನೂ ಬೆಳೆದಿಲ್ಲ. ಕಳವಳಕಾರಿ ಕ್ರಿಯೆಯೆಂದರೆ ಅಂತಹ ವ್ಯತ್ಯಾಸಗಳು ಕೆಲವೊಮ್ಮೆ ಆಂತರಿಕ

ಸರಾಸರಿ ಬದುಕುವ ವಯಸ್ಸು ಮೊದಲಿಗಿಂತ ಇಮ್ಮಡಿಯಾಗಿದೆ. ಆದರೆ ಜನಸಂಖ್ಯೆ ಅರ್ಧಭಾಗಕ್ಕಿಂತಲೂ ಅಧಿಕ ಜನ ಉದ್ಯೋಗ ದೊರಕದೆ ಅನ್ನ, ವಸತಿ, ಇತ್ಯಾದಿ ಮೂಲ ಸವಲತ್ತುಗಳನ್ನು ಪಡೆಯಲು ಸಾಧ್ಯವಾಗದೆ ಇದ್ದಾರೆ ಎಂದಾ ಮೊದಲಿಗಿಂತ ನಮ್ಮ ದೇಶದ ಒಟ್ಟು ಪರಿಸ್ಥಿತಿ ಅಧೋಗತಿಗೆ ಇಳಿದಿದೆ ಎ ತಿಳಿಯಬೇಕಾಗಿದೆ. ಅಲ್ಲದೆ, ಅಸಂಘಟಿತ ದುಡಿಯುವ ಜನರ ಪೈಕಿ ಶೇ. ೭೮ರಷ್ಟು ಜನ ದಿನಕ್ಕೆ ಬರೇ ೨೦ರೂ. ಅಥವಾ ಅದಕ್ಕಿಂತಲೂ ಕಡಿಮೆ ಹಣವನ್ನು ತಮ್ಮ ದಿನನಿತ್ ವೆಚ್ಚಕ್ಕೆ ಒದಗಿಸಿಕೊಳ್ಳಲು ಪರದಾಡಬೇಕಾದ ಸ್ಥಿತಿಗೆ ನಾವು ತಲುಪಿದ್ದೇವೆ. ಬ್ರಿಟಿ ಸಾಮ್ರಾಜ್ಯವಾದಿಗಳನ್ನು ಹೊರದಬ್ಬಿದ ಆರು ದಶಕಗಳ ಬಳಿಕವೂ ನಾವು ಈ ದಾರು ಸ್ಥಿತಿಯಲ್ಲಿದ್ದೇವೆ ಎಂದರೆ ಇಂದಿನ ಆರ್ಥಿಕ, ರಾಜಕೀಯ, ಆಡಳಿತಾತ್ಮಕ, ಸಾಮಾ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳನ್ನೆಲ್ಲಾ ಕ್ರಾಂತಿಕಾರಿಯಾಗಿ ಬದಲಾವಣೆ ಮಾಡುವಂ ಜನಪರವಾದ ಹೋರಾಟಕ್ಕೆ ನಾವು ಅಣಿಯಾಗಬೇಕು ಮತ್ತು ನಮ್ಮ ಜನರ ಅಣಿಗೊಳಿಸಬೇಕಾದ ಪರ್ವಕಾಲಕ್ಕೆ ಇಂದು ನಾವು ತಲುಪಿದ್ದೇವೆ.

ಈ ಕಾಲದಲ್ಲಿ ನಾವು ಸೈದ್ಧಾಂತಿಕವಾಗಿ ಕೆಲವು ಮುಖ್ಯ ಪ್ರಶ್ನೆಗಳ ಬಗ್ಗೆ ಆದ ಹೆಚ್ಚಿನ ಏಕಾಭಿಪ್ರಾಯ ಮೂಡಿಸುವ ಅಗತ್ಯ ಇದೆ. ಸಾಮ್ರಾಜ್ಯವಾದಿಗಳ ನಕಲಿ ಪ್ರ ಪ್ರಭುತ್ವ ಹಾಗೂ ಫ್ಯಾಸಿಸಂನ ನಗ್ನ ಸರ್ವಾಧಿಕಾರ. ಇವೆರಡ ಅನುಭವಗಳು ಸಹ ಮನುಷ್ಯ ಸಂಕುಲಕ್ಕೆ ಸಾಕಷ್ಟು ಆಗಿ ಸರ್ವಾಧಿಕಾರವು ಮನುಷ್ಯನ ನೆಮ್ಮದಿಯ ಭವಿಷ್ಯ

ಬಿ. ವಿ. ಕಕ್ಕಿಲ್ಲಾಯ

ಪಿಸುವುದಕ್ಕೆ ಸಲ್ಲದು ಎಂಬ ಅಂಶ ಸಾಕಷ್ಟು ನಿಚ್ಚಳವಾಗಿದೆ. ಭಂಡ ಬಂಡವಾಳ ವ್ಯವಸ್ಥೆಯಿಂದ ಸಮಾಜವಾದಿ ವ್ಯವಸ್ಥೆಗೆ ಪರಿವರ್ತನೆಯನ್ನು ಸಾಧಿಸುವುದಕ್ಕೆ ಪ್ರಭುತ್ವವಾದಿ ಮಾರ್ಗಗಳು ಇಂದು ಸಾಕಷ್ಟು ಪರಿಣಾಮಕಾರಿಯಾಗಿವೆ ಎಂಬುದು ವಾಗಿದೆ. ಅದು ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಅಲ್ಲಲ್ಲಿನ ಜನರ ಸ್ವಂತ ಭವದಿಂದ ಅಂಗೀಕಾರವನ್ನೂ ಪಡೆದಿದೆ. ಹೀಗಿರುವಾಗ ಶೋಷಣೆ, ಬ್ಬಳಿಕೆ, ಒಳಜಗಳ, ವಂಚನೆಗಳಿಂದ ಪೀಡಿತರಾಗಿರುವ ಜನರನ್ನು ಂತಿಕವಾಗಿಯೂ, ಕ್ರಿಯಾತ್ಮಕವಾಗಿಯೂ ಒಂದುಗೂಡಿಸುವ ಮತ್ತು ನ್ನಡೆಸುವ ಪ್ರಯತ್ನವು ಇಂದು ಅತ್ಯಗತ್ಯವೆಂದು ಎಲ್ಲಾ ಕ್ರಾಂತಿಕಾರಿ ಪಂಥೀಯರು ಮನವರಿಕೆ ಮಾಡಿಕೊಳ್ಳಬೇಕಾಗಿದೆ. ಮಾರ್ಕ್ಸ್‌ವಾದವು ಸೈದ್ಧಾಂತಿಕ ವಿಚಾರಧಾರೆಯನ್ನು ನಮಗೆ ನೀಡಿದೆ. ಒಂದು ದಲ್ಲಿ ರಷ್ಯಾದ ಸಮಾಜವಾದಿ ಕ್ರಾಂತಿ ಹಾಗೂ ಅದರ ರ್ಯಕ್ರಮದ ಮೂಲಕ ಸೋವಿಯತ್ ಒಕ್ಕೂಟದ ರಚನೆ ತ್ತು ಸಮಾಜವಾದಿ ಪುನರ್‌ನಿರ್ಮಾಣದ ಕಾರ್ಯಗಳು ನ್ನಡೆದದ್ದು ಅದು ಇಡೀ ಪ್ರಪಂಚಕ್ಕೆ ಏಕೈಕ ಮಾರ್ಗ ು ಪರಿಕಲ್ಪನೆಯನ್ನು ಮೂಡಿಸಿತು. ಆದರೆ ಆ ಗ್ರಹಿಕೆ ರ್ಣ ಸರಿಯಾದುದಲ್ಲ, ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಸಮಾಜವಾದಿ ವ್ಯವಸ್ಥೆಯನ್ನು ಸಬಹುದು ಮತ್ತು ಸಂರಕ್ಷಿಸಬಹುದು ಎಂಬ ಶವು ಇಂದಿನ ಕಾಲದಲ್ಲಿ ಸ್ಪಷ್ಟವಾಗಿದೆ. ಚೀನಾ ತಹ ದೇಶದಲ್ಲಿ ಮಾವೊ ತ್ಸೆ ತುಂಗ್‌ರವರ ನಿಧನದ ಕಮ್ಯುನಿಸ್ಟ್ ಪಕ್ಷವು ಒಂದೇ ದೇಶದೊಳಗೆ ಾಜವಾದಿ ಪಥದ ನಿಯಂತ್ರಣಕ್ಕೊಳಪಟ್ಟು ಬೇರೆ ಭಾಗಗಳಲ್ಲಿ ಅಲ್ಲಲ್ಲಿನ ಮೂರ್ತ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಗಳಿಗನುಗುಣವಾಗಿ ಬೇರೆಬೇರೆ ಕ್ರಮಗಳನ್ನು ಅನುಸರಿಸಲು ಸಾಧ್ಯವಿದೆ ಎಂಬ ವನ್ನು ತಳೆದಿದೆ. ಅಂತೆಯೇ ಏಷ್ಯ ಖಂಡದ ವಿಯೆಟ್ನಾಂ, ಲ್ಯಾಟಿನ್ ಅಮೆರಿಕಾದ ಬಾ ಮತ್ತು ಇತ್ತೀಚೆಗೆ ಕ್ರಾಂತಿಕಾರಿ ಪರಿವರ್ತನೆ ಸಾಧಿಸಿರುವ ಇತರ ದೇಶಗಳು ಾಜವಾದಿ ಪಥವನ್ನು ಇಂದಿನ ಕಾಲಘಟ್ಟಕ್ಕೆ ತಕ್ಕಂತೆ ರೂಪಿಸಿಕೊಂಡು ಅಂತರ ್ರೀಯ ಸಂಬಂಧಗಳ ಬಲಾಬಲಗಳ ಹಿನ್ನೆಲೆಯಲ್ಲಿ ಮುಂದುವರಿಯುತ್ತಿರುವುದನ್ನು ಂದು ಕಾಣುತ್ತೇವೆ. ಗಾಢವಾದಂತಹ ರಾಜಕೀಯ, ರಾಜತಾಂತ್ರಿಕ, ವಾಣಿಜ್ಯ ಮತ್ತು ರ್ಥಿಕ ಸಂಬಂಧಗಳ ಮೂಲಕ ನೆರೆಹೊರೆಯ ದೇಶಗಳು ತಮ್ಮೊಳಗಿನ ಭೇದ ಗಳನ್ನು ಪರಿಹರಿಸಿಕೊಂಡು ಒಂದಾಗಿ ಮುಂದುವರಿಯುವುದಕ್ಕೆ ಇಂದು ವಿಶ್ವದ ವು ಭಾಗಗಳಲ್ಲಿ, ವಿಶೇಷತಃ ಲ್ಯಾಟಿನ್ ಅಮೆರಿಕಾದಲ್ಲಿ, ಪ್ರಯತ್ನಗಳು ನಡೆಯುತ್ತಿರು ಆಶಾದಾಯಕವಾಗಿದೆ. ಈ ಸಂಕೀರ್ಣವಾದ ಸಮಗ್ರ ಚಿತ್ರಣವನ್ನು ಗಮನದಲ್ಲಿಟ್ಟು ಡು ಕಮ್ಯುನಿಸ್ಟರು ಮತ್ತು ಎಲ್ಲಾ ಎಡಪಂಥೀಯರು ಸಹ ತಮ್ಮ ಕಾರ್ಯವೈಖರಿ ತ್ತು ಸೈದ್ಧಾಂತಿಕ ನಿಲುವುಗಳನ್ನು ಪ್ರಾಯೋಗಿಕವಾಗಿ ಅರ್ಥೈಸಿಕೊಳ್ಳುವ ಅಗತ್ಯವಿದೆ.




ಇಂತಹ ಪ್ರಯತ್ನಕ್ಕೆ ಮೂಲಭೂತವಾದ ಒಂದು ಅಂಶವನ್ನು ಕ್ರಾಂತಿಕಾರಿಗಳು ು ಎಡಪಂಥೀಯರು ಗುರುತಿಸುವ ಅಗತ್ಯ ಇದೆ. ದುಡಿಯುವ ಜನ ಎಲ್ಲಾ ಗಳಲ್ಲೂ ಎಲ್ಲಾ ಧರ್ಮ, ಕೋಮು, ಜಾತಿ, ಭಾಷೆ ಇತ್ಯಾದಿ ಪ್ರಭೇದಗಳಲ್ಲಿಯೂ ಂತ ಬಹುಸಂಖ್ಯಾತರಾಗಿದ್ದಾರೆ ಹಾಗೂ ಅವರ ದುಡಿಮೆಯೇ ಸಮಾಜದ ಿಗೂ ಪ್ರಗತಿಗೂ ಆಧಾರವಾಗಿದೆ ಎಂಬುದೇ ಆ ಅಂಶ. ಶೋಷಣೆ, ದಬ್ಬಾಳಿಕೆ, ಕನೆ ಹಾಗೂ ದೈವ ನಿಮಿತ್ತವೆಂಬ ಭ್ರಮೆಗಳಿಂದ ಶ್ರಮಜೀವಿ ಜನ ಬಿಡುಗಡೆ ಂದುವುದು ಹಾಗೂ ಅವುಗಳ ವಿರುದ್ಧವಾಗಿ ಹೋರಾಟಕ್ಕೆ ಸನ್ನದ್ಧವಾಗುವುದು ಪಂಥೀಯ ಚಳುವಳಿಯಲ್ಲಿ ಬಲವಾಗಿ ಬೇರೂರಬೇಕೆಂಬ ಅಂಶವನ್ನು ನಾವು ುತಿಸಬೇಕಾಗುತ್ತದೆ. ಸಾಮಾಜಿಕ ನಡವಳಿಕೆಗಳು ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ವವರ ವೈಭವ ಮತ್ತು ದುಡಿಯುವವರ ಅಸಹಾಯಕತೆಗಳನ್ನು ಪ್ರದರ್ಶಿಸುವ ಮಾದರಿಯನ್ನು ಬಿಟ್ಟು ಬಂಧನದಿಂದ ಬಿಡುಗಡೆ ಸಾಧಿಸುವ ಪ್ರಯತ್ನಕ್ಕೆ ನೀಡುವ ದಾರಿ ಹಿಡಿಯುವ ಅಗತ್ಯವಿದೆ. ಸಾಂಸ್ಕೃತಿಕ, ಸಾಮಾಜಿಕ ಮತ್ತು ಸಾಹಿತ್ಯಿಕ ುವಟಿಕೆಗಳ ಮೂಲಕ ಜನಜಾಗೃತಿ ಮೂಡಿಸುವ ಮತ್ತು ಬೆಳೆಸುವ ಪ್ರಯತ್ನ ಇಂದು ಯುಬೇಕಾಗಿದೆ. ಮುಖ್ಯವಾಗಿ ಕರ್ನಾಟಕದಲ್ಲಿ ದಸರಾ ಮಹೋತ್ಸವ, ಹಂಪಿ ೋತ್ಸವ, ಕರಾವಳಿ ಉತ್ಸವ ಇತ್ಯಾದಿ ಇತ್ಯಾದಿ ಹಳೆಯ ಕಾಲದ ಅರಸುಗಳ ಮತ್ತು ದೇವ-ದೇವಿಯರ, ಭೂತಗಳ ಮತ್ತು ಪಿಶಾಚಿಗಳ ಗತ ವೈಭವದ ಗುಂಗಿನಲ್ಲಿ ಜನರನ್ನು ಮೌಢ್ಯದಲ್ಲಿ ಬಂಧಿಸುವ ಅಭಿಯಾನಗಳಿಗೆ ಪ್ರತಿಯಾಗಿ ವಾಸ್ತವಿಕತೆ, ವೈಜ್ಞಾನಿಕ ಮನೋಧರ್ಮ, ನಿತ್ಯ ಸಂಕಷ್ಟಗಳಿಂದ ಪಾರಾಗುವುದಕ್ಕೆ ಐಕ್ಯ ಕಾರ್ಯಾಚರಣೆಗಳು, ಪ್ರಕೃತಿ ವಿಕೋಪಗಳಿಂದ ಆಗುವ ಹಾನಿಗಳಿಗೆ ಆಡಳಿತ ಮತ್ತು ಸರಕಾರ ಎಲ್ಲ ಭೇದಗಳನ್ನು ಮರೆತು ಕಾರ್ಯವೆಸಗುವುದಕ್ಕೆ ಒತ್ತಾಯವನ್ನು ಹೇರುವ ಕ್ರಮಗಳನ್ನು ಕೈಗೊಳ್ಳುವುದಕ್ಕೆ ನಮ್ಮ ಯುವ ಜನತೆ ಸನ್ನದ್ಧರಾಗಬೇಕು. ಇದು ಇಂದಿನ ತುರ್ತು ಅವಶ್ಯಕತೆ ಮತ್ತು ಮುಂದಿನ ನೆಮ್ಮದಿಗೆ ದಾರಿ ತೆರೆಯುವಂತಾಗಲು ಇದು ಹಾದಿ.

ಈ ದಾರಿಯನ್ನು ರೂಪಿಸುವ ನಿಟ್ಟಿನಲ್ಲಿ ಮೊದಲು ಎರಡು ಮುಖ್ಯ ಕಮ್ಯುನಿಸ್ಟ್ ಪಕ್ಷಗಳು ಹಾಗೂ ಅವುಗಳೊಂದಿಗೆ ಸಂಯುಕ್ತರಂಗಗಳಲ್ಲಿ ಕೆಲಸ ಮಾಡುತ್ತಾ ಬರುತ್ತಿರುವ ಎಡ ನಿಷ್ಠಾವಂತ ಪಂಥೀಯ, ಪ್ರಜಾಪ್ರಭುತ್ವವಾದಿ, ಪ್ರಗತಿಪರ, ಕೋಮು ನಿರಪೇಕ್ಷಿತ ಮತ್ತು ಜಾತಿ ಭೇದವೆಣಿಸದ ಎಲ್ಲಾ ಹೋರಾಟದ ಶಕ್ತಿಗಳು ತಮ್ಮೊಳಗೆ ವಿಚಾರ ವಿನಿಮಯಗಳ ಮೂಲಕ ಏಕಾಭಿಪ್ರಾಯ ರೂಪಿಸುವ ಪ್ರಯತ್ನವನ್ನು ನಿರಂತರವಾಗಿ ಮಾಡ ಬೇಕಾಗಿದೆ. ಈ ವಿಚಾರ ವಿನಿಮಯದ ಪ್ರಕ್ರಿಯೆಗೆ ಸಾಕಷ್ಟು ಕಾರ್ಯಾನುಭವದಿಂದ ಕೂಡಿದ ವೈಚಾರಿಕ ವಸ್ತುಗಳ ಸಂಗ್ರಹ ಇಂದು ನಮ್ಮಲ್ಲಿ ಲಭ್ಯವಿದೆ. ಉದಾಹರಣೆಗೆ, ಎರಡೂ ಕಮ್ಯುನಿಸ್ಟ್ ಪಕ್ಷಗಳ ೧೯-೨೦ನೇ ಮಹಾಧಿವೇಶನಗಳವರೆಗಿನ ರಾಜಕೀಯ ಮತ್ತು ವಿಮರ್ಶಾತ್ಮಕ ದಾಖಲೆಗಳು ಇಂದು ಬಹಿರಂಗವಾಗಿ ದೊರಕುತ್ತಿವೆ. ವಿದೇಶಿ ಕಮ್ಯುನಿಸ್ಟ್ ಮತ್ತು ಸಮಾಜವಾದಿ ಪಕ್ಷಗಳ ಸೌಹಾರ್ದ ಪ್ರತಿನಿಧಿಗಳು ವ್ಯಕ್ತಪಡಿಸಿರುವಂತಹ ಅಭಿಪ್ರಾಯಗಳ ದಾಖಲೆಗಳು ಸಹ ಸಾಕಷ್ಟು ಇವೆ. ಮೂರು ದಶಕಗಳ ಕಾಲ ಪಶ್ಚಿಮ ಬಂಗಾಳದ ಪ್ರಶ್ನಾತೀತ ಮುಖ್ಯಮಂತ್ರಿಯಾಗಿದ್ದ ಜ್ಯೋತಿ ಬಸುರವರು ಭಾರತ ಕಮ್ಯುನಿಸ್ಟ್ ಪಕ್ಷದ ಮೂರನೆಯ ಅಧಿವೇಶನದಲ್ಲಿ ಕಮ್ಯುನಿಸ್ಟರು ಭಾರತದಲ್ಲಿ ಅನುಸರಿಸತಕ್ಕ ಮಾರ್ಗದ ಬಗ್ಗೆ ನೀಡಿರುವ ಅಭಿಪ್ರಾಯಗಳು ಮತ್ತು ಅವುಗಳ ಜೊತೆಗೆ ಅವರ ನಿವೃತ್ತಿಯ ಬಳಿಕ ಇಂದಿನ ಹಿಂಜರಿಕೆಯ ಬಗ್ಗೆ ಅವರು ನೀಡುತ್ತಿರುವ ವಿವರಣೆಗಳು ಸಹ ಲಭ್ಯವಿವೆ. ಹಾಗೆಯೇ ಭಾರತ ಕಮ್ಯುನಿಸ್ಟ್ ಪಕ್ಷದ ಅಧ್ಯಕ್ಷರೂ ಪ್ರಧಾನ ಕಾರ್ಯದರ್ಶಿಗಳೂ, ಪ್ರಮುಖ ವಕ್ತಾರರೂ ಆಗಿದ್ದವರು ಮತ್ತು ಇಂದಿನ ನಾಯಕರು ಕಮ್ಯುನಿಸ್ಟ್ ಚಳುವಳಿಯ ಹಿಂಜರಿಕೆಯ ಬಗ್ಗೆ ವ್ಯಕ್ತಪಡಿಸಿರುವ ಕಾರಣಗಳು ಮತ್ತು ಪರಿಹಾರಮಾರ್ಗಗಳು ಸಹ ಮುದ್ರಣದಲ್ಲಿಯೂ ಅಂತರ್ಜಾಲದ ಮೂಲಕವೂ ಆಸಕ್ತಿ ಉಳ್ಳವರಿಗೆಲ್ಲಾ ಲಭ್ಯ ಇವೆ. ಇವನ್ನೆಲ್ಲಾ ಕ್ರೋಡೀಕರಿಸಿ ಸಂಶೋಧನೆ ಮಾಡಿ ಸಮನ್ವಯಗೊಳಿಸಿ ಮಾರ್ಕ್ಸ್‌ವಾದಿ ವಿಚಾರಧಾರೆಯ ತಳಹದಿಯ ಮೇಲೆ ಹೊಸ ಮಾರ್ಗ ಮತ್ತು ಹೊಸ ಹೆಜ್ಜೆಗಳನ್ನು ರೂಪಿಸುವ ಕಾರ್ಯಕ್ಕೆ ನಮ್ಮ ದೇಶದ ಪುರೋಗಾಮಿಗಳೆಲ್ಲಾ ಮುತುವರ್ಜಿವಹಿಸಬೇಕೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಪ್ರತ್ಯೇಕವಾಗಿ ಸಿ.ಪಿ.ಐ.(ಎಂ)ನ ಹಿಂದಿನ ಹಿರಿಯ ನಾಯಕರು ಇಂದು ವ್ಯಕ್ತಪಡಿಸುತ್ತಿರುವ ವಿಮರ್ಶಾತ್ಮಕ ಅನಿಸಿಕೆಗಳನ್ನು ೪೫ ವರ್ಷಗಳಿಂದ ಈವರೆಗಿನ ಕಾಲಘಟ್ಟದಲ್ಲಿ ಸಂದರ್ಭಾನುಸಾರವಾಗಿ ಆಗಾಗಲೇ ವ್ಯಕ್ತಪಡಿಸಿದ್ದರೆ ಬಹುಶಃ ಎಡ ಪಕ್ಷಗಳ ಕುಸಿತ ಇಷ್ಟು ತೀವ್ರವಾಗಿ ಆಗುತ್ತಿರಲಿಲ್ಲವೇನೋ ಎಂಬ ಅನಿಸಿಕೆ ಕೂಡ ನನ್ನಂತಹವರಲ್ಲಿ ಮೂಡುತ್ತದೆ. ಸ್ವಯಂ ಪಾಳೆಯದೊಳಗಿನ ಜಗಳಗಳು ಎದುರಾಳಿಗಳ ವಿರುದ್ಧದ ಹೋರಾಟಕ್ಕಿಂತಲೂ ಮುಖ್ಯ ಎಂಬ ಅರ್ಥವಿಲ್ಲದ ವಾದಗತಿಯನ್ನು ತೊರೆದು ಸಹಯೋಧರ ಮತ್ತು ಚಿಂತಕರ ಅಭಿಪ್ರಾಯಗಳ ಕ್ರೋಢೀಕರಣವನ್ನು ಸಾಧಿಸುವುದು ಸೋಲನ್ನು ಗೆಲುವಾಗಿ ಮಾರ್ಪಡಿಸುವುದಕ್ಕೆ ಮೊದಲನೆ ಹೆಜ್ಜೆಯಾಗಲಿ ಎಂದು ಹಾರೈಸುತ್ತೇನೆ.

ಬಿ. ವಿ. ಕಕ್ಕಿಲ್ಲಾಯ
'ಗಂಗಾ', ಸಂಖ್ಯೆ ೩-೧೭/೪, ಸೈಮನ್ ರೋಡ್, ಕಂಕನಾಡಿ, ಮಂಗಳೂರು - ೫೭೫ ೦೦೨

## ನಾಳಿನ ಸ್ಪರ್ಧಾತ್ಮಕ ಜಗತ್ತಿಗೆ ಇಂದಿನಿಂದಲೇ ನಿಮ್ಮ ತಯಾರಿ

# +2 ಹಂತದ ವಿಜ್ಞಾನದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉತ್ತಮ ತರಬೇತಿ ಕೇಂದ್ರ




## ನಮ್ಮಲ್ಲಿ ನಡೆಯುವ ಕೋರ್ಸ್‌ಗಳು

**I & II PUC**
**CET, AIEEE**
**CBSE XI & XII,**
**SSLC & X ICSE.**




THE SOUTHERN ACADEMY FOR FORMAL EDUCATION

**Head Office: # 271/1, 14th Cross, CMH RoadIndiranagar 2nd Stage, Bangalore - 560 038. Ph: 25286126 / 41523636 / 42036100**

SAFE HAS STUDY CENTRES AT

JEEVAN BHIMA NAGAR ★ COX TOWN ★ KORAMANGALA ★ MALLESHWARAM ★ HSR LAYOUT

41269333 41253888 41313888 42061084 65330797






# ಭಾರತಕ್ಕೆ ಬರಲಿರುವ ವಿದೇಶಿ ವಿಶ್ವವಿದ್ಯಾಲಯಗಳು

ಉನ್ನತ ಶಿಕ್ಷಣಕ್ಕಾಗಿ ವಿದೇಶಕ್ಕೆ ಹೋಗಬಯಸುವ ಪ್ರತಿಭಾವಂತ ವಿದ್ಯಾರ್ಥಿಗಳ ...ನ ವಿಶ್ವವಿದ್ಯಾಲಯಗಳೆಂದರೆ ಹಾರ್ವರ್ಡ್, ಸ್ಟಾನ್‌ಫರ್ಡ್, ಆಕ್ಸ್‌ಫರ್ಡ್, ...ಬ್ರಿಡ್ಜ್, ಯೇಲ್, ಕೆಲಾಗ್ ಮುಂತಾದವು. ಸಂಪೂರ್ಣವಾಗಿ ಪ್ರತಿಭೆಯ ಆಧಾರದ ...ಲೆಯೇ ನಡೆಯುವ ಇಲ್ಲಿನ ಆಯ್ಕೆಯ ಪ್ರಕ್ರಿಯೆಯಲ್ಲಿ ನಿರಾಶರಾಗುವವರ ...ಖ್ಯೆಯೇ ಹೆಚ್ಚು. ಆದರೆ ಇಂಥ ಪ್ರತಿಷ್ಠಿತ ವಿಶ್ವವಿದ್ಯಾಲಯಗಳು ಭಾರತಕ್ಕೇ ಬಂದು, ...ಯೇ ತಮ್ಮ ಶಾಖೆಗಳನ್ನು ಸ್ಥಾಪಿಸಿ, ಶಿಕ್ಷಣ ನೀಡಿ, ವಿಶ್ವಮಾನ್ಯವಾದ ಪದವಿಗಳನ್ನು ...ುವಂತಾದರೆ ? ನಾಗಾಲೋಟದಲ್ಲಿ ನಡೆಯುತ್ತಿರುವ ಜಾಗತೀಕರಣದ ಹಿನ್ನೆಲೆಯಲ್ಲಿ ... ಆರು ವರ್ಷಗಳಿಂದ ಇಂಥ ಪ್ರಸ್ತಾಪವೊಂದು ಕೇಂದ್ರ ಸರ್ಕಾರದ ಮುಂದಿದೆ. ...ಕಪಿಲ್ ಸಿಬಲ್ ಅವರು ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯದ ...ಾರವಹಿಸಿಕೊಂಡ ಮೇಲೆ ಈ ಪ್ರಸ್ತಾಪಕ್ಕೆ ಹೊಸ ಚಾಲನೆ ದೊರೆತಿದೆ. ೨೦೦೯ರ ...್ ತಿಂಗಳಿನಲ್ಲಿ ಇದೇ ಉದ್ದೇಶಕ್ಕಾಗಿ ಭಾರತ-ಅಮೆರಿಕಗಳ ಜಂಟೀ ಕಾರ್ಯ ...ವೊಂದು ರೂಪುಗೊಂಡು ಕೆಲಸಗಳನ್ನು ಪ್ರಾರಂಭಿಸಿದೆ. ೨೦೦೯ರ ಅಕ್ಟೋಬರ್ ...ಳಿನಲ್ಲಿ ಕಪಿಲ್ ಸಿಬಲ್ ಅವರು ಹಾರ್ವರ್ಡ್, ಯೇಲ್, ಎಮ್.ಐ.ಟಿ., ...ರ್ಯ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಡ್ಯೂಕ್ ವಿಶ್ವವಿದ್ಯಾಲಯದ ಫ್ಯೂಕ್ವಾ ...ೇಜ್‌ಮೆಂಟ್ ಸ್ಕೂಲ್‌ನ ಹಿರಿಯ ಅಧಿಕಾರಿಗಳನ್ನೇ ಅಲ್ಲದೇ, ಅಮೆರಿಕಾದ ಹಿರಿಯ ...ಕಾರಣಿಗಳನ್ನೂ ಭೇಟಿ ಮಾಡಿದ್ದಾರೆ; ವಿದೇಶೀ ವಿಶ್ವವಿದ್ಯಾಲಯಗಳು ಭಾರತವನ್ನು ...ಶಿಸಿ, ಶಿಕ್ಷಣ ನೀಡಲು ಇರುವ ಅಡೆತಡೆಗಳನ್ನು ಆದಷ್ಟು ಬೇಗ ನಿವಾರಿಸುವುದಾಗಿ ...ರಸೆ ನೀಡಿದ್ದಾರೆ. ಈ ಎಲ್ಲ ಬೆಳವಣಿಗೆಗಳ ನಡುವೆಯೇ, ಈ ಪ್ರಸ್ತಾಪಕ್ಕೆ ನಮ್ಮ ...ದ ಹಲವು ರಾಜಕೀಯ ಪಕ್ಷಗಳ, ಶಿಕ್ಷಣತಜ್ಞರ ತೀವ್ರ ವಿರೋಧವೂ ಇದೆ.

ಭಾರತ ವಿಶ್ವವ್ಯಾಪಾರ ಸಂಸ್ಥೆಯ ಒಡಂಬಡಿಕೆಗಳಿಗೆ ಸಹಿ ಹಾಕಿರುವ ದೇಶಗಳಲ್ಲೊಂದು. ಈ ಒಡಂಬಡಿಕೆಯ ಒಂದು ಭಾಗ 'ಜನರಲ್ ಅಗ್ರಿಮೆಂಟ್ ಆನ್ ಟ್ರೇಡ್ ಇನ್ ಸರ್ವೀಸಸ್' ಅಥವಾ ಸಂಕ್ಷಿಪ್ತವಾಗಿ-ಗ್ಯಾಟ್ಸ್. ಇದು ದೇಶದೇಶಗಳ ನಡುವೆ ಹಣಕಾಸು, ಆರೋಗ್ಯ, ಇಂಜಿನಿಯರಿಂಗ್, ಕಟ್ಟಡ ನಿರ್ಮಾಣ, ಪ್ರವಾಸೋದ್ಯಮ ಮುಂತಾದ ೧೨ ವಿವಿಧ ಸೇವೆಗಳಿಗೆ ಸಂಬಂಧಿಸಿದಂತೆ ಪರಸ್ಪರ ವ್ಯಾಪಾರ, ವ್ಯವಹಾರಗಳಿಗೆ ಅವಕಾಶ ನೀಡುತ್ತದೆ. ಈ ಸೇವೆಯ ಕ್ಷೇತ್ರಗಳಲ್ಲಿ ಶಿಕ್ಷಣವೂ ಒಂದು. ಈ ಒಪ್ಪಂದಕ್ಕೆ ಅನುಗುಣವಾಗಿ ವಿದೇಶೀ ವಿಶ್ವವಿದ್ಯಾಲಯಗಳು ಭಾರತದ ಶಿಕ್ಷಣ ಕ್ಷೇತ್ರದಲ್ಲಿ ಹಣ ತೊಡಗಿಸಬಹುದು. ಇಂಥ ಬಂಡವಾಳ ಹೂಡಿಕೆಗೆ ನಮ್ಮ ದೇಶವನ್ನು ನಾವು ಸಾಕಷ್ಟು ಮುಕ್ತವಾಗಿ ತೆರದಿಡಬೇಕಾಗಿದೆ.

ಆರ್ಥಿಕ ಉದಾರೀಕರಣದ ನೀತಿಯ ಹಿನ್ನೆಲೆಯಲ್ಲಿ ೧೯೯೭ರಲ್ಲಿ ಕೇಂದ್ರ ಸರ್ಕಾರದ ವಿತ್ತ ಮಂತ್ರಾಲಯ ಉನ್ನತ ಶಿಕ್ಷಣಕ್ಕೆ ಸರ್ಕಾರ ನೀಡುತ್ತಿರುವ ಸಬ್ಸಿಡಿಯನ್ನು ತೀವ್ರವಾಗಿ ಕಡಿತಗೊಳಿಸುವ ಅಗತ್ಯವನ್ನು ಪ್ರಸ್ತಾಪಿಸಿತ್ತು. ಆದರೆ ಎಡಪಕ್ಷಗಳ ತೀವ್ರವಿರೋಧದಿಂದ ಈ ಪ್ರಸ್ತಾಪವನ್ನು ಕೈಬಿಡಬೇಕಾಯಿತು. ೨೦೦೪ರ ಡಿಸೆಂಬರ್‌ನಲ್ಲಿ ಕೇಂದ್ರ ವಾಣಿಜ್ಯ ಮಂತ್ರಾಲಯ 'ಭಾರತದಲ್ಲಿ ಉನ್ನತ ಶಿಕ್ಷಣ ಮತ್ತು ಗ್ಯಾಟ್ಸ್ : ಹೊಸ ಅವಕಾಶಗಳು' ಎಂಬ ಪ್ರಸ್ತಾಪವೊಂದನ್ನು ಹೊರತಂದಿತು. ಭಾರತದ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ವಿದೇಶೀ ವಿಶ್ವವಿದ್ಯಾಲಯಗಳಿಗೆ ನೇರವಾಗಿ ಬಂಡವಾಳ ತೊಡಗಿಸಲು ಅವಕಾಶ ನೀಡುವುದರಿಂದ

...ನ್ನತ ಶಿಕ್ಷಣದ ಅವಕಾಶಗಳನ್ನು ಪ್ರಜೆಗಳಿಗೆ ಒದಗಿಸುವುದು ತನ್ನ ಬಾಧ್ಯತೆ ಮತ್ತು ಕರ್ತವ್ಯ; ವಾಣಿಜ್ಯೀಕರಣ ಮತ್ತು ಲಾಭ ಮಾಡುವುದು ...ವಿದ್ಯಾಲಯಗಳ ನ್ಯಾಯ ಸಮ್ಮತ ಗುರಿ ಅಲ್ಲ' ಎಂಬ ನಿಲುವನ್ನು ಭಾರತ ಸರ್ಕಾರ ಮೊದಲಿನಿಂದಲೂ ತಳೆದಿದೆ. ಸರ್ವೋಚ್ಚ ನ್ಯಾಯಾಲಯ, ...ಧಾನವನ್ನು ಆಧರಿಸಿ ನೀಡಿರುವ ಹಲವಾರು ಮಹತ್ವದ ತೀರ್ಪುಗಳೂ ಇದೇ ತತ್ವವನ್ನು ಪುಷ್ಟೀಕರಿಸಿವೆ. ಶಿಕ್ಷಣ, ಮೂಲಭೂತವಾಗಿ ಲಾಭ ...ಡುವುದೇ ಮುಖ್ಯ ಉದ್ದೇಶವಾಗಿರುವ, ವ್ಯಾಪಾರವಾಗಲೀ, ಉದ್ಯಮವಾಗಲೀ ಅಲ್ಲ, ಅದು ಧರ್ಮಾರ್ಥ, ದಾನಶೀಲ ಚಟುವಟಿಕೆ ಎಂಬುದು ...ಯಾಲಯದ ನಿಲುವು. ವಿದ್ಯಾರ್ಥಿಗಳಿಂದ ಸಾವಿರಾರು ರೂ.ಗಳಷ್ಟು ಶುಲ್ಕ ಪಡೆಯುವ ವಿದ್ಯಾಸಂಸ್ಥೆಗಳು, ಆ ಹಣದ ಉದ್ದೇಶ ಲಾಭ ...ಡುವುದಲ್ಲ ಅದರ ಬದಲಿಗೆ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅಗತ್ಯವಾದ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಎನ್ನುತ್ತಿವೆ!

ದೊರೆಯುವ ವಿವಿಧ ಪ್ರಯೋಜನಗಳು, ಅದರ ಅಗತ್ಯ, ಅದಕ್ಕಾಗಿ ಸಡಿಲಿಸಬೇಕಿರುವ ನಿಯಮಗಳು ಮುಂತಾದವುಗಳನ್ನೊಳಗೊಂಡ ಈ ಪ್ರಸ್ತಾಪ ತೀವ್ರ ಚರ್ಚೆಗೆ ದಾರಿಮಾಡಿಕೊಟ್ಟಿದೆ.

ಭಾರತದಲ್ಲಿ ಉನ್ನತ ಶಿಕ್ಷಣ ವ್ಯವಸ್ಥೆ ಸಾಕಷ್ಟು ವೇಗವಾಗಿ ಬೆಳೆಯುತ್ತಿದೆ. ವಿಶ್ವವಿದ್ಯಾಲಯ ಧನಸಹಾಯ ಆಯೋಗದಂತೆ ನಮ್ಮ ದೇಶದಲ್ಲಿ ೩೫೭ ವಿಶ್ವವಿದ್ಯಾಲಯಗಳಿವೆ. ಸರ್ಕಾರೀ ಹಾಗೂ ಖಾಸಗೀ ವಲಯಗಳಲ್ಲಿ ೧೨೨ ಡೀಮ್ಡ್ ವಿಶ್ವವಿದ್ಯಾಲಯಗಳಿವೆ: ವಿಜ್ಞಾನ, ವಾಣಿಜ್ಯ, ಎಂಜಿನಿಯರಿಂಗ್, ಮೆನೇಜ್‌ಮೆಂಟ್, ವೈದ್ಯಕೀಯ, ಕೃಷಿ ಶಿಕ್ಷಣ ನೀಡುವ ೧೭,೬೨೫ ಕಾಲೇಜುಗಳಿವೆ. ವಿಶ್ವಮಾನ್ಯತೆ ಪಡೆದಿರುವ ಭಾರತೀಯ ವಿಜ್ಞಾನ ಮಂದಿರ, ಐಐಟಿಗಳಂಥ ಸಂಸ್ಥೆಗಳಿವೆ. ಇವುಗಳಿಂದ ಪ್ರತಿವರ್ಷ ೩ ಲಕ್ಷ ಸ್ನಾತಕೋತ್ತರ ಪದವೀಧರರು, ೨೩ ಲಕ್ಷ ಪದವೀಧರರು ಹೊರಬರುತ್ತಾರೆ. ಇಷ್ಟಾದರೂ ಉನ್ನತ ಶಿಕ್ಷಣ ದೊರೆಯುತ್ತಿರುವುದು ನಮ್ಮ ಜನಸಂಖ್ಯೆಯ ಶೇಕಡ ೭ರಷ್ಟು ಜನರಿಗೆ ಮಾತ್ರ. ನಮ್ಮ ದೇಶದಲ್ಲಿ ಅತ್ಯಂತ ಪ್ರತಿಷ್ಠಿತ ಉನ್ನತ ಶಿಕ್ಷಣ ಕೇಂದ್ರಗಳೆಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ೫೦ ಕೇಂದ್ರಗಳಿವೆ. ಇಂಥ ಸಂಸ್ಥೆಗಳಿಗೆ ಪ್ರತಿವರ್ಷ ೫ ಲಕ್ಷ ವಿದ್ಯಾರ್ಥಿಗಳು ಪ್ರವೇಶ ಬಯಸಿ ಅರ್ಜಿ ಸಲ್ಲಿಸುತ್ತಾರೆ. ಆದರೆ ಪ್ರವೇಶ ದೊರೆಯುವುದು ಕೇವಲ ೨೦,೦೦೦ ವಿದ್ಯಾರ್ಥಿಗಳಿಗೆ ಮಾತ್ರ! ಉಳಿದವರು ಬೇರೆಡೆಗಳಲ್ಲಿ ತಮ್ಮ ಅದೃಷ್ಟವನ್ನು ಅರಸುತ್ತಾರೆ. ಅಮೆರಿಕಾ, ಇಂಗ್ಲೆಂಡ್, ಆಸ್ಟ್ರೇಲಿಯಾ, ಸಿಂಗಪುರ, ಕೆನಡಾ ಮುಂತಾದ ದೇಶಗಳ ಹಲವಾರು ವಿಶ್ವವಿದ್ಯಾಲಯಗಳು ಈ ವಿದ್ಯಾರ್ಥಿಗಳನ್ನು ಸೆಳೆಯುತ್ತವೆ. ಭಾರತದಲ್ಲಿ ವಿದೇಶೀ ಶಿಕ್ಷಣದ ಮಾರುಕಟ್ಟೆಯ ಮೌಲ್ಯ ವಾರ್ಷಿಕವಾಗಿ ೧೩,೫೦೦ ಕೋಟಿ ರೂ.ಗಳೆಂದು ಅಂದಾಜು ಮಾಡಲಾಗಿದೆ.

ಉತ್ತಮ ಉನ್ನತ ಶಿಕ್ಷಣವು ಸುಭದ್ರ ಭವಿಷ್ಯಕ್ಕೆ ಸೋಪಾನವೆಂದರಿತಿರುವ ಯುವಜನತೆಯಿಂದ ಉನ್ನತ ಶಿಕ್ಷಣಕ್ಕಿರುವ ಬೇಡಿಕೆ ನಿರಂತರವಾಗಿ ಏರುತ್ತಿದೆ. ಈ ಕ್ಷೇತ್ರಕ್ಕೆ ಕೇಂದ್ರ ಸರ್ಕಾರ ಮೀಸಲಿಟ್ಟಿರುವ ಒಟ್ಟು ಬಂಡವಾಳ ನಮ್ಮ ಸಗಟು ರಾಷ್ಟ್ರೋತ್ಪನ್ನದ ಶೇಕಡ ೦.೩೭ರಷ್ಟು ಮಾತ್ರ. ಉನ್ನತ ಶಿಕ್ಷಣದ ಪರಿಸ್ಥಿತಿ ಸಾಕಷ್ಟು ಸುಧಾರಿಸಬೇಕಾದರೆ ಶಿಕ್ಷಣಕ್ಕಿರುವ ಬಂಡವಾಳ ಸಗಟು ರಾಷ್ಟ್ರೋತ್ಪನ್ನದ ಶೇಕಡ ೨ ರಷ್ಟಕ್ಕೆ ಏರಿ, ಉನ್ನತ ಶಿಕ್ಷಣ ಕನಿಷ್ಠ ಶೇಕಡ ೨೫ರಷ್ಟು ಮಂದಿಗೆ ದೊರೆಯುವಂತಾಗಬೇಕು. ಆದರೆ ಸರ್ಕಾರವೊಂದರಿಂದಲೇ ಇದು ಅಸಾಧ್ಯ. ಹೀಗಾಗಿ ಖಾಸಗಿ ಮತ್ತು ವಿದೇಶೀ ಬಂಡವಾಳದಿಂದ ಪರಿಸ್ಥಿತಿಯನ್ನು ಸುಧಾರಿಸಬಹುದೆಂಬುದು ವಾಣಿಜ್ಯ ಮಂತ್ರಾಲಯದ ನಿಲುವು. ಉನ್ನತ ಶಿಕ್ಷಣಕ್ಕೆ ಸಬ್ಸಿಡಿಯನ್ನು ಕಡಿಮೆ ಮಾಡಿ, ಸರ್ಕಾರಿ ನಿಯಂತ್ರಣವನ್ನು ಸಡಿಲಗೊಳಿಸಿ, ಭಾರತಕ್ಕೆ ಬರುವ ವಿದೇಶೀ ವಿಶ್ವವಿದ್ಯಾಲಯಗಳ ಶಿಕ್ಷಕರ ಸಂಬಳ, ಶಿಕ್ಷಣ ಶುಲ್ಕ ಮುಂತಾದವುಗಳನ್ನು ಯುಜಿಸಿಯ ನಿಯಂತ್ರಣದಿಂದ ಹೊರಗಿರಿಸಿ, ವಿದೇಶೀ ವಿಶ್ವ ವಿದ್ಯಾಲಯಗಳ ಮುಕ್ತ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟರೆ ಭಾರತದಲ್ಲಿ ಉನ್ನತ ಶಿಕ್ಷಣದ ಪರಿಸ್ಥಿತಿ ಉತ್ತಮವಾಗುತ್ತದೆಂಬುದು ವಾಣಿಜ್ಯ ಮಂತ್ರಾಲಯದ ಅಭಿಪ್ರಾಯ.

ವಿದೇಶೀ ವಿಶ್ವವಿದ್ಯಾಲಯಗಳಿಗೆ ನಮ್ಮ ದೇ… ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ನೇರ ಬಂಡವಾಳ ಹೂ… ಮುಕ್ತ ಅವಕಾಶ ದೊರೆಯುತ್ತದೆ ಎಂದುಕೊಳ್ಳೋ… ಆಗ ಎಂಥ ವಿಶ್ವವಿದ್ಯಾಲಯಗಳು ಈ ಅವಕಾಶ… ಬಳಸಿಕೊಳ್ಳಬಹುದು? ವಿದೇಶೀ ವಿಶ್ವವಿದ್ಯಾಲಯ… ಭಾರತದಲ್ಲಿ ತಮ್ಮ ಕ್ಯಾಂಪಸ್‌ಗಳನ್ನು ಸ್ಥಾಪಿಸುವುದೆಂ… ಕೇವಲ ಕಟ್ಟಡಗಳನ್ನು ಕಟ್ಟುವುದಲ್ಲ. ಶಿಕ್ಷಕರು, ಬೋ… ಪ್ರಯೋಗಾಲಯ, ಲೈಬ್ರರಿ, ಕೈಗಾರಿಕೆಗಳೊಡನೆ ಸಂ… – ಈ ಎಲ್ಲವೂ ಆಯಾ ಪ್ರತಿಷ್ಠಿತ ವಿಶ್ವವಿದ್ಯಾಲಯ… ಹೆಸರಿಗೆ ಧಕ್ಕೆ ತರದಂತೆ ನಡೆಯಬೇಕು. ಇ… ಜಾಗತಿಕಮಟ್ಟದ ಸೌಲಭ್ಯ ಕಲ್ಪಿಸಲು ಹಣ ಬೇ… ಹೂಡಿದ ಬಂಡವಾಳವನ್ನು ಶುಲ್ಕದ ರೂಪ… ಹಿಂತಿರುಗಿ ಪಡೆಯಬೇಕು. ಇದರಿಂದ ಶಿಕ್ಷಣ … ಅತ್ಯಂತ ದುಬಾರಿಯಾಗುತ್ತದೆ. ಭಾರತದಲ್ಲಿ ಉ… ಶಿಕ್ಷಣಕ್ಕೆ ಧಾರಾಳವಾದ ಸಬ್ಸಿಡಿಯಿರುವುದರಿ… ದೆಹಲಿಯ ಸೈಂಟ್ ಸ್ಟೀಫನ್ಸ್, ಮುಂಬೈನ ಸೈ… ಕ್ಸೇವಿಯರ್, ಕೋಲ್ಕೊತ್ತಾದ ಪ್ರೆಸಿಡೆನ್ಸಿಯಂ… ಪ್ರತಿಷ್ಠಿತ ಕಾಲೇಜುಗಳಲ್ಲಿ ಉನ್ನತ ಶಿಕ್ಷಣಕ್ಕೆ … ವಿದ್ಯಾರ್ಥಿ ನೀಡುವ ಮಾಸಿಕ ಶುಲ್ಕ ಇಂದಿ… ನೂರಿನ್ನೂರು ರೂ.ಗಳಿಗಿಂತ ಹೆಚ್ಚಿಲ್ಲ! ಇಂಥ ಶು… ಒಗ್ಗಿಹೋಗಿರುವ ನಮ್ಮ ಬಹುತೇಕ ವಿದ್ಯಾರ್ಥಿಗ… ಲಕ್ಷಾಂತರ ರೂ.ಗಳ ಶುಲ್ಕವನ್ನು ನೀಡಲಾರ… ನೀಡಿದರೂ ಅದು ಶ್ರೀಮಂತ ವಿದ್ಯಾರ್ಥಿಗಳು ಮಾ… ಇಂಥ ಪರಿಸ್ಥಿತಿಯಲ್ಲಿ ಹಾರ್ವರ್ಡ್, ಸ್ಟಾನ್‌ಫರ್ಡ್… ಯೇಲ್ ಮುಂತಾದ ಪ್ರತಿಷ್ಠಿತ ವಿಶ್ವವಿದ್ಯಾಲಯಗ…

ಕ್ಯಾಂಪಸ್‌ಗಳನ್ನು ಸ್ಥಾಪಿಸುವ ಮಾತು ದೂರವೇ ಯುತ್ತದೆ. ಅದರ ಬದಲಿಗೆ ಈ ವಿಶ್ವವಿದ್ಯಾಲಯಗಳು ರತದಲ್ಲಿ ಅದೇ ಸ್ತರದಲ್ಲಿರುವ ಭಾರತೀಯ ವಿಜ್ಞಾನ ದಿರ, ಐಐಟಿ ಮುಂತಾದವುಗಳ ಸಹಯೋಗ ಪಡೆದು ಶೋಧನೆ, ಅಭಿವೃದ್ಧಿ, ವಿದ್ವಾಂಸರ ವಿನಿಮಯ, ಸಿಗೆಯ ಶಾಲೆ ಮುಂತಾದವುಗಳನ್ನು ನಡೆಸಬಹುದು. ಪ್ರತಿಷ್ಠಿತ ವಿಶ್ವವಿದ್ಯಾಲಯಗಳನ್ನು ಹೊರತುಪಡಿಸಿ ಡನೆಯ ಹಾಗೂ ಮೂರನೆಯ ದರ್ಜೆಯ ವಿದ್ಯಾಲಯಗಳು ಮಾತ್ರ ಭಾರತಕ್ಕೆ ಬರಬಹುದು. ವಿಶ್ವವಿದ್ಯಾಲಯಗಳು ಇಲ್ಲಿಗೆ ಬಂದರೂ ನಮ್ಮ ಶದ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳಿಗೆ ತ್ಯವಾದ ಪಠ್ಯ ವಿಷಯಗಳನ್ನು ಶಿಕ್ಷಣದಲ್ಲಿ ವಡಿಸುವ ಸಾಧ್ಯತೆ ಬಹು ಕಡಿಮೆ. ಅದು, ಈ ವಿದ್ಯಾಲಯಗಳಿಗೆ ಅಗತ್ಯವೂ ಅಲ್ಲ. ಈ ವಿದೇಶೀ ವಿದ್ಯಾಲಯಗಳು ನಮ್ಮ ದೇಶದ ಉತ್ತಮ ಶಿಕ್ಷಣ ಸ್ಥೆಗಳಿಂದ ಶಿಕ್ಷಕರನ್ನು ಆಕರ್ಷಿಸಿ, ಆ ಮೂಲಕವಾಗಿ ಸಂಸ್ಥೆಗಳ ಗುಣಮಟ್ಟ ಇಳಿಯಲು ಕಾರಣವಾಗ ಬಹುದು. ನಮ್ಮ ದೇಶದ ಸಮಸ್ಯೆಗಳ ಪರಿಹಾರಕ್ಕೆ ತ್ಯವಾದ ಶಿಕ್ಷಣಕ್ರಮವನ್ನು ರೂಪಿಸದೆ, ಅಗತ್ಯ ಜ್ಞಾನ-ಕೌಶಲಗಳನ್ನು ಬೆಳೆಸದೆ, ಇಲ್ಲಿ ಗಳಿಸಿದ ವನ್ನು ತಮ್ಮ ದೇಶಗಳಿಗೆ ರವಾನಿಸಿ, ಭಾರತದಲ್ಲಿ ರ-ಹಳ್ಳಿಗಳ ನಡುವೆಯಿರುವ ಕಂದರವನ್ನು ಮತ್ತಷ್ಟು ಸಬಹುದು. ನಮ್ಮ ಸರ್ಕಾರಕ್ಕೆ ಉನ್ನತ ಶಿಕ್ಷಣ ರುವ ಆಸಕ್ತಿ ಕಡಿಮೆಯಾಗುತ್ತಿರುವ ಈ ಸಂದರ್ಭದಲ್ಲಿ ದೇಶೀ ವಿಶ್ವವಿದ್ಯಾಲಯಗಳ ಪ್ರವೇಶ, ಸರ್ಕಾರ ಈ ದಿಂದ ಹಿಂದೆ ಸರಿಯುವುದನ್ನು ಮತ್ತಷ್ಟು ತಗೊಳಿಸಬಹುದು.

ವಿದೇಶೀ ವಿಶ್ವವಿದ್ಯಾಲಯಗಳ ಮುಕ್ತ ಪ್ರವೇಶದ ಪಕ್ಕೆ ಬಂದ ತೀವ್ರವಾದ ಪ್ರತಿಕ್ರಿಯೆಯ ಲೆಯಲ್ಲಿ ೨೦೦೫ರ ಜನವರಿಯಲ್ಲಿ ಭಾರತ ಸರ್ಕಾರ ಸಿ. ಎನ್. ಆರ್. ರಾವ್ ಅವರ ಅಧ್ಯಕ್ಷತೆಯಲ್ಲಿ ಮಿತಿಯೊಂದನ್ನು ರಚಿಸಿತು. ಈ ಸಮಿತಿ ನೀಡಿದ ಶಿಫಾರಸುಗಳ ಆಧಾರದ ಮೇಲೆ 'ವಿದೇಶೀ ಶಿಕ್ಷಣ ಒದಗಿಸುವವರ (ನಿಯಂತ್ರಣ) ವಿಧೇಯಕ' ಎಂಬ ಕರಡು ಶಾಸನವೊಂದನ್ನು ಕೇಂದ್ರ ಸರ್ಕಾರ ರೂಪಿಸಿದೆ. ಕರಡು ಶಾಸನದಂತೆ ಭಾರತಕ್ಕೆ ಬರುವ ವಿದೇಶೀ ವಿದ್ಯಾಲಯಗಳು ೧೦ ಕೋಟಿ ರೂ.ಗಳ ಠೇವಣಿ ನ್ನು ಯುಜಿಸಿಗೆ ನೀಡಬೇಕು. ಇಂಥ ವಿಶ್ವ ವಿದ್ಯಾಲಯಗಳ ಪೂರ್ವಾಪರಗಳನ್ನು ಪರಿಶೀಲಿಸಿದ ನಂತರ ಮೊದಲ ಹಂತದಲ್ಲಿ ಅಲ್ಪಾವಧಿಗೆ ಪ್ರವೇಶವನ್ನು ನೀಡಲಾಗುತ್ತದೆ. ಈ ಅವಧಿಯಲ್ಲಿ ಅದರ ಕಾರ್ಯಾಚರಣೆಯಲ್ಲಿ ಯಾವುದೇ ತೊಡಕು ತೊಂದರೆಗಳೂ ಕಾಣದಿದ್ದಲ್ಲಿ ದೀರ್ಘಾವಧಿಗೆ ಅನುಮತಿ ದೊರೆಯುತ್ತದೆ. ಅನುಮತಿ ದೊರೆತ ಎಲ್ಲ ವಿದೇಶೀ ವಿಶ್ವವಿದ್ಯಾಲಯಗಳಿಗೂ 'ಡೀಮ್ಡ್' ವಿಶ್ವವಿದ್ಯಾಲಯಗಳ ಸ್ಥಾನವನ್ನು ನೀಡಲಾಗುತ್ತದೆ. ಯುಜಿಸಿ, ಈ ವಿಶ್ವ ವಿದ್ಯಾಲಯಗಳ ಕೆಲಸದ ನಿಗಾವಣೆ ಮಾಡುತ್ತದೆ. ವಿದ್ಯಾರ್ಥಿಗಳ ಪ್ರವೇಶ, ಶುಲ್ಕ, ಬೋಧನೆಯ ಗುಣ ಮಟ್ಟ, ಒದಗಿಸಬೇಕಾದ ಸೌಲಭ್ಯಗಳು ಮುಂತಾದವು ಗಳಿಗೆ ಸಂಬಂಧಿಸಿದ ಯುಜಿಸಿಯ ನಿಯಮ-ನಿಬಂಧನೆ

## ಸಮಸ್ಯೆಗಳು

ಪಾಪ
ಅವು ತಾನೆ
ಏನು ಮಾಡ್ಯಾವು
ಸರ್ಕಾರದ
ರಿಂಗ್ ಮಾಸ್ಟರ್‌ಗಳು
ಆಡಿಸಿದಂತೆ
ಆಡುತ್ತಾ
ಅಲೆದಾಡುತ್ತಾ
ಸಾಯುತ್ತವೆ

ಕೆ ಮಲ್ಲಿಕಾರ್ಜುನ್...

ಗಳು ಈ ಎಲ್ಲ ವಿದೇಶೀ ವಿಶ್ವವಿದ್ಯಾಲಯಗಳಿಗೂ ಅನ್ವಯವಾಗುತ್ತವೆ. ಎಲ್ಲ ರೀತಿಯ ಮೀಸಲಾತಿಗಳನ್ನೂ ವಿದೇಶೀ ವಿಶ್ವವಿದ್ಯಾಲಯಗಳು ಪಾಲಿಸಬೇಕು. ವಿದೇಶೀ ವಿಶ್ವವಿದ್ಯಾಲಯಗಳ ಸ್ಥಾನ-ಮಾನ, ಖ್ಯಾತಿ ಹಾಗೂ ಇನ್ನಿತರ ಅಂಶಗಳನ್ನಾಧರಿಸಿ ಯುಜಿಸಿಯ ನಿಯಮ ಗಳಿಂದ ಅವುಗಳಿಗೆ ವಿನಾಯಿತಿ ನೀಡುವ ಅಂಶವೂ ಕರಡುಶಾಸನದಲ್ಲಿದೆ. ಈ ವಿನಾಯಿತಿಯ ಪ್ರಶ್ನೆಯನ್ನು ರಾಷ್ಟ್ರೀಯ ಪ್ರಾಧ್ಯಾಪಕರನ್ನೊಳಗೊಂಡ ಸಮಿತಿಯೊಂದು ಪರಿಶೀಲಿಸುತ್ತದೆ. ಇಂತಹ ವಿನಾಯಿತಿಯನ್ನು ಬಯಸುವ ವಿಶ್ವವಿದ್ಯಾಲಯಗಳು ಒಟ್ಟು ಬಂಡವಾಳದ ಶೇಕಡಾ ೫೧ರಷ್ಟನ್ನು ಭಾರತದಲ್ಲಿ ತೊಡಗಿಸಿರಬೇಕು. ಯಾವುದೇ ವಿದೇಶೀ ವಿಶ್ವವಿದ್ಯಾಲಯವು ಉನ್ನತ ಶಿಕ್ಷಣಕ್ಕೆ ಸಂಬಂಧಿ ಸಿದ ಭಾರತದ ಕಾನೂನುಗಳನ್ನು ಉಲ್ಲಂಘಿಸಿದಲ್ಲಿ, ಅಂತಹ ವಿಶ್ವವಿದ್ಯಾಲಯಗಳು ಇಟ್ಟಿರುವ ೧೦ ಕೋಟಿ ರೂ.ಗಳ ಠೇವಣಿಯನ್ನು ಯುಜಿಸಿ ಮುಟ್ಟುಗೋಲು ಹಾಕಿಕೊಳ್ಳಬಹುದು. ಈ ಎಲ್ಲ ನಿಬಂಧನೆಗಳೂ, ಬೇರೆಯ ಮಾರ್ಗದಿಂದ ಭಾರತಕ್ಕೆ ಬಂದು ಈಗಾಗಲೇ ಇಲ್ಲಿ ಕೆಲಸ ಮಾಡುತ್ತಿರುವ ಎಲ್ಲ ವಿದೇಶೀ ವಿದ್ಯಾಸಂಸ್ಥೆ ಗಳಿಗೆ ಅನ್ವಯವಾಗುತ್ತವೆ. ಈ ಕರಡುಶಾಸನ, ಶಾಸನವಾಗಿ ಜಾರಿಗೆ ಬಂದ ಆರು ತಿಂಗಳ ಒಳಗೆ, ಇಂತಹ ವಿದ್ಯಾ ಸಂಸ್ಥೆಗಳು ತಮ್ಮ ಸಂಸ್ಥೆಗಳನ್ನು ಯುಜಿಸಿಯಲ್ಲಿ ನೋಂದಣಿ ಮಾಡಿಸಬೇಕು. ಭಾರತಕ್ಕೆ ಬಂದನಂತರ ಯಾವ ವಿಶ್ವ ವಿದ್ಯಾಲಯವೂ ವಿದ್ಯಾರ್ಥಿಗಳನ್ನು ಆಕರ್ಷಿಸಲು ಉತ್ಪ್ರೇಕ್ಷಿತ ಮಾಹಿತಿಗಳನ್ನಾಗಲೀ, ಜಾಹಿರಾತುಗಳನ್ನಾಗಲೀ, ಪೊಳ್ಳು ಆಶ್ವಾಸನೆಗಳನ್ನಾಗಲೀ ನೀಡುವಂತಿಲ್ಲ. ಈ ಎಲ್ಲ ನಿಯಮಗಳು ವಿದೇಶೀ ವಿಶ್ವವಿದ್ಯಾಲಯಗಳ ಎಲ್ಲ ರೀತಿಯ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಅನ್ವಯವಾಗುತ್ತವೆ. ಈ ಕರಡು ಶಾಸನ, ಸಂಸತ್ತಿನ ಉಭಯಸದನಗಳಲ್ಲಿ ಮಂಡನೆಗೊಂಡು, ಚರ್ಚೆ, ಅನುಮೋದನೆಗಳ ನಂತರ ಶಾಸನವಾಗಬೇಕಾಗಿದೆ. ಈ ಕೆಲಸವನ್ನು ಅತ್ಯಂತ ತ್ವರಿತ ಗತಿಯಲ್ಲಿ ನಡೆಸುವುದಾಗಿ ಕಪಿಲ್ ಸಿಬಲ್ ಹೇಳಿದ್ದಾರೆ.

ನಮ್ಮ ದೇಶದ ವ್ಯವಸ್ಥೆಗಳು ಬಹು ವಿಚಿತ್ರ ! ಒಂದು ಕಡೆ ವಿದೇಶೀ ವಿಶ್ವವಿದ್ಯಾಲಯಗಳ ಪ್ರವೇಶಕ್ಕೆ ಕಟ್ಟು ನಿಟ್ಟಾದ ಶಾಸನ ರೂಪುಗೊಳ್ಳುತ್ತಿದೆ. ಇನ್ನೊಂದು ಕಡೆ ವಿಶ್ವ ವ್ಯಾಪಾರ ಸಂಸ್ಥೆ, 'ಗ್ಯಾಟ್'ಗಳ ಗೊಡವೆಯೇ ಇಲ್ಲದೆ ವಿದೇಶೀ ನೇರ ಬಂಡವಾಳ ಹೂಡಿಕೆಯ 'ಆಟೋಮ್ಯಾಟಿಕ್ ರೂಟ್'ನಿಂದ ಭಾರತಕ್ಕೆ ಬಂದಿರುವ ವಿದೇಶೀ ಶಿಕ್ಷಣ ಸಂಸ್ಥೆಗಳು ಕಳೆದ ಹತ್ತು ವರ್ಷಗಳಿಂದ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಭರ್ಜರಿ ವ್ಯಾಪಾರ ನಡೆಸುತ್ತಿವೆ. ಭಾರತದ ಖಾಸಗೀ ಶಿಕ್ಷಣ ಸಂಸ್ಥೆಗಳೊಡನೆ ಸಹಯೋಗದ ಒಪ್ಪಂದ ಮಾಡಿಕೊಂಡು ಉನ್ನತ ಶಿಕ್ಷಣ ನೀಡುತ್ತಿರುವ ೧೫೦ ವಿದೇಶೀ ವಿಶ್ವವಿದ್ಯಾಲಯಗಳು, ವಿದ್ಯಾಸಂಸ್ಥೆಗಳು ನಮ್ಮಲ್ಲಿವೆ. ಕರ್ನಾಟಕದಲ್ಲಿಯೇ ಇಂಥ ೧೩ ವಿದೇಶೀ ವಿದ್ಯಾಸಂಸ್ಥೆಗಳ ಸಹಯೋಗದ ವ್ಯವಸ್ಥೆಯಿದೆ. ಈ ಯಾವ ವಿದೇಶೀ ವಿದ್ಯಾಸಂಸ್ಥೆಗಳೂ ವಿಶ್ವದಾದ್ಯಂತ ಮನ್ನಣೆ ಪಡೆದಿರುವ ಉತ್ತಮಮಟ್ಟಕ್ಕೆ ಸೇರಿದವಲ್ಲ. ಈ ವಿಶ್ವವಿದ್ಯಾಲಯಗಳು, ವಿದ್ಯಾಸಂಸ್ಥೆಗಳು ನೀಡುತ್ತಿರುವ ೧೫೦ ಶೈಕ್ಷಣಿಕ ಕೋರ್ಸುಗಳಲ್ಲಿ ೪೪ ಕೋರ್ಸುಗಳಿಗೆ ಆ ದೇಶಗಳಲ್ಲೇ ಮನ್ನಣೆ ದೊರೆತಿಲ್ಲ. ವಿದೇಶೀ ಡಿಗ್ರಿಗಳಿಗೆ ನಮ್ಮಲ್ಲಿರುವ ಮೋಹವನ್ನು ಅನೇಕ ವಿದೇಶೀ ವಿಶ್ವವಿದ್ಯಾಲಯಗಳು ನಮ್ಮ ವಿದ್ಯಾರ್ಥಿಗಳನ್ನು ಯಶಸ್ವಿಯಾಗಿ ಶೋಷಿಸುತ್ತಿವೆ. ಯಾವುದೇ ಬೆಲೆಯಿಲ್ಲದ, ನ್ಯಾಯ ಸಮ್ಮತ ಸ್ಥಾನವೂ ಇಲ್ಲದ ಯಾವುದೇ ವಿದೇಶೀ ವಿಶ್ವವಿದ್ಯಾಲಯ ಭಾರತದಲ್ಲಿ ಮಾತ್ರ ಪುಟಗಟ್ಟಲೆ ಪೊಳ್ಳು ಆಶ್ವಾಸನೆಯ ಜಾಹಿರಾತು ನೀಡಿ ವಿದ್ಯಾರ್ಥಿ ಗಳನ್ನು ಆಕರ್ಷಿಸಬಹುದು. ವಿದೇಶೀ ವಿಶ್ವವಿದ್ಯಾಲಯಗಳ ಮುಕ್ತ ಪ್ರವೇಶಕ್ಕೆ ತೀವ್ರ ವಿರೋಧ ವ್ಯಕ್ತಪಡಿಸುತ್ತಿರುವ ಯಾವ ರಾಜಕೀಯ ಪಕ್ಷಗಳೂ, ಧುರೀಣರೂ, ವಿದೇಶೀ ವಿದ್ಯಾಸಂಸ್ಥೆಗಳಿಂದ ಈಗಾಗಲೇ ನಡೆಯುತ್ತಿರುವ ಶೈಕ್ಷಣಿಕ ವ್ಯಾಪಾರ, ಧಂಧೆಗಳ ಬಗ್ಗೆ ತಲೆಕೆಡಿಸಿಕೊಂಡಿಲ್ಲ, ಚಕಾರವೆತ್ತುವುದಿಲ್ಲ. ರಾಜಕೀಯ ನೇತಾಗಳೇ ಅನೇಕ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದ್ದು, ಇಂತಹ ಸಹಯೋಗದಿಂದ ಹಣ ಮಾಡುತ್ತಿರುವುದರಿಂದ, ಕರಡು ಶಾಸನ, ಅದೇ ರೂಪದಲ್ಲಿ ಕಟ್ಟುನಿಟ್ಟಾಗಿ ಶಾಸನವಾಗ ಬಹುದೆಂಬ ನಂಬಿಕೆಯೂ ಹೆಚ್ಚು ಜನರಿಗಿಲ್ಲ.

ಪ್ರತಿಯೊಂದು ದೇಶದಲ್ಲೂ ಒಂದಲ್ಲ ಒಂದು ವಿದೇಶೀ ವಿಶ್ವವಿದ್ಯಾಲಯವಿರುವುದು ಇಂದು ಬಹು ಸಾಮಾನ್ಯ ಸಂಗತಿ. ಹಾಗೆಯೇ ಪ್ರತಿಯೊಂದು ದೇಶವೂ ವಿದೇಶೀ ವಿಶ್ವವಿದ್ಯಾಲಯಗಳ ಪ್ರವೇಶಕ್ಕೆ ತನ್ನದೇ ಆದ ಕಾನೂನುಗಳನ್ನು ರೂಪಿಸಿದೆ.

ಇಂಗ್ಲೆಂಡಿನಲ್ಲಿ ೧೫೦ ಉನ್ನತ ಶಿಕ್ಷಣ ಕೇಂದ್ರಗಳಿವೆ. ಅವುಗಳಲ್ಲಿ ನಾಲ್ಕು ಮಾತ್ರ ಅಮೆರಿಕಾದ ವಿಶ್ವವಿದ್ಯಾಲಯ ಗಳು. ಮಲೇಷಿಯಾದಲ್ಲಿ 'ಭೂಮಿಪುತ್ರ' ನೀತಿ ಜಾರಿ ಯಲ್ಲಿದೆ. ಈ ನೀತಿಯಂತೆ, ಖಾಸಗಿ ಹಾಗೂ ವಿದೇಶೀ ವಿಶ್ವವಿದ್ಯಾಲಯಗಳು ಮಲೇಷಿಯಾದ ಭೂಮಿ ಪುತ್ರರಿಗೆ ಶಿಕ್ಷಣ ಒದಗಿಸುವಂತಿಲ್ಲ; ಮಲೇಷಿಯಾದಲ್ಲಿರುವ ಬೇರೆಯವರಿಗೆ ಶಿಕ್ಷಣ ನೀಡಬಹುದು. ಆದರೆ ಯಾವ ವಿದೇಶೀ ವಿಶ್ವವಿದ್ಯಾಲಯವೂ ಉನ್ನತ ಶಿಕ್ಷಣ ಒದಗಿಸು ವಂತಿಲ್ಲ. ಚೀನಾದಲ್ಲಿ ವಿದೇಶೀ ವಿಶ್ವವಿದ್ಯಾಲಯಗಳು ಪದವಿ ಶಿಕ್ಷಣ ನೀಡುವಂತಿಲ್ಲ. ವಾಣಿಜ್ಯ, ತಂತ್ರಜ್ಞಾನ, ವ್ಯಾಪಾರ ಕ್ಷೇತ್ರಗಳಿಗೆ ಸಂಬಂಧಪಟ್ಟಂತೆ ಕೌಶಲವನ್ನು ಅಭಿವೃದ್ಧಿಪಡಿಸುವ ಶಿಕ್ಷಣವನ್ನು ಮಾತ್ರ ನೀಡಬಹುದು.

ವಿದೇಶೀ ವಿದ್ಯಾಸಂಸ್ಥೆಗಳಿಗೆ ಸಂಬಂಧಿಸಿದಂತೆ ಅತ್ಯಂತ ಕಠಿಣ ನಿಯಮಗಳಿರುವ ದೇಶವೆಂದರೆ ಸಿಂಗಪುರ. ಪ್ರಪಂಚದ ಅತ್ಯಂತ ಪ್ರತಿಷ್ಠಿತ ವಿಶ್ವವಿದ್ಯಾಲಯಗಳಿಗೆ ಮಾತ್ರ ಅಲ್ಲಿ ಪ್ರವೇಶ ದೊರೆತಿದೆ. ಈ ವಿದೇಶೀ ಸಂಸ್ಥೆಗಳಲ್ಲಿ ಸಿಂಗಪುರದ ಪ್ರಜೆಗಳಲ್ಲದವರು ಮಾತ್ರ ಉನ್ನತ ಶಿಕ್ಷಣ ಪಡೆಯಬಹುದು. ಸಿಂಗಪುರದ ಪ್ರಜೆಗಳಿಗೆ ಉನ್ನತ ಶಿಕ್ಷಣ ಸಿಂಗಪುರದ ವಿಶ್ವವಿದ್ಯಾಲಯಗಳಲ್ಲಿಯೇ ದೊರೆಯುತ್ತದೆ. ಅಮೆರಿಕದ ಮಸಾಚ್ಯುಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಸಿಂಗಪುರದ ನ್ಯಾಷನಲ್ ವಿಶ್ವವಿದ್ಯಾಲಯದ ಜೊತೆಗೂಡಿ ಉನ್ನತ ಶಿಕ್ಷಣವನ್ನು ಒದಗಿಸುತ್ತದೆ. ಸಿಂಗಪುರದ ಪ್ರಜೆಗಳನ್ನು ಹೊರತುಪಡಿಸಿ ಪ್ರಪಂಚದ ಯಾವುದೇ ದೇಶದ ವಿದ್ಯಾರ್ಥಿಗಳು ಸಿಂಗಪುರಕ್ಕೆ ಬಂದು ಅಮೆರಿಕದ ಪ್ರತಿಷ್ಠಿತ ಸಂಸ್ಥೆ ಒದಗಿಸುವ ಉನ್ನತ ಶಿಕ್ಷಣವನ್ನು ಪಡೆಯಬಹುದು. ಇಂಡೋನೇಷ್ಯಾದಲ್ಲಿ ಯಾವುದೇ ವಿದೇಶೀ ವಿಶ್ವವಿದ್ಯಾಲಯ ನೀಡುವ ಶಿಕ್ಷಣಕ್ಕೆ, ಆ ವಿಶ್ವವಿದ್ಯಾಲಯದ ತಾಯಿನಾಡಿನಲ್ಲೂ ಮಾನ್ಯತೆ ದೊರೆತಿರಬೇಕು. ಭಾರತ ಮಾತ್ರ ಈ ಎಲ್ಲ ವಿಷಯಗಳಲ್ಲೂ ತೀರಾ ಉದಾರಿ! ಇಲ್ಲಿ ಎಲ್ಲವೂ ಸಾಧ್ಯ!

'ವಿದೇಶೀ ಶಿಕ್ಷಣ ಒದಗಿಸುವವರ (ನಿಯಂತ್ರಣ) ವಿಧೇಯಕ'ದ ಕರಡಿನಂತೆ ಭಾರತವನ್ನು ಪ್ರವೇಶಿಸಲು ಅನುಮತಿ ಪಡೆದ ವಿದೇಶೀ ವಿಶ್ವವಿದ್ಯಾಲಯಗಳಿಗೆ 'ಡೀಮ್ಡ್' ವಿಶ್ವವಿದ್ಯಾಲಯಗಳ ಸ್ಥಾನವನ್ನು ನೀಡಲಾಗುತ್ತದೆ. ಆದರೆ, ನಮ್ಮ ದೇಶದಲ್ಲಿ ಈ ಡೀಮ್ಡ್ ವಿಶ್ವವಿದ್ಯಾಲಯಗಳು ಹೇಗಿವೆಯೆಂಬುದನ್ನು ೨೦೦೯ರ ಅಕ್ಟೋಬರ್‌ನಲ್ಲಿ ಬಿಡುಗಡೆಯಾಗಿರುವ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯದ ಪರಿಶೀಲನಾ ಸಮಿತಿಯ ವರದಿ ತಿಳಿಸುತ್ತದೆ. ನಮ್ಮ ದೇಶದಲ್ಲಿಯ ೧೨೨ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿ ಎಲ್ಲ ದೃಷ್ಟಿಗಳಿಂದಲೂ ಅತ್ಯುತ್ತಮವಾಗಿರುವುವು ೩೮ ಸಂಸ್ಥೆಗಳು ಮಾತ್ರ! ೪೪ ಡೀಮ್ಡ್ ವಿಶ್ವವಿದ್ಯಾಲಯಗಳು ತಮ್ಮ ಮೂಲಭೂತ ಸೌಕರ್ಯ, ಸಂಶೋಧನೆ ಹಾಗೂ ಆಡಳಿತಗಳಲ್ಲಿ ನಿರ್ದಿಷ್ಟ ಬದಲಾವಣೆಗಳನ್ನು ಮಾಡಿಕೊಂಡಲ್ಲಿ ಮಾತ್ರ ತಮ್ಮ 'ಡೀಮ್ಡ್ ಸ್ಥಾನ'ವನ್ನು ಕಾಯ್ದುಕೊಳ್ಳಬಹುದು. ಉಳಿದ ೪೦ ಸಂಸ್ಥೆಗಳೂ ಯಾವ ದೃಷ್ಟಿಯಿಂದಲೂ 'ಡೀಮ್ಡ್ ವಿಶ್ವವಿದ್ಯಾಲಯ'ದ ಸ್ಥಾನಕ್ಕೆ ಅರ್ಹವಲ್ಲ. ಈ ಅನರ್ಹ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿ ಹರ್ಯಾಣದಲ್ಲಿ ಮೂರು, ಉತ್ತರ ಪ್ರದೇಶ ಮತ್ತು ಉತ್ತರ ಖಂಡಗಳಲ್ಲಿ ತಲಾ ಎರಡು ಸಂಸ್ಥೆಗಳಿದ್ದರೆ ಉಳಿದವು ದಕ್ಷಿಣ ಭಾರತದಲ್ಲಿವೆ. ಇವುಗಳಲ್ಲಿ ಅಗ್ರಪಾಲು ಕರ್ನಾಟಕ ಮತ್ತು ತಮಿಳುನಾಡುಗಳಿಗೆ. ಡೀಮ್ಡ್ ವಿ
ವಿದ್ಯಾಲಯಗಳ ಸ್ಥಾನ-ಮಾನಗಳಿಗೆ ಈ ಸಂಸ್ಥೆಗಳು ಅನರ್ಹವಾಗಿದ್ದರೂ, ಈಗಾಗ
ನೀಡಿರುವ 'ಡೀಮ್ಡ್' ಅಂತಸ್ತಿನ ಮಾನ್ಯತೆಯನ್ನು ತಾಂತ್ರಿಕ ಕಾರಣಗಳಿಂದಾ
ಸುಲಭವಾಗಿ ರದ್ದುಗೊಳಿಸುವಂತಿಲ್ಲ. ಇಂಥ ಹತ್ತಾರು ಲೋಪ-ದೋಷ, ನ್ಯೂನತೆಗ
ಲಾಭ ಭಾರತಕ್ಕೆ ಬರಲಿರುವ ಎಲ್ಲ ವಿಶ್ವವಿದ್ಯಾಲಯಗಳಿಗೂ ಲಭಿಸುತ್ತದೆ.

ವಿದೇಶೀ ವಿಶ್ವವಿದ್ಯಾಲಯಗಳು ಭಾರತಕ್ಕೆ ಬಂದರೆ ಉತ್ತಮ ಗುಣಮಟ್ಟದ ಉನ
ಶಿಕ್ಷಣ ನಮ್ಮ ಯುವಕರಿಗೆ ಇಲ್ಲಿಯೇ ದೊರೆಯುತ್ತದೆ; ಹೀಗಾಗಿ ಅವುಗಳನ್ನು ಸಾ
ಸ್ವಾಗತಿಸಬೇಕು ಎಂಬ ವಾದವಿದೆ. ಆದರೆ ನಮ್ಮ ವಿಶ್ವವಿದ್ಯಾಲಯಗಳೇ ಈ ಮಟ್ಟ
ಶಿಕ್ಷಣವನ್ನು ಕೊಡುವುದು ಸಾಧ್ಯವಿಲ್ಲವೇ? ಈ ಪ್ರಯತ್ನಕ್ಕೆ ಬೃಹತ್ ಬಂಡವಾ
ಬೇಕು. ಅಂತಹ ಬಂಡವಾಳವನ್ನು ಒದಗಿಸುವ ಪ್ರಯತ್ನ ಸರ್ಕಾರದಿಂದ ನಡೆದಿ
ನಮ್ಮ ದೇಶದಲ್ಲಿನ ಆಯ್ದ ವಿಶ್ವವಿದ್ಯಾಲಯಗಳು ಹಾಗೂ ಕಾಲೇಜುಗಳನ್ನು ಉನ
ಮಟ್ಟಕ್ಕೇರಿಸುವ ಯೋಜನೆ ೨೦೦೬ರಲ್ಲೇ ಪ್ರಾರಂಭವಾಗಿದೆ. ಕೋಲ್ಕತ್ತಾ, ಮುಂ
ಮತ್ತು ಚೆನ್ನೈಗಳಲ್ಲಿರುವ ಪ್ರೆಸಿಡೆನ್ಸಿ ವಿಶ್ವವಿದ್ಯಾಲಯಗಳನ್ನು ೬೦ ಕೋಟಿ ರೂ.ಗ
ವೆಚ್ಚದಲ್ಲಿ ಕೇಂದ್ರೀಯ ಸಂಸ್ಥೆಗಳನ್ನಾಗಿ ಪರಿವರ್ತಿಸಲಾಗಿದೆ. ಬನಾರಸ್ ಹಿಂದ
ವಿಶ್ವವಿದ್ಯಾಲಯದ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಹೌರಾದಲ್ಲಿರುವ ಬೆಂಗಾ
ಇಂಜಿನಿಯರಿಂಗ್ ಕಾಲೇಜ್, ಉಸ್ಮಾನಿಯಾ ವಿಶ್ವವಿದ್ಯಾಲಯದ ಯೂನಿವರ್ಸಿ
ಕಾಲೇಜ್ ಆಫ್ ಇಂಜಿನಿಯರಿಂಗ್, ಜಾಧವಪುರ ವಿಶ್ವವಿದ್ಯಾಲಯದ ಇಂಜಿನಿಯರಿಂ
ವಿಭಾಗ, ಕೊಚ್ಚಿನ್ ವಿಜ್ಞಾನ ಮತ್ತು ತಂತ್ರಜ್ಞಾನ ವಿಶ್ವವಿದ್ಯಾಲಯ, ಆಲಿಘರ್ ಮುಸ
ವಿಶ್ವವಿದ್ಯಾಲಯದ ಜಾಕಿರ್ ಹುಸೇನ್ ಕಾಲೇಜ್ ಆಫ್ ಇಂಜಿನಿಯರಿಂಗ್ ಅಂ
ಟೆಕ್ನಾಲಜಿ ಮತ್ತು ಆಂಧ್ರ ಇಂಜಿನಿಯರಿಂಗ್ ಕಾಲೇಜ್ – ಈ ಏಳು ಕೇಂದ್ರಗಳು ೫೫
ಕೋಟಿ ರೂ.ಗಳ ವೆಚ್ಚದಲ್ಲಿ ಪ್ರತಿಷ್ಠಿತ ಐಐಟಿಗಳ ಮಾದರಿಗೆ ಪರಿವರ್ತ
ಗೊಳ್ಳುತ್ತಲಿವೆ. ಪುಣೆ ಮತ್ತು ಕೋಲ್ಕತ್ತಾಗಳಲ್ಲಿ ಎರಡು ಇಂಡಿಯನ್ ಇನ್‌ಸ್ಟಿಟ್ಯೂ
ಆಫ್ ಸೈನ್ಸ್ ಎಜುಕೇಷನ್ ಸಂಸ್ಥೆಗಳು ಪ್ರಾರಂಭವಾಗಿವೆ. ಪಂಜಾಬ್, ಮಧ್ಯ ಹಾಗ
ದಕ್ಷಿಣ ಭಾರತಗಳಲ್ಲಿ ಇದೇ ರೀತಿಯ ಮೂರು ಸಂಸ್ಥೆಗಳು ರೂಪುಗೊಂಡಿವೆ. ಶ್ರೇ
ಮಟ್ಟಕ್ಕೇರುವ ಸುಪ್ತ ಸಾಮರ್ಥ್ಯವಿರುವ ಆಯ್ದ ಕಾಲೇಜು, ವಿಶ್ವವಿದ್ಯಾಲಯಗಳನ್ನು ೪೬

ೋಟಿ ರೂ.ಗಳ ವೆಚ್ಚದಲ್ಲಿ ಉತ್ಕೃಷ್ಟ ಕೇಂದ್ರಗಳನ್ನಾಗಿ ರೂಪಿಸ
ುತ್ತದೆ. ಜೀವವಿಜ್ಞಾನ ಕ್ಷೇತ್ರದಲ್ಲಿ ಅಸಾಧಾರಣ ಸಾಧನೆ
ಾಡಿರುವ ಒಂಭತ್ತು ವಿಶ್ವವಿದ್ಯಾಲಯಗಳನ್ನು ೧೮೦ ಕೋಟಿ
.ಗಳ ವೆಚ್ಚದಲ್ಲಿ 'ಸೆಂಟರ್ ಫಾರ್ ಎಕ್ಸಲೆನ್ಸ್' ದರ್ಜೆಗೆ
ಸಲಾಗುತ್ತದೆ. ಉನ್ನತ ಮಟ್ಟದ ಸಂಶೋಧನೆಯಲ್ಲಿ
ತವಾಗಿರುವ ಕೆಲವು ಸಂಶೋಧನಾ ಸಂಸ್ಥೆಗಳಿಗೆ ಒಟ್ಟು
೦ ಕೋಟಿ ರೂ.ಗಳ ವಿಶೇಷ ನೆರವು ದೊರೆತಿದೆ. ಆದರೆ
ಎಲ್ಲ ಸಂಸ್ಥೆಗಳನ್ನು ಸೇರಿಸಿದರೂ, ನಮ್ಮ ದೇಶದಲ್ಲಿ
ತ್ಕೃಷ್ಟ ಮಟ್ಟದ ಉನ್ನತ ಶಿಕ್ಷಣ ನೀಡುವ ಕೇಂದ್ರಗಳ ಸಂಖ್ಯೆ
೦ನ್ನು ದಾಟುವುದಿಲ್ಲ. ೩೫೭ ವಿಶ್ವವಿದ್ಯಾಲಯಗಳು,
೨ ಡೀಮ್ಡ್ ವಿಶ್ವವಿದ್ಯಾಲಯಗಳು, ೧೭,೬೨೫
ಲೇಜುಗಳಿಂದ ಇಡೀ ಪ್ರಪಂಚದಲ್ಲೇ ಅಗಾಧವಾದ
ಣಿಕ ಜಾಲವನ್ನು ಹೊಂದಿರುವ ನಮ್ಮ ದೇಶ ಉತ್ಕೃಷ್ಟ
ನ್ನತ ಶಿಕ್ಷಣ ನೀಡುವುದರಲ್ಲಿ ಎಲ್ಲಿ ಸೋಲುತ್ತಿದೆ? ಈ
ನೆಗೆ ಉತ್ತರ ಚೀನಾ ದೇಶದ ಗುಣಾತ್ಮಕ ಉನ್ನತ ಶಿಕ್ಷಣ
ದರಿಯಲ್ಲಿ ನಮಗೆ ದೊರೆಯುತ್ತದೆ.




ಹದಿನೈದು ವರ್ಷಗಳಿಗಿಂತ ಹಿಂದೆ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಭಾರತ ಮತ್ತು
ನಾಗಳ ನಡುವೆ ಅಂತಹ ವ್ಯತ್ಯಾಸವಿರಲಿಲ್ಲ, ಆದರೆ ಅನಂತರ ಅಗತ್ಯಕ್ಕೆ ತಕ್ಕಂತೆ
ಾಡಿದ ಬಂಡವಾಳದಿಂದ, ಮೂಲಭೂತ ಸೌಲಭ್ಯಗಳು, ಅವುಗಳ ಉಸುವಾರಿಯಲ್ಲಿ
ನಾದ ವಿಶ್ವವಿದ್ಯಾಲಯಗಳು ಹಾಗೂ ಸಂಶೋಧನಾ ಸಂಸ್ಥೆಗಳು ಇಂದು ಅಮೆರಿಕಾ
ತ್ತು ಯೂರೋಪಿನ ಯಾವುದೇ ವಿಶ್ವವಿದ್ಯಾಲಯದೊಂದಿಗೆ ಸ್ಪರ್ಧಿಸಬಲ್ಲವು.
ನವ ಬಂಡವಾಳದ ನಿರ್ವಹಣೆಯಲ್ಲಿಯೂ ಇದೇ ಅಚ್ಚುಕಟ್ಟುತನವಿದೆ. ಚಿಂಗ್-ಹುವ,
ಜಿಂಗ್, ಫೂದಾಂಗ್‌ಗಳೂ ಸೇರಿದಂತೆ ಚೀನಾದ ಬಹುತೇಕ ವಿಶ್ವವಿದ್ಯಾಲಯಗಳಲ್ಲಿ
ಾವ ಕೆಲಸವೂ ಕಾಯಂ ಅಲ್ಲ, ಎಲ್ಲವೂ ಮೂರು ವರ್ಷದ ಒಪ್ಪಂದದ ಕೆಲಸಗಳು.
ವರ್ಷ ನಡೆಯುವ ಮೌಲ್ಯಮಾಪನದಲ್ಲಿ ಕೆಲಸ ತೃಪ್ತಿಕರವಾಗಿ, ಉತ್ತಮವಾಗಿದ್ದರೆ
ತ್ರ ಮುಂದುವರಿಕೆ. ದೊರೆಯುವ ಸಂಬಳದಲ್ಲಿ ಮೂರು ಭಾಗ. ಒಂದು ಸರ್ಕಾರ
ದ, ಎರಡು ವಿಶ್ವವಿದ್ಯಾಲಯದ ಕಡೆಯಿಂದ, ಮೂರನೆಯದು ಸಂಪೂರ್ಣವಾಗಿ
ಾಡಿದ ಕೆಲಸದ ಗುಣಮಟ್ಟಕ್ಕೇ ದೊರೆಯುವ ಪ್ರತಿಫಲ. ಈ ಪದ್ಧತಿಯಲ್ಲಿ ವಿದ್ವತ್ತು,
ಣತಿ ಹಾಗೂ ಪರಿಶ್ರಮವನ್ನು ಗುರುತಿಸಿ, ಸೂಕ್ತವಾಗಿ ಗೌರವಿಸುವ ವ್ಯವಸ್ಥೆ
ರುವುದರಿಂದ ಪ್ರತಿಭಾವಂತರಿಗೆ ಪ್ರೋತ್ಸಾಹ ದೊರೆಯುತ್ತದೆ. ಸಂಶೋಧನೆ ಮತ್ತು
ಭಿವೃದ್ಧಿ ಕ್ಷೇತ್ರಗಳಲ್ಲಿ ಮುಂಚೂಣಿಯಲ್ಲಿರುವ ಪ್ರಪಂಚದ ಎಲ್ಲ ಶಿಕ್ಷಣ, ಸಂಶೋಧನೆ,
ಭಿವೃದ್ಧಿ ಸಂಸ್ಥೆಗಳಲ್ಲಿ ಇದೇ ಪದ್ಧತಿಯಿರುವುದನ್ನು ಗಮನಿಸಬೇಕು. ವಾರ್ಷಿಕ ಮೌಲ್ಯ
ಪನದಲ್ಲಿ ಪ್ರತಿಷ್ಠಿತ ಸಂಶೋಧನಾ ಪತ್ರಿಕೆಗಳಲ್ಲಿ ವಿಜ್ಞಾನಿ/ ಪ್ರಾಧ್ಯಾಪಕ ಪ್ರಕಟಿಸಿರುವ
ಬಂಧಗಳ ಸಂಖ್ಯೆಯನ್ನು ಮಾತ್ರ ಗಮನಿಸುವುದಿಲ್ಲ, ಅವುಗಳ ಮಹತ್ವವನ್ನು 'ಸೈನ್ಸ್
ೇಶನ್ ಇಂಡೆಕ್ಸ್' ಮತ್ತು 'ಇಂಜಿನಿಯರಿಂಗ್ ಸೈಟೇಶನ್ ಇಂಡೆಕ್ಸ್'ಗಳಿಂದ –
ದರೆ ಪ್ರಪಂಚದ ಇನ್ನಿತರ ವಿಜ್ಞಾನಿಗಳು, ಸಂಶೋಧಕರು, ಈ ವಿಜ್ಞಾನಿಗಳ
ಶೋಧನೆಯನ್ನು ಎಷ್ಟು ಬಾರಿ, ಎಲ್ಲಿ ಉದಾಹರಿಸಿದ್ದಾರೆ, ಎಂತಹ ಪರಿಣಾಮ
ರಿದೆ ಎಂಬುದರ ಮೂಲಕ – ಮೌಲ್ಯಮಾಪನ ಮಾಡಲಾಗುತ್ತದೆ.
ಶೋಧನೆಯ ಮುಂದುವರಿಕೆಗೆ ಧನಸಹಾಯ ದೊರೆಯುವುದು ಈ ಮೌಲ್ಯ
ಪನದ ನಂತರ ಮಾತ್ರ. ನಿರಂತರವಾಗಿ ಗುಣಮಟ್ಟವನ್ನು ಕಾಯ್ದುಕೊಳ್ಳಬೇಕಾದ
ವಾರ್ಯತೆ, ಪ್ರಕಟಿಸಲೇಬೇಕಾದ ಒತ್ತಾಯ, ಸ್ಪರ್ಧಾತ್ಮಕ ಪರಿಸರದಲ್ಲಿ
ಂಚೂಣಿಯಲ್ಲಿರಬೇಕಾದ ಅಗತ್ಯಗಳಿಂದಾಗಿ ಚೀನಾದ ಉನ್ನತ ಶಿಕ್ಷಣ ಸಂಸ್ಥೆಗಳು
ದು ಉತ್ಕೃಷ್ಟ ಕೇಂದ್ರಗಳಾಗಿ ಭಾರತಕ್ಕೆ ಹೋಲಿಸಿದರೆ ಬಹಳ ಮುಂದಿವೆ.

'ಉನ್ನತ ಶಿಕ್ಷಣದ ಅವಕಾಶಗಳನ್ನು ಪ್ರಜೆಗಳಿಗೆ ಒದಗಿಸುವುದು ತನ್ನ ಬಾಧ್ಯತೆ
ತ್ತು ಕರ್ತವ್ಯ; ವಾಣಿಜ್ಯೀಕರಣ ಮತ್ತು ಲಾಭ ಮಾಡುವುದು ವಿಶ್ವವಿದ್ಯಾಲಯಗಳ
ಯ ಸಮ್ಮತ ಗುರಿ ಅಲ್ಲ' ಎಂಬ ನಿಲುವನ್ನು ಭಾರತ ಸರ್ಕಾರ ಮೊದಲಿನಿಂದಲೂ
ದಿದೆ. ಸರ್ವೋಚ್ಚ ನ್ಯಾಯಾಲಯ, ಸಂವಿಧಾನವನ್ನು ಆಧರಿಸಿ ನೀಡಿರುವ ಹಲವಾರು
ಹತ್ವದ ತೀರ್ಪುಗಳೂ ಇದೇ ತತ್ವವನ್ನು ಪುಷ್ಟೀಕರಿಸಿವೆ. ಶಿಕ್ಷಣ, ಮೂಲಭೂತವಾಗಿ
ಭ ಮಾಡುವುದೇ ಮುಖ್ಯ ಉದ್ದೇಶವಾಗಿರುವ ವ್ಯಾಪಾರವಾಗಲೀ, ಉದ್ಯಮವಾಗಲೀ
ಲ್ಲ, ಅದು ಧರ್ಮಾರ್ಥ, ದಾನಶೀಲ ಚಟುವಟಿಕೆ ಎಂಬುದು ನ್ಯಾಯಾಲಯದ
ನಿಲುವು. ವಿದ್ಯಾರ್ಥಿಗಳಿಂದ ಸಾವಿರಾರು ರೂ.ಗಳಷ್ಟು ಶುಲ್ಕ ಪಡೆಯುವ ವಿದ್ಯಾಸಂಸ್ಥೆಗಳು, ಆ ಹಣದ ಉದ್ದೇಶ ಲಾಭ ಮಾಡುವುದಲ್ಲ ಅದರ ಬದಲಿಗೆ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅಗತ್ಯವಾದ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಎನ್ನುತ್ತಿವೆ!

ಭಾರತದಲ್ಲಿರುವ ಯಾವುದೇ ವಿಶ್ವವಿದ್ಯಾಲಯ ಲಾಭ ಮಾಡುವ ವ್ಯಾಪಾರೀ ಸಂಸ್ಥೆಯಂತೆ ಕೆಲಸ ಮಾಡುವಂತಿಲ್ಲ, ಈ ನಿಯಮದಡಿ ಭಾರತಕ್ಕೆ ಬರಲಿರುವ ವಿದೇಶೀ ವಿಶ್ವ ವಿದ್ಯಾಲಯಗಳು ಕೂಡ ಲಾಭ ಮಾಡುವಂತಿಲ್ಲ, ಹೀಗಾಗಿ ಅವು ಕೂಡ 'ಚಾರಿಟಬಲ್' ಸ್ಥಾನವನ್ನು ಒಪ್ಪಿ ಕೊಂಡು, ನಮ್ಮ ಕಾನೂನುಗಳಿಗೆ ಅನುಸಾರವಾಗಿ ಕೆಲಸ ಮಾಡುವುದಾದರೆ ಅಂತಹ ವಿಶ್ವವಿದ್ಯಾಲಯಗಳ ಪ್ರವೇಶವನ್ನು ಸರ್ಕಾರ ಖಂಡಿತವಾಗಿ ಪರಿಗಣಿಸಬಹುದು. ಆದರೆ 'ಗ್ಯಾಟ್ಸ್'ನ ಮೂಲಭೂತ ಉದ್ದೇಶವೇ ವ್ಯಾಪಾರ, ವಾಣಿಜ್ಯ ಒಪ್ಪಂದಗಳ ಮೂಲಕ ಲಾಭ ಮಾಡುವುದು. ವಿದೇಶೀ ವಿಶ್ವವಿದ್ಯಾಲಯಗಳ ಪ್ರವೇಶಕ್ಕೆ ಅನುಮತಿ ನೀಡಿದರೆ, ''ವಿಶ್ವವಿದ್ಯಾಲಯಗಳ ಶಿಕ್ಷಣದ ಉದ್ದೇಶ ಲಾಭ ಮಾಡುವುದಲ್ಲ, ವಿಶ್ವವಿದ್ಯಾಲಯಗಳು ವ್ಯಾಪಾರೀ ಸಂಸ್ಥೆಗಳೂ ಅಲ್ಲ'' ಎಂಬ ತನ್ನ ನಿಲುವನ್ನು ಭಾರತದ ಸರ್ಕಾರ ತ್ಯಜಿಸಬೇಕಾಗುತ್ತದೆ.

ನಮ್ಮ ದೇಶದಲ್ಲಿ ದೊರೆಯದಂತಹ ಉನ್ನತ ಮಟ್ಟದ ಶಿಕ್ಷಣಕ್ಕಾಗಿ ವಿದ್ಯಾರ್ಥಿಗಳು ವಿದೇಶಕ್ಕೆ ಹೋಗಬಯಸಿದರೆ ಅದು ಖಂಡಿತವಾಗಿ ತಪ್ಪಲ್ಲ, ಆದರೆ ಈ ವಿದ್ಯಾರ್ಥಿಗಳು ಶಿಕ್ಷಣ ಪಡೆದನಂತರ ಏನು ಮಾಡುತ್ತಾರೆ ಎಂಬುದನ್ನು ಗಮನಿಸಿ. ಅಮೆರಿಕಾದ 'ನ್ಯಾಷನಲ್ ಸೈನ್ಸ್ ಫೌಂಡೇಶನ್' ಪ್ರಕಟಿಸಿರುವ 'ಸೈನ್ಸ್ ಅಂಡ್ ಇಂಜಿನಿಯರಿಂಗ್ ಇಂಡಿಕೇಟರ್ಸ್' ದಾಖಲೆಯಂತೆ ವಿದೇಶದಲ್ಲಿ ಶಿಕ್ಷಣ ಪಡೆದ ಶೇಕಡ ೬೦ರಷ್ಟು ಭಾರತೀಯ ವಿದ್ಯಾರ್ಥಿಗಳು ಅಲ್ಲಿಯೇ ಉಳಿಯುತ್ತಾರೆ! ವಿದೇಶೀ ವಿಶ್ವವಿದ್ಯಾಲಯಗಳು ಭಾರತಕ್ಕೆ ಬಂದು ಉತ್ತಮ ಗುಣಮಟ್ಟದ ಶಿಕ್ಷಣ ನೀಡಿದರೂ, ಅದನ್ನು ಪಡೆದ ಭಾರತೀಯ ವಿದ್ಯಾರ್ಥಿಗಳು ವಿದೇಶಗಳಿಗೆ ಹೋಗುವ ಸಾಧ್ಯತೆಯೇ ಹೆಚ್ಚು. ಹೀಗಾಗಿ ಉನ್ನತ ಶಿಕ್ಷಣ ಪಡೆದ ವಿದ್ಯಾರ್ಥಿಗಳನ್ನು ವಿದೇಶೀ ಮಾರುಕಟ್ಟೆಗಳಿಗೆ ಸರಬರಾಜು ಮಾಡುವ ಕೇಂದ್ರಗಳಾಗಿ ಈ ವಿಶ್ವವಿದ್ಯಾಲಯಗಳು ಕೆಲಸ ಮಾಡಿದರೆ ಆಶ್ಚರ್ಯವೇನಿಲ್ಲ! ಇಂಥ ವಿಶ್ವವಿದ್ಯಾಲಯಗಳನ್ನು ಸ್ವಾಗತಿಸಿ, ಅವುಗಳಿಗೆ ಎಲ್ಲ ಅನುಕೂಲಗಳನ್ನೂ ಕಲ್ಪಿಸಿಕೊಡುವುದು ಭಾರತ ಸರ್ಕಾರಕ್ಕೆ ಆದ್ಯತೆಯ ವಿಷಯವಾಗಬೇಕೇ?

ವಿದೇಶೀ ವಿಶ್ವವಿದ್ಯಾಲಯಗಳಿಗೆ ಭಾರತದ ಉನ್ನತ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸುವ ಅವಕಾಶ ನೀಡುವ ವಿಧೇಯಕವನ್ನು ಆದಷ್ಟು ತ್ವರಿತವಾಗಿ ಸಂಸತ್ತಿನಲ್ಲಿ ಮಂಡಿಸುವುದಾಗಿ ಕಪಿಲ್ ಸಿಬಲ್ ಹೇಳಿದ್ದಾರೆ. 'ಗ್ಯಾಟ್ಸ್' ಒಪ್ಪಂದದಡಿಯಲ್ಲಿ ವಿದೇಶೀ ವಿಶ್ವವಿದ್ಯಾಲಯಗಳಿಗೆ ಪ್ರವೇಶ ನೀಡುವ ಮುನ್ನ ನಮ್ಮ ಹಿತವನ್ನು ಕಾಪಾಡಿಕೊಳ್ಳುವ ಎಲ್ಲ ಅವಕಾಶಗಳೂ ನಮಗಿವೆ. ಕರಡು ಶಾಸನದಲ್ಲಿ ಇಂಥ ಅವಕಾಶಗಳಿವೆ ಯೆನ್ನಲಾಗಿದೆ. ಇಷ್ಟೆಲ್ಲ ಕಟ್ಟುಪಾಡುಗಳಿದ್ದರೂ, ಲಾಭದ ಆಸೆಯನ್ನು ಬದಿಗಿಟ್ಟು, ನಮ್ಮ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣ ನೀಡುವ ಸ್ವಾರ್ಥರಹಿತ ಮನೋಭಾವದಿಂದ ವಿದೇಶೀ ವಿಶ್ವವಿದ್ಯಾಲಯಗಳು ಭಾರತಕ್ಕೆ ಬರುತ್ತವೆ ಎಂದು ನಿರೀಕ್ಷಿಸುವುದು ಹುಂಬತನವಾಗುತ್ತದೆ. ಈ ನಿಯಮ, ನಿಬಂಧನೆಗಳನ್ನು ಸಡಿಲಿಸಿ, ಉನ್ನತ ಶಿಕ್ಷಣವನ್ನು ವಿದೇಶೀಯರ ಮುಕ್ತ ಪ್ರವೇಶಕ್ಕೆ ತೆರೆದಿಡುವಂತೆ ಜಾಗತೀಕರಣದ ಪರವಾಗಿರುವ ರಾಷ್ಟ್ರಗಳು, ಶಕ್ತಿಗಳು, ಲಾಬಿಗಳು ಪ್ರಯತ್ನಿಸುವುದರಲ್ಲಿ ಸಂದೇಹವೇ ಇಲ್ಲ. ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಸುಲಭ ಪ್ರವೇಶ ಕಲ್ಪಿಸಿದರೆ ಮಾತ್ರ, ವಿದೇಶೀ ಸಹಕಾರ ಬೇಕಿರುವ ಉಳಿದ ಕ್ಷೇತ್ರಗಳಲ್ಲಿ ವ್ಯವಹಾರವನ್ನು ಸುಗಮಗೊಳಿಸುವ ಒತ್ತಡವೂ ಭಾರತದ ಮೇಲೆ ಬರುತ್ತದೆ. ಕ್ಷುಲ್ಲಕ, ಹಣದಾಹಿ ರಾಜಕಾರಣವನ್ನು ಶಿಕ್ಷಣ ಕ್ಷೇತ್ರದಿಂದ ಹೊರಗಿಟ್ಟು, ನಮ್ಮ ಯುವ ಜನರ, ದೇಶದ, ಭವಿಷ್ಯದ ದೃಷ್ಟಿಯಿಂದ ನಿರ್ಣಾಯಕವಾದ ಕ್ರಮವನ್ನು ಕೈಗೊಳ್ಳಬೇಕಾದ ಸರ್ಕಾರ ತನ್ನಮೇಲೆ ಬರಲಿರುವ ಒತ್ತಡಗಳನ್ನು ಹೇಗೆ ನಿರ್ವಹಿಸಲಿದೆಯೆಂಬುದನ್ನು ಕಾದು ನೋಡಬೇಕು.

ಡಾ|| ಎಚ್. ಆರ್. ಕೃಷ್ಣಮೂರ್ತಿ
ನಂ. ೧೫೩, 'ಅಭಿಲಾಷಾ', ೪ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

# ಭಗವಂತಿ ಎಂಬೊ ಪುರಾತನ ಮೇಟಿ



**ನೆ**ಲವ ತಾಯೆಂದರೆ ಪರವಾಗಿಲ್ಲ ಬಿಡಿ
ತಾಯೆಂದು ಇರಿವ ತ್ರಿಶೂಲ, ಸುಡುವ ಬಂದೂಕನ್ಯಾಕೆ ತೊಡಿಸುವಿರಿ ?
ತನ್ನದು ಪರದೆಂಬುದೇ ಇಲ್ಲದೆ
ಒಂದರೊಳಗೆಲ್ಲ
ಎಲ್ಲದರೊಳಗೊಂದೆಂದು
ತಿರುಗುವ ಅವಳಿಗ್ಯಾಕೆ
ಗಡಿ ?
ಕಾವಲು ಪಡೆ ?
ಬಾವುಟಗಳ ಹಾರಾಟ ?
ಭೂಪಟಗಳ ಅಲಂಕಾರ ?
ಬುದ್ಧಿ ಇರುವ ಅವಳನ್ಯಾಕೆ
ಯುದ್ಧದಲಿ 'ನಿಲ್ಲಿ'ಸಿ ತೊಡಿಸುವಿರಿ
ವೀರ ಮರಣದ ಕಿರೀಟ
ಗೆಲುವಿನ ತೋರಣ
ಸೋಲಿನ ತಲ್ಲಣ

ತೋರಿಕೆಗೆ ತಾಯೆನ್ನುವ ತಿರುಬೋಕಿಗಳಾ
ನಿಮ್ಮೊಳಗಣ ಜೀವಕಣವ ಕೇಳಿ
ಉಸುರುತ್ತವೆ ಪಿಸು ಮಾತಿನಲಿ
ಆ ತಾಯಿ ಯಾರೆಂದು.

ಉಣಿಸಿ ಬೆಳೆಸಿ
ಬೆದರಿ-ಬೆಚ್ಚಿದಾಗ ರಮಿಸಿ
ಕೈ ಹಿಡಿದು ನಡೆಸಿ
ಎಡವಿದಾಗ ಹಿಡಿದೆತ್ತಿ
ಸಿಟ್ಟಿಗೆ ಪೆಟ್ಟುಕೊಟ್ಟು
ಕೇಡಿಗೆ ಈಡಾಗದಂತೆ ಕಾವಲಿದ್ದು
ಮತಿ ಕೆಡದಂತೆ ಎಚ್ಚರಿಸಿ
ತಪ್ಪು ತಿದ್ದಿ ಒಪ್ಪು ಮಾಡಿ
ಗಡಿ ಮೀರಿ
ಕಾದಾಟಕೆ ಕೊನೆ ಹಾಡಿ
ಜೀವ ಜೋಪಾನ ಮಾಡೋ
ಭಗವಂತಿ ಆ ತಾಯಿ

ತಾಯ ಕರದಲಿ
ಇರಿವ ತ್ರಿಶೂಲ, ಸುಡುವ ಬಂದೂಕು
ಇರಿಸಿದವರು
ವಿರಮಿಸದೆ
ದ್ವೇಷ ಬಿತ್ತಿ
ಬಂಜರು ಎದೆಯಲಿ
ನಂಜಿನ ಬೆಳೆ ತೆಗೆದು ಬೀಗುತ್ತಿರುವರು

ಧಗಧಗಿಸುವ ದಾಹದಲಿ
ಎದೆ ಬಂಜರಾದಷ್ಟು
ನಂಜಿನದು ಅಧಿಕ ಇಳುವರಿ
ಅದಕೆ ತಕ್ಕ ಮಾರುಕಟ್ಟೆ ತರಾವರಿ
ದಳ್ಳಾಳಿಗಳು ಕುದುರಿಸೊ ವ್ಯವಹಾರ
ವ್ಯಾಪಾರಿಗಳ ಮಾರಾಟ
ಲಾಭವೇ ಗುರಿ, ರೀತಿ-ನೀತಿ
ಅದರತ್ತಲೇ ಎಲ್ಲರ ನೋಟ, ಓಟ
ಓಡಿದಂತೆ ಉಕ್ಕುಕ್ಕಿ ಕೆಸೆವ ಉನ್ಮಾದ
ಬೇಕದಕೆ ಜೀವಗಳ ಆಯಾರ
ಅದಕೆಂದೇ ಸಜ್ಜಾಗಿವೆ ಶಿಸ್ತಿನಲಿ,
ಬಂದೂಕು, ತ್ರಿಶೂಲ

ಜೀವ ಕಂಡೊಡನೆ
ಭಯ-ಭೀತಿ
ರೀತಿ-ನೀತಿ
ಕಟ್ಟುಪಾಡಿನ ಬಲೆಯಲಿ
ಮಿಸುಕಾಡದಂತೆ ಸುತ್ತಿ
ಇರಿವ ತ್ರಿಶೂಲ
ಸೀಳುವ ಗುಂಡು
ಮೂರು ಕೋನದ
ಮೂಲ ಚೀಲಕೂ ನಾಟಿದೆ
ಅದ ಮೀಟಿ ತೆಗೆದು
ಬಿಸುಪೇ ಆರದ ತುಟಿಯನೊತ್ತಿ
ಎತ್ತಿ ಪಕ್ಕಕ್ಕಿಟ್ಟು
ಇರಿವ ದುರುಳರು
ಹೊರಳಿ ಬಂದರೆ ಇರುಳಿಗೆ
ಎಡವದಿರಲೆಂದು ದೀಪ ಹೊತ್ತಿಸಿಟ್ಟು
ಉರಿದು ದಣಿದವರಿಗೆ ನೀರು ಕಾಸಿಟ್ಟು
ಸಂಚಲಿ ಕಾದ ನೆತ್ತಿಗೆ ತಂಪಿನೆಣ್ಣೆ ಎತ್ತಿಟ್ಟು
ಹಸಿದ ಹೊಟ್ಟೆಗೆ ಅಂಬಲಿ ಬೇಸಿಟ್ಟು
ಮುಟ್ಟಿಗೆ
ಮೂಸಿಗೆ
ನೋಟಕೆ
ಬೇಟೆಗೆ

ಚೋರಿಗೆ ಸಿಗದ
ಜೀವ ಬೀಜದ
ತಿಜೋರಿಯ ಹೊತ್ತು ನಡೆದಳು
'ಬದುಕು' ಎಂಬಲ್ಲಿಗೆ
ಆ ಭಗವಂತಿ ಎಂಬ
ಪುರಾತನ ಮೇಟಿ

ಮಿಂದು ಬೆವರಲಿ
ಗಾಳಿ ಗಂಧವ ಸವರಿ
ಹಗಲ ಬಯಲಲಿ
ಕಡಲು ಮುಗಿಲೆಂಬ ವಿಸ್ಮಯವ ಹಾಸಿ
ಮೈ 'ಚೆಲ್ಲಿ' ಕಾದಳು
ಮಳೆ ತರುವ ಚೆಲ್ವ ನವಿಲಿಗೆ
ಇರಿವ ಉನ್ಮಾದದಲಿ
ನಾದ ಹೊಮ್ಮಿಸಿ
ನಿದ್ದೆಗೆಟ್ಟ ಮುದ್ದು ಕೂಸುಗಳ
ಕಂಗಾಲಾದ ಕಂದಮ್ಮಗಳ
ಹೆದರಿದ ಹಸುಗೂಸುಗಳ
ಹಾದಿ ತಪ್ಪಿದ ಹಸುಳೆಗಳ
ವಿಷ ಮೆತ್ತಿದ ಶಿಶುಗಳ
ಬುದ್ಧಿಗೆಟ್ಟ ಬಾಲರ
ತೂಗುವ ಜೋಗುಳವಾಗಲು

**ದು. ಸರಸ್ವತಿ,** ನಂ. ೫೮೪, ೧೦ನೇ 'ಜಿ' ಕ್ರಾಸ್, ವೆಸ್ಟ್ ಆಫ್ ಕಾರ್ಡ್ ರೋಡ್, ೨ನೇ ಹಂತ, ಮಹಾಲಕ್ಷ್ಮಿಪುರಂ, ಬೆಂಗಳೂರು - ೫೬೦ ೦೮೬

# ನಾನೂ – ರಂಗಭೂಮಿಯೂ

ರಂಗಭೂಮಿ – ಅದೊಂದು ಬೇರೆಯೇ ಪ್ರಪಂಚ. ನಿಜವಾದ ಅರ್ಥದಲ್ಲಿ ಜಾತ್ಯತೀತತೆಯನ್ನು ಅನುಷ್ಠಾನದಲ್ಲಿರಿಸಿಕೊಂಡಿರುವ ಕ್ಷೇತ್ರವೆಂದರೆ ರಂಗಭೂಮಿಯೇ. ಮೇಲು, ಕೀಳು, ಬಡವ, ಶ್ರೀಮಂತ, ಎನ್ನುವ ಮಾತು ತೀರ ಗೌಣ ಇಲ್ಲಿ.

ಎಲ್ಲ ಕಲಾವಿದರ ಆಸೆ ಇಷ್ಟೆ: ಒಳ್ಳೆಯ ಪಾತ್ರ ಮಾಡಬೇಕು. ಪ್ರೇಕ್ಷಕರ ಮೆಚ್ಚುಗೆ ಪಡೆಯಬೇಕು – ಲಭ್ಯವಿದ್ದರೆ ಪತ್ರಿಕೆಗಳಲ್ಲಿ ನಮ್ಮ ಪ್ರದರ್ಶನದ ಬಗ್ಗೆ ಒಳ್ಳೆಯ ವಿಮರ್ಶೆ ಬರಬೇಕು – ಎಂಬುದು.

ನನ್ನ ಮಟ್ಟಿಗೆ ಹೇಳುವುದಾದರೆ, ರಂಗಭೂಮಿಯಿಂದ ನಾನು ಶಾಲಾ-ಕಾಲೇಜುಗಳಲ್ಲಿ ಕಲಿಯಲಾರದ್ದನ್ನು ಕಲಿತಿದ್ದೇನೆ. ಇಲ್ಲಿ ಮನುಷ್ಯ ಮನುಷ್ಯನಿಗೆ ನಿಜವಾದ ಅರ್ಥದಲ್ಲಿ ಹತ್ತಿರವಾಗಬಲ್ಲ, ಸಹ ಮಾನವರ ಸುಖದುಃಖಗಳಿಗೆ ಸ್ಪಂದಿಸಬಲ್ಲ, ಇಲ್ಲಿ ಕೆಲಸ ಮಾಡಿ ಅನುಭವ ಪಡೆದವರು, ಮನುಷ್ಯನನ್ನು ಅರ್ಥಮಾಡಿಕೊಳ್ಳಲು, ಅವರನ್ನು ಅವರ ಗುಣಾವಗುಣಗಳ ಸಹಿತ ಒಪ್ಪಿಕೊಳ್ಳಲು ಸಾಧ್ಯ.

ನಮಗೆ, ಕಲಾವಿದರಿಗೆ, ಷೇರು ಮಾರ್ಕೆಟ್‌ಗಳ ಏರಿಳಿತ, ಪೆಟ್ರೋಲ್ ಬೆಲೆಯ ಏರಿಕೆಗಿಂತ, ನಾಟಕದಲ್ಲಿನ ನಮ್ಮ ಸಂಭಾಷಣೆಗಳು, ನಮ್ಮ ನಾಟಕದ ಯಶಸ್ಸು ಮಹತ್ತರದ ಸಂಗತಿಗಳಾಗುತ್ತವೆ. ಸಾಮಾನ್ಯರಿಗೆ ಇದು ಅಸಹಜ-ಬಾಲಿಶ ಎನಿಸುವ ಸಾಧ್ಯತೆ ಇದೆ. ಒಂದು ನಾಟಕದ ಪ್ರದರ್ಶನದ ಯಶಸ್ಸಿಗೆ ಎಲ್ಲರೂ – ನಟ, ನಿರ್ದೇಶಕ, ರಂಗಸಜ್ಜಿಕೆ ಹಾಗೂ ಬೆಳಕಿನ ತಜ್ಞರು, ಪ್ರಸಾಧನ ಕಲಾವಿದ, ನೇಪಥ್ಯದಲ್ಲಿ ಕೆಲಸ ಮಾಡುವವರು – ಕಾರಣರಾಗುತ್ತಾರೆ. ಮುಖ್ಯ ಪಾತ್ರ ನಿರ್ವಹಿಸುವ ಕಲಾವಿದನಷ್ಟೇ ಚಿಕ್ಕ ಪಾತ್ರಧಾರಿಯ ಕೊಡುಗೆಯೂ ಇದೆ – ಒಂದು ನಾಟಕದ ಯಶಸ್ಸಿಗೆ. ಎಲ್ಲರ ಸಹಕಾರದ ಅಗತ್ಯವಿದೆ ಇಲ್ಲಿ. ಗುಂಪು ಚಟುವಟಿಕೆಗಳಿಂದ ಕಲಿಯಬೇಕಾದ್ದು ಒಬ್ಬರೊಡನೆ ಒಬ್ಬರು ಹೊಂದಿಕೊಂಡು ಕೆಲಸ ಮಾಡುವುದು ಹಾಗೂ ಇತರರ ಕೊಡುಗೆಗೆ ಬೆಲೆ ಕೊಡುವುದು.

ನಮ್ಮ ಮನೆತನದಲ್ಲಿ ಯಾರಿಗೂ ರಂಗಭೂಮಿಯ ಸಂಪರ್ಕವಿರಲಿಲ್ಲ. ಹೇಳಿ ಕೇಳಿ ವೈದಿಕ ಸಂಪ್ರದಾಯದಲ್ಲಿ ತನ್ನನ್ನು ಹೆಚ್ಚಾಗಿ ತೊಡಗಿಸಿಕೊಂಡಿದ್ದ ಮನೆತನ. ನಮ್ಮ ದೊಡ್ಡ ತಾತ ಮದ್ದೂರು ಮಹದೇವ ಶಾಸ್ತ್ರಿಗಳು ಬಹಳ ದೊಡ್ಡ ಮೇಧಾವಿಗಳಾಗಿದ್ದುದಲ್ಲದೆ ಅವರು ಅವಧೂತರಾಗಿದ್ದರಂತೆ. ಅವರ ಶಿಷ್ಯೆ ಬೆಂಗಳೂರು ನಾಗರತ್ನಮ್ಮ ಎಂಬುವರು ಕಾಶಿಯಲ್ಲಿ ಅವರ ಅಮೃತಶಿಲೆಯ ಮೂರ್ತಿಯನ್ನು ಸ್ಥಾಪಿಸಿದ್ದಾರಂತೆ. ತಾತ ಚಂದ್ರಶೇಖರ ಶಾಸ್ತ್ರಿಗಳು ಮತ್ತು ತಂದೆ ಡಾ॥ ರಾಮಸ್ವಾಮಿ. ಡಿ.ವಿ.ಜಿ.ಯವರ 'ನಾನು ಕಂಡ ಮಹಾತ್ಮರು' ಎಂಬ ಲೇಖನ ಮಾಲಿಕೆಯಲ್ಲಿ ಇವರ ಬಗ್ಗೆ ಉಲ್ಲೇಖವಿದೆ. ನಮ್ಮ ತಂದೆಗೆ ಸಂಗೀತ, ಸಾಹಿತ್ಯ ಇದರಲ್ಲಿ ಆಸಕ್ತಿ ಇದ್ದಿತೆಂದು ಕೇಳಿದ್ದೇನೆ. ಅವರಿಗೆ ಕೈಲಾಸಂ ಅವರೂ ಸ್ನೇಹಿತರಾಗಿದ್ದು, ಕೈಲಾಸಂ ಅವರ ಹಸ್ತಾಕ್ಷರವಿದ್ದ ನಾಟಕದ ಪುಸ್ತಕಗಳು ನಮ್ಮ ಮನೆಯಲ್ಲಿ ಇದ್ದುದ್ದನ್ನು ನೋಡಿದ್ದೇನೆ.

ನಮ್ಮ ತಂದೆಯನ್ನು ನಾನು ಕಳೆದುಕೊಂಡಾಗ ನನಗೆ ಆರು ವರ್ಷಗಳಾಗಿತ್ತು, ಅಣ್ಣ ಎಂಟು ವರ್ಷದವ. ಅಮ್ಮ, ಸೋದರತ್ತೆಯವರೊಡನೆ ಬೆಳೆದೆ. ಚಿಕ್ಕಂದಿನಲ್ಲಿ ಸಿನಿಮಾ, ನಾಟಕ ನೋಡುವ ಅವಕಾಶವೂ ನನಗಿರಲಿಲ್ಲ.

ಒಂಬತ್ತು ವರುಷದವಳೆಂದು ಕಾಣುತ್ತದೆ. ನಾನು ಓದುತ್ತಿದ್ದ ಆಚಾರ್ಯ ಪಾಠಶಾಲೆಯಲ್ಲಿ ಪ್ರಭಾತ ಕಲಾವಿದರ ನಾಟಕ 'ಸೀತಾದೇವಿ'ಯ ಪ್ರದರ್ಶನವಿತ್ತು, ತಲಾ ನಾಲ್ಕಾಣೆ ಟಿಕೇಟು ದರ. ನಾನು ನನ್ನ ಇಬ್ಬರು ಮೂವರು ಸ್ನೇಹಿತೆಯರು ಎರಡು ದಿನವೂ ಆ ನಾಟಕವನ್ನು ನೋಡಿದೆವು. ಆ ನಾಟಕವನ್ನು ಅಷ್ಟು ಶ್ರದ್ಧೆಯಿಂದ ನೋಡಲು ಇನ್ನೊಂದು ಮುಖ್ಯ ಕಾರಣವಿತ್ತು. ಅದು, ನನಗೆ ಸಂಗೀತವನ್ನು ಹೇಳಿಕೊಡಲು ಹರ ಸಾಹಸ ಪಟ್ಟ ನನ್ನ ಸಂಗೀತದ ಗುರುಗಳಾದ ಆನೂರು ಸೂರ್ಯನಾರಾಯಣ ಅವರು ಸಂಗೀತ ಸಂಯೋಜನೆ ಮಾಡಿದ್ದರ ಜೊತೆಗೆ ಲಕ್ಷ್ಮಣನ ಪಾತ್ರವನ್ನೂ ವಹಿಸಿದ್ದರು ಎಂಬುದು.

ಹಾಗೂ ಹೀಗೂ ಕೆಲವು ಹಾಡುಗಳನ್ನು ಕಲಿತಿದ್ದೆವು. ಸಂಭಾಷಣೆ ನಮ್ಮ ಸ್ವಂತ ಮಾತುಗಳೇ. ರಾಮಾಯಣದ ಕಥೆ ಎಲ್ಲ ಮಕ್ಕಳಿಗೂ ತಿಳಿದಿರುತ್ತದೆ – ಆಗಿನ ಕಾಲದಲ್ಲಂತೂ ಎಲ್ಲರಿಗೂ ಸಾಮಾನ್ಯ ತಿಳಿದ ಕಥೆಯೇ, ಅದು. ಒಂದು ಭಾನುವಾರದಂದು ನಮ್ಮ ಈ ನಾಟಕ ಪ್ರದರ್ಶನದ ಕಾರ್ಯಕ್ರಮ ಇಟ್ಟುಕೊಂಡೆವು. ದೊಡ್ಡ ರಂಗಮಂದಿರದಲ್ಲಲ್ಲ –

ಎಲ್ಲ ಕಲಾವಿದರ ಆಸೆ ಇಷ್ಟೆ: ಒಳ್ಳೆಯ ಪಾತ್ರ ಮಾಡಬೇಕು. ಪ್ರೇಕ್ಷಕರ ಮೆಚ್ಚುಗೆ ಪಡೆಯಬೇಕು – ಲಭ್ಯವಿದ್ದರೆ ಪತ್ರಿಕೆಗಳಲ್ಲಿ ನಮ್ಮ ಪ್ರದರ್ಶನದ ಬಗ್ಗೆ ಒಳ್ಳೆಯ ವಿಮರ್ಶೆ ಬರಬೇಕು – ಎಂಬುದು. ನನ್ನ ಮಟ್ಟಿಗೆ ಹೇಳುವುದಾದರೆ, ರಂಗಭೂಮಿಯಿಂದ ನಾನು ಶಾಲಾ-ಕಾಲೇಜುಗಳಲ್ಲಿ ಕಲಿಯಲಾರದ್ದನ್ನು ಕಲಿತಿದ್ದೇನೆ. ಇಲ್ಲಿ ಮನುಷ್ಯ ಮನುಷ್ಯನಿಗೆ ನಿಜವಾದ ಅರ್ಥದಲ್ಲಿ ಹತ್ತಿರವಾಗಬಲ್ಲ, ಸಹ ಮಾನವರ ಸುಖದುಃಖಗಳಿಗೆ ಸ್ಪಂದಿಸಬಲ್ಲ, ಇಲ್ಲಿ ಕೆಲಸ ಮಾಡಿ ಅನುಭವ ಪಡೆದವರು, ಮನುಷ್ಯನನ್ನು ಅರ್ಥಮಾಡಿಕೊಳ್ಳಲು, ಅವರನ್ನು ಅವರ ಗುಣಾವಗುಣಗಳ ಸಹಿತ ಒಪ್ಪಿಕೊಳ್ಳಲು ಸಾಧ್ಯ.



■ ಭಾರ್ಗವಿ ನಾರಾಯಣ

ನಮ್ಮ ಮನೆಯ ಹಾಲಿನಲ್ಲಿ. ಪಡಸಾಲೆ ಸಾಕಷ್ಟು ವಿಶಾಲವಾಗಿತ್ತು. ಹಳೆಯ ಕಾಲದ ಹೆಂಚಿನ ಮನೆ. ಇಂತಹ ದಾಂಧಲೆಗಳಿಗೆ ಅಮ್ಮನ ಸಮ್ಮತಿಯಲ್ಲದೆ ಪ್ರೋತ್ಸಾಹವೂ ಇತ್ತು. ಆಕೆ ಶಾಲೆಯಲ್ಲಿ ಕಲಿತವಳೇ ಅಲ್ಲ. ಅದು ಹೇಗೋ ಕನ್ನಡ, ತಮಿಳು, ಸಂಸ್ಕೃತ, ಮಲೆಯಾಳಂ ಅಲ್ಲದೆ ಇಂಗ್ಲಿಷ್ ಭಾಷೆಯಲ್ಲಿ ಕೂಡ ಸಾಕಷ್ಟು ಜ್ಞಾನವಿತ್ತು. ಓದಿ, ಬರೆದು, ಮಾತಾಡುವಷ್ಟು ಪ್ರಬುದ್ಧತೆ ಇತ್ತು ಆಕೆಗೆ. ಇದೆಲ್ಲಕ್ಕಿಂತ ಹೆಚ್ಚಾಗಿ ಮಕ್ಕಳ ಆಸಕ್ತಿಗೆ ನೀರೆರೆಯುವ ತಿಳಿವಳಿಕೆ, ಧಾರ್ಷ್ಟ್ಯ ಇತ್ತು ಆಕೆಯಲ್ಲಿ – ಅಕ್ಕಪಕ್ಕದವರು ಏನೆಂದಾರೋ ಎಂಬ ಅಳುಕಿಲ್ಲದೆ.

ನನ್ನ ಈ ನಾಟಕ ಪ್ರಯೋಗ ನಡೆದದ್ದು ೧೯೪೮ರ ಜನವರಿಯಲ್ಲಿ. ಆಗತಾನೆ ನಮ್ಮ ಚಿಕ್ಕಮ್ಮ ಸುಗುಣ ಕೌಲಾಲಂಪೂರ್‌ನಿಂದ ಮೊದಲ ಬಾರಿಗೆ ಬೆಂಗಳೂರಿಗೆ ಬಂದಿದ್ದರು. ಅಲ್ಲಿಯವರೆಗೆ ಅವರ ಸಂಪರ್ಕವೇ ಇರಲಿಲ್ಲ ನಮ್ಮೊಂದಿಗೆ – ಎರಡನೆಯ ಮಹಾಯುದ್ಧದ ಕಾರಣದಿಂದ. ಚಿಕ್ಕಮ್ಮನೇ ನಮ್ಮ ವೇಷಭೂಷಣಗಳಿಗೆ ಸಹಾಯ ಮಾಡಿದರು. ನಾನು ಸೀತಾದೇವಿ, ನನ್ನ ಸ್ನೇಹಿತೆ ಕೌಸಲ್ಯಾ ಶ್ರೀರಾಮಚಂದ್ರ (ನಮ್ಮಲ್ಲಿ ಎಲ್ಲರಿಗಿಂತ ಎತ್ತರವಾಗಿದ್ದಳು ಎಂಬ ಕಾರಣಕ್ಕಾಗಿ), ವನಜ, ವತ್ಸಲ, ಇಬ್ಬರು ಚಿಕ್ಕ ಮಕ್ಕಳು (ಲವ, ಕುಶ ಪಾತ್ರಕ್ಕೆ) – ಇತರ ಪಾತ್ರಧಾರಿಗಳು. ನಮ್ಮ ವೇಷ ಭೂಷಣ ಅಂತಹ ಸಮಸ್ಯೆಯನ್ನು ಒಡ್ಡಲಿಲ್ಲ. ಆದರೆ ಋಷಿಗಳ ಪಾತ್ರ ಮಾಡಲು ಯಾರೂ ಸಿಗಲಿಲ್ಲ.



ನಮಗೆ ರಂಗಸ್ಥಳದ ವ್ಯವಸ್ಥೆ ಮಾಡಲು ನಮ್ಮಣ್ಣ ಚಿಂತಾಮಣಿ ಅವನ ಸ್ನೇಹಿತ ರಘು ಎಲ್ಲ ಸಹಾಯ ಮಾಡಿದರು. ಸಹಾಯ ಮಾಡಿದರು ಅನ್ನುವುದಕ್ಕಿಂತ ಅವರಿಬ್ಬರೇ ವೇದಿಕೆಯನ್ನು ಸಿದ್ಧಪಡಿಸಿದರು. ರಂಗಸ್ಥಳವೆಂದರೆ ಎರಡು ಮಂಚ ಹಾಗೂ ಎರಡು ಬೆಂಚುಗಳನ್ನು ಸೇರಿಸಿ, ಅದರ ಮೇಲೆ ಮೂರು ನಾಲ್ಕು ಜಮಖಾನ ಹಾಸಿದ್ದರು. ಪರದೆ ಬೇಕಲ್ಲ– ನಾಟಕ ಅಂದಮೇಲೆ. ನಾಲ್ಕೈದು ಬೆಡ್‌ಶೀಟ್‌ಗಳನ್ನು ಸೇರಿಸಿ ಪರದೆಯೂ ಆಯಿತು. ಆದರೆ ವಾಲ್ಮೀಕಿ ಮಹರ್ಷಿ ಬೇಕೇ ಬೇಕಲ್ಲ ಈ ನಾಟಕಕ್ಕೆ.

ರಂಗಮಂಚ ಸಿದ್ಧಪಡಿಸಿ ಹೊರಡುವುದರಲ್ಲಿದ್ದ ರಘುವನ್ನೇ ಕೇಳುವ ಯೋಚನೆ. ನಮ್ಮಣ್ಣನನ್ನು ಕೇಳುವುದಕ್ಕೆ ಸ್ವಲ್ಪ ಹೆದರಿಕೆ – ಅವನು ಬೈದುಬಿಟ್ಟರೆ ಎಂದು. ರಘು ಪಾಪದ ಹುಡುಗ ಮಹಾಸಾಧು, ಸ್ವಭಾವದಿಂದ. ಅವನನ್ನೇ ಕೇಳಿದೆ.

''ರಘು ಒಂದು ಹೆಲ್ಪ್ ಬೇಕಲ್ಲ, ನಿನ್ನಿಂದ.''

''ಏನು ಭಾರ್ಗವಿ, ಏನು ಮಾಡಬೇಕು.''

''ನೀನೇ ವಾಲ್ಮೀಕಿ ಪಾತ್ರ ಮಾಡ್ತೀಯ, ಪ್ಲೀಸ್.''

''ನಾನಾ ! ಛೆ-ನಂಗೆ ನಾಟಕ ಗೀಟಕ ಮಾಡೋಕೆ ಬರೋಲ್ಲಮ್ಮ.''

'' ಪ್ಲೀಸ್ ರಘು ನಾವ್ಯಾರೂ ಮಾಡೋಕೆ ಆಗೋಲ್ಲ– ಗಡ್ಡ-ಮೀಸೆ ಎಲ್ಲಾ ಹಾಕ್ಕೋಬೇಕು. ಅದೂ ಅಲ್ಲದೆ ಬೇರೆ ಯಾರೂ ಇಲ್ಲವಲ್ಲ ಕೇಳೋಣಾಂದ್ರೆ.''

''ನಾನು ಹೇಗೆ ಪಾರ್ಟ್ ಮಾಡಲಿ ಭಾರ್ಗವಿ – ನಂಗೆ ಮಾತುಗಳೂ ಗೊತ್ತಿಲ್ಲ – ಪ್ರಾಕ್ಟೀಸೂ ಮಾಡಿಲ್ಲ.''

''ಏ ಪ್ಲೀಸ್ ಕಣೋ ನಿಂಗೆ ಕಡಿಮೆ ಮಾತುಗಳನ್ನು ಕೊಡ್ತೀನಿ. ಮಧ್ಯೆ ಮಧ್ಯೆ ರಾಮ ಅಂತಿರು ಆಯ್ತಾ.''

ಅಂತ ಹೇಳಿ ಅವನನ್ನ ಬಲವಂತವಾಗಿ ಒಪ್ಪಿಸಿಬಿಟ್ಟೆವಿ. ಮೇ
ಸಾಮಾನುಗಳಾಗಲಿ, ಮೇಕಪ್ ಮಾಡುವ ವಿಧಾನವಾಗಲಿ ನಮಗೆ ಏನು ಗೊ

ಇದ್ದಬದ್ದ ಬುದ್ಧಿನೆಲ್ಲಾ ಖರ್ಚುಮಾಡಿ ಒಂದು ನಿರ್ಧಾರಕ್ಕೆ ಬಂ
ನಮ್ಮನೆ ಹಿತ್ತಲಲ್ಲೇ ಹತ್ತಿ ಗಿಡ ಇತ್ತು. ಹತ್ತಿಕಾಯಿ ಬಿಡಿಸಿಕೊಂಡು ಹತ್ತಿ
ಸಿದ್ಧ ಮಾಡಿಟ್ಟುಕೊಂಡಿವಿ. ಅಂಟಿಸೋದು ಹೇಗೆ – ಮನೆಯಲ್ಲೇ
ಗೋಂದು ಯಥೇಚ್ಛವಾಗಿ. ಯದ್ವಾತದ್ವಾ ಗೋಂದು
ಸಿದ್ಧಮಾಡಿಟ್ಟುಕೊಂಡಿದ್ದ ಹತ್ತಿಯನ್ನು ಅಂಟಿಸಿದಿವಿ ಗಡ್ಡಮೀಸೆ ತರಹ.

ಸರಿ. ಏನೋ ಒಂದು ಪ್ರಾರ್ಥನೆ ಹಾಡು ಹೇಳಿದಿವಿ. ಅಕ್ಕಪ
ಮಹಿಳಾ ಮಣಿಗಳೆಲ್ಲಾ ಜಮಾಯಿಸಿದ್ದರು ನಮ್ಮ ಮನೆ ಪಡಸಾಲೇಲಿ. ನಾ
ಶುರು ಮಾಡಿದಿವಿ. ರಂಗಸಜ್ಜಿಕೆ ಅಂದರೆ ಒಂದು ಬೃಂದಾವನ, ಅದ
ತುಳಸಿಗಿಡ ಇಟ್ಟಿದ್ದಿವಿ. ಪ್ರಾರಂಭದಲ್ಲಿ ನಾನು, ಸೀತಾದೇವಿ, ಬ
ತುಳಸಿಪೂಜೆ ಮಾಡಿ ಹಾಡು ಹೇಳಿದೆ. ಪಾಪ ನಮ್ಮ ಬೀದಿ ಜನ ತು
ಒಳ್ಳೆಯವರು, ಹೃದಯವಂತರು, ತಾಳ್ಮೆಯುಳ್ಳವರು, ಸಹಿಸಿಕೊಂಡರು
ಆಲಾಪವನ್ನು. ನನ್ನ ಸಖೀಮಣಿಗಳು, ರಾಮಚಂದ್ರ, ಲವ-ಕುಶ
ಎಲ್ಲರೂ ಯಥಾಶಕ್ತಿ ಹಾಡಿದರು. ಅದನ್ನು ಅನುಭವಿಸಿಯೂ ನಾ
ಮುಗಿದ ಮೇಲೆ ಚಪ್ಪಾಳೆ ತಟ್ಟಿದರು. ಅಷ್ಟೇ ಸಾಕಾಗಿತ್ತು ನ
ವಿಜಯೋತ್ಸಾಹಕ್ಕೆ. ಇಂತಹ ಅದ್ಭುತ ಪ್ರದರ್ಶನ ಕೊಟ್ಟ ಮಕ್ಕಳಿಗೆ ದ
ತಾಕಬಾರದೆಂದು ಆರತಿ ಕೂಡ ಎತ್ತಿದರು, ಆ ಸಹೃದಯ ಪ್ರೇಕ್ಷಕರು.

ಅಲ್ಲಿಗೆ ಮುಗಿಯಿತು. ನಾವು ಪ್ರತಿಭಾವಂತ ಕಲಾವಿದರೆಂ
ನಂಬಿದೆವು. ನನ್ನ ಮಿಕ್ಕ ಸ್ನೇಹಿತರು ಪ್ರಜ್ಞಾವಂತರು. ಈ ಹವ್ಯಾಸಕ್ಕೆ ಅಂ
ಮಂಗಳ ಹಾಡಿದರು. ನಾನು, ಪ್ರತಿ ನಾಟಕವಾಡಿದಾಗಲೂ ''ಸಾಕಪ್ಪಾ
ನಾಟಕದ ಸಹವಾಸ – ಇನ್ನು ಮೇಲೆ ಜಪ್ಪಯ್ಯ ಅಂದರೂ ಇಂತಹ ಸಾಹ
ಕೈ ಹಾಕುವುದಿಲ್ಲ'' ಎಂದು ಹೇಳುತ್ತಲೇ ಎಪ್ಪತ್ತು ವರ್ಷವಾದರೂ, ಬ
ಹಚ್ಚುವ ಈ ಹುಚ್ಚಿನಿಂದ ಮುಕ್ತಳಾಗಿಲ್ಲ.

ಅಲ್ಲಿಗೇ ನಿಲ್ಲುತ್ತಲೂ ಇತ್ತೇನೋ ಈ ನನ್ನ ಪ್ರವೃತ್ತಿ, ನಮ್ಮ ಶಾಲೆಯ ಹಿರಿ
ವಿದ್ಯಾರ್ಥಿನಿ ಎಚ್. ಎಸ್. ಪಾರ್ವತಿ ನಮಗೆ ನಾಟಕವಾಡಲು ಹೇಳಿರದಿದ್ದ
೧೯೫೧ರ ಆಗಸ್ಟ್ ತಿಂಗಳ ೧೫ನೆಯ ತಾರೀಖು ಶನಿವಾರವೆಂದು ಕಾಣುತ್ತ
ಶಾಲೆಗೆ ಸ್ವಾತಂತ್ರ್ಯೋತ್ಸವಕ್ಕಾಗಿ ನಾವೆಲ್ಲಾ ಬಂದಿದ್ದೆವು. ಸಮಾರಂಭ ಮುಗಿ
ಹೊರಡುವುದರಲ್ಲಿದ್ದೆವು. ಆ ಹೊತ್ತಿಗೆ ಪಾರ್ವತಿಯವರು ಬಂದು – ''ಈವ
ಸಂಜೆ ನಾವು, ಹಿರಿಯ ವಿದ್ಯಾರ್ಥಿನಿಯರು ನಾಟಕ ಆಡ್ತೀವೀಂತ ಹೇಳಿದ್ದ
ಕಾರಣಾಂತರದಿಂದ ನಮಗೆ ನಾಟಕ ಕೊಡೋದಿಕ್ಕೆ ಸಾಧ್ಯ ಆಗ್ತಾ ಇ
ನೀವೇನಾದ್ರೂ ಪ್ರೋಗ್ರಾಂ ಕೊಡೋದಿಕ್ಕೆ ಸಾಧ್ಯನಾ ?'' ಅಂತ ನನ್ನ ಸ್ನೇ
ಯಶೋದನ್ನ ಕೇಳಿದ್ರು. ಅಲ್ಲೇ ಇದ್ದ ನಾನು ''ಹೂ, ಒಂದು ನಾಟಕ
ಆಡ್ತೀವೀಂತ ಹೇಳೇ'' ಅಂದೆ. ಅವಳೂನೂ ''ಆಗ್಻ ಪಾರ್ವತಿ - ನಾ
ಕೊಡ್ತೀವಿ'' ಅಂದಳು.

ಆಮೇಲೆ ನನ್ನ ಕಡೆ ತಿರುಗಿ ಹೇಳಿದಳು. ''ಅಲ್ವೇ ಭಾರ್ಗವಿ, ಈಗಾಗಲೇ
ಘಂಟೆ, ಸಂಜೆ ೭ಕ್ಕೆ ನಾಟಕ ಅಂದ್ರೆ ಹೇಗೆ ಸಾಧ್ಯ - ಪ್ರಾಕ್ಟೀಸ್ ಮಾಡಬೇಡ
ನಾಟಕದ ಲೈನ್ಸ್ ಬರಬೇಡ್ವಾ'' ಅಂದಳು.

ಅಷ್ಟೊಂದು ಧೈರ್ಯವಾಗಿ ನಾಟಕ ಕೊಡ್ತೀವೇಂತ ನಾನು ಹೇಳೋ
ಒಂದು ಕಾರಣ ಇತ್ತು. ನಮ್ಮ ಮನೆ ತುಂಬ ನಾಟಕದ ಪುಸ್ತಕಗಳು ಇದ್ದುವೂ
ಹೇಳಿದ್ದೆನಲ್ಲಾ. ಅದರಲ್ಲಿ ಕ್ಷೀರಸಾಗರ ಅವರ 'ಮನೆಯಲ್ಲೇ ಮ್ಯಾಟಿನಿ' ಅನ
ಪುಸ್ತಕ ಇತ್ತು. ನಾನು ಆ ನಾಟಕದಲ್ಲಿ ಬರುವ ಎಲ್ಲ ಪಾತ್ರಗಳ ಮಾತುಗಳ
ಗಟ್ಟಿಮಾಡಿಬಿಟ್ಟಿದ್ದೆ. ಏನೋ ಖುಷಿ. ಅದೊಂದೇ ನಾಟಕವಲ್ಲ ಕೈಲಾಸಂ ಅ
'ಸೀಕರ್ಣೆ ಸಾವಿತ್ರಿ', 'ಹೋಂರೂಲು' ನಾಟಕದ ವೆಂಕಮ್ಮನ ಮಾತುಗ
'ತಾಳಿಕಟ್ಟೋಕೆ ಕೂಲೀನೇ' ನಾಟಕದ ನಾಗತ್ತೆ ಪಾತ್ರದ ಮಾತುಗಳು – ಹ
ಇಷ್ಟವಾದ ಮಾತುಗಳನ್ನೆಲ್ಲಾ ಬಾಯಿ ಪಾಠ ಮಾಡಿಕೊಂಡಿದ್ದೆ.

ಈ 'ಮನೆಯಲ್ಲೆ ಮ್ಯಾಟಿನಿ' ಒಂದು ಅರ್ಧಘಂಟೆ ಕಾಲಾವಕಾಶದ
ನಾಟಕ. ಅದರಲ್ಲಿ ನಾಯಕನಿಗೇ ಅತ್ಯಧಿಕ ಡೈಲಾಗ್ಸ್. ಆ ಪಾತ್ರ ನಾ
ಮಾಡಿದರೆ ಮಿಕ್ಕವೆಲ್ಲಾ ಚಿಕ್ಕ ಚಿಕ್ಕ ಪಾತ್ರಗಳು, ಹೆಚ್ಚು ಮಾತಿಲ್ಲದವು.
ಪಾತ್ರಗಳನ್ನ ಯಶೋದ, ಅಹಲ್ಯ, ವನಜ, ನರಸಮ್ಮ ನಿರ್ವಹಿಸಿದರು. ಸ

ಕ ಆಡಿದೆವು. ಜನ ಮೆಚ್ಚಿಕೊಂಡರು. ಅಲ್ಲಿಂದ ಶುರು ಆಯಿತು ವಿದ್ಯಾರ್ಥಿ ಜೀವನ ಗಿಯುವವರೆಗೂ ಪ್ರತಿ ವರ್ಷ ನಾಟಕ ಆಡುವುದು.

ನಮ್ಮ ಆಚಾರ್ಯ ಪಾಠಶಾಲೆಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ ವಿಮಲಾ ಶಂಕರ್ ಾಟಕವನ್ನು ನೋಡಿದ್ದರು. ಅವರು ಸಾಂಸ್ಕೃತಿಕ ಚಟುವಟಿಕೆಗಳಿಗೆ, ಆಟಪಾಟಗಳಿಗೆ ಕ ಪ್ರೋತ್ಸಾಹ ಕೊಡುತ್ತಿದ್ದರು. ಅವರ ಉತ್ತೇಜನದಿಂದಾಗಿಯೇ ನಾನು ಈ ಕ್ಷೇತ್ರದಲ್ಲಿ ನ್ನು ಗಂಭೀರವಾಗಿ ತೊಡಗಿಸಿಕೊಂಡೆ.

ವಿಜಯಾ ಕಾಲೇಜು ಹಾಗೂ ಮಹಾರಾಣಿ ಕಾಲೇಜಿನಲ್ಲೂ ನಾಟಕಗಳಲ್ಲಿ ಭಾಗವಹಿಸುತ್ತಿದ್ದೆ– ವಹಿಸುತ್ತಿದ್ದೆ ಎನ್ನುವುದಕ್ಕಿಂತ ಹುಡುಗಿಯರನ್ನು ಸಂಘಟಿಸಿ, ನಾಟಕವನ್ನು ಹುಡುಕಿ, ೀಶಿಸುತ್ತಿದ್ದೆ. ನಮ್ಮ ಮನೆಯಲ್ಲೇ ನಾಟಕದ ತಾಲೀಮು. ನಮ್ಮ ಅಮ್ಮನೇ ನಮಗೆಲ್ಲಾ ತಿಂಡಿ, ್ ಒದಗಿಸಿ, ರಿಹರ್ಸಲ್ ವೇಳೆಯಲ್ಲಿ ಪ್ರೇಕ್ಷಕಿಯೂ ಆಗುತ್ತಿದ್ದರು.

ವಿಜಯಾ ಕಾಲೇಜಿನಲ್ಲಿ 'ತಾಳಿ ಕಟ್ಟೋಕ್ಕೂಲೀನೇ' ಹಾಗೂ 'ಹೊಂರೂಲು' ಕವಾಡಿದಾಗ ಮೇಕಪ್ ಮಾಡಲು ನಾಣಿಯವರು ಬಂದಿದ್ದರು. ಅದೇ ಮೊದಲ ತೆಯ. ಆಮೇಲೆ ನಮ್ಮ ಮನೆಯ ಪೋರ್ಷನ್‌ಗೇ ಬಾಡಿಗೆಗೆ ಬಂದರು, ಅವರು-ಅವರ ತಾಪಿತೃಗಳ ಸಮೇತ.



ನಮ್ಮ ಮದುವೆ ಆದಮೇಲೆ ನ್ಯಾಷನಲ್ ಕಾಲೇಜಿನ ಹಿಸ್ಟ್ರಿಯಾನಿಕ್ ಕ್ಲಬ್ ನಾಟಕಗಳಲ್ಲಿ ವಹಿಸುತ್ತಿದ್ದೆ. ಕಾಲೇಜಿನ ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು ಸೇರಿ ನಾಟಕವಾಡಲು .ಎನ್. ಅನುಮತಿ ಇರಲಿಲ್ಲ. ಹಿರಿಯ ವಿದ್ಯಾರ್ಥಿಯ ಹೆಂಡತಿಯನ್ನೂ ಹಿರಿಯ ರ್ಥಿನಿಯೆಂದು ಪರಿಗಣಿಸಲು ತಾವು ಸಿದ್ಧ ಎಂದು ಹೇಳಿ ಡಾ|| ನರಸಿಂಹಯ್ಯನವರು ಆ ನಾಟಕಗಳಲ್ಲಿ ಪಾತ್ರ ಮಾಡಲು ಅನುಮತಿಸಿದ್ದರು.

ಆದ್ದರಿಂದ ನನಗೆ ನ್ಯಾಷನಲ್ ಕಾಲೇಜಿನಲ್ಲಿ ಓದುವ ಸೌಭಾಗ್ಯ ಒದಗಿಬರದಿದ್ದರೂ ು ವಿದ್ಯಾರ್ಥಿನಿಯಾಗುವ ಅವಕಾಶ ಸಿಕ್ಕಿತು. ಆ ಕಾಲೇಜಿನಲ್ಲಿ ನಡೆಸಿದ ನಾಟಕದ ್ಸಲ್‌ಗಳು ನಾಟಕಗಳು ಅತ್ಯಂತ ಮಧುರ ನೆನಪು. ನಾನು, ನಾಣಿಯವರು, ಇಬ್ಬರೂ ಆಫೀಸ್‌ಗಳಿಂದ ನೇರವಾಗಿ ರಿಹರ್ಸಲ್‌ಗಳಿಗೇ ಬಂದ ದಿನಗಳೂ ಉಂಟು. ಅಮ್ಮನ ಯಲ್ಲಿ ಮಕ್ಕಳನ್ನು ಬಿಟ್ಟು ಆಫೀಸ್‌ಗೆ ಹೋಗುತ್ತಿದ್ದೆ. ಆದ್ದರಿಂದ ಮಕ್ಕಳ ಜವಾಬ್ದಾರಿ ್ನ ಮತ್ತೆ ಅಮ್ಮನ ತಲೆಗೆ ಕಟ್ಟಲು ಮುಜುಗರವಾಗುತ್ತಿತ್ತು. ಹಾಗಾಗಿ ಬಸವನಗುಡಿಯಲ್ಲೇ ಅಮ್ಮನ ಮನೆಯಿಂದ ಕಾಲೇಜಿಗೆ ಪ್ರಕಾಶ್ ಹಾಗೂ ಸುಜಾತಾರನ್ನು ರಿಹರ್ಸಲ್‌ಗೆ ುಕೊಂಡು ಬರುತ್ತಿದ್ದೆ. ಡಾ|| ಎಚ್.ಎನ್. ಅವರುಗಳಿಗೆ ಚಾಕ್ಲೇಟ್ ನಮಗೆ ಬನ್; ಾಮಿ ಹಾಲು ತರಿಸಿಕೊಟ್ಟರೆ ಅದೇ ಬ್ರಹ್ಮಾನಂದ.

ಂದು ಸಲ 'ಸುಂದ್ರೋಪ ಸುಂದ್ರು' ನಾಟಕವನ್ನು ಲಾಲ್‌ಬಾಗ್‌ನಲ್ಲಿ ಪ್ರದರ್ಶಿಸುವ ಾಶ ಸಿಕ್ಕಿತು. ಗ್ಲ್ಯಾಸ್ ಹೌಸ್ ಮುಂದೆ ಚಪ್ಪರ ಹಾಕಿ ನಾಟಕ – ಸಂದರ್ಭ ವುದೆಂಬುದು ನೆನಪಿಲ್ಲ. ನಾನು ಯಥಾಪ್ರಕಾರ ಆಫೀಸ್‌ನಿಂದ ಬಂದು ಇಬ್ಬರು ಳನ್ನೂ ಲಾಲ್‌ಬಾಗ್‌ಗೆ ಕರೆದುಕೊಂಡು ಬಂದಿದ್ದೆ. ಸುಜಾತಳಿಗೆ ನಾಲ್ಕು ವರ್ಷ ್‌ಗೆ ಎರಡೂವರೆ ವರ್ಷ.



ಬೆಂಚುಗಳನ್ನು ಜೋಡಿಸಿ ರಂಗಮಂಚವನ್ನು ಸಿದ್ಧಪಡಿಸಿದ್ದರು. ನಮ್ಮ ಉಪಾಸನೆ ಸೀತಾರಾಮ, ಜಯರಾಂ, ಶಿವರಾಂ, ನಾನು, ನಾಣಿಯವರು – ಹೀಗೆ ಹಿಸ್ಟ್ರಿಯಾನಿಕ್ ಕ್ಲಬ್‌ನವರೆಲ್ಲಾ ಪಾತ್ರವಹಿಸಿದ್ದೆವು. ರಂಗಮಂಚದ ಎರಡು ಕಡೆಯೂ ಚಿಕ್ಕ-ಚಿಕ್ಕ ಕೋಣೆಯಂತಹ ಜಾಗಗಳನ್ನು ನಿರ್ಮಿಸಿದ್ದರು ತಡಿಕೆಗಳನ್ನು ಕಟ್ಟಿ– ಇವೇ ನಮ್ಮ ಗ್ರೀನ್ ರೂಮ್‌ಗಳು.

ನಾಟಕದ ಒಂದು ದೃಶ್ಯ. ನಾವೆಲ್ಲರೂ ಸ್ಟೇಜ್‌ನಲ್ಲಿದ್ದೆವು. ಯಾವ ಕಾರಣಕ್ಕೋ ಕಾಣೆ ನಮ್ಮ ಸುಜಾತ ಒಂದು ಕಡೆಯ ಗ್ರೀನ್ ರೂಮ್‌ನಿಂದ ಇನ್ನೊಂದು ಕಡೆಯ ಗ್ರೀನ್‌ರೂಂಗೆ ಹೋಗುವ ನಿರ್ಣಯ ಮಾಡಿದಳೆಂದು ಕಾಣುತ್ತದೆ. ಆದರೆ ರಂಗಮಂಚದ ಮೇಲೆ ಬರಬಾರದೆನ್ನುವ ತಿಳುವಳಿಕೆ ಇತ್ತು ಅವಳಿಗೆ. ರಂಗಮಂಚವನ್ನು ಸಿದ್ಧಪಡಿಸಿದ್ದ ಬೆಂಚುಗಳ ಅಡಿಯಲ್ಲಿ ಅಸಾಧ್ಯ ಸಾಹಸಪಟ್ಟು ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುವ ಸನ್ನಾಹದಲ್ಲಿದ್ದುದು, ರಂಗಮಂಚದ ಮೇಲಿದ್ದ ನನಗೆ ತಿಳಿಯಿತು. ಅದು ಲಾಲ್‌ಬಾಗ್ – ಮೊಣಕಾಲೆತ್ತರದ ಹುಲ್ಲು ಬೆಳೆದಿತ್ತು ಅಲ್ಲಿ. ಅಲ್ಲಿರಬಹುದಾದ ಹುಳ ಹುಪ್ಪಟೆಗಳಿಗೆ ಹೆದರಿ ಮಗು ಹೆದರಿ ಚೀರಿದರೆ ಎಂಬ ಭಯ ಒಂದು ಕಡೆ – ಏಳಲು ಪ್ರಯತ್ನಿಸಿ ಪೆಟ್ಟು ಮಾಡಿಕೊಂಡರೆ ಎಂಬ ಚಿಂತೆ ಒಂದು ಕಡೆ : ಏನೂ ಆಭಾಸವಾಗದೆ ಆ ದೃಶ್ಯ ಮುಗಿದರೆ ಸಾಕು ಎನ್ನುವಂತೆ ಆಯಿತು.

ನಾಟಕ ಮುಗಿದ ಮೇಲೆ ಸ್ನೇಹಿತರೆಲ್ಲ ನಾಟಕಕ್ಕೆ ಸಂಬಂಧಪಟ್ಟ ಸ್ಟೇಜ್ ಪ್ರಾಪರ್ಟೀಸ್ ಹಾಗೂ ವೇಷಭೂಷಣಗಳನ್ನು ಒಂದು ಕಬ್ಬಿಣದ ಪೆಟ್ಟಿಗೆಯಲ್ಲಿ ತುಂಬಿ ಮಾಮೂಲಾಗಿ ಎಲ್ಲರೂ ಮಾಡುವಂತೆ ಪ್ರದರ್ಶನದ ನಂತರ ಕ್ಲಬ್ಬಿನಲ್ಲೋ ಎಲ್ಲೋ ಕುಳಿತು ದಣಿವಾರಿಸಿಕೊಳ್ಳುವ ಸಲುವಾಗಿ ಹೊರಟರು. ಹೊರಡುವ ಮೊದಲು ನಾಣಿಯವರು ನನಗೆ ಆದೇಶಿಸಿದರು – ''ಆ ಪೆಟ್ಟಿಗೆ ತೊಗೊಂಡು ಹೋಗು'' ಅಂತ.

ಗಾಜಿನ ಮನೆಯ ಬಳಿ ೯ ಘಂಟೆಯ ಹೊತ್ತಿನಲ್ಲಿ ಯಾವ ಆಟೋ ಸಿಗುತ್ತದೆ. ಎರಡು ಮಕ್ಕಳ ಕೈ ಹಿಡಿದುಕೊಂಡು, ಕಬ್ಬಿಣದ ಪೆಟ್ಟಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು (ಭಾರವಾದ ಪೆಟ್ಟಿಗೆಯನ್ನು ತರುವ ಬಗೆ ಹೇಗೆ) ಲಾಲ್‌ಬಾಗ್ ಗೇಟಿನವರೆಗೂ ಬಂದೆ. ಯಾವ ಆಟೋ ಸಿಗುವ ಲಕ್ಷಣ ಕಾಣಲಿಲ್ಲ. ೧೯೬೪ನೇ ಇಸವಿ ಇರಬಹುದು. ಆಗ ಜನರ ಓಡಾಟವೂ ಅಷ್ಟು ಹೊತ್ತಿನಲ್ಲಿ ಹೆಚ್ಚಾಗಿ ಇರುತ್ತಿರಲಿಲ್ಲ.

ಆ ಅವತಾರದಲ್ಲಿ ರಸ್ತೆಯಲ್ಲಿ ನಡೆಯಲು ಸ್ವಲ್ಪ ಸಂಕೋಚವೆನಿಸಿದರೂ, ಎರಡು ಮಕ್ಕಳನ್ನೂ ಕರೆದುಕೊಂಡು ಮನೆಗೆ ನಡೆದುಕೊಂಡೇ ಬಂದು ಸೇರಿದೆ. ಸುಜಾತ ತಮ್ಮನ ಕೈಹಿಡಿದು ಹುಷಾರಾಗಿ ಕರೆದುಕೊಂಡು ಬಂದಳು.

ಇಂತಹ ಎಷ್ಟೋ ಅವಸ್ಥೆಗಳನ್ನು ಅನುಭವಿಸಿದರೂ ಈ ಹವ್ಯಾಸದಲ್ಲಿ ಅರವತ್ತು ವರ್ಷಗಳಿಂದಲೂ ತೊಡಗಿಸಿಕೊಂಡಿದ್ದೇನೆಂದರೆ ಈ ರಂಗಭೂಮಿಯ ಆಕರ್ಷಣಾ ಶಕ್ತಿಯ ಮಹತ್ವ ಏನೆಂಬುದು ಅರಿವಾಗುತ್ತದೆ.

ಕಲಾ ಮಾತೆಯ ಸೇವೆ ಮಾಡಿದ್ದೇನೆಂದು ಹೇಳುವ ಸಾಹಸ ಮಾಡುವುದಿಲ್ಲ. ಆ ಮಾತೆಯ ಮಡಿಲಲ್ಲಿ ನಲಿದಾಡುವ ಭಾಗ್ಯ ನನ್ನದಾಯಿತು, ಧರ್ಮಕರ್ಮ ಸಂಯೋಗದಿಂದ, ಎಂದು ಹೇಳಲು ಇಚ್ಛಿಸುತ್ತೇನೆ.

ಭಾರ್ಗವಿ ನಾರಾಯಣ
ನಂ. ೨೭೬-ಸಿ, ೩೭ನೇ 'ಎ' ಮುಖ್ಯರಸ್ತೆ, ೮ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೮೨

# ಜನರ ತಕ್ಷಣದ ಸಮಸ್ಯೆಗಳಿಗೆ ವೈಜ್ಞಾನಿಕ ಸಂಶೋಧನೆಗಳು



**ಬೆಂ**ಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಕಳೆದ ಮೂವತ್ತೈದು ವರ್ಷಗಳಿ ಅಧ್ಯಾಪನ ಮತ್ತು ಸಂಶೋಧನೆಯಲ್ಲಿ ತೊಡಗಿರುವ ಡಾ॥ ಸಂಜಯ್ ಬಿಸ್ವಾಸ್ ಮೆಕ್ಯಾನಿ ಇಂಜಿನಿಯರಿಂಗ್‌ನಲ್ಲಿ ನಿಷ್ಣಾತರು. ಅವರ ಸಂಶೋಧನೆಯ ವಿಶಿಷ್ಟ ಕ್ಷೇತ್ರವಾದ ಟ್ರೈಬಾಲಜಿ ಪರಮಾಣು ಮತ್ತು ಅಣುಗಳ ಚಲನೆ ಹಾಗೂ ಅದರ ಪರಿಣಾಮಗಳನ್ನು ಸೂಕ್ಷ್ಮ ಅಧ್ಯಯನ ಮಾಡುವುದಕ್ಕೆ ಸಂಬಂಧಿಸಿದ್ದು. ಐಐಎಸ್‌ಸಿಯ ಹಲವು ಶೈಕ್ಷಣಿಕ-ಸಂಶೋಧನಾ ಯೋಜನೆಗಳಲ್ಲಿ ಭಾಗವಹಿಸುವುದಲ್ಲದೆ ಅವನ್ನು ರೂಪಿಸುವುದರಲ್ಲೂ ಸಂಜಯ್ ಅ ಪಾತ್ರವು ಮಹತ್ವದ್ದು. ಇಂಜಿನಿಯರಿಂಗ್ ವಿಭಾಗದ ಡೀನ್ ಆಗಿ ಆಡಳಿತಾತ್ಮಕ ಜವಾಬ ಗಳನ್ನೂ ಅವರು ನಿರ್ವಹಿಸಿದ್ದಾರೆ. ಭಾರತೀಯ ವಿಜ್ಞಾನ ಸಂಸ್ಥೆಯ ಅನೇಕ ಹೊಸ ಯೋ ಗಳಿಗೆ ರೂಪರೇಷೆ ನೀಡುವುದು, ಬೇರೆ ಪರಿಣತರೊಡನೆ ಸೇರಿ ಕಾರ್ಯಕ್ರಮಗ ಸಂಯೋಜಿಸುವುದು, ಪಠ್ಯಕ್ರಮ ಮುಂತಾದುವನ್ನು ರೂಪಿಸಲು ಸಹ-ವಿಜ್ಞಾನಿಗಳೊ ಸಮಿತಿಗಳಲ್ಲಿ ಚರ್ಚಿಸುವುದು, ಮುಂತಾಗಿ ಇವರ ಕಾರ್ಯಕ್ಷೇತ್ರ ವಿಸ್ತಾರವಾದುದು. ನ ದೇಶದ ಮತ್ತು ಬೇರೆ ದೇಶಗಳ ಅನೇಕ ವಿಶ್ವವಿದ್ಯಾನಿಲಯಗಳು, ಸಂಶೋಧನಾ ಸಂಸ್ಥೆ ಇವರ ಸಂಶೋಧನಾ ಕ್ರಮದ ನಿರ್ದೇಶನವನ್ನು ಸ್ವೀಕರಿಸುತ್ತವೆ. ಕೇಂದ್ರ ಸರ್ಕಾರದ ರಕ್ಷ ವಿಭಾಗದ ವೈಜ್ಞಾನಿಕ-ತಂತ್ರಜ್ಞಾನ ಸಮಿತಿಗಳಲ್ಲೂ ಇವರಿರುತ್ತಾರೆ. ಭಾರತೀಯ ವಿಜ್ಞಾ ಇತಿಹಾಸವು ಇವರ ಆಸಕ್ತಿಗಳಲ್ಲಿ ಒಂದು. ಬಹುಮುಖ ಪ್ರತಿಭೆಯ ಅಧ್ಯಾಪಕ-ಸಂಶೋ ಡಾ॥ ಸಂಜಯ್ ಬಿಸ್ವಾಸ್ 'ಹೊಸತು'ಗೆ ಹಳಬರು, ಆಪ್ತವಲಯದವರು, ಸಲಹೆಗಾ ಕೂಡ. ಅವರನ್ನು ಡಾ॥ ಕೆ. ಜಿ. ಶ್ರೀನಿವಾಸಮೂರ್ತಿ ಮತ್ತು ಡಾ॥ ಜಿ. ರಾಮಕೃಷ್ಣ ದಿನಾ ೧೪-೧೧-೨೦೦೯ರಂದು ಅವರ ವಿಭಾಗದಲ್ಲಿ ಸಂದರ್ಶಿಸಿದಾಗ ಶ್ರೀ ವಿಕ್ರಂ ಉಪಸ್ಥಿತರಿದ್ದರು. ಬೆಂಗಳೂರಿನ ವಿಶ್ವೇಶ್ವರಪುರ ವಿಜ್ಞಾನ ಕಾಲೇಜಿನ ರಸಾಯನಶಾ ಸ್ನಾತಕೋತ್ತರ ವಿಭಾಗದ ಮುಖ್ಯಸ್ಥರಾದ ಡಾ॥ ಕೆ. ಜಿ. ಎಸ್. ಸಂದರ್ಶನದಲ್ಲಿ ಮು ಪಾತ್ರವನ್ನು ನಿರ್ವಹಿಸಿದ್ದಾರೆ. ಲೇಖನವನ್ನು ಸಿದ್ಧಪಡಿಸಿದವರು ಮತ್ತು ಚಿತ್ರಗಳು : ಜಿ. ಆರ್.

---

**ಹೊ**ಸತು : ನಮ್ಮ ಪತ್ರಿಕೆಯ ಸ್ವರೂಪ, ಉದ್ದೇಶ, ಎಲ್ಲಾ ನಿಮಗೆ ಗೊತ್ತು. ಸಾಮಾನ್ಯ ಓದು ಗಂಭೀರವಾದ ವಿಷಯಗಳನ್ನು ತಲುಪಿಸಲು ಸಾಧ್ಯ ಮತ್ತು ಅದನ್ನು ಮಾಡಬೇಕು ಎಂಬ ಆಶಯ ನಿಮ್ಮಲ್ಲಿಗೆ ಬಂದಿದ್ದೇವೆ. ನಿಮ್ಮ ಸಂಸ್ಥೆಯ ಹೊಸ ಯೋಜನೆಗಳು, ಪದವಿ ಶಿಕ್ಷಣದ ಆಯೋಜನೆ, ವಿಜ್ಞಾ ಶಿಕ್ಷಣ, ಸಂಶೋಧನೆಗಳ ಹಾದಿ ಮುಂತಾದ ವಿಷಯಗಳನ್ನು ಪ್ರಸ್ತಾಪಿಸಬೇಕೆಂದಿದ್ದೇವೆ. ಮೊದ ನಿಮ್ಮಲ್ಲಿ ಪದವಿ ಶಿಕ್ಷಣದ ಸೌಲಭ್ಯ ಕಲ್ಪಿಸುವುದರ ಬಗೆಗೆ ತಿಳಿಸುತ್ತೀರಾ ?

ಸಂಜಯ್ : ಪದವಿ ಶಿಕ್ಷಣಕ್ಕೆ ಪ್ರೇರಣೆ ಬೇರೆ ಬೇರೆ ಕಡೆಗಳಿಂದ, ಬೇರೆ ಬೇರೆ ರೀತಿಗಳಲ್ಲಿ ಬಂ ನಮ್ಮ ನಡುವೆ ಪ್ರಫುಲ್ಲ ಯುವ ಮನಸ್ಸುಗಳಿದ್ದರೆ ಒಳ್ಳೆಯದು. ಇಲ್ಲಿನ ಚಟುವಟಿಕೆಗಳು ಉನ್ನತ ಮಟ್ಟ ಪ್ರಗಲ್ಭವಾದವು. ನಮ್ಮಲ್ಲಿ ಪೂರ್ವನಿರ್ಧಾರಿತ ಕಲ್ಪನೆಗಳು, ಆಕ್ಷೇಪಗಳು, ಇಲ್ಲವೆನ್ನಬಹುದು. ಪದವಿ ಶಿ ಬಗ್ಗೆ ಎಲ್ಲ ಹಂತಗಳಲ್ಲೂ ನಮ್ಮಲ್ಲಿ ಚರ್ಚೆಗಳು ನಡೆದಿವೆ. ರಾಷ್ಟ್ರೀಯ ಜ್ಞಾನ ಆಯೋಗ ಮುಂತಾದವರಿಂ ವರದಿಗಳು ಬಂದಿವೆ. ವಿಶ್ವವಿದ್ಯಾಲಯಗಳ ಧನಸಹಾಯ ಆಯೋಗವೂ ಈ ಬಗ್ಗೆ ಚಿಂತನೆ ನಡ

# ಪರಿಹಾರ ನೀಡುವಂತಹ ನಿಜವಾಗಿಯೂ ಮೌಲಿಕವಾದುವು

ಮೂನ್ಯವಾದ ಭಾವನೆಯೆಂದರೆ ನಮ್ಮ ಸಂಸ್ಥೆಯಲ್ಲೂ ಪದವಿ ಶಿಕ್ಷಣ ನೀಡಬೇಕೆಂದಾಗಿದೆ. ಈಗ ನೋಡಿ, ನೆಯ ತರಗತಿಯ ನಂತರ ಒಂದೊಂದು ಶಿಸ್ತಿನಲ್ಲಿ ಒಂದೊಂದು ಕ್ರಮ ಇದೆ. ಪದವಿ ಪಡೆಯಲು ರು, ನಾಲ್ಕು, ಐದು ವರ್ಷ ಹೀಗೆಲ್ಲಾ ಇದೆ. ಇಂಜಿನಿಯರಿಂಗ್ ಆದರೆ ನಾಲ್ಕೈದು, ವಿಜ್ಞಾನವಾದರೆ ರು, ವೈದ್ಯಕೀಯವಾದರೆ ಆರು, ಹೀಗಿದೆ. ಈಗಂತೂ ತಂತ್ರಜ್ಞಾನ-ವಿಜ್ಞಾನಗಳ ನಡುವೆ ಅಂತರ ಮೆಯಾಗುತ್ತಿದೆ. ಎಲ್ಲ ಕಡೆಯೂ ೧೨ರ ನಂತರ ೪ ವರ್ಷವೆಂಬ ನಿಯಮ ಜಾರಿಯಾಗಬೇಕೆಂಬ ಪ್ರಸ್ತಾವ ಮುಂದಿದೆ. ಆಮೇಲೆ ಸ್ನಾತಕೋತ್ತರ ಅಧ್ಯಯನ, ಉದ್ಯೋಗ, ಇತ್ಯಾದಿ ಆಯ್ಕೆಗಳಿರುತ್ತವೆ.

**ಜಿ. ಆರ್.** : ಹಾಗೆ ಎಲ್ಲ ಕಡೆಯೂ ಜಾರಿಯಾಗಲಿದೆಯೇ ?

**ಸಂ** : ಹೌದು, ಆದರೆ ಯುಜಿಸಿ ಇನ್ನೂ ಹಾಗೆ ಹೇಳಿಲ್ಲ.

**ಕೆ. ಜಿ. ಎಸ್.** : ಅದು ಎಲ್ಲ ಶೈಕ್ಷಣಿಕ ವಿಭಾಗಗಳಿಗೂ ಅನ್ವಯವಾಗುತ್ತದೆಯೆ ?

**ಸಂ** : ಬಹುಶಃ ಹೌದು. ಕಾಲಕ್ರಮೇಣ ಅನ್ನಬಹುದು. ನಮ್ಮ ಸಂಸ್ಥೆಯು ಈವರೆಗೆ ಸ್ನಾತಕೋತ್ತರ ದ್ರವಾಗಿದ್ದು, ಈಗೇಕೆ ಪದವಿ ವಿಭಾಗವನ್ನೂ ತೆರೆಯಬೇಕೆಂಬುದರ ಜಿಜ್ಞಾಸೆ ವ್ಯಾಪಕವಾಗಿ ನಡೆದಿದೆ.

**ಕೆ. ಜಿ. ಎಸ್.** : ಹೀಗಿರಬಹುದೆ ? ಒಳ್ಳೆಯ ವೃತ್ತಿಪರ ಕಾಲೇಜುಗಳಲ್ಲಿ ವ್ಯಾಸಂಗ ಮಾಡುವ ಮಂದಿಗೆ ಒಳ್ಳೆಯ ಭವಿಷ್ಯವಿದೆ; ಅವರು ಉತ್ತಮ ತರಬೇತಿ ಪಡೆದಿರುತ್ತಾರೆ. ೧೨ ವರ್ಷಗಳ ನಂತರ ರ್ಷ ವ್ಯಾಸಂಗ ಮಾಡಿದವರಿಗೆಲ್ಲ ಅಂತಹ ಸೌಲಭ್ಯ ಇರುವುದಿಲ್ಲ, ಅಲ್ಲವೆ ?

**ಸಂ** : ಅದು ಸರಿ. ಕೃತಕವಾಗಿ ನಾವು ಐದರಿಂದ ನಾಲ್ಕಕ್ಕೆ ಇಳಿಸುವುದು, ಇತ್ಯಾದಿ ಅಸಂಗತವಾಗುತ್ತವೆ. ಖ್ಯವಾಗಿ ತಾತ್ವಿಕ ಸಮರ್ಥನೆ ಏನೆಂಬುದನ್ನು ಪರಿಶೀಲಿಸಬೇಕು. ಶಿಸ್ತುಗಳ ನಡುವೆ ಅಂತರ ದವಾಗುತ್ತಿರುವ ಸನ್ನಿವೇಶ ನಮ್ಮದು. ಅವು ಹೆಚ್ಚು ಹೆಚ್ಚು ಐಕ್ಯಗೊಳ್ಳುತ್ತಿವೆ. ಪದವಿ ಶಿಕ್ಷಣವು ಕೇವಲ ದ್ಯೋಗ ಅರಸುವುದಕ್ಕಲ್ಲ. ಅದು ಜ್ಞಾನಕ್ಕೆ ವಿಶಾಲವಾದ ತಳಹದಿ ಮತ್ತು ವ್ಯಾಪ್ತಿ ದೊರೆಯುವಂತೆ ಡಬೇಕು. ಜೀವನ ಎದುರಿಸಲು, ದೇಶದ ಸವಾಲುಗಳನ್ನು ಪರಿಹರಿಸಲು ನಮ್ಮ ವಿದ್ಯಾರ್ಥಿಗಳಿಗೆ

## – ಡಾ॥ ಸಂಜಯ್ ಬಿಸ್ವಾಸ್

ಸಾಮರ್ಥ್ಯ ಲಭಿಸಬೇಕು. ಆಮೇಲೆ ಅವರಿಗೆ ಸರಿದೋರಿದ ಹಾದಿಯಲ್ಲಿ ಮುನ್ನಡೆಯಲಿ. ಈ ಬಗ್ಗೆ ವಿಶ್ವವಿದ್ಯಾನಿಲಯಗಳ ದೃಷ್ಟಿ ಏನೆಂದು ತಿಳಿಯದು. ಆದರೆ ನಮ್ಮ ನಿಲುವು ಇದು : ತಂತ್ರಜ್ಞಾನ-ವಿಜ್ಞಾನಗಳನ್ನು ಬೆಸೆಯಬೇಕು. ಪದವಿ ಶಿಕ್ಷಣವು ವಿಜ್ಞಾನ-ತಂತ್ರಜ್ಞಾನ-ಸಂಶೋಧನಾ ಮಾರ್ಗಗಳ ಸಮ್ಮಿಲನವಾಗಬೇಕು, ಅದು ನಾಲ್ಕು ವರ್ಷಗಳ ಅವಧಿಯದಾಗಬೇಕು. ಮೊದಲ ಒಂದೂವರೆ ವರ್ಷದಲ್ಲಿ ಎಲ್ಲರೂ ಎಲ್ಲ ವಿಷಯಗಳನ್ನೂ ಅಧ್ಯಯನ ಮಾಡುತ್ತಾರೆ : ಭೌತಶಾಸ್ತ್ರ, ಜೀವಶಾಸ್ತ್ರ, ರಸಾಯನ ಶಾಸ್ತ್ರ, ಗಣಿತಶಾಸ್ತ್ರ, ಗಣಕ ವಿಜ್ಞಾನ, ಎಲ್ಲಾ. ಉದಾಹರಣೆಗೆ, ಒಂದಷ್ಟು ಪಾರ್ಟಿಕಲ್ ಫಿಸಿಕ್ಸ್ ಕಲಿಯುವಾಗಲೇ ಸ್ವಲ್ಪ ಇಲೆಕ್ಟ್ರಿಕಲ್ ಇಂಜಿನಿಯರಿಂಗನ್ನೂ ಕಲಿಯಬೇಕು, ರಸಾಯನಶಾಸ್ತ್ರದ ಮೂಲ ಪಾಠ ಕಲಿಯಬೇಕು. ಅಂದರೆ, ಅದು ಮೂಲಭೂತ ಅಡಿಪಾಯದ ಅಧ್ಯಯನ ಶಿಸ್ತು. ಆಮೇಲೆ ವಿದ್ಯಾರ್ಥಿಗಳು ತಾವೇ ಆಯ್ಕೆ ಮಾಡಿಕೊಂಡ ಶಿಸ್ತುಗಳ ಅಭ್ಯಾಸದಲ್ಲಿ ತೊಡಗುತ್ತಾರೆ. ಅಲ್ಲೂ ಶೇ. ೭೦ರಷ್ಟು ಅವರೇ ಆಯ್ಕೆ ಮಾಡಿಕೊಂಡ ಶಿಸ್ತಿನದು, ಇನ್ನುಳಿದದ್ದು ಬೇರೆ ಶಿಸ್ತುಗಳಿಂದ ಬಂದಿದ್ದು. ಅದರಲ್ಲಿ ಮಾನವಿಕ ವಿಭಾಗಗಳ ಅಧ್ಯಯನವೂ ಸೇರಿರುತ್ತದೆ. ಆಶಯವಿಷ್ಟೆ: ನಿಷ್ಣಾತ



*ಡಾ॥ ಸಂಜಯ್ ಬಿಸ್ವಾಸ್, ಜಿ. ಆರ್., ಡಾ॥ ಕೆ. ಜಿ. ಶ್ರೀನಿವಾಸಮೂರ್ತಿ*

ವಿದ್ಯಾರ್ಥಿಗಳಾಗಬೇಕು. ಪ್ರಯೋಗಾತ್ಮಕ ಶಿಸ್ತನ್ನು ವೃದ್ಧಿಗೊಳಿಸಿಕೊಳ್ಳಬೇಕು. ಶಿಕ್ಷಣವು ಉದ್ಯೋಗ ಕೇಂದ್ರಿತವಲ್ಲ, ಮಾನವ ಅಭಿವೃದ್ಧಿ ಕೇಂದ್ರಿತವಾದ್ದು. ನಮ್ಮ ಸಂಸ್ಥೆಯ ತಸ್ಥೆಯಿಂದಾಗಿ ಹೇಗೂ ಉದ್ಯೋಗ ದೊರೆಯಬಹುದು, ಬಿಡಿ. ಹೀಗೆ ಆರಂಭಿಸಿದ ಹೊಸ ವಿಧಾನದಲ್ಲಿ ಐದಾರು ವರ್ಷಗಳ ಅನುಭವದಿಂದ ನಂತರ ನಮ್ಮ ಸಂಸ್ಥೆಯು ಸಂಶೋಧನೆ, ಕೈಗಾರಿಕೆಗಳಲ್ಲಿ ಉದ್ಯೋಗ, ಮುಂತಾದುವಕ್ಕೆ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸಲು ಸಾಧ್ಯವಿದೆ. ಯಾವ ವಿದ್ಯಾರ್ಥಿಯೂ ಒಂದೇ ಶೈಕ್ಷಣಿಕ ಆವರಣದಲ್ಲಿ ೯-೧೦ ವರ್ಷಗಳನ್ನು ಕಳೆಯುವುದು ಒಳ್ಳೆಯದಲ್ಲ. ಆದ್ದರಿಂದ ಪಿಎಚ್.ಡಿ.ಗೆ ಅವರು ಬೇರೆಡೆಗೂ ಹೋಗಬಹುದು. ಕೆಲವರ ಟೀಕೆ ಏನೆಂದರೆ ನಮ್ಮ ಸಂಸ್ಥೆಯು ಪ್ರತಿಭಾವಂತರಿಗೆ ಗೂಡು ಕಟ್ಟಿಕೊಡಲು ಪದವಿ ಶಿಕ್ಷಣ ಆರಂಭಿಸುತ್ತಿದ್ದೇವೆ, ಎಂದು. ಆದರೆ ಉದ್ದೇಶ ಅದಲ್ಲ.

**ಜಿ. ಆರ್.** : ಹಾಗಿದ್ದರೆ ನಿಮ್ಮ ಈಗಿನ ಇಂಟಿಗ್ರೇಟೆಡ್ ಪಿಎಚ್.ಡಿ. (ಅಂದರೆ ನಿಮ್ಮಲ್ಲೇ ಎಂ.ಎಸ್ಸಿ. ಮಾಡಿ ಮುಂದುವರಿಯುವುದು) ಏನಾಗುತ್ತದೆ ? ೧೨+೪+ ಪಿಎಚ್.ಡಿ. ಆಗುತ್ತದೆಯೆ ?

**ಸಂ** : ಅದು ಈಗಿರುವಂತೆಯೇ ಮುಂದುವರಿಯುತ್ತದೆ. ನಮ್ಮಲ್ಲಿ ನಡೆಯುತ್ತಿರುವ ಚರ್ಚೆ ಬೇರೆ. ಈ ಹೊಸ ಅಧ್ಯಾಪನ ಕೆಲಸ ಯಾರು ಮಾಡುತ್ತಾರೆ, ಎಂಬುದು. ಈಗಿನ ಇಂಟಿಗ್ರೇಟೆಡ್ ಪಿಎಚ್.ಡಿ. ಮತ್ತು ನಾಲ್ಕು ವರ್ಷದ ಪದವಿ ಶಿಕ್ಷಣಗಳಲ್ಲಿ ಕೆಲ ಭಾಗಗಳು ಎರಡರಲ್ಲೂ ಇರುವಂಥವು. ಇಂಜಿನಿಯರಿಂಗ್ ವಿಭಾಗದಲ್ಲಿ ಇಂಟಿಗ್ರೇಟೆಡ್ ಪಿಎಚ್.ಡಿ. ಸುಸೂತ್ರವಾಗಿ ನಡೆಯುತ್ತಿದೆ. ಕ್ರಮೇಣ ಹೊಸದು ಮತ್ತು ಹಳೆಯದು ಮಿಲನಗೊಳ್ಳುತ್ತವೆ.

**ಜಿ. ಆರ್.** : ಈಗಿನ ಪದವಿ ಶಿಕ್ಷಣ ಯೋಜನೆಯ ತಾತ್ವಿಕ ಸಮರ್ಥನೆ ಏನು ? ಇಂತಹ ಪದ್ಧತಿ ಜಾರಿಗೊಳಿಸಲು ನಿಮಗೆ ಇಷ್ಟು ವರ್ಷಗಳ ಕಾಲ ಬೇಕಿತ್ತೆ ?

**ಸಂ** : ಇಡೀ ಇತಿಹಾಸದ ಗೋಜಿಗೆ ಹೋಗುವುದು ಅನಗತ್ಯ. ಒಂದಂತೂ ನಿಜ; ನಮ್ಮ ಸಂಸ್ಥೆಯಲ್ಲಿ ಪದವಿ ಶಿಕ್ಷಣ ನೀಡುವ ಪರಂಪರೆ ಇದ್ದದ್ದೆ. ಹತ್ತು ವರ್ಷಗಳ ಕಾಲ ಇದನ್ನು ಮಾಡಿದ್ದೇವೆ. ಆದರೆ ಮೂರು ವಿಭಾಗಗಳಲ್ಲಿ ಮಾತ್ರ : ಸಂವಹನ ವಿಜ್ಞಾನ,





*ಸಂಜಯ್ ಅವರ ಲ್ಯಾಬ್‌ನಲ್ಲಿ*

ಇಲೆಕ್ಟ್ರಾನಿಕ್ಸ್ ಮತ್ತು ಮೆಟಲರ್ಜಿ. ಅಲ್ಲಿ ಶಿಕ್ಷಣ ಪಡೆದವರು ಸಮರ್ಥ ಸಂಶೋ ರಾಗಿದ್ದಾರೆ, ಉದ್ದಿಮೆಗಳ ನೇತಾರರಾಗಿದ್ದಾರೆ. ಅವರು ನಮಗೆ ಹೇಳುತ್ತಾರೆ, ಪದ್ಧತಿಯನ್ನು ಪುನರಾರಂಭಿಸಿ, ಎಂದು.

**ಕೆ. ಜಿ. ಎಸ್.** : ಅದು ಮೂರು ವರ್ಷಗಳ ಅವಧಿಯದಾಗಿತ್ತೆ? ಅವ ಸ್ನಾತಕೋತ್ತರ ವ್ಯಾಸಂಗಕ್ಕೆ ಅವಕಾಶವಿರಲಿಲ್ಲವೆ ?

**ಸಂ** : ಇತ್ತು, ಆದರೆ ನೇರವಾಗಿ ಉದ್ಯೋಗಗಳಿಗೆ ಹೋಗುವ ಸಾಮರ್ಥ್ಯ ಲಭಿಸಿತ್ತು. ಒಟ್ಟಿನಲ್ಲಿ, ಪದವಿ ಶಿಕ್ಷಣದಲ್ಲಿ ನಮ್ಮ ಸಂಸ್ಥೆಗೆ ಅನುಭವ ಇದೆ. ನಯುಡ ಸಮಿತಿಯ ವರದಿಯ ಪರಿಣಾಮವಾಗಿ ನಾವದನ್ನು ಕೈಬಿಟ್ಟೆವು. ಆ ಸಮಿತಿ ಸ್ನಾತಕೋತ್ತರ ಶಿಕ್ಷಣ ಮತ್ತು ಸಂಶೋಧನೆಗೆ ಮೀಸಲಾಗಬೇಕೆಂದು ನಮ್ಮಂ ಸಂಸ್ಥೆಗಳಿಗೆ ತಿಳಿಸಿತ್ತು. ಈಗ ಸನ್ನಿವೇಶವೇ ಬೇರೆ. ರಾಷ್ಟ್ರೀಯ ಅವಶ್ಯಕತೆ ಮತ್ತು ಬೇ ಬೇರೆ ರೀತಿಯದು. ಆದ್ದರಿಂದ ಸಂಸ್ಥೆಯ ಸಂಶೋಧಕರು ಸ್ವಲ್ಪಮಟ್ಟಿನ ಅಧ್ಯಾಪನ ಸಮಯ ನೀಡಬೇಕಾಗುತ್ತದೆ. ಅದಕ್ಕಾಗಿ ಅವರಿಗೆ ಮನವಿ ಮಾಡಿಕೊಂಡಾಗಿದೆ. ತ ಸಂಶೋಧನೆಗಳಿಗೆ ಆದ್ಯತೆ ನೀಡುತ್ತಲೇ ಪದವಿ ಶಿಕ್ಷಣಕ್ಕೂ ನೆರವಾಗಲು ಅವರ ಕೋರಿದ್ದಾರೆ. ಅಲ್ಲದೆ, ನಾವು ಆರಂಭಿಸುತ್ತಿರುವ ಪದವಿ ಶಿಕ್ಷಣವು ಅಂ ಶಿಸ್ತೀಯವಾದ್ದರಿಂದ ಯಾವೊಂದು ವಿಭಾಗದ ಮೇಲೂ ಇಡೀ ಹೊರೆ ಬೀಳುವುದಿ ಇಲ್ಲಿ ಪದವಿ ಪಡೆದವರು ಉದ್ಯೋಗ ಅರಸಬಹುದು ಇಲ್ಲವೇ ಪಿಎಚ್.ಡಿ. ಸಂಶೋಧನೆ ಕೈಗೊಳ್ಳಬಹುದು.

**ಜಿ. ಆರ್.** : ಇಲ್ಲಿಯ ಸಂಶೋಧಕರಿಗೆ ಅದರಿಂದೇನಾದರೂ ಅಸಮಾಧಾ ವಾಗಿದೆಯೆ ?

**ಸಂ** : ಅಸಮಾಧಾನವಲ್ಲ, ನಮ್ಮ ಸತಾರ್ಕಿಕ ಅಭಿಪ್ರಾಯಗಳೂ ಇವೆ. ಇಲ್ಲಿ ಸಂಶೋಧಕರ ಮಾಪನ ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುತ್ತದೆ. ಉನ್ನತ ಮಟ್ ಪ್ರಕಟಣೆಗಳಿಲ್ಲದಿದ್ದರೆ ವಿಜ್ಞಾನಿಗಳಾಗಿ ಉಳಿಯಲಾಗುವುದಿಲ್ಲ. ಅದು ನ ಉದ್ಯೋಗದಲ್ಲಿ ಉಚ್ಚಸ್ಥಾನಕ್ಕೇರಲು ಸಾಧನ ಕೂಡ. ಸಂಶೋಧನೆಯ ವೇಳೆಯ ಕಡಿತಗೊಳಿಸಿದರೆ ಸಹಜವಾಗಿಯೇ ಪ್ರಕಟಣೆಗಳ ಮೇಲೆ ಅದರ ಪರಿಣಾ ವಿರುತ್ತದೆ. ಇದು ಸಂಪೂರ್ಣವಾಗಿ ತರ್ಕಬದ್ಧವಾದ ಮಾತಲ್ಲವೆಂಬ ಅಭಿಪ್ರಾಯ ಇದೆ. ಇಡೀ ನಾಲ್ಕು ವರ್ಷಗಳ ಪದವಿ ಶಿಕ್ಷಣ ಜಾರಿಯಾದಾಗ ಕೂಡ ಆ ಮಟ್ ವಿದ್ಯಾರ್ಥಿಗಳು ಇಡೀ ಸಂಸ್ಥೆಯ ಶೇ. ೨೦ನ್ನು ಮೀರುವುದಿಲ್ಲ.

**ಕೆ. ಜಿ. ಎಸ್.** : ಪದವಿ ಶಿಕ್ಷಣಕ್ಕೆ ಒತ್ತುಕೊಡಬೇಕಾದ್ದು ಇಂದು ರಾಷ್ಟ್ರೀ ಅವಶ್ಯಕತೆ ಎನ್ನುತ್ತೀರಾ ? ಏಕೆ ? ವಿದ್ಯಾರ್ಥಿಗಳು ಹೆಚ್ಚುಹೆಚ್ಚಾಗಿ ತಾಂತ್ರಿಕ ಶಿಕ್ಷಣದ ವಾಲಿ ವಿಜ್ಞಾನದ ಅಧ್ಯಯನಕ್ಕೆ ಬರುತ್ತಿರುವವರ ಸಂಖ್ಯೆ ಕುಸಿದಿದೆಯೆನ್ನಬಹುದೆ ತಾಂತ್ರಿಕ ಶಿಕ್ಷಣಕ್ಕೆ ಅಗತ್ಯಕ್ಕಿಂತಲೂ ಹೆಚ್ಚು ಮಂದಿ ಪ್ರವೇಶ ಪಡೆಯುತ್ತಿದ್ದಾರೆಯೆ ?

**ಸಂ** : ನೀವು ಹೇಳುವುದು ಸರಿ. ಕೆಲವು ವಿಶ್ವವಿದ್ಯಾನಿಲಯಗಳನ್ನು ಹೊರ ಪಡಿಸಿದರೆ ವಿಜ್ಞಾನ ಆಯ್ಕೆ ಮಾಡಿಕೊಳ್ಳುವವರ ಸಂಖ್ಯೆ ಕುಗ್ಗಿದೆ. ಅದು ಶು ಸಮಾಚಾರವಲ್ಲ. ವೈಜ್ಞಾನಿಕ ಪದ್ಧತಿಯ ಬೆಳವಣಿಗೆ ಮತ್ತು ಉತ್ಪಾದನಾ ಪ್ರಕ್ರಿಯೆಗಳ ಎರಡಕ್ಕೂ ಇದರಿಂದ ಹೊಡೆತ ಬೀಳುತ್ತದೆ. ಇಡೀ ದೇಶದ ಮುನ್ನಡೆ ಅಥ ಹಿನ್ನಡೆಯನ್ನು ಇದು ಪ್ರತಿಫಲಿಸುತ್ತದೆ. ಸಾಂಸ್ಕೃತಿಕ ಮತ್ತು ಉತ್ಪಾದನಾ ಕ್ಷೇತ್ರಗಳ ಮುಗ್ಗಟ್ಟು ತಲೆದೋರಿದರೆ ಅದು ಕ್ಷೇಮಕರವಲ್ಲ.



# ಮರ್ತ್ಯನ ಭಾಗ್ಯ

**ತೂ**ಕಡಿಸುವ ಮನದ ಅನುಕ್ತ
ಮಾತು ಕನಸಿನ ಕಾಣ್ಕೆ
ಕೇಳುವುದು ನೋವಿಗೆ ಮೊದಲೇ ಅತ್ತಂತೆ
ಬೆಳಗನ್ನು ಹೆತ್ತ ಇರುಳಲ್ಲಿ
ನೆಲೆಯಿಂದ ನೆಲೆಗೆ ಸಂಕೇತಾಗ್ನಿ ಹೊತ್ತಿಯುರಿದು
ಕಿಸೆಯೊಳಗೆ ಹಣವಿದ್ದರೂ ಉಣಲು
ಬಿಡುವಿಲ್ಲದ ಉಪವಾಸ
ಯಾರಿಗಾಗಿ ಎಂದೇ ಅರಿಯದ ದುಡಿತ
ಕೈಗೆ ಸಿಕ್ಕಿದ್ದನ್ನು ಕವರಿಕೊಂಡು
ರಾತ್ರಿ ಪೂರ್ತಿ ಮಲಗಲೆಂದರೆ
ಹೊರಗುತ್ತಿಗೆಗೆ ದುಡಿದು ಸತ್ತವರ
ಪೀಡೆ ಎಚ್ಚರಿದ್ದು ಕಾಡುತ್ತಿದೆ

ಹುಡುಗು ಬಲಾಬಲವೆ ಶೇರು
ಮಾರುಕಟ್ಟೆ ಮೇಲೂರಿ ಸಾವಿರವೆ
ಸಂಬಳ ಲಕ್ಷ ಎದೆಯೊಳಗೆ ಕೆಚ್ಚುಕ್ಕುವ
ಕಾಲವ ಇಮ್ಮಡಿ ಲಂಬಿಸಿ ಜವ್ವನ
ಹೂವ ಬಾಡಿಸುವ ಎದೆಯಾಳದ
ಮಿನುಗು ತೋರುವ ಕಣ್ಣ
ಹೊಳಪು ಬರಿಯ ನೀರೊಲವಿನ ಪುಸಲಾಯಿಕೆ
ಗಂಡು ಹೆಣ್ಣು ಬಯಸುವುದು
ನ್ಯಾಯವೇ ಶುಭಮಸ್ತು

ಕಂಪೆನಿ ನೊಗದ ನಿರ್ಬಂಧಕ್ಕೆ ಕೊರಲೊಡ್ಡಿ
ಹೀನ ಬೋಧೆ ಹುಚ್ಚು ಕೆರಳು
ಹಿರಿಯರ ನಂಬಲಾರದೆ ಮಾತು ಕಿವಿ ತಪ್ಪಿಸಿ
ಮನೆಯ ಸಂಕಟ ಎಂಥವು
ಬೆಂತರವೊಂದು ಒಡೆಯನ ನಡೆಸಿದರೆ
ರುಜುವಾತಿಗೆ ಮೊದಲೇ ಒಲಿದು ಒಪ್ಪಿ
ನೊಂದು ಬಿರಿದ ಹೆಣ್ಣೆದೆಯೊಂದು

ಎಲ್ಲೆಲ್ಲೂ ಇದ್ದೇ ಇದೆ
ಕಲಿಯುವುದೆಂದರೆ ಮುಪ್ಪಿಗೂ ಯವ್ವನ
ಉಜ್ಜಿ ಒರೆಯಿಟ್ಟಾಗ ಹಿತ್ತಾಳೆ ಕಂದು ಗೀರುವಂತೆ
ಸಿಡುಕು ಸಿಡಿಗೊಲ್ಲನ ತಿವಿತಕ್ಕೆ
ಹಿಂಡುಗೆಟ್ಟೋಡುವ ಮಂದೆ
ಮರ್ತ್ಯನ ಭಾಗ್ಯ ಬೀಗಿದರೆ
ಸಂತಾನ ಬಿಡದೆ ಸಾಯುವುದಿಲ್ಲ.

**ಡಾ॥ ಕವಿತಾ ರೈ**
'ಅರ್ಕ', ಶಾರದಾನಗರ, ಮಾಡೂರು, ಕೋಟೆಕಾರು ಅಂಚೆ
ಮಂಗಳೂರು - ೫೭೫ ೦೨೨

**ಕೆ. ಜಿ. ಎಸ್.** : ಹಾಗಿದ್ದರೆ ನಿಮ್ಮ ಸಂಸ್ಥೆಯ ಸಂಶೋಧಕರ ಮೇಲೆ ಒತ್ತಡ ಹೆಚ್ಚುತ್ತದೆಯೆ ಮತ್ತು ರಿಂದಾಗಿ ಅವರು ಪದವಿ ಶಿಕ್ಷಣ ವ್ಯವಸ್ಥೆಯನ್ನು ಸ್ವಾಗತಿಸುವುದಿಲ್ಲವೆ ?

**ಸಂ :** ಸ್ವಲ್ಪ ಮಟ್ಟಿಗೆ ಇದು ನಿಜ, ಆದರೆ ಅಧ್ಯಾಪನ ಕಾರ್ಯ ದೊಡ್ಡ ಹೊರೆಯೇನೂ ಆಗುವುದಿಲ್ಲ.

**ಕೆ. ಜಿ. ಎಸ್.** : ಸಂಶೋಧಕರ ಪ್ರಕಟಣೆಗಳ ಬಗ್ಗೆ ಹೇಳುತ್ತಿದ್ದಿರಿ. ಈಚೆಗೆ ನಾನೊಂದು ಲೇಖನ ಡಿದೆ. ಅಂತರರಾಷ್ಟ್ರೀಯವಾಗಿ ಗಮನಾರ್ಹ ಸ್ಥಾನ ಪಡೆದಿರುವ ವೈಜ್ಞಾನಿಕ ನಿಯತಕಾಲಿಕೆ ಲ್ಲಿ ವಿಶ್ವದ ಸಂಶೋಧಕರು ಪ್ರಕಟಿಸಿರುವ ಲೇಖನಗಳ ವಿಶ್ಲೇಷಣೆ ಅದರಲ್ಲಿದೆ. ಯಾವ ಉನ್ನತ ಶೋಧನಾ ಕೇಂದ್ರಗಳು ಎಷ್ಟು ಮೌಲಿಕವಾದ ಸಾಧನೆಗಳನ್ನು ಮಾಡಿವೆ ಎಂಬುದನ್ನಾಧರಿಸಿ ರು ಶ್ರೇಣೀಕೃತ ಪಟ್ಟಿಯನ್ನು ಮಾಡಿದ್ದಾರೆ. ಅದು ವಿಶ್ವದ ಎಲ್ಲ ಸಂಸ್ಥೆಗಳನ್ನೂ ಗಣನೆಗೆ ತೆಗೆದು ಡಿದೆ. ಆ ಪಟ್ಟಿಯ ಮೊದಲ ನೂರು ಹೆಸರುಗಳಲ್ಲಿ ನಮ್ಮ ದೇಶದ ಯಾವ ಸಂಸ್ಥೆಯೂ ಇಲ್ಲ, ನಿಮ್ಮ ಯೂ ಸೇರಿದಂತೆ. ಹಾಗಿದ್ದರೆ ಏನು ಉನ್ನತ ಮಟ್ಟದ ಸಂಶೋಧನೆ ನಡೆಯುತ್ತಿದೆಯೆಂದು ಭಾವಿಸಬೇಕು ?

**ಸಂ :** ಭಾಗಶಃ ಇದೊಂದು ತಾಂತ್ರಿಕ ಪ್ರಶ್ನೆ. ಶ್ರೇಣೀಕರಣಕ್ಕೆ ಅನುಸರಿಸಲಾಗುವ ವಿಧಾನ ಕೊಂದು ಕಡೆ ಒಂದೊಂದು ರೀತಿಯದು. ನೀವು ಹೇಳುತ್ತಿರುವ ಪಟ್ಟಿಯು ಷಾಂಘೈ ಕೊಳಿಸಿರುವ ಪಟ್ಟಿಗಿಂತ ಭಿನ್ನ. ಷಾಂಘೈ ಪಟ್ಟಿಯಲ್ಲಿ ನಮ್ಮ ದೇಶಕ್ಕೆ ಸ್ವಲ್ಪ ಉತ್ತಮವಾದ ವಿದೆ. ಕೆಲವರು ಮುಖ್ಯವಾಗಿ ಐದಾರು ಅಂಶಗಳನ್ನು ಮಾಪನಕ್ಕೆ ಆಯ್ದುಕೊಳ್ಳುತ್ತಾರೆ. ನನ್ನ ಯ ವಿಶ್ವವಿದ್ಯಾನಿಲಯ ಆಕ್ಸ್‌ಫರ್ಡ್. ಅದಕ್ಕೆ ೧೨ ಅಥವಾ ೧೩ನೇ ಸ್ಥಾನ ಸಾಮಾನ್ಯವಾಗಿ ವಾಗಲೂ ಇರುವುದೇ. ಸ್ವಿಟ್ಜರ್ಲೆಂಡಿನ ಒಂದು ವಿಜ್ಞಾನ-ತಂತ್ರಜ್ಞಾನ ಸಂಸ್ಥೆಯಲ್ಲಿ ನಾನು ್ಯಪನ ಕೆಲಸ ಆಗಾಗ್ಗೆ ಮಾಡುತ್ತಿರುತ್ತೇನೆ. ಅದರ ಸ್ಥಾನ ೧೫. ಚೀಣಾ, ಜಪಾನ್‌ಗಳ ಕೆಲವು ಗಳು ೨೦, ೩೦ನೇ ಸ್ಥಾನಗಳಲ್ಲಿವೆ. ಮೊದಲ ೨೦ ಸ್ಥಾನಗಳು ಸಾಮಾನ್ಯವಾಗಿ ಅವವೇ ಗಳವು. ಒಂದು ಸ್ಥಾನ ಆ ಕಡೆ, ಈ ಕಡೆ ಆಗಬಹುದು, ಅಷ್ಟೆ. ಐನೂರರ ಒಂದು ಪಟ್ಟಿಯಲ್ಲಿ ದು ೨೧೫ನೇ ಸ್ಥಾನ! ದಿನದಿಂದ ದಿನಕ್ಕೆ ಈ ಪಟ್ಟಿಯಲ್ಲಿ ಏಳು-ಬೀಳುಗಳಿರುತ್ತವೆ. ನಮ್ಮ ೀಶಕರು ಕಳೆದ ಸೆನೆಟ್ ಸಭೆಯಲ್ಲಿ ತಮಾಷೆಯಾಗಿ ಹೇಳುತ್ತಿದ್ದರು, ಹೀಗೇ ಆಗುತ್ತಿದ್ದರೆ ನಾವು ದಲ ೫೦೦ರಲ್ಲಿ ಸಹ ಸ್ಥಾನವನ್ನು ಕಳೆದುಕೊಳ್ಳುತ್ತೇವೋ ಏನೋ, ಎಂದು. ಮುಖ್ಯವಾಗಿ ನಿಸಬೇಕಾದ್ದು ಶ್ರೇಣೀಕರಣದ ಅಂಶಗಳು. ಉದಾಹರಣೆಗೆ, ಪ್ರತಿವರ್ಷ ಪಿಎಚ್.ಡಿ. ಎಷ್ಟು

ಮಂದಿ ಪಡೆಯುತ್ತಾರೆ ? ನಮ್ಮ ಸಂಸ್ಥೆಯ ಇಂಜಿನಿಯರಿಂಗ್ ವಿಭಾಗದಲ್ಲಿ ಕಳೆದ ವರ್ಷ ೬೦ ಇದ್ದದ್ದು ಈ ವರ್ಷ ೧೫೦ ಆಗಿದೆ. ಅದೊಂದರಿಂದಲೇ ನಮ್ಮ ಸ್ಥಾನ ೨೫ರಷ್ಟು ಮೇಲೇರುತ್ತದೆ. ನಾವು ಪದವಿ ಶಿಕ್ಷಣ ಆರಂಭಿಸಿದಾಗ ಮತ್ತೆ ೫೦ ಏರಲು ಸಾಧ್ಯ. ಆಕ್ಸ್‌ಫರ್ಡ್, ಕೇಂಬ್ರಿಜ್, ಕ್ಯಾಲ್‌ಟೆಕ್ ಮುಂತಾದುವಕ್ಕೆ ಮೊದಲಿನಿಂದಲೂ ಒಂದು ಲಕ್ಷಣವಿದೆ. ಕ್ಯಾಲ್‌ಟೆಕ್‌ನ ಲಕ್ಷಣವನ್ನು ನಮ್ಮ ಸಂಸ್ಥೆಗೂ ಹೊಂದಿಸಿಕೊಳ್ಳುವ ಉದ್ದೇಶ ನಮ್ಮದು. ಅಲ್ಲಿ ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳ ಪ್ರಮಾಣ ೫:೮ ಇದೆ. ಪದವಿ ಶಿಕ್ಷಣವು ಚಿಕ್ಕ ಮಟ್ಟದ್ದು ಆದರೆ ಬಹಳ ಉತ್ತಮ ವಿಧಾನದ್ದು. ಅದಕ್ಕೆ ದೊಡ್ಡ ಸಂಶೋಧನಾ ವ್ಯವಸ್ಥೆಯ ಅಡಿಪಾಯ ಇದೆ. ಸಂಶೋಧನೆಯ ಹಿನ್ನೆಲೆಯಲ್ಲಿ ಎಂತಹ ಪದವಿ ಶಿಕ್ಷಣ ನೀಡುತ್ತೇವೆಂಬುದು ಪ್ರಮುಖ ಪ್ರಶ್ನೆ. ಅದರಿಂದ ಎರಡಕ್ಕೂ ಶ್ರೇಯಸ್ಸಿರುತ್ತದೆ, ಸಂಸ್ಥೆಗೇನೂ ಕುಂದುಂಟಾಗುವುದಿಲ್ಲ. ಇತ್ತೀಚೆಗೆ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಸಚಿವಾಲಯದ ಒಂದು ಸಭೆಗೆ ನಾನು ಹೋಗಿದ್ದೆ. ಅಲ್ಲಿ ಬಂದ ಪ್ರಶ್ನೆಯೂ ಇದೇ : ನಿಮ್ಮ ಸಂಸ್ಥೆಯ ಪ್ರಕಟಣೆಗಳೇಕೆ ಹೆಚ್ಚಾಗಿಲ್ಲ, ಎಂದು. ''ಅಷ್ಟೊಂದು ಹಣ ನೀಡುತ್ತೇವೆ, ಸೌಲಭ್ಯಗಳಿವೆ, ನೀವೇನು ಮಾಡುತ್ತಿದ್ದೀರಿ, ನಿಮ್ಮ ಸರಾಸರಿ ಪ್ರಕಟಣೆಗಳೆಷ್ಟು?'' ಮೂರು ಎಂದಿಟ್ಟುಕೊಳ್ಳೋಣ. ಅದು ವಿಶ್ವವಿದ್ಯಾನಿಲಯಗಳ ಮಟ್ಟಕ್ಕೆ ಹೋಲಿಸಿದರೆ ಜಾಸ್ತಿ ಇದೆ, ಸರಿ. ಉದಾಹರಣೆಗೆ, ಜಾದವಪುರ ವಿಶ್ವ ವಿದ್ಯಾಲಯದಲ್ಲಿ ಅದು ಸರಾಸರಿ ೦.೧೫ ಇದೆ. ಆದರೆ ಕ್ಯಾಲ್ಟೆಕ್, ಎಂ.ಐ.ಟಿ., ಆಕ್ಸ್‌ಬ್ರಿಜ್ ಗಳಿಗೆ ಹೋಲಿಸಿದರೆ ಅದು ಬಹಳ ಕಡಿಮೆ. ಏಕೆ ? ಬಹುಶಃ ಜಿ. ಆರ್. ಅದಕ್ಕೆ ಉತ್ತರ ನೀಡಬಲ್ಲರೆಂದು ತೋರುತ್ತದೆ. ಮೂಲಭೂತ ವಿಷಯವೇನೆಂದರೆ ನಮ್ಮ ಸಂಸ್ಥೆಯೂ ಸೇರಿದಂತೆ, ಯಾವ ಸಂಸ್ಥೆಯನ್ನೂ ದ್ವೀಪದೋಪಾದಿಯಲ್ಲಿ ಅಭಿವೃದ್ಧಿಯ ಶಿಖರಕ್ಕೆ ಎತ್ತರಿಸಲಾಗುವುದಿಲ್ಲ. ನಮ್ಮ ಸಂಸ್ಥೆಯು ಸಾಂಸ್ಕೃತಿಕವಾಗಿ ದೇಶದ ಬೇರೆ ಭಾಗಗಳ ಒಂದು ಅಂಶ, ಅಷ್ಟೇ. ನಮ್ಮ ವಿದ್ಯಾರ್ಥಿಗಳು, ಅಧ್ಯಾಪಕರು ಯಾವ ಹಿನ್ನೆಲೆಯವರು ? ಕಾರ್ನೆಲ್, ಎಂ.ಐ.ಟಿ.ಗಳಿಂದ ಒಂದಿಬ್ಬರನ್ನು ತಂದುಬಿಟ್ಟರೆ ಇದು ಮರೆಯಾಗುತ್ತದೆಯೆ ? ಇದು ಬುದ್ಧಿವಂತಿಕೆಯ ಅಥವಾ ಪ್ರತಿಭೆಯ ಕೊರತೆಯ ವಿಷಯವಲ್ಲ, ಅದರಲ್ಲಿ ನಾವು ಬೇರೆಯವರಿಗೆ ಸಮ. ಆದರೆ ನಮ್ಮ ಪದ್ಧತಿ, ಪ್ರಕ್ರಿಯೆ, ನ್ಯೂನತೆಯಿಂದ ಕೂಡಿವೆ. ನಮ್ಮಲ್ಲಿಗೆ ಬಂದು ಪಿಎಚ್.ಡಿ.ಗೆ ಕೆಲಸ ಮಾಡುವವರು ಮೊದಲೆರಡು ವರ್ಷಗ[ಳು] ಸಂಶೋಧನೆ ಮಾಡಲು ಪೂರ್ವಭಾವಿಯಾಗಿ ಕಲಿಯಬೇಕಾದ್ದನ್ನು ಕಲಿಯುವುದರ[ಲ್ಲಿ] ಕಳೆದುಬಿಡುತ್ತಾರೆ. ಅಷ್ಟು ಸಮಯ ವ್ಯರ್ಥ.

**ಕೆ. ಜಿ. ಎಸ್.** : ಅಂದರೆ, ಅಡಿಪಾಯ ಸರಿಯಿಲ್ಲವೆಂದು ಸೂಚಿಸುತ್ತಿದ್ದೀರಾ ?

**ಸಂ** : ಹೌದು, ಅದಕ್ಕೇ ನಮಗೆ ಸುಧಾರಿತ ಪದವಿ ಶಿಕ್ಷಣ ಬೇಕಾಗಿರುವ[ುದು]. ನಾನು ಹೊರದೇಶದಲ್ಲಿ ಪದವಿ ಶಿಕ್ಷಣದ ಹಂತದಲ್ಲೂ ಅಧ್ಯಾಪನ ಮಾಡಿದ್ದೆ. ಅದರಲ್ಲಿ ಬಂದವರು ಮೂರು ವರ್ಷಗಳಲ್ಲಿ ಪಿಎಚ್.ಡಿ. ಪಡೆಯುತ್ತಾರೆ. ಸ್ವತಃ ನಾ[ನು] ಒಂದು ವರ್ಷ ಎಂಟು ತಿಂಗಳಲ್ಲಿ ಪಡೆದಿದ್ದೆ. ಆಕ್ಸ್‌ಫರ್ಡ್‌ನಲ್ಲಿ ನಾನು ಸಂಶೋಧ[ನಾ] ನಿರ್ದೇಶಕನಾಗಿ ಹೋದಾಗ ನನ್ನ ವಿದ್ಯಾರ್ಥಿಗಳಾರೂ ಪಿಎಚ್.ಡಿ. ಪಡೆಯ[ಲು] ಮೂರು ವರ್ಷಕ್ಕಿಂತ ಹೆಚ್ಚು ಕಾಲ ತೆಗೆದುಕೊಳ್ಳಲಿಲ್ಲ. ಆದರೆ ಇಲ್ಲಿ ಐದಾರು ವ[ರ್ಷ] ಗಳಿಗೆ ಕಡಿಮೆಯಿಲ್ಲ. ಏಕೆ ? ಅದು ಪದವಿ ಶಿಕ್ಷಣದ ಆಳ-ಅಗಲ- ಗುಣಮಟ್ಟಗ[ಳನ್ನು] ಅನುಸರಿಸಿ ಇರುತ್ತದೆ. ಎಷ್ಟೋ ಮಂದಿ ಒಂದೆರಡು ವರ್ಷಗಳ ನಂತರ ನಿರ್ಗ[ಮಿಸಿ] ಬಿಡುತ್ತಾರೆ. ಬುದ್ಧಿಮತ್ತೆ ಅಲ್ಲಿ-ಇಲ್ಲಿ ಎಲ್ಲಾ ಒಂದೇ, ಆದರೆ ತಯಾರಿ, ಹಿನ್ನೆಲೆ, ಪ[...] ಬೇರೆ ಬೇರೆ. ನಾನು ಹೇಳುವುದನ್ನು ಬೇಕಾದರೆ ನೀವು ಕಟುವಾಗಿ ಆಕ್ಷೇಪಿಸಿ, ಆದ[ರೆ] ಹೇಳುತ್ತೇನೆ : ನನ್ನ ಪಿಎಚ್.ಡಿ. ವಿದ್ಯಾರ್ಥಿಗಳನ್ನು ಸಂಶೋಧನೆಯ ಹ[ಂತಕ್ಕೆ] ತರುವುದರಲ್ಲಿ ನನ್ನ ಶೇ. ೪೦ರಿಂದ ೫೦ರಷ್ಟು ಸಮಯ ವಿನಿಯೋಗವಾಗುತ್ತದೆ. ಇ[ದು] ದಂಡವಲ್ಲವೆ ? ಆಮೇಲೆ, ನನ್ನ ಪ್ರಕಟಣೆಗಳು ಕೇವಲ ಮೂರು ಎಂದರೆ ತ[...] ಮಾಡುವುದು ! ಆತಂಕ, ಅಸಮಾಧಾನ, ಇದಕ್ಕೆ ಉತ್ತರವಲ್ಲ. ನಮ್ಮ ವಿದ್ಯಾರ್ಥಿ[ಗಳ] ಹಿನ್ನೆಲೆಯನ್ನು ವಿಕಾಸಗೊಳಿಸಬೇಕು, ಅವರಿಗೆ ಅಂತರಶಿಸ್ತೀಯ ಅಧ್ಯಯನ[ದ] ಪರಿಚಯವಾಗಬೇಕು. ಶಿಕ್ಷಣ ವ್ಯವಸ್ಥೆಯಲ್ಲಿ ಜರೂರಾಗಿ ಆಗಬೇಕಾದ ಮಾರ್ಪಾ[ಡು] ಇದು – ಅದನ್ನು ಬಿಟ್ಟು ಏನೇನನ್ನೋ ಮಾಡುತ್ತೇವೆಂದರೆ ಏನು ಪ್ರಯೋಜನ ?

**ಜಿ. ಆರ್.** : ಸಂಶೋಧನೆಯೆಂದರೆ ನಿಮ್ಮ ದೃಷ್ಟಿಯಲ್ಲಿರುವುದೇನು[...] ಮೂಲಭೂತ ಎನ್ನುತ್ತಾರಲ್ಲಾ ಅದೋ, ಅಥವಾ ಅನ್ವಯಯೋಗ್ಯವಾದಂಥದೋ[...] ನಿಮ್ಮ ಸಂಸ್ಥೆಯ ಪಾತ್ರವೇನು ? ಮೂಲಭೂತ ಸಂಶೋಧನೆಯ ಹೆಸರಿ[ನಲ್ಲಿ]

ಲ್ಲೋ ಈಗಾಗಲೆ ಆಗಿರುವುದನ್ನು ಮತ್ತೆ ನಾವು ತ ಹೊರಟಿದ್ದೇವೆಯೆ ?

ಸಂ: ಸಾಪೇಕ್ಷವಾದ, ಗುರುತ್ವ ಮೊದಲಾದ ತರ ವೈಜ್ಞಾನಿಕ ತತ್ವಗಳನ್ನು ಕುರಿತ ಸಂಶೋಧನೆ ನ್ನು ಬಿಡಿ, ಮಿಕ್ಕಿದ್ದೆಲ್ಲಾ ಬಹುಮಟ್ಟಿಗೆ ಮೂಲಭೂತ ತ್ತು ಅನ್ವಯದ ಮಿಶ್ರಣವೇ ಆಗಿರುತ್ತದೆ. ಜ್ಞಾನದ ೇಷಣೆಯಲ್ಲಿ ಗುಹ್ಯತರ ವಿಭಾಗದ ಪಾಲು ಶೇ. ತಲೂ ಕಡಿಮೆ. ನನ್ನದೇ ಕ್ಷೇತ್ರ ನೋಡಿ, ನಾನು -ಪರಮಾಣುಗಳನ್ನು ಅಧ್ಯಯನ ಮಾಡುವವ. ಮೂಲಭೂತವೋ ಅನ್ವಯಿಕವೋ ? ನನ್ನ ರ ಅದು ಅಪ್ರಸ್ತುತ. ಪರಮಾಣುಗಳ ನಡುವಣ ತ ಅಥವಾ ಬಲವನ್ನು ಮಾಪನ ಮಾಡಿ ಪರಮಾಣು ಚಲನೆಗಳ ಸ್ಥಾಯಿತ್ವವನ್ನು ಕಂಡುಕೊಳ್ಳುವುದು ನನ್ನ ಷೇತ್ರ. ಅದು ಭೌತ ರಸಾಯನಶಾಸ್ತ್ರ ನನ್ನ ವಿಶೇಷ ವಾದ ಟ್ರೈಬಾಲಜಿಯ ಒಂದು ಭಾಗ ಕೂಡ. -ಪರಮಾಣು-ಇಟ್ಟಿಗೆ, ಹೀಗೆ ಏನೇ ಇರಲಿ, ನ್ನು ಒಂದರತ್ತ ಇನ್ನೊಂದನ್ನು ಚಲಿಸಿದಾಗ ಗುತ್ತದೆ ? ಅಂಥ ಸಂದರ್ಭದಲ್ಲಿ ಶಕ್ತಿ ಅಥವಾ ರ್ಜಿ ಎಷ್ಟರ ಮಟ್ಟಿಗೆ ಚದುರುತ್ತದೆ ? ದೊಡ್ಡ ನಿಗಳಿಗೆ ಇದು ಆಸಕ್ತಿದಾಯಕವಾದ್ದು. ಸಮಸ್ಯೆಯನ್ನು ಗೆ ರೂಪಿಸುತ್ತೇವೆಂಬುದು ಮುಖ್ಯ. ಅಂತಿಮ ಯೋಜನವನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಶ್ನೆ ಪಿಸುವುದು ನನ್ನ ಪದ್ಧತಿ. ಒಂದು ಉದಾಹರಣೆ ೋಡಿ : ಒಂದು ಇಂಜಿನ್ ಸುಮಾರು ಏಳು ಸಾವಿರ ಲೋಮೀಟರ್ ಓಡಿದರೆ ಎಣ್ಣೆ ಬದಲಿಸಬೇಕು; ನ್ನು ಹತ್ತು ಸಾವಿರಕ್ಕೇರಿಸಲು ಶಕ್ಯವೇ ? ಆಯಿಲ್ ರ್ಪೊರೇಶನ್‌ಗೆ ಸಂಶೋಧನೆಯು ಈ ವಿಷಯದಲ್ಲಿ ಹಾರ ನೀಡಬೇಕು. ಎಣ್ಣೆ ಹಳೆಯದಾದಷ್ಟೂ ಅದರ ಕುಗ್ಗುತ್ತದೆ. ಅದಕ್ಕೆ ಕಾರಣ ತಾಪಮಾನ ಮತ್ತು ಕ್ಕೆ ಸೇರುವ ಖನಿಜ (ಅಲ್ಯೂಮಿನಂ, ಕಬ್ಬಿಣ ದಿ). ಇಂಜಿನ್‌ನ ಜೀವಾವಧಿ ಮತ್ತು ಎಣ್ಣೆಯ ಾವಧಿ ವೃದ್ಧಿಯಾಗುವಂತೆ ಮಾಡುವುದು ಹೇಗೆ ? ಕ್ಕೆ ಪ್ರಯೋಗಶಾಲೆಯಲ್ಲಿ ಕೆಲವು ಸನ್ನಿವೇಶಗಳನ್ನು ವಾಗಿ ರಚಿಸಿ ಪರಿಣಾಮ ನೋಡಬೇಕು. ಜದ ಮೇಲ್ಪದರದ ಮೈಕ್ರಾನ್ ಹಂತಕ್ಕಿಳಿದು ಯನ ಮಾಡಬೇಕು. ಇದನ್ನೆಲ್ಲಾ ಮಾಡುವಾಗ ೂಕ್ಷ್ಮವಾದ ಸೈದ್ಧಾಂತಿಕ ವಿಧಾನದ ್ಯವಿರುತ್ತದೆ. ಜೊತೆಗೆ ಪ್ರಯೋಗಾತ್ಮಕ ತಂತ್ರವೂ . ಈಗ ಹೇಳಿ, ಅದು ಆನ್ವಯಿಕವೋ ಅಥವಾ ಲಭೂತವೋ ? ಎಣ್ಣೆ ಎಂದಾಕ್ಷಣ ರಸಾಯನ ವೂ ಬಂತು. ಒಟ್ಟಿನಲ್ಲಿ ಹೇಳುವುದಾದರೆ ಇದು ೀರ್ಣ ಪದ್ಧತಿ ಅಳವಡಿಸ ಬೇಕಾದ ಸಂಶೋಧನೆ.

ಜಿ. ಆರ್.: ಸಂಜಯ್, ಇದೆಲ್ಲಾ ಕ್ಲಿಷ್ಟವಾಗಿ ುತ್ತದೆ.

ಸಂ: ನಿಜ ಜೀವನದಲ್ಲಿ ನಿಜ ಸಮಸ್ಯೆಗಳಿರುತ್ತವೆ. ನ್ನು ಬೇರೆ ಬೇರೆಯವರು ಬೇರೆ ಬೇರೆ ಾಮಗಳಲ್ಲಿಟ್ಟು ಸಂಶೋಧನೆ ನಡೆಸುತ್ತಾರೆ. ಲಭೂತ ವಿಜ್ಞಾನವೆನ್ನುವುದು ನನ್ನ ಸಂಶೋಧನೆ ಲ್ಲಿರುವುದಕ್ಕಿಂತಲೂ ಹೆಚ್ಚು ಮೂಲಭೂತವಾಗಲು ್ಯವಿರಬಹುದು.



*ಲ್ಯಾಬ್ ಕೆಲಸದಲ್ಲಿ ಸಂಜಯ್ ಮಗ್ನರಾಗಿರುವುದು*

**ಕೆ. ಜಿ. ಎಸ್.** : ಅಂದರೆ ಪ್ರಯತ್ನ ಮತ್ತು ಚುರುಕು ಬುದ್ಧಿ ಎರಡೂ ಬೇಕು.

**ಸಂ** : ನನಗೆ ಮಾದರಿಯೆಂದರೆ ಜೆ. ಡಿ. ಬರ್ನಾಲ್. ನಾನು ಇಂಗ್ಲೆಂಡಿಗೆ ಹೋದ ವರ್ಷವೇ ಆತ ತೀರಿಕೊಂಡ. ನಾನವನನ್ನು ನೋಡಿಲ್ಲ. ಆದರೆ ಅವನ ಪ್ರಯೋಗಶೀಲತೆ ಮತ್ತು ಅಂತರಶಿಸ್ತೀಯ ಗಾಢ ಸಂಶೋಧನೆ ಗೊತ್ತು. ಅವನು ಸಮಸ್ಯೆಗಳನ್ನೆತ್ತಿಕೊಂಡು ಒಂದು ಹಂತ ಮುಟ್ಟಿದ ನಂತರ ಅದನ್ನು ಬಿಟ್ಟು ಬೇರೊಂದಕ್ಕೆ ಹಾರುತ್ತಿದ್ದ. ಮುಂಚಿನದನ್ನು ಬೇರೆಯವರು ಮುಂದುವರಿಸಿ ಸ್ವಲ್ಪದರಲ್ಲೇ ಫಲ ಪಡೆಯುತ್ತಾರೆಂಬುದು ಅವನಿಗೆ ಖಚಿತವಾಗಿರುತ್ತಿತ್ತು. ಅವನ ಶಿಷ್ಯೆ ಹಾಜ್‌ಕಿನ್ ನೊಬೆಲ್ ಪುರಸ್ಕಾರ ಪಡೆದಿದ್ದು ಅಂತಹ ಒಂದು ಸಂಶೋಧನೆಯಲ್ಲಿ. ಬರ್ನಾಲ್‌ನ ಜೀವನ ಬಹುಮುಖವಾದ್ದು. ವಿಜ್ಞಾನ, ಸಾಹಿತ್ಯ, ಕಲೆ, ಶಾಂತಿಗಾಗಿ ಹೋರಾಟ, ರಾಜಕೀಯ, ಎಲ್ಲಾ ಅವನಲ್ಲಿ ಒಟ್ಟಾಗಿದ್ದುವು. ನೆರುಡ ಮತ್ತು ಪಿಕಾಸೋ ಅವನ ಮನೆಗೆ ಅದೆಷ್ಟು ಬಾರಿ ಹೋಗಿದ್ದರೋ! ಅವನ ಮನೆಯನ್ನು ಇಡಿಯಾಗಿ ಬ್ರಿಟಿಷ್ ಮ್ಯೂಸಿಯಂನಲ್ಲಿ ಇಟ್ಟಿದ್ದಾರೆ. ಬರ್ನಾಲ್‌ಗೆ ನಾನು ಎಂದಿಗೂ ಸಮನಲ್ಲ. ಒಂದಂತೂ ನಿಜ, ನಾನೂ ನನ್ನ ಕ್ಷೇತ್ರವನ್ನು ಬದಲಿಸುತ್ತಿರುತ್ತೇನೆ. ನಾನು ರಸಾಯನಶಾಸ್ತ್ರವನ್ನು ಆಳವಾಗಿ ಓದಿದವನಲ್ಲ. ಈಚೆಗೆ ನಾನು ಆಕ್ಸ್‌ಫರ್ಡ್‌ನ ಬೋಡ್ಲಿಯನ್ ಲೈಬ್ರರಿಯಲ್ಲಿ ಪಟ್ಟಾಗಿ ಕೂತು ಭೌತ ರಸಾಯನಶಾಸ್ತ್ರದ ವ್ಯಾಸಂಗ ಮಾಡಿದೆ. ಪ್ರಾಯೋಗಿಕವಾಗಿ ಇಂಜಿನಿಯರಿಂಗ್ ಮತ್ತು ಭೌತ ರಸಾಯನಶಾಸ್ತ್ರವನ್ನು ಜೊತೆಗೂಡಿಸಿ ಸಂಶೋಧನೆ ಮಾಡಬಲ್ಲೆನೆಂಬ ವಿಶ್ವಾಸ ಮೂಡಿದೆ. ನನ್ನ ಪ್ರಕಟಣೆಗಳನ್ನು ನೋಡಿ ಆಯಿಲ್ ಕಂಪನಿಗಳವರು ಸಂಶೋಧನೆಗೆ ನೆರವು ನೀಡಲು ಬಂದಿದ್ದಾರೆ, ಚುರುಕಾಗಿ ಕೆಲಸ ಮಾಡೆಂದು ಮುಗಿಬಿದ್ದಿದ್ದಾರೆ. ಇದು ನನ್ನ ಒಬ್ಬನ ಕೆಲಸವಲ್ಲ. ನಮ್ಮದೊಂದು ತಂಡವೇ ಇದೆ : ಇಂಜಿನಿಯರಿಂಗ್ – ಸಾವಯವ ರಸಾಯನಶಾಸ್ತ್ರ – ಭೌತ ರಸಾಯನ ಶಾಸ್ತ್ರ – ಭೌತಶಾಸ್ತ್ರ ಎಲ್ಲಾ ಸಮ್ಮಿಳಿತಗೊಳ್ಳುತ್ತವೆ. ಎಲ್ಲ ಶಿಸ್ತುಗಳೂ ಈಗ ಅಂತರಶಿಸ್ತೀಯ ಎನ್ನುವಷ್ಟು ಪೂರಕವಾಗಿ ಬೆಳೆಯುತ್ತಿವೆ. ನಮ್ಮ ವ್ಯವಸ್ಥೆ ಆ ದಿಕ್ಕಿನಲ್ಲಿ ಪಠ್ಯಗಳನ್ನು ರೂಪಿಸಬೇಕು. ಸಂಶೋಧನೆಯು ಸಮಸ್ಯೆ ಕೇಂದ್ರಿತ ಮತ್ತು ಶಿಕ್ಷಣ ಅಂತರಶಿಸ್ತೀಯ ಅದು ನಮ್ಮ ಗುರಿಯಾಗಬೇಕು. ಅದರಲ್ಲಿ ಮಾನವಿಕ ಶಾಸ್ತ್ರಗಳೂ ಇರುತ್ತವೆ, ಇರಬೇಕು.

**ಜಿ. ಆರ್.** : ಭಾರತೀಯ ವಿಜ್ಞಾನ ಸಂಸ್ಥೆಯಂತಹ ಬೇರೆ ಸಂಸ್ಥೆಗಳನ್ನು ಆರಂಭಿಸಬೇಕೆಂಬ ಯೋಜನೆ ಇದೆಯಂತಲ್ಲ...

**ಸಂ** : 'ಅಂತಹ' ಎನ್ನುವುದೇನೂ ಇಲ್ಲ. ಕೆಲವು ಹೊಸ ಸಂಸ್ಥೆಗಳು ಬರಬಹುದು.

**ಜಿ. ಆರ್.** : ಆ ಬಗ್ಗೆ ಎರಡು ಪ್ರಶ್ನೆಗಳು : (i) ಅವುಗಳ ಅವಶ್ಯಕತೆ ಇದೆಯೆ, ಮತ್ತು (ii) ಅವಕ್ಕೆ ಸರಿ ದೂಗುವಂತಹ ವಿದ್ಯಾರ್ಥಿಗಳು ಲಭ್ಯವೆ ?

**ಸಂ** : ಅಂತಹ ಆತಂಕಕ್ಕೆ ಎಡೆಯಿಲ್ಲ. ಇನ್ನೆಷ್ಟನ್ನೋ ಯಾರೂ ಮಾಡಹೊರಟಿಲ್ಲ. ಸದ್ಯಕ್ಕೆ ಒಂದರ ಯೋಜನೆ ಸಿದ್ಧವಾಗುತ್ತಿದೆ. ೧೯೦೯ರಲ್ಲಿ ನಮ್ಮ ಸಂಸ್ಥೆಯನ್ನು ಜೆಮ್‌ಶೆಡ್‌ಜಿ ಟಾಟಾ ನೀಡಿದ ೨೦ ಲಕ್ಷ ರೂಪಾಯಿ ಮೂಲಧನದಿಂದ ಸ್ಥಾಪಿಸಲಾಯಿತು. ಮುಂದಿನ ನೂರು ವರ್ಷಗಳ ರೂಪುರೇಷೆ ಏನು ? ಅದಕ್ಕೆ ರತನ್ ಟಾಟಾ ಸಾಕಷ್ಟು ದೊಡ್ಡ ಮೊಬಲಗು ನೀಡಲು ಮುಂದೆ ಬಂದಿದ್ದಾರೆ. ಏನು ಯೋಜನೆ ಇರಬೇಕೆಂಬುದರ ಚರ್ಚೆ ನಡೆದು ಒಂದು ನಕಾಶೆ ಸಿದ್ಧವಾಗುತ್ತಿದೆ. ಸಂಶೋಧನೆಗಳ ಮುಂದಿನ ಲಕ್ಷಣ ಏನಾಗಿರಬೇಕು ? ಅನನ್ಯವಾಗಿರಬೇಕು, ಆಧುನಿಕವಾಗಿರಬೇಕು, ಬೇರಾವುದೇ ಸಂಶೋಧನೆಗೆ ಸಮನಾಗಿರಬೇಕು. ಒಂದು ಉದಾಹರಣೆ ನೋಡಿ : ಸಕ್ಕರೆ ಕಾಯಿಲೆ ಇರುವವರಿಗೆ ಅನೇಕ ಸಂದರ್ಭಗಳಲ್ಲಿ ಕಣ್ಣಿನ ಐಬುಂಟಾಗಿ ಕಾರ್ನಿಯ ಅಳವಡಿಸಬೇಕಾಗುತ್ತದೆ. ಸಕ್ಕರೆ ಕಾಯಿಲೆ ಬರುವ ಹತ್ತು ವರ್ಷಗಳ ಮುಂಚೆ ಆ ಕಾಯಿಲೆಯ ಸಂಭವವನ್ನು ನಿಖರವಾಗಿ ಪತ್ತೆಹಚ್ಚಲು ಸಾಧ್ಯವೆ ? ಇಂತಹ ಸಮಸ್ಯೆಯನ್ನೆತ್ತಿಕೊಂಡು ವಿವಿಧ ಶಿಸ್ತುಗಳ ತಂಡ ಸಂಶೋಧನೆಯಲ್ಲಿ ನಿರತವಾಗಬೇಕೆಂಬ ಉದ್ದೇಶವಿದೆ. ಅದರಲ್ಲಿ ವೈದ್ಯ, ಉದ್ಯಮ, ನ್ಯಾನೋ ತಂತ್ರಜ್ಞಾನ, ಭೌತ ರಸಾಯನಶಾಸ್ತ್ರ, ಮೆಕ್ಯಾನಿಕಲ್ ಇಂಜಿನಿಯರಿಂಗ್, ಜೀವಶಾಸ್ತ್ರ, ದ್ರವ್ಯ ವಿಜ್ಞಾನ, ಎಲ್ಲವೂ ಒಳಗೊಳ್ಳಬೇಕಾಗುತ್ತದೆ.

**ಜಿ. ಆರ್.** : ಇಂಥ ಯೋಜನೆ ಕಾರ್ಯರೂಪಕ್ಕೆ ಬರಲು ಎಷ್ಟು ಅವಧಿ ಬೇಕು ?

**ಸಂ** : ಐದಾರು ತಿಂಗಳಲ್ಲಿ ಸಂಸ್ಥೆ ಅಸ್ತಿತ್ವಕ್ಕೆ ಬರಬಹುದು. ಆಮೇಲೆ ಸಂಸ್ಥೆಯ ಹೊರಗಿನವರ ಜೊತೆ ಸಂಪರ್ಕವೇರ್ಪಡಿಸಬೇಕು. ಅದಕ್ಕೆ ಒಂದು ಆಸ್ಪತ್ರೆಯ ಅಗತ್ಯವೂ ಇದೆ. ಜೀವ ರಸಾಯನಶಾಸ್ತ್ರ ಪ್ರಯೋಗಾಲಯ ಬೇಕು. ಒಟ್ಟಿನಲ್ಲಿ, ಹಲವು ಶಿಸ್ತಿನವರು ಏಕತ್ರ ಕಲೆತು ಸಂಶೋಧನೆ ನಡೆಸುತ್ತಾರೆ.

**ಜಿ. ಆರ್.** : ಈಗಾಗಲೇ ಅಂತಹ ಸಂಸ್ಥೆಗಳು ಬೇರೆಲ್ಲಿಯಾದರೂ ಇವೆಯೆ ?

**ಸಂ** : ನಾವು ಆಲೋಚಿಸುವ ಪ್ರಮಾಣದಲ್ಲಿಲ್ಲ – ನಾವು ಯೋಜಿಸುವ ಸಂಸ್ಥೆಯಲ್ಲಿ ೨೦೦ ವಿದ್ಯಾರ್ಥಿಗಳು, ೪೦ರಿಂದ ೬೦ ಅಧ್ಯಾಪಕ-ಸಂಶೋಧಕರು, ಡಾಕ್ಟರೇಟ್ ಪಡೆದಿದ್ದು ಸಂಶೋಧನೆ ಮುಂದುವರಿಸುವ ಸುಮಾರು ೧೫೦ ಮಂದಿ ಇರುತ್ತಾರೆ. ಸಂಸ್ಥೆಯ ಹೊರಗಿದ್ದು ಸಂಶೋಧನೆಗೆ ಸಹಕಾರ ನೀಡುವವರು ಶೇ. ೩೦ ಎನ್ನೋಣ. ಸಮಾಜಶಾಸ್ತ್ರ, ಮನಶ್ಶಾಸ್ತ್ರ, ಮನೋವೈದ್ಯಕೀಯ, ವೈದ್ಯಕೀಯ, ಎಲ್ಲವೂ ಇರುತ್ತವೆ. ಎಲ್ಲಾ ಹೀಗೇ ಎಂದು ಈಗಲೆ ಹೇಳಲಾಗುವುದಿಲ್ಲ. ಕಾದು ನೋಡೋಣ. ಆದರೆ ಸಮಸ್ಯೆಗಳನ್ನು ಕೇಂದ್ರೀಕರಿಸುವ ಸಂಶೋಧನೆಗಳು ಇಂದಿನ ಅಗತ್ಯವೆಂಬುದರಲ್ಲಿ ಎರಡು ಮಾತಿಲ್ಲ.

**ಜಿ. ಆರ್.** : ಪ್ರಾಚೀನ ಭಾರತದ ವಿಜ್ಞಾನದಲ್ಲಿ ನಿಮಗೆ ಆಸಕ್ತಿ ಇದೆ. ಇಂದಿನ ವೈಜ್ಞಾನಿಕ ಸಂಶೋಧನೆಗಳಿಗೆ ಅದರ ಉಪಯೋಗ ಹೇಗೆ ?

**ಸಂ** : ಆಯುರ್ವೇದವು ನಿಗದಿಗೊಳಿಸುವ ಔಷಧಿಗಳ ಪ್ರಭಾವ, ಅವುಗಳ ಜೀವರಸಾಯನಶಾಸ್ತ್ರ, ಇತ್ಯಾದಿಗಳನ್ನು ತಿಳಿದುಕೊಂಡು ಅದನ್ನು ಇನ್ನೂ ಬೆಳೆಸಬಹುದು, ಗಟ್ಟಿಗೊಳಿಸಬಹುದು. ಪ್ರಾಚೀನ ಭಾರತದ ವೈಜ್ಞಾನಿಕ ವಿಧಾನಗಳ ಬಗ್ಗೆ ದೇವಿಪ್ರಸಾದ ಚಟ್ಟೋಪಾಧ್ಯಾಯರು ಅಸಾಧಾರಣ ಸಂಶೋಧನೆ ಮಾಡಿದ್ದಾರೆ. ಜ್ಞಾನ ಪಡೆಯುವುದು ಹೇಗೆಂಬುದನ್ನು ನ್ಯಾಯ, ವೈಶೇಷಿಕ ದರ್ಶನಗಳು ತಿಳಿಯಪಡಿಸುತ್ತವೆ. ಭೌತವಸ್ತುವಿನ ವಿಶ್ಲೇಷಣೆಯನ್ನವರು ಅಚ್ಚುಕಟ್ಟಾಗಿ ಆರಂಭಿಸಿದ್ದರು. ಅದನ್ನು ಮುಂದುವರಿಸಬೇಕು. ನಮ್ಮ ಸಂಸ್ಥೆಯಲ್ಲಿ ಇದನ್ನು ಮಾಡಲು ಸಾಧ್ಯವಿದೆ. ಉದಾಹರಣೆಗೆ, ಅರಿಸಿನದ ಗುಣಗಳನ್ನು ಕ್ರೋಡೀಕರಿಸಲು ಒಂದು ಪ್ರಯೋಗಶಾಲೆಯನ್ನು ತೆರೆಯಲಾಗಿದೆ. ವಾಸ್ತವಿಕ ಅನುಭವಕ್ಕೆ ಪ್ರಾಚೀನ ವಿಜ್ಞಾನಿಗಳು ಒತ್ತು ಕೊಟ್ಟಿದ್ದರು. ಆರ್ಯಭಟನ ಪದ್ಧತಿ ಸಹ ಒಂದು ಮಾದರಿ. ಅವರಾರೂ ಪ್ಲೇಟೋನಂತೆ ಜನಸಮುದಾಯಕ್ಕೆ ''ಉಪಯುಕ್ತ ಸುಳ್ಳು'' ರುಚಿಸುವಂತೆ ಮಾಡಬೇಕೆಂದು ಹೇಳಲಿಲ್ಲ. ಪ್ಲೇಟೋ ಹಾದಿಯಲ್ಲಿ ನಡೆದರೆ ಫ್ಯಾಸಿಸಂ ಅನ್ನು ಆಹ್ವಾನಿಸಿದಂತೆಯೇ. ಸಿದ್ಧಾಂತ - ಪ್ರಯೋಗಗಳನ್ನು ನಮ್ಮಲ್ಲಿ ಯಾವಾಗಲೂ ಪ್ರತ್ಯೇಕಗೊಳಿಸಲಿಲ್ಲವೆಂಬುದು ನಮಗೆ ಮಾರ್ಗದರ್ಶನ ನೀಡುತ್ತದೆ.

**ಕೆ. ಜಿ. ಎಸ್.** : ವೈಜ್ಞಾನಿಕ ಸಂಶೋಧನೆ... ತೀವ್ರವಾದ ಬದಲಿ ದೃಷ್ಟಿಯು ಅಗತ್ಯವಿದೆಯೆಂದೆ ?

**ಸಂ** : ಈವರೆಗಿನ ನಮ್ಮ ಸಂಶೋಧನೆಗಳು ... ಹಾದಿಯಲ್ಲಿ ನಡೆದಿವೆ. ನೇರವಾಗಿ ಆಚರ... ಸಂಬಂಧಿಸುವಂತಹ ಸಂಶೋಧನೆಯ ಅಗತ್ಯವಿದೆ.

**ಜಿ. ಆರ್.** : ಹಾಗೇಕೆ ಸಾಮಾನ್ಯೀಕರಿಸುತ್ತೀ... ಸಂಶೋಧನೆಯ ಫಲ ಸ್ವಲ್ಪವೂ ಜನರಿಗೆ ಮುಟ್ಟಿಲ್ಲವ...

**ಸಂ** : ರಕ್ಷಣಾ ವಿಭಾಗ, ಇಸ್ರೋ, ಅಂಥವನ್ನು ... ಅಲ್ಲಿಯೂ ತಂತ್ರಜ್ಞಾನವನ್ನು ನಾವೇ ಪೂರ್ತಿ ಆವಿಷ... ಮಾಡಿಲ್ಲ. ನಮ್ಮ ದೇಶವು ಬೇರೆಯವರಿಗೆ ಪ್ರಯೋ... ರಂಗವಾಗಿಬಿಟ್ಟಿತು.

**ಜಿ. ಆರ್.** : ನಿಮ್ಮ ಸಂಸ್ಥೆಯೂ ಸೇರಿದ... ಎಲ್ಲವುಗಳ ಕಟುವಿಮರ್ಶೆ ಇದಾಯಿತು !

**ಸಂ** : ಅದು ನನ್ನ ಉದ್ದೇಶವಲ್ಲ. ನಮ್ಮ ಮಾ... ನಡೆಯುವುದು ಪ್ರಕಟಣೆಗಳ ಮೂಲಕ. ಆದ್ದರಿಂದ ... ದಿಕ್ಕಿನಲ್ಲಿ ಸಂಶೋಧನೆ ನಡೆಯುತ್ತಿದೆ. ಎಲ್ಲವೂ ಹಾ... ಕೆಲವು ನಿಜಕ್ಕೂ ಉನ್ನತ ಮಟ್ಟದ ಸ್ಟೋ... ಸಂಶೋಧನೆಗಳು ನಮ್ಮ ದೇಶದಲ್ಲಿ ನಡೆದಿವೆ. ... ಹೇಳುವುದು ಸಂಶೋಧನೆ ಮತ್ತು ಪ್ರಾಯೋ... ಅನ್ವಯ ಜೊತೆ ಜೊತೆ ಹೋಗಬೇಕೆಂದು.

**ಕೆ. ಜಿ. ಎಸ್.** : ಪದವಿಗೋಸ್ಕರ ನಡೆಯ... ಸಂಶೋಧನೆಯು ಆಳವಾದ ಮೂಲಭೂತ ಸಂಶೋಧ... ಆಯಕಟ್ಟು ರಚಿಸಿಕೊಟ್ಟಿಲ್ಲವೆಂದು ನಿಮ್ಮ ಅಭಿಪ್ರಾಯ...

ಸಂ : ಹೌದು ಮತ್ತು ಅಲ್ಲ. ಪ್ರಶ್ನೆ ಆಯಕಟ್ಟಿನ ರಚನೆ
ಯ ನಮಗೆ ಅಪಾರವಾದ ಸೌಲಭ್ಯಗಳಿವೆ, ಎಂಥವೇ
ತ್ರವೂ ಲಭ್ಯವಿದೆ. ಸಮಸ್ಯೆ ಇರುವುದೇ ಬೇರೆ.

ಕೆ. ಜಿ. ಎಸ್. : ಹಾಗಾದರೆ ಸಂಶೋಧನೆಯ ಫಲಾಂಶವನ್ನು ಜನರ ಉಪಯೋಗಕ್ಕೆ ಅನ್ವಯಿಸಲು ...ಲ್ಲಿ? ತೀರ್ಮಾನ ಕೈಗೊಳ್ಳಬೇಕಾದವರು ಯಾರು ?

ಸಂ : ವಿಜ್ಞಾನಿಗಳು ಮಾತ್ರವೇ ಅದನ್ನು ಮಾಡಲಾರರು. ...ಶೋಧನೆಗಳಿಗೆ ಹಣ ನೀಡುತ್ತಾರಲ್ಲ, ಸರ್ಕಾರ ...ದಿ, ಅವರು ಈ ಪ್ರಶ್ನೆಯನ್ನು ಹಾಕಿಕೊಳ್ಳಬೇಕು. ... ಸಂಶೋಧನಾ ಯೋಜನೆಗಳಿಗೆ ಹಣ ನೀಡುವ ...ನಿಗಳು ಏನು ಮಾಡುತ್ತವೆ? ನಾವೇನು ...ಡುತ್ತಿದ್ದೇವೆಂಬುದರ ನಿಗಾ ವಹಿಸುವುದಿಲ್ಲವೆ? ...ರ ನೈಜ ಪ್ರತಿನಿಧಿಯಾದ ಸರ್ಕಾರವಿದ್ದರೆ ಅದೂ ...ಶೋಧನೆಗಳ ಪ್ರಾಯೋಜನೆ ಮತ್ತು ಪ್ರಯೋಜನ, ...ರ ಬಗೆಗೂ ಪ್ರಾಜ್ಞನಂತೆ ಕೆಲಸ ...ಹಿಸಬೇಕಲ್ಲವೆ ?

ಜಿ. ಆರ್. : ಅಂದರೆ, ಬಂಡವಾಳಶಾಹಿ ವ್ಯವಸ್ಥೆಯು ...ನ್ನು ಎಂದೂ ಮಾಡುವುದಿಲ್ಲವೆನ್ನಬಹುದೆ ?

ಸಂ : ಅದನ್ನು ನೀವೇ ಯೋಚಿಸಿ. ಒಂದು ...ರ್ಶನ ಕೊಡುತ್ತೇನೆ. ರೇಷ್ಮೆ ಬೆಳೆಗೆ ಸಂಬಂಧಿಸಿದ್ದು ...ಲ್ಲಿ ಉಪಯುಕ್ತ ಸಂಶೋಧನೆಗಳು ನಡೆದು ...ಗಳ ಫಲ ಅನ್ವಯವಾಗಿದೆ. ಭಾರತೀಯ ವಿಜ್ಞಾನ ...ಗೆ ಹೆಸರಿದೆಯೆಂದು ಎಲ್ಲೆಲ್ಲೋ ಹೋಗಿ ಪರಸ್ಪರ ...ಕಾರದ ಕಾಗದಗಳಿಗೆ ಸಹಿ ಮಾಡಿಬರುವುದರಿಂದ ...ಂದೆ ಹೋಗಲಾಗುವುದಿಲ್ಲ. ನಮ್ಮ ದೇಶಕ್ಕೆ ಬೇಕಾದ್ದು ...ನ ಸೌಲಭ್ಯ, ವಿದ್ಯಾರ್ಥಿಗಳಿಗೆ ಸೂಕ್ತವಾದ ...ರ್ಗದರ್ಶನ, ಆಳವಾದ ಅಂತರಶಿಸ್ತೀಯ ...ಯನ...

ಜಿ. ಆರ್. : ಸರಿ, ಆದರೆ ಅದನ್ನೆಲ್ಲಾ ಮಾಡ ...ದ್ದು ಯಾರು ?

ಸಂ : ಆಗಲೇ ಹೇಳಿದೆನಲ್ಲ, ಕೇವಲ ವಿಜ್ಞಾನಿ ...ದ ಅದು ಮಾಡಲಾಗದ ಕೆಲಸ. ವಿಜ್ಞಾನವೂ ...ಗೆ ತಿಳಿದಂತೆ ಒಂದು ನಿರ್ದಿಷ್ಟ ಸಾಮಾಜಿಕ-...ಕೀಯ ವಾತಾವರಣದಲ್ಲಿ ಕಾರ್ಯಪ್ರವೃತ್ತವಾಗಿ ...ತ್ತದೆ. ಸುಮ್ಮನೆ ವಿಜ್ಞಾನಿಗಳನ್ನು ತೆಗಳುವುದಾಗಲಿ, ...ಲಿಸುವುದಾಗಲಿ ಸರಿಯಲ್ಲ.

ಜಿ. ಆರ್. : ಅಂದರೆ, ರಾಜಕೀಯ ವ್ಯವಸ್ಥೆ, ವರ್ಗ ...ರ್ಷ, ದೇಶದಲ್ಲಿ ಅಸ್ತಿತ್ವದಲ್ಲಿರುವ ವರ್ಗ ...ಕೀಯ, ಬಂಡವಾಳಶಾಹಿಯ ವರ್ಗ ಹಿತಾಸಕ್ತಿ, ...ನ್ನೆಲ್ಲಾ ಗಣನೆಗೆ ತಂದುಕೊಳ್ಳಬೇಕೆಂದು ...ಚಿಸುತ್ತಿದ್ದೀರಾ ?

ಸಂ : ಅದನ್ನು ನೀವೇ ಯೋಚಿಸಿಕೊಳ್ಳಿ. ನಾನು ...ವುದಿಷ್ಟೆ: ನಮ್ಮ ಭಾರತೀಯ ವಿಜ್ಞಾನ ಸಂಸ್ಥೆ ...ತಹ ಸಂಸ್ಥೆಗಳು ಯಾರೋ ಕೆಲವು ಪ್ರತಿಷ್ಠಿತ ...ದವರಿಗೆ ಪ್ರದರ್ಶನಯೋಗ್ಯವಾದ ಆಟಿಕೆಯ ...ವಾಗಕೂಡದು. ಈಗ ನಮಗೆ ಸವಾಲು ಎದುರಾಗಿದೆ. ...ಹ ಒತ್ತಡದಿಂದಾಗಿಯೇ ಪದವಿ ಶಿಕ್ಷಣವನ್ನು ...ಯೋಜಿಸಬೇಕಾಗಿದೆ. ಸರಿಯಾದ ಪ್ರಶ್ನೆಗಳನ್ನು ...ಲು ಜನತೆಯು ಅಂಜುವ ಕಾಲ ಆಗಿಹೋಯಿತು.

ಜಿ. ಆರ್. : ಅಂದರೆ, ಭವಿಷ್ಯದಲ್ಲಿ ಬೆಳಕು ಕಂಡೀತೆ ?



*ಸಂಜಯ್ ಮತ್ತು ಕೆ. ಜಿ. ಎಸ್.*

ಸಂ : ವಿಜ್ಞಾನವು ಮಾನವೀಯ ಗುಣವುಳ್ಳದ್ದು ಬೆಳವಣಿಗೆ ಸಾಧ್ಯ.

ಕೆ. ಜಿ. ಎಸ್. : ನಮ್ಮ ಪ್ರತಿಭಾವಂತರು ಹೊರ ದೇಶಗಳಿಗೆ ಹೋಗಿ ಅಲ್ಲೇ ಪ್ರಗತಿಗೆ ಸಾಧನ ಗಳಾಗುತ್ತಿದ್ದಾರಲ್ಲವೆ ?

ಸಂ : ಅದು ಕೇವಲ ಅವಕಾಶಗಳಿರುವುದು, ಇಲ್ಲದಿರುವುದು ಎಂಬ ವಿಚಾರವಲ್ಲ. ನಮ್ಮಲ್ಲಿ ಸವಾಲುಗಳು ಕಡಿಮೆ. ಏನೋ ಒಂದು ಮಾಡಿಕೊಂಡಿದ್ದರೆ ಆಯಿತೆಂಬ ಭಾವನೆ ಬೇಗ ಮೂಡಿಬಿಡುತ್ತದೆ. ವಿದೇಶಿ ಕಂಪನಿಗಳ ಸೂತ್ರಗಳನ್ನು ಮಾರಾಟ ಮಾಡಿದರೆ ಸಾಕೆಂಬ ಸಂದರ್ಭ ಈಗಿಲ್ಲ. ಹೊಸ ಸಂಶೋಧನೆ ಮತ್ತು ಅಭಿವೃದ್ಧಿ ಸೂತ್ರಗಳು ಅನಿವಾರ್ಯವಾಗುತ್ತಿವೆ. ಇಂಗಾಲದ ಹೊರಹಾಕುವಿಕೆಯ ಸಮಸ್ಯೆ ನೋಡಿ: ಅದಕ್ಕೆ ಬೇರೆಯವರಾರೋ ಪರಿಹಾರ ನೀಡುತ್ತಾರೆಯೆ? ನಾಳೆ ಜಲಜನಕದಿಂದ ವಾಹನಗಳನ್ನು ಓಡಿಸುವ ಕಾಲ ಬರುತ್ತದೆ. ಆಗ ವಿಜ್ಞಾನದ ಒತ್ತಾಸೆಯಿಲ್ಲದೆ ಏನು ಮಾಡಲಾದೀತು ? ಸಾಮಾಜಿಕ-ರಾಜಕೀಯ ಒತ್ತಡ ಈ ದಿಕ್ಕಿನಲ್ಲಿ ಹೆಚ್ಚುತ್ತದೆ, ಹೆಚ್ಚಬೇಕು.

ಕೆ. ಜಿ. ಎಸ್. : ವಿಶ್ವವಿದ್ಯಾನಿಲಯಗಳಲ್ಲಿ ಸಂಶೋಧನೆ ಮತ್ತು ಶೈಕ್ಷಣಿಕ ಗುಣಮಟ್ಟದ ಬಗ್ಗೆ ಏನೆನ್ನುತ್ತೀರಿ ?

ಸಂ : ಕ್ಷಮಿಸಿ, ವಿಶ್ವವಿದ್ಯಾನಿಲಯಗಳಲ್ಲಿ ಸಂಶೋಧನೆ ಹೇಳಿಕೊಳ್ಳುವಂಥದಲ್ಲ – ಕೆಲವು ವಿಶ್ವವಿದ್ಯಾನಿಲಯ ಗಳಿಂದ ಸಮರ್ಥ ಪದವೀಧರರು ಬರುತ್ತಿದ್ದಾರೆಂಬುದಷ್ಟೇ ಸಮಾಧಾನದ ಸಂಗತಿ. ಪುಣೆ-ಜಾಧವಪುರ-ದೆಹಲಿ, ಇತ್ಯಾದಿ. ಎಪ್ಪತ್ತು ವರ್ಷಗಳ ಹಿಂದೆ ಅಲಹಾಬಾದ್ ಅದನ್ನು ಮಾಡುತ್ತಿತ್ತು, ಈಗ ? ಸುಮ್ಮನೆ ಇನ್ನು ಹತ್ತು ಮೈಕ್ರೋಸ್ಕೋಪ್‌ಗಳನ್ನು ತಂದಿಟ್ಟರೆ ಆಯಿತೆ? ಜನ ಸಮುದಾಯದಿಂದ ಸಾಮಾಜಿಕ ಒತ್ತಾಯ ಹೆಚ್ಚಬೇಕು.

ಜಿ. ಆರ್. : ವಿಶ್ವವಿದ್ಯಾನಿಲಯದವರೂ ಅಂತರ ರಾಷ್ಟ್ರೀಯ ನಿಯತಕಾಲಿಕೆಗಳಲ್ಲಿ ಸಂಶೋಧನಾ ಲೇಖನಗಳನ್ನು ಪ್ರಕಟಿಸುತ್ತಿರುತ್ತಾರಂತಲ್ಲ.

ಸಂ : ಅದನ್ನು ಪರಿಶೀಲಿಸಬೇಕು. ಯಾವ ನಿಯತ ಕಾಲಿಕೆಗಳಲ್ಲಿ ಎಂಬುದು ಮುಖ್ಯ. ಬಂಗ್ಲಾದೇಶ ಮತ್ತು ಭೂತಾನದ ಪತ್ರಿಕೆಗಳಲ್ಲಿ ಅಲ್ಲ ತಾನೆ! ಆ ದೇಶಗಳಿಗೆ ಹೋಗಿಬರಲು ನಾನಂತೂ ಉತ್ಸುಕನಾಗಿದ್ದೇನೆ. ಕೇವಲ ಆಕ್ಸ್‌ಫರ್ಡ್ ಮಾತ್ರ ಏಕೆ? ಮುಖ್ಯವಾಗಿ ನಮ್ಮ ದೇಶದ ಸಹಜ ಬುದ್ಧಿವಂತಿಕೆಗೆ ಉನ್ನತ ಮಟ್ಟದ ಅವಕಾಶ, ತರಬೇತಿ ಅವಶ್ಯಕ, ಅಷ್ಟೆ. ಅದಕ್ಕೆ ಸಾಮಾಜಿಕ ಒತ್ತಡ ಬೇಕು.

ಜಿ. ಆರ್. : ನಾಳೆಗಳು ಇನ್ನು ಸ್ವಲ್ಪ ಕಡಿಮೆ ಅಂಧಕಾರದವಾಗಬಹುದೆ ?

ಸಂ : ಯಾವುದು ಅಂಧಕಾರ? ಯಾವುದೂ ಖಚಿತವಾಗಿ ಹೇಳಬರುವುದಿಲ್ಲ. ಕನಿಷ್ಠ ಶೇ. ೮೫ನ್ನು ಮುಟ್ಟುವ ಅರ್ಹತೆ ಎಲ್ಲರಿಗೂ ಬರಬೇಕು. ಅಧಿಕಾರಸ್ಥರಿಗೆ ಇದು ಮನವರಿಕೆಯಾಗಿದೆಯೆ ?

ಜಿ. ಆರ್. : ಪ್ರಾಥಮಿಕ ಶಿಕ್ಷಣದಿಂದ ರಿಪೇರಿ ಆರಂಭವಾಗಬೇಕೇನು ?

ಸಂ : ಅದಲ್ಲ ವಿಷಯ. ನಮ್ಮ ಕಲಿಕೆಯ ಪದ್ಧತಿ ಕೆಟ್ಟದಾಗಿದೆ. ಸಮಾನ ಸೌಲಭ್ಯಗಳಿಲ್ಲ ಎನ್ನುವುದು ಇನ್ನೊಂದು ಅಸಹ್ಯ ಸನ್ನಿವೇಶ. ಬಾಯಿಪಾಠವು ಕಲಿಕೆಯಲ್ಲ, ಪದವಿ ಶಿಕ್ಷಣದ ಹಂತ ಮುಟ್ಟಿದಾಗಲೂ ಇನ್ನೂ ಬಾಯಿಪಾಠದ ಪರಂಪರೆಯೇ ವಿದ್ಯಾರ್ಥಿ ಗಳನ್ನು ಕಾಡಿದರೆ ಭವಿಷ್ಯ ಹೇಗೆ ತಾನೆ ಉತ್ತಮವಾಗ ಬಲ್ಲದು!

ಜಿ. ಆರ್. : ನಿಮಗೆ ವಂದನೆಗಳು. ನಡೆಯಿರಿ, ಸ್ವಲ್ಪ ನಿಮ್ಮ ಪ್ರಯೋಗಶಾಲೆಯನ್ನು ತೋರಿಸಿ ನೀವೇನು ಮಾಡುತ್ತಿದ್ದೀರೆಂಬುದನ್ನು ವಿವರಿಸುತ್ತೀರಾ ?

(... ಡಾ|| ಸಂಜಯ್ ಬಿಸ್ವಾಸ್ ಅವರು ನಮಗೆ ಪ್ರಯೋಗಶಾಲೆ ತೋರಿಸಿ ಅನೇಕ ಸಂಶೋಧನಾ ಯೋಜನೆಗಳ ಪರಿಚಯ ಮಾಡಿಸಿದರು, ಲಕ್ಷಣವಾದ ಊಟ ಮಾಡಿಸಿ ಬೀಳ್ಕೊಟ್ಟರು.)

# ನ್ಯಾಯ ವಿತರಣೆಯಲ್ಲಿ ತಾರತಮ್ಯ ಬೇಡ

ಳೆದ ವಾರ ನಮ್ಮ ಅಪಾರ್ಟ್‌ಮೆಂಟ್ ಕಾಂಪ್ಲೆಕ್ಸ್‌ನ ಸೆಕ್ಯುರಿಟಿ ಗಾರ್ಡ್ ಒಂದು ಸ್ವಾರಸ್ಯಕರ ಸುದ್ದಿ ಹೇಳಿದ. ಅವನೂ ಅಕ್ಕಪಕ್ಕದ ಅಪಾರ್ಟ್‌ಮೆಂಟ್‌ಗಳ ಸೆಕ್ಯುರಿಟಿ ಗಾರ್ಡ್‌ಗಳೂ ಹಿಂದಿನ ರಾತ್ರಿ ಒಬ್ಬ ಕಳ್ಳನನ್ನು ಹಿಡಿದುಹಾಕಿದ್ದರಂತೆ. ಅಷ್ಟೇ ಅಲ್ಲ, ಆ ಮಧ್ಯ ಯಲ್ಲಿ ಹತ್ತಿರದಲ್ಲೇ ವಾಸವಾಗಿದ್ದ ಪೊಲೀಸ್ ಅಧಿಕಾರಿಯ ಮನೆಗೆ ಹೋಗಿ ಬಾಗಿಲ ಒತ್ತಿದಾಗ ಆತ ಆ ನಡುರಾತ್ರಿಯಲ್ಲೂ ತಕ್ಷಣವೇ ಎಚ್ಚರಗೊಂಡು ಶೀಘ್ರವಾಗಿ ಕ್ರಮ ಕೈಗೊಂಡನಂತೆ; ಸ್ಥಳೀಯ ಪೊಲೀಸ್ ಸ್ಟೇಷನ್‌ನ ಇನ್‌ಸ್ಪೆಕ್ಟರ್ ಕೂಡಲೇ ಲ್ಲಿಗೆ ಬಂದು ಕಳ್ಳನನ್ನು ಕರೆದೊಯ್ಯುವಂತೆ ಆಜ್ಞಾಪಿಸಿದನಂತೆ. ಇದನ್ನು ದಾಗ ನಮ್ಮ ಸೆಕ್ಯುರಿಟಿ ಗಾರ್ಡ್‌ನ ಮುಖದಲ್ಲಿ ಮಂದಹಾಸ ಬೀರುತ್ತಿತ್ತು.

ಇದನ್ನು ಕೇಳಿ ನನ್ನಲ್ಲಿ ಕುತೂಹಲ ಕೆರಳಿತು. ಆ ಕಳ್ಳ ಏನನ್ನು ಕದ್ದ ಎಂದು ದೆ. ಟೆರೇಸ್‌ನಲ್ಲಿ ಒಣಗಲು ಹಾಕಿದ್ದ ಒಗೆದ ಬಳಸಿದ ಬಟ್ಟೆಬರೆ ಮತ್ತು ಲ ಬಳಿ ಇದ್ದ ಕೆಲವು ಹಳೆಯ ಪಾದರಕ್ಷೆಗಳನ್ನು ಕದ್ದಿದ್ದನಂತೆ. ನನಗೆ ಸಗು ು. ಆದರೂ ಕಳ್ಳತನ ಕಳ್ಳತನವೇ ಅಲ್ಲವೇ. ಹಳೆಯ ಬಟ್ಟೆಬರೆ ಆದರೇನು, ಾರದ ಒಡವೆಗಳು ಆದರೇನು, ಝಣಝಣಿಸುವ ಹಣಕಾಸು ರೇನು ? ನೀವು ಮೇಲುಸ್ತರದ ಮಧ್ಯಮವರ್ಗದ ಕುಟುಂಬದಿಂದ ರವರಾಗಿದ್ದರೆ ಇಂತಹ ಕೃತ್ಯವನ್ನು ಕಳ್ಳತನವಲ್ಲ ಆದರೆ ಕದಿಯುವ ಗೀಳು ವಾ ಕ್ಲೆಪ್ಟೋಮೇನಿಯಾ ಎನ್ನುತ್ತಿದ್ದಿರೇನೋ !

ಅದು ಹೋಗಲಿ. ಈಗ ಸುದ್ದಿಗೆ ಹಿಂದಿರುಗೋಣ. ನನಗೆ ಕೆಲವು ವಾರಗಳಿಂದ ಕೆಗಳಲ್ಲಿ ಓದುತ್ತಿರುವ ಸುದ್ದಿ ಜ್ಞಾಪಕಕ್ಕೆ ಬಂದು ಆಶ್ಚರ್ಯ ಮೂಡಿತು. ಜೊತೆಗೆ ಈಗ ವೃತ್ತಿಪರ ವಕೀಲನಾಗಿಬಿಟ್ಟಿದ್ದೇನೆ. ಅಲ್ಲದೆ, ನಮ್ಮ ಸಮಾಜದಲ್ಲಿ ನ್ಯಾಯಪರತೆ ಲುಗೈ ಪಡೆಯಬೇಕು, ನಮ್ಮ ಬಾಳನ್ನು ಈಗಿರುವುದಕ್ಕಿಂತ ಹೆಚ್ಚು ಮಾನವೀಯವಾಗುವಂತೆ ತಲು ಸಾಧ್ಯವಿದೆ ಎಂಬ ಆಶಯವನ್ನುಳ್ಳ ಬೃಹತ್ ಚಳವಳಿಯ ಒಬ್ಬ ಪುಟ್ಟ ಕಾರ್ಯಕರ್ತನೂ ದ್ದೇನೆ. ನಾನು ಉಲ್ಲೇಖಿಸುತ್ತಿರುವ ಚಳವಳಿ ಯಾವುದು ಗೊತ್ತೆ? – ಕರ್ನಾಟಕ ಉಚ್ಚ ನ್ಯಾಯಾಲಯ ಇದೀಗ ಮುಖ್ಯ ನ್ಯಾಯಮೂರ್ತಿಯಾಗಿರುವ ಜಸ್ಟೀಸ್ ಪಿ. ಡಿ. ದಿನಕರನ್‌ರ ವಶದಲ್ಲಿರುವ ಭಾರಿ ಾಣದ ಭೂಮಿ ಆಸ್ತಿ, ರಿಯಲ್ ಎಸ್ಟೇಟ್ ಮತ್ತಿತರ ಸ್ವತ್ತುಗಳಿಗೆ ಸಂಬಂಧಿಸಿ ನಡೆಯುತ್ತಿರುವ ಚಳವಳಿ. ವಾಸ್ತವವಾಗಿ ಈ ಚಳವಳಿಯು, ಈ ನ್ಯಾಯಾಧೀಶರು ತಮ್ಮ ಅಧಿಕಾರದ ದುರುಪಯೋಗ ತಿಕೊಂಡಿದ್ದಾರೆ (ಹಾಗೆಂದೇ ಈಗಲೂ ನನ್ನ ಕೆಲವು ಮಿತ್ರರು ಹೇಳುತ್ತಿದ್ದಾರೆ) ಎಂಬಂತಹ ಕೇವಲ ಾತ್ಮಕ ಅಂಜಿಕೆಗಳ ಮೇಲೆ ಆಧರಿಸಿಲ್ಲ. ನ್ಯಾಯಬದ್ಧ ವಿಧಾನಗಳ ಮೂಲಕ ಪಡೆದ ರೆವಿನ್ಯೂ ದಜಗಳ ನಿಜವಾದ ಪ್ರತಿಗಳ ಮೇಲೆ ಆಧರಿಸಿದೆ. ಈ ಸಂವಿಧಾನಾತ್ಮಕ ಕಾರ್ಯಕರ್ತರು ಹೇಳುವಂತೆ ರ್ಜನಿಕ ಭೂಮಿಯ ಮೇಲೆ ಅತಿಕ್ರಮಣ ನಡೆಸಿದ್ದಾರೆ ಎಂಬ ಅವರ ಮೇಲಿನ ಆರೋಪಗಳು ಈ ಯಾಧೀಶರು ಹೊಂದಿರುವ ಮತ್ತು ಅಕ್ಕಪಕ್ಕದ ಭೂಮಿಯ ಮೇಲೆ ಅತಿಕ್ರಮಣ ನಡೆಸಿರುವ ವಿಷಯ ಯ ಕಲೆಕ್ಟರ್ ಅವರು ಭಾರತದ ಪ್ರಧಾನ ನ್ಯಾಯಾಧೀಶ ಜಸ್ಟಿಸ್ ಕೆ. ಜಿ. ಬಾಲಕೃಷ್ಣನ್ ಅವರಿಗೆ ಸಲ್ಲಿಸಿರುವ ೃತ ವರದಿಯಿಂದಲೇ ಸಮರ್ಥಿಸಲ್ಪಟ್ಟಿವೆ.

ಈ ಸಂದರ್ಭದಲ್ಲಿ ಇನ್ನೊಂದು ಅಂಶವನ್ನೂ ದಾಖಲಿಸಬೇಕಿದೆ. ನ್ಯಾಯಮೂರ್ತಿ ಪಿ. ಡಿ. ದಿನಕರನ್‌ರು ಧಾನಬಾಹಿರವಾಗಿ ಭೂ ಕಬಳಿಸಿರುವ ಹಳ್ಳಿಯಲ್ಲೇ ಕೆ. ಬಾಲಕೃಷ್ಣನ್ ಎಂಬುವರೊಬ್ಬರು ರೈತ ಳಿಯ ನಾಯಕರಾಗಿದ್ದಾರೆ. ಈಗ ಇವರ ಮೇಲೆಯೇ ಅನೇಕ ಮೊಕದ್ದಮೆಗಳಿವೆ ಎಂದು ಸಲಾಗುತ್ತಿದೆ. ಆದರೆ ಇವರ ಮೇಲೆ ಅನೇಕ ಪೊಲೀಸು ಕೇಸುಗಳಿರುವುದು ಅವರೊಬ್ಬ ಕಳ್ಳ, ರು ಅನೈತಿಕವಾಗಿ ಭೂ ಕಬಳಿಸಿದ್ದಾರೆ, ಎಂಬ ಕಾರಣಕ್ಕಾಗಿ ಅಲ್ಲ, ಆದರೆ ಅವರು ಸಾರ್ವಜನಿಕ ಸಕ್ತಿಗಾಗಿ ಹೋರಾಡುತ್ತಿದ್ದಾರೆ ಎಂಬ ಕಾರಣಕ್ಕಾಗಿ. ತೀರ ಈಚೆಗಷ್ಟೆ ಇವರು ದೇವಸ್ಥಾನ ೇಶಿಸಲು ದಲಿತರಿಗೂ ಹಕ್ಕುಂಟು ಎಂದು ಆಗ್ರಹಿಸಿ ನಡೆಸಿದ ಚಳವಳಿಯಲ್ಲಿ ಕೆಲಕಾಲ ನಲ್ಲಿದ್ದು ಬಂದುದೂ ಉಂಟು.

ಆದರೆ ನ್ಯಾಯಮೂರ್ತಿ ಕೆ. ಜಿ. ಬಾಲಕೃಷ್ಣನ್‌ರು ಈ ಜನಪರ ಹೋರಾಟಗಾರ ಬಾಲಕೃಷ್ಣನ್‌ರನ್ನು ಲು ಇಚ್ಛಿಸುತ್ತಿಲ್ಲ. ಅಷ್ಟೇ ಅಲ್ಲ, ನ್ಯಾಯಮೂರ್ತಿ ದಿನಕರನ್ ಅವರು ಸಾರ್ವಜನಿಕ ಭೂಮಿಯ ೆ ಅತಿಕ್ರಮಣ ಎಸಗಿ ಅಪರಾಧವೆಸಗಿದ್ದಾರೆ ಎಂದು ಹೇಳುವ ಆ ಜಿಲ್ಲೆಯ ಕಲೆಕ್ಟರ್‌ರ ವರದಿಯನ್ನೂ ು ನಂಬಲು ಇಚ್ಛಿಸುತ್ತಿಲ್ಲ. ವಾಸ್ತವಾಂಶವೆಂದರೆ, ಸಂವಿಧಾನಬದ್ಧ ಚಟುವಟಿಕೆಗಳನ್ನು ಖಾತರಿಗೊಳಿಸುವ ಧಾನಾತ್ಮಕ ಜವಾಬ್ದಾರಿ ಹೊಂದಿರುವ ಜಸ್ಟಿಸ್ ಬಾಲಕೃಷ್ಣನ್ ಅವರು ಡಿಸ್ಟ್ರಿಕ್ಟ್ ಕಲೆಕ್ಟರ್ ಅವರ (ರೆವಿನ್ಯೂಗೆ ಂಧಿಸಿದ ವಿವಾದಗಳನ್ನು ವ್ಯವಹರಿಸಲು ಇವರೇ ಅಧಿಕಾರ ಹೊಂದಿರುವವರು) ವರದಿಯ ಪ್ರಕಾರ ರ್ಯ ಜರುಗಿಸಲು ಬದ್ಧರಾಗಿರುತ್ತಾರೆ ಮತ್ತು ಇದು ಅವರ ಕರ್ತವ್ಯವೂ ಹೌದು.

ಒಂದಂಶ ಗಮನಿಸೋಣ : ನ್ಯಾಯಮೂರ್ತಿ ಪಿ. ಡಿ. ದಿನಕರನ್‌ರು ಸಂವಿಧಾನ ಬಾಹಿರವಾಗಿ ಭೂ ಕಬಳಿಸಿರುವ ಹಳ್ಳಿಯಲ್ಲೇ ಕೆ. ಬಾಲಕೃಷ್ಣನ್ ಎಂಬುವರೊಬ್ಬರು ರೈತ ಚಳವಳಿಯ ನಾಯಕರಾಗಿದ್ದಾರೆ. ಈಗ ಇವರ ಮೇಲೆಯೇ ಅನೇಕ ಮೊಕದ್ದಮೆಗಳಿವೆ ಎಂದು ನೆನಪಿಸಲಾಗುತ್ತಿದೆ. ಆದರೆ ಇವರ ಮೇಲೆ ಅನೇಕ ಪೊಲೀಸು ಕೇಸುಗಳಿರುವುದು ಅವರೊಬ್ಬ ಕಳ್ಳ, ಅವರು ಅನೈತಿಕವಾಗಿ ಭೂ ಕಬಳಿಸಿದ್ದಾರೆ, ಎಂಬ ಕಾರಣಕ್ಕಾಗಿ ಅಲ್ಲ, ಆದರೆ ಅವರು ಸಾರ್ವಜನಿಕ ಹಿತಾಸಕ್ತಿಗಾಗಿ ಹೋರಾಡುತ್ತಿದ್ದಾರೆ ಎಂಬ ಕಾರಣಕ್ಕಾಗಿ . ತೀರ ಈಚೆಗಷ್ಟೆ ಇವರು ದೇವಸ್ಥಾನ ಪ್ರವೇಶಿಸಲು ದಲಿತರಿಗೂ ಹಕ್ಕುಂಟು ಎಂದು ಆಗ್ರಹಿಸಿ ನಡೆಸಿದ ಚಳವಳಿಯಲ್ಲಿ ಕೆಲಕಾಲ ಜೈಲಿನಲ್ಲಿದ್ದು ಬಂದದ್ದೂ ಉಂಟು.



**ಮೂಲ : ವಿ. ಕೃಷ್ಣ ಅನಂತ್, ಅನುವಾದ : ಕೆ. ಎಲ್. ಗೋಪಾಲಕೃಷ್ಣ ರಾವ್**

ನ್ಯಾಯಮೂರ್ತಿ ದಿನಕರನ್ ಅವರು ಹೇಗೆ ಶಾಸನಬಾಹಿರ ರೀತಿಗಳಲ್ಲಿ ವರ್ತಿಸಿದ್ದಾರೆಂಬುದಕ್ಕೆ ಚೆನ್ನೈನ ಶೆಣೈ ನಗರದಲ್ಲಿನ ಅವರ ಆಸ್ತಿಯೇ ಸಾಕ್ಷಿ. ಚೆನ್ನೈ ಮಹಾನಗರ ಅಭಿವೃದ್ಧಿ ಪ್ರಾಧಿಕಾರ ಅವರಿಗೆ ಮೂರು ಮಹಡಿಗಳ ಮನೆ ಕಟ್ಟಲಷ್ಟೆ ಅವಕಾಶ ನೀಡಿದ್ದಿತು. ಆದರೆ ಅವರು ಹೆಚ್ಚುವರಿಯಾಗಿ, ಎಂದರೆ ನಾಲ್ಕು ಮಹಡಿ ಕಟ್ಟಿದರು. ಇದೇನು ಅಂತಹ ಗಹನವಾದ ವಿಚಾರವಲ್ಲವೆಂದು ಒಪ್ಪಬೇಕೋ ಬೇಡವೋ ನನಗೆ ತಿಳಿಯದು. ಏಕೆಂದರೆ, ಎಷ್ಟೇ ಆಗಲಿ ದಿನದಿನವೂ ನಿಯಮಗಳನ್ನು ಉಲ್ಲಂಘಿಸಲು ನ್ಯಾಯಮೂರ್ತಿಗಳಿಗೆ ಅವಕಾಶವಿದ್ದಿರಬಹುದು. ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಸಂಚಾರ ನಿಯಮಗಳನ್ನು ಎಂದೂ ಅನುಸರಿಸರು ಎಂಬುದು ಚೆನ್ನೈನಲ್ಲಿರುವವರಿಗೆಲ್ಲ ಗೊತ್ತಿದೆ! ಹಾಗಿರುವಾಗ ನ್ಯಾಯಮೂರ್ತಿ ದಿನಕರನ್‌ರು ಶೆಣೈ ನಗರದಲ್ಲಿರುವ ತಮ್ಮ ಗೃಹದಲ್ಲಿ ಒಂದು ಹೆಚ್ಚಿನ ಮಹಡಿ ಕಟ್ಟಿದರೇನಂತೆ? ಅದನ್ನು ಒಂದು ಸಮಸ್ಯೆಯನ್ನಾಗಿ ಮಾಡಬೇಕೆ?

ಎಷ್ಟೇ ಆಗಲಿ, ಚೆನ್ನೈನ ತ್ಯಾಗರಾಜನಗರದ ರಂಗನಾಥನ್ ಬೀದಿಯಲ್ಲಿ ಅಂಗಡಿಗಳನ್ನು ಕಟ್ಟಿರುವವರೆಲ್ಲ ಶೆಣೈ ನಗರದಲ್ಲಿ ನ್ಯಾಯಮೂರ್ತಿ ದಿನಕರನ್‌ರವರು ಏನು ಮಾಡಿದ್ದಾರೋ ಅದನ್ನೇ ಮಾಡಿದ್ದಾರೆ! ಚೆನ್ನೈ ಮಹಾನಗರ ಅಭಿವೃದ್ಧಿ ಪ್ರಾಧಿಕಾರ ಒಂದಲ್ಲ ಒಂದು ದಿನ ನ್ಯಾಯಬಾಹಿರವಾದುದನ್ನು ನ್ಯಾಯಬದ್ಧಗೊಳಿಸಿ ಹೆಚ್ಚು ಹಣ ಸಂಗ್ರಹಿಸಲು ನಿರ್ಧರಿಸಿದಾಗ ನ್ಯಾಯಬಾಹಿರವಾಗಿ ನಿರ್ಮಿಸಿದ ಒಂದು ಅಥವಾ ಹೆಚ್ಚುವರಿ ಮಹಡಿಗಳನ್ನು ಕ್ರಮಬದ್ಧಗೊಳಿಸೇ ತೀರುತ್ತದೆ. ಹೀಗಿರುವಾಗ ನ್ಯಾಯಮೂರ್ತಿ ದಿನಕರನ್ ಅವರು ತಮ್ಮ ಶೆಣೈ ನಗರದ ಮನೆಯಲ್ಲಿ ಇನ್ನೂ ಒಂದು ಅಥವಾ ಹೆಚ್ಚು ಮಹಡಿಗಳನ್ನು ನಿರ್ಮಿಸಲು ನಿರ್ಧರಿಸಿದಲ್ಲಿ ಆಶ್ಚರ್ಯವೇನಿಲ್ಲ. ಮನೆ ಕಟ್ಟುವಾಗ ಒಪ್ಪಿತ ಯೋಜನೆಗಳಿಂದ ದೂರಸರಿದು ಕಾನೂನುಭಂಗ ಮಾಡುವಂತೆ ಸಣ್ಣಪುಟ್ಟ ಪೊಲೀಸ್ ಅಧಿಕಾರಿಗಳೂ ಚಿಲ್ಲರೆ ಪತ್ರಕರ್ತರೂ ಜಂಭ ಕೊಚ್ಚುತ್ತಿರುವಾಗ ಅಂಥದೇ ಕಾರ್ಯ ಎಸಗಿದ ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳನ್ನೇಕೆ ಅಪವಾದಕ್ಕೆ ಗುರಿಪಡಿಸಬೇಕು? ಆದರೆ, ಇಂತಹ ನ್ಯಾಯಭಂಗ ಕ್ರಿಯೆಗಳ ವಿರುದ್ಧ ಮದ್ರಾಸ್ ಉಚ್ಚ ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತ ರಕ್ಷಣೆಯ ರಿಟ್ ಪೆಟಿಷನ್‌ಗಳ ರೂಪದಲ್ಲಿ ಅನೇಕ ಪ್ರಸಂಗಗಳಿದ್ದು, ಅವುಗಳಿಗೆ ಸಂಬಂಧಿಸಿ ನ್ಯಾಯಮೂರ್ತಿ ದಿನಕರನ್‌ರಂಥ[illegible] ತೀರ್ಮಾನ ನೀಡುವ ನಿರೀಕ್ಷೆ ಇರುವಾಗ ಅವರ ನ್ಯಾಯಬಾಹಿರ ಕ್ರಿಯೆಗ[illegible] ಕಡೆಗಣಿಸಲಾಗದು, ಎಂದೂ ವಾದಿಸಬಹುದಲ್ಲವೇ? ಆದ್ದರಿಂದಲೇ ಇ[illegible] ಆಪಾದನೆಗಳಿರುವಾಗ ನ್ಯಾಯಮೂರ್ತಿ ದಿನಕರನ್ ಅವರು ತಮ್ಮ ಸ್ಥಾನದ[illegible] ಕೊಂಡೇ ಮುಂದುವರಿಯಲು ಅವಕಾಶ ನೀಡಬಾರದು ಎಂದು ನಾವು ವಾದಿಸುತ್ತೆ[illegible] ಆದರೆ ನ್ಯಾಯಮೂರ್ತಿ ದಿನಕರನ್‌ರನ್ನು ಕರ್ನಾಟಕ ಉಚ್ಚ ನ್ಯಾಯಾಲಯದ[illegible] ಇರುವಂತೆ ಬಿಡುವ ಬದಲು ಅವರನ್ನು ಸುಪ್ರೀಮ್ ಕೋರ್ಟ್‌ನ ನ್ಯಾಯಾಧೀಶರ[illegible] ತೆಗೆದುಕೊಳ್ಳಬೇಕು, ಎಂದು ನ್ಯಾಯಮೂರ್ತಿ ಕೆ. ಜಿ. ಬಾಲಕೃಷ್ಣನ್ ಅ[illegible] ನಂಬಿರುವಂತೆ ಕಂಡುಬರುತ್ತದೆ! ದಿನಕರನ್ ಅವರ ವಯಸ್ಸು ಮತ್ತು ಸುಪ್ರೀ[illegible] ಕೋರ್ಟ್‌ನಲ್ಲಿರುವ ಇತರ ನ್ಯಾಯಾಧೀಶರುಗಳ ವಯಸ್ಸುಗಳನ್ನು ಪರಿಗಣಿಸಿದ[illegible] ಅರಕೋಣಮ್ ನಗರದ ಈತ ಒಂದಲ್ಲ ಒಂದು ದಿನ ಭಾರತದ ಮು[illegible] ನ್ಯಾಯಾಧೀಶರಾಗುವುದಂತೂ ಶತಃಸಿದ್ಧ! ಆದರೆ ಸದ್ಯಕ್ಕೆ ಕೊಲೀಜಿಯಂ ದಿನಕರ[illegible] ಹೆಸರನ್ನು ಪಟ್ಟಿಯಿಂದ ತೆಗೆದುಹಾಕಿರುವುದಾಗಿ ಸುದ್ದಿ ಬಂದಿದೆ. ಮುಂದೆ ಮತ್ತೆ[illegible] ಅವರ ಹೆಸರನ್ನು ಸೇರಿಸಬಹುದೇನೋ, ತಿಳಿಯದು.

ಬಳಸಿದ ಉಡುಪು, ಹಳೆಯ ಪಾದರಕ್ಷೆಗಳನ್ನು ಕದ್ದು ನಮ್ಮ ವಾಚ್‌ಮನ್ ಸಿಕ್ಕಿಬಿದ್ದ ಆ ಹೇಳಹೆಸರಿಲ್ಲದ ವ್ಯಕ್ತಿಗೆ ನೀಡಬೇಕಾದಂಥ ''ನ್ಯಾಯ''ವ[illegible] ನ್ಯಾಯಮೂರ್ತಿ ದಿನಕರನ್‌ರಿಗೂ ನೀಡಬೇಕೆಂದು ಒತ್ತಾಯಿಸಲಾಗದೆಂಬುದ[illegible] ನಾನು ಬಲ್ಲೆ. ಆದರೆ ನನಗೆ ಕೊನೆಯ ಪಕ್ಷ ಈಗಲಾದರೂ ಸರಿ, ಸಂವಿಧಾನ[illegible] ನಂಬಿಕೆ ಇದೆ ಎಂಬುದನ್ನು ಪುನರುಚ್ಚರಿಸುತ್ತೇನೆ. ಹಾಗಾಗಿ ನ್ಯಾಯಮೂ[illegible] ದಿನಕರನ್ ಅವರು ಒಂದಲ್ಲ ಒಂದು ದಿನ ನ್ಯಾಯಾಂಗ ಶಿಕ್ಷೆಗೊಳಗಾಗಲೇಬೇಕೆ[illegible] ನಿರೀಕ್ಷಿಸುವಂತೆ ಇದು ನನ್ನನ್ನು ಒತ್ತಾಯಿಸುತ್ತದೆ.

ಪ್ರತಿಯೊಬ್ಬರೂ ಸಂವಿಧಾನ ಯೋಜನೆಯಲ್ಲಿ ನಂಬಿಕೆ ಇರಿಸಿರಬೇಕು ಮ[illegible] ನ್ಯಾಯಮೂರ್ತಿ ದಿನಕರನ್ ಅವರು ಅಪರಾಧವೆಸಗಿದ ಶಿಕ್ಷೆಗೆ ಗುರಿಯಾಗುವವರೆ[illegible] ಕಾಯಬೇಕು, ಎಂದು ಒತ್ತಿ ಹೇಳುವ ಸಾಧ್ಯತೆ ಹಾಗೂ ಅರ್ಹತೆ ನನಗಿದೆ; ಏಕೆಂ[illegible] ಕಾವೇರಿ ಪಟ್ಟಣಂನಲ್ಲಿ ನನಗೆ ಯಾವ ಆಸ್ತಿಯೂ ಇಲ್ಲ. (ನ್ಯಾಯಮೂರ್ತಿ ದಿನಕ[illegible] ರಾದರೋ ಅಲ್ಲಿ ತಮ್ಮ ಹೆಸರಿನಲ್ಲೇ ನೂರಾರು ಎಕರೆ ಜಮೀನನ್ನು ಹೊಂದಿದ್ದಾ[illegible] ಅಲ್ಲ, ಅಷ್ಟೇ ಪ್ರಮಾಣದ ಭೂಮಿಯನ್ನು ಸಾರ್ವಜನಿಕ ವಿಭಾಗದಿಂದಲೂ ಕಬಳಿಸಿದ್ದಾ[illegible] ಅಲ್ಲದೆ, ಸುಪ್ರಸಿದ್ಧ ಬಿನ್ನಿ ಮಿಲ್ಸ್ ಪ್ರಸಂಗದಲ್ಲಿ ಭೂ ಕಬಳಿಕೆಯ ವಿರುದ್ಧ ದಿನಕ[illegible] ಅವರು ನೀಡಿದ ತೀರ್ಮಾನ - ಶಿಕ್ಷೆಗೆ ಒಳಗಾದವರಲ್ಲಿ ನಾನಂತೂ ಇಲ್ಲ. ಹಾ[illegible] ಅವರ ಬಗೆಗೆ ನನ್ನಲ್ಲಿ ಅನವಶ್ಯ ದ್ವೇಷವಿಲ್ಲ. ಆದ್ದರಿಂದ ನಾನು ಸಂವಿಧಾನದ[illegible] ಶಾಸನಬದ್ಧ ಆಡಳಿತದಲ್ಲೂ ನಂಬಿಕೆ ಇರಿಸುವ ಬಾಧ್ಯತೆ ಹೊಂದಿದ್ದೇನೆ. ನಾ[illegible] ದಿನಕರನ್‌ರಂಥವರ ಅವಕೃಪೆಗೆ ಒಳಗಾಗಿ ಏನನ್ನೂ ಕಳೆದುಕೊಂಡಂಥವನಲ್ಲ.

ನ್ಯಾಯಮೂರ್ತಿ ದಿನಕರನ್ ಅವರು ಒಂದಲ್ಲ ಒಂದು ದಿನ ಅಪರಾಧವೆಸ[illegible] ದೋಷಾರೋಪಣೆಗೆ ಒಳಗಾಗಲಿರುವರೆಂಬ ಆಶಯದೊಂದಿಗೆ ಬಾಳುತ್ತಿ[illegible] ಬೇಕೆಂದು ನಾನು ಒತ್ತಿ ಹೇಳುತ್ತೇನೆ. ಏಕೆಂದರೆ, ಹಾಗೆ ಹೇಳುವುದರಿಂದ ನಾನು ಏನ[illegible] ಕಳೆದುಕೊಳ್ಳುವುದಿಲ್ಲ ಮತ್ತು ಈ ಗೌರವಾನ್ವಿತ ನ್ಯಾಯಮೂರ್ತಿಗಳು ಅಪರಾ[illegible] ಶಿಕ್ಷೆಗೊಳಗಾಗದಿದ್ದರೂ ನನ್ನ ಬಾಳಿಗಾಗಲೀ ಆಸ್ತಿಗಾಗಲೀ ಯಾವ ನಷ್ಟವೂ ಆಗುವು[illegible] ನ್ಯಾಯಮೂರ್ತಿ ವಿ. ರಾಮಸ್ವಾಮಿಯವರ ಪ್ರಸಂಗದಲ್ಲಿ ದೋಷಾರೋಪಣೆಯ [illegible] ಏನಾಯಿತೆಂಬುದು, ಯಾರೇ ನನಗೆ ಜ್ಞಾಪಿಸುವ ಮುನ್ನವೇ, ನನಗೆ ತಿಳಿದೇ ಇದೆ. [illegible] ಗೌರವಾನ್ವಿತ ನ್ಯಾಯಮೂರ್ತಿಗಳು ಭ್ರಷ್ಟಾಚಾರದ ದೋಷವೆಸಗಿದ್ದರೆಂದು ತಿಳಿದೂ [illegible] ಕಾಲದಲ್ಲಿ ಪಾರ್ಲಿಮೆಂಟ್‌ನಲ್ಲಿ ಬಹುಮತೀಯ ಸದಸ್ಯರು ನ್ಯಾಯಮೂರ್ತಿಗ[illegible] ದೋಷಾರೋಪಣೆಗೆ ಒಳಪಡಿಸುವುದಕ್ಕೆ ವಿರುದ್ಧ ಮತ ನೀಡಲು ನಿರ್ಧರಿಸಿದರು. ಕಪಿಲ್ ಸಿಬಲ್‌ರು ಹೇಗೆ ರಾಮಸ್ವಾಮಿಯವರನ್ನು ರಕ್ಷಿಸುತ್ತ ಅವರ [illegible] ವಾದಿಸಿದರೆಂಬುದು ನನಗೆ ತಿಳಿದಿದೆ. ಅದೇ ರೀತಿ ನ್ಯಾಯಮೂರ್ತಿ ದಿನಕರನ್[illegible] ತಮ್ಮನ್ನು ರಕ್ಷಿಸುವ ಅನೇಕ ಪ್ರಮುಖ ವ್ಯಕ್ತಿಗಳನ್ನು ಕಂಡುಕೊಳ್ಳಲಿರುವರು ಎಂಬುದ[illegible] ಯಾವ ಸಂದೇಹವೂ ಇಲ್ಲ. ಮತ್ತು ತಮ್ಮ ಮೇಲೆ ದೋಷಾರೋಪಣೆಯ ವಿಚಾ[illegible] ಬಂದಾಗ ಅವರೆಲ್ಲ ತಮ್ಮ ರಕ್ಷಣೆಗೆ ಬರಲಿರುವರು ಎಂಬ ಖಾತರಿಯೂ ಅವರಿಗೆ [illegible] ಎಂಬುದೂ ನನಗೆ ಗೊತ್ತಿದೆ.

ಏನೇ ಆದರೂ ಅದರಿಂದ ನನಗೇನೂ ಬಾಧಕವಿಲ್ಲ. ಅವರು ನಿಜ[illegible] ದೋಷಾರೋಪಣೆಗೆ ಒಳಗಾದರೆ, ಅದರಲ್ಲಿ ನನ್ನದೂ ಒಂದು ಸಣ್ಣ ಪಾತ್ರವಿದ್ದಿತೆ[illegible]

ಮಿತ್ರರಿಗೆಲ್ಲ ಹೇಳಿಕೊಂಡುಬರುತ್ತೇನೆ. ನನ್ನ ಪಾತ್ರವನ್ನು ೇಕ್ಷಿಸಿ ಹೇಳುವ ಸಾಧ್ಯತೆಯೂ ನನಗಿದೆಯೆನ್ನಿ!

ಆದರೆ ದಿನಕರನ್ ಅವರ ದುರಾಸೆಗೆ ಈಡಾಗಿ ತನ್ನ ಭೂಮಿಯನ್ನು ುಕೊಂಡಂಥ ವ್ಯಕ್ತಿಯಾಗಲಿ, ಇಲ್ಲವೇ ನ್ಯಾಯಮೂರ್ತಿ ಕರನ್ ಅವರ ಅಥವಾ ಮತ್ತಾವುದೇ ನ್ಯಾಯಮೂರ್ತಿಯ ತೀರ್ಪಿ ೆ ಲಾಭ ಗಳಿಸಿದಂಥ ಯಾವುದೇ ಗಣಿಕಾರನ ದುರಾಸೆಗೊಳಗಾಗಿ ಮಿಯನ್ನು ಕಳೆದುಕೊಂಡಂಥ ಮತ್ತಾವುದೇ ವ್ಯಕ್ತಿಯಾಗಲಿ, ಧಾನವೂ ನ್ಯಾಯ-ಸ್ವಾತಂತ್ರ್ಯ-ಮಾನವ ಹಕ್ಕುಗಳನ್ನು ಖಾತರಿ ಸುವಂಥ ಅದರ ಕ್ರಮಗಳೂ ಅಧಿಕಾರ ದುರುಪಯೋಗಪಡಿಸಿ ಳ್ಳುವಂಥ ವ್ಯಕ್ತಿಗಳ ಬಗೆಗೆ ಎಚ್ಚರಿಕೆವಹಿಸುವುವು ಎಂದು ುವರೆಂದು, ಕಾನೂನು ತನ್ನ ಮಾರ್ಗ ಹಿಡಿದುಹೋಗುವವರೆಗೂ ುತ್ತ ಕೂರುವರೆಂದು, ನಿರೀಕ್ಷಿಸುವುದು ಸಾಧ್ಯವಿಲ್ಲವೆನ್ನಿ. ತನ್ನದೇ ಮಿಯು ತನ್ನ ಕೈತಪ್ಪಿಹೋಗುವುದನ್ನು ಪ್ರತಿರೋಧಿಸುವಂಥ ವುದೇ ವ್ಯಕ್ತಿ ಕೇವಲ ಪ್ರಾರ್ಥನೆ-ಮನವಿ-ಅರ್ಜಿಗಳಿಗೆ ತನ್ನನ್ನು ತಗೊಳಿಸಿಕೊಂಡು ಸುಮ್ಮನೆ ಕೂರಲು ಇಂದಲ್ಲ ನಾಳೆ ಕರಿಸುವುದು ಖಂಡಿತ.

ಭೂ ಕಬಳಿಕೆಯ ವಿರುದ್ಧದ ಹೋರಾಟವು, ಸಹಜ ಪರಿಸ್ಥಿತಿ ಲ್ಲಿ, ಹಿಂಸಾತ್ಮಕವಾಗದಿರಬಹುದು. ಏಕೆಂದರೆ ತಮ್ಮ ಭೂಮಿಯನ್ನೂ ಯನ್ನೂ ರಕ್ಷಿಸಿಕೊಳ್ಳಹೊರಟವರು ಪ್ರಭುತ್ವದ ಹೋರಾಟ ಕ್ಕೆ ಹೋಲಿಸಿದಂತೆ ತಮ್ಮ ಹೋರಾಟಬಲ ತೀರ ವೆಂಬುದನ್ನು ಬಲ್ಲರು. ತೀರ ಕ್ಷುಲ್ಲಕ ಕಾರಣಕ್ಕಾಗಿಯೂ ೀಸರು ತಮ್ಮನ್ನು ಥಳಿಸುವರು, ತಮ್ಮ ಮೇಲೆ ಗುಂಡು ಸಲೂ ಹಿಂಜರಿಯರು, ಎಂಬುದನ್ನು ಜನ ಬಲ್ಲರು. ಆದ್ದರಿಂದ ರು ಅಹಿಂಸಾತ್ಮಕವಾಗಿಯೇ ಉಳಿಯುವರು, ನ್ಯಾಯ ನೆಗಾಗಿ ಮನವಿ ಮಾಡಲು ಹವಣಿಸುವರು. ಆದರೆ ತೊಂದರೆ ರರೆ ಅವರ ಅಂತಹ ಕಾರ್ಯ ಅವರನ್ನು ಎಷ್ಟು ಮಾತ್ರವೂ ುದತ್ತ ಕರೆದೊಯ್ಯದು. ಎಷ್ಟೋ ವೇಳೆ ಮಾಧ್ಯಮಗಳೂ ಹೋರಾಟಗಳನ್ನು ಗಮನಕ್ಕೆ ತಂದುಕೊಳ್ಳುವುದೇ ಇಲ್ಲ. ಧಾನದಲ್ಲೂ ಅದರ ಆಚರಣೆ-ಕಾರ್ಯಕ್ರಮಗಳಲ್ಲೂ ಕೆಯುಳ್ಳ ನಮ್ಮಂಥ ಜನರು ನಾಯಕತ್ವ ವಹಿಸಿದಾಗ ಅಂಥ ೀರಾಟ ಒಂದಲ್ಲ ಒಂದು ಕಾಲದಲ್ಲಿ ತನ್ನ ಶಕ್ತಿಯನ್ನು ಕಳೆದು ಳ್ಳುತ್ತದೆನ್ನಬಹುದು. ಆದರೆ ತಮ್ಮ ಭೂಮಿಯನ್ನೂ ಜೀವನ ೆಗಳನ್ನೂ ಕಳೆದುಕೊಂಡಂಥ ಜನರ ಮುಂದಿರುವ ಆಯ್ಕೆ ? - ಹಸಿವಿನಿಂದ ಸಾಯುವುದು ಇಲ್ಲವೇ ತಮ್ಮ ಹಕ್ಕುಗಳ ೆಗಾಗಿ ಹೋರಾಡುತ್ತ ಸಾಯುವುದು. ಆದ್ದರಿಂದಲೇ ಅವರಲ್ಲಿ ರರು ಸಶಸ್ತ್ರ ಹೋರಾಟಕ್ಕಿಳಿದಿದ್ದಾರೆ. ಪಶ್ಚಿಮ ಬಂಗಾಳದ ಪಶ್ಚಿಮ ್ನಾಪೂರ್‌ನ ಬಹುಭಾಗದಲ್ಲಿ ಜರುಗುತ್ತಿರುವುದು ಇದೇ. ಸ್‌ಘಡದ ಕೆಲವು ಹಳ್ಳಿಗಳಲ್ಲೂ ಕೆಲವು ವರ್ಷಗಳಿಂದ ಇದು ನಕ್ಕೆ ಬಂದಿದ್ದು, ಈಗಿದು ತೀವ್ರ ಸ್ವರೂಪ ತಳೆದಿದೆ. ಜಾರ್ಖಂಡ್‌ನ ು ವಿಶಾಲ ಪ್ರದೇಶಗಳಲ್ಲಿ ಈ ಬಗೆಯ ಹೋರಾಟ ಕೆಲವು ದಿಂದ ಜರುಗುತ್ತಿದೆ. ಇದೀಗ ಮಹಾರಾಷ್ಟ್ರ, ಆಂಧ್ರಪ್ರದೇಶ ್ತು ಒರಿಸ್ಸಾಗಳ ಕೆಲವು ಭಾಗಗಳಿಗೂ ವ್ಯಾಪಿಸಿದೆ. ಮಾಧ್ಯಮಗಳು ೇಕ ಪ್ರಸಂಗಗಳಲ್ಲಿ ಈ ಪ್ರಕ್ರಿಯೆಯ ಸತ್ಯಾಂಶದ ದೀರ್ಘ ಾಸವನ್ನು ಮರೆಮಾಚುತ್ತಿವೆ. ಭೂ ಕಬಳಿಕೆಯ ವಿರುದ್ಧವೂ, ್ವವೂ ಅದರ ಸಾಧನಗಳೂ (ಜನರ ಹಕ್ಕುಗಳನ್ನು ಸಂರಕ್ಷಿಸುವುದು ಗಳ ಸಂವಿಧಾನಾತ್ಮಕ ಕರ್ತವ್ಯವಾದರೂ) ಜನಹಿತ ವಿರುದ್ಧ ುವ ಕ್ರಿಯೆಗಳ ವಿರುದ್ಧವೂ ಜನರು ಸಂಘಟಿಸುವ ಯಾವುದೇ ಯ ಪ್ರತಿರೋಧವನ್ನೂ ಮಾಧ್ಯಮಗಳು 'ಭಯೋತ್ಪಾದನೆ' ು ಬಿಂಬಿಸುತ್ತಿರುವುದು ಎಂತಹ ವಿಪರ್ಯಾಸ! ಹಾಗಿದ್ದರೆ, ುದಿನ ಹಾದಿ ಯಾವುದು?



## ಇರಾಮ್ ಶರ್ಮಿಳಾ ಚಾನೂ ಎಂಬ ಅದ್ಭುತ ಕನಸುಗಾರ್ತಿ

ಇದೀಗ ಸಿನಿಕತನವೇ ಎಲ್ಲ ಕ್ಷೇತ್ರಗಳಲ್ಲೂ ಮೇಲುಗೈ ಸಾಧಿಸಿದೆ. ಅದರಲ್ಲೂ ರಾಜಕೀಯ ಕ್ಷೇತ್ರದಲ್ಲಿ ಇದು ಹೆಚ್ಚು ಎದ್ದುಕಾಣುತ್ತಿದೆ. ಉದಾಹರಣೆಗೆ, ಪ್ರತಿವರ್ಷವೂ ಅಕ್ಟೋಬರ್ ೨ರಂದು ಮಹಾತ್ಮ ಗಾಂಧಿಯವರ ಹುಟ್ಟುಹಬ್ಬವನ್ನು ಆಚರಿಸಲಾಗುತ್ತದೆ. ಅಂದು ನವದೆಹಲಿಯಲ್ಲಿರುವ ಬಾಪೂ ಅವರ ಸಮಾಧಿಯ ಬಳಿ, ಅಂತೆಯೇ ವಿವಿಧ ರಾಜ್ಯಗಳಲ್ಲಿ ಗಾಂಧಿಯವರ ಪ್ರತಿಮೆಯ ಬಳಿ ರಾಜಕೀಯ ನಾಯಕರು ಸಾಲುಗಟ್ಟಿ ನಿಲ್ಲುತ್ತಾರೆ. ಹಾಗೆ ಸಾಲುಗಟ್ಟಿ ನಿಲ್ಲುವುದು ಗಾಂಧಿಯವರ ಬಗೆಗೆ ಗೌರವ ಸೂಚಿಸಲೆಂದಲ್ಲ, ಆದರೆ ಅವರನ್ನು ಸ್ಮರಿಸದಿದ್ದರೆ ತಮ್ಮ ರಾಜಕೀಯ ಸ್ಥಾನಮಾನಕ್ಕೇ ಕುಂದುಬರುತ್ತದೆಂದು.

ಆದರೆ ೨೦೦೬ರ ಅಕ್ಟೋಬರ್ ೪ರಂದು ನವದೆಹಲಿಯಲ್ಲಿ ಮಹಾತ್ಮ ಗಾಂಧಿಯವರ ಸ್ಮರಣೆಯನ್ನು ಬೇರೊಂದು ರೀತಿಯಲ್ಲಿ ಆಚರಿಸಲಾಯಿತು. ಅಂದು ಪಾರ್ಲಿಮೆಂಟ್ ಭವನದಿಂದ ಒಂದು ಕಿಲೋಮೀಟರ್‌ನಷ್ಟು ದೂರವಿರದ ಜಂತರ್‌ಮಂತರ್ ಬಳಿ ಇರಾಮ್ ಶರ್ಮಿಳಾ ಚಾನೂ ಅವರು ಹತ್ತಾರು ವಿದ್ಯಾರ್ಥಿಗಳೊಂದಿಗೆ ಸಭೆ ಸೇರಿದ್ದರು. ಅಲ್ಲಿ ಎಂದಿನಂತೆ ಮೈಕ್ರೋಫೋನ್‌ಗಳ ಆರ್ಭಟವಿರಲಿಲ್ಲ. ಶರ್ಮಿಳಾ ಅವರು ದೊಡ್ಡ ಭಾಷಣವನ್ನೇನೂ ಮಾಡಲಿಲ್ಲ. ನಾನೂ ಯಾವುದೋ ನಿಮಿತ್ತ ದಿಲ್ಲಿಗೆ ಹೋಗಿದ್ದವನು ಜಂತರ್‌ಮಂತರ್ ಬಳಿಯೇ ತಂಗಿದ್ದೆ.

ಜಂತರ್‌ಮಂತರ್ ಈಗ ಎಲ್ಲ ರಾಜಕೀಯ ಪ್ರತಿಭಟನೆಗಳ ಕೇಂದ್ರ ಸ್ಥಾನವಾಗಿದೆ. ಹಿಂದೆ 'ಬೋಟ್ ಕ್ಲಬ್' ಅಂಥ ಸ್ಥಾನವಾಗಿತ್ತು. ಆದರೆ ೧೯೯೩ರ ಜನವರಿಯಲ್ಲಿ ಅಲ್ಲಿ ಜರುಗಬೇಕಿದ್ದ ಭಾರತೀಯ ಜನತಾ ಪಕ್ಷದ ಸಭೆಯೊಂದನ್ನು ಕಾಂಗ್ರೆಸ್ ಪಕ್ಷದ ಕುಖ್ಯಾತ ನಾಯಕ ರಾಜೇಶ್ ಪೈಲಟ್ ತನ್ನ ಕುತಂತ್ರದಿಂದ ತಪ್ಪಿಸಿದನಂತರ ಪ್ರಜಾಸತ್ತಾತ್ಮಕ ಪ್ರತಿಭಟನೆಗಳ ಕೇಂದ್ರ ಜಂತರ್‌ಮಂತರ್‌ಗೆ ವರ್ಗಾಯಿತವಾಯಿತು. ಅಂದು ಈ ಸಭೆಯಲ್ಲಿ ನಾನು ನನ್ನ ಹಳೆಯ ಮಣಿಪೂರ್ ಮಿತ್ರ ಬಾಬ್ಲೂ ಲೋಯಿಟಂಘ್ ಬಾಮ್ ಇದ್ದುದನ್ನು ಕಂಡೆ. ಕೂಡಲೇ ಅಂದು ಬೆಳಿಗ್ಗೆ ಪತ್ರಿಕೆಗಳಲ್ಲಿ ಓದಿದ್ದ ಒಂದು ಸುದ್ದಿ ಜ್ಞಾಪಕಕ್ಕೆ ಬಂದಿತು. ಅದರ ಪ್ರಕಾರ, ಶರ್ಮಿಳಾರವರು ಸಶಸ್ತ್ರ ಪಡೆಗಳ ವಿಶೇಷಾಧಿಕಾರ ಕಾಯಿದೆಯ ಎಎಫ್‌ಎಸ್‌ಪಿಎ ವಿರುದ್ಧ ತಮ್ಮ ಉಪವಾಸ ಸತ್ಯಾಗ್ರಹವನ್ನು ಮುಂದುವರಿಸಲು ದಿಲ್ಲಿಗೆ ಬಂದಿದ್ದರು. ಬಾಬ್ಲೂ ಅವರೂ ಅವರ ಜೊತೆ ಇಂಫಾಲ್‌ನಿಂದ ಬಂದಿದ್ದರು.

ಆ ಸಭೆಯಲ್ಲಿ ಇವರಿಬ್ಬರಲ್ಲದೆ ದಿಲ್ಲಿಯ ನಾನಾ ಕಾಲೇಜುಗಳಲ್ಲಿ ಓದುತ್ತಿದ್ದ ಮಣಿಪೂರ್‌ನ ಹತ್ತಾರು ಯುವಕ ಯುವತಿಯರಿದ್ದರು. ನಾನು ಅವರೊಟ್ಟಿಗೆ ಸಾಕಷ್ಟು ಕಾಲ ಕಳೆದೆ. ಸಶಸ್ತ್ರ ಪಡೆಗಳ ವಿಶೇಷಾಧಿಕಾರ ಕಾಯಿದೆಯ (ಎಎಫ್‌ಎಸ್‌ಪಿಎ) ಬಗೆಗೆ ತಿಳಿಯಲೆಂದೇನೂ ಹಾಗೆ ಮಾಡಲಿಲ್ಲ. ಅದರ ಬಗೆಗೆ ನನಗೆ ಸಾಕಷ್ಟು ಅರಿವಿತ್ತು. ನಾನು ಅದರ ವಿರುದ್ಧ ನಾನಾ ಪತ್ರಿಕೆಗಳಲ್ಲಿ ಅಂಕಣಗಳನ್ನು ಬರೆದು ಹಣವನ್ನೂ ಸಂಪಾದಿಸಿದ್ದೆ! ಶರ್ಮಿಳಾ ಅವರ ಬಗೆಗೂ ನಾನು ತಿಳಿದಿದ್ದೆ. ಆದರೆ ಆ ಬೀಭತ್ಸ ಕಾನೂನಿನ ವಿರುದ್ಧ ಪ್ರತಿಭಟನೆಗಳಲ್ಲಿ ಎಂದೂ ಭಾಗವಹಿಸಿರಲಿಲ್ಲ.

ಅಂದು ಭಾಷಣ ಮಾಡಲು ಶರ್ಮಿಳಾ ಅವರಿಗೆ ಸಾಕಷ್ಟು ಶಕ್ತಿಯೇ ಇರಲಿಲ್ಲ. ಆದರೆ ನಮ್ಮೆಲ್ಲಾರಲ್ಲೂ ಇರದ ಬೇರೇನೋ ರೀತಿಯ ಕಳೆ/ಚೇತನ ಅವರಲ್ಲಿ ಇದ್ದಿತು. ಅವರು ತುಂಬ ದುರ್ಬಲಗೊಂಡು ಕಳೆಗುಂದಿದವರಾಗಿ ಕಾಣುತ್ತಿದ್ದರು. ಅದು ಸಹಜವೇ, ಏಕೆಂದರೆ, ಅವರು ೨೦೦೦ದ ನವೆಂಬರ್‌ನಿಂದ ಏನನ್ನೂ ತಿನ್ನದೆ ಉಪವಾಸ ಸತ್ಯಾಗ್ರಹದಲ್ಲಿ ನಿರತರಾಗಿದ್ದರು.

ಎಲ್ಲರೂ ಆಮರಣಾಂತ ಉಪವಾಸ ಸತ್ಯಾಗ್ರಹ ಮಾಡಿದರೆ ಶರ್ಮಿಳಾ ಅವರು ೧೯೫೮ರಲ್ಲಿ ಜಾರಿಗೆ ಬಂದ ಕುಖ್ಯಾತ ಸಶಸ್ತ್ರ ಪಡೆಗಳ ವಿಶೇಷಾಧಿಕಾರ ಕಾಯಿದೆ (ಎಎಫ್‌ಎಸ್‌ಪಿಎ) ರದ್ದಾಗುವ ತನಕ ಉಪವಾಸ ಸತ್ಯಾಗ್ರಹ ಮಾಡುವುದಾಗಿ ನಿರ್ಧರಿಸಿದ್ದರು.

ಈಕೆ ೮ರು ವರ್ಷಗಳಿಂದ ಅನ್ನ-ನೀರು ಸೇವಿಸದೆ ಬಾಳು ಸಾಗಿಸುತ್ತಿದ್ದಾರೆ. ಅವರನ್ನು ಬಂಧಿಸಿ ಇಂಫಾಲ್‌ನ ಪೊಲೀಸರು ಮೂಗಿನ ನಳಿಕೆಯ ಮೂಲಕ ಬಲಾತ್ಕಾರದಿಂದ ಆಹಾರ ನೀಡಿದುದುಂಟು. ೨೦೦೦ದ ನವೆಂಬರ್‌ನಲ್ಲಿ ಮಣಿಪೂರ್‌ನ ಪೊಲೀಸರು ಅವರನ್ನು ಆತ್ಮಹತ್ಯೆಯ ಆರೋಪ ಹೊರಿಸಿ ಮೊದಲ ಬಾರಿಗೆ ಬಂಧಿಸಿದ್ದರು. ಅಂತಹ 'ಅಪರಾಧ'ಕ್ಕೆ ಪರಮಾವಧಿ ಶಿಕ್ಷೆ ಒಂದು ವರ್ಷ ಕಾರಾಗೃಹವಾಸವಾಗಿದ್ದಿತು. ಒಂದು ವರ್ಷದ ಬಳಿಕ ಕಾರಾಗೃಹದಿಂದ ಬಿಡುಗಡೆಯಾದ ನಂತರವೂ ಶರ್ಮಿಳಾ ಉಪವಾಸ ಸತ್ಯಾಗ್ರಹವನ್ನು ಮುಂದುವರಿಸಿದರು. ಅವರನ್ನು ಮತ್ತೆ ಬಂಧಿಸಲಾಯಿತು, ಆಸ್ಪತ್ರೆಯಲ್ಲಿರಿಸಿ ಮೂಗಿನ ಮೂಲಕ ಆಹಾರ ನೀಡಲಾಯಿತು. ೨೦೦೬ರ ಅಕ್ಟೋಬರ್ ೩ರಂದು ಅವರನ್ನು ಇಂಫಾಲ್‌ನ ಆಸ್ಪತ್ರೆಯಿಂದ ಬಿಡುಗಡೆ ಮಾಡಿದ ನಂತರ ಅವರು ತಮ್ಮ ಹೋರಾಟದ ತಂತ್ರವನ್ನು ಬದಲಿಸಿದರು. ವಿಮಾನದಲ್ಲಿ ದಿಲ್ಲಿಗೆ ಬಂದು ರಾಜಘಾಟ್‌ಗೆ ಭೇಟಿ ನೀಡಿದರು. ಮಹಾತ್ಮ ಗಾಂಧಿಯವರಿಗೆ ಪುಷ್ಪಗುಚ್ಛ ನಮನ ಸಲ್ಲಿಸಿದನಂತರ ಜಂತರ್‌ಮಂತರ್‌ಗೆ ಬಂದು ತಮ್ಮ ಉಪವಾಸ ಸತ್ಯಾಗ್ರಹ ಮುಂದುವರಿಸಿದರು.

ಅಕ್ಟೋಬರ್ ೬ರ ರಾತ್ರಿ ದಿಲ್ಲಿ ಪೊಲೀಸರು ಅವರನ್ನು ಬಂಧಿಸಿದಾಗ ಅವರ ನಾಡಿಮಿಡಿತ ಸಾಮಾನ್ಯ ನಾಡಿಮಿಡಿತ ಪ್ರಮಾಣ ೬೦-೮೦ಕ್ಕಿಂತ ಕಮ್ಮಿ ಎಂದರೆ, ೪೭ ಆಗಿದ್ದಿತು. ಮೈ ತಾಪವೂ ಹೆಚ್ಚಿದ್ದಿತು. ೨೦೦೦ದ ನವೆಂಬರ್ ೨ರಂದು ನಡೆದ ಒಂದು ಘಟನೆ ಅವರನ್ನು ಉಪವಾಸ ಸತ್ಯಾಗ್ರಹ ಕೈಗೊಳ್ಳಲು ಪ್ರೇರೇಪಿಸಿದ್ದಿತು. ಅಂದು ೮ನೇ ಅಸ್ಸಾಮ್ ರೈಫಲ್ಸ್‌ನ ಒಂದು ತಂಡ ಮಾರುಕಟ್ಟೆ ಪ್ರದೇಶದಲ್ಲಿ ಯದ್ವಾತದ್ವಾ ಗುಂಡು ಹಾರಿಸಿ ೧೦ ಜನರನ್ನು ಕೊಂದಿದ್ದಿತು. ಸತ್ತವರಲ್ಲಿ ೬೨ ವಯಸ್ಸಿನ ಒಬ್ಬ ವೃದ್ಧೆಯೂ ಇದ್ದರು. ಈ ಕ್ರೂರ ಹತ್ಯಾಕಾಂಡದಲ್ಲಿ ೪೨ ಮಂದಿ ಗಾಯಗೊಂಡಿದ್ದರು.

ಎರಡು ವರ್ಷಗಳ ಹಿಂದೆ ನಡೆದ ಮತ್ತೊಂದು ಘಟನೆಯನ್ನೂ ನೆನಪಿಸಿಕೊಳ್ಳಬಹುದು. ಅಂದು ತಂಗ್‌ಜಾಮ್ ಮನೋರಮ ಎಂಬಾಕೆ ಅಪಹೃತರಾದರು. ಆಕೆಯ ಶವ ಅಸ್ಸಾಮ್ ರೈಫಲ್ಸ್‌ನ ಶಿಬಿರದ ಬಳಿ ಪತ್ತೆಯಾಯಿತು. ಈ ಘಟನೆ ಇಡೀ ಮಣಿಪೂರ್ ನಗರವನ್ನೇ ಭುಗಿಲೆಬ್ಬಿಸಿತು. ಕುಖ್ಯಾತ ಎಎಫ್‌ಎಸ್‌ಪಿಎ ಕಾನೂನು ಪ್ರಕರಣವನ್ನು ಇಡೀ ರಾಷ್ಟ್ರದ ಗಮನಕ್ಕೆ ತಂದಿತು.

ಈ ಪ್ರತಿಭಟನೆಯ ಫಲವಾಗಿ ಪ್ರಧಾನಮಂತ್ರಿ ಮನಮೋಹನ ಸಿಂಗ್‌ರು ವಿಚಾರಣಾ ಸಮಿತಿಯೊಂದನ್ನು ನೇಮಿಸುವ ಒತ್ತಾಯಕ್ಕೊಳಗಾದರು. ನ್ಯಾಯಮೂರ್ತಿ ಬಿ. ಪಿ. ಜೀವನ್ ರೆಡ್ಡಿ ಈ ಸಮಿತಿಯ ಮುಖ್ಯಸ್ಥರಾಗಿದ್ದರು. ಎಎಫ್‌ಎಸ್‌ಪಿಎ ಕಾನೂನಿನಲ್ಲಿರುವ ಅಂಶಗಳನ್ನು ಪರಿಶೀಲಿಸಿ ಮಾನವ ಹಕ್ಕುಗಳ ಸಂರಕ್ಷಣೆಯೇ ತನ್ನ ಕರ್ತವ್ಯವಾಗುಳ್ಳ ಭಾರತ ಸರಕಾರಕ್ಕೆ (೧) ಈ ಕರ್ತವ್ಯದ ಪರಿಪಾಲನೆಗೆ ಅನುಗುಣವಾಗುವಂತೆ ಸಶಸ್ತ್ರ ಪಡೆಗಳ ವಿಶೇಷಾಧಿಕಾರ ಕಾಯಿದೆಯಲ್ಲಿ ತಿದ್ದುಪಾಟುಗಳನ್ನು ತರಬೇಕೆ ಅಥವಾ (೨) ಈ ಕಾನೂನಿನ ಸ್ಥಳದಲ್ಲಿ ಬೇರೊಂದು ಹೆಚ್ಚು ಮಾನವೀಯವಾದ ಕಾನೂನನ್ನು ಜಾರಿಗೆ ತರಬೇಕೆ, ಎಂಬ ಬಗೆಗೆ ಸಲಹೆ ನೀಡುವುದು ಈ ಸಮಿತಿಯ ಗುರಿಯಾಗಿದ್ದಿತು.

ಈ ಕಾನೂನು ಜಾರಿಯಲ್ಲಿರಲು ಯಾವುದೇ ಸಮರ್ಥನೆ ಇಲ್ಲವೆಂದು ಸಮಿತಿ ಸರಿಯಾಗಿಯೇ ಕಂಡುಕೊಂಡಿತು. ಈ ಕಾನೂನು ''ಯಾವ ಕಾರಣಕ್ಕೋ ದಬ್ಬಾಳಿಕೆಯ ಸಂಕೇತವಾಗಿಬಿಟ್ಟಿದೆ, ಜನರ ದ್ವೇಷಕ್ಕೆ ಪಾತ್ರವಾಗಿದೆ, ಜನರನ್ನು ವಿಭಜಿಸುವ ದಬ್ಬಾಳಿಕೆಯ ಅಸ್ತ್ರವಾಗಿಬಿಟ್ಟಿದೆ'' ಎಂದು ಸಮಿತಿ ಸ್ಪಷ್ಟಪಡಿಸಿತು.

ಶರ್ಮಿಳಾ ಅವರ ಅಭಿಪ್ರಾಯವೂ ಇದೇ ಆಗಿದ್ದಿತು. ೨೦೦೬ರ ಅಕ್ಟೋಬರ್ ೬ರಂದು ನಡುರಾತ್ರಿ ದಿಲ್ಲಿ ಪೊಲೀಸರು ಅವರನ್ನು ದಸ್ತಗಿರಿ ಮಾಡಿದಾಗ ಅವರು ನಿಶ್ಶ ಧ್ವನಿಯಲ್ಲಿ ಆದರೆ ಖಡಾಖಂಡಿತ ಮಾತುಗಳಲ್ಲಿ ಹೇಳಿದರು : ''ನಾನು ನನ್ನ ನಿಲುವನ್ನು ಸ್ಪಷ್ಟಪಡಿಸಿದ್ದೇನೆ. ನಾನು ಇದರಿಂದ ಹಿಂದೆ ಸರಿಯುವುದಿಲ್ಲ. ಹೋರಾಟ ದೀರ್ಘವಾಗಬಹುದು, ಇಲ್ಲವೇ, ಹ್ರಸ್ವವಾಗಬಹುದು. ಆದರೆ ಸತ್ಯವೇ ಗೆಲ್ಲುವುದು. ಎಎಫ್‌ಎಸ್‌ಪಿಎ ಕಾನೂನನ್ನು ರದ್ದುಗೊಳಿಸಲೇಬೇಕಾಗುವುದು.''

ಪ್ರಸ್ತುತದಲ್ಲಿ ಪ್ರತಿಭಟನೆಗಳು ಹಲವು ಸಾಂಕೇತಿಕ ಕ್ರಿಯೆಗಳಿಗಷ್ಟೆ ಸೀಮಿತವಾಗಿವೆ. ಪ್ರತಿಭಟನಾ ಭಾಷೆಯೂ ಹೆಚ್ಚು ಹೆಚ್ಚಾಗಿ ಕೃತಕ ಸ್ವರೂಪ ತಳೆದಿದೆ. ಇಂತಹ ಕಾಲಘಟ್ಟದಲ್ಲಿ ಶರ್ಮಿಳಾ ಅವರು ಪ್ರತಿಭಟನೆಗಳಿಗೆ ಹೊಸ ಉತ್ಸಾಹ, ಆಶಾಭಾವನೆ ಗಳನ್ನು ಒದಗಿಸಿದ್ದಾರೆ. ಇಲ್ಲಿ ಗಮನಕ್ಕೆ ಬರುವ ಒಂದು ವಿಷಾದದ ಅಂಶವೆಂದರೆ ಯಾವುದೇ ರಾಜಕೀಯ ಸಂಘಟನೆಯೂ ಸಾಂಕೇತಿಕವಾಗಿಯಾದರೂ ಸರಿ ಶರ್ಮಿಳಾ ಅವರೊಂದಿಗೆ ಕೈಜೋಡಿಸದಿರುವುದು. ಅವರು ಉಪವಾಸ ಸತ್ಯಾಗ್ರಹ ಕೈಗೊಂಡ ಸಂದರ್ಭದಲ್ಲಿ ರಾಜಕೀಯ ಪಕ್ಷಗಳಿಂದ ಯಾರೊಬ್ಬರೂ ಅವರ ಬದಿ ಇರಲಿಲ್ಲ. ಅವರ ಜೊತೆಗಿದ್ದವರೆಲ್ಲ ನಾಗರಿಕ ಸಮಾಜ ಸೇವಾಸಂಸ್ಥೆಗಳ ಕೆಲವು ವ್ಯಕ್ತಿಗಳು ಮತ್ತು ದಿಲ್ಲಿಯ ನಾನಾ ಕಾಲೇಜುಗಳಲ್ಲಿ ಓದುತ್ತಿದ್ದ ಮಣಿಪುರದ ಎಳೆಯ ಬಾಲಕ-ಬಾಲಕಿಯರು, ಅಷ್ಟೆ.

ಆದರೇನಂತೆ, ಶರ್ಮಿಳಾ ಇದಾವುದರಿಂದಲೂ ಬಾಧಿತರಾಗಿರಲಿಲ್ಲ. ಆ ಕಳಂಕಿತ ಕಾನೂನಿನ ವಿರುದ್ಧ ಹೋರಾಡಲು ಅವರು ದೃಢನಿರ್ಧಾರ ಮಾಡಿದ್ದರು. ಎಎಫ್‌ಎಸ್‌ಪಿಎ ಕಾನೂನು ಸಹ ಬ್ರಿಟಿಷರು ತಂದು ಅನಂತರ ರದ್ದುಪಡಿಸಿದಂಥ ರೌಲಟ್ ಆ್ಯಕ್ಟ್‌ನಂತೆಯೇ ಅದೇ ಗತಿ ಕಾಣುವ ದಿನ ಬಂದೇ ಬರುವುದೆಂದು ಶರ್ಮಿಳಾ ಅವರು ಇಂದೂ ದೃಢವಾಗಿ ನಂಬಿದ್ದಾರೆ. ಶರ್ಮಿಳಾ ಒಬ್ಬಂಟಿ ಕನಸುಗಾರ್ತಿ ಎಂದೇನೂ ನನಗನಿಸದು. ಇದೇ ಕನಸು ಕಾಣುತ್ತಿರುವ ಇನ್ನೂ ಅನೇಕರಿದ್ದಾರೆಂದು ನಾನು ಮನಗಂಡಿದ್ದೇನೆ. ಆದರೂ ಶರ್ಮಿಳಾ ಒಬ್ಬರಷ್ಟೇ ಧ್ಯೇಯ ನಿಷ್ಠರಾಗಿ ಆ ಕುತ್ಸಿತ ಕಾನೂನಿನ ವಿರುದ್ಧ ಅತ್ಯಂತ ತಾಳ್ಮೆಯಿಂದ ಹಾಗೂ ಕಟಿಬದ್ಧರಾಗಿ ಹೋರಾಡುವ ಧೈರ್ಯ ತೋರಿದ್ದಾರೆ. ದಿಲ್ಲಿಗೆ ವಿಮಾನದಿಂದ ಬಂದಿಳಿದನಂತರ ಶರ್ಮಿಳಾ ಅವರು ಗಾಂಧಿಯವರ ಸಮಾಧಿ ಸ್ಥಳಕ್ಕೆ ಹೋಗಿ ಮಹಾತ್ಮರಿಗೆ ಪುಷ್ಪ ಕಾಣಿಕೆ ಸಲ್ಲಿಸಿದರು. ಅದು ಜರುಗಿದ್ದು ಅಕ್ಟೋಬರ್ ೪ರಂದು. ಬಾಪು ಅವರ ಆದರ್ಶವನ್ನು ನಿಷ್ಠೆಯಿಂದ ಪಾಲಿಸುತ್ತಿರುವ ಈಕೆ ಕೆಲವು ದಿನಗಳ ಮುಂಚೆ ದಿಲ್ಲಿಗೆ ಆಗಮಿಸಿದ್ದರೆ ಪೊಲೀಸರು ಅವರಿಗೆ ರಾಜಘಾಟ್‌ಗೆ ಹೋಗಲೂ ಬಿಡುತ್ತಿರಲಿಲ್ಲ. ಪ್ರತಿ ವರ್ಷವೂ ಅಕ್ಟೋಬರ್ ೨ರಂದು ರಾಜಘಾಟ್‌ಗೆ ಭೇಟಿ ನೀಡುವ ಕೃತಕ ಹವ್ಯಾಸ ಇಟ್ಟುಕೊಂಡಿರುವ ಅಧಿಕಾರಾರೂಢ ಮೋಸಗಾರರು ಈ ವರ್ಷವೂ ಅದನ್ನು ನಿರಾತಂಕವಾಗಿ ನೆರವೇರಿಸುವುದನ್ನು ಖಚಿತಪಡಿಸಲು ಪೊಲೀಸರು ಶರ್ಮಿಳಾ ಅವರನ್ನು ಅಲ್ಲಿಗೆ ಹೋಗದಂತೆ ತಡೆಹಿಡಿಯುವುದು ಖಂಡಿತವಿದ್ದಿತು !

ಮೂಲ : **ವಿ. ಕೃಷ್ಣ ಅನಂತ್**, ಅಡ್ವೊಕೇಟ್ ಅಂಡ್ ಎನ್‌ಎಮ್‌ಎಮ್‌ಎಲ್ ಫೆಲೊ
ಎಸ್-೧, 'ಬಿ' ಬ್ಲಾಕ್ ಲ್ಯಾಂಡ್ ಮಾರ್ವೆಲ್ ಗಾರ್ಡನ್, ರಾಜಾಜಿನಗರ, ಚೆನ್ನೈ - ೬೦೦ ೪೧

ಅನುವಾದ : **ಕೆ. ಎಲ್. ಗೋಪಾಲಕೃಷ್ಣ ರಾವ್**, ೨೬೧, ೨ನೇ ಅಡ್ಡರಸ್ತೆ, ಸಿ. ಟಿ. ಬೆಡ್
ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ...ಶ್ವರೂಪ ದರ್ಶನ

...ಳೂರಿನ ಜವಾಹರ್‌ಲಾಲ್ ನೆಹರು ತಾರಾಲಯ ಪ್ರದರ್ಶನದ ಸಾಹಿತ್ಯದ
...ಲೆ ಆಧರಿಸಿದ ಲೇಖನ ಪ್ರಸ್ತುತಪಡಿಸಲಾಗಿದೆ.

...ಗ್ಲಿಷ್ ಮೂಲ : **ಡಾ|| ಸಿ. ವಿ. ವಿಶ್ವೇಶ್ವರ**
...ತ ಅನುವಾದ : **ಶ್ರೀ ಅಬ್ದುಲ್ ರೆಹಮಾನ್ ಪಾಷಾ**

> ವಿಶ್ವವು ವಿಕಸನ ಹೊಂದುತ್ತಿರುವುದರಿಂದ ನಾವು ಸಹಜವಾಗಿಯೇ ಕಾಲಮಾನದಲ್ಲಿ ಹಿಂದಕ್ಕೂ ಪಯಣಿಸಿ ಅದು ನಡೆದು ಬಂದ ಹೆಜ್ಜೆಗಳನ್ನು ಗುರ್ತಿಸಬಹುದು. ಗ್ಯಾಲಕ್ಸಿಗಳು ವೇಗದಿಂದ ಪರಸ್ಪರ ದೂರ ಸರಿಯುತ್ತಿರುವುದನ್ನು ಕಾಣಬಹುದು. ಆದ್ದರಿಂದ ನಾವು ಭೂತಕಾಲದಲ್ಲಿ ಕ್ರಮೇಣ ಹಿಂದಕ್ಕೆ ಸರಿದುಹೋದಂತೆಲ್ಲ, ಗ್ಯಾಲಕ್ಸಿಗಳು ಪರಸ್ಪರ ಹತ್ತಿರವಿರುವುದನ್ನು ಕಾಣಬೇಕು. ಹಾಗೆಯೇ ಇನ್ನೂ ಹಿಂದುವರೆಯುತ್ತ ಹೋದರೆ ಕೊನೆಯಲ್ಲಿ ವಿಶ್ವದ ಸಕಲ ವಸ್ತುವೂ, ಎಲ್ಲ ವಿಕಿರಣವೂ ಒಂದೆಡೆಯಲ್ಲಿ ಸಾಂದ್ರೀಕೃತವಾದ ಸ್ಥಿತಿಗೆ ಹೋಗಿ ತಲುಪುತ್ತೇವೆ.

ಸಾವಿರಾರು ವರ್ಷಗಳಿಂದಲೂ ಆಗಸದ ಆಗುಹೋಗುಗಳ ಹಾಗೂ ಆಕಾಶಕಾಯಗಳ ವಿಷಯದಲ್ಲಿ ಮಾನವನ ಕೌತುಕ, ಕುತೂಹಲ, ಆಸಕ್ತಿಗಳು ವೃದ್ಧಿಯಾಗುತ್ತಲೇ ಬಂದಿವೆ. ಇದರ ...ಮವೆಂದರೆ ವಿಶ್ವ ವಿಜ್ಞಾನದಲ್ಲಿ ನಡೆದಿರುವ ಗಹನವಾದ ...ೀಧನೆ; ವಿಶ್ವದ ರೂಪ, ವಿಕಸನಗಳ ಅರಿವು.

...ಸರ್ಗಿಕ ನಿಯಮಗಳ ಅರಿವಿಲ್ಲದ ಪ್ರಾಚೀನ ನಾಗರಿಕತೆಗಳ ಜನರಿಗೆ ...ವು ದೇವ-ದೇವತೆಗಳ, ಭೂತ ಪ್ರೇತಗಳ ಆವಾಸಸ್ಥಾನವಾಗಿತ್ತು. ಈ ...ರ ಸಾಮ್ರಾಜ್ಯವೇ ವಿಶ್ವವನ್ನು ಆಳುತ್ತಿತ್ತು. ನಿಸರ್ಗವನ್ನು ನಿಯಂತ್ರಿಸುತ್ತಿತ್ತು. ...ವಾಗ, ವಿಶ್ವವನ್ನು ಚಿತ್ರಿಸುವ ಆಗಿನ ಮಾದರಿಗಳಿಗೆಲ್ಲ ವಿವಿಧ ...ತಿಗಳ ಪುರಾಣಗಳೇ ಆಧಾರವಾಗಿದ್ದುದರಲ್ಲಿ ಆಶ್ಚರ್ಯವೇನಿಲ್ಲ! ... ಒಂದೆರಡು ಉದಾಹರಣೆಗಳನ್ನು ನೋಡೋಣ.

...ಪ್ರಾಚೀನ ಈಜಿಪ್ಟಿಯನ್ನರ ನಂಬಿಕೆಯಂತೆ, ನಕ್ಷತ್ರಗಳಿಂದ ಆಭೂಷಿತಳಾದ ... ಆಕಾಶ ದೇವತೆ 'ನುತ್' ಬಾನಿಗೆ ತಾಗಿಕೊಂಡಂತೆ, ಭೂಮಿಯ ... ಬಾಗಿರುತ್ತಾಳೆ. ಸೂರ್ಯದೇವ 'ರಾ' ತನ್ನ ಹರಿಗೋಲಿನಲ್ಲಿ ಆಕೆಯ ...ಯದ ಮೇಲೆ ತೇಲುತ್ತಾನೆ. ಪ್ರತಿ ದಿನದ ಕೊನೆಯಲ್ಲಿ ಮೃತ್ಯುವಿನ ... ಲೋಕ 'ಅಮೆಂತಿ'ಯಲ್ಲಿ ಮುಳುಗುತ್ತಾನೆ. ಪ್ರತಿ ಬೆಳಗ್ಗೆ ಪುನರ್ಜನ್ಮ ... ಪೂರ್ವ ದಿಗಂತದಲ್ಲಿ ಮೇಲೇರುತ್ತಾನೆ.

...ರತದ ಪೌರಾಣಿಕ ನಂಬಿಕೆಯೊಂದರ ಪ್ರಕಾರ ಭೂಮಿಯನ್ನು ...ಲೋಕದ ಆನೆಗಳು ಹೊತ್ತು ನಿಂತಿವೆ. ಈ ಆನೆಗಳ ಆಧಾರ ಒಂದು ... ಅದಕ್ಕೆ ಆಧಾರ ಒಂದು ಬೃಹತ್ ಸರ್ಪ.

...ೀಕರು ನಕ್ಷತ್ರ ಪುಂಜಗಳಲ್ಲಿ ತಮ್ಮ ಪುರಾಣಗಳ ನಾಯಕ, ನಾಯಕಿಯರನ್ನು ಚಿತ್ರಿಸಿದರು; ಕ್ರೂರ ಮೃಗಗಳನ್ನು, ರಾಕ್ಷಸರನ್ನು ಕಂಡರು. ಪ್ರತಿ ರಾತ್ರಿ ಅಂತರಿಕ್ಷ ನಿವಾಸಿಗಳು ಆಗಸದ ವಿಶಾಲ ರಂಗಸ್ಥಳದಲ್ಲಿ ಪುರಾಣದ ಮಹಾಕಾವ್ಯಗಳನ್ನು ಅಭಿನಯಿಸುತ್ತಿರುವಂತೆ ಭಾವಿಸುತ್ತಿದ್ದರು.

ಅಂತಹ ಒಂದು ಕಥೆ ಹೀಗಿದೆ :

ರಾಜಾ 'ಸೆಫೆಯುಸ್' ತನ್ನ ರೂಪವತಿ ರಾಣಿ 'ಕ್ಯಾಸಿಯೋಪಿಯ' ಮತ್ತು ಮುದ್ದಿನ ರಾಜಕುಮಾರಿ 'ಆಂಡ್ರೋಮಿಡ'ರೊಂದಿಗೆ ಸುಖವಾಗಿದ್ದ. ಹೀಗಿರುವಾಗ ಒಮ್ಮೆ, ತಮ್ಮ ನಾಡಿನ ಪ್ರಜೆಗಳನ್ನು ಕಾಪಾಡಲು ಕ್ರೂರ ಬೃಹತ್ ಜಲಚರವೊಂದಕ್ಕೆ ತಮ್ಮ ಮುದ್ದು ಮಗಳನ್ನು ಬಲಿಕೊಡಬೇಕಾಗಿ ಬರುತ್ತದೆ. ಅದೃಷ್ಟವಶಾತ್ 'ಪರ್‌ಸೆಯುಸ್' ಅವರ ರಕ್ಷಣೆಗೆ ಬರುತ್ತಾನೆ. ಒಂದು ಕೈಯಲ್ಲಿ ಖಡ್ಗ, ಇನ್ನೊಂದರಲ್ಲಿ ಹಾವುಗೂದಲಿನ ಭಯಂಕರ ರಾಕ್ಷಸಿ 'ಮೆಡ್ಯೂಸ'ಳ ಚೆಂಡಾಡಿ ರಕ್ತ ಸೋರುತ್ತಿರುವ ರುಂಡ, ವೀರ ರಾಜಕುಮಾರ ಬೃಹತ್ ಜಲಚರವನ್ನು ಸಂಹರಿಸುತ್ತಾನೆ. ಆಂಡ್ರೋಮಿಡಳನ್ನು ವರಿಸುತ್ತಾನೆ. ಅವರ ಹೆಸರುಗಳನ್ನೇ ಪಡೆದ ನಕ್ಷತ್ರ ಪುಂಜಗಳಿಂದಾಗಿ ಈ ಮಹಾ ನಾಟಕದ ಪಾತ್ರಗಳು ಅಮರವಾಗಿವೆ.

ಇಂತಹ ಒಟ್ಟು ೮೮ ನಕ್ಷತ್ರ ಪುಂಜಗಳು ಆಧುನಿಕ ಖಗೋಳಶಾಸ್ತ್ರಕ್ಕೂ ನಿರ್ದಿಷ್ಟ ಚೌಕಟ್ಟನ್ನು ಒದಗಿಸಿವೆ. ನಮ್ಮ ಈ ವಿಶ್ವಪರ್ಯಟನದ ಬೇರೊಂದು ಹಂತದಲ್ಲಿ ನಾವು ಮತ್ತೆ ಆಂಡ್ರೋಮಿಡ ನಕ್ಷತ್ರ ಪುಂಜಕ್ಕೆ ಹಿಂದಿರುಗೋಣವಂತೆ.

ಖಗೋಳ ಶಾಸ್ತ್ರದ ಯೌವನಾವಸ್ಥೆಯಲ್ಲಿ ಜ್ಞಾನದ ಹೊಳೆಗೆ ಹಲವು ದೇಶಗಳಿಂದ ತೊರೆಗಳು ಸೇರಿಕೊಂಡವು. ಚೀನಿಯರು ಗಗನವನ್ನು ಸೂಕ್ಷ್ಮವಾಗಿ ವೀಕ್ಷಿಸಿದರು. ೧೦೫೪ರ ನಕ್ಷತ್ರ ಸ್ಫೋಟದ ಖ್ಯಾತ ಸೂಪರ್‌ನೋವಾವೂ ಸೇರಿದಂತೆ ಆಗಸದಲ್ಲಿ ನಡೆದ ಹಲವು ಘಟನೆಗಳನ್ನು ದಾಖಲಿಸಿದರು. ಅರಬರು ಆಸ್ಟ್ರೋಲೇಬ್‌ನಂತಹ ಸಾಧನಗಳಿಂದ ಸೂಕ್ಷ್ಮ ಮಾಪನಗಳನ್ನು ಮಾಡಿದರು. ಆಲ್‌ಡೆಬರಾನ್, ಆಲ್‌ಗೋಲ್‌ನಂತಹ ನಕ್ಷತ್ರಗಳಿಗೆ ಈಗಲೂ ಅರಬರು ಇಟ್ಟ ಹೆಸರುಗಳೇ ಜಾರಿಯಲ್ಲಿವೆ. ಭಾರತದಲ್ಲಿಯೂ ಆರ್ಯಭಟ, ವರಾಹಮಿಹಿರ, ಬ್ರಹ್ಮಗುಪ್ತ ಹಾಗೂ ಭಾಸ್ಕರರಂಥ ವಿದ್ವಾಂಸರು ಗ್ರಹಗಳ ಚಲನೆ, ಗ್ರಹಣ ಮುಂತಾದ ಘಟನೆಗಳ ಸವಿವರ ಲೆಕ್ಕಾಚಾರವನ್ನು ಮಾಡಿದರು.

ಆರಂಭದ ಖಗೋಳ ಶಾಸ್ತ್ರಜ್ಞರಿಗೆ ತಮ್ಮ ವಿಶ್ವಮಾದರಿಯಲ್ಲಿ ಕೆಲವೇ ಕೆಲವು ಆಕಾಶಕಾಯಗಳಿಗೆ ಸ್ಥಾನ ಕಲ್ಪಿಸಿದ್ದರೆ ಸಾಕಾಗುತ್ತಿತ್ತು. ನಕ್ಷತ್ರಗಳ ಸ್ಥಿರ ವಿನ್ಯಾಸದ ಹಿನ್ನೆಲೆಯಲ್ಲಿ ಚಲಿಸುವ ಸೂರ್ಯ, ಚಂದ್ರ ಮತ್ತು ಗ್ರಹಗಳು, ಇವಿಷ್ಟೆ.

ಭೂಮಿಯು ವಿಶ್ವದ ಕೇಂದ್ರದಲ್ಲಿ ಸುಸ್ಥಿರವಾಗಿದ್ದು, ಸೂರ್ಯ, ಚಂದ್ರ ಹಾಗೂ ಗ್ರಹಗಳು ಭೂಮಿಯ ಸುತ್ತ ಸುತ್ತುತ್ತವೆ – ಎಂಬ ಊಹೆ ಆಗ ಸಹಜವಾಗಿತ್ತು. ಇದು ವಿಶ್ವದ ಭೂ ಕೇಂದ್ರೀಯ ಮಾದರಿ. ಈ ಮಾದರಿಯು ಅತ್ಯಂತ ಸುಧಾರಿತ ರೂಪವನ್ನು ಟಾಲೆಮಿ (ಕ್ರಿ.ಶ. ೯೦-೧೬೮) ಕ್ರಿ.ಶ. ೨ನೇ ಶತಮಾನದ ಹೊತ್ತಿಗೆ ಪ್ರತಿಪಾದಿಸಿದ. ಭೂಮಿಯ ಸುತ್ತ ಪರಿಭ್ರಮಿಸುವ ಆಕಾಶಕಾಯಗಳು ಕೇಂದ್ರದ ಸುತ್ತ ಸುತ್ತುವ ಪಾರದರ್ಶಕ ಗೋಳಗಳಿಗೆ ಅಂಟಿ ಕೊಂಡಿವೆ ಎಂದೂ ನಕ್ಷತ್ರಗಳು ಅತ್ಯಂತ ಹೊರಗಿನ ಗೋಳಕ್ಕೆ ಅಂಟಿಕೊಂಡಿವೆ ಎಂದೂ ಊಹಿಸಿದರು. ಕೆಲವೊಮ್ಮೆ ಆಗಂತುಕರಾಗಿ ಈ ಚೌಕಟ್ಟಿನಲ್ಲಿ ನುಗ್ಗುವ ಧೂಮಕೇತುಗಳ ಬಗ್ಗೆ ಅವುಗಳ ಚಲನೆಯಿಂದ ಈ ಪಾರದರ್ಶಕ



ಗೋಳಗಳು ಒಡೆದು ಹೋಗದೇ ಇರುವುದರ ಬಗ್ಗೆಯೂ ಕೆಲವರು ಚಿಂತಿಸಿದರು.

ಹದಿನೈದು ಶತಮಾನಗಳ ಕಾಲ ಈ ಭೂ ಕೇಂದ್ರೀಯ ವಿಶ್ವ ಮಾದರಿಯೇ ಖಗೋಳ ಕ್ಷೇತ್ರವನ್ನು ಆಳಿತು. ಆಗ ಆಯಿತು, ಕೊಪರ್ನಿಕಸ್‌ನ (೧೪೭೩ - ೧೫೪೩) ಆಗಮನ.

ಆತ ಪ್ರತಿಪಾದಿಸಿದ ಸೌರ ಕೇಂದ್ರೀಯ ಮಾದರಿಯಲ್ಲಿ ಸೂರ್ಯನಿಗೆ ಕೇಂದ್ರ ಪೀಠಾಸನವಾಯಿತು. ಈ ಮಾದರಿಯಲ್ಲಿ ಗ್ರಹಗಳೆಲ್ಲವೂ, ಅಂದರೆ ಬುಧ, ಶುಕ್ರ, ಮಂಗಳ, ಗುರು ಹಾಗೂ ಶನಿ ಗ್ರಹಗಳು ಸೂರ್ಯನ ಸುತ್ತ ಪರಿಭ್ರಮಿಸಿದವು. ತನ್ನ ಉಪಗ್ರಹ ಚಂದ್ರನೊಂದಿಗೆ ಇರುವ ಭೂಮಿಯೂ ಸಹ ಸೂರ್ಯನ ಸುತ್ತ ಪ್ರದಕ್ಷಿಣೆ ಮಾಡುವ ಒಂದು ಗ್ರಹ. ದೂರದರ್ಶಕಗಳ ಮೂಲಕ ಮಾತ್ರ ಗೋಚರಿಸುವಷ್ಟು ಅನತಿ ದೂರದಲ್ಲಿರುವ ಯುರೇನಸ್ ಹಾಗೂ ನೆಪ್ಚೂನ್ ಗ್ರಹಗಳೂ ಸೌರ ಕುಟುಂಬದಲ್ಲಿ ಇವೆ ಎಂಬುದು ನಮಗೀಗ ತಿಳಿದಿದೆ. ಈಚೆಗೆ ಪ್ಲೂಟೋವನ್ನು ಕುಬ್ಜ ಗ್ರಹ ಎಂದು ಪರಿಗಣಿಸುತ್ತಾರೆ.

ಸೌರಕೇಂದ್ರೀಯ ಮಾದರಿಯನ್ನು ಮಂಡಿಸುವ ಮುಂಚೆ ಮನುಷ್ಯ ವಿಶ್ವದ ಕೇಂದ್ರೀಯ ಸಿಂಹಾಸನದಲ್ಲಿ ಆಸೀನನಾಗಿದ್ದ. ಕೊಪರ್ನಿಕಸ್ ಒಂದೇ ಹೊಡೆತದಲ್ಲಿ ಬಹೋತ್ಪ್ರೇಕ್ಷಿತ ಸ್ಥಾನದಿಂದ ಅವನನ್ನು ಪದಚ್ಯುತಿಗೊಳಿಸಿದ.

ಹದಿನೇಳನೇ ಶತಮಾನದಲ್ಲಿ ಆಕಾಶ ವೀಕ್ಷಣೆಗಾಗಿ ಗೆಲಿಲಿಯೊ ದೂರದರ್ಶಕವನ್ನು ಉಪಯೋಗಿಸಿಕೊಂಡ. ಮನೆಯಲ್ಲಿ ತಯಾರಿಸಿದ ತನ್ನ ಪುಟ್ಟ ದೂರದರ್ಶಕದ ಮೂಲಕ ಗೆಲಿಲಿಯೊ ಚಂದ್ರನ ಮೇಲ್ಮೈಯಲ್ಲಿ ಪರ್ವತಗಳನ್ನು, ಕುಳಿಗಳನ್ನು ಗುರ್ತಿಸಿದ. ಶುಕ್ರಗ್ರಹದ ಪಕ್ಷಗಳು, ಗುರುಗ್ರಹದ ಉಪಗ್ರಹಗಳನ್ನು ವೀಕ್ಷಿಸಿದ; ಆವರೆಗೆ ಕಂಡರಿಯದ ಅಗಣಿತ ತಾರೆಗಳನ್ನು ಕಂಡ.

ಗೆಲಿಲಿಯೊ ಮಾಡಿದ ವೀಕ್ಷಣೆಗಳು ವಿಶ್ವ ವಿಜ್ಞಾನದ ತ್ರಿವಿಕ್ರಮ ಹೆಜ್ಜೆ. ನಾನೂರು ವರ್ಷಗಳ ಹಿಂದಾದ ಈ ಮಹತ್ವದ ಬೆಳವಣಿಗೆಯ ಸಂತಸದ ನೆನಪಿಗೆಂದೇ ೨೦೦೯ನ್ನು ಅಂತರರಾಷ್ಟ್ರೀಯ ಖಗೋಳ ವರ್ಷವೆಂದು ಆಚರಿಸಿದ್ದೇವೆ.

ಗೆಲಿಲಿಯೋನ ಸಮಕಾಲೀನನಾದ ಇನ್ನೊಬ್ಬ ಮಹಾ ವಿಜ್ಞಾನಿ ಯೊಹಾನಸ್ ಕೆಪ್ಲರ್ (೧೫೭೧-೧೬೩೦). ಈತನು ಗ್ರಹಗಳ ಚಲನೆಯ ಕುರಿತಾದ ಮೂರು ನಿಯಮಗಳನ್ನು ಕಂಡುಹಿಡಿದದ್ದು ಅದ್ಭುತವಾದ ಸಾಧನೆ. ಈ ಸಂಶೋಧನೆ ಯಿಂದ ಪ್ರಕೃತಿ ನಿಯಮಗಳನ್ನು ನಿಖರವಾಗಿ ಗಣಿತ ಶಾಸ್ತ್ರದ ಚೌಕಟ್ಟಿನಲ್ಲಿ ಅಳವಡಿಸುವ ರೀತಿ ಪ್ರಾರಂಭ ವಾಯಿತೆಂದು ಹೇಳಬಹುದು. ವಿಜ್ಞಾನ ಪ್ರಪಂಚದಲ್ಲೇ ಅಗ್ರಸ್ಥಾನವನ್ನು ಪಡೆದವನೆಂದರೆ ಐಸಾಕ್ ನ್ಯೂಟನ್ (೧೬೪೨ - ೧೭೨೭). ಈತನಿಗೆ ಆಲ್ಬರ್ಟ್ ಐನ್‌ಸ್ಟೈನ್ ಮಾತ್ರ ಸಮಸಾಟಿಯೆಂದು ಹೇಳಬಹುದು. ನ್ಯೂಟನ್, ತನ್ನ ಮೂರು ಚಲನ ನಿಯಮಗಳು ಹಾಗೂ ಗುರುತ್ವಾಕರ್ಷಣೆ ನಿಯಮದ ಆಧಾರದ ಮೇಲೆ ಆ ಕಾಲದ ಖಗೋಳ ವೀಕ್ಷಣೆಗಳೆಲ್ಲವನ್ನೂ, ಉದಾಹರಣೆಗೆ, ಚಂದ್ರ, ಗ್ರಹಗಳು ಮತ್ತು ಧೂಮಕೇತುಗಳಂತಹ ಆಕಾಶಕಾಯಗಳ ಭ್ರ... ಭೂಮಿಯ ಆಕಾರ, ಸಮುದ್ರದ ಉಬ್ಬರವಿಳಿತ... ವಿವರಿಸಿ ಸ್ಪಷ್ಟಪಡಿಸಿದನು. ಇದು ವಿಶ್ವ ವಿಜ್ಞಾ... ಪಥದಲ್ಲಿ ಸಿದ್ಧಾಂತವು ಸಾಧಿಸಿದ ಅ... ಮಹತ್ತರವಾದ ಮುನ್ನಡೆ.

ಗೆಲಿಲಿಯೊ ಕಾಲದಿಂದಲೂ ಅನೇಕ ದೂ... ಶಕ್ತಿಯುತ, ಸುಧಾರಿತ ದೂರದರ್ಶಕಗಳು ರಚಿತವಾ... ಬಳಕೆಗೂ ಬಂದಿವೆ. ಕವಲೂರಿನಲ್ಲಿರುವ ವೇಣು... ದೂರದರ್ಶಕ, ಮೌಂಟ್ ವಿಲ್ಸನ್ ಹಾಗೂ ಪಾಲೊಮ... ನಲ್ಲಿರುವ ದೂರದರ್ಶಕಗಳು ಈ ವರ್ಗಕ್ಕೆ ಸೇರಿ... ದೃಷ್ಟಿ ಗೋಚರ ಬೆಳಕಿನ ವಲಯದಿಂದಾಚೆ ಇ... ನಕ್ಷತ್ರಗಳ ರಹಸ್ಯ ಲೋಕವನ್ನು ರೇಡಿಯ... ದೂರದರ್ಶಕಗಳು ನಮ್ಮ ಮುಂದೆ ತೆರೆದಿ... ರಾಕೆಟ್‌ಗಳು ಗಗನ ನೌಕೆಗಳನ್ನು ಭೂಮಿಯ... ಬಹುದೂರಕ್ಕೆ ಕೊಂಡೊಯ್ಯುತ್ತವೆ. ಇಂತಹ ಅಂ... ಶೋಧನೆಗಳು ಆಕಾಶಕಾಯಗಳ ಕುರಿತು ಈಗ ಸಾ... ಅದ್ಭುತ ಮಾಹಿತಿ ನೀಡಿವೆ.

ಖಗೋಳ ವೀಕ್ಷಣೆ ಕ್ಷ-ಕಿರಣಗಳ ಮೂಲ... ನಡೆದಿದೆ. ಈ ಉದ್ದೇಶಕ್ಕಾಗಿ ಬಾಹ್ಯಾಕಾಶಕ್ಕೆ ಕಳುಹಿಸಿ... ಗಗನ ವೀಕ್ಷಣಾಲಯಕ್ಕೆ ವಿಖ್ಯಾತ ವಿಜ್ಞಾನಿ ಸುಬ್ರಹ್ಮ... ಚಂದ್ರಶೇಖರ್ (೧೯೧೦ - ೧೯೯೫) ಅವ... ಗೌರವಿಸುವುದಕ್ಕಾಗಿ 'ಚಂದ್ರ' ಎಂದು ನಾಮ... ಮಾಡಿರುವುದು ನಮಗೆಲ್ಲ ಒಂದು ಹೆಮ್ಮೆಯ ವಿಷ...

ಈ ಎಲ್ಲ ವೀಕ್ಷಣಾ ಸಾಧನಗಳು ಅನಾ...

...ದ ವಿಶ್ವದ ಭವ್ಯತೆಯ ಕೆಲವು ಉದಾಹರಣೆಗಳು
...: ಗುರುಗ್ರಹ ಮತ್ತು ಅದರ ಉಪಗ್ರಹಗಳು,
...್, ಕೃತ್ತಿಕಾ ಅಂತಹ ನಕ್ಷತ್ರ ಸಮೂಹಗಳು,
...ಂದರಲ್ಲಿ ಹತ್ತರಿಂದ ಸಾವಿರ ನೂರು
...ಳುಳ್ಳ ಗೋಳಾಕಾರದ ಸಮೂಹಗಳು, ಹೆಲಿಕ್ಸ್
... ಸನ್‌ಫ್ಲವರ್ ನೀಹಾರಿಕೆಯಂಥ ಅಂತರ್-
... ಹೊಂದಿದ ನಕ್ಷತ್ರಗಳಿಂದ ಉಚ್ಚಾಟಿತ ಅನಿಲ
...ಗಳು, ಸೂಪರ್‌ನೋವಾ ಶೇಷಗಳು – ನಕ್ಷತ್ರ
...ದ ನಂತರ ಉಳಿಯುವ ಅವಶೇಷಗಳು,
...ುಗಳು – ಸೆಕೆಂಡಿಗೆ ಸಾವಿರ ಬಾರಿಯಷ್ಟು ಅತೀವ
...ಲ್ಲಿ ಸುತ್ತುತ್ತ ದೀಪಗೋಪುರದ ಹಾಗೆ ಬೆಳಕನ್ನು
...ಸುವ, ಹಿಂದೊಮ್ಮೆ ಜೀವಂತವಿದ್ದ ನಕ್ಷತ್ರಗಳ
... ಮೃತ ತಿರುಳುಗಳೂ ಕಪ್ಪುಕುಳಿಗಳೂ (ಬ್ಲ್ಯಾಕ್
...ಲ್ಸ್) ನಕ್ಷತ್ರ ವಿಕಾಸದ ಅತ್ಯಂತಿಮ ವಿಲಕ್ಷಣ
...ಗಳು. ಹತ್ತಿರ ಸುಳಿವ ಎಲ್ಲವನ್ನೂ ತನ್ನೊಡಲಲ್ಲಿ
...ಂಡುಬಿಡುವ ಅಗೋಚರ ಸುಳಿಗಳು.
...ಗಳ ಉಗಮಸ್ಥಾನವಾದ ಪ್ರಜ್ವಲಿಸುವ
...ರಿಕೆಗಳು. ಇದಲ್ಲದೇ ಇನ್ನೂ ಅನೇಕ ಅದ್ಭುತ
...ನಗಳು. ಇವೆಲ್ಲವನ್ನೂ ವಿಶ್ವದ ಒಂದು
...ರಿಯಲ್ಲಿ ಅಳವಡಿಸಲು ಹೇಗೆ ಸಾಧ್ಯ ? ಇವೆಲ್ಲವೂ
...ಚಿತ್ರವೊಂದನ್ನು ಪರಿಪೂರ್ಣಗೊಳಿಸುವ ಬಿಂದು,
...ಳಿದ್ದಂತೆ. ನಾಲ್ಕು ಹೆಜ್ಜೆ ಹಿಂದಕ್ಕೆ ಸರಿದು ದೊಡ್ಡ
...ಗಳನ್ನು ಗಮನಿಸಿದಾಗಲೇ ಸಂಪೂರ್ಣ ಚಿತ್ರದ
... ಸಾಧ್ಯ. ಅದೇ ರೀತಿ ವಿಶ್ವದ ಮಾದರಿಯನ್ನು
...ವಾಗಲೂ ಸಾಕಷ್ಟು ದೊಡ್ಡ ಘಟಕಗಳಿಗಾಗಿ
...ಕಬೇಕಾಗುತ್ತದೆ.

...ೋಡವಿಲ್ಲದ ಶುಭ್ರರಾತ್ರಿಯಲ್ಲಿ ತಲೆ ಎತ್ತಿ
...ದರೆ ಮಂದಕಾಂತಿಯ ಪಟ್ಟಿಯೊಂದು ಆಕಾಶದಲ್ಲಿ
...ಹಾಸಿರುವಂತೆ ಕಾಣಿಸುತ್ತದೆ. ಇದೇ ಕ್ಷೀರಪಥ.
... ವಿಸ್ಮಯಕಾರಿ ಅಸ್ತಿತ್ವವು ಹಲವು ಕಾವ್ಯಾತ್ಮಕ
...ಳಿಗೆ ಸ್ಫೂರ್ತಿ ನೀಡಿದೆ. ಗ್ರೀಕ್ ಪುರಾಣದ
..., ಇದು ಸೂರ್ಯದೇವ ಹಿಲಿಯೋಸ್‌ನ ರಥ,
... ಮಗ ಫೇಥಾನ್‌ನಿಂದ ನಿಯಂತ್ರಣ ತಪ್ಪಿ
...ಗ ಬಿದ್ದ ಜಾಡು. ನಮ್ಮದೇ ಸಂಪ್ರದಾಯದಲ್ಲಿ
... 'ಆಕಾಶಗಂಗೆ' ಎಂದು ಹೆಸರು. ಗಂಗೆ ಸ್ವರ್ಗ
...ದಿಂದ ಧರೆಗಿಳಿದು ಬಂದುದರ ದ್ಯೋತಕ.
...ುರೇನಸ್ ಗ್ರಹವನ್ನು ಕಂಡುಹಿಡಿದ ವಿಲಿಯಮ್
...್ (೧೭೩೮-೧೮೨೨) ಹದಿನೆಂಟನೆ ಶತಮಾನದ
...ರ್ಧದಲ್ಲಿ, ಕ್ಷೀರಪಥದ ಅಧ್ಯಯನ ನಡೆಸಿದ.
... ರಚಿಸಿದ ದೊಡ್ಡ ದೂರದರ್ಶಕದ ಮೂಲಕ
... ಕ್ಷೀರಪಥ ವಾಸ್ತವವಾಗಿ ದಶಲಕ್ಷಕ್ಕೂ ಹೆಚ್ಚು
...ು ನಕ್ಷತ್ರಗಳ ಸಮೂಹದಿಂದ ಆದದ್ದು ಎಂದು
...ಕೊಂಡ. ನಮ್ಮ ಸೌರವ್ಯೂಹವೂ ಈ ಬೃಹತ್ ನಕ್ಷತ್ರ
...ಹಕ್ಕೆ ಸೇರಿದುದು ಎಂದು ಅಭಿಪ್ರಾಯ ಪಟ್ಟ.
...ಪ್ಪತ್ತನೆಯ ಶತಮಾನದ ಆರಂಭದಲ್ಲಷ್ಟೆ ನಮಗೆ
...ಥದ ನಿಜವಾದ ಅಳತೆ ಮತ್ತು ಆಕಾರದ ಕುರಿತು
...ಬಂದದ್ದು. ಈ ತಿಳುವಳಿಕೆಗೆ ಮುಖ್ಯ ಕಾರಣ
...ಕಾದ ಖಗೋಳ ಶಾಸ್ತ್ರಜ್ಞ ಹಾರ್ಲೋ ಶ್ಯಾಪ್ಲಿ
...೫ - ೧೯೭೨)ಯ ಅಧ್ಯಯನ ಹಾಗೂ
...ಗಳು. ಕ್ಷೀರಪಥ ಒಂದು ಗ್ಯಾಲಕ್ಸಿ. ಅದು

## 'ಹೊಸತು' ನಮನ



## ಟಿ. ಎಸ್. ಸತ್ಯನ್

### 1923–2009

**T.S. SATYAN**
# 58, 3rd Cross, 7th Main
Saraswathipuram, Mysore - 570 0..
Tel: 0821 - 2543776 e-mail: tssatyan@sanc...

30 [illegible] 2004

[illegible]

'ಹೊಸತು' ಸಹಸಂಪಾದಕರಿಗೆ ಟಿ. ಎಸ್. ಸತ್ಯನ್ ಬರೆದ ಪತ್ರ

ಸುಮಾರು ಇನ್ನೂರು ಬಿಲಿಯನ್ ನಕ್ಷತ್ರಗಳ ಸಮೂಹ, ಮಧ್ಯಭಾಗದಲ್ಲಿ ಉಬ್ಬಿರುವಂತೆ ರೂಪುಗೊಂಡ ಬೃಹತ್ ತಟ್ಟೆ ಎಂದು ತಿಳಿದುಬಂತು.

ಕ್ಷೀರಪಥ ಎಷ್ಟು ವಿಶಾಲವಾಗಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸೋಣ. ನಕ್ಷತ್ರ ಹಾಗೂ ಗ್ಯಾಲಕ್ಸಿಗಳ ಲೋಕದಲ್ಲಿ ದೂರಗಳನ್ನು ಬೆಳಕಿನ ಪ್ರಯಾಣದ ಅವಧಿಯಿಂದ ಅಳೆಯಲಾಗುತ್ತದೆ. ಬೆಳಕು ಒಂದು ಸೆಕೆಂಡಿಗೆ ಮೂರು ಲಕ್ಷ ಕಿ.ಮೀ.ನಷ್ಟು ದೂರವನ್ನು ಕ್ರಮಿಸುತ್ತದೆ. ಸೂರ್ಯ ಮತ್ತು ಭೂಮಿಯ ನಡುವಿನ, ಒಂದು ನೂರಾ ಐವತ್ತು ಮಿಲಿಯನ್ ಕಿ.ಮೀ. ದೂರವನ್ನು ಕ್ರಮಿಸಲು ಅದು ಎಂಟು ನಿಮಿಷ ತೆಗೆದುಕೊಳ್ಳುತ್ತದೆ. ಬೆಳಕು ಒಂದು ವರ್ಷದಲ್ಲಿ ಪ್ರಯಾಣಿಸುವ ದೂರ, ಹತ್ತು ಟ್ರಿಲಿಯನ್ ಕಿ.ಮೀ. ಟ್ರಿಲಿಯನ್ ಎಂದರೆ ಒಂದರ ನಂತರ ಹನ್ನೆರಡು ಸೊನ್ನೆಗಳು. ಈ ಅನಂತ ದೂರವನ್ನು ಒಂದು ಜ್ಯೋತಿ ವರ್ಷ (ಲೈಟ್ ಯಿಯರ್) ಎಂದು ಕರೆಯುತ್ತೇವೆ. ಈ ಲೆಕ್ಕದಲ್ಲಿ, ನಮಗೆ ಅತ್ಯಂತ ಹತ್ತಿರದ ನಕ್ಷತ್ರ ಆಲ್ಫ ಸೆಂಟೋರಿ ಇರುವುದು ನಾಲ್ಕು ಜ್ಯೋತಿರ್ವರ್ಷ ದೂರದಲ್ಲಿ ಅಂದರೆ ಈ ನಕ್ಷತ್ರದಿಂದ ಹೊರಟ ಬೆಳಕು ಭೂಮಿಯನ್ನು ತಲುಪಲು ನಾಲ್ಕು ವರ್ಷ ಬೇಕು. ನಮ್ಮ ಕ್ಷೀರ ಪಥ ಗ್ಯಾಲಕ್ಸಿ ಸುಮಾರು ಒಂದು ಲಕ್ಷ ಜ್ಯೋತಿ ವರ್ಷಗಳಷ್ಟು ಅಗಲವಾಗಿದೆ. ನಮ್ಮ ಸೌರವ್ಯೂಹ ಇದರ ಹೊರ ಅಂಚಿನಲ್ಲಿ, ಕೇಂದ್ರದಿಂದ ತ್ರಿಜ್ಯದ ಸುಮಾರು ಎರಡನೇ ಮೂರಂಶ ದೂರದಲ್ಲಿ ಇದೆ.

ಕ್ಷೀರಪಥದಿಂದ ಬಹುದೂರಕ್ಕೆ ಸರಿದು ನೋಡಲು ಸಾಧ್ಯವಾಗಿದ್ದರೆ ನಮಗೆ ಅದರ ಸುಂದರ ರಚನೆ, ಅಸಂಖ್ಯಾತ ನಕ್ಷತ್ರಗಳು, ಅನಿಲಗಳು ಹಾಗೂ ಸುರುಳಿ ಬಾಹುಗಳು ಕಾಣಬಹುದಾಗಿತ್ತು, ತನ್ನ ಗ್ರಹ ಕುಟುಂಬ ದೊಂದಿಗಿರುವ ಸೂರ್ಯ ಕ್ಷೀರಪಥದ ಬಿಲಿಯನ್ ಗಟ್ಟಲೆ ನಕ್ಷತ್ರಗಳ ನಡುವೆ ಗಮನಕ್ಕೆ ಬಾರದಷ್ಟು ಸಣ್ಣ ಕಣದ ಹಾಗೆ ಎಂಬುದು ತಿಳಿಯುತ್ತಿತ್ತು.

ನಮ್ಮ ಗ್ಯಾಲಕ್ಸಿ ದೈತ್ಯಾಕಾರದ ಒಂದು ಸುಳಿಯಂತಿದೆ. ಹೊರ ಸೆರಗಿನಲ್ಲಿರುವ ಸೌರವ್ಯೂಹವನ್ನು ಹೊತ್ತು ಕೊಂಡು ಸೆಕೆಂಡಿಗೆ ೨೫೦ ಕಿ.ಮೀ. ವೇಗದಲ್ಲಿ ಸುತ್ತಿಸುತ್ತಿದೆ. ಆದರೆ ಇದು ಎಷ್ಟೊಂದು ವಿಶಾಲವಾಗಿದೆ ಎಂದರೆ, ಇದು ಒಂದು ಪರಿಭ್ರಮಣೆಯನ್ನು ಮುಗಿಸಲು ೨೦೦ ಮಿಲಿಯನ್ ವರ್ಷಗಳೇ ಬೇಕಾಗುತ್ತವೆ. ಈ ಹಿಂದೆ ಸೌರವ್ಯೂಹ ಈಗಿರುವ ಸ್ಥಾನದಲ್ಲಿ ಇದ್ದಾಗ ಭೂಮಿಯ ಮೇಲೆ ಡೈನೋಸಾರುಗಳ ಆಧಿಪತ್ಯ ನಡೆದಿತ್ತು.

ಕ್ಷೀರ ಪಥ ನಮ್ಮ ಗ್ಯಾಲಕ್ಸಿ ಅನಂತ ಎನ್ನುವಷ್ಟು ವಿಶಾಲ. ಸೃಷ್ಟಿಯ ಅದ್ಭುತಗಳ ಆಗರ. ಹಾಗಾದರೆ, ಇದೇ ಇಡೀ ವಿಶ್ವವೇ ? ಅಲ್ಲ. ೧೯೨೦ರ ದಶಕದಲ್ಲಿ ಎಡ್ವಿನ್ ಹಬಲ್ (೧೮೮೯-೧೯೫೩) ಎಂಬಾತ, ಬೃಹತ್ ದೂರದರ್ಶಕದ ಮೂಲಕ ಛಾಯಾಗ್ರಹಿಸಬಹುದಾಗಿದ್ದ ಮಂದಕಾಂತಿಯ ಕಲೆಗಳನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡತೊಡಗಿದ. ಆಂಡ್ರೋಮಿಡಳ ಕಥೆ ಮತ್ತು ಒಂದು ನಕ್ಷತ್ರಪುಂಜಕ್ಕೆ ಅವಳದೇ ಹೆಸರಿಟ್ಟ ಸಂಗತಿ ನಿಮಗೆ ನೆನಪಿದೆಯಲ್ಲವೇ ? ಆ ನಕ್ಷತ್ರ ಪುಂಜದಲ್ಲಿ ಒಂದು ಮಂದಕಾಂತಿ ಕಲೆ ಕಾಣಿಸುತ್ತದೆ. ಹಬಲ್ ಇದು ನಮ್ಮಿಂದ ಎರಡು ಮಿಲಿಯನ್ ಜ್ಯೋತಿರ್ವರ್ಷ ದೂರದಲ್ಲಿದೆ, ನಮ್ಮ ಕ್ಷೀರಪಥದಿಂದ ಬಹಳ ಆಚೆ ಇದೆ, ಎಂದು ತೋರಿಸಿಕೊಟ್ಟ. ನಿಜವೆಂದರೆ, ಇದೂ ನಮ್ಮ ಗ್ಯಾಲಕ್ಸಿಯಲ್ಲಿಯಂತೆಯೇ ಬಿಲಿಯಗಟ್ಟಲೆ ನಕ್ಷತ್ರಗಳನ್ನು ಒಳಗೊಂಡ ದೈತ್ಯಾಕಾರದ ಗ್ಯಾಲಕ್ಸಿ.

ದೂರದರ್ಶಕಗಳ ಸಹಾಯದಿಂದ ನಾವು ವಿವಿಧ ರೀತಿಯ ಗ್ಯಾಲಕ್ಸಿಗಳನ್ನು ವೀಕ್ಷಿಸಬಹುದು, ಗ್ಯಾಲಕ್ಸಿಗಳ ಸಮೂಹಗಳನ್ನು ಕಾಣಬಹುದು. ವಾಸ್ತವವಾಗಿ, ಅತ್ಯಂತ ದೊಡ್ಡ ದೂರದರ್ಶಕಗಳಲ್ಲಿ ದೃಷ್ಟಿ ಹಾಯಿಸಲು ಸಾಧ್ಯವಿರುವಷ್ಟು ದೂರದವರೆಗೂ ಬಿಲಿಯನ್‌ಗಟ್ಟಲೆ ಗ್ಯಾಲಕ್ಸಿಗಳು ಚೆದುರಿರುವುದನ್ನು ಕಾಣಬಹುದಾಗಿದೆ. ಇವುಗಳಿಂದ ಹೊರಟ ಬೆಳಕು ಮಿಲಿಯನ್‌ಗಟ್ಟಲೆ, ಬಿಲಿಯನ್‌ಗಟ್ಟಲೆ ವರ್ಷಗಳ ಕಾಲ ಪ್ರಯಾಣಿಸಿ ನಮ್ಮನ್ನು ತಲುಪಿರುತ್ತದೆ. ಇವತ್ತು ನಾವು ಕಾಣುತ್ತಿರುವುದು ಅತ್ಯಂತ ಹಿಂದಿನ ಕಾಲದಲ್ಲಿ ಅವು ಇದ್ದ ರೀತಿಯ ದೃಶ್ಯ. ಅಸಂಖ್ಯಾತ ಗ್ಯಾಲಕ್ಸಿಗಳನ್ನು ಒಳಗೊಂಡಿರುವ ವಿಶ್ವದ ವೈಶಾಲ್ಯ ಊಹಾತೀತ. ಈ ವಿಶ್ವಸಾಗರದ ವಿಶಾಲ ದಂಡೆಯ ಉಸುಕಿನಲ್ಲಿ ಒಂದು ಸಣ್ಣಕಣ, ನಮ್ಮ ಪುಟ್ಟ ಭೂಮಿ.

ಈವರೆಗೆ ನಾವು ವಿಶ್ವದ ವಿಸ್ತಾರ, ವಿನ್ಯಾಸಗಳ ಕಿರು ಪರಿಚಯ ಮಾಡಿಕೊಂಡೆವು. ಈಗ ಅದನ್ನು ಕಾಲಮಾನದಲ್ಲಿ ಗಮನಿಸೋಣ. ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ಮಹಾನ್ ತತ್ವಜ್ಞಾನಿ ಅರಿಸ್ಟಾಟಲ್ (೩೮೪-೩೨೨ ಕ್ರಿ.ಪೂ.) ಅಂತರಿಕ್ಷ ಲೋಕ ಪರಿಪೂರ್ಣವಾಗಿದೆ, ಬದಲಾವಣೆಗೆ ಹೊರತಾಗಿ ಶಾಶ್ವತವಾಗಿದೆ, ಎಂದು ಬೋಧಿಸಿದ. ಇದಾದ ಎರಡು ಸಾವಿರ ವರ್ಷಕ್ಕೂ ಹೆಚ್ಚಿನ ಕಾಲ ವಿಶ್ವವು ಒಟ್ಟಂದದಲ್ಲಿ ವಿಕಾಸ ರಹಿತವೆಂದೇ ಸಾಮಾನ್ಯವಾಗಿ ನಂಬಲಾಗಿತ್ತು. ಹಿಂದೊಮ್ಮೆ ವೀಕ್ಷಣಾಲಯಕ್ಕೆ ಸರಕು ಸಾಗಣಿಕೆ ಮಾಡುತ್ತಿದ್ದು ನಂತರ ಖಗೋಳ ಶಾಸ್ತ್ರ ಪರಿಣತನಾದ ಮಿಲ್ಟನ್ ಹ್ಯುಮಾಸನ್ (೧೮೯೧ - ೧೯೭೨) ಮತ್ತು ಹಬಲ್ ಇವರುಗಳ ವಿಸ್ಮಯಕಾರಿ ಸಂಶೋಧನೆಗಳಿಂದಾಗಿ ವಿಶ್ವದ ಕುರಿತಾದ ಕಲ್ಪನೆಗಳು ತೀವ್ರವಾಗಿ ಬದಲಾದವು. ಗ್ಯಾಲಕ್ಸಿಗಳು ಅತ್ಯಂತ ವೇಗದಿಂದ ಪರಸ್ಪರ ದೂರವಾಗುತ್ತಿರುವುದನ್ನು ಅವರು ಕಂಡರು. ನಡುವಿನ ಅಂತರ ಹೆಚ್ಚಾದಷ್ಟೂ ಪರಸ್ಪರ ವೇಗವೂ ಹೆಚ್ಚಾಗಿರುತ್ತದೆ. ಉದಾಹರಣೆಗೆ, ಮಿಲಿಯನ್ ಜ್ಯೋತಿರ್ವರ್ಷ ದೂರವಿರುವ ವಿರ್ಗೋ ನಕ್ಷತ್ರ ಪುಂಜದಲ್ಲಿನ ಗ್ಯಾಲಕ್ಸಿಯು ಸೆಕೆಂಡಿಗೆ ೧೨೦೦ ಕಿ.ಮೀ. ವೇಗದಿಂದ ಚಲಿಸುತ್ತಿದೆ. ನಾಲ್ಕು ಬಿಲಿಯನ್ ಜ್ಯೋತಿರ್ವರ್ಷ ದೂರದಲ್ಲಿರುವ ಹೈಡ್ರಾದಲ್ಲಿಯ ಗ್ಯಾಲಕ್ಸಿಯು ಸೆಕೆಂಡಿಗೆ ೬೦,೦೦೦ ಕಿ.ಮೀ. ವೇಗದಲ್ಲಿ ಹಾರಿಹೋಗುತ್ತಿದೆ.

ಸಾಮಾನ್ಯ ಸಾಪೇಕ್ಷ ಸಿದ್ಧಾಂತ ಎಂದು ಕರೆಯಲಾಗುವ ಐನ್‌ಸ್ಟೈನ್‌ನ ಗುರುತ್ವಾಕರ್ಷಣ ಸಿದ್ಧಾಂತದ ಪ್ರಕಾರ, ಎಲ್ಲ ಗ್ಯಾಲಕ್ಸಿಗಳು ಹಾಗೂ ಅವುಗಳ ನಡುವಿನ ಆಕಾಶ ಇವನ್ನೆಲ್ಲ ಒಳಗೊಂಡ ವಿಶ್ವ, ತಾನೇ ಹಿಗ್ಗುತ್ತಿದೆ. ಕಲ್ಪಿಸಿಕೊಳ್ಳಲೂ ಅಸಾಧ್ಯ. ಆದರೂ ಸತ್ಯ. ವಿಜ್ಞಾನಿ ಜೆ. ಬಿ. ಎಸ್. ಹಾಲ್ಡೇನ್ (೧೮೯೨ - ೧೯೬೪) ಅವರ ಮಾತುಗಳಲ್ಲಿ ಹೇಳುವುದಾದರೆ,

'Our Universe is not stranger than we imagine.
but is stranger than we *can* imagine' – ಅಂದರೆ,

'ನಮ್ಮ ವಿಶ್ವವು ನಾವು ಊಹಿಸುವುದಕ್ಕಿಂತ ವಿಚಿತ್ರವಾಗಿರುವುದಿರಲಿ, ಊಹಿಸಲು ಸಾಧ್ಯವಾಗುವುದಕ್ಕಿಂತ ವಿಚಿತ್ರವಾಗಿದೆ'.

ವಿಶ್ವವು ವಿಕಸನ ಹೊಂದುತ್ತಿರುವುದರಿಂದ ನಾವು ಸಹಜವಾಗಿಯೇ ಕಾಲಮಾನದಲ್ಲಿ ಹಿಂದಕ್ಕೂ ಪಯಣಿಸಿ ಅದು ನಡೆದು ಬಂದ ಹೆಜ್ಜೆಗಳನ್ನು ಗುರ್ತಿಸಬಹುದು. ಈಗ ಗ್ಯಾಲಕ್ಸಿಗಳು ವೇಗದಿಂದ ಪರಸ್ಪರ ದೂರ ಸರಿಯುತ್ತಿರುವುದನ್ನು ಕಂಡೆವು. ಆದ್ದರಿಂದ ನಾವು ಭೂತಕಾಲದಲ್ಲಿ ಕ್ರಮೇಣ ಹಿಂದಕ್ಕೆ ಸರಿದುಹೋದಂತೆಲ್ಲ, ಗ್ಯಾಲಕ್ಸಿಗಳು ಪರಸ್ಪರ ಹತ್ತಿರವಿರುವುದನ್ನು ಕಾಣಬೇಕು. ಹಾಗೆಯೇ ಇನ್ನೂ ಹಿಂದುವರೆಯುತ್ತ ಹೋದರೆ ಕೊನೆಯಲ್ಲಿ ವಿಶ್ವದ ಸಕಲ ವಸ್ತುವೂ, ಎಲ್ಲ ವಿಕಿರಣವೂ ಒಂದೆಡೆಯಲ್ಲಿ ಸಾಂದ್ರೀಕೃತವಾದ ಸ್ಥಿತಿಗೆ ಹೋಗಿ ತಲುಪುತ್ತೇವೆ.

ವ್ಯವಸ್ಥೆ

ಗಿಡವಾಗಿ ಬಗ್ಗದ್ದನ್ನು
ನಮ್ಮ ಸರ್ಕಾರಗಳು
ಬುಡ ಸಮೇತ
ಕಿತ್ತೆಸೆಯುತ್ತವೆ.

ಈ ಆದ್ಯ ಅಗ್ನಿಗೋಲದ ಉಷ್ಣತೆ ಹಾಗೂ ಸಾಂದ್ರತೆ ಊಹೆಗೆ ನಿಲುಕದಷ್ಟು ಹೆಚ್ಚಾಗಿರುತ್ತದೆ. ಈ ಸಾಂದ್ರೀಕೃತ ಸ್ಥಿತಿಯಿಂದ ವಿಶ್ವದ ವಿಸ್ತರಣೆ ಆರಂಭಿಸಿದ ಮಹಾಸ್ಫೋಟ 'ಬಿಗ್ ಬ್ಯಾಂಗ್' ಘಟಿಸಿದ್ದು ಸುಮಾರು ೧೩ ಬಿಲಿಯನ್ ವರ್ಷಗಳ ಹಿಂದೆ. ವಿಶ್ವವು ತಂಪಾದಂತೆ ಗ್ಯಾಲಕ್ಸಿಗಳು ರೂಪಿತವಾದವು. ನಕ್ಷತ್ರಗಳು ಹುಟ್ಟಿಕೊಂಡವು. ಗ್ರಹಗಳು ಅಸ್ತಿತ್ವಕ್ಕೆ ಬಂದವು. ಕೊನೆಯ ಪಕ್ಷ ಭೂಮಿಯ ಮೇಲಾದರೂ ಜೀವವು ವಿಕಸಿಸಿತು.

ವಿಶ್ವದ ಸುದೀರ್ಘ ಇತಿಹಾಸವನ್ನು ಒಂದು ವರ್ಷದ ಅಳತೆಗೆ ಸಂಕುಚಿಸುವುದಾದರೆ ಒಂದು ಕಾಸ್ಮಿಕ್ ಕ್ಯಾಲೆಂಡರ್ ರೂಪಿತವಾಗುತ್ತದೆ. ಇದರಲ್ಲಿಯ ಕೆಲವು ದಿನಾಂಕಗಳೂ ವಿಶ್ವ ಇತಿಹಾಸದ ಕೆಲವು ಘಟನೆಗಳನ್ನು ಪ್ರತಿನಿಧಿಸುತ್ತವೆ. ಆ ಪ್ರಕಾರ ನೋಡುವುದಾದರೆ ಬಿಗ್‌ಬ್ಯಾಂಗ್ ಮಹಾಸ್ಫೋಟ ಉಂಟಾಗಿ ವಿಶ್ವದ ಜನನ ಆಗಿದ್ದು ಜನವರಿ ಒಂದನೇ ತಾರೀಖಿನ ಶೂನ್ಯಕ್ಷಣದಲ್ಲಿ, ೪೫ ನಿಮಿಷಗಳ ನಂತರ ಗ್ಯಾಲಕ್ಸಿಗಳು ರೂಪುಗೊಂಡವು. ಸೌರವ್ಯೂಹ ಹುಟ್ಟಿಕೊಂಡಿದ್ದು ಸೆಪ್ಟೆಂಬರ್ ಒಂದರಂದು. ಅದಾದ ಇಪ್ಪತ್ತೊಂಬತ್ತು ದಿನಗಳ ನಂತರ, ಅಂದರೆ ಸೆಪ್ಟೆಂಬರ್ ೩೦ರಂದು ಭೂಮಿಯ ಮೇಲೆ ಜೀವ ಉಗಮಿಸಿತು. ಡಿನೋಸಾರುಗಳು ಡಿಸೆಂಬರ್ ೨೫ಕ್ಕೆ ಕಾಣಿಸಿಕೊಂಡವು. ಹೊಸ ವರ್ಷದ ಮುನ್ನಾ ರಾತ್ರಿಯಷ್ಟೇ ಮನುಷ್ಯನ ಉಗಮವಾಯಿತು. ದಾಖಲಿತ ಇತಿಹಾಸದ ವ್ಯಾಪ್ತಿ ಕೊನೆಯ ೧೦ ಸೆಕೆಂಡುಗಳು ಮಾತ್ರ. ಹಾಗೆಂದ ಮೇಲೆ, ಪ್ರತಿ ಮನುಷ್ಯನ ಆಯುಷ್ಯ ವಿಶ್ವ ಇತಿಹಾಸ ಕಾಲದಲ್ಲಿ ಕ್ಷಣದ ಅತೀ ಕಡಿಮೆ ಭಾ[...] ಸಮವಾಗಲಾರದು.

ನಾವು ವಿಶ್ವದ ಭೂತಕಾಲವನ್ನು ನೋಡಿದೆವು, ವರ್ತಮಾನವನ್ನು ನೋಡಿ[...] ಆದರೆ ಅದರ ಭವಿಷ್ಯವೇನು ? ಇಪ್ಪತ್ತನೆಯ ಶತಮಾನದ ವಿಜ್ಞಾನಿಗಳು ಐನ್‌ಸ್ಟೈ[...] ಸಿದ್ಧಾಂತವನ್ನು ಅವಲಂಬಿಸಿ ಎರಡು ಸಾಧ್ಯತೆಗಳನ್ನು ಮುಂದಿಟ್ಟರು. ವಿಶ್ವವು ಅ[...] ವ್ಯಾಪ್ತಿಯನ್ನು ಹೊಂದಿದ್ದು ಹೀಗೆಯೇ ನಿರಂತರವಾಗಿ ಹಿಗ್ಗುತ್ತಲೇ ಹೋಗಬಹು[...] ನಕ್ಷತ್ರಗಳು ಕ್ಷೀಣಿಸುತ್ತಾ ಹೋಗಿ ನಂದಿಹೋಗಿಬಿಡಬಹುದು. ಎಲ್ಲ ಕಡೆ [...] ಸತತವಾಗಿ ಇಳಿಯುವುದು. ಕೊಟ್ಟ ಕೊನೆಯಲ್ಲಿ ವಿಶ್ವವು ದೀರ್ಘ, ಶೀತಲ, ಸಾಧ[...] ಸಾವನ್ನು ಅಪ್ಪಬಹುದು.

ಇನ್ನೊಂದು ಸಾಧ್ಯತೆ ಎಂದರೆ ವಿಶ್ವದ ದ್ರವ್ಯ ರಾಶಿ, ತತ್ಪರಿಣಾಮಿತ ಗುರುತ್ವಾಕರ್ಷ[...] ಶಕ್ತಿ, ಅಗಾಧವಾಗಿದ್ದರೆ, ವಿಶ್ವದ ವಿಸ್ತರಣಾಗತಿ ನಿಧಾನಗೊಂಡು ಕೊನೆಯಲ್ಲಿ [...] ಕ್ಷಣ ನಿಂತು, ನಂತರ ಅದು ಸಂಕುಚಿಸತೊಡಗುತ್ತದೆ. ಗ್ಯಾಲಕ್ಸಿಗಳು [...] ಒಗ್ಗೂಡುತ್ತವೆ. ನಕ್ಷತ್ರಗಳು ಪರಸ್ಪರ ಡಿಕ್ಕಿ ಹೊಡೆದು ಸ್ಫೋಟಗೊಳ್ಳುತ್ತವೆ. ವಿ[...] ಉಷ್ಣತೆ ಮತ್ತು ಸಾಂದ್ರತೆ ಅತೀವವಾಗಿ ನಿರಂತರವಾಗಿ ಇರುತ್ತದೆ. ಕೊನೆಯಲ್ಲಿ [...] ಆದ್ಯ ಅಗ್ನಿ ಗೋಲ ರೂಪುಗೊಳ್ಳುತ್ತದೆ. ಈ ಸ್ಥಿತಿಯಿಂದ ವಿಶ್ವವು ಮತ್ತೆ ಮ[...] ಸ್ಫೋಟದಲ್ಲಿ ಸಿಡಿಯಬಹುದು. ವಿಶ್ವದ ವಿಸ್ತರಣೆ ಮತ್ತೊಮ್ಮೆ ಆರಂಭವಾಗಬಹುದು[...]

ಈ ಎರಡೂ ಸಾಧ್ಯತೆಗಳಲ್ಲಿಯೂ ಸಹ ವಿಶ್ವ ವಿಕಸನದ ಗತಿ ಕ್ಷೀಣವಾಗ[...] ಹೋಗಬೇಕು. ಅಂದರೆ ಗ್ಯಾಲಕ್ಸಿಗಳ ವೇಗ ಕ್ರಮ[...] ಕಡಿಮೆಯಾಗುತ್ತಿರಬೇಕು. ಆದರೆ ಇತ್ತೀ[...] ಖಗೋಳಶಾಸ್ತ್ರಜ್ಞರ ವೀಕ್ಷಣೆಗಳ ಪರಿಣಾಮ[...] ಒಂದು ಅತ್ಯಂತ ಆಶ್ಚರ್ಯದಾಯಕವಾದ ವಿಷ[...] ತಿಳಿದುಬಂದಿದೆ. ಗ್ಯಾಲಕ್ಸಿಗಳ ವೇಗ ಕ[...] ಯಾಗುವುದರ ಬದಲು ಅದು ಹೆಚ್ಚಳವಾಗು[...] ಹಾಗೆಂದರೆ ವಿಶ್ವದ ವಿಕಾಸ ಗತಿ ಕ್ಷೀಣವಾಗುವ[...] ಬದಲು ವೃದ್ಧಿಯಾಗುತ್ತಿದೆ. ಗ್ಯಾಲಕ್ಸಿಗಳ ವ[...] ಕಡಿಮೆ ಆಗುವುದಕ್ಕೆ ಕಾರಣ ವಿ[...] ದ್ರವ್ಯರಾಶಿಯಿಂದುಂಟಾಗುವ ಗುರುತ್ವಾಕರ್ಷ[...] ಶಕ್ತಿ. ಕಣ್ಣಿಗೆ ವಿಕಿರಣದ ಮೂಲಕ ಗೋಚರವಾಗ[...] ದ್ರವ್ಯವಲ್ಲದೆ ಅಗೋಚರವಾದ ದ್ರವ್ಯ (ಡಾ[...] ಮ್ಯಾಟರ್) ಅಗಾಧ ಪ್ರಮಾಣದಿಂದ ಕ[...] ವಿಶ್ವದಲ್ಲಿ ಅಡಗಿದೆ ಎಂಬ ನಿರ್ಧಾರಕ್ಕೆ ವಿಜ್ಞಾನಿ[...] ಇತ್ತೀಚೆಗೆ ಬಂದಿದ್ದಾರೆ.

ಈ ಎರಡೂ ವಿಧದ ದ್ರವ್ಯಗಳು ಗುರುತ್ವಾಕರ್ಷಣವನ್ನು ಉತ್ಪನ್ನ ಮಾಡುತ್ತವೆ. [...] ಆಕರ್ಷಣವನ್ನೂ ಮೀರಿ ಗ್ಯಾಲಕ್ಸಿಗಳ ವೇಗವನ್ನು ಹೆಚ್ಚು ಮಾಡಬೇಕಾದರೆ ಅ[...] ತಕ್ಕಂತೆ ಇದುವರೆಗೂ ನಮಗೆ ತಿಳಿಯದೇ ಇದ್ದ ವಿಕರ್ಷಕ ಶಕ್ತಿಯೊಂದು ಬೇಕು. ಇದ[...] ಕಪ್ಪು ಶಕ್ತಿ (ಡಾರ್ಕ್ ಇನರ್ಜಿ) ಎಂದು ಕರೆಯುತ್ತಾರೆ. ಈ ಶಕ್ತಿಯ ಲಕ್ಷಣಗಳೇನು, ಅ[...] ಮೂಲವೇನು ಇಂತಹ ಅನೇಕ ಪ್ರಶ್ನೆಗಳಿಗೆ ಸದ್ಯದಲ್ಲಿ ಉತ್ತರಗಳಿಲ್ಲ. ಅಷ್ಟೇ ಅಲ್ಲ, [...] ಶಕ್ತಿಯಿಂದಾಗಿ ಗ್ಯಾಲಕ್ಸಿಗಳ ವೇಗ ಹೆಚ್ಚುತ್ತಲೇ ಹೋದರೆ ಭವಿಷ್ಯದಲ್ಲಿ ವಿ[...] ಏನಾಗುತ್ತದೆ ಎನ್ನುವುದು ಒಂದು ನಿಗೂಢ ಸಮಸ್ಯೆ.

ನಮ್ಮ ವಿಶ್ವ ವಿಶಾಲ, ನಿಗೂಢ, ವಿಸ್ಮಯಕಾರಿ. ಅದರ ಕುರಿತು ನಾವು ಅರಿತಿರು[...] ರೋಮಾಂಚಕ, ಅದ್ಭುತ, ಇನ್ನೂ ಅರಿಯಬೇಕಾಗಿರುವುದು ಅಪರಿಮಿತ. ಆಲ್ಬ[...] ಐನ್‌ಸ್ಟೈನ್ ವಿಶ್ವದ ಬಗೆಗೆ ಹೇಳಿರುವ ಮಾತುಗಳು ಎಷ್ಟು ಸತ್ಯ ಅಲ್ಲವೇ ?

''ಅನಂತ ವಿಶ್ವ ನಮ್ಮೆದುರು ಶಾಶ್ವತ ಮಹಾ ಒಗಟಿನಂತೆ ನಿಂತಿದೆ.
ನಮ್ಮ ಪರಿಶೀಲನೆ, ಚಿಂತನೆಗೆ ಭಾಗಶಃ ಆದರೂ ಲಭಿಸಿದೆ.
ಈ ವಿಶ್ವದ ಅವಲೋಕನ – ವಿಮೋಚನೆಯಂತೆ ನಮ್ಮನ್ನು
ಕೈ ಬೀಸಿ ಕರೆಯುತ್ತಿದೆ.''

ಡಾ|| ಸಿ. ವಿ. ವಿಶ್ವೇಶ್ವರ
ಬೆಂಗಳೂರು ಅಸೋಸಿಯೇಷನ್ ಫಾರ್ ಸೈನ್ಸ್ ಎಜುಕೇಷನ್,
ಜವಾಹರ್‌ಲಾಲ್ ನೆಹರು ತಾರಾಲಯ, ಬೆಂಗಳೂರು - ೫೬೦ ೦೦೧

ಶಿವರಾಜ ತಾಯೂರ ದಾರಿಯನ್ನು ಹತ್ತಾರು ಬಾರಿ ನೆನೆದು ಬೆಳಕು ರಿಯುವುದನ್ನೇ ಕಾಯುತ್ತಿದ್ದ. ಹೊಳೆ ದಂಡೆಯ ಬೆಟ್ಟಗುಡ್ಡಗಳ ದಾರಿಯಲ್ಲಿ ಯೂರ ತಲುಪುವುದು ಒಂದು ಕಾಲಕ್ಕೆ ಮಾತ್ರ ಹಿತವಾಗಿತ್ತು. ತಾಯಿ ತೀರಿ ಂಡು ಮೂರು ವರ್ಷವಾಗಿತ್ತು. ಹೋಗುವುದೊ ಬೇಡವೊ ಎಂಬ ಗೊಂದಲ ಲ್ಲಿ ಶಿವರಾಜನಿಗೆ ಎಷ್ಟು ಹೊತ್ತಾದರೂ ನಿದ್ದೆಯೇ ಬಂದಿರಲಿಲ್ಲ. ತಾಯೂರಿಗೆ ೋಗುವೆ ಎಂದರೆ ಮನೆಯಲ್ಲಿ ಯಾರೂ ಒಪ್ಪುತ್ತಿರಲಿಲ್ಲ. ಕದ್ದು ಹೋದರೂ ಂತಿರುಗಿ ಬಂದರೂ ಶಿಕ್ಷೆ ತಪ್ಪುತ್ತಿರಲಿಲ್ಲ. ಆದರೂ ತಾಯ ಆ ತವರು ಮನೆಯಲ್ಲಿ ಹೆಂಗರುಳಿನ ಹಸು, ಕರು, ಕುರಿ, ರಾಸುಗಳ ಜೊತೆ ಗೋಪಾಲಕನಂತೆ ಅಲ್ಲೆಲ್ಲ ಡ್ಡಾಡಿದ್ದ ದಿನಗಳ ನೆನಪುಗಳು ಅವನನ್ನು ಕರುವನ್ನು ಹಸುವೊಂದು ಅಂಬಾ ಂದು ಕೂಗಿ ಕರೆದಂತೆ ಸೆಳೆದವು. ಹೊರಟು ಹೋಗುವುದೇ ಸರಿ. ಒಂದು ೇಳೆ ತಾಯೂರಲ್ಲೆ ಸೇರಿಕೊಳ್ಳುವುದಾದರೆ ಅಲ್ಲೇ ಇದ್ದು ಬಿಡುವುದು, ಬೇಡ ಂದರೆ ಹಿಂತಿರುಗಿ ಬರುವುದು. ಹಾಗೆ ಬಂದಾಗ ಅಪ್ಪನೇನಾದರೂ ಹೊಡೆದು ಯಿಸಲು ಬಂದರೆ ಯಾರ ಕಣ್ಣಿಗೂ ಕಾಣದಂತೆ ಬಹಳ ದೂರ ಎಲ್ಲಿಗಾದರೂ ಡಿ ಹೋಗುವುದು ಎಂದು ಶಿವರಾಜ ಎಲ್ಲ ದಿಕ್ಕಿನಿಂದ ಆಲೋಚಿಸಿದ.

ಎಳೆದುಕೊಂಡಿದ್ದಳು. ಎಷ್ಟೇ ಆಗಲಿ, ಅವಳೇ ತನ್ನ ಕರುಳ ಕುಡಿಯ ಕರುಳನ್ನು ಸುಟ್ಟುಕೊಳ್ಳಲಾರದಾಗಿದ್ದಳು. ತನ್ನ ಏಕಮಾತ್ರ ಅಕ್ಕನನ್ನು ವಿನಾಕಾರಣ ಶಂಕಿಸಿ ಕೊಂದು ಬಿಟ್ಟರೆಂದು ಶಿವರಾಜನ ಸೋದರ ಮಾವಂದಿರಿಗೆ ಅಪಾರವಾದ ದುಃಖವೂ ಕ್ರೋಧವೂ ಒಟ್ಟಾಗಿ ಆ ಅಕ್ಕನ ಚಿತೆಯಲ್ಲೆ ಅವಳ ಗಂಡನನ್ನು ತುಂಡರಿಸಿ ಎಸೆದು ಸುಟ್ಟುಬಿಡಬೇಕೆಂದು ದೌಡಾಯಿಸಿ ಬಂದಿದ್ದರು. ಸುಳಿವು ತಿಳಿದ ಶಿವರಾಜನ ಅಪ್ಪ ನಾಪತ್ತೆಯಾಗಿದ್ದ. ಆ ಏಳೂ ಮಂದಿಯೂ ಊರ ತುಂಬ ಹುಡುಕಾಡಿ ಆಕ್ರೋಶಕ್ಕೆ ಯಾರೂ ಸಿಗದೆ ಹತಾಶೆಯ ಕಿಚ್ಚಿನಲ್ಲಿ ಸ್ಮಶಾನಕ್ಕೆ ಉರಿಯುತ್ತ ಬಂದಿದ್ದರು. ಅಂತಹ ಅಕ್ಕನೇ ಹೋದ ಮೇಲೆ, ಇನ್ನು ಅವನಿಂದ ಅವಳ ಹೊಟ್ಟೆಯಲ್ಲಿ ಹುಟ್ಟಿದ ಇವನಾದರೂ ಯಾಕೆ ಇರಬೇಕು, ಅವನನ್ನೂ ಬೆಂಕಿಗೆ ಎಸೆಯಿರಿ ಎಂದು ಅವರು ಕೂಗಾಡುತ್ತಲೇ ಇದ್ದರು. ಅದೆಲ್ಲ ಎಂದೆಂದೂ ಅಳಿಸಲಾಗದ ಕೆನ್ನಾಲಿಗೆಯ ಚಿತ್ರವಾಗಿ ಶಿವರಾಜನ ಚಿತ್ತದಲ್ಲಿ ತುಂಬಿದೆ.

ತಣ್ಣಗೆ ಶಿವರಾಜನಿಗೆ ಎದೆಯಲ್ಲಿ ತಾಯ ಚಿತೆ ಹೊತ್ತಿಕೊಂಡು ಹಳೆಯ ಗೋಳೆಲ್ಲ ಬೆನ್ನೇರಿದವು. ಯಾವತ್ತೂ ಕೂಡ ತನ್ನ ತಾಯಿ ತವರಿಗೆ ಅಷ್ಟೊಂದು ಕನಸುಗಳಿಂದ ಕರೆದುಕೊಂಡು ಹೋಗುತ್ತಿದ್ದ ಆ ದಾರಿಯಲ್ಲಿ ಮುಂಜಾವಿನ ಎಳೆ ಬಿಸಿಲಿನಲ್ಲಿ ಆತ ಅನಾಥನಾದಂತೆ ಮುಂದೆ ಹೋಗಲೊ ಹಿಂದೆ ಹೋಗಲೊ ಎಂಬಂತೆ ಒಂದೊಂದ

■ ಡಾ|| ಮೊಗಳ್ಳಿ ಗಣೇಶ್



# ತಾಯೂರು

ಮುಂಗೋಳಿ ಕೂಗಿ ಮೂಡಲು ಕೆಂಪಡರುತ್ತಿತ್ತು. ಗೂಡಿಗೆ ಕೂಡಿದ್ದ ಎಲ್ಲ ೋಳಿಗಳನ್ನು ಹೊರಗೆ ಬಿಟ್ಟು ಆಕಾಶವನ್ನು ಸುಮ್ಮನೆ ಶಿವರಾಜ ದಿಟ್ಟಿಸಿದ. ಈ ೋಕವೆಲ್ಲ ತನ್ನದು ಎಂಬಂತೆ ಹುಂಜಗಳು ವಿಶ್ವಾಸದಲ್ಲಿ ಬಾರಯ್ಯ ರ್ಯಕುಮಾರನೇ ಎಂಬಂತೆ ಕೂಗುತ್ತಿದ್ದವು. ದಿಗಂತದಲ್ಲಿ ಅಲ್ಲೊಂದು ಲ್ಲೊಂದು ಎಂಬಂತೆ ಕೆಲ ನಕ್ಷತ್ರಗಳು ಇನ್ನೂ ಮಿನುಗುತ್ತಿದ್ದವು. ಈಗಲೇ ೊರಡುವುದು ಸರಿ ಎಂದು ಶಿವರಾಜ ತಾಯೂರ ಕಡೆ ಹೆಜ್ಜೆ ಕಿತ್ತಿಟ್ಟ. ಂತೆಯಲ್ಲಿ ಸಿಕ್ಕವರಿಗೆಲ್ಲ ಶಿವರಾಜನ ಅಜ್ಜಿ ಮೊಮ್ಮಗನನ್ನು ನೋಡಬೇಕು ಸಿಕೊಡಿ ಎಂದು ಅನೇಕ ಬಾರಿ ಹೇಳಿಕಳಿಸಿದ್ದಳು. ತಾಯಿ ತೀರಿಹೋದ ೇಲೆ ಎಲ್ಲ ಸಂಬಂಧಗಳು ತೊರೆದು ಹೋಗಿದ್ದವು. ಶಿವರಾಜ ಯಾವುದನ್ನೂ ರೆತಿಲ್ಲ. ಅವತ್ತು ಸ್ಮಶಾನದಲ್ಲೇ ತಾಯ ಚಿತೆಯ ಜೊತೆಯಲ್ಲೆ ಶಿವರಾಜನೂ ಟ್ಟುಬೂದಿಯಾಗಿ ಬಿಡಬೇಕಾಗಿತ್ತು. ಅದೃಷ್ಟವಶಾತ್ ಅವನ ಪ್ರಾಣವನ್ನು ಂದು ಅಜ್ಜಿಯೇ ಉಳಿಸಿದ್ದಳು. ಏನೂ ಅರಿಯದ ಶಿವರಾಜ ತಾಯ ಚಿತೆಗೆ ಂಕಿ ಹಚ್ಚುತ್ತ ಮೂರು ಬಾರಿ ಸುತ್ತುಹಾಕಿ ದಗದಗನೆ ಹತ್ತಿ ಉರಿವ ಬೆಂಕಿಯಲ್ಲಿ ರೆ ಸುತ್ತಿದಂತಾಗಿ ತೂರಾಡಿ ಬೀಳುತ್ತಿರುವಂತೆಯೆ ಅವನ ಸೋದರ ಮಾವನೇ ಕ್ರೋಶದಲ್ಲಿ ಓಡಿ ಬಂದು ಎತ್ತಿ ಇನ್ನೇನು ಚಿತೆಯ ನಡುಮಧ್ಯೆ ಜ್ವಾಲೆಗೆ ಸೆಯಬೇಕು ಎನ್ನುವ ವೇಳೆಗೆ ಅಜ್ಜಿ ತನ್ನ ಮಗನ ಹಿಡಿದೆಳೆದು ಜೀಳಿಸಿ ಅವನ ವತ್ತಿನ ಆ ರಕ್ಕಸ ಕೈಗಳಿಂದ ಕಿತ್ತುಕೊಂಡು, ''ಬಿಟ್ಟುಬಿಡೊ ನನ್ನ ಮಗಳ ುಳು ಅವನು, ಅವನಾದರೂ ಎಲ್ಲಿಯಾದರೂ ಹೋಗಿ ಬದುಕಿಕೊಳ್ಳಲಿ ಟ್ಟುಬಿಡೊ'' ಎಂದು ಮೊಮ್ಮಗನನ್ನು ಸಾವಿನ ಬಾಯಿಂದ ಹೊರಕ್ಕೆ

ಹೆಜ್ಜೆಯನ್ನು ಹಾಕುತ್ತಿದ್ದ. ಬೆಟ್ಟಗುಡ್ಡಗಳ ಹಾದಿಯಲ್ಲಿ ಅವನೆಂದೂ ಹಾಗೆ ಒಂಟಿಯಾಗಿ ನಡೆದೇ ಇರಲಿಲ್ಲ. ಏನೊ ಭಯ ಎಂತದೊ ಅಳುಕು ಏನೋ ಆತಂಕದ ನೆರಳು ಅವನ ಪುಟ್ಟ ಎದೆಗೂಡಲ್ಲಿ ಒಟ್ಟಾಗಿ ಪಿಸುಗುಟ್ಟುತ್ತಿದ್ದವು. ಅವನಪ್ಪ ತಾಯ ತೊಡೆ ಹೊಟ್ಟೆ ಬೆನ್ನುಗಳ ಮೇಲೆಲ್ಲ ಹಾಕಿದ್ದ ಬರೆಗಳು ಮನದಾಳದಲ್ಲಿ ಬಂದು ಇರಿಯುವಂತೆ ಶಿವರಾಜನ ಮುಂದೆ ನಿಂತವು. ಮುಂಜಾವಿಗೇ ಕೆಲಸಕ್ಕೆ ಹೊರಟವರು ಕಂಡು, ಯಾಕೋ ಎಲ್ಲಿಗೆ ಹೋಗ್ತಿದ್ದೀಯೇ, ಏನು ಊರು ಬಿಟ್ಟು ಎಲ್ಲಿಗಾದರೂ ಹೋಗ್ತಿದ್ದೀಯೇನೊ ಎಂದು ಕೆಣಕಿದರು. ನಮ್ಮವ್ವಾರ ವೂರಿಗೆ ವೋಯ್ತಾ ಇವ್ನಿ ಎಂದಷ್ಟು ಮಾತ್ರ ಹೇಳಿ ಶಿವರಾಜ ದಾರಿ ಕ್ರಮಿಸಿದ. ಸುಮಾರು ದೂರ ಬಂದ ಮೇಲೆ ಅಲ್ಲೊಂದು ಕಟ್ಟೆ ಸಿಕ್ಕಿತು. ತಾಯಿ ಆ ದಾರಿಯಲ್ಲಿ ನಡೆದು ಬರುವಾಗಲೆಲ್ಲ ಅಲ್ಲೇ ನೀರು ಕುಡಿದು ದಣಿವಾರಿಸಿಕೊಂಡು ಹೊರಡುತ್ತಿದ್ದುದು. ಆ ಕಟ್ಟೆಯ ದಿಬ್ಬದ ಮೇಲೆ ಶಿವರಾಜ ಸ್ವಲ್ಪ ಹೊತ್ತು ಕೂತ. ತಾವರೆ ಹೂಗಳು ಮನಸ್ಸನ್ನು ಸಂತೈಸಿದವು. ನೀರ ಹಕ್ಕಿಗಳು ಅಳಬೇಡ ಸುಮ್ಮನಿರು ಎಂದು ರೆಕ್ಕೆ ಬೀಸಿ ಹಾರಿ ಹೋದವು.

ಬಿಸಿಲು ಮೇಲೇರುತ್ತಿತ್ತು. ತಾಯೂರ ದಾರಿ ಸೆಳೆಯುತ್ತಿತ್ತು. ಶಿವರಾಜನ ಅಪ್ಪನನ್ನು

ಕೊಂದೇ ತೀರಬೇಕೆಂದು ಐದಾರು ಬಾರಿ ಸೋದರ ಮಾವಂದಿರು ಹೊಂಚು ಹಾಕಿ ವಿಫಲರಾಗಿದ್ದರು. ಅವನಿಗೆ ಆ ದೇವರೇ ನಿಕೃಷ್ಟ ಸಾವನ್ನು ಕೊಡುವನು ಬಿಟ್ಟು ಬಿಡಿ ಎಂದು ತನ್ನ ಏಳೂ ಮಕ್ಕಳನ್ನು ತಡೆದಿದ್ದ ಶಿವರಾಜನ ಅಜ್ಜಿ ಸಿದ್ದವ್ವ ಮೊಮ್ಮಗನ ಮೇಲಿನ ವ್ಯಾಮೋಹವನ್ನು ಎಷ್ಟು ಕಲ್ಲು ಹಾಕಿಕೊಂಡಿದ್ದರೂ ಕಳೆದುಕೊಂಡಿರಲಿಲ್ಲ. ಅವಳ ಹಿರಿಯ ಮಗ ರುದ್ರನಂತೂ ಎಷ್ಟು ಮಾತ್ರಕ್ಕೂ ತಾನು ಮಾತ್ರ ಸೇಡು ತೀರಿಸಿಕೊಳ್ಳದೆ ಬಿಡುವುದಿಲ್ಲ ಎಂದು ಕ್ರೋಧನಾಗಿಯೇ ಇದ್ದ. ಕೂಡು ದಾರಿಗೆ ಬಂದು ಈ ಮೂರು ದಾರಿಗಳಲ್ಲಿ ತಾಯೂರಿನ ಕಡೆಯ ದಾರಿ ಯಾವುದೆಂದು ಕಂಗಾಲಾಗಿ ನಿಂತ. ಬಹುಪಾಲು ನಿರ್ಜನವಾಗಿದ್ದ ಆ ದಾರಿ ಎಲ್ಲ ರೀತಿಯ ಭಯಗಳನ್ನೂ ಹಾಸಿಕೊಂಡು ಅಂಕುಡೊಂಕಾಗಿ ನುಲಿದುಕೊಂಡಿತ್ತು. ತಾಯನ್ನು ನೆನೆದು ಮುಂದೆ ಮುಂದೆ ನಡೆದ. ಇದೇ ಸರಿ ದಾರಿ ಎಂದು ಗುರುತು ಸಿಕ್ಕಿತು. ಆ ಕಗ್ಗಾಡು ಕುಗ್ರಾಮಕ್ಕೆ ನೆಟ್ಟಗೆ ಒಂದು ರಸ್ತೆಯೂ ಇರಲಿಲ್ಲ. ಕಲ್ಲುಮುಳ್ಳಿನ ಕಾಲು ದಾರಿಯಲ್ಲಿ ಸಾಗುವ ವೇಳೆಗೆ ಸಂಜೆಯಾಗುತ್ತಿತ್ತು. ಶಿವರಾಜನ ಮನದಲ್ಲಿ ಸಂತೋಷ ದುಃಖ ಎರಡೂ ವ್ಯತ್ಯಾಸವಿಲ್ಲದಂತೆ ಒಟ್ಟಾಗಿ ನುಗ್ಗಿ ಬಂದು ತಾಯೂರ ಹೆಬ್ಬಾಗಿಲಿಗೆ ಬರುವಷ್ಟರಲ್ಲಿ ಅವನ ಗುಂಡಿಗೆಯೆ ಬಾಯಿಗೆ ಬಂದಂತಾಗಿತ್ತು. ತಾಯ ಆ ಹಳೆಯ ದೊಡ್ಡ ಗುಡಿಸಲಿನ ಮುಂದೆ ಶಿವರಾಜ ಹೋಗಿ ನಿಂತ ಕೂಡಲೆ ಸಿದ್ದವ್ವನ ದುಃಖದ ಕಟ್ಟೆ ಒಡೆದು, ಬಂದೇನೊ ಮಗನೇ, ತಾಯ ತಿನಕಂಡು ತಬ್ಬಲಿಯಾಗಿ ಬಂದೇನೊ ಮಗನೇ ಎಂದು ತಬ್ಬಿ ಹಿಡಿದು ಎತ್ತಿ ಎದೆಗೆ ಒತ್ತಿಕೊಂಡು ಹೋಗಿ ಮೊಮ್ಮಗನನ್ನು ಪಡಸಾಲೆಯಲ್ಲಿ ಕೂಡಿಸಿ ಗೊಳೋ ಎಂದು ರೋದಿಸತೊಡಗಿದ್ದಳು.

ನೆರೆಹೊರೆಯವರೆಲ್ಲ ಬಂದು ಶಿವರಾಜನನ್ನು ಸುತ್ತಿಕೊಂಡಿದ್ದರು. ''ನೋಡ್ರವ್ವಾ, ನನ್ನ ಮಗಳು ಮಗನ್ನಾ ಕರ್ಕ ಬಂದು ಬಿಟ್ಟು ಬುಟ್ಟು ಅಲ್ಲೆಲ್ಲೊ ನೆರಳಾಗಿ ಮರೇಲಿ ಕುಂತವಳೆ ಕನ್ರವ್ವಾ'' ಎಂದು ಕಿಚ್ಚನ್ನು ತಾಳಲಾರದೆ ವದ್ದಾಡಿದಳು. ''ಅಯ್ಯೋ ಪಾಪ... ಅರೀದ್ಲೈದುಸ್ ಮುಂದೆ ನೀನೀಗೆ ಮಗಳ ನೆನಕಂಡು ಅತ್ರೆ ಅವುನಿಗೆ ಅವುರವ್ವನ ನೆನಪಾಗಿ ದುಕ್ಕ ಆಗುದಿಲ್ಲುವೇ... ಸುಮ್ಮನಿರು ಎಲ್ರೂ ಒಂದಿನ ವೋಗುರೇ ತಾನೇ'' ಎಂದು ಸಿದ್ದವ್ವನನ್ನು ಸಂತೈಸಿದರು. ಹೊಲಗೆಲಸಕ್ಕೆ ಹೋಗಿದ್ದ ಸೋದರ ಮಾವಂದಿರು ಇನ್ನೂ ಮನೆಗೆ ಹಿಂತಿರುಗಿರಲಿಲ್ಲ. ಅತ್ತು ಕರೆದು ಸುಸ್ತಾದ ಮನದಲ್ಲೂ ಸಿದ್ದವ್ವ ತನ್ನ ಮೊಮ್ಮಗ ಯಾವತ್ತೂ ತಾಯ ಜೊತೆ ಬಂದಾಗ ತಪ್ಪದೇ ಕೇಳುತ್ತಿದ್ದ ಎಳ್ಳುಂಡೆಯನ್ನು



ಅರೆಗಳಿಗೆಯಲ್ಲಿ ಮಾಡಿ ತಂದುಕೊಟ್ಟಳು. ಮೊದಲ ಬಾರಿಗೆ ತಾಯಿ ಇಲ್ಲದ ಆ ಅಜ್ಜಿ ಮನೆಯನ್ನು ಕಂಡು ಶಿವರಾಜನಿಗೆ ದುಃಖಿಸಲಾಗದಷ್ಟು ಸಂಕಟ ಸುತ್ತಿಕೊಂಡು ತಿನ್ನಲಾಗ ಆಮೇಕೆ ಮಾವ ಬಂದ್ಮೇಲೆ ತಿಂತಿನಿ ಎಂದು ಅನ್ಯಮನಸ್ಕನಾದ. ಯಾರು ಯಾರೊ ಬಂ ಏನೇನೊ ಮಾತಾಡಿ ಶಿವರಾಜನ ಅಪ್ಪನಿಗೆ ಹಿಡಿ ಶಾಪ ಹಾಕಿ ಹೋದರು. ಹೊ ಮುಳುಗುತ್ತಿತ್ತು. ಗೋಧೂಳಿ ಮುಸುಕಿ ದನಕರುಗಳು ಬರುವ ದಾರಿಯು ಕಪಿದುಕೊಂಡಿ ಪ್ರತಿಕ್ಷಣವೂ ತಾಯ ನೆನಪಾಗಿ ಅವಳಿಲ್ಲದ ಈ ಲೋಕ ಎಷ್ಟೊಂದು ಭಯಂಕರ ಎ ಅರಿವು ಶಿವರಾಜನ ನೆತ್ತಿಯಲ್ಲಿ ಮೊಳೆದು ತಾನು ಇಲ್ಲಿಗೆ ಬರಬಾರದಿತ್ತು ಎಂದುಕೊಂಡ

ತಾಯ ಮುದ್ದಿನ ಹಸುಕರುಗಳು ನೀನಾರೊ ನಮಗೆ ಗೊತ್ತಿಲ್ಲ ಎಂಬಂತೆ ಕಣ್ಣರ ನೋಡುತ್ತಿದ್ದವು. ಮೇಕೆ ಕುರಿಗಳು ಮೇದುಕೊಂಡು ಬರುತ್ತಿರುವುದು ತಡವಾಗಿ ಮರಿಗ ತಾಯಂದಿರಿಗಾಗಿ ಹಾಹಾಕಾರ ಎಬ್ಬಿಸಿ ಅರಚುತ್ತಿದ್ದವು. ಒಬ್ಬೊಬ್ಬರಾಗಿ ಸೋದ ಮಾವಂದಿರು ಬಂದರು. ಆ ಒಬ್ಬೊಬ್ಬರೂ ಒಮ್ಮೆ ಶಿವರಾಜನನ್ನು ನೋ ಉಪೇಕ್ಷೆಯಲ್ಲೊ ಕರುಣೆಯಲ್ಲೊ ಒಮ್ಮೆ ನೋಡಿ 'ಆ ನಿಮ್ಮಪ್ಪ ಸಾಯದೆ ಇನ ಬದುಕಿದ್ದಾನಾ' ಎಂದು ಕೇಳಿ ಅವರವರ ಕೊಟಿಗೆಯ ಕೆಲಸಗಳಲ್ಲಿ ಮಗ್ನರಾಗಿ ಮೊದಲ ಯಾವ ಅಕ್ಕರೆಯನ್ನೂ ತೋರದೆ ತಾಯ ಜೊತೆ ಏನೇನೊ ರೇಗಾಡಿ ಊರು ಮುಂದ ಮಾರಿ ಗುಡಿಯ ಕಡೆಗೆ ಹೊರಟು ಹೋದರು. ಅಕ್ಕ ಸತ್ತ ಮೇಲೆ ಏನೇನೊ ಆಪತ್ತುಗ ತಮ್ಮ ಮೇಲೆ ಆಗುತುಕೊಂಡಿವೆ ಎಂದೇ ಆ ಏಳೂ ಜನ ಅಣ್ಣತಮ್ಮಂದಿರು ಭಾವಿಸಿದ್ದ ಮಗಳ ಚಿಂತೆಯಲ್ಲೇ ತಂದೆ ಪ್ರಾಣ ಬಿಟ್ಟ ಹಿಂದೆಯೇ ಹತ್ತಾರು ಕುರಿಮೇಕೆಗಳು ರೋ ತಗುಲಿ ಸತ್ತು ವಿಪರೀತ ಕಷ್ಟನಷ್ಟಗಳು ಉಂಟಾಗಿದ್ದವು. ಹಿರಿಮಗ ರುದ್ರ ಮದುವೆಯ ಬೇಡ ಎಂದು ಗಡ್ಡ ಮೀಸೆ ಬೆಳೆಸಿಕೊಂಡು ಆ ಶಿವರಾಜನ ಅಪ್ಪನನ್ನು ಕೊಲ್ಲಲು ಆಗ ಹೋಯಿತಲ್ಲಾ ಎಂದು ಆಗಾಗ ದ್ವೇಷದಲ್ಲಿ ಕೆಂಡಾಮಂಡಲನಾಗುತ್ತಿದ್ದ.

ಕೊಟಿಗೆಯಲ್ಲಿದ್ದ ಮೇಕೆ ಮರಿಗಳ ಜೊತೆ ಶಿವರಾಜ ತಾನೂ ಒಂದು ಮೇಕೆ ಮ ಆಗಿದ್ದಿದ್ದರೆ ಚೆನ್ನಾಗಿತ್ತೆಂದು ಭಾವಿಸುತ್ತಾ ಅವು ತಾಯಿಗಾಗಿ ಹಂಬಲಿಸಿ ಕೂಗುವುದ ಆಲಿಸುತ್ತ ಕೂತಿದ್ದ. ಸಿದ್ದವ್ವ ಒಲೆ ಹತ್ತಿಸುತ್ತಿದ್ದಳು. ಮುಂಬಾಗಿಲ ಅಡ್ಡಗೋಡೆಯ ಮೇ ಕರಿ ಬೆಕ್ಕು ಶಿವರಾಜನನ್ನೇ ದಿಟ್ಟಿಸುತ್ತಿತ್ತು. ರುದ್ರ ಎಲ್ಲಿಯೋ ಹೋಗಿದ್ದವನು ಬಂದ ಸಿದ್ದವ್ವನನ್ನು ಜೋರಾಗಿ ಗದರಿಸಿ ಕರೆದು ''ಅವನೆಲ್ಲವ್ವಾ, ಅವನ ಯಾಕೆ ಕರ್ಸಿದ್ದೀಯೆ. ವಂಶದ ಕೆಟ್ಟ ಹುಳವ ಮನೆಗೆ ಸೇರಿಸ್ಕಂದಿದ್ದಿಯಲ್ಲಾ, ಎಲ್ಲಾನು ಮರುತು ಬಿಟ್ಟಾ ತಾಯಿ ಜೀವನೇ ತೆಗದದ್ದ ನೋಡಿದ್ರೂ ಗೊತ್ತಿದ್ರೂ ಪೋಲೀಸ್‌ನೋರ್ಗೆ ಸಾಕ್ಷಿ ಯೆ ನಮ್ಮಪ್ಪ ನಮ್ಮವ್ವನ್ನ ವಡ್ಡು ಬಡ್ಡು ಸಾಯ್ಸಿ ಬಾವಿಗೆ ಎತಾಕ್ಲಿಲ್ಲ ಅಂತಾ ಹೇಳ್ದವ್ನ ನಾ ಸಾಯಿಸ್ದೆ ಬಿಟ್ಟಿರುವುದೇ ಹೆಚ್ಚು. ತಿರ್ಗ ಅಂತವನ ಮಗನ್ನ ನಾವು ಹತ್ರ ಸೇರಿಸ್ಕೊ ಅಂದ್ರೆ ಇನ್ನೊಂದ್ ಸಲ ಸತ್ತು ಸ್ವರ್ಗದೆಲ್ಲಿರೊ ನಮ್ಮಕ್ಕನ ಪ್ರಾಣವ ತೆಗದ ಎಲ್ಲಿದ್ದಾನವನು, ಮನೆಯಿಂದ ಆಚ್ಗೆ ಕಳ್ಸು'' ಎಂದು ಕೂಗಾಡಿದ. ಶಿವರಾಜನ ದಸಕ್ಕೆಂದು ಕುಸಿದಂತಾಯಿತು. ರುದ್ರ ಬಂದ ರಭಸಕ್ಕೆ ಗುಡಿಸಲಿನ ಆ ತಟಿಕೆ ಬಾಗಿ ಅತ್ತ ಅಯ್ಯೋ ಎಂದು ನಡು ಮುರಿದುಕೊಂಡಂತೆ ಬಿದ್ದಿತ್ತು. ರುದ್ರನ ಸಿಟ್ಟಿನ ಕಣ್ಣುಗ ಅವನು ತಟ್ಟನೆ ಕಾಣಲಿಲ್ಲ. ಕೊಟಿಗೆಯ ಚರಣೆಯಲ್ಲಿ ಅವಿತುಕೊಂಡು ಮೇಕೆ ಮರಿ ತಲೆಮರೆಯಿಂದ ತನ್ನ ಸೋದರ ಮಾವನ ಉಗ್ರರೂಪವನ್ನು ಶಿವರಾಜ ಕಂಡ. ಮನೆ ಕಳಸದಂತಿದ್ದ ಅಕ್ಕನೇ ಹೋದ ಮೇಲೆ ಇನ್ನಾವ ಸುಖ, ಇನ್ನಾವ ಸಂಬಂಧ, ಯಾ ಬಂದರೇನು, ಯಾರು ಹೋದರೇನು ಎಂದು ಕಿಚ್ಚಾಗುತ್ತಿದ್ದ. ಹೊಲಮಾಳದಿ ಬಂದಿದ್ದ ಅವನ ಕೈಯಲ್ಲಿ ದೊಡ್ಡ ಕತ್ತಿಯು ದೀಪದ ಬೆಳಕಲ್ಲಿ ಅಸ್ಪಷ್ಟವಾಗಿ ಕಾಣುತ್ತಿತ್ತು.

ಸಿದ್ದವ್ವ ದಿಢೀರನೆ ಬಂದು ಮಗನ ಕೈಲಿದ್ದ ಕತ್ತಿಯನ್ನು ಕಿತ್ತುಕೊಂಡು ತು ತುಳುಕುತ್ತಿದ್ದ ದುಃಖವನ್ನು ನುಂಗಿಕೊಂಡು, ''ಲೋ ಅವನೂ ಕೂಡ ನಾನೆತ್ತವಳ ಮಗ ಕನೊ. ಅದರಲ್ಲಿರೊ ಜೀವಾನೂ ನಂದೇ ಕನೊ. ಅವನು ನನ್ನ ಮಗಳ ಕಣ್ಣು ಮೂ ಬಾಯಿ ತುಟಿ ಹಲ್ಲು ಹಣೆ ಕೆನ್ನೆ ಎಲ್ಲಾ ರೂಪಾನೂ ಅಂಗಂಗೇ ವೊತ್ಕಂದು ಬಂದ ಕನೊ. ನನ್ನ ಮಗಳ ನಗುವೆಲ್ಲ ಅವನ ತುಟಿಯ ಮೇಲೆ ಅಂಗೇ ಇನ್ನೂ ಕುಂತವೆ ಕನ ನೀನ್ ನನ್ ಮಗನಾಗಿ ಅವೆಲ್ಲನೂ ನೀನೇ ಕಿತ್ಕಂದಿಯೇನಪ್ಪಾ ....'' ಎಂದು ಮಗನ ಮು ಅಸಹಾಯಕವಾಗಿ ಕೂತುಬಿಟ್ಟಳು. ರುದ್ರ ಏದುಸಿರು ಬಿಡುತ್ತ ಅವರಪ್ಪನ್ನ ಮುಗಿಸ ಅಂತಾ ವೋದಾಗ್ಲೂ ನೀನಿಂಗೆ ಕಾಲಿಗೆ ಅಡ್ಡ ಬಂದು ಗುರಿ ತಪ್ಸಿದೆ. ಕೊಂದೋರ ಮೆ ಇರೊ ಕರುಣೆ ನಿನಗೆ ನಿನ್ನ ಮಕ್ಕಳ ಮೇಲೆ ಇಲ್ಲ ಎಂದು ರುದ್ರ ಕತ್ತಲ ಬೀದಿ ಸಂದಿ ಕರಗಿ ಹೋದ. ಮೊಮ್ಮಗನನ್ನು ಸಿದ್ದವ್ವ ಸೆರಗ ಮರೆಯಲ್ಲಿ ಬಚ್ಚಿಟ್ಟುಕೊಳ್ಳುವಂತೆ ಮುಂದೆ ಕೂರಿಸಿಕೊಂಡು ಸಮಾಧಾನ ಮಾಡುತ್ತಲೇ ಮಗಳನ್ನು ನೆನೆಯುತ್ತ ಅ ಶಿವರಾಜನ ರಮಿಸುತ್ತ ಕುದಿಯುತ್ತಿದ್ದ ಗಂಜಿಯನ್ನು ಬಸಿಯತೊಡಗಿದಳು.

ಬೆದರಿದ ಪಿಳಿ ಪಿಳಿ ಕಣ್ಣುಗಳನ್ನು ಮನೆ ತುಂಬ ಜೋಡಿಸಿದ್ದ ಆಳೆತ್ತರದ ದ

ಾಣಗಳ ಕಡೆ ಶಿವರಾಜ ಹೊರಳಿಸಿದ.
ತಗಳೇ ಹೊಂಚುಹಾಕಿ ಸಾಲಾಗಿ ಮೂಲೆಗಳಲ್ಲಿ
ತಿರುವಂತೆ ದೀಪದ ಕ್ಷೀಣ ಬೆಳಕಲ್ಲಿ ಗುಡಾಣಗಳು
ತವು. ಇಡೀ ಗುಡಿಸಲೇ ಒಂದು ದೊಡ್ಡ
ಟಿಗೆಯಾಗಿತ್ತು. ಹಸುಗಳು, ಎತ್ತುಗಳು,
ಮ್ಮಗಳು, ಕುರಿ, ಮೇಕೆ, ಕೋಳಿಗಳೆಲ್ಲ ಒಟ್ಟಾಗಿ
ಲ್ಲ ಆವರಿಸಿ ಮಲಗುವುದಕ್ಕೇ ಜಾಗವಿರಲಿಲ್ಲ.
ಲ್ಲು ಏನೇನೊ ಹಳೇ ಮುಳೇ ವಸ್ತುಗಳು
ಯಾಗಿ ಬಿದ್ದಿದ್ದವು. ರಾಸುಗಳು ಯಾವುದೊ
ರ್ಣ ಯಜ್ಞವನ್ನು ಭಕ್ತಿಯಿಂದ ಕೈಗೊಂಡಂತೆ
ಲಕು ಹಾಕುತ್ತಾ ತಮ್ಮದೇ ದಿವ್ಯಲೋಕದಲ್ಲಿ
ಳುಗಿದ್ದವು. ಕೋಳಿ ಪಿಳ್ಳೆಗಳು ಆಗಾಗ ಹಿತವಾಗಿ
ದ್ದು ಮಾಡುತ್ತ ತಾಯ ಬೆಚ್ಚನೆಯ ರೆಕ್ಕೆ ಪುಕ್ಕಗಳ
ರೆಯಿಂದ ಹೊರಗೆ ತಲೆ ಹಾಕಿ ಮತ್ತೆ ಒಳ
ರುತ್ತಿದ್ದವು. ಗವ್ವೆನ್ನುವ ಕಗ್ಗತ್ತಲು ಆಗಲೆ ಮುಚ್ಚಿ
ಂಡು ಅಡ್ಡಗೋಡೆಯ ಮೇಲಿನ ದೀಪವನ್ನು
ಗುವಂತೆ ಅದರ ಸುತ್ತಲೇ ಹೊಂಚು ಹಾಕುತ್ತಿತ್ತು.
ರಾಜನ ಸೋದರ ಮಾವಂದಿರು ಮನೆಯಲ್ಲಿ
ಲಗಲು ಸರಿಯಾಗಿ ಜಾಗ ಇಲ್ಲೆಂದು ಮಾರಿ
ತಿಗೆ ಹೋಗಿ ಮಲಗುತ್ತಿದ್ದರು. ಎಲ್ಲೆಲ್ಲೊ
ೀಗಿದ್ದವರು ಊಟದ ಹೊತ್ತಿಗೆ ಬಂದು ಕೂತರು.
ೂ ಕಳೆದುಕೊಂಡವರಂತೆ ಆ ಅಣ್ಣತಮ್ಮಂದಿರು
ಕವಾಗಿ ಒಂದೊಂದು ಮೂಲೆಯಲ್ಲಿ ಆ
ಣಗಳ ನಡುವೆಯೇ ಕೂತು ಉಣ್ಣತೊಡಗಿದರು.
ದಿದ್ದ ಶಿವರಾಜ ತುತ್ತು ಮುರಿದು ಮಿದ್ದಿಸಿ ನುಂಗಿದ
ದರೂ ಏನೊ ಎದೆಯಲ್ಲೆ ನಿಂತಂತಾಯಿತು.
ಂಡು ಮುಗಿಸಿದ ಅವರು ಅವರ ಪಾಡಿಗೆ ಮಾರಿ
ತಿ ಕಡೆ ನಡೆದೇ ಬಿಟ್ಟರು. ತಮ್ಮ ಅಕ್ಕ ತವರಿಗೆ
ದಾಗಲೆಲ್ಲ ಆ ಸಹೋದರರ ಸಂಭ್ರಮ ಇಡೀ
ಟ್ಟಿಯ ಅಂಗಳವನ್ನೆಲ್ಲ ಆವರಿಸಿಕೊಂಡು ಹಬ್ಬ



ಆಚರಿಸುವಂತೆ ರಾತ್ರಿಯ ಎಷ್ಟೋ ಹೊತ್ತಿನ ತನಕ ಅಂಗಳದಲ್ಲಿ ಚಾಪೆ ಹಾಸಿ ಮಲಗಿ ಅಕ್ಕನ ಕಷ್ಟಸುಖವನ್ನೆಲ್ಲ ವಿಚಾರಿಸಿ ಕೊಳ್ಳುತ್ತಿದ್ದರು. ಅಕ್ಕನಿಗಾಗಿ ಆ ಏಳೂ ಮಂದಿ ಜೀವ ಕೊಡುವುದಕ್ಕೂ ಸೈ ಎಂದು ಮುಂದಾಗುತ್ತಿದ್ದರು. ಅಂತಹ ದಿನಗಳ ಬೆಳದಿಂಗಳ ಇರುಳ ಅಂಗಳದಲ್ಲಿ ಶಿವರಾಜನಿಗೆ ಅದೇ ಹಿರಿಯ ಮಾವ ರುದ್ರ ಚಂದಮಾಮನ ಅದೆಷ್ಟೋ ರಮ್ಯ ಕಥೆಗಳನ್ನು ಹೇಳಿ ಆಕಾಶಕ್ಕೇ ಕರೆದುಕೊಂಡು ಹೋಗಿಬಿಡುತ್ತಿದ್ದ.

ಗವ್ವೆನ್ನುವ ಅಂಗಳದಲ್ಲೀಗ ಯಾವುದೊ ಕೇಡು ಸೂಚನೆಯನ್ನು ನೀಡುವಂತೆ ಮುದಿ ನಾಯಿಯು ಆಕಾಶಕ್ಕೆ ಮೊಗವೆತ್ತಿ ದೀನವಾಗಿ ಊಳಿಡುತ್ತಿತ್ತು. ಅದೇ ವೇಳೆಗೆ ರುದ್ರನೂ ಬಂದ. ಅವನ ಕಣ್ಣುಗಳಲ್ಲಿನ್ನೂ ಕ್ರೋಧ ಇಣುಕಾಡುತ್ತಿತ್ತು. ಶಿವರಾಜ ಅಜ್ಜಿಯ ಕಿಬ್ಬದಿಗೆ ಒತ್ತಿಕೊಂಡಂತೆ ಕೂತು ಎಷ್ಟು ಹೊತ್ತಿಗೆ ಬೆಳಕು ಹರಿಯುವುದೋ ಎಂದು ಆತಂಕದಲ್ಲಿ ಒಳಗೇ ವಿಲವಿಲಿಸಿದ. ತಣಿಗೆಯ ತುಂಬ ಹರಿಡಿಕೊಂಡ ದಪ್ಪ ಮುದ್ದೆಯನ್ನು ಉಳ್ಳಿಕಾಳು ಉಪ್ಪೆಸರು ಕಾರದಲ್ಲಿ ಅದ್ದಿಕೊಂಡು ರುದ್ರ ಗಬ ಗಬನೆ ತುತ್ತನ್ನು ನುಂಗುತ್ತಿದ್ದ. ಹಿರಿಯ ಮಗನೇ ಈಗ ಹೀಗೆ ಹುಚ್ಚನಂತೆ ಕಳೆದುಹೋಗುತ್ತಿದ್ದಾನಲ್ಲ ಎಂದು ಸಿದ್ದವ್ವ ಮಗನ ಮೇಲೆ ಕನಿಕರಿಸದೆ ಇರಲಿಲ್ಲ.

ರುದ್ರ ಆಗಾಗ ಶಿವರಾಜನ ಮೇಲೊಮ್ಮೆ ರೇಗುತ್ತಾ ತನ್ನ ಅವ್ವನ ಕಡೆಗೊಮ್ಮೆ ಬೇಸರದಿಂದ ನೋಡುತ್ತಾ ಕೈ ತೊಳೆದಿದ್ದ. ಅವತ್ತು ರುದ್ರನೇ ಪೊಲೀಸು ಕೇಸು ಕೊಟ್ಟು ತನ್ನ ಅಕ್ಕನನ್ನು ಇವರೆಲ್ಲ ಸೇರಿ ಕೊಂದರೆಂದು ದೀನವಾಗಿ ಪರಿಪರಿಯಾಗಿ ಪೊಲೀಸ್ ಇನ್‌ಸ್ಪೆಕ್ಟರ್ ಮುಂದೆ ಕೈ ಮುಗಿದು ಬೇಡಿಕೊಂಡು ಈ ನೀಚ ಕೊಲೆಗಾರನನ್ನು ಜೈಲಿಗೆ ಹಾಕಿ ಕೊಳೆಸಿ ಸ್ವಾಮೀ ಎಂದು ಕೇಳಿಕೊಂಡಿದ್ದ. ಯಾರೊಬ್ಬರೂ ಸಾಕ್ಷಿ ಹೇಳಲು ಮುಂದೆ ಬಂದಿರಲಿಲ್ಲ. ಶಿವರಾಜನ ಅಪ್ಪ ಇನ್‌ಸ್ಪೆಕ್ಟರರನ್ನೇ ಕೈವಶ ಮಾಡಿಕೊಂಡು ಬಿಟ್ಟಿದ್ದ. ಕೊನೆಗೆ ಮಗನಿಂದಲೇ ಸಾಕ್ಷಿ ಹೇಳಿಸಿ ಅವನನ್ನು ಜೈಲಿಗೆ ಹಾಕಿಸಬಹುದಿತ್ತು ಎಂಬ ಲೆಕ್ಕಾಚಾರವೂ ತಲೆಕೆಳಗಾಗಿತ್ತು.

ದೀಪದ ಬೆಳಕು ಶಿವರಾಜನ ಮುಖದ ಮೇಲಿದ್ದ ಭಯವನ್ನು ತೋರುವಂತೆ ರುದ್ರನ ಮುಂದೆಯೂ ತುಳುಕುತ್ತಿತ್ತು. ಒಂದು ಕ್ಷಣದಲ್ಲೇ ಶಿವರಾಜನ ಪ್ರಾಣವನ್ನು ರುದ್ರ ಹೊಸಕಿ ಹಾಕಿ ಬಿಡಬಹುದಿತ್ತು. ಯಾಕೊ ಏನೊ ರುದ್ರ ಅವನ ಎಳೆಯ ಮುಖವನ್ನೇ ದಿಟ್ಟಿಸಿ ನೋಡಿದ. ಶಿವರಾಜನ ಮುಖದ ಮೇಲೆ ಎಲ್ಲೊ ಅವನ ಅಕ್ಕನೇ ಸುಳಿದು ಬಂದಂತಾಯಿತು. ಅದು ಸಿಟ್ಟೊ ದುಃಖವೊ ತಿರಸ್ಕಾರವೊ ತಿಳಿಯದ ಕಿಚ್ಚಿನಿಂದ ವದರಾಡಿದ. ''ಹೋಗಿ ಮಲಿಕವೋಗೊ. ಅರೀದ ಹೈದನ ಬೈಯ್ದು ಈಗೇನು ಬಂದಾದೊ'' ಎಂದು ಸಿದ್ದವ್ವ ಚಾಪೆ ಹಾಸಿ ಶಿವರಾಜನನ್ನು ಬಾ ನನ್ ರಾಜಾ ಎಂದು ಹತ್ತಿರ ಕರೆದಳು.

ರುದ್ರ ಆ ಕೊಟಿಗೆಯ ಆಚೆ ಮೂಲೆಯ ಮರೆಯಲ್ಲೇ ಮಲಗುತ್ತಿದ್ದುದು. ನೀನಿನ್ನೂ ಇಲ್ಲಿ ಬಂದು ಯಾಕೆ ಮಲಗಿಲ್ಲ ಎಂಬಂತೆ ಟಗರು ರುದ್ರನನ್ನು ಕರೆಯುತ್ತಿತ್ತು. ಬಹಳ ಹೊತ್ತಿನ ತನಕ ಆತ ಹಾಗೇ ಅಡ್ಡಗೋಡೆಯ ಮೇಲಿದ್ದ ದೀಪವನ್ನೇ ದಿಟ್ಟಿಸುತ್ತ ಕೂತಿದ್ದ. ಭಾಗಶಃ ಮುಂದೇನು ಮಾಡುವುದು ಎಂಬುದನ್ನೆ ಆತ ಯೋಚಿಸುತ್ತಿದ್ದಂತಿತ್ತು. ಎದ್ದೋಗೊ ಎಂದು ಸಿದ್ದವ್ವ ಮೂರು ನಾಲ್ಕು ಬಾರಿ ಹೇಳಿದ್ದರೂ ರುದ್ರ ಕದಲಿರಲಿಲ್ಲ. ''ಯಾಕ್ಲಾ, ಏನಾಯತ್ಲ... ಯಾಕಿಂಗೆ ದೆವ್ವ ವಡ್ದವರಂಗೆ ದೀಪನೆ ದಿಟ್ಟಿಸುತ್ತ ಕುಂತಿದ್ದೀಯೇ'' ಎಂದು ಸಿದ್ದವ್ವ ಎದ್ದು ಬಂದು ಮಗನ ಅಲುಗಾಡಿಸಿದಳು. ರುದ್ರನ ಕಣ್ಣು ತುಂಬ ಬಟ್ಟಾಡುತ್ತಿದ್ದ ಕಣ್ಣೀರು ಜಾರಿ ಉರುಳಿದವು. ಏನಿಲ್ಲ ಕನಾ ನೀನು ಮಲಿಕವಾ ಎಂದು ರುದ್ರ ಶಿವರಾಜನ ಕಡೆಗೇ ದೃಷ್ಟಿ ನೆಟ್ಟ. ''ನಡೀಲಾ ಇಪಟೂ, ವತಾರಕೆ ವತ್ರೆಂಟೆ ಎದ್ದು ಕೆಲುಸ್ಕೋಗುಕಿಲ್ಲುವೆ'' ಎಂದು ಮತ್ತೊಮ್ಮೆ ಒತ್ತಾಯಿಸಿದಳು. ಆಯ್ತು, ಅವುನ್ನಾ ನನ್‌ತಾವೆ ಮಲಿಗಿಸ್ಕತಿನಿ ಕಳ್ಸು



ಎಂದು ಭಾರವಾದ ದನಿಯಿಂದ ರುದ್ರ ಕೇಳಿದ. ಅದ್ಯಾಕ್ಲಾ, ನಂತಾವೆ ಇರ್ಲಿಬುಡೊ, ತಾಯಿ ಮಗ್ಲಿಲ್‌ದೇ ತಬ್ಲಿಯಾಗದೇ ಎನ್ನುತ್ತ ಶಿವರಾಜನನ್ನು ಪಕ್ಕದಲ್ಲೇ ಇರಿಸಿಕೊಂಡಳು. ಇಲ್ಲಾ, ಅವನು ನಂತಾವೆನೆ ಮಲಿಕಬೇಕು ಬಿಡವ್ವೋ ಎಂದು ಶಿವರಾಜನ ಕೈ ಹಿಡಿದು ಎಳೆದ. ಇದ್ಯಾಕ್ಲಾ, ಅವನ್ನ ಕಂಡ್ರೆ ಕೆಂಡ ಆಯಿತಿಯೆ. ಅಂತಾದ್ರೆಲಿ ಅವುನ್ನ ನೀನ್ಯಾಕ್ಲ ಅತ್ರ ಮಲಿಗಿಸ್ಕಬೇಕೂ... ವೋಗ್ಲ ಇಪಟು ಎಂದು ಸಿದ್ದವ್ವ ರೇಗಿದಳು. ಎಷ್ಟೇ ಆಗಲಿ ಅವತ್ತು ಸ್ಮಶಾನದಲ್ಲಿ ಶಿವರಾಜನನ್ನು ಉರಿವ ಚಿತೆಗೆ ಎಸೆದು ಬಿಡಲು ಇದೇ ರುದ್ರನೇ ಮುಂದಾಗಿದ್ದನ್ನು ಸಿದ್ದವ್ವ ಮರೆತಿರಲಿಲ್ಲ. ನಮ್ಮಕ್ಕನ ಮಗ ಅಂತಾ ನನಗೂ ಕರುಣೆ ಅದೆ ಕನವ್ವಾ ಎಂದು ಕೆಂಡದಂತಿದ್ದ ಕಣ್ಣುಗಳಲ್ಲಿ ನೀರು ತುಂಬಿಕೊಂಡ. ಸಕಾಲಕ್ಕೆ ಮದುವೆ ಆಗಿದ್ದಿದ್ದರೆ ಮಗನಿಗೆ ಇಷ್ಟು ಹೊತ್ತಿಗೆ ಎರಡಾದರೂ ಮಕ್ಕಳಾಗುತ್ತಿದ್ದವಲ್ಲವೇ ಎಂದು ಸಿದ್ದವ್ವ ಲೆಕ್ಕಿಸಿ ಹೆತ್ತ ಕರುಳಲ್ಲಿ ರುದ್ರನನ್ನು ದಿಟ್ಟಿಸಿದಳು. ಶಿವರಾಜನ ಕಾಲ ಬಳಿಯೇ ಕುಕ್ಕರುಗಾಲಲ್ಲಿ ಆತ ಕೂತಿದ್ದ. ಯಾವತ್ತಿನ ತಾಯ್ತನವನ್ನು ರುದ್ರನ ಬಳಿಯೇ ಹರಿಸಿದಳು. ಶಿವರಾಜ ಎದ್ದು ಕೂತ. ಹತ್ತಿರ ಕರೆದ ರುದ್ರ ತಲೆ ಸವರಿದ.

ಭಯ ಅನುಮಾನ ಸಮಾಧಾನ ಒಟ್ಟಿಗೇ ಬೆನ್ನು ತಡವುತ್ತಿದ್ದಂತೆಯೆ ಶಿವರಾಜನ ಬೆನ್ನ ಮೇಲೆ

ಹರಿದಾಡಿದವು. ಅವ್ವಾ ನಿಂತಾವೆನೆ ಮಲಿಕತಿನಿಕನವ್ವಾ ಎಂದು ಶಿವರಾಜ ಅಜ್ಜಿಯನ್ನು ಬೇಡುವಂತೆ ಕೋರಿದ. ಇಲ್ಲ ಕನೊ ರಾಜಾ. ನಾನೇನು ಮಾಡುದಿಲ್ಲ ಬಾರೊ ರಾಜಾ ಎಂದು ರುದ್ರ ಹತ್ತಿರಕ್ಕೆ ಎಳೆದುಕೊಂಡ. ಸಿದ್ದವ್ವನ ಮುಂದೆ ರುದ್ರ ಹಿಂದೆಂದೂ ಅಷ್ಟೊಂದು ಕರುಣೆಯನ್ನೆ ತೋಡಿಕೊಂಡಿರಲಿಲ್ಲ. ಕರಗಿದ ಸಿದ್ದವ್ವ ಮೊಮ್ಮಗನನ್ನು ರುದ್ರನ ಬಳಿಯೇ ಮಲಗಲು ಕಳಿಸಿಬಿಟ್ಟಳು. ಎಷ್ಟೇ ಕಲ್ಲು ಹೃದಯವಾದರೂ ತನ್ನ ಅಕ್ಕನ ಮೇಲಿನ ಪ್ರೀತಿಯಿಂದಾಗಿ ಅವಳ ಹೊಟ್ಟೆಯಲ್ಲಿ ಹುಟ್ಟಿದವನನ್ನು ರುದ್ರ ಏನೂ ಮಾಡುವುದಿಲ್ಲ ಎಂದು ಮಲಗಿದಳು. ರಾಸುಗಳ ನಡುವೆ ದಾಟಿಕೊಂಡು ಕೊಟಿಗೆಯ ಈಚೆ ಮೂಲೆಗೆ ಬಂದದ್ದೇ ಶಿವರಾಜನಿಗೆ ಎಷ್ಟೋ ದೂರ ಬಂದಂತೆನಿಸಿ ಅಜ್ಜಿಗೂ ತನ್ನ ಮೇಲೆ ಪ್ರೀತಿ ಇಲ್ಲ, ತಾಯಿ ಇದ್ದಿದ್ದರೆ ತನಗೀ ಗತಿ ಬರುತ್ತಿರಲಿಲ್ಲ ಎಂದುಕೊಳ್ಳುತ್ತಾ ಸಣ್ಣಗೆ ಬೆವರಿದ. ರುದ್ರ ಯಾವುದೊ ಗತಕಾಲದ ಕಂಬಳಿಯನ್ನು ಶಿವರಾಜನಿಗೆ ಸುತ್ತಿದಂತೆ ಹೊದ್ದಿಸಿ ಗೋಡೆ ಮೂಲೆಯ ಕಡೆಗೆ ಮಲಗಿಕೊಂಡು ದೀಪ ತುಂಬಿದ. ಉಸಿರು ಗಟ್ಟಿಸಿದಂತೆ ಕಂಬಳಿಯು ಶಿವರಾಜನ ಮುಖವನ್ನೆಲ್ಲ ಮುಚ್ಚಿಕೊಂಡಿತ್ತು. ತಾಯ ಮಡಿಲಲ್ಲಿ ಕೋಳಿ ಮರಿಗಳು ಬೆಚ್ಚಗೆ ಸುಖವಾಗಿ ಏನೊ ಮಾತನಾಡಿಕೊಳ್ಳುತ್ತಿದ್ದವು. ಹಿತ್ತಿಲ ಬಾಗೇ ಮರದಲ್ಲಿದ್ದ ಕಾಗೆಗಳು ಅರೆನಿದ್ದೆಯ ದನಿಯಲ್ಲಿ ಏನೊ ಕೇಡು ಕಂಡಂತೆ ವರಲುತ್ತಿದ್ದವು.

ಇಡೀ ಕೊಟಿಗೆ ಗಂಜಳದ ವಾಸನೆಯಿಂದ ತುಂಬಿ ತುಳುಕಿ ಪ್ರಾಣಿಗಳ ಸಿಂಡು ವಾಸನೆ ಅದರಲ್ಲಿ ಬೆರೆತು ಹೋಗಿತ್ತು. ಶಿವರಾಜನನ್ನು ಎಳೆದು ರುದ್ರ ಹತ್ತಿರಕ್ಕೆ ಮಲಗಿಸಿಕೊಂಡ. ಆತ ತನ್ನ ಬಲವಾದ ಕೈಯನ್ನು ಆಗಾಗ ಅವನ ಹೊಟ್ಟೆ ಎದೆ ಕತ್ತು ಮುಖದ ಮೇಲೆಲ್ಲ ಆಡಿಸುತ್ತ ಮಲಕೊ ಎನ್ನುತ್ತಿದ್ದ. ತಾನು ಬೇಗ ನಿದ್ದೆಗೆ ಜಾರಿದರೆ ಮಾವ ಎಲ್ಲಿ ತನ್ನ ಕತ್ತು ಹಿಚುಕಿ ಸಾಯಿಸಿ ಬಿಡುವನೊ ಎಂಬ ಭಯ ಶಿವರಾಜನ ಎದೆಯ ಒಳಗೆ ಸುತ್ತಿಕೊಂಡಿತು. ಉಚ್ಚೆ ಉಯ್ದುಕೊಳ್ಳುವಂತಾಗಿ ಶಿವರಾಜನ ತೊಡೆಗಳು ನಡುಗಲಾರಂಭಿಸಿದವು. ದೂರದಲ್ಲೆಲ್ಲೊ ಗೂಬೆ ಕೂಗುತ್ತಿತ್ತು. ಮಾವ ಅಜ್ಜಾವೆ ವೋಗಿ ಮಲಿಕತಿನಿ ಎಂದು ಎಲ್ಲಾ ಧೈರ್ಯವನ್ನು ಒಟ್ಟಾಗಿಸಿಕೊಂಡ. ನಂತಾವೆ ಮಲಿಕಲಾ ಎಂದು ರುದ್ರ ಗದರಿದ ದನಿಯಲ್ಲಿ ಒರಟಾದ ಕೈಯನ್ನು ಕುತ್ತಿಗೆಯ ಬಳಿಯೆ ಸವರಿದ. ಹೆಬ್ಬಾವೇ ಹರಿದಂತಾಯಿತು. ಆ ಕೋಳಿ ಕೂಗುವ ಹೊತ್ತಿಗೇ ಎದ್ದು ತಾಯೂರ ದಾರಿ ಹಿಡಿದು ದಣಿದು ಬಂದಿದ್ದ ಶಿವರಾಜನ ಕಣ್ಣುಗಳು ನಿದ್ದೆಗೆ ಎಳೆಯುತ್ತಿದ್ದರೂ ಭೀತಿಯಿಂದ ಕಣ್ಣುಬಿಟ್ಟುಕೊಂಡು ಎಚ್ಚರವಾಗಿಯೇ ಇದ್ದ. ಆಗಾಗ ರುದ್ರ ಶಿವರಾಜನ ಮೈ ಸವರುತ್ತ ಏನೊ ಗೊಣಗುತ್ತ ಸಂಕಟದ ಯಾವುದೊ ನಿಟ್ಟುಸಿರು ಬಿಡುತ್ತಾ ಅವನೂ ನಿದ್ದೆಯಿಲ್ಲದೆ ಹೊರಳಾಡುತ್ತಿದ್ದ. ಅವನ ತಲೆ ತುಂಬ ಶಿವರಾಜನ ಅಪ್ಪನೇ ಬಂದು ಕೂತಿದ್ದ. ತನ್ನ ಕಡು ವೈರಿಯ ಮಗನೇ ತನ್ನ ಮಗ್ಗುಲಲ್ಲೀಗ ಮಲಗಿದ್ದಾನೆಂದು ಅನಿಯಂತ್ರಿತವಾದ ಕ್ರೋಧ ಒತ್ತಿಕೊಂಡು ಬರುತ್ತಿತ್ತು. ಸಿದ್ದವ್ವ ಗಾಢವಾದ ನಿದ್ದೆಯಲ್ಲಿದ್ದಳು. ತನ್ನ ಅಕ್ಕನನ್ನು ಶಿವರಾಜನ ಅಪ್ಪ ಹೇಗೆ ಕತ್ತು ಹಿಚುಕಿ ಕೊಂದು ಬಾವಿಗೆ ಎಸೆದ ಎಂಬುದು ಸುಳಿಯಂತೆ ರುದ್ರನ ತಲೆಯೊಳಗೆ ಸುತ್ತತೊಡಗಿತು. ಯಾವ ಕೇಡೋ ಏನೋ ಅವನ ಉದ್ವೇಗವನ್ನು ಉಲ್ಬಣಿಸುತ್ತಿತ್ತು. ಶಿವರಾಜನ ಕತ್ತನ್ನು ಹಕ್ಕಿಯ ಕೊರಳ ಮುರಿದಂತೆಯೂ ಅವನ ತೋಳು ತೊಡೆಗಳನ್ನು ಪುಟ್ಟ ರೆಕ್ಕೆಯನ್ನು ಮುರಿದಂತೆಯೂ ಮುದುರಿ ಕಂಬಳಿಗೆ ಸುತ್ತಿ ಬೆಟ್ಟದ ಕಣಿವೆಗೆ ಎಸೆದುಬಿಡುವುದು ರುದ್ರನಿಗೆ ಕ್ಷಣ ಮಾತ್ರದ ಕೃತ್ಯವಾಗಿತ್ತು. ಹಾಗೆ ಮಾಡಿ ಎಸೆದರೆ ಬೆಟ್ಟದ ಮರೆಯ ರಣಹದ್ದುಗಳ ಹಿಂಡು ಅವನ ಎಳೆಯ ಮೂಳೆಗಳನ್ನೂ ಬಿಡದೆ ನುಂಗಿ ನೊಣೆದು ಬಿಡಬಲ್ಲದು. ಶಿವರಾಜನಿಗೆ ನಿದ್ದೆ ಬಂದಿದೆಯೊ ಇಲ್ಲವೊ ಎಂದು ರುದ್ರ ಮುಟ್ಟಿ ನೋಡಿದ. ಆಗ ತಾನೇ ನಿದ್ದೆಗೆ ಜಾರಲೊ ಬೇಡವೊ ಹೀಗೇ ತೆವಳಿಕೊಂಡು ಕುರಿ ಮಂದೆಯ ನಡುವೆ ಹೊರಳಿ ಬಾಗಿಲ ಕಡೆ ಹೋಗಿ ಕತ್ತಲಲ್ಲೇ ದೂರ ಓಡಿ ಹೋಗಲೋ ಎಂಬ ಮುಂದರಿನಲ್ಲೂ ಯೋಚಿಸುತ್ತಿದ್ದ ಶಿವರಾಜ ಏನು ಮಾವಾ ಎಂದು ತನ್ನ ಯಾವತ್ತಿನ ಅಮಾಯಕ ದನಿಯಲ್ಲಿ ಕೇಳಿದ. ನಿರ್ದಯದ ಕ್ಷಣ ಅಲ್ಲಿಲ್ಲಿ ಗತ್ತು ತಿರುಗುತ್ತಿತ್ತು. ಆಗಾಗ ರುದ್ರನ ಮನದ ಮುಂದೆ ಅವನ ಅಕ್ಕ ಬಂದು ಅಡ್ಡ ನಿಂತಂತಾಗುತ್ತಿತ್ತು.

ರುದ್ರ ತನಗೇ ಗೊತ್ತಿಲ್ಲದಂತೆ ಬೆವೆತಿದ್ದ. ತಲ್ಲಣದಲ್ಲಿ ಚಡಪಡಿಸಿದ್ದ. ಅವನ ಒರಟು ಕೈಗಳು ತಂತಾನೆ ಹಿಚುಕಿಕೊಳ್ಳುತ್ತಿದ್ದವು. ಊಳಿಡುತ್ತಲೇ ಇದ್ದ ನಾಯಿಯ ದನಿ ಅಪಾಪದಂತೆ ಬಿರಿಳಿಯುತ್ತಿತ್ತು. ಸಿದ್ದವ್ವ ಭಾಗಶಃ ಮಗಳ ಭ್ರಮೆಯಲ್ಲಿ ಕನವರಿಸುತ್ತಿದ್ದಳು. ನಿನಗಿನ್ನೂ ನಿದ್ದೆ ಬಂದಿಲ್ಲವೇ, ಮಲಗೊ ಎಂದು ರುದ್ರ ತೆವಳುತ್ತಿದ್ದ ಶಿವರಾಜನನ್ನು ಮೇಲಕ್ಕೆ ಕರೆದುಕೊಂಡು ಧೃತರಾಷ್ಟ್ರನ ಅಪ್ಪುಗೆಯೊ ಏನೊ ಎಂಬಂತೆ ಅವನನ್ನು ಎದೆಗೆ ಒತ್ತಿಕೊಂಡು ಮಲಗಿಸಿಕೊಂಡ. ಶಿವರಾಜನ ಎದೆಬಡಿತವು ಮಾರಿ ಜಾತ್ರೆಯ ವೇಳೆ ಮಾರವ್ವನಿಗೆ ಕೋಣವನ್ನು ಬಲಿ ಕೊಡುವಾಗ ಇನ್ನೆಂದೂ ಇಷ್ಟು ಜೋರಾಗಿ ತಮಟೆ ನಗಾರಿ ಬಾರಿಸಲಾರವು ಎಂಬಂತೆಯೇ ಬಡಿದುಕೊಳ್ಳುತ್ತಿತ್ತು. ರಾಕ್ಷಸ ತನ್ನ ಬಾಯಲ್ಲೇ

ಕೊಂಡು ಆಗಾಗ ಕುರುಕಿ ಹಲ್ಲುಗಳ ಸಂದಿಯಲ್ಲಿ ಆಟ ಆಡಿಸಿ ಹಿಂಸೆ ಕೊಡುತ್ತಿದ್ದ ವರ್ಣನೆಯನ್ನು ಒಂದು ಕಾಲಕ್ಕೆ ಅದೇ ರುದ್ರ ಶಿವರಾಜನಿಗೆ ಹೇಳುತ್ತಿದ್ದುದು ಾಯಿತು. ಆಗಾಗ ಬಿಗಿ ಹಿಡಿದು ಸಡಿಲಿಸಿ ಹೊರಳಾಡುತ್ತಿದ್ದ ಮಾವನ ವಿಚಿತ್ರ ನೆಗೆ ಶಿವರಾಜ ತತ್ತರಿಸಿದ. ಇದ್ದಕ್ಕಿದ್ದಂತೆ ಎದ್ದು ಕೂತ ರುದ್ರ ಬೀಡಿ ಹಚ್ಚಿದ. ಬೀಡಿ ಯ ಕೆಂಪು ಹೊಗೆ ಎಳೆದಂತೆಲ್ಲ ರಾಕ್ಷಸನ ಕಣ್ಣ ಮಣಿಯಂತೆಯೆ ಕಾಣುತ್ತಿತ್ತು. ಆ ಯಲ್ಲೂ ಚರಣಿಯ ಗುಂಟದ ತುಂಡು ಹಗ್ಗವನ್ನು ರುದ್ರ ಬಿಚ್ಚಿಕೊಳ್ಳುವುದನ್ನು ಜ ಅರಿತ. ಮುಂದೇನೊ ಎಂದು ನಡುಗಿದ. ಕೈ ಕಾಲು ಕಟ್ಟಿ ತನ್ನ ತಾಯಿಯನ್ನು ಬಾವಿಗೆ ಎಸೆದಂತೆಯೇ ತನ್ನನ್ನೂ ತನ್ನ ಸೋದರ ಮಾವನೂ ಎಸೆದುಬಿಡುವನೇ ಕಿರುಚಿಕೊಳ್ಳಲು ಬಾಯಿ ತೆರೆದ. ಸದ್ದು ಕೂಡ ಹೊರಡದಷ್ಟು ಉಸಿರು ಕೂಡ ಷ್ಟು ದಂಗಾಗಿ ಅವನ ದೇಹ ಸುಮ್ಮನೆ ಬಿದ್ದುಕೊಂಡಿತ್ತು.

ವರಾಜನ ಕಾಲ ಬಳಿಯೇ ರುದ್ರ ಸುಮಾರು ಹೊತ್ತು ಕೂತು ಆಳವಾಗಿ ಏನನ್ನೊ ಚಿಸುತ್ತಿದ್ದ. ಶಕುನದ ಹಕ್ಕಿ ಹಿತ್ತಿಲಲ್ಲಿ ಉಲಿಯುತ್ತಿತ್ತು. ಶಿವರುದ್ರ ದಿಗ್ಗನೆ ಎದ್ದ. ಗಳ ಮಧ್ಯೆ ಆತ ಅತ್ತ ಎತ್ತಲೊ ಹೋದಂತಾಯಿತು. ಅಲ್ಲೆಲ್ಲ ಮೌನವೇ ಯುವಂತೆ ಸುತ್ತಿಕೊಂಡಿತು. ಬಾಗಿಲ ತೊಲೆಯ ಬಳಿ ತ್ತೂ ಸಿಕ್ಕಿಸುತ್ತಿದ್ದ ಕತ್ತಿಯನ್ನು ಹಿಡಿದೆಳೆದಂತೆ ಯಿತು. ಈ ಅವೇಳೆಯಲ್ಲಿ ಏನು ನಿನ್ನ ಕರ್ಮ ಎಂದು ವಂತೆ ಒಂದೆರಡು ಹಸುಗಳು ಸದ್ದು ಮಾಡಿದವು. ಎಲ್ಲೊ ಆತ ಕೂತಿರುವಂತೆಯೊ ಕರಗಿರುವಂತೆಯೊ ಚಿ ದಣಿದಿದ್ದ ಶಿವರಾಜನ ಮನಸ್ಸು ಜೀವವೇ ಾದಂತೆ ಕಂಬಳಿಯನ್ನು ಮತ್ತಷ್ಟು ಸುತ್ತಿಕೊಂಡ. ಾದರೂ ಎದ್ದು ಓಡಿ ಬಿಡುವ ಎಂದರೆ ಮಾವ ಬಾಗಿಲ ಯೇ ಕೂತಿದ್ದು ಕತ್ತಿಯಿಂದ ಬೀಸಿದರೆ ಏನು ುವುದೆಂದು ತಾಯನ್ನೆ ನೆನೆಯುತ್ತ ಹಾಗೇ ಮಾಯದ ಜಾರಿದ. ಸಿದ್ದವ್ವನಿಗೆ ಏನೋ ಕೇಡು ಸಪುನ ತಾಗಿ ಎದ್ದು ಬಂದು ಶಿವರಾಜನನ್ನು ನೋಡಿದಳು. ಮಗ್ಗುಲಲ್ಲಿ ಇರಲಿಲ್ಲ. ಈ ಕಾಳರಾತ್ರಿಯಲ್ಲಿ ಅದೂ ವಾಸ್ಯೆಯ ಕೇಡು ಗಳಿಗೆಯಲ್ಲಿ ಎಲ್ಲಿ ಎದ್ದು ಹೋದನೊ ಬ್ಬನೇ ಮಗನ ಬಿಟ್ಟು ಎಂದು ಶಿವರಾಜನನ್ನು ಎಬ್ಬಿಸಿ ಳಿಯೆ ಕರೆದುಕೊಂಡು ಹೋಗಿ ಮಲಗಿಸಿಕೊಂಡಳು.




ಂದಿನಂತೆಯೇ ಬೆಳಗಾಯಿತು. ಮಾರಿಗುಡಿಯಿಂದ ಮಾವಂದಿರು ರಾಸುಗಳನ್ನೆಲ್ಲ ಬೀದಿಗೆ ಕಟ್ಟಿ ರೊಟ್ಟಿ ತಿಂದು ಹೊಲಮಾಳಗಳ ಹೊರಟರು. ಶಿವರಾಜ ಆಗ ತಾನೆ ಎದ್ದಿದ್ದ. ರುದ್ರ ಹೊತ್ತೇರಿ ಬಿಸಿಲು ಯುತ್ತಿದ್ದರೂ ಇನ್ನೂ ಮನೆಗೆ ಬಂದಿರಲಿಲ್ಲ. ಮೊಮ್ಮಗ ಸಪ್ಪಗೆ ಆ ಗುಡಾಣಗಳ ಪಕ್ಕ ದ್ದನ್ನು ಕಂಡ ಸಿದ್ದವ್ವ ಅವನಿಗೆ ಎರಡು ಎಳ್ಳುಂಡೆಗಳನ್ನು ಕೊಟ್ಟಳು. ರಾತ್ರಿಯ ಯು ಇನ್ನೂ ಅವನ ಮನಸ್ಸಿನಲ್ಲಿ ಕರಗದೆ ಹಾಗೇ ಉಳಿದಿತ್ತು. ಬೀದಿಯ ಕಲ್ಲು ಯ ಸದ್ದಾಗಿ ಅದು ಮಗ ರುದ್ರ ಬಂದನೆಂಬ ಸೂಚನೆಯನ್ನು ನೀಡಿತು. ಶಿವರಾಜ ಅಜ್ಜಿ ಪಕ್ಕಕ್ಕೆ ಹೋಗಿ ನಿಂತ. ಎಲ್ಲೋಗಿದ್ದೋ ಇವನೊಬ್ಬನ್ನೆ ಬಿಟ್ಟು ಎಂದು ಸಿದ್ದವ್ವ ನನ್ನು ಆಕ್ಷೇಪಿಸಿದಳು. ಅವನು ಏನನ್ನೂ ಹೇಳಲಾರದೆ ಮಹಾಪಾಪಿಯ ಶ್ಚಿತ್ತದ ದನಿಯಲ್ಲಿ ಎಲ್ಲಿಗೆ ತಾನೆ ವೋಗಲವ್ವಾ, ಮೊದಲು ಆ ನಿನ್ನ ರಾಜನ ರಿಗೆ ಕಳಿಸಿಬಿಡು. ಅವನಿಲ್ಲಿರೋದು ಸರಿಯಲ್ಲ ಎಂದು ಮಾರ್ಮಿಕವಾದ ವನ್ನು ತಾಳಿದ. ಸಿದ್ದವ್ವನಿಗೆ ಮಗನ ಒಳಗಿನ ಕಿಚ್ಚು ಸಂಕಟ ಅದರಿಂದ ಹುಟ್ಟುವ ಎಲ್ಲ ಒಟ್ಟಿಗೆ ಬಂದು, ಆಯಿತು ರೊಟ್ಟಿ ತಿನ್ನು ಬಾ ಎಂದು ಕರೆದಳು. ಕೊಟಿಗೆಯ ಲೆಯಲ್ಲಿದ್ದ ಪಡಸಾಲೆಯಂತಹ ಜಾಗದಲ್ಲಿ ಶಿವರಾಜನನ್ನು ತೊಡೆ ಮೇಲೆ ಸಿಕೊಂಡು ರಾಗಿ ರೊಟ್ಟಿಯನ್ನು ಬೆಣ್ಣೆಯಲ್ಲಿ ಅದ್ದಿ ಬಟ್ಟಾಡುವ ಕಣ್ಣೀರು ಕೊಳ್ಳುತ್ತ ತಿನ್ನಿಸುತ್ತ ಬೆನ್ನ ಸವರುತ್ತ ತಾನು ಯಾವುದೊ ಹತ್ಯೆಯ ಕೈಯಿಂದ ಕೊಂಡಂತೆ ರುದ್ರ ತನ್ನೊಳಗೇ ಕಂಪಿಸುತ್ತಿದ್ದ.

ರಿವಾದಂತೆ ಸಿದ್ದವ್ವನೂ ಸೆರಗ ತುದಿಯಿಂದ ಕಣ್ಣೊರೆಸಿಕೊಂಡಳು. ಉಳಿದ ಂದಿರಾಗಲೇ ಎಲ್ಲೆಲ್ಲೊ ಹೊರಟು ಹೋಗಿದ್ದರು. ನೀರು ಕುಡಿಸಿ ತಲೆ ಸವರಿ, ಅವ್ವಾ ಇವನ್ನ ಕಣ್ಣಿಗೆ ಮರೆಯಾಗಿ ಕಳಿಸಿಬಿಡವ್ವಾ, ನನ್ನಿಂದ ತಡಕೋಕಾಗುದಿಲ್ಲ ಎಂದು ಗದ್ಗದಿತನಾದ. ತಾನೀಕೂಡಲೇ ಎಲ್ಲಿಯಾದರೂ ದೂರ ಹೊರಟು ಹೋಗ ಬ ಒತ್ತಡ ಶಿವರಾಜನಲ್ಲೂ ಉಕ್ಕುತ್ತಿತ್ತು. ಅವ್ವಾ, ನಾನೊಂಟೋಯ್ತಿನಿ. ನನ್ನ ಕಳುಸ್ ಬುಡವ್ವಾ ಎಂದು ಶಿವರಾಜ ದೈನ್ಯದಲ್ಲಿ ಅಜ್ಜಿಯನ್ನು ಬೇಡಿಕೊಂಡ. ಬಿಸಿಲು ಏರುತ್ತಿತ್ತು. ಮರು ಮಾತಿಲ್ಲದ ಸಿದ್ದವ್ವ ಹರಳೆಣ್ಣೆಯ ಗಡಿಗೆ ತಂದು ಇವನ ನೆತ್ತಿ ಎಂದೆಂದೂ ತಂಪಾಗಿರಲೆಂದು ತಲೆಗೆ ಹರಳೆಣ್ಣೆಯನ್ನು ಒತ್ತೊತ್ತಿ ಎರೆದು, ನೆತ್ತಿ ಮೇಲೆ ಹರಳೆಲೆಯ ಒತ್ತಿ ಮತ್ತದೇ ಯಾವತ್ತಿನ ಎಳ್ಳುಂಡೆಗಳ ಬುತ್ತಿಯನ್ನು ಕೈಗಿಟ್ಟು ನಡೀ, ನಮ್ಮಂಗೇ ನೀನೂ ಇಲ್ಲಿ ಈ ನರುಕದೆಲಿ ಯಾಕಿರಬೇಕು... ಅನಾದಿಗೆ ಆಕಾಶ್‌ವೆ ಆದಾರವಂತೇ... ಬಂದ ದಾರಿಲಿ ಇಂತಿರುಗಿ ನೋಡ್ದೆ, ಮುಂದೆ ಮುಂದೆ ಯಾರ್ ಕೈಗೂ ಸಿಗದಂಗೆ, ಎಲ್ಲೂ ನಿಲ್ದಂಗೆ ಇನ್ನ್ಯಾವತ್ತೂ ಇಲ್ಲಿಗೆ ಬರದಂಗೆ ನಿನ್ ದಾರಿಲಿ ನೀನು ವಂಟೋಗು. ನಿನ್ನ ಎತ್ತೋಳು ನಿನ್ನ ಬೆನ್ನಿಂದೆಯೇ ಇರ್ತಾಳೆ ವಂಟೋಗು. ಇದ್ದಿದ್ದು ಇಷ್ಟೇ ರುಣ ನಡೀ ಅಷ್ಟು ದೂರ ಬಂದು ಕಳಿಸ್ ಕೊಡ್ತೀನಿ ಎಂದು ಸಿದ್ದವ್ವ ಒಡಲ ಕಿಚ್ಚೆಲ್ಲವನ್ನು ಆಡಲಾಗದೆ ಶಿವರಾಜನನ್ನು ಕರೆದು ಕೊಂಡು ಊರ ದಾರಿ ದಾಟಿ ಬೆಟ್ಟಗುಡ್ಡಗಳ ಆ ಮರೆಯವರೆಗೂ ತಡೆಯಲಾರದೆ ಮುಂದೆ ಬಂದು ವೋಗು, ಈ ಪಾಪಿ ಮುದ್ಕಿ ಜೊತೆ ನಿನಗೇನು ಸಿಕ್ಕಾದು. ನಾಳೆಯೊ ನಾಡಿದ್ದೊ ಸಾಯೊ ನನ್ನಂತವಳಿಂದ ಇನ್ನೇನಾದಾದು ಎಂದು ಕೈ ಬೀಸಿ ಮರದ ಕೆಳಗೇ ಅಲ್ಲೇ ನಿಂತಳು.

ಶಿವರಾಜ ಅಳಳುತ್ತಲೇ ಯಾವ ದಿಕ್ಕಿಗೆ ಹೆಜ್ಜೆ ಇಡಬೇಕೊ ಎಂಬಂತೆ ನಿಧಾನವಾಗಿ ಮುಂದೋಗುತ್ತಿದ್ದ. ತಡೆಯಲಾರದ ಸಿದ್ದವ್ವನ ಕರುಳು ಅಲ್ಲೇ ನಿಲ್ಲಲಾರದೆ ಮಮ್ಮಗನನ್ನು ಹಿಂಬಾಲಿಸುತ್ತಿತ್ತು. ಅಷ್ಟು ದೂರ ಬಂದು ಶಿವರಾಜ ಹಿಂತಿರುಗಿ ನೋಡಿದರೆ ನೆರಳಂತೆಯೇ ಅಜ್ಜಿ ಬೆನ್ನ ಹಿಂದೆಯೇ ಬರುತ್ತಿರುವುದು ಗೋಚರಿಸಿ ನಿಂತ. ಅಲ್ಲೀಗಂಟಾ ಬತ್ತೀನಿ ನಡೀ ಎಂದು ಸಿದ್ದವ್ವ ಮತ್ತೆ ಮುಂದೆ ಬಂದಳು. ಹೋಗು ಹೋಗು ಎಂದು ಹೇಳುತ್ತಲೇ ಸಿದ್ದವ್ವ ಅರ್ದ ದಾರಿ ತನಕ ಮೊಮ್ಮಗನನ್ನು ಕರೆದುಕೊಂಡು ಬಂದಿದ್ದಳು. ಹಿಂದೆ ಮಗಳು ತಾಯೂರಿಗೆ ಹೋಗಿ ಬರುವಾಗ ಎಲ್ಲೆಲ್ಲಿ ಯಾವ ಮರದ ನೆರಳಲ್ಲಿ ಕೂತು ದಣಿವಾರಿಸಿಕೊಂಡು ಮುಂದೆ ಹೋಗುತ್ತಿದ್ದಳೊ ಅದದೇ ಜಾಗಗಳಲ್ಲಿ ಸಿದ್ದವ್ವ ಮೊಮ್ಮಗನನ್ನು ಕೂರಿಸಿಕೊಂಡು ಅತ್ತು ಕರೆದು ನಡೀ ಎಂದು ಮುಂದೆ ಕರೆದುಕೊಂಡು ಬರುವಷ್ಟರಲ್ಲಿ ಆ ಬೆಟ್ಟಗುಡ್ಡಗಳ ದುರ್ಗಮ ದಾರಿಯು ಕಳೆದಿತ್ತು. ಅವಳಿಗೆ ಗೊತ್ತೇ ಆಗದಂತೆ ಶಿವರಾಜನ ಊರ ಸಮೀಪದವರೆಗೂ ಸಿದ್ದವ್ವ ಮೊಮ್ಮಗನ ಬೆನ್ನ ಹಿಂದೆಯೇ ಬಂದು ಬಿಟ್ಟಿದ್ದಳು. ಇದ್ದಕ್ಕಿದ್ದಂತೆ ತಟ್ಟನೆ ಅಲ್ಲೇ ನಿಂತಳು. ಜೀವವನ್ನೇ ಯಾರೋ ಜಗ್ಗಿ ಎಳೆದಂತಾಯಿತು. ತೋಟ ಮಾಳದ ಆ ಜಾಗವನ್ನು ಏಳು ಜನ್ಮಗಳಾದರೂ ಸಿದ್ದವ್ವ ಮರೆಯಲಾರಳು. ಆ ತೋಟದ ಬಾವಿಯಲ್ಲೇ ಆಕೆಯ ಮಗಳು ಹೆಣವಾಗಿ ತೇಲಿದ್ದುದು. ಮೊಮ್ಮಗನನ್ನು ತಬ್ಬಿ ಬಾಚಿ ಎದೆಗವುಚಿಕೊಂಡು ವಂಟೋಗು... ವಂಟೋಗು... ವಟೋಗೊ ಮಗನೇ... ಇಲ್ಲಿಗಂಟ ಅಷ್ಟೇ ನನಗೆ ರುಣವಿದ್ದುದು. ಮುಂದ್ಕೆ ಇನ್ನೊಂದೆಜ್ಜೆನು ನಾನಿಡಲಾರೆ. ವೋಗು ರಾಮೋಕ್ಷವಾಗಿ ಬದುಕೋಕು. ಯೀ ಲೋಕ ಎಲ್ಲಿಗಂಟ ಇದಿಯೊ ಅಲ್ಲಿಗಂಟ ವಂಟೋಗು... ವೋಗೂ, ರಾಮೋಕ್ಷವಾಗಿ ಹೋಗು ಎಂದು ಸಿದ್ದವ್ವ ಕುಸಿದು ಕುಳಿತು ಎದೆ ಚಚ್ಚಿಕೊಂಡು ತನ್ನ ಮಗಳು ಯಾವ ಬಾವಿಯಲ್ಲಿ ತೇಲಿದ್ದಳೊ ಆ ಬಾವಿಯ ಕಡೆಗೆ ನೋಡಿಯೂ ನೋಡಲಾಗದೆ ರೋದಿಸುತ್ತಿದ್ದಳು.

ಶಿವರಾಜನಿಗೆ ದಿಕ್ಕೇ ತೋಚಲಿಲ್ಲ. ಮತ್ತೆ ಅಪ್ಪನ ಆ ನರಕದ ಮನೆಗೆ ಹಿಂತಿರುಗಬಾರದೆಂದು ಅವನ ಮುಗ್ಧ ಮನಸ್ಸು ದೃಢವಾದ ನಿರ್ಧಾರಕ್ಕೆ ಬಂತು. ಹೊತ್ತು ಮೀರಿ ಕತ್ತಲಾಗುತ್ತಿತ್ತು. ಅಜ್ಜೀ ಎಂದು ಹಿಂತಿರುಗಿ ನೋಡಿದ. ಸಿದ್ದವ್ವ ಆಗಲೇ ಮಾಯವಾಗಿದ್ದಳು. ಆ ಬಾವಿಯ ಬಳಿಯೇ ದಾರಿ ಸಾಗಬೇಕಿತ್ತು. ಅಂಜುತ್ತ ಅಳುಕುತ್ತ ಮುಗಿಯಲಾರದ ದುಃಖವ ಹೊತ್ತುಕೊಂಡು ಆ ಬಾವಿ ಬಳಿ ಬಂದಂತೆಯೆ ನಡಿಯಪ್ಪಾ, ನಾ ನಿಂಜೊತೇಲೆ ಇರುವಾಗ ನಿನಗ್ಯಾಕೆ ಭಯ ಎಂಬಂತೆ ತಾಯೇ ಅವನೊಳಗೆ ನುಡಿದಂತಾಗಿ ಒಂದು ಕ್ಷಣ ನಿಂತ. ಊರ ದಾರಿಯ ತಿರುವಿಗೆ ಬಂದು ಇದ್ದಕ್ಕಿದ್ದಂತೆ ಆ ದಾರಿ ಬಿಟ್ಟು ಇನ್ನೆಲ್ಲಿಗೊ ಹೋಗುವ ಅನಾದಿಯ ಹಾದಿಯ ಕಡೆ ಶಿವರಾಜ ದಿಟ್ಟವಾದ ಹೆಜ್ಜೆಗಳನ್ನು ಇಟ್ಟ. ದೂರ ದೂರ ಬಹುದೂರದವರೆಗೂ ಆತ ಅನಂತವಾದ ಯಾವುದೋ ಗುರಿಯನ್ನು ತಲುಪುವಂತೆ ಸಾಗುತ್ತಲೇ ಇದ್ದ.

ಡಾ|| ಮೊಗಳ್ಳಿ ಗಣೇಶ್
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬, ಬಳ್ಳಾರಿ ಜಿಲ್ಲೆ

# ವಸ್ತ್ರಸಂಹಿತೆ ಧಾರ್ಮಿಕ ಮತ್ತು ಜೆಂಡರ್ ಪ್ರಶ್ನೆ

## — ಒಂದು ಚರ್ಚೆ —

ಮುಸ್ಲಿಂ ಮಹಿಳೆ ಬುರ್ಖಾ ತೊಡಬೇಕಾಗಿ ಬಂದಿರುವುದು ಅನಾರೋಗ್ಯಕರವಾದ ಪದ್ಧತಿ, ಅದೊಂದು ರೀತಿಯ ಅಸ್ಪೃಶ್ಯತೆಯ ಆಚರಣೆ, ಎಂದು ಹೇಳಿ ೧೯೮೬ರಲ್ಲಿ ಷೆಹನಾಜ್ ಶೇಕ್ ಪರಿಹಾರಕ್ಕಾಗಿ ಸುಪ್ರೀಂ ಕೋರ್ಟ್‌ಗೆ ಮೊರೆಯಿಟ್ಟಿದ್ದರು. ಇತ್ತೀಚೆಗೆ ಬಂಟ್ವಾಳದ ಎಸ್.ವಿ.ಎಸ್. ಕಾಲೇಜಿನ ವಿದ್ಯಾರ್ಥಿನಿಯೊಬ್ಬಳು ಹಿಜಾಬ್ ಧರಿಸಿಕೊಂಡು ಬಂದಿದ್ದು ಮತ್ತು ಕಾಲೇಜು ವ್ಯವಸ್ಥಾಪಕರು ಅದನ್ನು ವಿರೋಧಿಸಿದಾಗ ಅವಳು ಹಿಜಾಬ್ ಧರಿಸುವುದು ತನ್ನ ಧಾರ್ಮಿಕ ಹಕ್ಕು - ಎಂಬಂತಹ ಮಾತುಗಳನ್ನಾಡಿದ್ದು ಸಮಸ್ಯೆಯ ಎರಡು ತುದಿಗಳನ್ನು ಪ್ರತಿನಿಧಿಸುತ್ತದೆ. ಈ ಇಪ್ಪತ್ತೈದು ವರ್ಷಗಳ ದೀರ್ಘ ಅವಧಿಯಲ್ಲಿ ಭಾರತೀಯ ಸಮಾಜದಲ್ಲಿ ಸಾಕಷ್ಟು ಬದಲಾವಣೆಗಳು ನಡೆದಿವೆ. ಈ ಉಡುಗೆ ತೊಡುಗೆ ಒಂದು ಧರ್ಮದವರಿಗೇ ಸಂಬಂಧಿಸಿದ್ದೆಂಬಂತೆ ಪ್ರತಿಫಲಿಸಲಾಗುತ್ತಿದೆ ಯಾದರೂ, ಪುರುಷಪ್ರಧಾನ ಸಮಾಜದಲ್ಲಿ ಆಚರಣೆಯಲ್ಲಿರುವ ಗೂಂಘಟ್, ಪರ್ದಾ, ಬುರ್ಖಾ ಹಾಗೂ ಹಿಜಾಬ್ ಯಾವುದೇ ಆಗಿರಲಿ, ಎಲ್ಲ ಪ್ರಗತಿಪರರು ಅದನ್ನು ಇಲ್ಲಿಯವರೆಗೆ ಬಂಧನವಾಗಿಯೇ ಕಂಡಿದ್ದಾರೆ. ಹದಿಹರೆಯದ ವಯಸ್ಸಿನವರಿಗೆ ವಸ್ತ್ರಸಂಹಿತೆ ವಿಧಿಸುವುದು ಅವರ ದೇಹವನ್ನು ಕಾಪಾಡಲೆಂದು. ಸರಿಯಾದ ಬಟ್ಟೆ ತೊಡದಿದ್ದರೆ ಕಾಮ ಪ್ರಚೋದನೆಯಾಗಿ ಸಮಸ್ಯೆಗಳಾಗುತ್ತವೆ, ಸ್ತ್ರೀಯರ ಮೇಲೆ ಪುರುಷರ ಕಾಮದೃಷ್ಟಿ ಬಿದ್ದು ಅನಾಹುತಕ್ಕೆ ಕಾರಣವಾಗ ಬಹುದು, ಎನ್ನುವಂತಹ ಆಲೋಚನೆಗಳು ಪ್ರಗತಿ ವಿರೋಧಿಯಷ್ಟೇ ಅಲ್ಲ, ಪುರುಷಜನ್ಯವಾದವೂ ಹೌದು. ಇಲ್ಲಿಯೂ ಆಕ್ರಮಣಕ್ಕೆ ಒಳಗಾಗುವವರು ಸ್ತ್ರೀಯರು ಮತ್ತು ಆಕ್ರಮಣ ಉಂಟು ಮಾಡುವವರು ಪುರುಷರೇ. ಇದೊಂದು ಪುರುಷ ಪ್ರಧಾನತೆಯ ಲಕ್ಷಣ. ಈ ಜೆಂಡರ್ ಸಮಸ್ಯೆಯ ಜೊತೆಗೆ, ಈಗ ಧರ್ಮದ ಸಮಸ್ಯೆಯೊಂದು ತೊಡಕಾಗಿ ಎದ್ದು ಕಾಣುತ್ತಿದೆ. ಹಿಂದು ಹೆಸರುಳ್ಳ ಕಾಲೇಜಿನಲ್ಲಿ ಮುಸ್ಲಿಮರ ವಸ್ತ್ರಸಂಹಿತೆಗೆ ಅವಕಾಶವಿಲ್ಲ, ಎಂದು ಹೇಳುತ್ತಲೇ, ಆ ಹುಡುಗಿಗೆ ಪ್ರವೇಶ ನಿರಾಕರಿಸುವುದರಿಂದ ಇದು ಧಾರ್ಮಿಕ ಸಂಘರ್ಷದ ಸಮಸ್ಯೆಯಾಗಿ ಪರಿವರ್ತಿತವಾಗಿದೆ. ಈ ಸಮಸ್ಯೆಯು ಮೇಲ್ನೋಟಕ್ಕೆ ಕಾಣುವಷ್ಟು ಸರಳವಲ್ಲ. ಈ ಸಂದರ್ಭದ ಸಂಕೀರ್ಣತೆಯನ್ನು ವಿಶ್ಲೇಷಿಸುವ ದೃಷ್ಟಿಯಿಂದ ಕಾಲೇಜು ಅಧ್ಯಾಪಕಿಯರಾದ ಶ್ರೀಮತಿ ತಸ್ಲೀಂ ಮತ್ತು ಶ್ರೀಮತಿ ಸುಧಾ ಸೀತಾರಾಮನ್, ಪತ್ರಕರ್ತರಾದ ಶ್ರೀ ಹನೀಫ್ ಮತ್ತು ಶ್ರೀಮತಿ ವಿಜಯಾ ಹಾಗೂ ಸಮಾಜ ಕಾರ್ಯಕರ್ತರಾದ ಜನವಾದಿಯ ವಿಮಲಾ ಮತ್ತು ಹೆಂಗಸರ ಹಕ್ಕಿನ ಸಂಘದ ಉಷಾರವರನ್ನು ಸಂವಾದದಲ್ಲಿ ಪಾಲ್ಗೊಳ್ಳಲು 'ಹೊಸತು' ಪತ್ರಿಕೆಯು ಆಹ್ವಾನಿಸಿತ್ತು. ಚರ್ಚೆಯಲ್ಲಿ ಸಂಪಾದಕರಾದ ಜಿ.ರಾಮಕೃಷ್ಣ ಮತ್ತು ಎನ್. ಗಾಯತ್ರಿ ಕೂಡ ಭಾಗವಹಿಸಿದ್ದರು. ಚಿತ್ರಗಳು : ಕೆ. ಪಿ. ಸ್ವಾಮಿ



ಲೇಖನ ಸಿದ್ಧಪಡಿಸಿದವರು
ಡಾ|| ಎನ್. ಗಾಯತ್ರಿ

**ತಸ್ಲೀಂ :** ನನ್ನ ದೃಷ್ಟಿಯಲ್ಲಿ ಯಾವುದೇ ರೀತಿಯ ವಸ್ತ್ರಸಂಹಿತೆಯು ಇರಬಾ... ಅಂದರೆ ಅದನ್ನು ಹೇರಿಸಬಾರದು. ಕೆಲವರು ಮುಗ್ಧರಾಗಿ ವಸ್ತ್ರ ಸಂಹಿತೆ... ಅನುಸರಿಸಬಹುದಾದರೂ, ನಿಜವಾಗಿ ವಸ್ತ್ರಸಂಹಿತೆಯನ್ನು ಅನುಸರಿಸುವುದ... ಸ್ವಾತಂತ್ರ್ಯಹರಣವಾಗುತ್ತದೆ. ವಸ್ತ್ರಸಂಹಿತೆಯು ಹೆಣ್ಣನ್ನು ಒಂದು ಸ... ಪರಿಗಣಿಸುತ್ತದೆ. ಅವಳು 'ಸರಕು' ಆದಾಗ ಅವಳ ಐಡೆಂಟಿಟಿ ಹೋ... ಹೋಗುತ್ತದೆ. ವಸ್ತ್ರ ಸಂಹಿತೆಯ ಬಗ್ಗೆ ಚರ್ಚೆಯೇ ಅನಗತ್ಯ. ಏಕೆಂದರೆ, ನಮ... ಸಂಹಿತೆಯ ಬಗ್ಗೆ ಮಾತನಾಡಿದರೆ, ನಮ್ಮನ್ನು ಕೆಳಗೆಳೆತಿದಾರೆ, ಅಂತ ಅನ್ನಿಸುತ್ತ...

**ಹನೀಫ್ :** 'ವಸ್ತ್ರಸಂಹಿತೆ' ಅಂತ ಒಂದು ಚೌಕಟ್ಟಿನೊಳಗೆ ವಿಷಯ... ಚರ್ಚಿಸಬೇಕಾದಾಗ ನಮ್ಮ ಅಭಿಪ್ರಾಯ ಹೇಳುವುದು ಸುಲಭ. ಆದರೆ, ಸು... ಅಮೂರ್ತವಾಗಿ 'ವಸ್ತ್ರಸಂಹಿತೆ' ಅಂತ ಹೇಳಿದಾಗ ನಮ್ಮ ನಿಲುವೇನು ... ಹೇಳುವುದು ಕಷ್ಟ.

ಅಷ್ಟೇ ಅಲ್ಲ ಈ ಚರ್ಚೆ ಒಂದು ಧರ್ಮಕ್ಕೆ ಸಂಬಂಧಿಸಿದಂತೆ ಇದ್ದರೆ, ... ಮಾತನಾಡಲು ಬಯಸುವುದಿಲ್ಲ. ಏಕೆಂದರೆ, ಮೊದಲನೆಯದಾಗಿ, ನನ್ನ ಹೆ... ಮಗಳ ಬಗೆಗಿನ ವಸ್ತ್ರದ ಬಗ್ಗೆ ಮಾತನಾಡುವಂತೆ, ಹೊರಗೆ ಒಂದು ಧ... ಸಂಬಂಧಪಟ್ಟ ವಿಷಯಗಳನ್ನು ಕುರಿತು ನನಗೆ ಮಾತನಾಡುವುದು ಕಷ್ಟ. ಬಲ... ವಾಗಿ ಒಂದು ವಸ್ತ್ರಸಂಹಿತೆಯನ್ನು ಮನೆಯಲ್ಲಿಯಾಗಲೀ, ಹೊರಗಾಗಲೀ ಯಾರ... ಹೇರುತ್ತಾರೆಂದರೆ, ಅದೊಂದು ಸೂಕ್ಷ್ಮ ವಿಚಾರವಾಗಿ ಪರಿವರ್ತಿತವಾಗುತ್ತ...

ನ್ನ ಮಡದಿಯ ವಿಷಯವನ್ನು ಹೇಳುವುದಾದರೆ, ಆಕೆ ಹೆಚ್ಚು ಓದಿದವರಲ್ಲ, ಸಾಯಸ್ಥ ಕುಟುಂಬದಿಂದ ಬಂದವರು. ಮದುವೆಯಾಗಿ ಬಂದಾಗ ಬುರ್ಖಾ ೂಂಡೇ ಬಂದರು. ಒಂದೆರಡು ತಿಂಗಳಾದ ನಂತರ 'ಬುರ್ಖಾ ಏಕೆ ಬೇಕು? ದೆ ಹೊರಗೆ ಬರಬಹುದಲ್ಲಾ?' ಎಂದು ಸಲಹೆ ಕೊಟ್ಟೆ, ತಕ್ಷಣ ಒಪ್ಪಿ ಬುರ್ಖಾ ಹಾಕಿದರು. ಆಗ ನಾವು ಬಿಜಾಪುರದಲ್ಲಿದ್ದೆವು. ಅಲ್ಲಿ ನಮ್ಮ ಸಂಬಂಧಿಗಳು ಲ್ಲ, ಆದರೆ ಆ ನಂತರ ಬೆಂಗಳೂರಿಗೆ ಬಂದ ಮೇಲೆ ಹಿರಿಯ ಸಂಬಂಧಿಕರುಗಳ ಹೋಗಬೇಕಾಗಿ ಬಂದಾಗ ಮತ್ತೆ ಬುರ್ಖಾ ಹಾಕಿಕೊಳ್ಳುವುದಾಗಿ ಹೇಳಿದರು. ಷ್ಟ ಎಂದೆ. ನನ್ನ ದೃಷ್ಟಿಯಲ್ಲಿ ನಾವು ಹಾಕಿಕೊಳ್ಳುವ ಬಟ್ಟೆ ಅದು ಗಂಡಿರಲಿ, ಲಿ ಗೌರವ ಹುಟ್ಟಿಸುವಂತಿರಬೇಕು. ಅಶ್ಲೀಲ ಅಂತ ಅನ್ನಿಸಬಾರದು. ಅದು ಾಗಿಯೂ ವೈಯಕ್ತಿಕ ಆಯ್ಕೆ.

ಮಾನ್ಯವಾಗಿ ನಮ್ಮ ಮುಸ್ಲಿಂರಲ್ಲೇ ಬುರ್ಖಾ ಬಗ್ಗೆ ತಿಳುವಳಿಕೆ ಕಡಿಮೆ. ಬುರ್ಖಾ ಗಾಡಿನಲ್ಲಿ ಆರಂಭವಾಯಿತು. ಬಿಸಿಲು ಮತ್ತು ಮರಳು- ಈ ಎರಡರಿಂದ ರಕ್ಷಣೆ ುವುದಕ್ಕೆ ಬುರ್ಖಾ ಧರಿಸುವುದು ರೂಢಿಗೆ ಬಂತು. ನಂತರ ಮಹಮ್ಮದ್ ಬರ್ ತೀರಿಹೋದಾಗ ಅವರ ಶೋಕಸೂಚಕ ಆಚರಣೆಯ ರೂಪದಲ್ಲಿ ಕಪ್ಪು ಧರಿಸುವ ಪದ್ಧತಿ ಆಚರಣೆಗೆ ಬಂತು. ಇದನ್ನು ಧಾರ್ಮಿಕ ಆಚಾರ ುದಕ್ಕಿಂತ ಸಾಮಾಜಿಕ ಆಚರಣೆ ಎನ್ನಬಹುದು.

ನ್ನು ಇವತ್ತು ಏನು ದಕ್ಷಿಣ ಕನ್ನಡದ ಸುತ್ತ ಗಿರ್ಕಿ ಹೊಡೀತಿದೆಯೆಲ್ಲಾ, ಈ ಬುರ್ಖಾ ು ಮಾತನಾಡುವುದು ಎಂದರೆ ಬಂಟ್ವಾಳದ ಕಾಲೇಜಿಗೆ ಸಂಬಂಧಿಸಿದ್ದು. ನಾವೆಲ್ಲಾ ರಿ, ಖಾಸಗಿ ಕಾಲೇಜುಗಳಲ್ಲಿ ಕಲಿತವರು. ನಾವು ಕಲಿಯುವಾಗ ತರಗತಿಯಲ್ಲಿ ಗಂಡು ಮಕ್ಕಳು, ಹೆಣ್ಣು ಮಕ್ಕಳು ಒಟ್ಟಿಗೆ ಇದ್ದ ಕಾಲೇಜದು. ಸುಮಾರು ಂದ ೮೫ರ ಸಂದರ್ಭ. ಆಗ ಹೆಣ್ಣು ಮಕ್ಕಳು ತರಗತಿಯಲ್ಲಿ ಬುರ್ಖಾ ತ್ತಿರಲಿಲ್ಲ. ಆದರೆ, ಈಗ ೨೦೦೯ರ ಸಂದರ್ಭದಲ್ಲಿ ಮುಸ್ಲಿಂ ಹೆಣ್ಣುಮಕ್ಕಳಿಗೆ ಒಳಗೂ ಬುರ್ಖಾ ಧರಿಸಬೇಕು ಅಂತ ಯಾಕೆ ಅನ್ನಿಸಿತು? ಇದು ಮುಖ್ಯವಾದ ಇದಕ್ಕೆ ಸಂಬಂಧಿಸಿದ ಎಲ್ಲರೊಡನೆ ಮಾತನಾಡಿಯಾದ ಮೇಲೆ ನನಗನ್ನಿಸುವುದಿಷ್ಟು: ್ವಳದ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಬುರ್ಖಾ ಹಾಕಿಯೇ ಕೂಡುತ್ತಿದ್ದರು. ಅದಕ್ಕೆ ಂಥೀಯ ಸಂಘಟನೆಯವರು ತಕರಾರು ತೆಗೆದರು. ಆಗ ಅವರು ಬುರ್ಖಾ ತೆಗೆದು ಮೇಲಿನ ಹೊದಿಕೆಯನ್ನು ಮಾತ್ರ ಹಾಕುತ್ತಿದ್ದರು. ಆಗ ಹಿಂದೂ ಟನೆಯವರು ಒಂದು ತರ್ಕಬದ್ಧ ಪ್ರಶ್ನೆಯನ್ನು ಮುಂದಿಟ್ಟರು: ನೀವು ಕಪ್ಪು ಶಾಲು ವುದಾದರೆ, ನಾವೂ ನಾಳೆಯಿಂದ ಕೇಸರಿ ಶಾಲನ್ನು ಹಾಕಿಕೊಂಡು ಬರುತ್ತೇವೆ. ದು ತರ್ಕಬದ್ಧ ಮಾತೇ ಆದರೂ ಅದರ ಉದ್ದೇಶ ದುರುದ್ದೇಶದಿಂದ ಕೂಡಿದ್ದು.

**ಯತ್ರಿ** : ನೀವು ಬಂಟ್ವಾಳದ ಹುಡುಗಿಯನ್ನು ಮಾತಾಡಿಸಿದಿರಾ?

**ನೀಫ್** : ಮಾತಾಡಿಸಿದೆ. ಈಗ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಮುಸ್ಲಿಂ ಹೆಣ್ಣು ಮಕ್ಕಳು ಹೆಚ್ಚು ಶಾಲೆಗೆ ಹೋಗುತ್ತಿದ್ದಾರೆ. ಅವರ ಗಂಡುಮಕ್ಕಳು ಹೊರಗೆ ಕೊಲ್ಲಿ ರಾಷ್ಟ್ರಗಳಿಗೆ ಹೋಗಿ ದುಡಿದು ಹಣ ಕಳುಹಿಸಿ ತಮ್ಮ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ಬೇರೆ ಯಾವುದೇ ಜಿಲ್ಲೆಗಿಂತ ದಕ್ಷಿಣ ಕನ್ನಡ ಜಿಲ್ಲೆಯ ಹೆಣ್ಣುಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಪಡೆಯುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಬಂಟ್ವಾಳದಂತಹ ಘಟನೆಗಳು ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ತೊಂದರೆಯಾಗುವುದಿಲ್ಲವೇ ಅನ್ನುವ ಹಿನ್ನೆಲೆಯಲ್ಲಿ ಆಕೆಗೊಂದು ಪ್ರಶ್ನೆ ಕೇಳಿದೆ: ನಿನಗೆ ನಿನ್ನ ಸಹಪಾಠಿಯರಲ್ಲಿ ನಂಬಿಕೆಯಿಲ್ಲವಾ? ನಿನ್ನ ವಿದ್ಯಾಭ್ಯಾಸ ಹಾಗೂ ನಿನ್ನಂತಹ ಇನ್ನಿತರ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಇದರಿಂದ ತೊಂದರೆಯಾಗುವುದಿಲ್ಲವೇ? ಅಂತ ಕೇಳಿದೆ. ಅದು ನನ್ನ ಇಷ್ಟ, ಸರ್. ನಾನು ತಲೆಗೆ ಸ್ಕಾರ್ಫ್ ಕಟ್ಟಿ ಬಂದರೆ ಅವರಿಗೇನು ಕಷ್ಟ? ಅದರಿಂದ ಬೇರೆಯವರಿಗೆ ಯಾಕೆ ತೊಂದರೆಯಾಗಬೇಕು? ಅವರು ಕೇಸರಿ ಹಾಕಿಕೊಂಡು ಬಂದರೆ ಅದಕ್ಕೆ ನನ್ನದೇನೂ ಅಭ್ಯಂತರವಿಲ್ಲ. ನನ್ನ ಮನಸ್ಸು ಒಪ್ಪಿದ್ದನ್ನು ನಾನು ಮಾಡುತ್ತೀನಿ, ಎಂದಳು. ಇದು ಈ ತರಹದ ಸಮಸ್ಯೆ.

ನಾನು ವೈಯಕ್ತಿಕವಾಗಿ ಹೇಳೋದೇನಂದ್ರೆ, ಆ ಹೆಣ್ಣು ಮಗಳು ಇದನ್ನು 'ಇಷ್ಯೂ' ಮಾಡಬೇಕಿರಲಿಲ್ಲ. ಏಕೆಂದರೆ ನಮ್ಮ ಸಮಾಜದಲ್ಲಿ ಮತಾಂಧರು ಹಿಂದೂಗಳಲ್ಲಾಗಲೀ, ಮುಸ್ಲಿಂರಲ್ಲಾಗಲೀ ಇರೋದು ಶೇಕಡ ೧೦. ಉಳಿದವರೆಲ್ಲಾ ಒಂಥರಾ ಸೆಕ್ಯುಲರ್ ಆಗಿರುತ್ತಾರೆ. ಆದರೆ ಇಂತಹ ಘಟನೆಗಳಲ್ಲಿ ಬಲಪಂಥೀಯರು ಕೇಳುವ ತರ್ಕಬದ್ಧ ಪ್ರಶ್ನೆಗಳು ಬಹುಪಾಲು ಹಿಂದೂಗಳಿಗೆ 'ಹೌದಪ್ಪಾ, ಇವರು ಹೇಳೋದರಲ್ಲಿ ಅರ್ಥ ಇದೆ' ಅಂತ ಅನ್ನಿಸುತ್ತೆ. ಇಡೀ ಘಟನೆಯನ್ನೇ 'ರಾಜಕೀಯ'ಗೊಳಿಸುತ್ತಿರುವುದರಿಂದ ಬಲಪಂಥೀಯ ಶಕ್ತಿ ಬೆಳೆಯುವುದಕ್ಕೆ ಅನುಕೂಲ ಮಾಡಿಕೊಟ್ಟಂತೆ ಆಗುತ್ತದೆ. ಒಂದು ಕಾಲೇಜಿನ ಒಳಗೆ ಇರುವ ಸಮಸ್ಯೆಯನ್ನು ಇಡೀ ದೇಶದ ಸಮಸ್ಯೆಯೆನ್ನುವಂತೆ ನೋಡುವುದಕ್ಕೆ ಅವಕಾಶ ಕೊಡಬಾರದಿತ್ತು.

**ಉಷಾ:** ಬುರ್ಖಾ ಮತ್ತು ದಕ್ಷಿಣ ಕನ್ನಡದ ಸುತ್ತ ನಡೆಯುತ್ತಿರುವ ಈ ಇಡೀ ಚರ್ಚೆಯನ್ನು ಗಮನಿಸಿದಾಗ ಒಂದು ಬಿಡಿ ಪ್ರಕರಣ ಸಂಕೀರ್ಣವಾದ ಸಂದರ್ಭವನ್ನು ಸೃಷ್ಟಿಸುತ್ತಿದೆ ಅಂತ ಅನ್ನಿಸುತ್ತಿದೆ. ದಕ್ಷಿಣ ಕನ್ನಡದಲ್ಲಿ ಒಂದು ಬಹುಸಂಖ್ಯಾತ ಗುಂಪು ಹೇಗೆ ಅಲ್ಪಸಂಖ್ಯಾತ ಗುಂಪಿನ ಹೆಣ್ಣುಮಕ್ಕಳು ಯಾವ ರೀತಿ ಬಟ್ಟೆ ಹಾಕಬೇಕು ಅವರು ಎಲ್ಲಿರಬೇಕು ಅಂತ ವ್ಯಾಖ್ಯಾನಿಸುತ್ತಿದ್ದಾರೆ! ಅವರ ಸಮುದಾಯದ ಹೆಣ್ಣುಮಕ್ಕಳೂ ಕೂಡ ಯಾವ ರೀತಿ, ಯಾವ ಸ್ಪೇಸ್‌ನಲ್ಲಿ ಕಾಣಿಸಿಕೊಳ್ಳಬೇಕು ಅಂತ ನಿರ್ದೇಶಿಸುತ್ತಿದ್ದಾರೆ. ಹಾಗೆಯೇ ವ್ಯಾಖ್ಯಾನ ಮಾಡುತ್ತಿದ್ದಾರೆ. ಇದು ಒಪ್ಪುವಂಥ ವಿಷಯವಲ್ಲ. ಒಂದು ಬಹುಸಂಖ್ಯಾತ ಗುಂಪು ನಾನು ಕೇಸರಿ ಹಾಕ್ಕೊಂಡು ಬರ್ತೀನಿ ಅನ್ನುವುದಕ್ಕೂ ಒಂದು ಅಲ್ಪಸಂಖ್ಯಾತ ಗುಂಪು ನಾನು ಬುರ್ಖಾ ಹಾಕ್ಕೊಂಡು ಬರ್ತೀನಿ ಅನ್ನುವುದಕ್ಕೂ ತುಂಬ ವ್ಯತ್ಯಾಸವಿದೆ. ಮೊಟ್ಟ ಮೊದಲಿಗೆ ಇಬ್ಬರೂ ಬರುತ್ತಿರೋ ನೆಲೆಗಳೇ ಬೇರೆ. ದಕ್ಷಿಣ ಕನ್ನಡದ ಸಂದರ್ಭದಲ್ಲಿ ಒಂದು ಬಹುಸಂಖ್ಯಾತ ಗುಂಪು ಈ ರೀತಿ ಹೆಣ್ಣುಮಕ್ಕಳನ್ನು ನಿಯಂತ್ರಿಸುವ, ಸಂಹಿತೆಯನ್ನು ವಿಧಿಸುವ ಅನುಭವ ಹೊಸದೇನಲ್ಲ. ಬೆಂಗಳೂರಿನಂಥ ಪಟ್ಟಣದಲ್ಲಂತೂ ಮೆಜೆಸ್ಟಿಕ್ ಅಥವಾ ಶಿವಾಜಿನಗರದ ಬಸ್



ಸುಧಾ ಸೀತಾರಾಮನ್, ಎನ್. ಗಾಯತ್ರಿ, ಎಸ್. ವಿಮಲ, ಜಿ. ಆರ್., ಡಾ॥ ವಿಜಯಾ, ಉಷಾ, ಹನೀಫ್

ಸ್ಟ್ಯಾಂಡ್‌ಗಳಲ್ಲಿ ನಾವು ಜೀನ್ಸ್ ಹಾಕಿದ್ದರೆ, ಅಥವಾ ಬಿಗಿಯಾದ ಬಟ್ಟೆ ಧರಿಸಿದ್ದರೆ 'ನೀವು ಈ ರೀತಿ ಬಟ್ಟೆ ಧರಿಸಬಾರದು. ಧರಿಸಿದರೆ ನಾವು ನಿಮ್ಮನ್ನು ಹೇಗೆ ಬಳಸ್ತೀವಿ' ಅನ್ನುವುದನ್ನು ಸೂಚ್ಯವಾಗಿ ತಿಳಿಸುವ ಗಂಡಸರನ್ನು ಕಂಡಿದ್ದೇವೆ. ಇದೇನೂ ಹೊಸ ವಿಷಯವೂ ಅಲ್ಲ, ಹಾಗೆಯೇ ಇದು ಆಘಾತಕಾರಿ ವಿಷಯ ಅನ್ನುವುದನ್ನು ಹೇಳಲಿಕ್ಕೆ ಇಷ್ಟಪಡುತ್ತೀನಿ. ಕೆಲವು ವರ್ಷಗಳ ಹಿಂದೆ ಕ್ರೈಸ್ಟ್ ಕಾಲೇಜಿನಲ್ಲಿ ಇಂತಹ ವಸ್ತ್ರ ಸಂಹಿತೆ ಇತ್ತು. ಇದು ಮುಖ್ಯವಾಗಿ ಸ್ತ್ರೀಯರನ್ನು ಉದ್ದೇಶಿಸಿ ಮಾಡಿದಂತಹುದು. ಮಹಿಳೆಯರು ತಾವು ಲೈಂಗಿಕ ಜೀವಿಗಳು ಅಂತ ತೋರಿಸಿಕೊಳ್ಳದಿರಲಿ ಎನ್ನುವ ಆಶಯವೂ ಇದರ ಹಿಂದೆ ಇರುತ್ತೆ.

ಈ ಸಮಸ್ಯೆಗೆ ಇನ್ನೊಂದು ಆಯಾಮವೂ ಇದೆ. ಇವತ್ತು ಭಾರತದಲ್ಲಿ ಮಾತ್ರವಲ್ಲ ವಿಶ್ವದಾದ್ಯಂತ ಇಸ್ಲಾಂಅನ್ನು ಒಂದು ರಾಜಕೀಯ ಬೆದರಿಕೆಯ ಅಸ್ತ್ರವಾಗಿ ನೋಡಲಾಗುತ್ತಿದೆ. ಇವತ್ತು ಎಲ್ಲಾ ಥರಹದ ಸಮೂಹ ಮಾಧ್ಯಮಗಳಲ್ಲೂ ಈ ಅಂಶವನ್ನು ಬಿತ್ತರಿಸಲಾಗುತ್ತಿದೆ: ಮುಸ್ಲಿಂ ಮಹಿಳೆಯರೆಂದರೆ ಅವರು ಬುರ್ಕಾ ಹಾಕ್ಕೋತಾರೆ. ಅವರು ತುಂಬಾ ಮಡಿವಂತರು. ತುಂಬಾ ಹಿಂದುಳಿದವರು. ಅಂತ. ಹಾಗಿರುವಾಗ ಹಿಂದೆ ಹೇಳಿಕೊಳ್ಳದೇ ಇದ್ದವರೂ ಕೂಡ ಇಂದು 'ನಾನು ಧಾರ್ಮಿಕ ಬೇರುಗಳುಳ್ಳವಳು' ಅಂತ ಹೇಳಿಕೊಳ್ಳುವ ಸಂದರ್ಭ ಬಂದು ಒದಗಿದೆ. ಅವರು ಏಕೆ ಬುರ್ಕಾ ಹಾಕ್ಕೋತಾರೆ ಅಂದಾಗ, ಅದು ಅವರ ವೈಯಕ್ತಿಕ ಆಯ್ಕೆಯಾಗಿ ಉಳಿದಿರುವುದಿಲ್ಲ. ನಾನು ನನ್ನ ಬಗ್ಗೆ ಏನನ್ಕೋತೀನಿ ಅನ್ನುವುದರ ಹಿಂದೆ ನನ್ನ ವರ್ಗ, ನನ್ನ ಜಾತಿ, ಧರ್ಮ- ಎಲ್ಲವೂ ಬೆರಕೆಯಾಗಿರುತ್ತದೆ. ಒಬ್ಬ ಮಹಿಳೆ 'ನಾನು ಬುರ್ಕಾ ಹಾಕ್ಕೋಬೇಕು' ಅಂದಾಗ ಅದು ಮೇಲ್ನೋಟಕ್ಕೆ ಪುರುಷ ಪ್ರಧಾನ ಗುಂಪಿನ ನಿಯಂತ್ರಣ ಸೂತ್ರವಾಗಿದ್ದರೂ ಆಕೆಗೆ ತನ್ನನ್ನು ತಾನು ಸಮರ್ಥಿಸಿಕೊಳ್ಳುವ ಕಾರಣಕ್ಕೆ ಮುಖ್ಯವಾಗುತ್ತದೆ. ಅವಳು ತನ್ನ ಸಮುದಾಯದ ಭಾಗವಾಗಿ, ಧಾರ್ಮಿಕ ಗುಂಪಿನ ಭಾಗವಾಗಿ ಗುರುತಿಸಿಕೊಳ್ಳಲು ಬಯಸುತ್ತಿರುತ್ತಾಳೆಯೇ ಹೊರತು ಒಬ್ಬ ಬಲಿಪಶುವಾಗಿ ಅಲ್ಲ. ಈ ಸಮಸ್ಯೆಯನ್ನು ಈ ಆಯಾಮದಿಂದಲೂ ನೋಡಬೇಕು. ಆದ್ದರಿಂದಲೇ ಇದನ್ನು ವೈಯಕ್ತಿಕ ಆಯ್ಕೆಯೆಂದು ಸರಳೀಕರಿಸುವುದನ್ನು ನಾನು ಒಪ್ಪುವುದಿಲ್ಲ. ಬುರ್ಕಾ ಹಾಕ್ಕೊಂಡರೆ ಹೊರಗೆ ಹೋಗಲಿಕ್ಕೆ ಹೆಚ್ಚು ಸ್ಪೇಸ್ ಸಿಗುತ್ತೆ ಎನ್ನುವುದಾದರೆ, ಆಗ ಅದನ್ನು ಹೇಗೆ ನೋಡುತ್ತೀವಿ? ಅದನ್ನು ವಿಮೋಚನೆ ಅನ್ನುತ್ತೀವಾ ಅಥವಾ ಪುರುಷ ಪ್ರಾಧಾನ್ಯತೆಯ ಹುನ್ನಾರ ಅಂತ ಹೇಳುತ್ತೀವಾ ? ಇದನ್ನು ಹೇಗೆ ಅರ್ಥೈಸುತ್ತೇವೆ? ಹಿನ್ನೆಲೆಯಲ್ಲಿ ಬಂಟ್ವಾಳದ ಘಟನೆಯನ್ನು ವಿಶ್ಲೇಷಿಸಬೇಕು.



**ವಿಜಯಾ:** ಹನೀಫ್ ಹೇಳಿದ ಹಾಗೆ ಬುರ್ಕಾ ಧಾರ್ಮಿಕ ಸಂಗತಿ ಅಲ್ಲ, ಆ ಅದನ್ನು ಧಾರ್ಮಿಕ ಸಂಗತಿಯೆಂಬಂತೆ ಬಿಂಬಿಸುತ್ತಿದ್ದಾರೆ. ಇತ್ತೀಚೆಗೆ ಮಾಯಾ ದ ಅವರ ಸಂದರ್ಶನ ಮಾಡೋಕ್ಕೆ ಹೋಗಿದ್ವಿ. ಸಂದರ್ಶನದ ವೇಳೆಯಲ್ಲಿ ಅವರು ಒ ವಿಷಯ ಹಂಚಿಕೊಂಡರು: ಡಾನ್ಸ್ ಕಲಿಯಲಿಕ್ಕೆ, ಅವರು ಗುರುಗಳ ಬಳಿ ಹೋದಾ ಅವರನ್ನು ಗುರುಗಳು ಒಂದು ಮಾತು ಕೇಳ್ತಾರೆ: ಗೂಂಘಟ್ ಹಾಕ್ಕೋಳಕ್ಕೆ ಬರ ಇರೋ ದಕ್ಷಿಣದವರಿಗೆ ಗೂಂಘಟ್ ಸರಿಸೋಕೆ ಬರುತ್ತಾ? ಅಂತ ಕೇಳ್ತಾರೆ. ಅಂ ಗೂಂಘಟ್ ಹಾಕದಿರುವುದು, ಬುರ್ಕಾ ಹಾಕದಿರುವುದು - ಇವೆಲ್ಲಾ ಸಂಪ್ರದಾ ವಿರೋಧಿ ಅನ್ನುವಂತಹ ಭಾವನೆ. ಬಂಟ್ವಾಳದ ಕಾಲೇಜಿನ ವಿಷಯಕ್ಕೆ ಬಂದಾಗಲ ಒಟ್ಟು ಪುರುಷಾಧಿಕಾರ ಮಹಿಳೆಯ ಮೇಲೆ ಹೇಗೆ ಕೆಲಸ ಮಾಡುತ್ತಿದೆ ಅನ್ನುವುದ ನೋಡಬೇಕು. ಈ ಕಾಲೇಜಿನ ಸಂದರ್ಭದಲ್ಲೂ ಅದನ್ನು ಹಿಂದೂ ಸಂಘಟನೆ ಮಾಡ ಬೇರೆಯವರು ಮಾಡಿದರಾ, ಅದು ನನಗೆ ಗೊತ್ತಿಲ್ಲ. ನನಗೆ ಬಂದ ಮಾಹಿತಿಯ ಕಾಲೇಜಿನಲ್ಲಿ ಪ್ರಿನ್ಸಿಪಾಲರು ಕರೆದು ಹೀಗೆಲ್ಲಾ ಹಾಕ್ಕೋಬಾರ್ದು, ಎಂದಾಗ ಅವರ ಹಾಕ್ಕೋಬೋದು, ನಾವಾದರೆ ಹಾಕ್ಕೋಬಾರ್ದಾ? ಅಂತೆಲ್ಲಾ ವಾದ-ವಿ ನಡೆದಿದೆ. ಆಮೇಲೆ, ಆ ಹುಡುಗಿಗೆ ಅವಳು ಹಾಕ್ಕೊಂಬರ್ತಿದ್ದ ವಲ್ಲಿಯನ್ನು ತೆಗೆಯ ಅಂತ ಅಂದಿದಾರೆ, ಅವಳು ಒಪ್ಪಿಕೊಂಡಿದ್ದೂ ಆಯಿತು. ಇದಾದ ಎರಡು ಮೂ ದಿನಗಳ ನಂತರ ಅವರ ಧರ್ಮ ಗುರುಗಳು ಮತ್ತು ಅವರ ತಂದೆ ಬಂದು ದೊ ಗಲಾಟೆಯನ್ನು ಎಬ್ಬಿಸಿದಾರೆ. ಇಲ್ಲಿ ಸಂಘರ್ಷ ಆಗಿರೋದು ನಿಜ. ಇದರಿಂದಾಗಿ ಕಾಲೇಜಿನಲ್ಲಿ ಮೊದಲು ಇಲ್ಲದಿದ್ದ ವಸ್ತ್ರಸಂಹಿತೆ ನಂತರ ಬಂತು. ನಾನು ಹುಡುಗಿಯನ್ನು ಮಣಿಪಾಲಕ್ಕೆ ಹೋಗಿದ್ದಾಗ ಯಾವುದೋ ಒಂದು ಸಂದರ್ಭದ ಭೇಟಿ ಮಾಡಿದ್ದೆ. ಸಹಜವಾಗಿ ತಮಾಷೆಯಿಂದ ಆ ಹುಡುಗಿಗೆ ಏಕೆ ಹೀಗೆ ಮಾಡಿ ಅಂತ ಕೇಳಿದೆ. ಆಗ ಅವಳು ಕಾಲೇಜಿನವರು ಬೇಡ ಅಂತ ಅಂದಮೇಲೆ ನನಗೇ ಹಾಕ್ಕೊಳ್ಳಬೇಕಂತ ಅನಿಸಿರಲಿಲ್ಲ. ಆದರೆ ಮನೆಯವರೆಲ್ಲಾ ಇದು ಹಾಕ್ಕೋಳ್ಳೋ ಶ್ರೇಷ್ಠ ಅಂತ ಅಂದಮೇಲೆ ಹಾಕ್ಕೊಂಡೆ. ಹೀಗೆ ಮಕ್ಕಳಿಗೆ ಅಂತ, ನಂಬಿಕೆಗಳು ಏ ಇರಲ್ಲ. ಆದರೆ ಅಂತಹ ನಂಬಿಕೆಯನ್ನು ಹುಟ್ಟುಹಾಕುವ ಪ್ರಕ್ರಿಯೆ ಇರುತ್ತದಲ್ಲಾ, ಅ ದೋಷ ಇರುತ್ತದೆ. ಇದು ನಮ್ಮನ್ನು ಆತಂಕಕ್ಕೆ ಗುರಿಮಾಡುವಂತಹ ವಿಷ ಇನ್ನೊಂದು ವಿಷಯ, ಬುರ್ಕಾ ಬಗ್ಗೆ ಶ್ರೇಷ್ಠ ಕವಿತೆ ಬರೆದಂತಹ ಕವಿಗಳು ಈ ಬದಲಾಗಿದ್ದಾರೆ. ನಮ್ಮಲ್ಲಿ ಪ್ರಗತಿಪರ ಮುಸ್ಲಿಂ ಲೇಖಕರು ಜಮಾತೆಯ ತೊಂದರೆಗೊಳಗಾಗಬಹುದೆಂದು ಬರೆಯುವುದನ್ನೇ ನಿಲ್ಲಿಸಿದವರಿದ್ದಾರೆ.

**ಜಿ. ಆರ್.** - ಇಲ್ಲಿ ನನ್ನದೊಂದು ಪ್ರಶ್ನೆ. ಈಗ ನಿಮ್ಮಲ್ಲಿ ಕೆಲವರು ತಮ್ಮನ್ನು ತಾ ಸಮರ್ಥಿಸಿಕೊಳ್ಳಲು ಇಂತಹ ಚಳುವಳಿಗಳಲ್ಲಿ ತೊಡಗಿಕೊಂಡಿದಾರೆ, ಅನ್ನುವ ಮಾತ ಆಡಿದೀರಾ. ಈ ರೀತಿ ಸಮರ್ಥಿಸಿಕೊಳ್ಳಕ್ಕೆ ಪರ್ಯಾಯವನ್ನೇನಾದರೂ ಕೊಟ್ಟಿದ್ದರೆ ಪರಿಸ್ಥಿತಿ ಬೇರೆ ಇರುತ್ತಿತ್ತಾ?

**ಸುಧಾ:** ಇಲ್ಲಿ ಮುಖ್ಯವಾದ್ದು ಇದೊಂದು ವೈಯಕ್ತಿಕ ಆಯ್ಕೆಯ ಪ್ರಶ್ನೆಯೇ ಅ ಯಾವುದೇ ವ್ಯಕ್ತಿ ತಾನು ಸ್ವಾಯತ್ತ ಅಂತ ಅನ್ಕೋಳ್ಳಕ್ಕೆ ಆಗಲ್ಲ. ನಮ್ಮನ್ನು ಮೀರಿದಂ ಹಲವಾರು ಶಕ್ತಿಗಳು ಇಂತಹ ವಿದ್ಯಮಾನವನ್ನು ನಿಯಂತ್ರಿಸುತ್ತಿರುತ್ತವೆ. ವಿಸ್ತೃತವಾ ರಾಜಕೀಯ ಪರಿಧಿಯೊಳಗೆ ಈ ಘಟನೆಯನ್ನು ನೋಡಬೇಕು. ವ್ಯಕ್ತಿಗಳಿಗೆ ಧಾಮಿ ಆಯಾಮ ಮುಖ್ಯವಾಗಿದ್ದರೆ, ಅದಕ್ಕೆ ಸ್ಥಳೀಯ, ರಾಷ್ಟ್ರೀಯ, ಅಂತರರಾಷ್ಟ್ರೀ ಆಯಾಮಗಳಿರುತ್ತವೆ. ಇದರಿಂದ ಹೊಸ ಸೌಂದರ್ಯ ಮೀಮಾಂಸೆ ಹುಟ್ಟಿಕೊಳ್ಳುತ್ತ ಇಲ್ಲಿ ಒಂದು ಘಟನೆಯನ್ನು ಉದಾಹರಿಸಬೇಕಾಗುತ್ತದೆ. ಕಳೆದ ವಾರ ನಾನು ಮ ಉಷಾ ಅಖಿಲ ಭಾರತ ಮಹಿಳಾ ಅಧ್ಯಯನದ ಅಸೋಸಿಯೇಷನ್‌ನ ವಿಚ ಸಂಕಿರಣಕ್ಕೆಂದು ಮಂಗಳೂರಿಗೆ ಹೊರಟಿದ್ದೆವು. ದಾರಿಯಲ್ಲಿ ಬಸ್ ನಿಂತ ಟಾಯ್‌ಲೆಟ್ ಹುಡುಕಿಕೊಂಡು ಅಲ್ಲೇ ಇದ್ದ ಮನೆಗಳಿಗೆ ಹೋದೆವು. ಬಸ್‌ನ ಮುಸ್ಲಿಂ ಮಹಿಳೆಯೊಬ್ಬಳು ನಮ್ಮ ಜೊತೆ ಬರಬಹುದಾ ಅಂತ ಕೇಳಿ ನಮ್ಮೊ ಸೇರಿಕೊಂಡಳು. ಆಗ ಅವಳು ಒಳಗೆ ಹೋಗುವಾಗ ಅವಳು ಹಾಕ್ಕೊಂಡಿದ್ದ ಬುಕ ನಮ್ಮ ಕೈಗೆ ಕೊಟ್ಟು ಹೋದಳು. ಹನೀಫ್ ಹೇಳಿದ ಹಾಗೆ ಅದು ತುಂಬಾ ದುಬಾರಿ ನಾಜೂಕಿನ ಬುರ್ಕಾ. ನಮ್ಮನ್ನು ನೋಡಿ ಅವಳಿಗೆ ಏನನ್ನಿಸಿತೋ 'ಹೊರಗೆ ತುಂಬಾ ಇದೆಯಲ್ಲಾ, ಅದಕ್ಕೆ ಬುರ್ಕಾ ಹಾಕ್ಕೊಂಡಿದೀನಿ' ಅಂತ ವಿವರಣೆ ಕೊಟ್ಟಳು. ಅವ ಏನು ಮಾಡುತ್ತಿದ್ದಾಳೆ, ಅಂತ ವಿಚಾರಿಸಿದೆವು. ಅವಳು ಮ್ಯಾನೇಜ್‌ಮೆಂಟ್ ಕಾಲೇಜಿ ಲೆಕ್ಚರರ್, ಅಂತೆಂದಳು. ಇಲ್ಲಿ ಗಮನಿಸಬೇಕಾದ ಸ್ವಾರಸ್ಯವೆಂದರೆ, ನಾವು ಪ್ರಗತಿಪರ



ಡಾ|| ವಿಜಯಾ, ಉಷಾ, ಹನೀಫ್, ತಸ್ಲೀಂ

ವಿವರಿಸಬೇಕಾಗಿರಲಿಲ್ಲ. ಆದರೆ, ಅವಳಿಗೆ 'ತಾನೂ ಪ್ರಗತಿಪರಳು' ಅನ್ನುವುದಕ್ಕೆ ೇ ಕಾರಣ, ಸಮರ್ಥನೆ, ಕೊಡಬೇಕಾದ ಅನಿವಾರ್ಯತೆ ಇದೆ. ಇಂತಹ ಅನಿವಾರ್ಯತೆಗೆ ಘಟನೆಗಳ ಸರಮಾಲೆಯೇ ಕಾರಣವಾಗಿದೆ. ನಾಗಪುರವೇ ೞೂರಿಗೆ ಸ್ಥಳಾಂತರವಾಗುತ್ತಿರುವ ಸಂದರ್ಭ ಒದಗಿಬಂದಿದೆ. ಅಂತಹ ರ್ಭದಲ್ಲಿ ಈ ಘಟನೆ ನಡೆದಿದೆ.

ಮಲಾ : ನಮ್ಮ ಸಮಾಜದಲ್ಲಿ ವಸ್ತ್ರಸಂಹಿತೆ ಸಾಕಷ್ಟು ಆಚರಣೆಯಲ್ಲಿದೆ. ಇಲ್ಲದಿದ್ದರೆ, ಘಟ್ ಇಲ್ಲದೆ ಹೆಣ್ಣುಮಕ್ಕಳು ಹೊರಗೆ ಬರಬಾರದು ಎನ್ನುವುದು ಚರ್ಚೆಯ ುವಾಗುತ್ತಿರಲಿಲ್ಲ. ನನ್ನ ವೈಯಕ್ತಿಕ ಅನುಭವವನ್ನು ಹಂಚಿಕೊಳ್ಳುವುದಾದರೆ, ದಶಕದ ಆರಂಭದಲ್ಲಿ ಆಗಿನ್ನೂ ನಾನು ಹಳ್ಳಿಯಿಂದ ಬೆಂಗಳೂರಿಗೆ ಬಂದಿದ್ದೆ. ಸಂಘಟನೆಯ ಕೆಲಸವನ್ನು ನಾವು ಗೋರಿಪಾಳ್ಯದ ಬೀಡಿಕಟ್ಟುವ ಮಹಿಳೆಯರ ೆ ನಡೆಸಿದ್ದೆವು. ಗಾಯತ್ರಿಯೂ ನಮ್ಮ ಜೊತೆಯಲ್ಲಿದ್ದಳು. ಅವಳೂ ನೆನೆಸಿಕೊಳ್ಳ ದು. ನಾವು ಕೆಲಸ ಮಾಡುತ್ತಿದ್ದುದು ಬಹುಪಾಲು ಮುಸ್ಲಿಂ ಹೆಣ್ಣುಮಕ್ಕಳ ನಡುವೆ. ಅವರು ಬುರ್ಕಾ ಹಾಕಿಕೊಳ್ಳುತ್ತಿರಲಿಲ್ಲ. ಅದೇ ಹೆಣ್ಣುಮಕ್ಕಳು ಈಗ ಸಿ.ಐ.ಟಿ.ಯು. ಗೆ ಬರುವಾಗ ಬುರ್ಕಾ ಹಾಕಿಕೊಂಡು ಬರುತ್ತಾರೆ. ನಾನೂ ಸಂಘಟನೆಯ ಭದಲ್ಲಿ ಓಡ್ನಿಯಿಲ್ಲದೆ ಸುಮ್ಮನೆ ಚೂಡಿದಾರ್ ಹಾಕಿಕೊಂಡು ಹೋಗುತ್ತಿದ್ದೆ. ಆಗ ಂಘಟನೆಯ ಹಿರಿಯ ಸಂಗಾತಿಯೊಬ್ಬಳು 'ನೀನು ಹೀಗೆ ಹೋಗಬಾರದು, ಅಂತ ತನ್ನದೇ ಓಡ್ನಿಯನ್ನು ತಂದು ನನಗೆ ಹೊದಿಸಿ ಕಳಿಸುತ್ತಿದ್ದಳು. ಅಂದರೆ ನನ್ನ ಇಷ್ಟಕ್ಕೆ ದ್ಧವಾಗಿ ನಾನು ಓಡ್ನಿ ಧರಿಸಬೇಕಿತ್ತು. ಅಂದರೆ ವಸ್ತ್ರಸಂಹಿತೆಯೆನ್ನುವುದು ಎಲ್ಲರಿಗೂ ಲ್ಲ ಒಂದು ರೀತಿಯಲ್ಲಿ ಬಲವಂತವಾಗಿ ಹೊರಿಸಲ್ಪಡುತ್ತದೆ. ಇನ್ನೊಬ್ಬಳು, ನನ್ನ ಕಿನ ಗೆಳತಿ ಪಂಜಾಬಿ. ಟ್ರೇಡ್ ಯೂನಿಯನ್ ಮೀಟಿಂಗ್‌ಗೆ ಬರುವಾಗ ಪ್ಯಾಂಟ್ ಹಾಕ್ಕೊಂಡು ಬರುತ್ತಾಳೆ. ಅದೇ ಅವಳತ್ತೆ ಮನೆಗೆ ಹೋಗುವಾಗ ಚೂಡಿದಾರ್ ್ಕಂಡು ಹೋಗ್ತಾಳೆ. ನಾನು ಇಂಟರ್‌ನೆಟ್‌ನಲ್ಲಿ ಬುರ್ಕಾ ಬಗ್ಗೆ ಕುರಾನ್‌ನಲ್ಲಿ ಏನು ತ್ತೆ ಅಂತ ನೋಡಿದೆ. ಅಲ್ಲಿ ಉಡುಗೆ ಗೌರವಯುತವಾದ ತೊಡುಗೆಯಾಗಿರ ಅಂತ ಹೇಳಿದೆ. ಅಂದರೆ ಏನು? ಸೀರೆ ಗೌರವಯುತವಾದ ಉಡುಗೆಯೇ? ಸಂದರ್ಭದಲ್ಲೂ ಇದು ನಿಜ ಅಲ್ಲ. ಅದನ್ನು ಹೇಗೆ ಉಡುತ್ತೀವೋ ಅದನ್ನು ಂಬಿಸಿರುತ್ತೆ.

ಕ್ಷಿಣ ಕನ್ನಡದ ಘಟನೆ ರಾಜಕೀಯ ಲಾಭ ಮಾಡಿಕೊಳ್ಳಲು ನಡೆದಂತಹ ಘಟನೆ. ್ನ ಕೇಸರಿ ಶಾಲಿನವರು ಮಾತ್ರವಲ್ಲ, ಬೇರೆ ಧರ್ಮದ ಮೂಲಭೂತವಾದಿಗಳು ರಾಜಕೀಯ ಲಾಭ ಮಾಡಿಕೊಳ್ಳಲು ನಡೆಸಿದಂತಹುದು. ಇಬ್ಬರೂ ಒಂದೇ ತರಹ ಚಿಸುತ್ತಾರೆ. ತಮ್ಮ ಧರ್ಮವನ್ನು ಸಮರ್ಥಿಸಿಕೊಳ್ಳುವಾಗ ಮಹಿಳೆಯರನ್ನು ಾಗಿ ಬಳಸಿಕೊಳ್ಳುತ್ತಾರೆ. ಇಲ್ಲೆಲ್ಲಾ ಇದು ಧರ್ಮದ ಪ್ರಶ್ನೆಯಲ್ಲ, ಧರ್ಮವನ್ನು ೀಯಗೊಳಿಸುವ ಪ್ರಶ್ನೆ.

**ಸ್ಲೀಂ :** ವಿದ್ಯಾರ್ಥಿಗಳ ಬಗ್ಗೆ ಹೇಳುವಾಗ, ಒಂದು ವಿಷಯ ನನಗೆ ನೆನಪಿಗೆ . ಈ ಮೂಲಭೂತವಾದದಿಂದ ಹೆಣ್ಣುಮಕ್ಕಳಿಗೇ ತೊಂದರೆ. ಇಬ್ಬರು ಮಕ್ಕಳು ಲ್ಯಾಬ್ ಒಳಗೆ ಬುರ್ಕಾ ಹಾಕ್ಕೊಂಡು ಹೋದರಂತೆ. ಅವರನ್ನು ಕುರಿತು ಯುವವರು 'ಏ ಇವರು ಟೆರರಿಸ್ಟ್, ಹುಷಾರಿರಬೇಕು' ಅಂದರಂತೆ. ಆ ಮಕ್ಕಳು ಬೇಜಾರು ಮಾಡಿಕೊಂಡು ನನ್ನ ಬಳಿ ಹೇಳಿದರು. ಇದೊಂದು ರೀತಿಯಲ್ಲಿ ಗೆ ಬುರ್ಕಾ ಹಾಕಿಕೊಳ್ಳಬೇಡಿ ಎನ್ನುವ ಒತ್ತಾಯ. ಸೆಪ್ಟೆಂಬರ್ ೧೧ರ ಘಟನೆ ಆದಮೇಲೆ 'ನಾನು ಮುಸ್ಲಿಂ' ಅಂತ ತೋರಿಸೋಕೆ ಬುರ್ಕಾ ಧರಿಸುವುದು ಜಾಸ್ತಿಯಾಗುತ್ತಿದೆ. ಬರವಣಿಗೆಯಲ್ಲೂ ಇಂತಹ ಒತ್ತಡಗಳನ್ನು ಕಾಣಬಹುದು. ಬುರ್ಕಾ ಮತ್ತು ಮುಸ್ಲಿಂ ಧರ್ಮದ ವಿಷಯ ವಿರೋಧಿಸಿ ಬರೆದರೆ ಇನ್ನೊಂದು ಗುಂಪಿನವರು ಬೆಂಬಲಿಸುತ್ತಾರೆ; ಅವರ ಗುಂಪಿನವರು ದೂಷಿಸುತ್ತಾರೆ. ಆದರೆ ಈ ಅನುಭವ ಸಾರ್ವತ್ರಿಕ ಅಲ್ಲ, ಅಂತ ಹನೀಫ್ ಹೇಳಿದ್ದನ್ನು ನಾನು ಒಪ್ಪುತ್ತೇನೆ.

ನನ್ನ ವೈಯಕ್ತಿಕ ಅನುಭವ ಹಂಚಿಕೊಳ್ಳುವುದಾದರೆ, ನಾನು ಎಂ.ಎ ಓದುವವರೆಗೂ ನನ್ನ ತಂದೆ ಇದ್ದರು. ಆಗ ನಾನು ಬುರ್ಕಾ ಹಾಕ್ಕೋತಿರಲಿಲ್ಲ. ಆಗ ನಾನು ಮತ್ತು ನನ್ನಣ್ಣ ತುಂಬ ಕ್ರಿಯಾಶೀಲವಾಗಿ ಹೊರಗೆ ತೊಡಗಿಕೊಂಡಿದ್ದೆವು. ತಂದೆ ತೀರಿಕೊಂಡ ಮೇಲೆ ನನ್ನಣ್ಣ ತಂದೆಯ ಜಾಗ ಆಕ್ರಮಿಸಿದರು. ಒಮ್ಮೆ ಎಲ್ಲರೂ ಒಟ್ಟಿಗೆ ಕೂತಿದ್ದಾಗ, 'ನೀನು ಬುರ್ಕಾ ಹಾಕ್ಕೋ' ಅಂತ ಹೇಳಿದರು. ಆದರೆ ನನಗೆ ನಿಜವಾಗಲೂ ಬುರ್ಕಾ ಹಾಕಲು ಇಷ್ಟವಿರಲಿಲ್ಲ. ಆದರೆ, ನಮ್ಮಣ್ಣನನ್ನು ಕಂಡರೆ ತುಂಬ ಪ್ರೀತಿಯಿತ್ತು. ಅದರಿಂದ ಅವರ ಮಾತಿಗೆ ಗೌರವ ಕೊಟ್ಟು ಬುರ್ಕಾ ಹಾಕಿಕೊಂಡೆ. ಆದರೆ ಮದುವೆಯಾದ ನಂತರ ಬುರ್ಕಾ ತೆಗೆದೆ. ನನ್ನ ಗಂಡ ಪ್ರಗತಿಪರರೂ ಅಂತ ಅನ್ಕೊಂಡಿದ್ದೆ. ಆಶ್ಚರ್ಯ ಅಂದರೆ, ಅವರು ಮೆಲ್ಲಗೆ 'ಏಕೆ ನೀನು ಬುರ್ಕಾ ಹಾಕಲ್ಲಾ?' ಅಂತ ಕೇಳಿದರು. ಆದರೆ ನಾನು ಅವರ ಮಾತನ್ನು ಅಷ್ಟೊಂದು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಬುರ್ಕಾನೂ ಹಾಕಲಿಲ್ಲ. ಒಟ್ಟಾರೆಯಾಗಿ ನನಗೆ ಏನು ಅನ್ನಿಸೋತ್ತೆ ಅಂದರೆ, ಪುರುಷ ಪ್ರಾಧಾನ್ಯತೆಯು ವಸ್ತ್ರಸಂಹಿತೆಯನ್ನು ಹೆಣ್ಣನ್ನು ತನ್ನ ಸ್ವತ್ತು ಅಂತ ಸ್ಥಾಪಿಸೋಕೆ ವಿಧಿಸಿದರೆ, ಧರ್ಮ ವಸ್ತ್ರಸಂಹಿತೆಯನ್ನು ರಾಜಕೀಕರಣಗೊಳಿಸಕ್ಕೆ ಬಳಸತ್ತೆ. ಸಂಸ್ಕೃತಿಯು ವಸ್ತ್ರಸಂಹಿತೆಯನ್ನು ಪೋಷೀಸುತ್ತೆ. ಒಂದು ಉದಾಹರಣೆ ಕೊಡುವುದಾದರೆ, ಸೀರೆ ನನಗೆ ಇಷ್ಟ, ನಮ್ಮ ಧಾರ್ಮಿಕ ಸಮಾರಂಭಗಳಲ್ಲಿ ನಾನು ಸೀರೆ ಉಟ್ಟರೆ, ನನ್ನ ಧರ್ಮದ ಸಮುದಾಯದವರೆಗೆ ಇಷ್ಟ ಆಗಲ್ಲ.

**ಹನೀಫ್:** ಸಮುದಾಯದ ಹೊರಗಿನ ಘರ್ಷಣೆಯ ಬಗ್ಗೆ ನೀವೆಲ್ಲಾ ಮಾತಾಡ್ತಿದೀರ. ಆದರೆ ಒಂದು ಅಂಶ ಗಮನಿಸಬೇಕು. ಮುಸ್ಲಿಂ ಸಮುದಾಯದ ಒಳಗೂ ಸಂಘರ್ಷ ನಡೆದಿದೆ. ಜಮಾತೆ ಇಸ್ಲಾಂನವರಿಗೂ ಸುನ್ನಿ ಪಂಥದವರಿಗೂ ಅಸಮಾಧಾನ, ಘರ್ಷಣೆ ನಡೆಯುತ್ತಿರುತ್ತದೆ. ಇದು ಸ್ಥಳೀಯ ಸಮಸ್ಯೆಯಾದರೆ, ಜಾಗತಿಕ ನೆಲೆಯಲ್ಲಿ ಇಸ್ಲಾಂ ಮತ್ತು ಕ್ರೈಸ್ತ ಧರ್ಮದ ನಡುವೆ ಸಂಘರ್ಷ ಇದೆ. ಇಸ್ಲಾಂನ ಶುದ್ಧೀಕರಣ ಮಾಡಬೇಕು ಅನ್ನುವ ಜಮಾತೆ ಇಸ್ಲಾಂ ತನ್ನ ಬಿಗಿಯಾದ ನಿಯಮಗಳನ್ನು ತನ್ನ ಸಮುದಾಯದ ಸದಸ್ಯರ ಮೇಲೆ ಹೇರುತ್ತದೆ. ಸಂಸ್ಕೃತಿ ಎನ್ನುವುದು ಸ್ಥಳೀಯವಾದುದು, ಧರ್ಮ ಎನ್ನುವುದು ಜಾಗತಿಕವಾದುದು ಎಂಬುದನ್ನು ಅರ್ಥ ಮಾಡಿಕೊಂಡರೆ ಈ ಕಗ್ಗಂಟನ್ನು ಬಿಡಿಸುವುದು ಸುಲಭ.

**ಸುಧಾ :** ಮುಸ್ಲಿಂ ಸಮುದಾಯದ ಹೊರಗೆ ನಿಂತು ವಸ್ತ್ರ ಸಂಹಿತೆಯ ಬಗ್ಗೆ ನನ್ನ ವಿಶ್ಲೇಷಣೆಯನ್ನು ಹೇಳಲಿಕ್ಕೆ ಇಷ್ಟಪಡುತ್ತೀನಿ. ನಿರ್ದಿಷ್ಟವಾಗಿ 'ಮುಸ್ಲಿಮತ್ವ' ಎನ್ನುವುದು ಏನಾದರೂ ಇದೆಯಾ? ಮುಸ್ಲಿಮೇತರ ಆಧುನಿಕತೆಗೆ ನಾವು ಒಗ್ಗಿಕೊಂಡಿದ್ದೇವೆ. ಅಭ್ಯಾಸವಾಗಿದೆ. ಆದರೆ, ಮುಸ್ಲಿಮತ್ವದ ಆಧುನಿಕತೆ ಅಂದರೆ ಏನು? ಆಗಲೇ ಉಷಾ ಹೇಳಿದಳು, ಮುಸ್ಲಿಮರು ಬಳಸುವ ಬುರ್ಕಾ ಮುಸ್ಲಿಂ ಸಮುದಾಯದ ಹಿಂದುಳಿಕೆಯ ಚಿಹ್ನೆ ಅಂತ ಗುರುತಿಸಲಾಗುತ್ತಿದೆ, ಅಂತ. ಇದನ್ನು ಕುರಿತು ನಾವು ಮುಸ್ಲಿಂರೊಂದಿಗೆ ಮಾತನಾಡಿದರೆ, ಅವರಲ್ಲಿ ಏಕತೆ ಇಲ್ಲ, ಭಿನ್ನ ಅಭಿಪ್ರಾಯಗಳಿವೆ. ಇಸ್ಲಾಂಅನ್ನು ಪುರುಷ ಪ್ರಾಧಾನ್ಯತೆಯ ಲಕ್ಷಣಗಳೊಂದಿಗೆ ಗುರುತಿಸಿದರೂ ಅದರಲ್ಲೇ ಇಸ್ಲಾಮಿಕ್ ಸ್ತ್ರೀವಾದ

ಇದೆ ಅಂತ ನನಗೆ ಅನ್ನಿಸುತ್ತದೆ. ಈ ಶಬ್ದ ಸ್ವಲ್ಪ ತಮಾಷೆಯಾಗಿ ಅನ್ನಿಸಿದರೂ, ಇದರ ಗಂಭೀರ ಚಿಂತನೆ ಅಗತ್ಯ. ನಮಗೆ ಯಾವಾಗಲೂ ಧರ್ಮವನ್ನು ಪುರುಷ ಪ್ರಾಧಾನ್ಯತೆಯ ಭಾಗವಾಗಿಯೇ ನೋಡುವುದು ಅಭ್ಯಾಸ. ಆದರೆ ಇತ್ತೀಚಿನ ಬದಲಾವಣೆಗಳನ್ನು ಗಮನಿಸಿದಾಗ ಧರ್ಮದೊಳಗೂ ಒಂದು ಸಂವಾದ ಸಾಧ್ಯವಿದೆ, ಆಗಬೇಕು ಅಂತ ಅನ್ನಿಸುತ್ತದೆ. ಇತ್ತೀಚೆಗೆ ಮುಸ್ಲಿಂ ಮಹಿಳೆಯರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆಸಿದ ಪ್ರತಿಭಟನೆ, ಅವರು ಕೈಯಲ್ಲಿ ಹಿಡಿದಿದ್ದ ಪೋಸ್ಟರ್‌ಗಳು ಒಂದು ಅಂಶವನ್ನು ಸ್ಪಷ್ಟಪಡಿಸುತ್ತದೆ: 'ಇದು ಸೆಕ್ಯುಲರ್ ಕಾಲೇಜು. ಏಕರೂಪತೆ ಇರಬೇಕು' ಅಂತ ಭರತ್ ಹೇಳಿದ್ದಕ್ಕೆ ಅವರ ಉತ್ತರ: ಮಿಡಿ, ಮಿನಿ ಸ್ಕರ್ಟ್‌ಗಳಂತಹ ಅಶ್ಲೀಲವಾದದ್ದು ಒಪ್ಪಿಕೊಳ್ಳುವ ನಿಮಗೆ ನಮ್ಮ ಬುರ್ಕಾ ಬಗ್ಗೆ ವಿರೋಧ ಏಕೆ? ಆದರೆ ಧರ್ಮದೊಳಗೇ ಅನುಸಂಧಾನ ಮಾಡುತ್ತಿರುವ ಮುಸ್ಲಿಂ ಮಹಿಳೆಯರು ಸೆಕ್ಯುಲರ್ ಪ್ರಕ್ರಿಯೆಯಲ್ಲಿ ಬಹುಸಂಖ್ಯಾತ ಸಮುದಾಯದವರು ಹೀಗೆ ಇರಬೇಕು ಅನ್ನುವುದನ್ನು ಪ್ರತಿಭಟಿಸುತ್ತಿದ್ದಾರೆ.

**ಹನೀಫ್:** ನೀವು ಮಂಗಳೂರಿನಲ್ಲಿ ನಡೆದ ಪ್ರತಿಭಟನೆಯ ಬಗ್ಗೆ ಮಾತಾಡುತ್ತಿದ್ದೀರಾ? ಅದನ್ನು ವ್ಯವಸ್ಥೆಗೊಳಿಸಿದ್ದು ಜಮಾತೆ ಇಸ್ಲಾಮಿ.

**ಸುಧಾ :** ಮುಸ್ಲಿಮತ್ವದಲ್ಲಿ ಏಕರೂಪತೆ ಇಲ್ಲ. ಮುಸ್ಲಿಂ ಮಹಿಳೆಯರು ಬುರ್ಕಾ ಹಾಕಿದರೂ ಬೀದಿಗೆ ಬಂದು ನಾನು ಧಾರ್ಮಿಕ ಕರ್ತವ್ಯ ಮಾಡುತ್ತಿದ್ದೀನಿ ಅಂತ ತಿಳೀತಾರೆ. ಆದರೆ, ನಾವು ಗಮನಿಸಬೇಕಾದ್ದು ನಾವು ಯಾವುದೇ ಧರ್ಮವನ್ನಾಗಲೀ ಸರಿಯಾಗಿ ಅರ್ಥೈಸಬೇಕು. ಪಬ್ ಪ್ರಕರಣದಲ್ಲಿಯೂ ರಾಮಸೇನೆಯವರು ತಳೆದ ನಿಲುವನ್ನು ಕಂಡು ಕ್ರಿಶ್ಚಿಯನ್ ಮತ್ತು ಮುಸ್ಲಿಂ ಸಮುದಾಯದವರಿಬ್ಬರೂ ಸಂತೋಷಪಟ್ಟರು. ಅಂದರೆ ಸ್ತ್ರೀವಾದಿಗಳು ಮತ್ತು ಎಡಪಂಥೀಯರು ಧರ್ಮದಿಂದ ದೂರವಿರುವ ಬದಲು ಧರ್ಮದ ಜೊತೆಗೆ ಅನುಸಂಧಾನ ಮಾಡಲು ಪ್ರಯತ್ನಿಸಬೇಕು.

**ಜಿ.ಆರ್. :** ಈವರೆಗೆ ನಾವು ಸಮಸ್ಯೆಯ ವಿಶ್ಲೇಷಣೆಯನ್ನು ಮಾಡಿದ್ದೇವೆ. ಒಟ್ಟು ಚರ್ಚೆಯನ್ನು ಮುಕ್ತಾಯಮಾಡುವ ಮುನ್ನ ಎಲ್ಲರೂ ಸಂಕ್ಷಿಪ್ತವಾಗಿ ಈ ಸಮಸ್ಯೆಗೆ ಪರಿಹಾರವನ್ನು ಯಾವ ರೀತಿ ನಿರೀಕ್ಷಿಸಬಹುದು, ಅಂತ ಹೇಳಬಹುದಾ?

**ತಸ್ಲೀಂ:** ಯಾವಾಗಲೂ ಧರ್ಮ ಬೇರೆ, ಸಂಸ್ಕೃತಿ ಬೇರೆ, ಎಂದು ನಂಬಿದವಳು ನಾನು. ಧರ್ಮ ವೈಯಕ್ತಿಕ ಹಾಗೂ ಖಾಸಗಿ ವಿಷಯವಾಗಿರುವವರೆಗೆ ಯಾವುದೇ ತೊಂದರೆಯಿಲ್ಲ. ಅದನ್ನು ಸಾರ್ವಜನಿಕ ಪ್ರತಿಷ್ಠೆಯ ವಿಷಯ ಮಾಡಿಕೊಂಡಾಗ ತೊಂದರೆಯಾಗುತ್ತದೆ. ಆದ್ದರಿಂದ ಧರ್ಮವನ್ನು ಮತ್ತೊಬ್ಬರ ಮೇಲೆ ಹೊರಿಸುವುದು, ರಾಜಕೀಕರಣಗೊಳಿಸುವುದು ಮತ್ತು ದೌರ್ಜನ್ಯದ ಅಸ್ತ್ರವಾಗಿ ಬಳಸುವುದನ್ನು ತಡೆಯಬೇಕಾಗುತ್ತದೆ.

**ಹನೀಫ್:** ವೈಯಕ್ತಿಕ ವಸ್ತ್ರಸಂಹಿತೆಯಿದ್ದರೆ ತಪ್ಪಿಲ್ಲ. ಆದರೆ ಬಲಪಂಥೀಯ ಸಂಘಟನೆಗಳು, ಅವು ಯಾವ ಧರ್ಮದ್ದೇ ಆಗಲಿ ವಿಧಿಸುವಂತಹ ವಸ್ತ್ರಸಂಹಿತೆಯ ವಿರುದ್ಧ ಪ್ರತಿಭಟನೆ ಅಗತ್ಯ.

**ಉಷಾ :** ಇವತ್ತು ನಮ್ಮ ನಡುವೆ ಪುರುಷಪ್ರಾಧಾನ್ಯತೆ ಇದೆ. ಅದೂ ಬಹುರೂಪಿ ಪುರುಷಪ್ರಾಧಾನ್ಯತೆ. ಅದು ಯಾವ ರೂಪದಲ್ಲಿದ್ದರೂ ಅದರ ವಿರುದ್ಧ ಪ್ರತಿಭಟನೆ ಅಗತ್ಯವಿದೆ. ಏಕರೂಪಿ ಜನಜೀವನವನ್ನು ಹೇರುವ ಯಾವುದೇ ಕ್ರಮವನ್ನು ಸಾಮಾಜಿಕ ಕಾರ್ಯಕರ್ತೆಯಾಗಿ ನಾನು ವಿರೋಧಿಸುತ್ತೇನೆ.

**ವಿಜಯಾ :** ಯಾವುದೇ ಸಂಘರ್ಷದಲ್ಲೂ ಬಲಿಪಶುವಾಗುವವಳು 'ಹೆಣ್ಣು'. ಗಂಡಸರ ಸಂಯಮ ಕದಡುತ್ತದೆ, ಅವರು ಹೆಣ್ಣಿನಿಂದ ಆಕರ್ಷಿತರಾಗಬಾರದು, ಅ... ಹೆಂಗಸರಿಗೆ ವಸ್ತ್ರಸಂಹಿತೆಯನ್ನು ಹೇರುವುದನ್ನು ಖಂಡಿತ ಪ್ರತಿಭಟಿಸಬೇಕು.

ಧರ್ಮ ಮತ್ತು ಸಂಸ್ಕೃತಿ ಬೇರೆ ಬೇರೆಯೇ ಎಂಬುದನ್ನು ಯುವಜನಾಂ... ತಿಳಿಸಿಹೇಳಬೇಕಾಗಿದೆ.

**ವಿಮಲಾ:** ಯಾವುದೇ ಸಂದರ್ಭದಲ್ಲೂ ಜನಸಾಮಾನ್ಯರನ್ನು ಬದುಕಿನ ನಿಜವ... ಸಂಗತಿಗಳಿಂದ ದೂರವಿಡಲು ಧರ್ಮ, ಜಾತಿಯನ್ನು ಬಳಸಿಕೊಳ್ಳಲಾಗುತ್ತದೆ. ಅ... ಸಂದರ್ಭದಲ್ಲಿ 'ಹೆಣ್ಣು' ಮುಖ್ಯವಾಗಿ ಬಲಿಪಶುವಾಗುತ್ತಾಳೆ. ಇನ್ನು ದಕ್ಷಿಣ ಕನ್ನ... ಸಂದರ್ಭದಲ್ಲಿ ಉಂಟಾಗಿರುವ ಆರ್ಥಿಕ ಬದಲಾವಣೆ ಜನಜೀವನವನ್ನು ದು... ಗೊಳಿಸಿದೆ. ಮೀನುಗಾರಿಕೆ, ಹೆಂಚಿನ ಕಾರ್ಖಾನೆ ಎಲ್ಲವೂ ಕಷ್ಟದ ಸ್ಥಿತಿಯಲ್ಲಿವೆ. ಇಂ... ಸಂದರ್ಭದಲ್ಲಿ ನಿಜ ವಾಸ್ತವವನ್ನು ಮರೆಸುವುದಕ್ಕಾಗಿಯೇ ಮೂಲಭೂತ ವಾದಿ... ಜಾತಿ, ಧರ್ಮದ ಸಂಘರ್ಷವನ್ನು ಉಂಟುಮಾಡುತ್ತಿದ್ದಾರೆ. ಆದ್ದರಿಂದ ಜನ... ಅಗತ್ಯವಾದ ಬದುಕು, ಕೂಲಿ, ಆಹಾರ -ಮುಂತಾದ ವಿಷಯಗಳತ್ತ ಗಮನಹರಿಸ... ಇಂತಹ ಸಮಸ್ಯೆಗಳ ಪರಿಹಾರದತ್ತ ಇಡುವ ಹೆಜ್ಜೆಯಾಗಬಹುದು.

**ಸುಧಾ:** ಪರಿಹಾರ ಅಂತ ನಾನು ಹೇಳಲಿಕ್ಕೆ ಇಷ್ಟಪಡಲ್ಲ. ಮುಖ್ಯವಾಗಿ ಮೂ... ವಿಷಯಗಳನ್ನು ಹೇಳಲು ಇಷ್ಟಪಡುತ್ತೀನಿ:

ಮೊದಲನೆಯದಾಗಿ, ಕಳೆದ ಒಂದೆರಡು ದಶಕಗಳಲ್ಲಿ ಹಲವಾರು ಧಾಮಿ... ಚಳುವಳಿಗಳು ನಮ್ಮ ನಡುವೆ ನಡೆದಿವೆ. ಜನಸಮೂಹದಲ್ಲಿ ಶ್ರದ್ಧೆಗೆ ಹೆಚ್ಚು ಪ್ರಾಮುಖ... ಇದೆ. ಇಂತಹ ಸಂದರ್ಭದಲ್ಲಿ ಧರ್ಮವನ್ನು ಕುರಿತ ವಿಶ್ಲೇಷಣೆ ಬೇರೆಯೇ ಆಗಿರಬೇ... ಇಷ್ಟು ದಿನ ಸಂವಿಧಾನ ಸಾರ್ವಜನಿಕ ಬದುಕಿಗೆ, ಧರ್ಮ ಖಾಸಗಿ ಬದುಕಿಗೆ ಅ... ನಾವೇನು ಹೇಳಿಕೊಂಡು ಬರುತ್ತಿದ್ದೇವಿ, ಆ ವರ್ಗೀಕರಣ ಇನ್ನುಮುಂದೆ ಹೆಚ್ಚು ಸಂ... ಅಂತ ನನಗೆ ಅನ್ನಿಸಲ್ಲ.

ಎರಡನೆಯದಾಗಿ, ಧರ್ಮ ಮತ್ತು ಸಂಸ್ಕೃತಿಯನ್ನು ಬೇರ್ಪಡಿಸಕ್ಕಾಗಲ್ಲ. ಅವೆರ... ಒಟ್ಟಿಗೆ ಇರುವಂಥವು. ಆದ್ದರಿಂದ ಧರ್ಮವನ್ನು ಹೆಚ್ಚು ವಿಶಾಲವಾಗಿ ವ್ಯಾಖ್ಯಾನಿಸಬೆ... ಮತ್ತು ಧರ್ಮದೊಂದಿಗೆ ಹೇಗೆ ಅನುಸಂಧಾನ ನಡೆಸಬೇಕು ಎಂಬುದರ ಚರ್ಚೆ ಅಗತ್ಯ...

ಮೂರನೆಯದಾಗಿ, ಧರ್ಮವನ್ನು ಬಳಸಿ ಶೋಷಣೆ ಮಾಡುತ್ತಿದ್ದಾರೆ, ಅ... ಹೇಳಲಾಗುತ್ತಿದೆ. ಈ ಸಾಧನ ತರ್ಕವನ್ನು ಸರಳೀಕರಿಸದೆ ಹೆಚ್ಚು ಆಳವಾಗಿ ಚರ್ಚಿಸಬೇಕ...

**ವಸ್ತ್ರಸಂಹಿತೆಯನ್ನು ಕುರಿತ ಈ ಚರ್ಚೆಗೆಂದು ನಾವು ಯಾವುದೇ ರೀತಿಯ ಸಂಹಿತೆಯನ್ನು ನಮ್ಮ ಮುಂದೆ ಇಟ್ಟುಕೊಂಡು ಈ ಸಂವಾದವನ್ನು ಏರ್ಪಡಿಸಿರಲಿಲ್ಲ. ನಮ್ಮ ನಡುವೆ ಪ್ರಚಲಿತವಿದ್ದ ಘಟನೆಯನ್ನು ಕಾರಣವಾಗಿರಿಸಿಕೊಂಡು ಇಂದಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಬಿಕ್ಕಟ್ಟನ್ನು, ಅದರ ವಿವಿಧ ಆಯಾಮಗಳನ್ನು ಕುರಿತು ವಿಶ್ಲೇಷಿಸುವುದು ಈ ಸಂವಾದದ ಮುಖ್ಯ ಆಶಯವಾಗಿತ್ತು. ಇದು ಕೇವಲ ಧಾರ್ಮಿಕ ಚರ್ಚೆ ಮಾತ್ರ ಅಲ್ಲ, ಜೆಂಡರ್ ಪ್ರಶ್ನೆಯೂ ಆಗಿದೆಯೆಂಬುದರತ್ತ ಇಲ್ಲಿನ ಚರ್ಚೆ ಬೆಳಕು ಹರಿಸಿದೆ. ಧರ್ಮವನ್ನು ಲಿಂಗದ ನೆಲೆಯಿಂದ ನೋಡಬೇಕಾದ ಅಗತ್ಯವನ್ನು ಈ ಚರ್ಚೆ ದೃಢಪಡಿಸಿದೆ.**

ಡಾ॥ ಎನ್. ಗಾಯತ್ರಿ
ನಂ. ೨೦೧, ಸ್ಕೈಲೈನ್ ಗೋಲ್ಡನ್ ರೇಸ್, ಚಿತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವಿಪುರಂ, ಬೆಂಗಳೂರು - ೫೬೦ ೦೧೯


ವಿಮಲಾ, ಜಿ. ಆರ್.
ಸುಧಾ ಸೀತಾರಾಮನ್, ಎನ್ ಗಾಯತ್ರಿ

# ಲಿಬರ್ಹಾನ್ ವರದಿಯ ಹಿನ್ನೆಲೆಯಲ್ಲಿ...



ಆಂಗ್ಲ ಮೂಲ : ತನು ಮೆಹ್ತಾ ತಿವಾರಿ

ಕನ್ನಡಕ್ಕೆ : ಜಿ. ಆರ್.

ನಾನೊಬ್ಬ 'ಮುಸಲ್ಮಾನ'ರ ನಾಯಕಿಯಾಗಿದ್ದರೆ...

ನಾನು ಹೇಳುತ್ತಿದ್ದೆ, ಬಾಬ್ರಿ ಮಸೀದಿಯನ್ನು ಮರೆ ಎಂದು. ನಾನು ಹೇಳುತ್ತಿದ್ದೆ, ಇಗೋ ಲ್ಲಿದ್ದೇನೆ, ಬಾಬ್ರಿ ಮಸೀದಿಯೆಂಬ ಜೀರ್ಣವಾದ ಿದ ಒಡತಿ ನಾನು. ಅದೇನು ಅಸಾಮಾನ್ಯ ಪ್ರಶ್ನೆಯೋ , ಆ ಮಸೀದಿ, ಜನರಿಗೆ. ಆಯಿತು ಬಿಡಿ, ಈಗ ನ್ನು ಮಾರಲಿದ್ದೇನೆ – ಹರಾಜು ಕೂಗಿ, ಮತ್ತೆ. ್ಂನಲ್ಲಿ ಮಸೀದಿಯೆಂದರೆ ಜನರೆಲ್ಲಾ ಒಂದೆಡೆ ಪ್ರಾರ್ಥನೆ ಸಲ್ಲಿಸುವ ಜಾಗ. ನಮಗೆ ಪವಿತ್ರ ವ ಜಾಗಗಳೇ ಬೇಕೆಂದಿಲ್ಲ, ಗರ್ಭಗುಡಿಗಳಿಲ್ಲ, ೀದಿ ಜಾಗ ಅಥವಾ ಪರಿಸರಕ್ಕೆ ವಿಶೇಷ ಮಹತ್ವ ೂ ಇಲ್ಲ. ಮಹತ್ವವಿರುವುದು ಪ್ರಾರ್ಥನೆಗಷ್ಟೇ. ಡಿ, ಈ ಮಸೀದಿ ಅಮೋಘವಾದ ಜಾಗದಲ್ಲಿದೆ ಬ ಕಾರಣಕ್ಕೆ ನೀವದರ ಮೋಹಕ್ಕೆ ಸಿಲುಕಿದ್ದರೆ, ್ಕೆ ಒಳ್ಳೆಯ ಬೆಲೆ ನೀಡಲು ನೀವು ಸಿದ್ಧವಿದ್ದರೆ, , ಅದನ್ನು ತೆಗೆದುಕೊಳ್ಳಿ. ಅದೇನು ಬೇಕೋ ನ್ನು ಕಟ್ಟಿಕೊಳ್ಳಿ. ಒಂದೇ ಷರತ್ತು, ಅದಕ್ಕೆ ತಕ್ಕುದಾದ ೊಡಿ. ಏನೇ ಇರಲಿ, ಈಗ ಅದಿರುವ ಸ್ಥಿತಿಯಲ್ಲಿ ನನಗೆ ಮತ್ತು ನನ್ನವರಿಗೆ ಅದು ಕೆಲಸಕ್ಕೆ ಬಾರದ ವಸ್ತು.

ನಾನು ಈ ಹಣ ಬಳಸಿಕೊಳ್ಳುವೆ. ...(ಹ್ಲಾ, ಎಷ್ಟಿರ ಬಹುದೆನ್ನುತ್ತೀರಿ ? ಐವತ್ತು ಕೋಟಿ ಏನ್ನೋಣವೆ ?) ಇದರಿಂದ ಅಯೋಧ್ಯೆಯಲ್ಲಿ ಇನ್ನೆರಡು ಮಸೀದಿ ಕಟ್ಟಿಸುವೆ. (ಹ್ಲೂ, ಒಂದು ಹೋಯಿತು, ಎರಡು ಬಂತು ಎನ್ನುವ ಲೆಕ್ಕಾಚಾರ). ಇನ್ನುಳಿದ ಹಣವನ್ನು ಏನು ಮಾಡಲಿ ? ಈ ಮುಸಲ್ಮಾನ ಮಕ್ಕಳಿದ್ದಾರಲ್ಲ, ಅವರಿಗೊಂದು ಉದ್ಯೋಗ ತರಬೇತಿ ಶಾಲೆ ತೆರೆದು ಬಿಟ್ಟರೆ ಹೇಗೆ ? ಅದೂ ಒಳ್ಳೆಯ ನುರಿತವರ ಮಾರ್ಗ ದರ್ಶನದಲ್ಲಿ. ನನ್ನ ಮುಂದಿನ ತಲೆಮಾರಿನವರು ಹೀಗಾದರೂ ಒಂದಷ್ಟು ಉದ್ಯೋಗಗಳಿಗೆ ಸಾಮರ್ಥ್ಯ, ಅರ್ಹತೆ ಪಡೆಯಲಿ. ಏನನ್ನುತ್ತೀರಿ ? ಅದೇನೋ ಮುಖ್ಯ ಪ್ರವಾಹ ಅನ್ನುತ್ತಾರಲ್ಲ, ಅದರಲ್ಲಿ ಇವರೂ ಈಜಲಿ. ವೃತ್ತಿಪರತೆ ಎನ್ನುತ್ತಾರಲ್ಲ, ಅದು ಇವರಲ್ಲೂ ಶೋಭಿಸಲಿ. ಇನ್ನೊಂದಷ್ಟು ಹಣವನ್ನು ಮುಸಲ್ಮಾನ ಮಹಿಳೆಯರಿಗಾಗಿ ಒಂದು ಆರೋಗ್ಯ ಕೇಂದ್ರ ಸ್ಥಾಪಿಸಲು ಬಳಸಿದರೆ ಹೇಗೆ ? ಅದೂ ಸರಿ ಅಲ್ಲವೆ ? ಅದಾಗಿಯೂ ಇನ್ನೂ ಸ್ವಲ್ಪ ಹಣವಿರುತ್ತದಲ್ಲ ಏನು ಮಾಡುವುದು. ಒಂದಷ್ಟು ವೃದ್ಧರನ್ನು ಹಾಜ್ ಯಾತ್ರೆಗೆ ಕಳಿಸಿಬಿಡಲೆ ? ಪಾಪ, ಜೀವನವಿಡೀ ಬಡತನದಲ್ಲಿ ಬೆಂದು ಹಾಜ್‌ಗೆ ಇನ್ನೆಲ್ಲಿ ಹೋಗಲು ಸಾಧ್ಯವಿತ್ತು ಅವರಿಗೆ ! ಅವರಿಗದೆಷ್ಟು ಖುಷಿಯಾದೀತು... ಸುಮ್ಮನೆ ಈ ಭೂಮಿ ಆಸ್ತಿಯನ್ನು ಹೊಂದಿರುವುದಕ್ಕಿಂತ ಶ್ರದ್ಧಾಳು ಗಳಿಗೆ ಹಾಜ್ ಯಾತ್ರೆ ಉತ್ತಮವೆನಿಸುವುದು ಖಂಡಿತ.

ಅಂದರೆ, ಅಂಥ ಸನ್ನಿವೇಶದಲ್ಲಿ ನನಗೆ ಕೇವಲ ಗೆಲುವು; ಸೋಲಿನ ಸುಳಿವೇ ಇಲ್ಲ. ಇಸ್ಲಾಂಗೂ ಶೋಭೆ ತಂದಂತಾಯಿತು, ಶಾಂತಿ ಸ್ಥಾಪನೆಯಾಯಿತು : ಇಸ್ಲಾಂಗೆ ಹಾಗೂ ದೇಶಕ್ಕೆ. ಓಹ್, ಇನ್ನೇನು ಬೇಕು ! ಸ್ವಲ್ಪ ಹೊಂದಾಣಿಕೆಯ ಮನೋಭಾವದಿಂದ ಅದೆಷ್ಟು ರಂಜನೀಯವಾದ ಬಾಂಧವ್ಯ... ಇಸ್ಲಾಂ ಅನುಯಾಯಿ ಗಳಿಗೆ ಅದಕ್ಕಿಂತ ಬೇರೇನು ಬೇಕು ! ಒಂದೇ ಏಟಿಗೆ ಏನಿಲ್ಲಾ ಸಾಧನೆ : ಮನಸ್ತಾಪದ ಅಂತ್ಯ, ಬಿಕ್ಕಟ್ಟಿಲ್ಲ. ಇಷ್ಟು ದಿನ ಕತ್ತರಿಗೆ ಸಿಕ್ಕಿಕೊಂಡು ಮುದುಡಿಹೋಗಿದ್ದೆ. ಸದಾ ಜಗಳ, ಜಂಜಾಟ. ರಕ್ಷಿಸಿಕೊಳ್ಳುವುದಷ್ಟೇ ಆಶಯವಾಗಿತ್ತು. ಸದ್ಯ ಮುಗಿಯಿತಲ್ಲ... ಸಮಾಜ, ದೇಶ ಎರಡೂ ಸುಭದ್ರ. ಇನ್ನೂ ಹಾಗೇ ಮುಂದಕ್ಕೆ ಕ್ರಮಿಸುವೆ. ಯಾರೋ ಹೇಳಿದರಲ್ಲಾ, ಇಂದಿನ ಕಾಲದಲ್ಲಿ ಬೇಕಾದ್ದು ಪ್ರಾಯೋಗಿಕವಾಗಿ ನಾಯಕತ್ವ ಎಂದು. ಸರಿ, ಅದನ್ನೇ ಕಂಡುಕೊಳ್ಳೋಣಂತೆ, ಏನೀಗ...

ಅಲ್ಲಾಹು ಅಕ್ಬರ್... ಜೈಹಿಂದ್.



**ಎಂಥಾ** ತೀರ್ಮಾನ ಇದು. ಇಷ್ಟು ದಿನ ಬೇಕಾಯಿತಲ್ಲ ಅದನ್ನು ತಿಳಿಯಲು. ಧ್ವಂಸ, ಧ್ವಂಸ, ಧ್ವಂಸಗಳ ಸರಣಿ. ಎಲ್ಲಾ ಹೇಗೆ ಕಮರಿಹೋಯಿತು ನೋಡಿ ಇದೊಂದು ಸುಲಭ ತೀರ್ಮಾನದಿಂದ. ಅದೇನೇನು ನಡೆದುಹೋಯಿತು ಇಷ್ಟು ದಿನ ಆ ಮಸೀದಿಯೊಂದರ ಧ್ವಂಸದ ತರುವಾಯದಲ್ಲಿ! ಮಸೀದಿ ಹೋಯಿತು, ಬೊಂಬಾಯಿಗೆ ಬೆಂಕಿ ಬಿತ್ತು, ಆಮೇಲೆ ರಣಹೋಮ, ನಂತರ ಇನ್ನಷ್ಟು ಹಿಂಸೆ, ಕೊಲೆ, ಇನ್ನಷ್ಟು... ಇನ್ನಷ್ಟು... ಇದಕ್ಕೆ ಕೊನೆಯೇ ಇಲ್ಲವೇನೋ ಎನಿಸಿತ್ತು. ಸುಂದರ ಅಪ್ರತಿಮ ರಾಮ ಮಂದಿರ ಬೇಕೆಂದಾಗ ಅದನ್ನು ರಕ್ತ-ಮೂಳೆಗಳ ಮೇಲೆ ನಿರ್ಮಿಸುವುದೇ ? ಅದೂ ಯಾರ ರಕ್ತ ಮತ್ತು ಮೂಳೆ ? ನಮ್ಮದು, ನಮ್ಮವರದು, ನಮ್ಮ ದೇಶದವರದು.

ನಾನೊಬ್ಬ 'ಹಿಂದು' ನಾಯಕಿಯಾಗಿದ್ದಿದ್ದರೆ...

ಸದ್ಯ, ಆ ಬಾಬ್ರಿ ಮಸೀದಿಯನ್ನು ಮರೆತು ನಿಸೂರಾಗಿರುತ್ತಿದ್ದೆ. ರಾಮನ ಅರಮನೆಯ ಮೇಲೆ ಬಾಬರ್ ಮಸೀದಿ ಕಟ್ಟಿದ್ದನೆ ? ಹೋಗಲಿ, ನನಗೇನಂತೆ ! ನನ್ನ ವೇದಾಂತವೇ ಹೇಳುತ್ತದೆ, ಯಾವುದೂ ನಾಶ ಹೊಂದುವುದಿಲ್ಲವೆಂದು, ಇನ್ನೇನು ಬೇಕು. ನನ್ನ ಭಗವದ್ಗೀತೆಯೇ ಹೇಳಿದ್ದು, ಎಲ್ಲವನ್ನೂ ಕರ್ಮದಿಂದ ಅಳೆಯಲಾಗುತ್ತದೆಯೆಂದು ? ಹೌದು, ಅಲ್ಲೇ ಹೇಳಿದ್ದು ಮಾನವನ ಆತ್ಮ ಅಮರವಾದ್ದು ಎಂದು. ಅದನ್ನುಳಿದು ಮಿಕ್ಕೆಲ್ಲಾ ಬೊಗಳೆಯಂತೆ, ಅಲ್ಲವೆ ? ನಮ್ಮ ಬಂಧು ಬುದ್ಧ ಹೇಳಿದ್ದನಂತೆ, ಪ್ರಪಂಚವೆಲ್ಲಾ ಮಾಯೆ, ಕ್ಷಣಿಕ, ಎಂದು; ಹೌದೆ ? 'ಅಹಂ' ಎಂಬುದಿದೆಯಂತೆ, ನಮ್ಮ ಆಸೆಗಳೊಡನೆ ಸೇರಿ ಅದು ಪ್ರಪಂಚದಲ್ಲಿ ದುಃಖ ತರುತ್ತದಂತೆ. ಭೌತ ಸಂಪತ್ತಿಗೆ ಮಾರುಹೋಗ ಬಾರದೆಂದೂ ಹೇಳಿದ್ದಾರಂತೆ, ನಿಜವೆ ? ಇಷ್ಟೆಲ್ಲಾ ಜ್ಞಾನ ಭಂಡಾರ ನನ್ನಲ್ಲಿರುವಾಗ ಆ ಯಃಕಶ್ಚಿತ್ ಜಾಗದಲ್ಲಿ ಅರಮನೆಯಿದ್ದರೇನು, ದೇವರ ಮನೆ ಇದ್ದರೇನು ನನಗೆ ! ಅಯ್ಯೋ ರಾಮ, ಇನ್ನು ರಾಮ ಉಳಿದಿಲ್ಲವಲ್ಲ! ಬಾಬರನಂತೂ ಇಲ್ಲವೇ ಇಲ್ಲ: ಅವನೇ ಅಂತೆ ರಾಮನ ಅರಮನೆ ಉರುಳಿಸಿ ಆಮೇಲೆ ಇಲ್ಲವಾದವನು. ಯಾರು ಹೇಳಿದ್ದು ರಾಮನಿಲ್ಲ ಎಂದು ? ಇಲ್ಲೇ ಇದ್ದಾನೆ, ನನ್ನ ಹೃದಯದಲ್ಲಿ – ಜೀವಂತವಾಗಿ. ಬಾಬರ್ ಹಾಗೆ ಇದ್ದಾನೇನು ? ಅಷ್ಟೇ ಸಾಕು ನನಗೆ, ನನ್ನ ಶ್ರದ್ಧೆ ಉಳಿಸಿಕೊಳ್ಳಲು.

ಅದಕ್ಕೇ ನಾನು ಹೇಳೋದು : ಬಾಬ್ರಿ ಮಸೀದಿ ಕತೆ ನಮಗೇಕೆ, ಅದನ್ನು ಬಿಸುಡಿ, ಎಂದು. ಬೇರೊಂದು ಪ್ರಶಸ್ತವಾದ ಜಾಗಕ್ಕೆ ಹೋಗೋಣ ನಡೆಯಿರಿ, ಅಲ್ಲಿ ಹೊಸ ದೇಗುಲ ಕಟ್ಟೋಣವಂತೆ. ಅದೂ ಹೇಗಿರಬೇಕು ಗೊತ್ತೆ? ಅದ್ಭುತ, ಅಪಾರ, ಇಡೀ ರಾಮಾಯಣವೇ ಕಲ್ಲಿನ ಚಿತ್ರಗಳಲ್ಲಿ ಜೀವ ತಳೆಯಬೇಕು. ಶಿಲ್ಪವೇ, ಕಲೆಯೇ, ಎಲ್ಲದರಲ್ಲೂ ಅದೇ ಚಿತ್ರಿತವಾಗಬೇಕು ಬಿಡಿ. ಅಲ್ಲೆಲ್ಲೋ ಅಂಕೋರ್ ವಾಟ್ ಇದೆಯಂತಲ್ಲಾ, ಅತ್ಯದ್ಭುತವಾದ್ದು, ಅದನ್ನು ಮೀರುವಂಥದನ್ನು ಕಟ್ಟೋಣ ಬನ್ನಿ. ಅದನ್ನು ಬೇಕಾದರೆ ನಮ್ಮ ಕಾಲದ ತಾಜಮಹಲ್ ಎನ್ನಲಿ ಬಿಡಿ. ಪ್ರವಾಸಿಗರು ಎಲ್ಲೋ ಹೋಗುವ ಬದಲು ಇಲ್ಲಿಗೆ ಬರುವಂತಾಗಬೇಕು, ಆಗ ನೋಡಿ ಗಮ್ಮತ್ತು. ಯಾವ ಭೂಕಂಪವೂ ಇಲ್ಲ, ಬಾಂಬೂ ಇಲ್ಲ, ಗೀತೆ ಹೇಳುತ್ತದಲ್ಲ, 'ಇದನ್ನು ಶಸ್ತ್ರಗಳು ತುಂಡರಿಸಲಾರವು, ಬೆಂಕಿಯು ಸುಡಲಾರದು,' ಹಾಗಿರಬೇಕು. ಯಾವ ತಂತ್ರಜ್ಞಾನ ಬೇಕು ನಿಮಗೆ ? ಅತ್ಯಾಧುನಿಕವೇ ? ಹಾಗೇ ಆಗಲಿ. ಅತಿ ಪ್ರಾಚೀನವೇ ? ಆಯಿತು, ಹಾಗೇ ಆಗಲಿ. ಬೇಕಾದ್ದು ಶ್ರದ್ಧೆಯಲ್ಲವೆ ಅತಿ ಮುಖ್ಯವಾಗಿ ? ಪ್ರಾಚೀನ ಜ್ಞಾನದ ಮತ್ತು ಆಧುನಿಕ ಪ್ರಗತಿಯ ಅಮೋಘ ಸಂಕೇತವೆಂದರೆ ಹಾಗಿರಬೇಕು. ಆ ಜುಜುಬಿ ಬಾಬ್ರಿ ಮಸೀದಿಯ ಚಿಕ್ಕ ಜಾಗದಲ್ಲಿ ಇಂಥ ಅದ್ಭುತದ ನಿರ್ಮಾಣ ಸಾಧ್ಯವೇ, ಸಾಧುವೇ ? ಬಿಡಿ, ಆ ಬಾಬ್ರಿ ಮಸೀದಿ ಪ್ರಶ್ನೆ ಬಿಡಿ, ಏಕದರ ಮಾತು !

ಎಂಥಾ ತೀರ್ಮಾನ ಇದು. ಇಷ್ಟು ದಿನ ಬೇಕಾಯಿತಲ್ಲ ಅದನ್ನು ತಿಳಿಯಲು. ಧ್ವಂಸ, ಧ್ವಂಸ, ಧ್ವಂಸಗಳ ಸರಣಿ. ಎಲ್ಲಾ ಹೇಗೆ ಕಮರಿಹೋಯಿತು ನೋಡಿ ಇದೊಂದು ಸುಲಭ ತೀರ್ಮಾನದಿಂದ. ಅದೇನೇನು ನಡೆದು ಹೋಯಿತು ಇಷ್ಟು ದಿನ ಆ ಮಸೀದಿಯೊಂದರ ಧ್ವಂಸದ ತರುವಾಯದಲ್ಲಿ! ಮಸೀದಿ ಹೋಯಿತು, ಬೊಂಬಾಯಿಗೆ ಬೆಂಕಿ ಬಿತ್ತು, ಆಮೇಲೆ ರಣಹೋಮ, ನಂತರ ಇನ್ನಷ್ಟು ಹಿಂಸೆ, ಕೊಲೆ, ಇನ್ನಷ್ಟು... ಇನ್ನಷ್ಟು... ಇದಕ್ಕೆ ಕೊನೆಯೇ ಇಲ್ಲವೇನೋ ಎನಿಸಿತ್ತು. ಸುಂದರ ಅಪ್ರತಿಮ ರಾಮ ಮಂದಿರ ಬೇಕೆಂದಾಗ ಅದನ್ನು ರಕ್ತ-ಮೂಳೆಗಳ ಮೇಲೆ ನಿರ್ಮಿಸುವುದೇ ? ಅದೂ ಯಾರ ರಕ್ತ ಮತ್ತು ಮೂಳೆ ? ನಮ್ಮದು, ನಮ್ಮವರದು, ನಮ್ಮ ದೇಶದವ[ರದು ...] ಉಂಟೆ ? ನನ್ನ ರಾಮ ಮಂದಿರ ಒಳಿತಿನ ಮಂದಿರ[, ...] ಭಾವದ ಮಂದಿರ. ಅದನ್ನು ದ್ವೇಷದ ಮಡು[...] ನಿಲ್ಲಿಸುವುದೆ ! ನನ್ನ ಮಂದಿರಕ್ಕೆ ಸಹಸ್ರ [...] ಹರ್ಷೋತ್ಸಾಹಗಳಿಂದ ಬರಬೇಕು, ಅಂಜಿ-ಹೆ[...] ಅಯ್ಯಪ್ಪಾ, ಎಂದು ಬರಬಾರದು – ಅಂತರ್ಯ[...] ಕೂಸಾಗಬೇಕೆ ನನ್ನ ಮಂದಿರ ! ನನ್ನ ಧ[ರ್ಮ...] ಲಕ್ಷಣವನ್ನು ಏನೆಂದು ಹೇಳಿದ್ದಾರೆ ಗೊತ್ತೆ? [...] ಮಂತ್ರದ ಪಠಣದ ತಾಣ, ಎಂದು. ಜೀವಿಸು ಎ[ಂದು ...] ಜೀವಿಸಲು ಬಿಡು, ಎಂದು. ಈ ಭಾವನೆ ಜೀವಂ[ತ...] ಎಂದಾದರೆ ಮಂದಿರ ಹೇಗೆ ಜೀವಂತವಾಗು[...] ಖಂಡ-ತುಂಡವಾದ ಮೂರ್ತಿಯ ಮುಂದೆ ನನಗ[...] ಕೆಲಸ. ವಜ್ರವನ್ನೇ ಜಜ್ಜಿ ಯಾವ ಮಣಿ ಧರಿಸಿದರೇ[...] ಅದಲ್ಲ ನನ್ನ ಮಂದಿರ, ನನ್ನ ಹೃದಯ ಮಂದಿರ. ಅ[...] ರಾಮ ಸಿಂಹಾಸನವನ್ನೇ ತೊರೆದ ದಯಾ[...] ಕುಟುಂಬದ ಶಾಂತಿ ಅವನಿಗಷ್ಟು ಪಾವನ ಎನಿ[...] ಅವನಿಗೆ ಕುಟುಂಬವಾದರೆ, ನನಗೆ ಇಡೀ ಸಮ[...] ಪಾವನ. ಅದಕ್ಕೇ ನಾನು ಹೇಳಿದ್ದು, ಆ ಬ[ಾಬ್ರಿ] ಮಸೀದಿಯ ಸೀಮಿತ ಭೂಮಿಯಲ್ಲಿ ನನ್ನ ರಾಮ[...] ಮಂದಿರ ಬೇಡ, ಎಂದು. ರಾಮನಿಗೆ ಶ[...] ಬೇಕಾಗಿತ್ತು, ನನ್ನ ದೇಶಕ್ಕೆ ಬೇಡವೆ ?

ಜೈ ಹಿಂದ್ .... ಜೈ ರಾಮ್.

ಆದರೇನು ಮಾಡುವುದು ! ನನ್ನ ದುರ[...] ನೋಡಿ, ನಾನು ಮುಸಲ್ಮಾನ ನಾಯಕಿಯೂ ಅ[ಲ್ಲ,] ಹಿಂದೂ ನಾಯಕಿಯೂ ಅಲ್ಲ. ಹಾಗಾದರೆ ನ[...] ಪ್ರಸ್ತುತಳೇ ಅಲ್ಲವೆಂದೆ ? ನಾನು ಲೆಕ್ಕಕ್ಕಿಲ್ಲವೇ ?

ಆಂಗ್ಲ ಮೂಲ : ತನು ಮೆಹ್ತಾ ತಿವಾರಿ
ಕನ್ನಡಕ್ಕೆ : ಜಿ. ಆರ್., ಬೆಂಗಳೂರು.

# ನಿನ್ನ ನನ್ನ ಬೆನ್ನ ಹಿಂದೆ

ನಿನ್ನ ನನ್ನ ಬೆನ್ನ ಹಿಂದೆ
ಸಹ್ಯಾದ್ರಿಯ ಸಾಲಿದೆ
ಬೆಟ್ಟ ಕಣಿವೆ ತಪ್ಪಲಿದೆ
ಕಾಡ ಬಸಿರು ಸೊರಗಿದೆ
ಜಲಧಾರೆಯ ತೊಟ್ಟಿಲಿದೆ
ಒಸರಿಲ್ಲದೆ ಒಣಗಿದೆ

ನಿನ್ನ ನನ್ನ ಬೆನ್ನ ಹಿಂದೆ
ಪಂಚವಟಿಯ ಕಾಡಿದೆ
ಮೃಗ ಮಾಯೆಯ ಜಾಲವಿದೆ
ಕಳೆದ ಕಥೆಯ ವ್ಯಥೆಯಿದೆ
ಕಾಡಿನಿಂದ ನಾಡಿಗಿದೇ
ಅಪಹರಣವೆ ನಡೆದಿದೆ

ನಿನ್ನ ನನ್ನ ಬೆನ್ನ ಹಿಂದೆ
ಗೋವರ್ಧನ ಗಿರಿಯಿದೆ
ಶಂಖ ಚಕ್ರ ಗದಾ ಪದ್ಮ
ಕೋದಂಡವೆ ಇಲ್ಲಿದೆ
ಎಲ್ಲ ಇದ್ದು ಏನಿದೆ
ಬರಿದೆ ಗುಲ್ಲು ನೋವಿದೆ.

ಜಿ. ಎಸ್. ಉಬರಡ್ಕ, ...



# ಬಗೆಹರಿಯದ ಸಮಸ್ಯೆಗಳ ಆಗರ

ನಾವೀಗ ಇಪ್ಪತ್ತೊಂದನೇ ಶತಮಾನದ ಎರಡನೇ ದಶಕದ ಹೊಸ್ತಿಲಲ್ಲಿದ್ದೇವೆ. ಕಳೆದ ಒಂದು ದಶಕದಲ್ಲಿನ ಅಂತರರಾಷ್ಟ್ರೀಯ ವಿದ್ಯಮಾನಗಳು ಸಾಮ್ರಾಜ್ಯಶಾಹಿ ಶಕ್ತಿಗಳ ದುರಾಕ್ರಮಣಕಾರಿ ಪ್ರವೃತ್ತಿಯನ್ನು ಸ್ಪಷ್ಟವಾಗಿ ಜಾಹೀರುಗೊಳಿಸಿವೆ. ಅದೇ ಸಮಯದಲ್ಲಿ ಸಾಮ್ರಾಜ್ಯಶಾಹಿ ಶಕ್ತಿಗಳ ದೌರ್ಬಲ್ಯವನ್ನು, ಹತಾಶೆಯನ್ನು ಹೊರಗೆಡಹಿವೆ. ಶತಮಾನದ ಪ್ರಾರಂಭದಲ್ಲೇ ಕಾಣಿಸಿಕೊಂಡ ಆರ್ಥಿಕ ಮುಗ್ಗಟ್ಟು ದಶಕದ ಅಂತ್ಯದ ವೇಳೆಗೆ ಆರ್ಥಿಕ ಕುಸಿತವಾಗಿ ಬೆಳೆದು ಬಂಡವಾಳಶಾಹಿ ಜಗತ್ತನ್ನೇ ಆತಂಕಕ್ಕೀಡುಮಾಡಿತು. ಭಯೋತ್ಪಾದನೆಯ ವಿರುದ್ಧವಾಗಿ ಸಮರ ಸಾರಿದ, ಅಧಿನಾಯಕತ್ವದ ಬಯಕೆಯ ಮೆರಿಕಾ ಎರಡು ದೇಶಗಳ ಮೇಲೆ (ಆಫ್ಘಾನಿಸ್ತಾನ ಮತ್ತು ಇರಾಕ್) ದುರಾಕ್ರಮಣ ನಡೆಸಿ ತನ್ನ ವಶದಲ್ಲಿರಿಸಿಕೊಂಡಿದೆ. 'ಭಯೋತ್ಪಾದನೆಯ ವಿರುದ್ಧ ಮರ' ಎನ್ನುವುದು ಮುಗಿಯದ ಯುದ್ಧವಾಗಿ ಪರಿಣಮಿಸಿದೆ. ಮಹಾಯುದ್ಧದ ಸೂಚನೆಗಳೇನೂ ಇಲ್ಲದಿದ್ದರೂ, ಮತ್ತೊಂದು ಆಕ್ರಮಣಕಾರಿ ಯುದ್ಧದ ಇರಾನ್) ಸಂಭವ ಕಾಣುತ್ತಿದೆ. ಇದರ ಪರಿಣಾಮ ವಿಪರೀತವಾದೀತು ಜಗತ್ತಿಗೆ. ಭಯೋತ್ಪಾದನೆಯ ಭೀತಿಯ ವಾತಾವರಣದಲ್ಲಿ ಜೀವಿಸುತ್ತಿರುವ ಈ ಪಂಚದಲ್ಲಿ ಪರಮಾಣು ಅಸ್ತ್ರ ಭಯೋತ್ಪಾದಕರ ಹಸ್ತಗತವಾಗುವ ಭಯ ಹೆಚ್ಚಾಗಿದೆ. ಸ್ವತಂತ್ರ ರಾಷ್ಟ್ರಗಳು ಸಾಮ್ರಾಜ್ಯವಾದಿ ಶ್ರೀಮಂತ ರಾಷ್ಟ್ರಗಳ ತ್ತಡಗಳನ್ನು ಎದುರಿಸುತ್ತಿವೆ, ಪ್ರತಿಭಟಿಸುತ್ತಿವೆ. ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಗೆ ಪರ್ಯಾಯದ ಹುಡುಕಾಟ ಮುಂದುವರಿದಿದೆ.

## ಕಳೆದ ಶತಮಾನದ ಹಿನ್ನೋಟ

**ನೂ**ರು ವರ್ಷಗಳ ಹಿಂದೆ, ಎಂದರೆ ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಚದಲ್ಲಿ ಪರಿಸ್ಥಿತಿ ಹೇಗಿತ್ತು ಎನ್ನುವುದನ್ನು ನೋಡೋಣ. ಪಾಶ್ಚಾತ್ಯ ಸಾಮ್ರಾಜ್ಯ ಳು ಅತ್ಯಂತ ಪ್ರಬಲವಾಗಿದ್ದು ಜಗತ್ತಿನ ಬಹುಭಾಗವನ್ನು ಆಕ್ರಮಿಸಿಕೊಂಡು, ವಸಾಹತುಗಳನ್ನಾಗಿ ಮಾಡಿಕೊಂಡು, ಆಕ್ರಮಿತ ನಾಡುಗಳ ಜನರನ್ನು, ಅಲ್ಲಿನ ಕ ಸಂಪತ್ತನ್ನು ಸೂರೆ ಮಾಡುತ್ತಿದ್ದ ಕಾಲ ಅದಾಗಿತ್ತು. ವಸಾಹತುಶಾಹಿ ವಿಜೃಂಭಿಸುತ್ತಿದ್ದ ಾಗಿತ್ತು. ಮಾರುಕಟ್ಟೆಯ ಸ್ವಾಮ್ಯಕ್ಕಾಗಿ ಸಾಮ್ರಾಜ್ಯಶಾಹಿಗಳ ನಡುವೆ ಪೈಪೋಟಿ ಾಗಿತ್ತು. ಔದ್ಯೋಗಿಕವಾಗಿ ಮುಂದುವರಿದ ರಾಷ್ಟ್ರಗಳಿಗೆ, ಹೊಸ ಯಂತ್ರೋಪ ಗಳ ಆವಿಷ್ಕಾರದೊಂದಿಗೆ ಉತ್ಪಾದನೆ ಹೆಚ್ಚಾದಂತೆ ಮಾರುಕಟ್ಟೆಯ ವಿಸ್ತರಣೆ ರ್ಯವಾಯಿತು. ಅಧಿಕ ಉತ್ಪಾದನೆಯ ಹೊರೆಯಿಂದಾಗಿ, ಆರ್ಥಿಕ ಮುಗ್ಗಟ್ಟಿನ ದಿಂದಾಗಿ ಪರಸ್ಪರ ಘರ್ಷಣೆಯ ಸೂಚನೆ ಎದ್ದು ಕಾಣುತ್ತಿತ್ತು. ಮಾರುಕಟ್ಟೆಯ ಕೆಗಾಗಿ ಪೈಪೋಟಿ ಇಪ್ಪತ್ತನೇ ಶತಮಾನದ ಎರಡನೇ ದಶಕದಲ್ಲಿ ಮಹಾಯುದ್ಧದಲ್ಲಿ ಸಾನಗೊಂಡಿತು. ಮೊದಲನೇ ಮಹಾಯುದ್ಧ (೧೯೧೪-೧೯೧೮) ಎಂದು ಸದಲ್ಲಿ ದಾಖಲಾಗಿರುವ ಈ ಸಂದರ್ಭದಲ್ಲಿ ರಷ್ಯಾದಲ್ಲಿ ಮಹಾಕ್ರಾಂತಿಯೊಂದು ಸಿತು. ಸಾಮ್ರಾಜ್ಯಶಾಹಿ ಕೊಂಡಿಯಿಂದ ಕಳಚಿಕೊಂಡ ರಷ್ಯಾ ಕ್ರಾಂತಿಯ ನಂತರ ದ ಸಮಾಜ ವ್ಯವಸ್ಥೆಯೊಂದರ ಸ್ಥಾಪನೆಗೆ ಮುಂದಾಯಿತು. ಐರೋಪ್ಯ ಾಯದಲ್ಲಿ ಹಿಂದುಳಿದಿದ್ದ ರಷ್ಯನ್ ಸಾಮ್ರಾಜ್ಯ ಎಲ್ಲರಿಗೂ ಸಮಾನಾವಕಾಶವುಳ್ಳ ಜವಾದಿ ಸಮಾಜ ವ್ಯವಸ್ಥೆಯ ಸ್ಥಾಪನೆಗೆ ಮುಂದಾಗಿ, ಸುಧಾರಣೆಗಳನ್ನು ಜಾರಿಗೆ ಔದ್ಯೋಗಿಕವಾಗಿ ಮುನ್ನಡೆಯತೊಡಗಿ ಬಂಡವಾಳಶಾಹಿ ರಾಷ್ಟ್ರಗಳ ಕೆಂಗಣ್ಣಿಗೆ ಾಯಿತು. ಯುದ್ಧಾನಂತರ ಬಂಡವಾಳ ಜಗತ್ತಿಗೆ ಬಂದ ಭಾರೀ ಕುತ್ತು ಮಹಾ ಕ ಕುಸಿತ. ಬಂಡವಾಳಶಾಹಿ ಜಗತ್ತಿನಲ್ಲಿನ ಈ ಪಿಡುಗಿನ ಕುರಿತು ಮಹಾನ್ ಚಿಂತಕ ಮಾರ್ಕ್ಸ್ ಮೊದಲೇ ಮುನ್ಸೂಚನೆ ನೀಡಿದ್ದರು. ಅವರ ಈ ಮುನ್ಸೂಚನೆ ಇಂದಿಗೂ ಎಂಬುದು ಬಂಡವಾಳಶಾಹಿ ಜಗತ್ತಿನ ಇಂದಿನ ವಿದ್ಯಮಾನಗಳಿಂದ ಗುರ್ತಿಸ ು. ಎಲ್ಲ ಯುದ್ಧಗಳನ್ನು ಕೊನೆಗಾಣಿಸುವ ಮಹಾಯುದ್ಧ ಎಂದು ಬಂಡವಾಳಶಾಹಿ ರುಗಳು ಬಣ್ಣಿಸುತ್ತ ಬಂದಿದ್ದ ಮೊದಲನೇ ಮಹಾಯುದ್ಧದ ಮುಕ್ತಾಯದಲ್ಲೆ ಂದು ಯುದ್ಧದ ಹೊಗೆಯಾಡುತ್ತಲೇ ಇತ್ತು. ಅದು ಇನ್ನೊಂದು ಭೀಕರ ಯುದ್ಧಕ್ಕೆ (೧೯೩೯-೧೯೪೫) ಎಡೆಕೊಟ್ಟಿತು. ಇದು ಈಗ ಇತಿಹಾಸ. ಆದರೆ ಈ ಯುದ್ಧದ ದೆಸೆಯಿಂದಾಗಿ ಪ್ರಪಂಚದಲ್ಲಿ ಆದ ಬದಲಾವಣೆಗಳು ಮಾತ್ರ ರವಾದುವು. ಅವು ಇಂದಿನ ಜಾಗತಿಕ ಪರಿಸ್ಥಿತಿಗೆ ಹೆಚ್ಚು ಪ್ರಸ್ತುತ.

## ಎರಡನೇ ಮಹಾಯುದ್ಧಾನಂತರ

**ಸಂ**ಕ್ಷೇಪವಾಗಿ ಹೇಳಬೇಕೆಂದರೆ, ಐರೋಪ್ಯ ಸಾಮ್ರಾಜ್ಯಶಾಹಿಗಳ ಪತನ, ಅಮೆರಿಕನ್ ಸಾಮ್ರಾಜ್ಯಶಾಹಿಯ ಪ್ರಾಬಲ್ಯ ವರ್ಧನೆ, ವಸಾಹತುಶಾಹಿ ಯುಗದ ಅವಸಾನ, ಹೊಸದಾಗಿ ಸ್ವತಂತ್ರಗೊಂಡ ಏಷ್ಯಾ, ಆಫ್ರಿಕಾ ಖಂಡದ ದೇಶಗಳ ಉದಯ. ಪರಮಾಣು ಅಸ್ತ್ರಗಳ ಭಯಂಕರ ಯುಗದ ಪ್ರಾರಂಭ. ಇಡೀ ಭೂಮಂಡಲವನ್ನೇ ಹಲವು ಪಟ್ಟು ಪುಡಿಗುಟ್ಟುವ ಸಾಮರ್ಥ್ಯವುಳ್ಳ ಪರಮಾಣು ಅಸ್ತ್ರಗಳ ದಾಸ್ತಾನಿನ ಮೇಲೆ ಇಂದು ಮಾನವಕೋಟಿ ಕುಳಿತಿದೆ. ಎರಡನೇ ಮಹಾಯುದ್ಧ ಎಲ್ಲ ಯುದ್ಧಗಳಿಗೂ ತೆರೆ ಎಳೆದಂಥದ್ದೇನಾಗಲಿಲ್ಲ. ಹತ್ತು ಹಲವು ಸಾಮ್ರಾಜ್ಯಶಾಹಿ ಪ್ರೇರಿತ ಯುದ್ಧಗಳು ನಡೆದುಹೋದುವು. ಇಪ್ಪತ್ತನೇ ಶತಮಾನ ಮೂರನೇ ಮಹಾಯುದ್ಧದ ಭೀತಿಯಲ್ಲೇ ಅಂತ್ಯಗೊಂಡಿತು. ಕಳೆದ ಶತಮಾನದ ಅತ್ಯಂತ ಪ್ರಾಮುಖ್ಯವಾದ ಬೆಳವಣಿಗೆ ಎಂದರೆ ಸಾಮ್ರಾಜ್ಯಶಾಹಿ ಶಕ್ತಿಗಳಿಗೆ ಎಪ್ಪತ್ತು ವರ್ಷಗಳ ಕಾಲ ಸವಾಲೊಡ್ಡಿದ್ದ, ಪರ್ಯಾಯ ಆರ್ಥಿಕ ವ್ಯವಸ್ಥೆಗೆ ಆಸರೆಯಾಗಿದ್ದ ಸೋವಿಯೆತ್ ಒಕ್ಕೂಟ ಮತ್ತು ಅದರ ಅನುಯಾಯೀ ದೇಶಗಳ ವಿಘಟನೆ. ಪ್ರಪಂಚದ ಪುರೋಗಾಮಿ ಚಳವಳಿಗೆ ಇದರಿಂದ ಸಾಕಷ್ಟು ಹಿನ್ನಡೆಯಾಗಿದ್ದನ್ನು ಅಲ್ಲಗಳೆಯುವಂತಿಲ್ಲ. ಸಮಾಜವಾದಿ ಸಿದ್ಧಾಂತದ ಆಧಾರದ ಮೇಲೆ ಹೊಸ ಸಮಾಜವಾದಿ ಸಮಾಜ ನಿರ್ಮಾಣದ ಹಾದಿಯಲ್ಲಿ ಮುಂಚೂಣಿಯಲ್ಲಿದ್ದ ಸೋವಿಯತ್ ಒಕ್ಕೂಟ ತನ್ನ ಪ್ರಯತ್ನದಲ್ಲಿ ಸೋತು ಹಿನ್ನಡೆದಾಗ್ಯೂ ಪ್ರಪಂಚದಲ್ಲಿ ಸಮಾಜವಾದಿ ಸಿದ್ಧಾಂತಕ್ಕೆ ಚ್ಯುತಿಯಾಗಿಲ್ಲ. ಸಮಾಜವಾದಿ ವಿಚಾರಧಾರೆ ಜೀವಂತವಾಗಿದೆ. ಹಲವು ದೇಶಗಳು ಆ ವಿಚಾರದಿಂದ ಪ್ರಭಾವಿತವಾಗಿ ಮುನ್ನಡೆಯುತ್ತಿವೆ. ಈ ಒಂದು ಶತಮಾನದಲ್ಲಿ ಅನೇಕಾನೇಕ ಮಹತ್ವಪೂರ್ಣ ಘಟನೆಗಳು ಸಂಭವಿಸಿವೆ. ಹಾಗಿರುವಾಗ



ಸೀಯಾರ್ಕೆ



್ರಾಜ್ಯಶಾಹಿಯ ಚರ್ಯೆಯಲ್ಲಿ ಏನಾದರೂ ಬದಲಾವಣೆಗಳಾಗಿವೆಯೆ ಎನ್ನುವ ಪ್ರಶ್ನೆ ಜವಾಗಿ ಏಳುತ್ತದೆ. ಅದಕ್ಕೆ ಉತ್ತರ ಖಂಡಿತ ಇಲ್ಲ. ಆದರ ಪ್ರಾಬಲ್ಯ ಕುಂದಿದ್ದಾಗ್ಯೂ ಕವಾಗಿ, ಸೈನಿಕವಾಗಿ ಇನ್ನೂ ಪ್ರಬಲವಾಗಿಯೇ ಇದೆ. ಹಿಂದಿನಂತೆ ಆಕ್ರಮಿತ ಗಳನ್ನು ಅಧೀನದಲ್ಲಿರಿಸಿಕೊಳ್ಳುವುದು ಸಾಧ್ಯವಿಲ್ಲದ ಮಾತು. ರಾಷ್ಟ್ರೀಯ ಂತ್ರ್ಯವನ್ನು ಗಳಿಸಿರುವ ಜನತೆ ಯಾವುದೇ ವಿದೇಶೀ ಆಕ್ರಮಣವನ್ನು ಸಹಿಸದು. ಟ್ನಾಮ್ ಕಲಿಸಿದ ಪಾಠವನ್ನು ಅಮೆರಿಕನ್ ಸಾಮ್ರಾಜ್ಯಶಾಹಿ ಇನ್ನೂ ಅರಿತಿಲ್ಲ. ಇಂದು ದೇ ಪರಿಸ್ಥಿತಿಯನ್ನು ಅದು ಇರಾಕಿನಲ್ಲಿ, ಅಫ್ಘಾನಿಸ್ತಾನದಲ್ಲಿ ಎದುರಿಸುತ್ತಿದೆ. ಹಾಗಾಗಿ ್ರಾಜ್ಯಶಾಹಿ ದುರ್ಬಲ ಅಭಿವೃದ್ಧಿಶೀಲ ದೇಶಗಳನ್ನು ನಿಯಂತ್ರಣದಲ್ಲಿರಿಸಿಕೊಳ್ಳಲು ವಿಧಾನಗಳನ್ನು ಅರಸುತ್ತಿದೆ. ಮಾರುಕಟ್ಟೆಯ ಮೇಲೆ, ಆರ್ಥಿಕದ ಮೇಲೆ ಹಿಡಿತ ಸಲು ಜಾಗತೀಕರಣ, ಉದಾರೀಕರಣ, ಮುಕ್ತಮಾರುಕಟ್ಟೆ, ವಿದೇಶೀ ಬಂಡವಾಳದ , ಈ ಮಂತ್ರಗಳ ಪಠಣ ಆರಂಭ. ಇವು ನಿರೀಕ್ಷಿತ ಫಲವನ್ನು ಈವರೆಗೆ ನೀಡದಿದ್ದರೂ ್ರಾಜ್ಯಶಾಹಿಗಳು ತಮ್ಮ ಪ್ರಯತ್ನಗಳೇನನ್ನೂ ಬಿಟ್ಟಿಲ್ಲ, ಸಡಿಲಿಸಿಲ್ಲ.

್ರಚಲಿತ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಈ ಹಿನ್ನೆಲೆಯ ಅವಲೋಕನ . ಕಳೆದ ಒಂದು ವರ್ಷದಲ್ಲಿ ಸಂಭವಿಸಿದ ಪ್ರಾಮುಖ್ಯವಾದ ಅಂತರರಾಷ್ಟ್ರೀಯ ೆಗಳನ್ನು ನೆನಪಿಸಿಕೊಂಡಾಗ ನಮ್ಮೆದುರಿಗೆ ಎದ್ದು ಕಾಣುವುದು ಅಮೆರಿಕಾದ ಾಸದಲ್ಲಿ ಮೊತ್ತಮೊದಲ ಬಾರಿಗೆ ಕರಿಯ ಜನಾಂಗಕ್ಕೆ ಸೇರಿದ ಬರಾಕ್ ಒಬಾಮಾ, ರಿಕಾದ ಡೆಮಾಕ್ರಟಿಕ್ ಪಕ್ಷದ ಅಭ್ಯರ್ಥಿಯಾಗಿ ಅಧ್ಯಕ್ಷ ಪದವಿಯ ಗದ್ದುಗೆಗೆ ್ದು ಮತ್ತು ಬಂಡವಾಳಶಾಹಿ ಆರ್ಥಿಕ ಜಗತ್ತಿನ ಬುಡವನ್ನೇ ಅಲುಗಾಡಿಸಿದ ಮಹಾ ್ಕ ಕುಸಿತ. ಉಳಿದದ್ದೆಲ್ಲ ಯಥಾಸ್ಥಿತಿ.

## ಒಬಾಮಾ ಯುಗ

ಬದಲಾವಣೆಗಳ ಭರವಸೆಯ ಹರಿಕಾರ ಎಂದೇ ಪ್ರಸಿದ್ಧಿ ಪಡೆದು ಅಧಿಕಾರಕ್ಕೇರಿದ ಥಮ ಕರಿಯ ಜನಾಂಗದ ಪ್ರತಿನಿಧಿ ಒಬಾಮಾ ಅಧ್ಯಕ್ಷನಾಗಿ ವರ್ಷ ಮುಗಿಯಿತು. ಸೆ, ಬದಲಾವಣೆ ಹುಸಿಯಾಗಿದೆ. ಯಥಾಸ್ಥಿತಿ ಮುಂದುವರಿದಿದೆ. 'ಯುದ್ಧಕಾಲದ ್ಷ' ಎಂದು ಮಾಧ್ಯಮಗಳು ಬಣ್ಣಿಸಿರುವ ಅಮೆರಿಕಾದ ಅಧ್ಯಕ್ಷ ಒಬಾಮಾನ ಕಿರೀಟಕ್ಕೆ ೆಲ್ ಶಾಂತಿ ಪುರಸ್ಕಾರದ ಗರಿಯೊಂದು ವಿಶೇಷ. ಅಫ್ಘಾನಿಸ್ತಾನದ ರಣರಂಗಕ್ಕೆ ್ನ ೩೦,೦೦೦ ಸೈನಿಕರನ್ನು ಕಳಿಸಬೇಕೆಂಬ ನಿರ್ಧಾರ ಪ್ರಕಟಿಸಿದ ಹತ್ತನೇ ದಿನವೇ ್ತ ಫಲಕವನ್ನು ಆತ ಸ್ವೀಕರಿಸಿದ್ದು ಒಂದು ವಿಪರ್ಯಾಸ. ಆಸ್ಲೋದ ಪುರಭವನದಲ್ಲಿ ್ರ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮಾತನಾಡಿದ ಅಮೆರಿಕಾದ ಅಧ್ಯಕ್ಷ ಒಬಾಮಾ ೆರಿಕಾ ಎಂದೂ ನ್ಯಾಯಯುತ ಯುದ್ಧದಿಂದ ಹಿಂದೆ ಸರಿಯದು'' ಎಂದು 'ಭರವಸೆ' ಅಫ್ಘಾನಿಸ್ತಾನ ಮತ್ತು ಇರಾಕ್ ಮೇಲಿನ ಯುದ್ಧವನ್ನು ಒಂದು ರೀತಿ ಸಮರ್ಥಿಸಿ ಡಿದ್ದಾರೆ. ನೊಬೆಲ್ ಪುರಸ್ಕಾರ ಸಮಿತಿ ಶಾಂತಿ ಪುರಸ್ಕಾರ ವಿತರಣೆಯಲ್ಲಿ ಎಡವಿರುವುದು ಮೊದಲ ಬಾರಿಯೇನಲ್ಲ. ಹೆಚ್ಚಿನ ಪುರಸ್ಕಾರಗಳು ರಾಜಕೀಯಪ್ರೇರಿತ ಎಂದು ಿಕೊಂಡಿವೆ. ಮಂಡೇಲಾ, ಮದರ್ ತೆರೇಸಾ ಸಾಲಿಗೆ ಸೇರಿದವನಲ್ಲ ತಾನು ಎಂದು ಕೊಂಡಿರುವ ಒಬಾಮಾ ಅಪಾತ್ರರ ಗುಂಪಿಗೆ ಸೇರುತ್ತಾರೆಂಬುದರಲ್ಲಿ ಸಂಶಯವಿಲ್ಲ. ರಿಕಾದಲ್ಲಿ ಯಾರೇ ಅಧಿಕಾರಕ್ಕೆ ಬಂದಾಗ್ಯೂ ಭದ್ರವಾಗಿ ಬೇರೂರಿರುವ ಮಿಲಿಟರಿ - ಕೈಗಾರಿಕಾ ಸಂಕೀರ್ಣದ ಹಿಡಿತದಿಂದ ದೂರ ಸರಿಯುವುದು ಅಸಾಧ್ಯ. ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧವಾಗಿ ಹೋಗುವುದು ದುಸ್ತರ. ಹಾಗಾಗಿ ಸ್ಥಾಪಿತ ಧೋರಣೆಯಲ್ಲಿ ಮೂಲ ಬದಲಾವಣೆಗಳನ್ನು ನಿರೀಕ್ಷಿಸಲಾಗದು. ಒಂದು ವರ್ಷದಲ್ಲಿ ಒಬಾಮಾ ಆಡಳಿತದ ನಡಾವಳಿಗಳಿಂದ ಇದು ವೇದ್ಯವಾಗಿದೆ. ಅಫ್ಘಾನಿಸ್ತಾನ ಮತ್ತು ಇರಾಕಿನ ದುರಾಕ್ರಮಣದ ಮುಂದುವರಿಕೆಯಲ್ಲಿ ಅದನ್ನು ಕಾಣಬಹುದು. ಎರಡೂ ದೇಶಗಳಲ್ಲಿ 'ಚುನಾಯಿತ ಸರಕಾರ'ಗಳು ಅಸ್ತಿತ್ವದಲ್ಲಿವೆ, ಆದರೆ ವಿದೇಶೀ ಸೈನ್ಯಗಳ ನೆರಳಿನಲ್ಲಿ. ಅಫ್ಘಾನಿಸ್ತಾನದ ಚುನಾವಣೆಯ ಅಣಕ ಅನಿರೀಕ್ಷಿತವಾದ್ದೇನಲ್ಲ. ೭೧,೦೦೦ ಅಮೆರಿಕಾದ ಸೈನಿಕರು ಮತ್ತು ೩೬,೦೦೦ 'ನ್ಯಾಟೋ' ಭಂಟರು ಇದ್ದರೂ ಪ್ರಯೋಜನವಾಗಿಲ್ಲ. ಯುದ್ಧ ವಿಸ್ತರಣೆಯಾಗಿದೆ. ತಾಲಿಬಾನ್‌ಗಳ ಕೈ ಮೇಲಾಗಿದೆ. ಅವರ ಕಾರ್ಯಚಟುವಟಿಕೆ ಪಾಕಿಸ್ತಾನಕ್ಕೂ ವಿಸ್ತರಣೆಯಾಗಿ ಆತಂಕವುಂಟುಮಾಡಿದೆ. ಈ ಕಾರ್ಯಾಚರಣೆಯಲ್ಲಿ ಅಮೆರಿಕಾದ ಸೇನೆ ಪಾಕಿಸ್ತಾನವನ್ನು ಆಕ್ರಮಿಸಿಕೊಂಡರೂ ಆಶ್ಚರ್ಯವಿಲ್ಲ. ವಿದೇಶೀ ಸೈನ್ಯಗಳು ಕಾಲ್ತೆಗೆಯುವ ವರೆಗೂ ಘರ್ಷಣೆ ನಿಲ್ಲದು. ಅಂಥದ್ದರಲ್ಲಿ ಒಬಾಮಾ ಇನ್ನೂ ೩೦,೦೦೦ ಅಮೆರಿಕನ್ ಸೈನಿಕರನ್ನು ರವಾನಿಸುತ್ತಿದ್ದಾರೆ. ಇಷ್ಟವಿಲ್ಲದಿದ್ದ ದಾಕ್ಷಿಣ್ಯದಿಂದ 'ನ್ಯಾಟೋ' ರಾಷ್ಟ್ರಗಳು ಇನ್ನೂ ೭,೦೦೦ ಸೈನಿಕರನ್ನು ಕಳಿಸುತ್ತಿವೆ. ಈ ಸೈನ್ಯವೆಲ್ಲ ೨೦೧೧ರ ಮಧ್ಯದ ವೇಳೆಗೆ ಸ್ವದೇಶಕ್ಕೆ ಮರಳುತ್ತವೆ ಎಂದು ಅಮೆರಿಕಾದ ಅಧ್ಯಕ್ಷರು ಅಪ್ಪಣೆ ಕೊಡಿಸಿದ್ದಾರೆ. ಅದು ಭರವಸೆಯಾಗಿಯೇ ಉಳಿದೀತು! ತಾಲಿಬಾನ್‌ಗಳು ಅಮೆರಿಕಾದ ಈ ಕ್ರಮವನ್ನು ವಿರೋಧಿಸಿ ಮುಂದೆ ಅಮೆರಿಕನ್ ಹಾಗೂ ವಿದೇಶಿ ಸೈನಿಕರ ಹೆಣಗಳನ್ನು ತರಿಸಿಕೊಳ್ಳಲು ಏರ್ಪಾಡು ಮಾಡಲಿ ಎಂದಿದ್ದಾರೆ. ಇದು ಇರಾಕಿನ ವಿಚಾರದಲ್ಲೂ ಅಷ್ಟೇ ನಿಜ. ಅಫ್ಘಾನಿಸ್ತಾನದ ಈ ಬೆಳವಣಿಗೆಗಳು ಮತ್ತು ಪಾಕಿಸ್ತಾನದಲ್ಲಿ ಒಂದು ಕಡೆ ತಾಲಿಬಾನ್‌ಗಳ ಹಾವಳಿ ಇನ್ನೊಂದು ಕಡೆ ಉಗ್ರಗಾಮಿ ಶಕ್ತಿಗಳ ಭಯೋತ್ಪಾದನೆ ಕೃತ್ಯಗಳು ಭಾರತಕ್ಕೆ ಆತಂಕಕಾರಿ. ತನ್ನ ಈ ದುಸ್ಸಾಹಸದಲ್ಲಿ ಭಾರತವನ್ನು ಎಳೆದುಕೊಳ್ಳಲು ಪ್ರಯತ್ನಿಸುತ್ತಿರುವ ಅಮೆರಿಕಾದ ಹುನ್ನಾರಗಳಿಗೆ ಬಲಿಯಾಗದಂತೆ ಭಾರತ ಎಚ್ಚರವಹಿಸಬೇಕಾಗಿದೆ.

## ಪಶ್ಚಿಮ ಏಷಿಯ

ಅರವತ್ತು ವರ್ಷಗಳಿಗೆ ಮೇಲಾದರೂ ಇಸ್ರೇಲಿನ ವಿಸ್ತರಣಾವಾದದಿಂದಾಗಿ, ಹಠಮಾರಿತನದಿಂದಾಗಿ, ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯಾಗದೆ ಇದೆ. ಅಮೆರಿಕಾ ಸರಕಾರದ ಪೂರ್ಣ ಬೆಂಬಲ ಪಡೆದಿರುವ ಇಸ್ರೇಲ್ ವಿಶ್ವಸಂಸ್ಥೆಯ ಆದೇಶಗಳನ್ನು ಧಿಕ್ಕರಿಸಿ ಪ್ಯಾಲಸ್ತೈನ್ ಜನರ ಮೇಲೆ ಸಮರ ನಡೆಸುತ್ತಿದೆ. ಆಕ್ರಮಿತ ಪ್ರದೇಶಗಳಲ್ಲಿ ಸ್ವಾಸ್ಥ್ಯಗಳನ್ನು ನಿರ್ಮಿಸುತ್ತಲೇ ಇದೆ. ಇತ್ತೀಚೆಗೆ ಅಮೆರಿಕಾದ ಅಧ್ಯಕ್ಷ ಒಬಾಮಾ ಇಸ್ರೇಲಿಗೆ ಭೇಟಿ ನೀಡಿ ಪ್ರಧಾನಿ ನಿತಾನ್ಯುಹುವನ್ನು ಭೇಟಿಯಾಗಿದ್ದರು. ಇಸ್ರೇಲ್ ಯಹೂದ್ಯರನ್ನು ನೆಲೆಗೊಳಿಸಲು ಸ್ವಾಸ್ಥ್ಯಗಳನ್ನು ನಿರ್ಮಿಸುವುದನ್ನು ನಿಲ್ಲಿಸಬೇಕೆಂದು ಒತ್ತಾಯಪಡಿಸಿದರು. ಪ್ಯಾಲಸ್ತೈನ್ ರಾಜ್ಯಸ್ಥಾಪನೆಗೆ ಅಮೆರಿಕಾದ ಬೆಂಬಲವನ್ನು ಸೂಚಿಸಿದರು. ಆದರೆ ಇಸ್ರೇಲ್ ಅಮೆರಿಕಾ ಅಧ್ಯಕ್ಷರ ಆಣತಿಯನ್ನು ತಿರಸ್ಕರಿಸಿದೆ, ಸಾರಾಸಗಟಾಗಿ. ಅಮೆರಿಕಾದಲ್ಲಿ ಇರುವ ಪ್ರಬಲ ಯಹೂದ್ಯ ಲಾಬಿ ಇರುವವರೆಗೆ ಅಮೆರಿಕಾದ ಅಧ್ಯಕ್ಷರುಗಳಿಗೆ ಇಸ್ರೇಲ್ ಮೇಲೆ ಯಾವುದೇ ಒತ್ತಡವನ್ನಾಗಲಿ, ಕ್ರಮವನ್ನಾಗಲೀ ಕೈಗೊಳ್ಳಲು ಸಾಧ್ಯವಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಹಾಗಾಗಿ ಪಶ್ಚಿಮ ಏಷಿಯಾ



ಪರಿಸ್ಥಿತಿಯಲ್ಲಿ ಯಾವ ಬದಲಾವಣೆಯೂ ಇಲ್ಲ. ಇತ್ತ ಇರಾನಿನ ನ್ಯೂಕ್ಲಿಯರ್ ಕಾರ್ಯಕ್ರಮದ ಕುರಿತು ಅಮೆರಿಕಾದ ನೀತಿಯಲ್ಲಿ ವ್ಯತ್ಯಾಸವೇನಾಗಿಲ್ಲ. ಮಾತುಕತೆಗಳಿಂದ ವಿವಾದ ಬಗೆಹರಿಸುವುದಾಗಿ ಹೇಳಿಕೊಂಡೇ ಇರಾನಿನ ಮೇಲೆ ಒತ್ತಡ ಹೇರಲಾಗುತ್ತಿದೆ. ಇರಾನಿನ ನ್ಯೂಕ್ಲಿಯರ್ ಕಾರ್ಯಕ್ರಮದ ವಿಚಾರದಲ್ಲಿ ಇತ್ತೀಚೆಗೆ ಅಂತರರಾಷ್ಟ್ರೀಯ ಪರಮಾಣುಶಕ್ತಿ ಆಯೋಗ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯನ್ನು ಕೈಬಿಡುವಂತೆ ಒತ್ತಾಯಪಡಿಸುವ ನಿರ್ಣಯವನ್ನು ಅನುಮೋದಿಸಿ ಭದ್ರತಾ ಸಮಿತಿಗೆ ರವಾನಿಸಿದೆ. ಈ ನಿರ್ಣಯಕ್ಕೆ ಭಾರತವೂ ಕೂಡ ಬೆಂಬಲ ನೀಡಿರುವುದು, ಒತ್ತಡಕ್ಕೆ ಮಣಿದಿರುವುದು ಖಂಡನೀಯ. ಈ ನಿರ್ಣಯದಿಂದಾಗಿ ಎರಡೂ ಕಡೆಯ ನಿಲುವು ಬಿಗಿಗೊಂಡಿದೆ. ಈಗಾಗಲೇ ಹಲವು ರೀತಿಯ ದಿಗ್ಬಂಧನಗಳನ್ನು ಅನುಭವಿಸುತ್ತಿರುವ ಇರಾನಿನ ಮೇಲೆ ಇನ್ನಷ್ಟು ಪ್ರತಿಬಂಧಗಳ ಸಾಧ್ಯತೆ ಹೆಚ್ಚಾಗಿದೆ. ದಾಳಿಯ ಯಾವುದೇ ಸೂಚನೆಗಳು ಇಲ್ಲದಿದ್ದರೂ ಉದ್ರಿಕ್ತ ಪರಿಸ್ಥಿತಿ ಈ ಭೂಭಾಗದಲ್ಲಿ ಮುಂದುವರಿಯುತ್ತಿದೆ.

## ನೆರೆಹೊರೆ ವಿದ್ಯಮಾನ

ಭಾರತದ ನೆರೆಯಲ್ಲಿರುವ ಶ್ರೀಲಂಕಾದಲ್ಲಿ ತಮಿಳು ಪ್ರತ್ಯೇಕವಾದಿ ಸಂಘಟನೆ ಎಲ್‌ಟಿಟಿಇಯ ಸಂಪೂರ್ಣ ಪರಾಜಯ, ಅದರ ಪ್ರಮುಖ ನಾಯಕ ಪ್ರಭಾಕರನ್, ಮತ್ತಿತರರ ಸಾವು ವರ್ಷದ ಪ್ರಮುಖ ಘಟನೆಗಳಲ್ಲಿ ಒಂದು. ಮೂರು ದಶಕಗಳ ಸಶಸ್ತ್ರ ಸಂಘರ್ಷಕ್ಕೆ ತೆರೆಬಿದ್ದಿದ್ದಾಗ್ಯೂ ಸಮಸ್ಯೆ ಇತ್ಯರ್ಥ ಕಾಣದೆ ಇದೆ. ಮುಖ್ಯವಾಗಿ ಯುದ್ಧದ ಸಮಯದಲ್ಲಿ ನಿರಾಶ್ರಿತರಾಗಿರುವ ಲಕ್ಷಾಂತರ ತಮಿಳರ ಪುನರ್ವಸತಿ ಕಾರ್ಯ ಇನ್ನೂ ಪೂರ್ಣಗೊಳ್ಳಬೇಕಾಗಿದೆ. ತಮಿಳರ ಸಮಸ್ಯೆಯನ್ನು ಬಗೆಹರಿಸಲು ಶ್ರೀಲಂಕಾ ಸರಕಾರ ಮೀನ-ಮೇಷ ಎಣಿಸುತ್ತಿದೆ. ಈ ಮಧ್ಯೆ ಅಧ್ಯಕ್ಷೀಯ ಚುನಾವಣೆ ಬೇರೆ ಬಂದಿದೆ. ಶ್ರೀಲಂಕಾ ಸರಕಾರ ಆದಷ್ಟು ಶೀಘ್ರವಾಗಿ ತಮಿಳರ ಸಮಸ್ಯೆಯನ್ನು ಬಗೆಹರಿಸುವ ಕುರಿತು ಸರ್ವಸಮ್ಮತವಾದ ತೀರ್ಮಾನಗಳಿಗೆ ಬರುವಂತೆ ವಿಶ್ವಸಮುದಾಯ ಒತ್ತಡ ತರಬೇಕಾಗಿದೆ. ಉಳಿದಂತೆ ಭಾರತ ಇತರ ನೆರೆರಾಷ್ಟ್ರಗಳಾದ ಬಾಂಗ್ಲಾದೇಶ, ಮೈನ್ಮಾರ್ ಮತ್ತಿತರ ಕಡೆಗಳಲ್ಲಿ ಯಥಾಸ್ಥಿತಿ ಮುಂದುವರಿಯುತ್ತಿದೆ.

ಕಳೆದ ವರ್ಷದ ಒಂದು ವಿಶೇಷವೆಂದರೆ ಚೀಣಾ ಜನತಾ ಗಣರಾಜ್ಯದ ಅರವ... ವಾರ್ಷಿಕೋತ್ಸವ ಮತ್ತು ಕ್ಯೂಬಾ ಗಣರಾಜ್ಯದ ಐವತ್ತನೇ ವಾರ್ಷಿಕೋತ್ಸವ. ... ಸಮಾಜವಾದಿ ಸಮಾಜದ ನಿರ್ಮಾಣದ ಗುರಿಹೊಂದಿರುವ ದೇಶಗಳು. ... ಅನುಸರಿಸುತ್ತಿರುವ ಮಾರ್ಗ ವಿಭಿನ್ನ. ಚೀಣಾ ಅಮೆರಿಕಾದ ಸಖ್ಯ ಬೆಳೆಸಿ, ... ಬಂಡವಾಳವನ್ನು ಯಥೇಚ್ಛವಾಗಿ ಸ್ವೀಕರಿಸಿ ಕೈಗಾರಿಕೆಯಲ್ಲಿ ಮುಂದುವರಿದಿದೆ. ಕ್ಯೂ... ಅಮೆರಿಕಾ ಹೊರಿಸಿರುವ ದಿಗ್ಬಂಧನವನ್ನು ಮೀರಿ ಪ್ರಗತಿಪಥದಲ್ಲಿ ಸಾಗುತ್ತಿದೆ. ಅರ... ವರ್ಷಗಳಲ್ಲಿ ಚೀಣಾ ಸಾಕಷ್ಟು ಬದಲಾವಣೆಗಳನ್ನು ಕಂಡಿದೆ. ಚೀಣಾದಲ್ಲಿ ಕಮ್ಯು... ಪಕ್ಷದ ದಿಗ್ವಿಜಯ, ಸುದೀರ್ಘವಾದ ಕ್ರಾಂತಿಕಾರಿ ಹೋರಾಟ ಒಂದು ರೋಚಕ ... ಅಮೆರಿಕಾದ ಕಡು ವಿರೋಧದಿಂದ ಇಪ್ಪತ್ತು ವರ್ಷಗಳ ಕಾಲ ವಿಶ್ವಸಂಸ್ಥೆಯಿ... ದೂರವಿರಬೇಕಾಗಿಬಂದ ಚೀಣಾ ಇಂದು ಅಮೆರಿಕಾದ ಪರಮಮಿತ್ರ. ಅಪರಿ... ರಾಷ್ಟ್ರೀಯವಾದಿ ಧೋರಣೆಯನ್ನು ಮೈಗೂಡಿಸಿಕೊಂಡಿರುವ ಚೀಣಾದ ಧೋರಣೆ... ಅನೇಕ ವೇಳೆ ವಿಸ್ಮಯಕಾರಿ. ಸಾಮ್ರಾಜ್ಯಶಾಹಿ ಶಕ್ತಿಗಳನ್ನು ಎದುರಿಸುವ ಹಿಂ... ಮೊನಚು ಇಂದಿಲ್ಲ. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಗುಣಾತ್ಮಕವಾದ ಪರಿಣಾ... ಉಂಟುಮಾಡುವ ಚೈತನ್ಯವುಳ್ಳ ಚೀಣಾ ದಿಟ್ಟ ನಿಲುವು ತಳೆದರೆ ಒಳ್ಳೆಯದಾದೀ... ಒಲಿಂಪಿಕ್ ಪಂದ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸಿ ಕೀರ್ತಿ ಗಳಿಸಿದ ಚೀಣಾದ ಜನ... ಅಭಿನಂದನೆ. ಅವರ ಅಪೇಕ್ಷೆಗಳು ಈಡೇರಲಿ ಎಂದು ಹಾರೈಸೋಣ. ಕ್ಯೂಬಾ ಐ... ವರ್ಷಗಳಿಂದ ಒಂದೇ ಸಮನಾಗಿ ಪ್ರಗತಿ ಸಾಧಿಸಲು ಸೆಣಸಾಡುತ್ತಿದೆ. ವಿಶ್ವಸ... ಸರ್ವಸದಸ್ಯರ ಸಭೆ ಪ್ರತಿವರ್ಷ ಆರ್ಥಿಕ ದಿಗ್ಬಂಧನ ತೆಗೆಯುವಂತೆ ಕೋರಿ ನಿರ್ಣ... ಅಂಗೀಕರಿಸುತ್ತಿದ್ದರೂ ಅಮೆರಿಕಾ ಅದನ್ನು ಕಿವಿಯ ಮೇಲೆ ಹಾಕಿಕೊಳ್ಳುತ್ತಿಲ್ಲ. ಅಮೆರಿ... ಕೂಗಳತೆಯಲ್ಲಿರುವ ಕ್ಯೂಬಾ ಇಷ್ಟರವರೆಗೆ ಉಳಿದುಕೊಂಡಿರುವುದೇ ಒಂದು ದೊ... ಸಾಧನೆ. ಕ್ರಾಂತಿಕಾರಿ ನಾಯಕ ಫಿಡೆಲ್ ಕ್ಯಾಸ್ಟ್ರೋ ನಂತರ ಯಾರು ಎಂಬ ಪ್ರಶ್ನೆಯ... ನಿರಾಯಾಸವಾಗಿ ಬಗೆಹರಿಸಿರುವ ಕ್ಯೂಬಾದಲ್ಲಿ ಅಧಿಕಾರದ ಹಸ್ತಾಂತರ ಸುಗಮ... ನೆರವೇರಿದೆ. ಐವತ್ತನೇ ವರ್ಷದ ಸಂದರ್ಭದಲ್ಲಿ ಕ್ಯೂಬಾದ ಜನತೆಗೆ ಶುಭ ಹಾರೈಸೋ...

## ಪರಿಸರ ಪ್ರಯಾಸ

ವರ್ಷದ ಕೊನೆಯಲ್ಲಿ ಡೆನ್ಮಾರ್ಕ್‌ನ ರಾಜಧಾನಿ ಕೋಪನ್‌ಹೇಗನ್... ನಮಗಿರುವ ಏಕೈಕ ಭೂಮಂಡಲವನ್ನು ಉಳಿಸಿಕೊಳ್ಳಲು ಸೆಣಸಾಟ ನಡೆದಿದೆ. ಜಾ... ತಾಪಮಾನ ಹೆಚ್ಚುವುದನ್ನು ತಡೆಯಲು, ಕಾರ್ಬನ್ ಡೈ ಆಕ್ಸೈಡ್ ಪ್ರಮಾಣ... ತಗ್ಗಿಸಲು ಶ್ರೀಮಂತ ರಾಷ್ಟ್ರಗಳು ಮತ್ತು ಅಭಿವೃದ್ಧಿ ದೇಶಗಳ ಮಧ್ಯೆ ನೀ ಕೊಡೆ ನಾ... ಎನ್ನುವಂಥ ಜಗ್ಗಾಟ ನಡೆದಿದೆ. ಭಾರತ, ಚೀಣಾ, ದಕ್ಷಿಣ ಆಫ್ರಿಕಾಗಳು ಅಭಿವೃದ್ಧಿ... ರಾಷ್ಟ್ರಗಳ ಹಿತರಕ್ಷಣೆಗೆ ಒಂದುಗೂಡಿ ಇದುವರೆಗೆ ಅಮೆರಿಕಾ ಮತ್ತು ಐರೋಪ್ಯ ರಾಷ್ಟ್ರ... ಒತ್ತಡಗಳನ್ನು ಎದುರಿಸುತ್ತಿರುವುದು ಸ್ವಾಗತಾರ್ಹ. ಪ್ರಪಂಚದಲ್ಲಿ ಗರಿಷ್ಠ ಪ್ರಮಾಣ... ಪರಿಸರ ಮಾಲಿನ್ಯ ಉಂಟುಮಾಡುವುದರಲ್ಲಿ ನಿರತವಾಗಿರುವ ಅಭಿವೃದ್ಧಿಗೊಂಡ ದೇಶ... ಬಡ ರಾಷ್ಟ್ರಗಳ ಮೇಲೆ ಒತ್ತಡ ತರುತ್ತಿವೆ, ಮಾಲಿನ್ಯದ ಪ್ರಮಾಣ ತಗ್ಗಿಸ... ಕೋಪನ್‌ಹೇಗನ್ ಸಮಾವೇಶ ಇಂದಿನ ಪರಿಸ್ಥಿತಿಯಲ್ಲಿ ಪರಿಣಾಮಕಾರಿಯಾಗುವ... ಸಂದೇಹವಾಗಿತ್ತು. ಅದು ನಿರೀಕ್ಷಿತ ಫಲಿತಾಂಶ ನೀಡುವುದರಲ್ಲಿ ವಿಫಲವಾಗಿದೆ. ಇ... ಶ್ರೀಮಂತರಾಷ್ಟ್ರಗಳೇ ಹೊಣೆ.

ಸಂಕೀರ್ಣವಾದ ಅಂತರರಾಷ್ಟ್ರೀಯ ಪರಿಸ್ಥಿತಿಯಲ್ಲಿ ಭಾರತ ಸರಕಾರ ಸ್ವತಂತ್ರ... ಕ್ರಿಯಾಶೀಲವಾದ ಪಾತ್ರ ವಹಿಸುವ ಬದಲು ಹೆಚ್ಚುಹೆಚ್ಚಾಗಿ ಅಮೆರಿಕಾದ ... ಬೀಳುತ್ತಿರುವುದೀಗ ಶೋಚನೀಯ. ಮನಮೋಹನ ಸಿಂಗ್ ನೇತೃತ್ವದಲ್ಲಿರುವ ಯು... ಸರಕಾರ, ಅಮೆರಿಕಾದೊಂದಿಗೆ ನ್ಯೂಕ್ಲಿಯರ್ ಒಪ್ಪಂದ ಮಾಡಿಕೊಂಡ ಮೇಲೆ ... ಹೆಚ್ಚಾಗಿ ಅಮೆರಿಕಾದ ನಿಲುವುಗಳನ್ನು ಬೆಂಬಲಿಸತೊಡಗಿದೆ. ಅಂತರರಾಷ್ಟ್ರೀ... ಪರಮಾಣು ಆಯೋಗದ ಸಭೆಯಲ್ಲಿ ಇರಾನ್ ವಿರುದ್ಧವಾಗಿ ಒತ್ತಡಕ್ಕೆ ಮಣಿದು ... ಚಲಾಯಿಸಿದ್ದು ಅದಕ್ಕೆ ನಿದರ್ಶನ. ಭಾರತ ಸರಕಾರ ಸ್ವತಂತ್ರವಾದ, ಪ್ರಗತಿಪರ... ಧೋರಣೆಯನ್ನು ತಳೆಯುವಂತೆ ಒತ್ತಾಯ ತರುವುದು ಪ್ರಗತಿಪರ ಜನಸಮುದಾ... ಕರ್ತವ್ಯವಾಗಿದೆ. ಆ ದಿನಗಳಿಗಾಗಿ ಎದುರುನೋಡೋಣ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦...

# ತಂದೆ, ಗುರುವಾಗಿದ್ದರು, ಮಗುವಂತಿದ್ದರು ಮಾಸ್ತಿ

■

ಸಾಮಾನ್ಯವಾಗಿ ಸ್ವತಂತ್ರವಾಗಿ ಬದುಕಲು ಇಚ್ಛಿಸುವ ಹೆಣ್ಣುಮಕ್ಕಳು ತಮ್ಮನ್ನು ತಾವು 'ಸೆಲ್ಫ್‌ಮೇಡ್' ಅಂದುಕೊಳ್ಳುತ್ತೇವೆ. ಒಳಗೊಳಗೇ ಪುಟ್ಟದೊಂದು ಅಹಂಕಾರ ಅಥವಾ ಅತಿ ಸ್ವಾಭಿಮಾನದ ಹಮ್ಮು- ಬಿಮ್ಮುಗಳು. ಆದರೆ ನಿನ್ನೆ ಮೊನ್ನೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ನಡೆದು ಬಂದ ದಾರಿಯಲ್ಲಿ ಕಲ್ಲು ಮುಳ್ಳುಗಳನ್ನು ತೆರವುಗೊಳಿಸಿ ಹಲವು ಮಹಾನುಭಾವರು ''ಮುಂದೆ ನಡೆ ಹೀಗೂ'' ಅಂದಿರುತ್ತಾರೆ. ನೆರಳಂತೆ ಜೊತೆಗಿದ್ದು ಬದುಕಿಗೊಂದು ಅರ್ಥ ಕಂಡು ಕೊಳ್ಳಲು ನೆರವಾಗಿರುತ್ತಾರೆ. ನಾನೂ ಇಂಥ ಅನುಭವಗಳಿಂದ ಹೊರತಲ್ಲ. ಹಾಗೆ ನೆಲೆನಿಲ್ಲಲು ನೆರವಾದ ಮಹಾನುಭಾವರನ್ನು ನೆನೆಯುವುದೇ ಒಂದು ಸಂತೋಷದ ಸಂಗತಿ. ಮಾಸ್ತಿ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮಾಸ್ತಿಯವರನ್ನು ಕುರಿತು ''ನಾನು ಬದುಕಿನುದ್ದಕ್ಕೂ ಋಣಿಯಾಗಿರಬೇಕಾದ ಮಹನೀಯರು'' ಎಂದಿದ್ದೆ. ಆ ಮಾತುಗಳನ್ನು ಇನ್ನಷ್ಟು ವಿಸ್ತರಿಸಿ ಹೇಳಲು 'ಹೊಸತು' ಪತ್ರಿಕೆಯ ಸಂಪಾದಕರು ಪ್ರೀತಿಯ ಆಹ್ವಾನ ಕೊಟ್ಟಿದ್ದಾರೆ. ಇದೊಂದು ಸದವಕಾಶ, ನೆನಪುಗಳ ಹಿಂದೆ ಜೋಕಾಲಿಯಾಡಲು.

**– ಡಾ॥ ವಿಜಯಾ**





ಮಾಸ್ತಿಯವರೊಡನೆ ವಿಜಯಾ

ಮಾಸ್ತಿಯವರು ನನ್ನ ವೃತ್ತಿ, ಬದುಕು, ಬರಹಗಳ ಮೇಲೆ ವಿಶೇಷ ಪ್ರಭಾವ ಬೀರಿದ ಮಹನೀಯರಲ್ಲಿ ಮುಖ್ಯರು. ಹನುಮಂತ ನಗರದ ಕಲಾಮಂದಿರಕ್ಕೆ ಬರುತ್ತಿದ್ದರು. ಅವರೂ ಅ. ನ. ಸುಬ್ಬ ರಾಯರೂ ಪರಮಮಿತ್ರರು. ವಯಸ್ಸಿನಲ್ಲೂ, ಸಮಾನರೇ. ಒಮ್ಮೊಮ್ಮೆ

''ನೀನು ನನಗಿಂತ ಚಿಕ್ಕವ''

''ಇಲ್ಲ ನಾನೇ ನಿನಗಿಂತ ದೊಡ್ಡವ''

ಎನ್ನುತ್ತ ಅವರಿಬ್ಬರೂ ಪುಟ್ಟ ಜಗಳವನ್ನೇ ತೆಗೆಯುವುದನ್ನು ಯಾರೊಬ್ಬರೂ ಗೆಲ್ಲದೆ ಸಪ್ಪಗಾಗುವುದನ್ನು ನೋಡಿ ನಾವೆಲ್ಲ ಚಪ್ಪಾಳೆ ತಟ್ಟಿ ನಕ್ಕಿದ್ದುಂಟು.

ಹನುಮಂತನಗರದ ಗುಡ್ಡ ಅವರ ಬೆಳಗಿನ ತಿರುಗಾಟದ ಸ್ಥಳ. ಅದಕ್ಕೆ 'ಹನುಮಗಿರಿ' ಎಂದು ಅವರೇ ನಾಮಕರಣ ಮಾಡಿದ್ದರು. ಹುಡುಗನ ಹಾಗೆ ಬೆಟ್ಟ ಹತ್ತಿ-ಇಳಿದು ಬಂಡೆ, ಗಿಡ, ಮರಗಳನ್ನು ಮಾತನಾಡಿಸಿ, ಆರೈಕೆಯನ್ನು ಮಾಡಿ ಕೆಳಗಿಳಿಯುತ್ತಿದ್ದರು. ಹಾಗೆ ಮನೆಯೊಳಗೆ ಬಂದು ಹರಟೆ, ಕೆಲವೊಮ್ಮೆ ಅವರು ಬರೆದ ಹೊಸ ಲೇಖನ ಕುರಿತು, ಬಹುತೇಕ ಕಲೆ-ಕಲಾವಿದರು, ಸಾಹಿತ್ಯ ಪರಿಷತ್, ರಾಜಕೀಯ ಚರ್ಚೆಯ ವಸ್ತು. ಅದೇ ಮನೆಯಲ್ಲಿದ್ದ ಬಿ. ಕೆ. ಎಸ್. ವರ್ಮನನ್ನು ಕಂಡರೆ ಇಷ್ಟ. ಅವನಿಗೆ ಪ್ರತಿ ತಿಂಗಳೂ ಹತ್ತು ರೂಪಾಯಿ ಬ್ರಷ್, ಬಣ್ಣ ಇತ್ಯಾದಿ ಕೊಳ್ಳಲು ಕೊಡುತ್ತಿದ್ದರು. ಅವನದೊಂದು ಪೈಂಟಿಂಗ್ ಕೊಂಡು ತಮ್ಮ ಮನೆಯ ವೆರಾಂಡದಲ್ಲೇ ಇಟ್ಟಿದ್ದರು. ಮನೆಗೆ ಹೋದವರೆಲ್ಲರಿಗೂ ಆ ಕುರಿತು, ವರ್ಮನ ಪ್ರತಿಭೆ ಕುರಿತು ವ್ಯಾಖ್ಯಾನಗಳಾಗುತ್ತಿದ್ದವು.

ಮಾಸ್ತಿಯವರು ಪಿಈಎನ್ ಸಂಸ್ಥೆಗೆ ಅಧ್ಯಕ್ಷರು. ಕನ್ನಡದ ಎಲ್ಲ ಸಾಹಿತಿಗಳನ್ನೂ ಚಂದಾದಾರರಾಗಿಸುವ ಹಟ. ಹಾಗೆ ನನಗೂ ೧೦೦ ರೂಪಾಯಿ ಕೊಡು ಅಂತ ವರಾತ! ನನಗೆ ಹಾಗೆ ೧೦೦ ರೂಪಾಯಿ ಕೊಡುವ ಸ್ವಾತಂತ್ರ್ಯವೂ ಇರಲಿಲ್ಲ. ಅಸಹಾಯಕಳಾಗಿ ಪೆದ್ದು ಪೆದ್ದಾಗಿ ನಗುತ್ತಾ ಅವರೆದುರು ನಿಲ್ಲುತ್ತಿದ್ದೆ. ನನ್ನ ಕಷ್ಟ ನೋಡಲಾರದೆ ಅ. ನ. ಸುಬ್ಬರಾಯರು ''ಅವಳಿಗ್ಯಾಕೆ ಕಾಡುತ್ತೀ ಮಾರಾಯಾ, ಬಿಟ್ಟು ಬಿಡು'' ಅಂದರೆ, ''ಯಾಕೆ ಆಕೇನೂ ಬರೆಯೋಕೆ ಪ್ರಾರಂಭಿಸಿದಾರಲ್ಲ, ಬರಹಗಾರರು ಸದಸ್ಯರಾಗಬೇಕು'' ಅಂತ ವಾದಿಸುತ್ತಿದ್ದರು.

ನಿಧಾನವಾಗಿ ಸುಬ್ಬರಾಯರು ನನ್ನ ಅಸಹಾಯಕತೆ ಕುರಿತು ಹೇಳಿ, ''ಸುಮ್ಮನಿರು, ಕಾಡಬೇಡ ಅವಳನ್ನು'' ಅಂದರಂತೆ. ಮತ್ತೆ ನನ್ನ ಬಳಿ ಚಂದಾಹಣ ಕೇಳಲಿಲ್ಲ. ನನ್ನಿಬ್ಬರು ಮಕ್ಕಳಿಗವರು 'ಚಾಕಲೇಟ್ ತಾತ'. ಅವರು ಶಾಲೆಗೆ ಹೋಗುವ ದಾರಿಯಲ್ಲಿ ಎದುರಿಗೆ ಬರುತ್ತಿದ್ದ ಮಾಸ್ತಿ ಅವರು ಸದಾ ಕೋಟಿನ ಜೇಬಿನಲ್ಲಿರುತ್ತಿದ್ದ ಚಾಕಲೇಟ್ ತೆಗೆದುಕೊಟ್ಟು, ಮಕ್ಕಳನ್ನು ಓದು, ತರಗತಿ ಎಲ್ಲ ವಿಚಾರಿಸುತ್ತ ಜೊತೆಯಲ್ಲೇ ನಾಲ್ಕು ಹೆಜ್ಜೆ ಹಾಕಿ, ''ಸಾವಕಾಶ ಹೋಗಿ, ರಸ್ತೆ ದಾಟುವಾಗ ಹುಷಾರು'' ಅಂತ ಎಚ್ಚರಿಸಿ ಕಳಿಸುತ್ತಿದ್ದರು.

ಹಾಗೆ ಅವರ ಬಗ್ಗೆ ಆಸಕ್ತಿ ತಳೆದ ಮಕ್ಕಳು ಅವರ ಕೃತಿಗಳನ್ನು ಓದಲು

ಪ್ರಯತ್ನಿಸಿದರು. ಎರಡನೆಯ ಮಗ ಸಾಹಿತ್ಯದಲ್ಲಿ ಹೆಚ್ಚು ಆಸಕ್ತಿ ಬೆಳೆಸಿಕೊಂಡ. ಮಾಸ್ತಿಯವರ ಎಲ್ಲ ಕೃತಿಗಳೂ ಅವನಿಗೆ ಬಹುಬೇಗ ಪ್ರಿಯವೆನಿಸಿದ್ದವು. ಸಣ್ಣಕತೆಗಳನ್ನು ಓದಿ ''ತಾತ, ಇವತ್ತು ಈ ಕತೆ ಓದಿದೆ'' ಅಂದರೆ, ಅವನಿಗೆ ಎರಡು ಚಾಕಲೇಟ್‌ನ ಬೋನಸ್ ಮತ್ತು ಕತೆ ಬಗ್ಗೆ ಅವನ ಬಾಲಭಾಷೆಯಲ್ಲೇ ಚರ್ಚೆ. ನನಗವರು 'ಅಪ್ಪಾಜಿ'. ಅವರಿಗೆ ನನ್ನ ಹೆಸರಿನ ಮಗಳೊಬ್ಬರಿದ್ದರು. ನನ್ನ ಬಗೆಗಿನ ಪ್ರೀತಿಗೆ ಅದೂ ಒಂದು ಕಾರಣ.

ಮಾಸ್ತಿ ಬಹಳಷ್ಟು ಕಾರಣಗಳಿಗೆ ನನ್ನೊಳಗೆ, ನನ್ನ ಬದುಕಿನೊಳಗೆ ಮುಖ್ಯವಾಗಿಬಿಟ್ಟರು. ಗಾಂಧಿ ಬಜಾರಿನ ಟ್ಯಾಕ್ಸಿ ಸ್ಟ್ಯಾಂಡಿನಲ್ಲೊಂದು ಆಗಬಾರದ ಘಟನೆ ನಡೆದು ಹೋಯಿತು. ಲೋಕದ ಯಾವ ಹೆಣ್ಣುಮಗುವಿಗೂ ಇಂಥ ವಿಷಮ ಘಳಿಗೆ ಎದುರಾಗಬಾರದು. ನಾನು ತುಂಬ ಅಪಮಾನಗೊಂಡಿದ್ದೆ. ಕ್ಲಬ್‌ನಲ್ಲಿದ್ದ ಮಾಸ್ತಿಯವರು ಏನೋ ಗಲಾಟೆ ಎಂದು ತಿಳಿದು ವಿಚಾರಿಸಿದರಂತೆ. ಅಷ್ಟು ಹೊತ್ತಿಗೆ ನಾನು ಆ ಸ್ಥಳದಲ್ಲಿರಲಿಲ್ಲ. ಆದರೆ ಮಾಸ್ತಿ ಅವರಿಗೆ ಆ ಘಟನೆಯ ವಿವರ ಮತ್ತು ಅಲ್ಲಿದ್ದುದು ನಾನು ಎಂಬ ಸಂಗತಿ ಗೊತ್ತಾಗಿತ್ತು. ತುಂಬ ನೊಂದುಕೊಂಡರು. ಮುಂದೆ ನಾನು ಈ ಘಟನೆಯ ಹಿನ್ನೆಲೆಯಲ್ಲಿ ನನ್ನ ಬದುಕಿನ ಬಗ್ಗೆ ಒಂದು ಗಟ್ಟಿಯಾದ ತೀರ್ಮಾನ ತೆಗೆದುಕೊಳ್ಳಲೇಬೇಕಿತ್ತು. ನನ್ನ ಅಂಥ ನಿರ್ಧಾರವನ್ನು ಬೆಂಬಲಿಸಿ ಧೈರ್ಯ ತುಂಬಿದವರಲ್ಲಿ ಮಾಸ್ತಿಯವರ ಪಾತ್ರ ಹಿರಿದು. ಅವರ ಚಿಂತನೆ, ನಡವಳಿಕೆ ಬಲ್ಲವರಿಗೆ ಇಂಥದೊಂದು ನಿರ್ಧಾರವನ್ನು ಬೆಂಬಲಿಸಿದರೆಂದರೆ ಹುಬ್ಬೇರಬಹುದು. ಮಾಸ್ತಿ ಅವರು ಆಂತರ್ಯದಲ್ಲಿ ಕ್ಲಿಷ್ಟಕರ ಸಂದರ್ಭವನ್ನು ಗ್ರಹಿಸಿ, ಸ್ತ್ರೀಪರ ನಿಲುವು ತಾಳುವಷ್ಟು ಸ್ಪಷ್ಟತೆ ಇದ್ದವರು ಎಂಬುದಕ್ಕೆ ನಾನು – ನನ್ನ ಬದುಕು ಸಾಕ್ಷಿ. ವೈಯಕ್ತಿಕ ಒಂದು ಹಂತದಲ್ಲಿ ಸಮಸ್ಯೆಯೊಂದ ನಿಭಾಯಿಸಲಾಗದೆ ಕೈ ಚೆಲ್ಲಿದ್ದೆ. ಅದು ನನ್ನ ಮಕ್ಕಳಿಗೆ ಫೀಸು ತುಂಬಿ ಮಾಧ್ಯಮಿಕ ಶಾಲೆಗೆ ಸೇರಿಸುವುದಾಗಿತ್ತು. ಏನೇನೂ ಆರ್ಥಿಕಾನುಕೂಲವಿಲ್ಲ. ರಿಕ್ತಹಸ್ತಳಾಗಿ ಅಕ್ಷರಶಃ ಬೀದಿಗೆ ಬಂದವಳಾಗಿದ್ದೆ. ಮಾಸ್ತಿಯವರಿಗೆ ಈ ವಿಷಯ ತಿಳಿಯಿತು. ಮನೆಗೆ ಕರೆಸಿಕೊಂಡರು. ಒಂದಿಷ್ಟು ಹಣ ಕೊಡುತ್ತೇನೆ ಫೀಸು ತುಂಬಿಬಿಡು ಅಂದರು. ಮಾಸ್ತಿಯವರು ಹಾಗೆ ಅನೇಕರಿಗೆ ಧನಸಹಾಯ ಮಾಡುತ್ತಿದ್ದುದು ಗೊತ್ತಿತ್ತು. ಆದರೂ ನಾನು ಆ ಹಣ ಸ್ವೀಕರಿಸಲಿಲ್ಲ. ಅವರೆದುರು ತಲೆ ತಗ್ಗಿಸಿ ಸುಮ್ಮನೆ ನಿಂತೆ. ಅವರು ಜೋರಾಗಿ ನಕ್ಕರು. ನಗುತ್ತಲೇ ''ತಾಯೀ ಇದು ನಾನು ಕೊಡ್ತಿಲ್ಲ, ನಿನ್ನದೇ ಹಣ'' ಅಂದರು.

ಆಗ ನಾನು ಬೆಂಗಳೂರು ಪ್ರೆಸ್ ಮಾಲೀಕತ್ವದ 'ಮಲ್ಲಿಗೆ' ಮಾಸಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದೆ. ಮಾಸ್ತಿಯವರ ಗಯಟೆ ಕುರಿತ ಬರಹಗಳು, ಮತ್ತಿತರ ಪುಸ್ತಕಗಳು ಬೆಂಗಳೂರು ಪ್ರೆಸ್‌ನಲ್ಲಿ ಮುದ್ರಣವಾಗುತ್ತಿದ್ದವು. ಮಾಸ್ತಿ ಪ್ರೆಸ್‌ಗೆ ಬರುತ್ತಿದ್ದರು. ಆಗ ಮಲ್ಲಿಗೆಯ ಪ್ರಧಾನ ಸಂಪಾದಕರಾಗಿದ್ದ ಶ್ರೀ ತಾಂಡವೇಶ್ವರ ಅವರೊಂದಿಗೆ ಅವರು ಸಂಪಾದಿಸಿ ತರುತ್ತಿದ್ದ 'ಇಂಟಿಗ್ರೇಟೆಡ್ ಮ್ಯಾನೇಜ್‌ಮೆಂಟ್' ಪತ್ರಿಕೆ ಪ್ರಪಂಚದ ಆಗುಹೋಗು ಸಹ ಅವರಿಬ್ಬರ ಚರ್ಚೆ... ವಿಷಯಗಳು. ಅಂಥ ಒಂದು ಭೇಟಿಯ ಸಂದರ್ಭ... ಶ್ರೀ ತಾಂಡವೇಶ್ವರರ ಬಳಿ ನನ್ನ ಸಮಸ್ಯೆ ಕು... ವಿವರಿಸಿದ್ದರಂತೆ ಮಾಸ್ತಿ. ಇಬ್ಬರೂ ಯೋಚಿಸಿ ... ನಾನು ಆ ಪತ್ರಿಕೆಗಾಗಿ ತುಂಬ ಓಡಾಡಿ ತ... ಜಾಹಿರಾತುಗಳಿಗೆ ಶೇಕಡ ೨೫ರಂತೆ ಕಮಿಷನ್ ... ಹಾಕಿ ಸುಮಾರು ೮೦೦ ರೂಪಾಯಿಗಳನ್ನು ನ... ಕೊಡಲು ತೀರ್ಮಾನಿಸಿದರಂತೆ, ಶ್ರೀ ತಾಂಡವೇಶ್ವ... ಕೂಡಲೇ ಹಣ ತರಿಸಿ ''ಆಕೆ ರಜೆಯಲ್ಲಿದ್ದಾರೆ, ಹ... ತುರ್ತು ಇರುತ್ತೆ. ನೀವೇ ಈ ಹಣ ಅವರಿಗೆ ಕೊಟ್ಟುಬಿ... ಅಂದರಂತೆ. ಆ ಹಣವನ್ನೇ ಈಗ ನನ್ನ ಉ... ಹಾಕಿದ್ದರು! ಹಾಗೆ ನನ್ನ ಹಕ್ಕಿನ ಹಣ ಕೊಡಿಸಿ, ... ಸ್ವಾಭಿಮಾನವನ್ನು ಉಳಿಸಿ, ಮಕ್ಕಳ ವಿದ್ಯಾಭ್ಯಾಸ ಸುಸ... ವಾಗುವಂತೆ ಮಾಡಿದ್ದರು ಮಾಸ್ತಿ. ನನ್ನ ಮ... ಅವರೊಬ್ಬ ದೇವತಾಮನುಷ್ಯ, ಅಪರೂಪ... ಮಾನವೀಯತೆ ಮೆರೆದ ಚೇತನ.

'ಮಲ್ಲಿಗೆ'ಗಾಗಿ ಒಮ್ಮೆ ನಾನು, ಶ್ರೀ ತಾಂಡವೇಶ್ವ... ಸೇರಿಯೇ ಮಾಸ್ತಿಯವರ ಸಂದರ್ಶನ ಮಾಡಿದ... ಸಾಕಷ್ಟು ಶ್ರಮವಹಿಸಿ ಸಂದರ್ಶನ ಬರಹ ಸಿದ್ಧಮಾಡಿ... ನನ್ನದಿನ್ನೂ ಹಳೆಯ ಕಾಲದ ಶೈಲಿ. ಆಧುನಿಕ ಶ... ತಿಳಿಯದು. ''ಹದುಳವೇ ಎಂದಾದರಿಸಿ...'' ಅ... ಪ್ರಾರಂಭಿಸಿ ದೊಡ್ಡ ದೊಡ್ಡ ಶಬ್ದಗಳು, ಸಂಯು... ವಾಕ್ಯಗಳೇ (ಕಾಂಪೌಂಡ್ ಸೆಂಟೆನ್ಸ್) ತುಂಬಿ ಹೋ... ಸಂದರ್ಶನ ಬರಹ.

ನಾಕ್ಯ ಚಿಕ್ಕದಿರಬೇಕು. ಸರಳವಾಗಿ, ನೇರವಾಗಿ ಬೇಕು ಅಂತೆಲ್ಲ ಅನಂತರ ಕಲಿಸಿದರು. 'ಇಲ್ಲದಿಲ್ಲ', ಡದು ಎಂದು ಹೇಳುವುದರಲ್ಲಿ ತಪ್ಪಿಲ್ಲ' 'ಸುಂದರ ವೆಯೆಂದೇ' ಹೇಳಬಹುದೆನಿಸುತ್ತದೆ. ಇಂಥ, ೋಗಗಳನ್ನು 'ಇದೆ' 'ಕೂಡದು' 'ಸುಂದರವಾಗಿದೆ' ನೇರವಾಗಿ ಹೇಳು, ಸಂದೇಹವೇಕೆ ಅಂತ ರು. ಅಲ್ಲಿಂದಾಚೆಗೆ ನನ್ನ ಶೈಲಿಯಲ್ಲಿ ಬದಲಾವಣೆ ತಿಕೊಳ್ಳಲು ಪ್ರಯತ್ನಿಸಿದೆ.

ನಾನು ಉದಯವಾಣಿ ದೀಪಾವಳಿ ಸಂಚಿಕೆಗಾಗಿ ಂದ ತಪ್ಪದೆ ಕವಿತೆಗಳನ್ನು ಪಡೆದುಕೊಳ್ಳುತ್ತಿದ್ದೆ. ೋಡೇಲಿಯಾ' ಮೊದಲಾದವನ್ನು ರಚಿಸಿದ್ದು ನನ್ನ ರಿಕೆಯ ಮೇರೆಗೇ. ಅವರ ಮನೆಯಲ್ಲೇ ಈ ನ ಗಿಡವಿತ್ತು, ಆ ಹೂವಿನ ಗಿಡ, ಹೂವು ತೋರಿಸಿ ಬರೆದ ಪದ್ಯದ ಸಾಲುಗಳನ್ನು ವಿವರಿಸಿದ್ದರು. ಪದ್ಯ ಾಗೆಲ್ಲ ಪುಟ್ಟದೊಂದು ಡೈರಿ ನನ್ನ ಮುಂದಿಟ್ಟು ಲ್ಲಿ ಒಂದು ಕವಿತೆ ಆರಿಸಿಕೊ, ಅನ್ನುತ್ತಿದ್ದರು. ದ ಪದ್ಯವನ್ನು ಅದರಿಂದ ಕಾಪಿ ಮಾಡಿಕೊಳ್ಳುತ್ತಿದ್ದೆ.

ಂದು ವರ್ಷ ನವೋದಯದ ಕತೆಗಾರರ ಳನ್ನೇ ವಿಶೇಷಾಂಕ ಮಾಡಿದೆವು. ಕತೆ ಬರೆಯದೇ ಗಳೇ ಕಳೆದಿದ್ದ ರಂ. ಶ್ರೀ. ಮುಗಳಿ, ಎಂ. ವಿ. ಸೀ., ಮೊದಲಾಗಿ ಹಲವರು ಕತೆ ಬರೆದರು. ್ತಿಯವರನ್ನೂ ಕೇಳಿದಾಗ, ''ಈಗ, ಈಗ ಕತೆ ಯೊ ? ನನಗೀಗ ತೊಂಬತ್ತಾಯ್ತು ಗೊತ್ತೇ '' ಅಂತ ಗದರಿದ್ದರು. ನಾನು ಹಟ ಬಿಡಲಿಲ್ಲ.

'ನೀವು ಕತೆ ಕೊಡದಿದ್ದರೆ ನಿಮ್ಮ ಮನೆ ಮುಂದೆ ಉಪವಾಸ ಸತ್ಯಾಗ್ರಹ ಮಾಡ್ತೀನಿ'' ಅಂತ ಕೆ ಹಾಕಿ ಬಂದಿದ್ದೆ. ಅವರು ಕತೆ ಕೊಡುತ್ತಾರೆಂಬ ಕೆಯೇನೂ ಇರಲಿಲ್ಲ. ಹದಿನೈದು-ಇಪ್ಪತ್ತು ದಿನ ರಬಹುದು. ಮಾಸ್ತಿ ಮನೆಗೇ ಬಂದರು. ಇರಲಿಲ್ಲ.

'ನೋಡಿ, ಆ ತಾಯಿ ಉಪವಾಸ ಕೂರೋದು . ಕತೆ ಬೇಕಂತೆ, ಬರೆದಿಟ್ಟಿದೀನಿ. ಬಂದು ಒಂದು ಆರಿಸಿಕೊಳ್ಳಲು ಹೇಳಿಬಿಡಿ'' ಅಂದು ಹೋಗಿದ್ದರು.

ಅವರ ಮನೆಗೆ ಓಡಿ ಹೋದೆ. ೧೦-೧೨ ಕತೆಗಳು ಾಗಿದ್ದವು. ಹಸ್ತಪ್ರತಿ ಕೈಲಿಟ್ಟು, ''ಓದು, ಆರಿಸಿಕೊ'' ಎದುರಿಗೇ ಕೂತರು. ತಿರುವಿ ಹಾಕಿದೆ, ೆದುರಿಗೆ ಆಯ್ಕೆ ಕಷ್ಟವಾಯಿತು. ''ಅಪ್ಪಾಜಿ, ನಿಮಗೆ ಇಷ್ಟವಾದ ಕತೆ ಕೊಡಿ'' ಅಂದೆ. ''ಹತ್ತು ಮಕ್ಕಳಲ್ಲಿ ವುದು ಇಷ್ಟ ಅಂತ ಇರುತ್ತಾ? ಹೆತ್ತವರಿಗೆ ಎಲ್ಲ ಮೇಲೂ ಒಂದೇ ಥರ ಪ್ರೀತಿ ಇರುತ್ತೆ'' ತ್ತಲೇ ಒಂದು ಕತೆ ಆಯ್ದುಕೊಟ್ಟರು. ಅದು ಗಾ ಸಾಬಿ'ಯ ಕತೆ! ಇನ್ನುಳಿದ ಕತೆಗಳು ಕನ್ನಡ ಮಲ್ಲಿಗೆಯಲ್ಲಿ ಪ್ರಕಟವಾದವು. ಡಾ॥ ತಮೂರ್ತಿಯವರ ಮುನ್ನುಡಿಯೊಂದಿಗೆ ಆ ಕತೆಗಳ ಲನವೂ ಹೊರಬಂತು. ಮಾಸ್ತಿಯವರ ಇಳಿ ಸ್ಸಿನಲ್ಲಿ ಮತ್ತೆ ಕತೆ ಬರೆಸಿದ ಹೆಮ್ಮೆ ನನ್ನದು.

ಮುಖ್ಯವಾಗಿ ಈ ಕತೆಗಳೆಲ್ಲ ತುಂಬ ಭಿನ್ನವಾಗಿದ್ದವು. ರಿಗಿನ ಅವರೆಲ್ಲ ಕತೆಗಳಿಗಿಂತ ಬೇರೆಯಾದ ಾಧರ್ಮವದು. 'ಮಾಯಣ್ಣನ ಕನ್ನಡಿ'ಯ ಟಿಸಿ, ಇನ್ನಿತರ ಕತೆಗಳಲ್ಲಿಯ ಸ್ತ್ರೀ-ಪುರುಷ ಸಂಬಂಧ, ನ ಕ್ರೌರ್ಯ, ಅದನ್ನು ಎದುರಿಸುವ ಹೆಂಗಸಿನ




ದಿಟ್ಟತನ ಅವರ ಉದಾರವಾದಿ ನಿಲುವಿಗಿಂತ ಬೇರೆಯಾಗಿ ಮೂಡಿ ಬಂದಿದ್ದವು. ಇಂಥ ಆಲೋಚನೆ ಹಿಂದೆ 'ಯಶೋಧರಾ' ನಾಟಕದಲ್ಲೂ ಕಂಡಿತ್ತು. ಅವರ ಯಶೋಧರೆ ಇವತ್ತಿಗೂ ಮನಸ್ಸಿನಲ್ಲಿ ಉಳಿದುಬಿಟ್ಟಿದ್ದಾಳೆ.

ಮಾಸ್ತಿಯವರ ಶ್ರೀರಾಮನನ್ನು ಕುರಿತ ಕಾವ್ಯದ ಪಠಣವಾಗುತ್ತಿತ್ತು. ಒಂದೊಂದು ಮುಕ್ತಾಯದ ಘಟ್ಟದಲ್ಲೂ ನನಗೆ 'ಬಾಗಿನ' ಇರುತ್ತಿತ್ತು. ತೆಂಗಿನಕಾಯಿ, ರವಿಕೆಕಣ ಇತ್ಯಾದಿ. ಊಟದ ಆಹ್ವಾನವೂ... ಅದನ್ನು ತಪ್ಪಿಸಿಕೊಳ್ಳುತ್ತಿದ್ದೆ.

''ತಾಯಿಗೆ, ಸಂಪ್ರದಾಯದ ಆಚರಣೆ ಇಷ್ಟವಾಗೋಲ್ಲ ಅದಕ್ಕೇ ಹೀಗೆ ತೆಂಗಿನಕಾಯಿ ಮಾತ್ರ ತಗೋತಾಳೆ ಅಡಿಗೆಗಾಗುತ್ತೆ ಅಲ್ವೇ'' ಎಂದು ನಕ್ಕು ಬಿಡುತ್ತಿದ್ದರು. ಎಂದೂ ತಮ್ಮ ಅಭಿಪ್ರಾಯ ಹೇರಲಿಲ್ಲ, ಆ ಕುರಿತು ಚರ್ಚೆಮಾಡಿ ಒಪ್ಪಿಸಲೂ ಇಲ್ಲ.

* * *

ಹನುಮಂತನಗರದ ಗುಡ್ಡಕ್ಕೆ ವಾಕಿಂಗ್ ಬರುತ್ತಿದ್ದರು. ಅಲ್ಲಿ ಮಕ್ಕಳೊಂದಿಗೆ ಆಟ; ಬೆಟ್ಟದ ಮೇಲೆ ಬಿ. ಕೆ. ಎಸ್. ವರ್ಮನೊಂದಿಗೆ ತಿರುಗಾಟ. ಒಮ್ಮೆ ಬೆಟ್ಟವೇರುವಾಗ ಅವರ ಕಾಲಿಗೆ ಒಂದು ಹೂವು ಸಿಕ್ಕಿಕೊಂಡುಬಿಟ್ಟಿತು. ತುಳಿದೆನೇ ಎಂಬ ಸಂಕಟ. ನಿಧಾನವಾಗಿ ಆ ಹೂವನ್ನೆತ್ತಿ ಮಾತನಾಡಿಸತೊಡಗಿದರು. ಗಾಯಗೊಂಡ ಪಾರಿವಾಳವನ್ನು ಎತ್ತಿಕೊಂಡು ಆರೈಕೆ ಮಾಡಿದ ಹಾಗೆ ಹೂವನ್ನು ಸವರಿದರು. ಮಾತನಾಡಿಸಿದರು. ಎತ್ತರದ ಬಂಡೆಯೊಂದರ ಮೇಲಿಟ್ಟು ''ಮತ್ತೆ ಕೆಳಗೆ ಬೀಳಬೇಡ, ಮತ್ತಾರ ಕಾಲಿಗೂ ಸಿಗಬೇಡ'' ಎಂದರು. ಆ ಕ್ಷಣಕ್ಕೆ ಆ ಹೂವು ಜೀವಂತವಾಗಿತ್ತು; ಪಿಸುಗುಟ್ಟಿಯೂ ಇರಬೇಕು!

* * *

ಕಣಗಾಲ್ ಪುಟ್ಟಣ್ಣನವರ ಚಿತ್ರಗಳ ಮೊದಲ ಪ್ರದರ್ಶನಕ್ಕೆ ಸಾಹಿತಿಗಳನ್ನು ಕರೆಯುವುದು ಪರಿಪಾಠ. ನನಗೆ ಮಾಸ್ತಿ, ಅವರ ಕುಟುಂಬದ ಸದಸ್ಯರನ್ನು ಕರೆದೊಯ್ಯುವ ಕೆಲಸ. ಇದನ್ನು ತುಂಬ ಸಂತೋಷದಿಂದ ಮಾಡುತ್ತಿದ್ದೆ. 'ಉಪಾಸನೆ' ಚಿತ್ರ ನೋಡಿ ಅಲ್ಲಿಯ ಸಂಗೀತ, ವರ್ಣಗಳ ಬಳಕೆ ಕುರಿತು ಮಾಸ್ತಿ ವಿಮರ್ಶಿಸುತ್ತ ಮಾತನಾಡಿದಾಗ ಪುಟ್ಟಣ್ಣ ಸಮರ್ಪಕ ಉತ್ತರ ಕೊಡಲಾಗದೆ ಬೆರಗಾಗಿ ನಿಂತುಬಿಟ್ಟರು. ಈ ಸಂದರ್ಭದಲ್ಲೇ ಚಿತ್ರವೀಕ್ಷಣೆಗೆ ಬಂದ ಜಿ. ಪಿ. ರಾಜರತ್ನಂ-ಬೀchi ಇಬ್ಬರನ್ನೂ ಪಕ್ಕದಲ್ಲಿ ಕೂಡಿಸಿಬಿಟ್ಟಿದ್ದೆ. ಚಿತ್ರ ತೆಗೆಸಿ ಒಳ್ಳೆಯ ಶೀರ್ಷಿಕೆ ಕೊಟ್ಟು ಉದಯವಾಣಿಯಲ್ಲಿ ಪ್ರಕಟಿಸಿದ್ದೆವು. ಇದು 'ಈ ತಾಯಿಗೆ ಮಾತ್ರ ಸಾಧ್ಯ ನೋಡು' ಅಂತ ಬಾಯಿತುಂಬಾ ನಕ್ಕಿದ್ದರು. ರಾಜರತ್ನಂ-ಬೀchi ಒಬ್ಬರಿಗೊಬ್ಬರು ಬೈದಾಡಿಕೊಂಡು ಬರಹದ ಮೂಲಕ ಕುಸ್ತಿ ಮಾಡುತ್ತಿದ್ದ ದಿನಗಳವು. ಅವರ ರಾಜಿಗೆ ಹೀಗೆ ನಾನು ನಿಮಿತ್ತವಾಗಿದ್ದೆ. ಅದಕ್ಕೂ ಹಿಂದೆ ರಾಜರತ್ನಂ ಬಗ್ಗೆ ಟೀಕೆ ಮಾಡಿ ಅವರ ಕೋಪಕ್ಕೆ ಗುರಿಯಾಗಿದ್ದೆ. ಆಗ ಮಾಸ್ತಿ ರಾಜರತ್ನಂಗೆ ತಿಳಿಹೇಳಿ ತಿಳಿಯಾಗಿಸಿದ್ದರು. ಮುಂದೆ ರಾಜರತ್ನಂ ಸಹ ನನ್ನ ಪರಮಾಪ್ತರಾಗಿಬಿಟ್ಟರು. ಇಂಥ ಅದೆಷ್ಟೋ ಸಂದರ್ಭಗಳಲ್ಲಿ ಮಾಸ್ತಿ ನೆರವಾದರು.

ಸಂಗೀತ, ನೃತ್ಯ, ಚಿತ್ರಕಲೆ, ನಾಟಕ ಹೀಗೆ ಎಲ್ಲ ಕಲೆಗಳೂ ಅವರಿಗೆ ಪ್ರಿಯವಾಗಿದ್ದವು. ಅವುಗಳ ಬಗ್ಗೆ ಮಾತನಾಡುವಾಗ ಅಲ್ಲಿರುವ ಗುಣಾತ್ಮಕತೆಗೇ ಪ್ರಧಾನ ಒತ್ತು. ಹಾಗೆಯೇ ದೋಷಗಳನ್ನೂ ಗುರುತಿಸಿ ನಿಧಾನವಾಗಿ ಹೇಳಿ ಒಪ್ಪಿಸುವುದು ಅವರ ದೊಡ್ಡ ಗುಣವಾಗಿತ್ತು.

ಮಾಸ್ತಿಯವರ ವಿಮರ್ಶಾ ಬರಹವನ್ನು ಆಧರಿಸಿ ಕೆಲವರು ಸ್ತ್ರೀವಿರೋಧಿ ಎಂಬ ತಪ್ಪು ತೀರ್ಮಾನಗಳಿಗೆ ಬಂದದ್ದುಂಟು. ಆದರೆ ಅವರ ಸ್ತ್ರೀಪರ ನಿಲುವು ಅವರ ನಡವಳಿಕೆ, ನಿರ್ಧಾರಗಳಲ್ಲಿತ್ತು. ಅವೆಲ್ಲ ಹತ್ತಿರದಿಂದ ಅನುಭವಿಸಿ ಪಡೆದುಕೊಂಡವರು ಮಾತ್ರ ಬಲ್ಲರು.

* * *

ಮಾಸ್ತಿಯವರ ಮನೆಯೆದುರು ಬೀದಿ ನಾಟಕ ಮಾಡಿದೆವು. ಸುಮಾರು ಒಂದು ಗಂಟೆ ತಾವೂ ನಿಂತೇ ನಾಟಕ ನೋಡಿದರು. ಅವರಿಗೆ ಬೀದಿ ನಾಟಕ ಪ್ರಕಾರ ತುಂಬ ಮೆಚ್ಚಾಗಲಿಲ್ಲ, ಆದರೆ ನಮಗೆ ಹಾಗೆ ಹೇಳಿ ಬೇಸರ ತರಲಿಲ್ಲ. ಉತ್ಸಾಹ ತುಂಬಿದರು. ಎಲ್ಲರಿಗೂ ಪಾನಕ, ಕಾಯಿ-ಬೆಲ್ಲ ಹಾಕಿದ ಅವಲಕ್ಕಿ ಕೊಟ್ಟು ಉಪಚರಿಸಿದ್ದರು. ಬಿಸಿಲಲ್ಲಿ ಬಳಲಬೇಡಿ, ಸುಧಾರಿಸಿಕೊಳ್ಳಿ ಎಂದು ಸಲಹೆಗಳನ್ನು ಕೊಟ್ಟರು.

ಬೀದಿ ನಾಟಕ ಕುರಿತು ತಮ್ಮ ಅಭಿಪ್ರಾಯ ಮಾತ್ರ ಹೇಳದೆ ಜಾಣತನ ತೋರಿದ್ದರು. ಅದೇ ಅವರ ವೈಶಿಷ್ಟ್ಯ. ಒಮ್ಮೆ ಅವರ ಮನೆಗೆ ತೆಲುಗಿನ ಹಿರಿಯ ಚಿಂತಕ ಸಂಜೀವ್‌ದೇವ್ ಬಂದರು. ಅವರನ್ನು ಕರೆ ತಂದವರು ಪುಸ್ತಕಮನೆ ಹರಿಹರಪ್ರಿಯ, ಮಾಸ್ತಿಯವರು ಅಂದು ಏನೋ ಪೂಜಾವಿಧಿಯಲ್ಲಿ ತೊಡಗಿದ್ದರು. ಅವರ ಎಂದಿನ ಧಾಟಿಯಲ್ಲಿ ಈ ಅತಿಥಿಯನ್ನು ಆದರಿಸಲಿಲ್ಲ. ತುಂಬ ಕಾಯಿಸಿದರು, ಏಕೊ! ಸಂಜೀವ್ ದೇವ್ ಬಿಡಲಿಲ್ಲ. ನಿಮ್ಮದೊಂದು ಪುಸ್ತಕವನ್ನಾದರೂ ಕೊಡಿ. ನಾನು ಹಾಗೇ ಹೋಗೋದಿಲ್ಲ ಅಂತ ಹಟ ಮಾಡಿ ಅವರ ಕೈಲಿ ಪುಸ್ತಕ ತಗೊಂಡೇ, ಅದೂ ಅವರ ಹಸ್ತಾಕ್ಷರ ಹಾಕಿಸಿಕೊಂಡೇ, ಹೋದರು. ಆದರೆ ಆತನ ಮನಸ್ಸಿನಲ್ಲಿ ಮಾಸ್ತಿ ಬಗ್ಗೆ ಕೊಂಚ ಕಹಿ ಭಾವ ಉಳಿದೇ ಹೋಯಿತು!

ಮಾಸ್ತಿಯವರ ಕೆಲವು ವರ್ತನೆಗಳ ಬಗ್ಗೆ ವಿರೋಧದ ನುಡಿಯಾಡಿದವರನ್ನು ಬಲ್ಲೆ. ಅವರಿಗೆ ಅಂಥದೇನು ಕೆಡುಕು ಕಂಡಿತ್ತೋ!

ಅಕಾಡೆಮಿಗಳಿಗೆ ಸಂಸ್ಕೃತಿ ಮಂತ್ರಿಗಳೇ ಅಧ್ಯಕ್ಷರಾಗಬೇಕೆಂದು ಸರ್ಕಾರದ ನಿಲುವೊಂದು ಹೊರಬಿತ್ತು. ಇದು ಅಕಾಡೆಮಿಗಳ ಸ್ವಾಯತ್ತತೆಯನ್ನು ಕಿತ್ತುಕೊಳ್ಳುವ ಹುನ್ನಾರ ಮತ್ತು ಎಲ್ಲ ಮಂತ್ರಿಗಳಿಗೂ ಸಂಸ್ಕೃತಿ-ಸಾಹಿತ್ಯದ ತಿಳಿವಳಿಕೆ ಇರುತ್ತಾ ಎಂಬುದು ಜಿಜ್ಞಾಸೆ. ಮಿತ್ರರಾದ ಕೆ. ವಿ. ಸುಬ್ಬಣ್ಣ ಈ ವಿಷಯವನ್ನೇ ಕೇಂದ್ರವಾಗಿಟ್ಟುಕೊಂಡು ಅಭಿಪ್ರಾಯ ಸಂಗ್ರಹಿಸಿ ಲೇಖನ ಮಾಡಬಹುದೆಂದು ಕೊಟ್ಟ ಸಲಹೆ ನನಗೂ ಸರಿ ಕಂಡಿತ್ತು. ಧಾರವಾಡ, ಮೈಸೂರು, ಬೆಂಗಳೂರಿನ ಸಾಹಿತಿಗಳು, ಚಿಂತಕರ ಬೆನ್ನು ಬಿದ್ದೆ. ಸಾಕಷ್ಟು ಮಾಹಿತಿ ಸಂಗ್ರಹಿಸಿದೆ. ಹಾಗೆ ಭೇಟಿ ಮಾಡಿದವರಲ್ಲಿ ಜಿ. ಪಿ. ರಾಜರತ್ನಂ, ಮಾಸ್ತಿಯವರೂ ಇದ್ದರು. ರಾಜರತ್ನಂ ಸೊಗಸಾಗಿ ಮಾತಾಡಿದರು. ಎಲ್ಲ ಮುಗಿಸಿ ಬಾಗಿಲಿಗೆ ಬಂದಾಗ ಹಿಂದೆಯೇ ಬಂದು, ''ವಿಜಯಾ, ಈವರೆಗೆ ಮಾತಾಡಿದ್ದೆಲ್ಲ ಆಫ್ ದಿ ರೆಕಾರ್ಡ್'' ಅಂದುಬಿಟ್ಟರು. ಮಾಸ್ತಿಯವರೂ ಹಾಗೇ ಸೊಗಸಾಗಿ ಅಭಿಪ್ರಾಯ ಹೇಳಿದರು. ಒಳ್ಳೇ ಆರ್ಟಿಕಲ್ ಮಾಡ್ತೀನಿ ಅಂತ ಖುಷೀಲಿದ್ದವಳಿಗೆ ''ನಾನು ಹೇಳಿದ್ದೆಲ್ಲ ಕೇಳಿಸಿಕೊಂಡಿದ್ದೀ ಅಷ್ಟೇ. ಅದ್ಯಾವುದೂ ಬರೆಯೋ ಹಾಗಿಲ್ಲ'' ಅಂದು ಉಬ್ಬಿದ ಬೆಲೂನಿಗೊಂದು ಸೂಜಿ ಚುಚ್ಚಿದ್ದರು. ಹೀಗೇಕೆ ಮಾಡ್ತಾರಪ್ಪಾ ಅಂತ ತಲೆ ಕೆಡಿಸಿ ಕೊಂಡೆ. ಈ ವಿಷಯ ಕೇಳಿದ ಅಡಿಗರು ಜೋರಾಗಿ ನಕ್ಕು, ''ಅಯ್ಯೋ ದಡ್ಡೀ, ಆ ಸಂಸ್ಕೃತಿ ಮಂತ್ರಿ ಅಯ್ಯಂಗಾರಿ ಅಲ್ವಾ? ಮಾಸ್ತಿ, ರಾಜರತ್ನಂ ಹಾಗೆ ಹೇಳೊದು ಮತ್ತ್ಯಾಕೆ ಅಂದ್ಕೊಂಡೆ?'' ಅಂದ್ರು...

ನಾನು ಹೀಗೂ ಆಗುತ್ತಾ ಅಂತ ಬಿಟ್ಟ ಬಾಯಿ ಬಿಟ್ಟುಕೊಂಡು ಕೂತೆ!

ಮಾಸ್ತಿಯವರ ಒಂದು ಪುಸ್ತಕ ಮುದ್ರಣವಾಗಬೇಕಿತ್ತು. ''ನೀನು ಮಾಡ್ತೀಯೊ? ನಿನ್ನ ಮುದ್ರಣಾಲಯ ಹೇಗೆ?'' ಅಂದರು. ಖುಷಿಯಾಗಿತ್ತು, ಒಪ್ಪಿಕೊಂಡೆ. ಆದರೂ ಮಾಸ್ತಿ, ಜಿ.ಎಸ್.ಎಸ್. ಅವರನ್ನೂ ಕೇಳಿ, ಅವರು 'ಪರವಾಗಿಲ್ಲ ಕೊಡಿ' ಅಂದಮೇಲೆ ಚಾಮರಾಜಪೇಟೆಯಲ್ಲಿದ್ದ ಇಳಾ ಮುದ್ರಣಾಲಯಕ್ಕೆ ಬಂದರು. ಆಗೆಲ್ಲ ಮೊಳೆ ಜೋಡಿಸುವ ಕ್ರಮವಿತ್ತು. ಕಂಪೋಸಿಂಗ್ ಸೆಕ್ಷನ್‌ಗೂ ಹೋಗಿ ನಾವು ಬಳಸುವ ಲೆಡ್ ಯಾವ ಗಾತ್ರದ್ದು, ಸ್ಪೇಸ್, ಯಾವ ಯಾವ ಸೈಜಿನ ಮೊಳೆಗಳು, ಅಕ್ಷರಗಳು ಬೃಂದಾ... ಹೌದೇ ಅಲ್ಲವೆ ಎಂದೆಲ್ಲ ಪರಿಶೀಲಿಸಿ, ಕೆಲಸಗಾರರ ಜೊತೆಯೂ ಮಾತನಾಡಿ ... ಮುದ್ರಣಾಲಯದಲ್ಲಿದ್ದ ನನ್ನ ಮಗನಿಗೆ ಎಲ್ಲ ವಿವರಿಸಿ ಹೇಳಿ ಹಸ್ತಪ್ರತಿ ಕೊಟ್ಟು ಹೋದ...

ದಟ್ಟವಾದ ನೀಲಿಗೆರೆಗಳಿದ್ದ ಕ್ರೌನ್ ೧/೮ ಸೈಜಿನ, ಹಳೆಯ ಡೈರಿಯ ಹಾಳೆಗ... ತೆಳು ನೀಲಿ ಇಂಕಿನ ಪೆನ್‌ನಲ್ಲಿ ಬರೆದ ಮೋಡಿ ಅಕ್ಷರಗಳು, ನೀಲಿಗೆರೆಗಳ ... ಕಲಸಿಕೊಂಡಂತಿದ್ದ ಅಕ್ಷರ; ಓದಿ ಮೊಳೆ ಜೋಡಿಸುವುದು, ಕರಡು ತಿದ್ದುವುದು ... ತುಂಬ ಕಷ್ಟವಾಯಿತು.

ಒಂದೆರಡು ಪ್ರೂಫ್ ಹೋದಮೇಲೆ ಆಕ್ಷೇಪಗಳು ಪ್ರಾರಂಭವಾದವು. ಅ... ಹಿರಿಯ ಲೇಖಕರಿಗೆ ಮೊಳೆ ಜೋಡಿಸುವ ಕೆಲಸಗಾರರು ಅಕ್ಷರಸ್ಥರೂ ಹೆಚ್ಚು ತಿಳಿ... ಇದ್ದವರೂ ಆಗಿರಲೇಬೇಕೆಂಬ ಹಟವಿರುತ್ತದೆ. ''ತಿಳಿವಳಿಕೆ ಇದ್ದು, ಸಾ... ಬಲ್ಲವರಾದರೆ ಈ ಮೊಳೆ ಜೋಡಿಸುವ ಕೆಲಸಕ್ಕೇಕೆ ಬರುತ್ತಾರೆ; ಇನ್ನೂ ಉತ್ತಮ ಕೆ... ಸಿಗೋಲ್ಲವಾ?'' ಎಂದರೆ ಒಪ್ಪುವುದಿಲ್ಲ. ಇಂಥ ಹಟದ ಕಾರಣದಿಂದ... ಮಾಸ್ತಿಯವರಿಗೂ ನಮಗೂ ತಿಕ್ಕಾಟ ಪ್ರಾರಂಭವಾಯ್ತು. ಅವರ ನಿರೀಕ್ಷೆಯ... ತಪ್ಪುಗಳೇ ಇಲ್ಲದೆ ಪ್ರೂಫ್ ಕೊಡಲು ಆಗಲೇ ಇಲ್ಲ. ಕರಡು ತಿದ್ದುವವರಿಗೂ ಅ... ಮೋಡಿ ಅಕ್ಷರ, ಅಂದಾಜು ಮಾಡಲೂ ಬರದ ಹಾಗೆ ಸಂಸ್ಕೃತ ಶ್ಲೋಕಗಳು ಇದ್ದು... ಇನ್ನೂ ಕಷ್ಟವೇ ಆಯಿತು. ಮಾಸ್ತಿಯವರ ಅಳಿಯಂದಿರೂ ಕೊಂಚ ಪಿರಿ... ಮಾಡಿದರು. ಕೆಲವು ಆಕ್ಷೇಪಗಳು ನಮಗೂ ಸಹನೀಯವಾಗಲಿಲ್ಲ.

ನನಗೂ ನನ್ನ ಮಕ್ಕಳನ್ನು, ಮುದ್ರಣಾಲಯವನ್ನು ಯಾರಾದರೂ ಟೀಕಿಸಿ... ವಿಪರೀತ ಸಿಟ್ಟು ಬರುತ್ತಿತ್ತು. ಆಕ್ಷೇಪಿಸಿದವರು ಮಾಸ್ತಿಯವರಾಗದೆ ಇನ್ನಾರಾದ... ಆಗಿದ್ದರೆ ದೊಡ್ಡ ಜಗಳವೇ ಆಗಿಬಿಡುತ್ತಿತ್ತೇನೊ.

ಮಾಸ್ತಿಯವರಿಗೆ ವಿನಯದಿಂದಲೇ ಪತ್ರ ಬರೆದು ಸಮಸ್ಯೆ ಕುರಿತು ವಿವರಿಸಿ... ಮತ್ತು ಅವರ ಅಳಿಯಂದಿರ ಬಗ್ಗೆ ಕೊಂಚ ಕಟುವಾಗೇ ಬರೆದೆನೇನೊ! ಹಸ್ತ... ಹಿಂತಿರುಗಿಸಿಬಿಟ್ಟೆ. ಮಾಸ್ತಿ ಅವರಿಗೆ ಅದು ಸರಿ ಬರಲಿಲ್ಲ. ಸಿಟ್ಟಿನಿಂದಲೇ ಪತ್ರ ಬರೆ... ಅದುವರೆಗೆ ಆಗಿದ್ದ ಕೆಲಸಕ್ಕೆ ಅವರಿಗೆ ಸರಿ ಕಂಡ ಮೊತ್ತ ಕಳಿಸಿದರು. ಪತ್ರದ ಒಂ... ಸಾಲು ನನ್ನನ್ನು ಕೆರಳಿಸಿತ್ತು. ನಾನಾದರೂ ತೆಪ್ಪಗಿರಲಿಲ್ಲ. ಆ ಹಣವನ್ನು ಅಬಲಾಶ್ರ... ಕಳಿಸಿ, ರಸೀತಿ ಮಾಸ್ತಿ ಅವರ ಹೆಸರಿಗೇ ಬರೆಸಿ, ಅದನ್ನು ಮಾಸ್ತಿಯವರಿಗೇ ಕಳಿಸಿಬಿಟ್ಟೆ...

ಈಗಲೂ ನನ್ನದು ಉದ್ಧಟತನ ಅನ್ನಿಸುತ್ತದೆ. ಆದರೆ ಅಂಥ ಧಾಷ್ಟ್ಯ... ತೋರಿಸಿಯಾಗಿತ್ತಲ್ಲ!

ಮಾಸ್ತಿಯವರ 'ಒಂದು ಹಳೆಯ ಕತೆ'ಯನ್ನು ಕೆ. ಎಂ. ಶಂಕರಪ್ಪ ಚಲನಚಿತ್ರ ಮಾಡ... ಬಯಸಿದರು. ಮಾಸ್ತಿಯವರ ಬಳಿ ಕರೆದೊಯ್ದಾಗ ನೂರು ರೂಪಾಯಿ ಗೌರವ... ಪಡೆದು ಅನುಮತಿ ಪತ್ರ ಕೊಟ್ಟರು. ''ತಾಯಿ ಹೇಳಿದ ಮೇಲೆ ಬೇರೇನೂ ಕೇಳೋ... ಮಾಡಿಕೊಳ್ಳಿ'' ಅಂತ ಶಂಕರಪ್ಪನವರಿಗೆ ಹೇಳಿದರು. ತುಂಬ ಒಳ್ಳೆಯ ಚಿತ್ರ... ಸಿದ್ಧಪಡಿಸಿದ್ದ ಶಂಕರಪ್ಪನವರಿಗೆ ಆ ಪಾತ್ರ ರಾಜಕುಮಾರ್ ಅವರೇ ಮಾಡಬೇಕೆಂಬ ಆಸೆ... ಇತ್ತು. ಆ ದಿನಗಳಲ್ಲಿ ಅದೇನೂ ಸುಲಭದ ಕಾರ್ಯವಾಗಿರಲಿಲ್ಲ. ಚಿತ್ರ ಆಗಲೇ ಇ... ನೀನು ನನ್ನ 'ನಿಜಗಲ್ಲಿನ ರಾಣಿ'ಯನ್ನು ಚಲನಚಿತ್ರ ಮಾಡಿಸು ಎನ್ನುತ್ತಿದ್ದರು ಮಾ... ನಾನೇನೊ ಚಿತ್ರ ನಿರ್ಮಾಣ ಮಾಡಿಸುವಷ್ಟು ಸಮರ್ಥೆ ಅಂದುಕೊಂಡಿದ್ದರೇನ... ಆದರೂ ಒಂದು ಸಂದರ್ಭದಲ್ಲಿ ಎಸ್. ವಿ. ರಾಜೇಂದ್ರಸಿಂಗ್ ಬಾಬು ಅವರಿಗೆ ಆ ಮಾ... ಹೇಳಿದ್ದೆ. ಅವರೂ ಗಂಭೀರವಾಗಿ ಪ್ರಯತ್ನಿಸಿದರು. ತಾಳಿಕೋಟೆ, ನಿಜಗಲ್ಲಿನ ರಾ... ಎರಡನ್ನು ಚಿತ್ರಿಸುವ ಅಪೇಕ್ಷೆ ಅವರಿಗಿತ್ತು. ಮಾಸ್ತಿಯವರ ಕೃತಿಗಳ ಹಕ್ಕುದಾರರಾದ ಅ... ಮೊಮ್ಮಗಳು ವಸಂತಶ್ರೀ ಅವರೂ ಸಹಕರಿಸಿದರು. ಆದರೂ ಆ ಕೆ... ನಿಂತೇಹೋಯಿತು. ಮುಂದೆಂದಾದರೂ ಆಗಬಹುದು!

ಜ್ಞಾನಪೀಠ ಪ್ರಶಸ್ತಿ ಬಂದಾಗ ಅವರಿಗೆ ಸಂತೋಷವಿತ್ತು. ಲಂಕೇಶರು ಅ... ಕತೆಗಳನ್ನು 'ಸೌತೇಕಾಯಿ ಕತೆಗಳು' ಅಂದಾಗ, 'ಚಿಕವೀರ ರಾಜೇಂದ್ರ' ವಿವಾದ ತು... ಬೇಸರ ತರಿಸಿತ್ತು. ಎಲ್ಲ ಸಂಕೀರ್ಣತೆಯ ಜತೆಗೂ ಧ್ಯಾನ ಸ್ಥಿತಿಯ... ಸಂಪ್ರದಾಯವಾದಿಯ ಹಾಗೆ ನಡೆ-ನುಡಿ, ಆಗಾಗ ಬರಹದಲ್ಲಿಯೂ ಕಾಣಿಸಿಕೊಂಡ... ಅದನ್ನೆಲ್ಲ ಮೀರಿದ ಮಾನವೀಯತೆ ಮೆರೆದ ದೊಡ್ಡ ಜೀವ ಅದು. ಟೀಕೆ ಟಿಪ್ಪಣಿಗಳ ಅ... ಮಗುವಿನಂಥ ಮನಸ್ಸಿದ್ದ ಆ ಚೈತನ್ಯಕ್ಕೆ ನಮ್ಮ ನಮಸ್ಕಾರಗಳಿರಲಿ.

**ಡಾ|| ವಿಜಯಾ**
ಇಳಾ ಪ್ರಿಂಟರ್ಸ್, ನಂ. ೩೬, ೪೦ ಅಡಿ ರಸ್ತೆ, ರಾಘವನಗರ,
ನ್ಯೂ ಟಿಂಬರ್ ಯಾರ್ಡ್ ಬಡಾವಣೆ, ಬೆಂಗಳೂರು - ೫೬೦ ೦೨೬

ಶಾಲವಾದ ಪಾರ್ಕಿನ ಹುಲ್ಲುಹಾಸಿನ ಮೇಲೆ ಉದ್ದಕ್ಕೆ ಬಿದ್ದ ಬೀಸಣಿಕೆಯಂತಾ
ಎಲೆಗಳನ್ನು ಹೊಂದಿದ್ದ ಫರ್‌ಮರದ ನೆರಳಲ್ಲಿ ಕುಳಿತ ಅವನ ತೆಳ್ಳನೆಯ
ಮೈಗೆ ಮಾಸಿದ ಹಾಗೂ ಮುದುರಿದ ಕೆಂಪು ಟೀ ಶರ್ಟ್ ಅಂಟಿಕೊಂಡಿತ್ತು.
ಬಣ್ಣವಾಗಿದ್ದರೂ ಅಲ್ಲಲ್ಲಿ ಬಿಳಿ ತೇಲಿದ ಜೀನ್ಸ್ ಪ್ಯಾಂಟ್ ಅವನ ಕಾಲುಗಳಗುಂಟ
ದ್ದಿತ್ತು. ಕೆದರಿದ ಕೂದಲುಗಳಲ್ಲಿ ಬೆರಳು ಆಡಿಸಿಕೊಂಡು ಮುಂದಿದ್ದ ನಾಲ್ಕು
ಳಲ್ಲಿ ಎಡಮೂಲೆಗಿದ್ದ ಒಂದನ್ನು ಉದ್ದೇಶಿಸಿ ಮಾತನಾಡುತ್ತಿರುವಂತೆ, ಜೋರಾಗಿ
ದ, "ನಿನಗೆ ಎಷ್ಟು ಸಲ ಒದರಬೇಕು. ನಾನು ಅದೆಷ್ಟು ಇಂಪಾರ್ಟೆಂಟ್
ಬುಗಳನ್ನು ಹೇಳುತ್ತಿದ್ದೀನಿ. ಕಿವಿಯಲ್ಲಿ ಹಾಕಿಕೊಳ್ಳದೆ ಅಲ್ಲಲ್ಲಿ ಮೋಜು
ಲು ಕುಳಿತವರತ್ತಲೆ ನಿನ್ನ ದೃಷ್ಟಿ." ಪ್ಯಾಂಟ್‌ಅನ್ನು ಮೊಣಕಾಲಿನವರೆಗೆ
ಂಕೊಂಡು ಬಲಗೈ ಉಗುರುಗಳಿಂದ ಕೆರೆದುಕೊಂಡ. ಮತ್ತೆ ಆಕಾಶದ
ೆಲ ಕ್ಷಣ ದೃಷ್ಟಿ ನೆಟ್ಟು, ಕಣ್ಣುಗಳನ್ನು ಮೇಲೆ ಕೆಳಗೆ ಆಡಿಸಿ, ಮತ್ತೆ
ೋಡಿದ. ಯೋಗಪಟುವಿನಂತೆ ಕಾಲುಗಳನ್ನು ನೀಟಾಗಿ ಮಡಿಸಿ,
ಂ ಕೈಗಳನ್ನು ಮುಂದಕ್ಕೆ ಚಾಚಿ ಕೈಯಲ್ಲೇನೊ ಲ್ಯಾಪ್‌ಟ್ಯಾಪ್
ವನಂತೆ ಕುಳಿತ. "ನಾಲ್ಕೂ ಜನ ಸರಿಯಾಗಿ ಕೇಳಿ, ನೀವೇ ಈ
ದೇಶದ ಕೆಲಸಕ್ಕೆ ಬಾರದ ಅಂಗಗಳು. ಇಂಡಿಯಾದ ಪ್ರೈಮ್
ಗೊಂದು, ಪ್ರೆಸಿಡೆಂಟಿಗೊಂದು ಪತ್ರ ಬರಿದು ಮೇಲ್ ಮಾಡ್ತೀನಿ..."
ಏನೊ ಮಾತನಾಡುವವನಿದ್ದ, ಅಷ್ಟರಲ್ಲಿ, ನಡುವಿದ್ದ ಒಂದು ಕಲ್ಲು
ನಾಡಿತು ಎಂಬಂತೆ ಕೇಳಿಸಿಕೊಂಡು, "ಏನು ಮುಖ್ಯಮಂತ್ರಿಗೊಂದು
ಬರೆಯಲೇನು ಅಂತ ಕೇಳುತ್ತಿದ್ದೆಯೇನು? ಶಟ್ ಯುವರ್
ಫಸ್ಟ್. ಇಂಥಾ ಜುಜುಬಿ ಮಂದಿಗೆಲ್ಲಾ ಪತ್ರ ಬರೆಯಲು ನನಗೆ
ಪೊತ್ತು ಇಲ್ಲ. ಇವನಿಗೆ ಪತ್ರ ಬರೆದರೂ ಏನ್ ಬರೆಯಬೇಕು.
ನಮ್ಮೂರಲ್ಲಿ ಒಂದು ಮಸೀದಿ ಕೆಡವಿ ರಾಮ ಮಂದಿರ ಕಟ್ಟುತ್ತೇವೆ
ಕೊಡ್ರಿ. ಸಂಸ್ಕೃತ ಶಾಲೆ ಶುರುಮಾಡ್ತೀವಿ ಅನುದಾನ ಬಿಡುಗಡೆ
. ಈ ವರ್ಷ ಊರಲ್ಲಿ ಧಾರ್ಮಿಕ ಚಿಂತನಾಗೋಷ್ಠಿಗೆ ನಿಮ್ಮನ್ನು
ಟಕರಾಗಿ ಕರೆಯುತ್ತೇವೆ. ಬರಬೇಕು. ಬಂದಾಗ ರಾಯರ ಮಂದಿರ
ರಕ್ಕೆ ಒಂದು ಕೋಟಿ ರೂ. ಕೊಡಬೇಕು... ಅಂತ ಕೇಳಬೇಕೇನು?
ಹೀಗೆಲ್ಲಾ ಕೇಳಿ ನನ್ನ ತಲೆ ಬಿಸಿ ಮಾಡಬೇಡಿ... ಮಧ್ಯಾಹ್ನ



# ಹುಚ್ಚ ಡಾಟ್ ಕಾಂ

.ರೋಡ್‌ನಲ್ಲಿ ನಿಮಗೆಲ್ಲರಿಗೂ ಬೇಕಾದ ತಿಂಡಿ ಕೊಡಿಸ್ತೀನಿ" ಎನ್ನುತ್ತಾ
ಧಾನಿಸುವಂತೆ ಕಲ್ಲಿನ ಮೇಲೆ ನಿಧಾನವಾಗಿ ಬೆರಳಾಡಿಸಿದ.
ಪ್ಲೀಸ್ ನಾ ಬರೆಯುವ ಪ್ರತಿ ಸಾಲನ್ನು ಸರಿಯಾಗಿ ಕೇಳಿ. ನಮ್ಮಂತಾ ಸಾಮಾನ್ಯ
ನ್ಯರು ನಿಮ್ಮ ಕಣ್ಣಿಗೆ ಕಾಣಲ್ಲ ಅಂತ ಗೊತ್ತು. ಇವತ್ತು ನನ್ನ ಕೈಗಳಿಗೆ ಸಿಕ್ಕಿದ್ದೀರಿ. ನನ್ನ
ನಲ್ಲಿ ಹುದುಗಿರೊ ಎಲ್ಲಾ ವಿಚಾರಗಳನ್ನು ಕೇಳುವವರೆಗೆ ನಿಮ್ಮನ್ನು ಇಲ್ಲಿಂದ
ಲು ಬಿಡಲ್ಲ..." ಮುಷ್ಟಿಯಷ್ಟಿದ್ದ ನಾಲ್ಕು ಕಲ್ಲುಗಳತ್ತ ಮತ್ತೆ ವಾರೆಗಣ್ಣು ಬೀರಿದ.
ಟ್ಯಾಪ್‌ನ ಮೌಸ್ ಜಾಗೆಯಲ್ಲಿ ಬೆರಳಾಡಿಸುತ್ತಾ ಮಾನಿಟರ್ ನೋಡಿದ
ಯಲ್ಲಿ ಮುಖ ಎತ್ತಿದವನ ಕಣ್ಣಂಚು ತೇವಗೊಂಡವು. ಹೇಗೆ ಶುರುಮಾಡುವುದು.
ಬರೆಯುವುದು. ಬರೆಯಲು ಅದೆಷ್ಟು ವಿಷಯಗಳಿವೆ. ಇಂಥಾ ಪತ್ರಗಳನ್ನು ನಾನು
ದ್ದು ಮೊದಲಲ್ಲ. ಒಂದಕ್ಕೂ ಉತ್ತರ ಕಳಿಸುವ ಸೌಜನ್ಯವಿಲ್ಲ. ಅವರೆಲ್ಲಾ ಈ
ರ ಮಹಾನ್ ಪ್ರತಿನಿಧಿಗಳು. ದೇಶದ ರಕ್ಷಕರು. ಯಾವ ದೇಶದ ರಕ್ಷಕರೊ?
ಥಾ ಯಃಕಶ್ಚಿತ್ ಮನುಷ್ಯನಿಗೆ ಅನ್ನಿಸುವುದು ಅವರಿಗೆ ಯಾಕೆ ತಿಳಿಯುತ್ತಿಲ್ಲ,
ಟಾಪ್ ಮಡಿಸಿ, ತೊಡೆಯ ಮೇಲೆ ಇಟ್ಟುಕೊಂಡಂತೆ ಮಾಡಿ, ಮುಂದಿದ್ದ
ಳನ್ನೆ ನೋಡಿ, "ನನಗೇನು ಬರೆಯಬೇಕೆಂಬುದೇ ತಿಳಿಯುತ್ತಿಲ್ಲ. ಎಲ್ಲಾ ಗೊಂದಲ.
ೇವಕರು ಅಂದರೆ ಅವರಿಗೆ ನಮ್ಮ ಸಮಸ್ಯೆಗಳು
ರಲೇ ಬೇಕಲ್ಲವೆ? ಜನರೇ ಸಮಸ್ಯೆಗಳಿವೆ, ಪರಿಹಾರ
ಸೌಲಭ್ಯಗಳು ಬೇಕು ಎಂದಾಗಲೂ ಎಷ್ಟು ಗಮನ

**ಕಲಿಗಣನಾಥ ಗುಡದೂರು**

ಹರಿಸಿದ್ದಾರೆ? ಜನಸಾಮಾನ್ಯರ ಬಗ್ಗೆ ಕಾಳಜಿಯಿರುವ ಜನರನ್ನು ಎಲ್ಲಿ ಹುಡುಕ ಬೇಕು? ನಮ್ಮಂತವರಲ್ಲಿ ದೇಶದ ಬಗ್ಗೆ ಹೆಮ್ಮೆ, ಅಭಿಮಾನ ಸಾಕೆ? ಒಣ ಅಭಿಮಾನದಿಂದ ನಮ್ಮ ಬದುಕು, ಬವಣೆ ಸುಧಾರಿಸುತ್ತೇನು? ವರ್ಷಕ್ಕೆರಡು ಬಾರಿ ಝುಂಡಾ ಹಾರಿಸಿ, ಜೈ ಭಾರತಮಾತೆ ಎಂದರೆ ದೇಶ ಉದ್ಧಾರವಾಗುತ್ತೇನು? ಇಂಡಿಯಾಗೆ ಇಂಡಿಪೆಂಡೆನ್ಸ್ ಎಂಬುದು ಬಂದು ಅರವತ್ತು ವರ್ಷ ಕಳೆದವು, ಇಂಡಿಪೆಂಡೆನ್ಸ್ ಅಂದ್ರೆ ಇದು, ಹೀಗೆ ಬದುಕೋದು ಎಂಬುದಾಗಲಿ ನೂರು ಕೋಟಿ ಜನರಿಗೆ ತಿಳಿದಿಲ್ಲ. ಬದುಕಿನ ಸ್ಥಿತಿ ಮತ್ತಷ್ಟು ಹದಗೆಟ್ಟಿದೆ ಹೊರತಾಗಿ ಏನೂ ಸುಧಾರಿಸಿಲ್ಲ. ಈ ಕಂಪ್ಯೂಟರ್, ಲ್ಯಾಪ್‌ಟಾಪ್ ಬಂದುಬಿಟ್ಟರೆ ಇಡೀ ಇಂಡಿಯಾ, ಇಂಡಿಯಾದ ಜನ ಬದಲಾಗಿಬಿಟ್ಟರು ಅಂತ ಅರ್ಥ ಏನು?" ಸ್ವಲ್ಪ ಜೋರಾಗಿ ದಯನೀಯ ದನಿಯಲ್ಲಿ ಮಾತನಾಡಿದನೊ, ಸಮೀಪದ ಕಲ್ಲು ಬೆಂಚೊಂದರಲ್ಲಿ ಕುಳಿತಿದ್ದ ಯುವ ಜೋಡಿ ಕುತೂಹಲದಿಂದ ಬಂದು ಸ್ವಲ್ಪ ದೂರದಲ್ಲಿ ನಿಂತು ನೋಡತೊಡಗಿತು.

ಹಾಲುಗಲ್ಲದ ಯುವತಿ ಇವನನ್ನು ದಿಟ್ಟಿಸಿ ನೋಡುತ್ತಿದ್ದರೆ, ಯುವಕ ಅವಳ ಹಣೆ ಮೇಲೆ ಜೋಕಾಲಿಯಾಡುತ್ತಿದ್ದ ಮುಂಗುರುಳನ್ನು ತನ್ನೆರಡು ಬೆರಳ ಬೆಳ್ಳಿಕಿರಣಗಳಿಂದ ಹಿಂದಕ್ಕೆ ಸರಿಸಿದ. ಅವಳ ಹೆಗಲ ಮೇಲೆ ತನ್ನ ತಲೆಯಿಟ್ಟು ಕೆನ್ನೆ ಮೇಲಿನ ಗುಳಿಯಲ್ಲಿ ಆಸೆಗೋಲಿಗಳ ತುಂಬತೊಡಗಿದ. "ಅವನ ಮಾತುಗಳು ನಿಜ ಅನಿಸಲ್ವಾ?" ಅವಳ ಪ್ರಶ್ನೆ ತನಗಲ್ಲವೆಂಬಂತೆ ಅವಳ ಗಲ್ಲದ ಸ್ಲೇಟಿನ ಮೇಲೆ ಯಾರೂ ಅಕ್ಷರ ಹಾಕಿಕೊಟ್ಟಂತೆ ತನ್ನ

ತೋರು ಬೆರಳಿನಿಂದ ತೀಡತೊಡಗಿದ. ''ಹೇ ಕಿರಣ್, ನಿನ್ನನ್ನೇ ಕೇಳಿದ್ದು, ಹೌದೊ ಅಲ್ಲವೊ ?'' ಯುವಕ ಕ್ಷಣ ಗಲಿಬಿಲಿಗೊಂಡು ''ಹೌದು, ನೀನು ಹೇಳೋದು ಸರಿ'' -ಎಂದು ಹ್ಲೂಂಗುಟ್ಟಿದ. ಕೆನ್ನೆಯಿಂದ ನಿಧಾನವಾಗಿ ಅವಳ ಕತ್ತಿನ ಬಳಿ ಬೆರಳ ತುದಿಗಳಿಂದ ರೈಲು ಹಳಿಗಳ ಎಳೆದ. ಬಂದವರು ಅಪರಿಚಿತರು ಎಂಬುದನ್ನೂ ಮರೆತ ಅವನು, ''ಬನ್ನಿ ಸರ್, ಬನ್ನಿ ಮೇಡಂ. ನೀವಾದರೂ ಹೇಳಿ, ನಾನು ಎಷ್ಟೇ ವಾದಿಸಿದರೂ ಇವು ನನ್ನ ಮಾತು ಕೇಳುತ್ತಿಲ್ಲ.'' ಮುಂದಕ್ಕೆ ಕೈಮಾಡಿ ತೋರಿಸಿದ. ಯುವತಿಯ ಕಣ್ಣಿಗೆ ಅವನು ವಿಚಿತ್ರವಾಗಿ ಕಂಡ. ''ಡಿಯರ್, ಇವನ ಮಾತು ಕೇಳಬೇಕೆನ್ನಿಸುತ್ತೆ. ಒಂದೆರಡು ನಿಮಿಷ ಕುಳಿತುಕೊಳ್ಳೋಣ. ಹೇಗೂ ಈ ದಿನ ಇಬ್ಬರೂ ಆಫ್ ತೆಗೆದುಕೊಂಡಿದ್ದೇವೆ. ರಾತ್ರಿಯಾಗುವವರೆಗೆ ಚಿಂತೆಯಿಲ್ಲ''. ಅವಳ ಕೋರಿಕೆಗೆ ಮುಖ ಕಿವುಚಿದರೂ ಅವಳ ನಡುವನ್ನು ಅಳತೆಮಾಡುವ ರೀತಿಯಲ್ಲಿ ಬಲಗೈಯಿಂದ ಸುತ್ತುಬಳಸಿದ ಯುವಕ ಅವಳನ್ನು ತನ್ನ ಎದೆಗೆ ಒರಗಿಕೊಂಡಂತೆ ಕೂಡಿಸಿಕೊಂಡು ಕುಳಿತ. ಅವನು ಪುಟ್ಟ ಪ್ಲಾಸ್ಟಿಕ್ ಕವರ್‌ನಿಂದ ಹಳೆಯ ರದ್ದಿಯಂತಿದ್ದ ಪೇಪರ್‌ನ್ನು ಹೊರತೆಗೆದ. ''ಪ್ಲೀಸ್ ಲೆಟ್ ಮಿ ರೀಡ್ ಎ ಫಿವ್ ಲೈನ್ಸ್ ಫ್ರಾಮ್ ದಿಸ್ ಆರ್ಟಿಕಲ್. ಇಟ್ ವಾಸ್ ಪಬ್ಲಿಷ್ಡ್ ಇನ್ ಎ ನ್ಯಾಷನಲ್ ಡೇಲಿ ಎ ಮಂಥ್ ಎಗೊ''. ಅವನ ಓದುವ ಸ್ಟೈಲಿಗೆ ಯುವತಿ ಬೆಚ್ಚಿಬಿದ್ದಳು.

''ಮೇಡಂ, ಸುಮ್ಮನೆ ಕೇಳುತ್ತೇನೆ. ತಪ್ಪು ತಿಳಿಯಬೇಡಿ. ನೀವಿಬ್ಬರೂ ಪರಸ್ಪರ ಬಹು ಇಷ್ಟಪಡುತ್ತೀರಾ ?'' ಯುವತಿ ಯುವಕನ ಮುಖ ನೋಡಿದಳು. ಯುವಕ ತಾನು ಎಲ್ಲಿ ಕುಳಿತಿದ್ದೆನೊ ಎಂಬುದನ್ನು ಮರೆತು ಅವಳನ್ನು ಬಲಗೈಯಿಂದ ಬರಸೆಳೆದುಕೊಂಡ. ''ಯಾ, ಶ್ಯೂರ್'' ಚುಟುಕಾಗಿ ಉತ್ತರಿಸಿದಳು. ''ನಿಮ್ಮ ಮಧ್ಯೆ ಇರುವುದು ಕೇವಲ ಆಕರ್ಷಣೆ. ನನ್ನ ಮಾತುಗಳಿಂದ ಬೇಸರಪಡಬೇಡಿ. ನಾನು ಮಾತನಾಡುವುದೇ ಹೀಗೆ. ನನಗೆ ನಿಮ್ಮಂತೆ ನಯ ನಾಜೂಕಿನಿಂದ ಮಾತನಾಡಲು ಬರೊಲ್ಲ.'' ''ಎಲ್ಲರಂತೆ ನಾವಲ್ಲ. ಭೇಟಿಯಾದ ದಿನದಿಂದಲೂ ಅಷ್ಟೇ ಪ್ರೀತಿಯಿಂದ ಇದ್ದೇವೆ'', ಯುವಕ ಮೊದಲ ಬಾರಿ ಅವನ ಮುಖ ದಿಟ್ಟಿಸಿ ನೋಡಿ ಮಾತನಾಡಿದ. ''ಎಷ್ಟು ದಿನಗಳಿಂದ ಪ್ರೀತಿಸುತ್ತಿದ್ದೀರಿ ?'' ''ಸಿನ್ಸ್ ಎ ವೀಕ್'' ಯುವತಿ ತುಟಿ ಪಕಳೆಗಳ ಅರಳಿಸಿ ಮುಗಳ್ನಗೆಯೊಂದಿಗೆ ಉತ್ತರಿಸಿದಳು. ''ಹಾಗಾದರೆ, ನಿಮ್ಮಲ್ಲಿ ಇನ್ನೂ ಪ್ರೀತಿ ಹುಟ್ಟಿಲ್ಲ. ಪ್ರೀತಿ ಅನ್ನೋದು ಒಂದು ದಿನ ಹುಟ್ಟಿ ಅದೇ ದಿನ ಸಾಯುವಂತದ್ದಲ್ಲ. ಪ್ರತಿ ವ್ಯ ಹುಟ್ಟಿನೊಂದಿಗೇ ಮೈ ಚರ್ಮದಂತೆ ಪ್ರೀತಿ ಆವರಿಸಿರುತ್ತೆ. ಅದನ್ನು ಉಳಿಸಿ ಬೆಳೆ ಮುಖ್ಯ. ನಿರಂತರತೆಯಿಂದ ಮಾತ್ರ ಪ್ರೀತಿಗೆ ಚೈತನ್ಯ ಸಿಗುತ್ತೆ. ಸಾವಿನೊಂದಿಗೆ ಸಾಯಲ್ಲ. ಸಾವು, ಪ್ರಳಯದ ನಂತರವೂ ಬದುಕಿರೋದೆ ನೈಜ ಪ್ರೀತಿ...'' ಮಾತುಗಳು ಷೇಕ್ಸ್‌ಪಿಯರ್‌ನ ೧೧೬ನೇ ಸಾನೆಟ್ ನೆನಪಿಸಿದವು. ''ಡಿಯರ್, ಫೆಲೊ ಈಸ್ ನಾಟ್ ಎ ಲೇಮನ್. ರಿಯಲಿ ಜೀನಿಯಸ್ ಐ ಸೇ...'' ಹೆಗಲ ಹಾಕಿದ ಯುವಕನ ಕೈಯನ್ನು ಕೆಳಗೆ ಸರಿಸಿ ಕೇಳಿದಳು. ಕೊಳಕನಂತೆ ಕಾಣುವ ಅವ ಹೊಗಳಿದ ಯುವತಿಯ ಮಾತನ್ನು ಯುವಕನಿಗೆ ಸಹಿಸಲಾಗಲಿಲ್ಲ. ''ಡಿಯರ್, ಈಸ್ ಎ ಮ್ಯಾಡ್ ಒನ್. ಯು ವಿಲ್ ಬಿಕಮ್ ಎ ಮ್ಯಾಡ್ ಟೂ ಇಫ್ ಯು ಹಿಯರ್ ಎ ಫ್ಯೂ ಮೋರ್ ಮಿನಿಟ್ಸ್'' ಎಂದು ಅವಳ ಕಿವಿಯಲ್ಲಿ ಉಸುರಿದ.

ಯುವಕನ ಪಿಸುದನಿಯ ಪ್ರತಿ ಮಾತು ತನಗೆ ಕೇಳಿತು ಎಂಬಂತೆ ಅವನು ಸಿಡಿ ಗೊಂಡ. ''ಗೆಟ್ ಅಪ್ ನಾನ್‌ಸೆನ್ಸ್... ನಾನು ನಿಮ್ಮ ಕಣ್ಣಿಗೆ ಹುಚ್ಚನಂತೆ ಕಾಣುತ್ ನಾನೊಬ್ಬನೆ ಅಲ್ಲ, ಈ ದೇಶದ ಜನಸಾಮಾನ್ಯರೂ ಹುಚ್ಚರಂತೆ ಕಾಣುತ್ತಾರೆ! ನಿಮ್ ಐಷಾರಾಮಿ ಮಂದಿಯ ಕಣ್ಣುಗಳಿಗೆ ನಮ್ಮಂತವರು ಕ್ರಿಮಿಕೀಟಗಳಂತೆ ಕಾಣುತ್ತೇವೆ ನೈಸ್ ಥಾಟ್ !'' ತನ್ನೆರಡು ಕೈಗಳಿಂದ ಮುಖ ಮುಚ್ಚಿಕೊಂಡು ನಾಲ್ಕು ಕಲ್ಲುಗಳ ಮ ಬಾಗಿದ. ''ಪ್ಲೀಸ್ ಡೋಂಟ್ ಫೀಲ್ ಎನಿಥಿಂಗ್ ಬ್ಯಾಡ್ ಡಿಯರ್...'' ಯು ಅವನತ್ತ ಕೈ ಮಾಡಿ ಹೇಳುತ್ತಾ, ಯುವಕನ ಒತ್ತಾಯಕ್ಕೆ ಕಲ್ಲಿನ ಬೆಂಚ್‌ನತ್ತ ನಡೆದ ಕಲ್ಲಿನ ಬೆಂಚ್ ಇನ್ನೂ ಸ್ವಲ್ಪ ದೂರವಿರುವಾಗಲೆ ಯುವಕನಿಂದ ಕೊಸರಿಕೊ ಯುವತಿ, ''ನಿನಗೆ ಸ್ವಲ್ಪವೂ ಸೆನ್ಸ್ ಇಲ್ಲ. ನಿಜವಾಗಿಯೂ ಅವನನ್ನು ನೋಡಿದರೆ ಅ ಪಾಪ ಎನಿಸುತ್ತೆ. ಅವನ ಬಗ್ಗೆ ತಿಳಿದುಕೊಳ್ಳಬೇಕು ಅನ್ನಿಸುತ್ತೆ. ಅವನ ಹಿಂದೆ ದುರಂತ ಅಡಗಿದೆ. ಹಾಗೆ ಅನ್ನಬಾರದಿತ್ತು ನೀನು. ಅವನಿಗೆ ಬಹಳ ಹರ್ಟ್ ಆಗಿರಬೇ ಸಾರಿ ಕೇಳು ಡಿಯರ್''. ಯುವತಿ ಅವನತ್ತ ತಿರುಗಿ ನೋಡಿ ಹೇಳಿದಳು. ಯು ರೇಗಿದ. ''ನಿನಗೂ ಅವನ ಹುಚ್ಚು ಬಡಿದಿರಬೇಕು. ಆ ಕೊಳಕನಿಗೆ ನನ್ನ ಹೋಲಿಸ್ತೀ ನನ್ನ ಅಂತಸ್ತು ಏನು, ಅವನ ಸ್ಥಿತಿ ಎಂಥದ್ದು? ತಿಂಗಳಿಗೆ ಲಕ್ಷ ರೂ. ಎಣಿಸುವ

ನ್ಯೇಗಿಗಿಂತ ಎ ಬೆಗ್ಗರ್, ಮ್ಯಾಡ್ ಒನ್ ಇಷ್ಟ ಆದನಲ್ಲಾ? ನಿನ್ನಂಥವಳು ನನಗೆ ಾದ ಜೋಡಿ ಅಲ್ಲ. ನನ್ನ ಉದ್ಯೋಗ, ಸಂಬಳ, ಪರ್ಸನಾಲಿಟಿ ನೋಡಿದರೆ ಇಂಡಿಯಾ, ಮಿಸ್ ವರ್ಲ್ಡ್ ಬೇಕಾದರೆ ಬರ್ತಾರೆ.'' ಯುವತಿಗೆ ಯುವಕನ ಗಳು ಅತಿ ಎನಿಸಿದವು. ''ನಾಲಿಗೆ ಬಿಗಿಹಿಡಿದು ಮಾತಾಡು. ನಿನ್ನ ಇಷ್ಟ ನನ್ನ ಇಷ್ಟ ೕಕು ಅಂತೇನೂ ಇಲ್ಲ. ಹೋಗೋ. ನಿನ್ನಂಥ ಸಿಲ್ಲಿ ವ್ಯಕ್ತಿ ಜೊತೆ ಎಷ್ಟು ದಿನ ಒಂದು ದಿನ ಬೇರೆಯಾಗಬೇಕು. ಆರಂಭದಲ್ಲೆ ನಿನ್ನ ಬುದ್ಧಿ ತಿಳೀತು...'' ಳಗೆ ಕುದಿಯುತ್ತಿದ್ದ ಯುವತಿ ತಿಳಿನೀಲಿ ಅಂಚಿನ ಹಾಲು ಬಣ್ಣದ ವೇಲ್‌ಅನ್ನು ಸುತ್ತ ಕ್ರಾಸ್‌ನಂತೆ ಹಾಕಿಕೊಂಡು ಏನೂ ನಡೆದಿಲ್ಲ ಎಂಬಂತೆ ಪಾರ್ಕಿನ ಂದು ಕಲ್ಲು ಬೆಂಚಿನತ್ತ ನಡೆದಳು. ಯುವಕ ಗೇಟ್‌ನತ್ತ ನಡೆದ. ನಿಧಾನವಾಗಿ ಎತ್ತಿದ ಅವನು ತೇವಗೊಂಡ ಕಣ್ಣುಗಳನ್ನು ಎರಡೂ ಭುಜಗಳ ಮೇಲೆ ಂಡ. ''ಛೀ. ಇದಕ್ಕೆ ಪ್ರೀತಿ ಅನ್ನಬೇಕು''. ನೆಲಕ್ಕೆ ತನ್ನ ಬಲಗೈಯಿಂದ ಗುದ್ದಿದ ತನ್ನ ಮುಂದಿದ್ದ ಕಲ್ಲುಗಳನ್ನು, ದೂರ ನಡೆಯುತ್ತಿದ್ದ ಯುವತಿಯನ್ನು ಮ್ಮೆ ನೋಡುತ್ತಾ ಕೆಲ ನಿಮಿಷಗಳವರೆಗೆ ಕುಳಿತ.

ಯುವತಿ ಸ್ವಲ್ಪ ದೂರ ಹೋಗಿ ಅಲ್ಲೆ ಚಿಲುಮೆಗೆ ಬೊಗಸೆಯೊಡ್ಡಿ, ತಣ್ಣನೆಯ ಂದ ಕಣ್ಣಿಗೆ ಸವರಿಕೊಂಡಳು. ಪಾರ್ಕ್ ಇರುವುದೇ ಪ್ರೀತಿ, ಪ್ರೇಮಕ್ಕಾಗಿ ಂತೆ ನೂರಾರು ಜನ ಎಲ್ಲೆಂದರಲ್ಲಿ ಕೈಕೈ ಹಿಡಿದು, ಭುಜಕ್ಕೆ ಭುಜ ತಾಗಿಸಿ ಯುತ್ತಿದ್ದಾರೆ. ಇಂಥವೇ ಕನಸು ಕಂಡದ್ದಕ್ಕಲ್ಲವೆ ತಾನು ಬಲಿಯಾಗಿದ್ದು. ಪ್ರೀತಿಯ ಲ್ಲಿ ಗಂಡಿನ ಪಾದದಡಿಯ ಚೇಳಾಗಿ ಅದ್ಹೇಗೊ ಪಾರಾಗಿದ್ದು. ೋಕೆ ಗಂಡೇ ಬೇಕೆ? ಅದೂ ಸ್ಫುರದ್ರೂಪಿ, ಕೈತುಂಬ ಸಂಬಳ, -ರೀಕು, ಸೂಟು-ಬೂಟು ಧರಿಸಿದವರನ್ನೇ ಆಯ್ಕೆಮಾಡಿಕೊಳ್ಳ ? ಪ್ರೈಮರಿ ಸ್ಕೂಲ್‌ನಲ್ಲಿ ಹಳ್ಳಿಯಲ್ಲಿ ಓದುವಾಗ ಕಳೆದುಹೋದ ರಿಂಗ್ ಹುಡುಕಿಕೊಡಲು ಹುಡುಗರೆಲ್ಲಾ ಶಾಲೆಯ ಮೈದಾನದ ಕನ್ನೆಲ್ಲಾ ತಮ್ಮ ಬೆರಳ ಜರಡಿಗಳಿಂದ ಜಾಲಾಡಿದ್ದರಲ್ಲ! ನಾಲ್ಕಾರು ಅದೆಷ್ಟು ತವಕ, ದುಗುಡದಿಂದ ಹುಡುಕಿದ ಹನುಮ, ಅನಿಲ್, ್, ನಿರುಪಾದಿ, ರಹೀಂ, ಮೇರಿ, ಗಂಗಾ, ಅವರಿಗೆ ನಾನು ಯಲ್ಲಿ 'ಥ್ಯಾಂಕ್ಸ್' ಆದರೂ ಹೇಳಿದೆನೆ? ಅದೂ ಇಲ್ಲ. ಅವರ ಮುಖಗಳನ್ನು ನೆ ದಿಟ್ಟಿಸಿ ನೋಡಿದಾಗ, ಅದೆಂಥದೊ ಕೃತಜ್ಞತಾ ಭಾವ ನನ್ನಲ್ಲಿತ್ತಲ್ಲ. ಅಂಥಾ ಈಗ ಯಾಕೆ ಸಿಗಲ್ಲ. ಈ ಮರ, ಗಿಡಗಳು ಸಣ್ಣ ಸಸಿಯಾಗಿದ್ದಾಗ ಬೆರಳ ಗಾತ್ರದ ಕೊಡುತ್ತವೆ. ಹಾಗೇ ಬೆಳೆದಂತೆ ಹತ್ತಾರು, ನೂರಾರು ಜನ ನಿಲ್ಲುವಷ್ಟು, ಹಕ್ಕಿ ಳು ಗೂಡುಕಟ್ಟಿ ಹಾಯಾಗಿ ಇರುವಷ್ಟು ಬೆಳೆಯುತ್ತವಲ್ಲ! ಮನುಷ್ಯ ಯಾಕೆ ಯುತ್ತಾ ಕುಬ್ಜನಾಗ್ತಾನೆ? ವಿಚಾರ ಲಹರಿಯಲ್ಲಿ ತನ್ನನ್ನು ತಾನು ಮರೆತು ಎತ್ತಲೊ ನೆಟ್ಟು ನಡೆಯುತ್ತಿದ್ದ ಯುವತಿ ಇನ್ನೇನು ಮುಂದಕ್ಕೆ ಕಾಲಿಡಬೇಕು ಎನ್ನುತ್ತಿರುವಾಗ, ಲ್ಲೆ ಹೊರಟಿದ್ದ ಮೂರ್‍ನಾಲ್ಕು ಜನ ಜೋರಾಗಿ ಕೂಗಿದರು. ಒಬ್ಬ ಯುವತಿ ಇವಳ ದು ಪಕ್ಕಕ್ಕೆ ಎಳೆದಳು. ''ನಾಯಿ ಮರಿಯ ಮೇಲೆ ಕಾಲಿಟ್ಟುಬಿಡುತ್ತಿದ್ದೀರಿ'' ಗಲೆ ಮತ್ತೆ ವರ್ತಮಾನಕ್ಕೆ ಮರಳಿದ್ದು. ತಲೆ ಕೊಡವಿದ ಯುವತಿ, ''ಥ್ಯಾಂಕ್ಯೂ. ಐ ಲಾಸ್ಟ್ ಇನ್ ಮೈ ಥಾಟ್ಸ್...'' ಎಂದು ಅವರನ್ನು ಬೀಳ್ಕೊಟ್ಟಳು. ಹಿಂತಿರುಗಿ ಿದಳು. ತನಗೆ ಸಹಾಯ ಮಾಡಿದ ಯುವತಿಯ ಹೆಗಲ ಮೇಲೆ ಯುವಕ ಕೈಹಾಕಿ ಬಳ್ಳಿಯಂತೆ ಪರಸ್ಪರ ತಬ್ಬಿಕೊಂಡೇ ನಡೆಯುತ್ತಿದ್ದರು. ಮತ್ತೊಮ್ಮೆ ತಿರುಗಿ ತಬಾರದೆಂದೆನಿಸಿತು. ಹಾಯಾಗಿ ಮಲಗಿದ್ದ, ತಾಜ್‌ಮಹಲ್‌ನಷ್ಟೇ ಬೆಳ್ಳಗಿದ್ದ, ಪಾದ ನಾಯಿಮರಿಯ ಮೈಮೇಲೆ ಹೂ ಪಕಳೆಗಳು ತಟ್ಟಿದಂತೆ ಮೃದುವಾಗಿ ಯಿಂದ ಸ್ಪರ್ಶಿಸಿದಳು. ವಿಚಿತ್ರ ವ್ಯಕ್ತಿ ನೆನಪಾಗಿ ಅವನತ್ತ ನಡೆದಳು.

ಕ್ಕದಲ್ಲೆ ಇದ್ದ ಐಸ್‌ಕ್ರೀಮ್ ಪಾರ್ಲರ್‌ನಲ್ಲಿ ಬಿಸ್ಕಿಟ್, ಬನ್, ಐಸ್‌ಕ್ರೀಮ್ ಮತ್ತು ಲ್ ವಾಟರ್ ಬಾಟಲಿ ಖರೀದಿಸಿದಳು. ಅವನಿಗೆ ಕೊಡಬೇಕು. ಹೊಟ್ಟೆತಣ್ಣಗಾಗಿಸಿ, ಕಥೆ ಕೇಳಬೇಕು. ಕ್ಯಾರಿಬ್ಯಾಗ್ ಬೀಸುತ್ತಾ ಹೊರಟಳು. ಫರ್ ಮರ ಸಮೀಪಿಸುತ್ತಿದ್ದಂತೆ ಯಿತು. ಅವನು ಕಾಣಲಿಲ್ಲ. ಅವನ ಮುಂದಿದ್ದ ನಾಲ್ಕು ಕಲ್ಲುಗಳು ದಿಕ್ಕಿಗೊಂದು ವು. ಯಾರನ್ನು ಕೇಳಬೇಕು? ಏನೆಂದು ಕೇಳಬೇಕು? ಗಲಿಬಿಲಿಗೊಂಡಳು. ುರದ ಬುಡದಲ್ಲಿ ನೆರಳಿಲ್ಲದೆ ಬಿಸಿಲೇ ಹಾಸಿತ್ತು. ಬಿಸಿಲು ಬಂದದ್ದಕ್ಕೆ ಎದ್ದು ಎಲ್ಲಿಗೆ ನೊ? ಹಾಗೆ ಸುತ್ತ ಕಣ್ಣು ಹಾಯಿಸಿದಳು. ತೋಪಿನಂತೆ ಕಂಡ ಅರಳಿಮರದತ್ತ ರಿಯಿತು. ಆ ಮರದ ಕೆಳಗೆ ಕುಳಿತವನೇ ಇರಬೇಕು ಅವನು! ಸ್ವಲ್ಪ ಸಮಾಧಾನ, ಯೊಂದಿಗೆ ಅರಳಿಮರದತ್ತ ಜೋರಾಗಿ ಹೆಜ್ಜೆಹಾಕಿದಳು. ಅವನು ಸಮೀಪಿಸುತ್ತಿದ್ದಂತೆ ನೋಡಿದಳು. ನಾಲ್ಕಾರು ಬೀದಿನಾಯಿಗಳು ಅವನ ಸುತ್ತುವರಿದಿದ್ದವು. ಕೈಯಲ್ಲಿದ್ದ ಬ್ರೆಡ್ಡಿನ ಪುಡಿಕೆಯಲ್ಲಿ ಒಂದೊಂದೆ ತೆಗೆದು ನಾಯಿಗಳಿಗೆ ತಿನ್ನಿಸುತ್ತಿದ್ದ. ಕೈಯಲ್ಲಿದ್ದ ಕ್ಯಾರಿಬ್ಯಾಗ್, ಅದರೊಳಗಿದ್ದ ಬಿಸ್ಕಿಟ್, ಬನ್, ಐಸ್‌ಕ್ರೀಮ್ ಮತ್ತು ಮಿನರಲ್ ವಾಟರ್ ಯುವತಿಗೆ ಚಿತ್ರ ವಿಚಿತ್ರ ಪ್ರಶ್ನೆಗಳನ್ನು ಕೇಳಿದಂತೆ ಅನ್ನಿಸಿತೊ? ಉತ್ತರ ಹೇಳಲು ತನ್ನಿಂದ ಸಾಧ್ಯವಿಲ್ಲ. ಸುಮ್ಮನಿರಿ ಎನ್ನುವಂತೆ ಕ್ಯಾರಿಬ್ಯಾಗ್ ಅನ್ನು ಎದೆಯ ಮುಂದೆ ಹಿಡಿದು ಅಪ್ಪಿಕೊಂಡೇ ಅವನ ಮುಂದೆ ಕುಳಿತುಕೊಂಡಳು. ಈ ಪ್ರಾಣಿಗೂ ಪಾಲು ಕೊಡಬೇಕಾಗುತ್ತದೊ ಎಂಬಂತೆ ಭಾವಿಸಿದ ಒಂದು ನಾಯಿ ಯುವತಿಯತ್ತ ಮುಖಮಾಡಿ ಗುರಾಯಿಸಿತು. ಕಾಲುಮಡಿಸಿ ಕುಳಿತಿದ್ದವಳು ಅವನ ಬೆನ್ನ ಹಿಂದೆ ಸರಿದಳು. ''ಮೇಡಂ, ಈ ನಾಯಿಗಳಿವೆಯಲ್ಲಾ, ವೆರಿ ಪೆಕ್ಯುಲಿಯರ್ ಎನಿಮಲ್ಸ್. ತಮ್ಮಂತೆಯೇ ಇರುವ ಜೀವಿಗಳನ್ನು ಕರೆದು ಕೂಡಿ ತಿನ್ನುತ್ತವೆ. ಆದರೆ ಇವುಗಳಿಗೆ ತಮ್ಮ ಪಾಲಿನಲ್ಲಿ ಮನುಷ್ಯರಂಥವರು ಕಸಿದು ತಿಂದರೆ ಬಲು ಸಿಟ್ಟು...'' ಯುವತಿಯತ್ತ ನೋಡಿ ಸಣ್ಣಗೆ ನಗೆಬೀರಿದ. ಇವನಿಗೆ ಬರೀ ಸೀರಿಯಸ್ಸು ಇರೋದಷ್ಟೆ ಗೊತ್ತು ಅಂತ ತಿಳಿದಿದ್ದೆ. ಬಲು ಚಾಲಾಕಿ ಇದ್ದಾನೆ ಅಂತ ಅನ್ನಿಸಿತು ಅವಳಿಗೆ.

ಇವನಿಗೆ ಹಿಡಿದಿರುವುದು ಹುಚ್ಚೊ? ಮತ್ತೇನಾದರೂ ಆಗಿದೆಯೊ? ಅವನ ಬೆನ್ನನ್ನೇ ನೋಡಿ ಯೋಚಿಸಿದಳು. ಮಾನಸಿಕ ವೈಕಲ್ಯ, ಕುಂದುಕೊರತೆ ಎಲ್ಲರಲ್ಲೂ ಒಂದಲ್ಲ ಒಂದು ಪ್ರಮಾಣದಲ್ಲಿ ಇರುತ್ತೆ. ಪ್ರಮಾಣದಲ್ಲಿ ವ್ಯತ್ಯಾಸ ಇರುತ್ತದಷ್ಟೆ. ಹಾಗೆ ವಿಚಾರ ಮಾಡಿದರೆ ಜಗತ್ತಿನ ಪ್ರತಿ ಜೀವಿಗೆ ಒಂದಲ್ಲಾ ಒಂದು ಮಾನಸಿಕ ಕೊರತೆ ಇದ್ದೇ



ಇರುತ್ತದೆ. ಎಲ್ಲೊ ಓದಿದ ಸಾಲುಗಳು ನೆನಪಾದವು. ನಾಯಿಗಳಿಗೆ ತಿನ್ನಿಸಿ ಉಳಿದ ನಾಲ್ಕಾರು ತುಣುಕುಗಳನ್ನು ತನ್ನ ಬಾಯೊಳಗೆ ಇಟ್ಟುಕೊಳ್ಳಬೇಕೆಂದ. ಹಿಂದಕ್ಕೆ ತಿರುಗಿ ನೋಡಿ, ''ಮೇಡಂ, ಪ್ಲೀಸ್ ತಗೊಳ್ಳಿ. ಈ ತುಣುಕುಗಳಲ್ಲಿ ನಿಮಗೂ ಒಂದೆರಡು ಸೇರಿವೆ''. ಅವಳತ್ತ ಒಂದೆರಡು ಬ್ರೆಡ್ಡಿನ ತುಣುಕುಗಳನ್ನು ಹಿಡಿದ. ''ಸಾರಿ, ನಾನೂ ತಂದಿದ್ದೇನೆ. ನಿನಗೆಂದೇ ಹೆಚ್ಚಿಗೆ ಖರೀದಿಸಿರುವೆ''. ''ನಾಯಿ ಎಂಜಲಾಗಿದೆಯೆಂದು ತಿನ್ನಲು ಹಿಂದೆ ಮುಂದೆ ನೋಡುತ್ತಿದ್ದೀರಿ ತಾನೆ? ಒಂದು ಮಾತು ಹೇಳ್ತೀನಿ. ಮನುಷ್ಯನಷ್ಟು ವಿಷಕಾರಿ ಜೀವಿ ನಾಯಿಯಲ್ಲ ಮೇಡಂ...'' ತನ್ನ ತಲೆ ಮೇಲೆ ಮೂತಿಯಿಟ್ಟ ನಾಯಿಯ ಬೆನ್ನಿನ ಮೇಲೆ ಕೈಯಾಡಿಸುತ್ತಾ ಹೇಳಿದ. ''ನಿಮಗೆ ಬೇಡವಾದರೆ ನಾನೇ ತಿನ್ನುತ್ತೇನೆ ಬಿಡಿ. ಬೇಡವೆನ್ನುವವರಿಗೆ ಒತ್ತಾಯ ಮಾಡಲ್ಲ'' ಎಂದವನೆ ಬಾಯಲ್ಲಿಟ್ಟುಕೊಂಡ. ಬ್ರೆಡ್ಡಿನ ಖಾಲಿ ಪುಡಿಕೆಯನ್ನು ಬಾಯಿಂದ ಊದಿ ಬಲೂನಿನಂತೆ ಮಾಡಿ ಒಂದು ಕೈಯಲ್ಲಿ ಹಿಡಿದುಕೊಂಡು ಮತ್ತೊಂದು ಕೈಯಿಂದ 'ಟಪ್' ಅಂತ ಒಡೆದ. ಆ ಸದ್ದಿಗೆ ನಾಯಿಗಳು ದೂರಸರಿದು ನಿಂತವು. ಇವನ ಹುಡುಗುತನಕ್ಕೆ ಯುವತಿ ಕಿರುನಗೆ ಬೀರಿದಳು.

ದೂರದಲ್ಲಿ ಹುಲ್ಲು ಹಾಸಿನ ಮೇಲೆ ಮಲಗಿದ ನಾಯಿ ಮರಿ ಒಮ್ಮಿಂದೊಮ್ಮೆಲೆ ಕುಂಯ್ಞಿ... ಕುಂಯ್ಞಿ ಎಂದಾಗ, ನಾಯಿಗಳು ಅತ್ತ ಓಟಕಿತ್ತವು. ಯಾರೊ ಪುಣ್ಯಾತ್ಮರು ನಾಯಿ ಮರಿಗೆ ಕಲ್ಲು ಎಸೆದಿದ್ದರಿಂದ ಒಂದೆ ಸವನೆ ಒದರಿತು. ತಾಯಿ ನಾಯಿ ಪುಟ್ಟ ಮರಿಯ ತಲೆ, ಕಿವಿ, ಮೂತಿಗೆ ಮೂತಿಯಿಟ್ಟು ಏನೊ ಉಸುರಿತು. ಮುಂದಿನ ಬಲಗಾಲಿನ ತುದಿಯಿಂದ ಜಿನುಗುತ್ತಿದ್ದ ರಕ್ತವನ್ನು ನಾಲಿಗೆಯಿಂದ ನೆಕ್ಕಿ ಬೆನ್ನಿನ ಮೇಲೂ ನಾಲಿಗೆ

ಯಾಡಿಸಿತು. ಕಲ್ಲು ಒಗೆದವರು ಸಮೀಪವೇನಾದರೂ ಇದ್ದಾರೆಯೇ ಎಂಬಂತೆ ಸುತ್ತ ಗೋಣು ಹೊರಳಿಸಿ ನೋಡಿತು. ಸಮೀಪದಲ್ಲಿ ಹೋಗುತ್ತಿದ್ದ ನಾಲ್ಕಾರು ಮಂದಿ ಈ ನಾಯಿ, ಮರಿ, ಅವುಗಳ ಗೋಳಾಟಕ್ಕೂ ತಮಗೂ ಸಂಬಂಧವಿಲ್ಲ ಎನ್ನುವಂತೆ ಐಸ್‌ಕ್ರೀಮ್ ಮೆಲ್ಲುತ್ತಾ ಬಣ್ಣ ಬಣ್ಣದ ಕೊಡೆಗಳಡಿ ಸಾಗಿದ್ದರು. ಉದ್ದಕ್ಕೆ ಕಾಲುಚಾಚಿ ತಾಯಿ ಮರಿಯ ಬಳಿ ಮಲಗಿತು. ತಾಯಿಯತ್ತ ನಿಧಾನವಾಗಿ ಸರಿದ ಪುಟ್ಟ ಮರಿ ಹೊಟ್ಟೆಯ ಮೇಲಿದ್ದ ಮೊಲೆಗೆ ಬಾಯಿಹಚ್ಚಿ ತನಗಾದ ನೋವನ್ನೇ ಮರೆತಂತೆ ಹಾಲು ಕುಡಿಯತೊಡಗಿತು. ತಾಯಿ ಬಾಲ ಅಲ್ಲಾಡಿಸುತ್ತಾ, ಪುಟ್ಟ ಮರಿಯ ಬೆನ್ನನ್ನೆ ಪ್ರಯಾಸಪಟ್ಟು ನೆಕ್ಕತೊಡಗಿತು.

ತನ್ನ ಮುಂದೆ ಮೊಣಕಾಲುಗಳನ್ನು ಮುಂದಕ್ಕೆ ಬಾಗಿಸಿ ಕುಳಿತ ಯುವತಿ ಮುಂದೆ ಅವನು ಏನೇನೋ ಕೈಮಾಡಿ ಹೇಳುತ್ತಿದ್ದ. "ಅವು ನಾಲ್ಕು ಇದ್ದವಲ್ಲ ಮೇಡಂ, ಥೇಟ್ ಕಲ್ಲುಗಳಂತೆ! ನಾನು ಅದೆಷ್ಟು ಜೀವದಿಂದ ಬರೆದ ಪತ್ರಗಳ ಸಾಲುಗಳನ್ನು ಓದಿದರೆ ಕಿವಿಮುಚ್ಚಿ ಕೊಳ್ಳುತ್ತವೆ. ಬೆಟ್ಟಕ್ಕೆ ಒದರಿದಂತಾಗಿ ಎದ್ದು ಬಂದು ಬಿಟ್ಟೆ... ನೀವಾದರೂ ಕೇಳಿ ಮೇಡಂ..." ಅವಳತ್ತ ನಮ್ರ ಮುಖಭಾವ ಹೊತ್ತು ಕೇಳಿದ. ಅವನು ಯಾವ ನಾಲ್ಕಕ್ಕೆ ಥೇಟ್ ಕಲ್ಲುಗಳು ಎನ್ನುತ್ತಾನೆ ಎಂದು ಅರ್ಥಮಾಡಿ ಕೊಳ್ಳಲು ತಿಣುಕಾಡಿದಳು. ಆ ಫರ್ ಮರದ ಕೆಳಗೆ ಕುಳಿತಾಗ ತನ್ನ ಮುಂದೆ ಇಟ್ಟುಕೊಂಡಿದ್ದು ನಾಲ್ಕು ಪುಟ್ಟ ಕಲ್ಲುಗಳನ್ನೆ! ಅವುಗಳು ಥೇಟ್ ಕಲ್ಲುಗಳಲ್ಲದೆ ಮತ್ತೇನು?

...ಯೋಚಿಸಿದಷ್ಟು ಅವನ ಬಗ್ಗೆ ಒಂದು ಬಗೆಯ ಸಣ್ಣ ಅಸಹ್ಯ, ತಿರಸ್ಕಾರ ಭಾವನೆ ಮೂಡಿತಾದರೂ ಅದನ್ನೆಲ್ಲಾ ತೋರಿಸಿಕೊಳ್ಳದೆ ಕ್ಯಾರಿ ಬ್ಯಾಗ್‌ನಲ್ಲಿದ್ದ ಬ್ರೆಡ್ ಪುಡಿಕೆ ಹೊರ ತೆಗೆದು "ಇದರಲ್ಲಿ ಒಂದೆರಡನ್ನಾದರೂ ತಿಂದರೆ ಮಾತ್ರ ನೀನು ಓದುವುದನ್ನು ಕೇಳುತ್ತೇನೆ. ಇಲ್ಲಾ ನಾನು ಹೋಗಿಬಿಡ್ತೇನೆ. ನಾನು ತಂದಿರುವ ಒಂದನ್ನಾದರೂ ನೀನು ತಿನ್ನಲೇಬೇಕು" ಹಟ ಹಿಡಿದಳು. "ಮೇಡಂ, ಇದಕ್ಕೆ ಪ್ರೀತಿ ಅನ್ನಲ್ಲ. ನೀವು ಹೇಳಿದಂತೆ ಕೇಳಬೇಕು ಎಂದರೆ, ನಾನು ನಿಮ್ಮ ಸೇವಕನಾಗಬೇಕು. ನಾನೇಕೆ ನಿಮ್ಮ ಸೇವಕನಾಗಲಿ? ನೀವು ನನ್ನ ಯಜಮಾನಿಯಾಗ ಬೇಕು! ನನಗೆ ಎಷ್ಟು ಬೇಕೊ ಅಷ್ಟನ್ನು ಈಗಾಗಲೇ ತಿಂದಿರುವೆ. ಬೇಕಾದರೆ ನೀರಿದ್ದರೆ ಕೊಡಿ... ಕುಡಿಯುತ್ತೇನೆ. ಒಮ್ಮೆ ತಿಂದ ಮೇಲೆ ತೀರಿತು. ಚೆನ್ನಾಗಿದೆಯೆಂದು ತಿನ್ನುವವ ನಾನಲ್ಲ. ಹಸಿದವರಿಗೆ ಕೊಡಬಹುದಲ್ಲ. ಹೊಟ್ಟೆ ತುಂಬಿದವರಿಗೇ ತಿನ್ನಿಸಬೇಕೆಂಬ ಹಟವೇಕೆ? ಹೊಟ್ಟೆಗೆ ಬೇಕಿದ್ದಷ್ಟನ್ನು ಮಾತ್ರ ಈ ಜಗತ್ತಿನಲ್ಲಿ ಎಲ್ಲರೂ ತಿಂದು ಉಳಿದಿದ್ದನ್ನು ಹಸಿದವರಿಗೆ ಕೊಟ್ಟರೆ ಯಾರೂ ಹಸಿವಿನಿಂದ ಕಂಗೆಡುತ್ತಿರಲಿಲ್ಲ. ಇರಲಿಬಿಡಿ... ನನ್ನ ಚಾಳಿಯೇ ಸುಮಾರು. ಮಿತಿಮೀರಿ ಮಾತಾಡಿಬಿಡುತ್ತೇನೆ. ಕೆಲವರು ನನ್ನ ಹುಚ್ಚ ಎನ್ನುತ್ತಾರೆ..." ಹಾಗೆ ಕರೆಯುವವರ ಬಗ್ಗೆ ತಿರಸ್ಕಾರದ ನಗೆ ಬೀರಿದ. ಅವನು ತನ್ನ ಮನವಿಗೆ ಮಣಿಯುವುದಿಲ್ಲ ಅಂತ ತಿಳಿದು ಪೆಚ್ಚುಮೋರೆಯೊಂದಿಗೆ ಯುವತಿ ಕ್ಯಾರಿಬ್ಯಾಗ್‌ನಲ್ಲಿ ಮತ್ತೆ ಬ್ರೆಡ್ ಇಟ್ಟು ಸುಮ್ಮನೆ ಅವನನ್ನೇ ದಿಟ್ಟಿಸಿನೋಡುತ್ತಾ ಕುಳಿತಳು.

ಅವನ ವೈಯಕ್ತಿಕ ವಿವರ ಕೇಳಬೇಕು ಅ... ಯುವತಿಗೆ. ಹೇಗೆ ಕೇಳುವುದು? ಏನೇ ಕೇಳಿದ... ಏನೇ ಹೇಳಿದರೂ ತನ್ನದೆ ಆದ ದೀರ್ಘ ವಾದ ಮು... ಬಿಡುತ್ತಾನೆ. ತಣ್ಣಗೆ ಬೀಸಿದ ಗಾಳಿಗೆ ಅರಳಿಮರ ... ನಾಜೂಕಿನಿಂದ ಮೈಮುರಿದು ಮತ್ತೆ ಯಥಾಸ್ಥಿತಿ... ಮೇಲ್ಮುಖವಾಗಿ ನಿಂತು ಆಕಾಶದಲ್ಲಿ ಹಾರಾಡ... ಹಕ್ಕಿಗಳ ಎಣಿಸತೊಡಗಿತು. "ಸರ್, ಪ್ಲೀಸ್..." ... ಗಲಿಬಿಲಿಯಿಂದ ಮುಂದಕ್ಕೆ ಕೈಚಾಚಿ ಕಣ್ಣಗಲಸಿ ಅವ... ದಿಟ್ಟಿಸಿನೋಡಿದಳು. "ಅಂಜಬಾರದು ಮೇ... ಅಂಜಿದರೆ ಅಂಜಿಸುವ ಜನರ ಶಕ್ತಿ ಇಮ್ಮಡಿಗೊಳ್ಳುತ್ತ... ಅದರಲ್ಲೂ ನಿಮ್ಮಂತಾ ಹೆಣ್ಣುಮಕ್ಕಳು, ಈ ಪದ ಕೇ... ಗುರುತಿಗಾಗಿ ಅಷ್ಟೇ ಹೊರತು ಯಾವುದೇ ಭಿನ್ನಭೇ... ತೋರಿಸುವ ಪದದಂತೆ ನಾನು ಬಳಿಸಿಲ್ಲ, ... ಧೈರ್ಯದಿಂದ ಇರಬೇಕು. ಅಂದಾಗ ಗಂಡಸರ ಎದೆಗ... ನಡುಗುತ್ತವೆ. ಮೂರೂಬಿಟ್ಟವರ ತಲೆಗಳು ತಗ್ಗುತ್ತ... ಹೆಣ್ಣಾಗಿ ಹುಟ್ಟಿದ್ದು ತಪ್ಪಲ್ಲ, ಹೆಣ್ಣಾಗಿ ಬದುಕೋ... ತಪ್ಪು. ಹೆಣ್ಣು, ಗಂಡು ವ್ಯತ್ಯಾಸವಿಲ್ಲ ಅನ್ನಿಸುತ್ತೆ. ಕೇ... ಆಂಗಿಕ ರಚನೆ ವ್ಯತ್ಯಾಸವೇ ಏನೆಲ್ಲಾ ಎಡವಟ್ಟುಗ... ದಾರಿಮಾಡಿಕೊಟ್ಟಿದೆ. ಚರ್ಮದ ಬಣ್ಣ, ಅಂಗಾಂಗ... ಆಕಾರದಿಂದಲೇ ಸೌಂದರ್ಯ ಅಳೆಯುವ ಮನುಷ... ಬುದ್ಧಿವಂತಿಕೆಯನ್ನು ಮೆಚ್ಚಬೇಕು... ಅಂದ ಹ... ಅವನು ಹೋದನೆ? ಹೇಳಬೇಕೆನಿಸಿದರೆ ಹೇ... ಬೇಡವಾದರೆ ಬೇಡಬಿಡಿ..." ಎನ್ನುತ್ತಾ ತನ್ನ ಪ್ಲಾಸ್ಟಿ... ಕ್ಯಾರಿಯರ್ ಬ್ಯಾಗ್‌ನಿಂದ ಏನನ್ನೋ ಹೊರತೆಗೆದ.

ಅವನ ಬಗ್ಗೆ ಕೇಳಬೇಡಿ. ತಾನೊಬ್ಬನೆ ದುಡಿದು ನನ್ನ ಸಾಕುತ್ತಾನೆ ಎನ್ನುವಂತೆ ದೌರ್ಜನ್ಯ ುತ್ತಾನೆ. ಅವನು ಹೇಳಿದ್ದಕ್ಕೆ ಹ್ಞೂಂಗುಟ್ಟಲು ನನ್ನಿಂದ ಆಗಲ್ಲ. ನಾನೂ ಅವನಷ್ಟೇ ಓದಿದೀನಿ. ಗೆ ಐವತ್ತು ಸಾವಿರ ಎಣಿಸ್ತೀನಿ. ಮತ್ತಿನ್ನೇನು ಬೇಕು. ಒಳ್ಳೆಯವನಂತೆ ಕಂಡ, ಫ್ರೆಂಡ್‌ಶಿಪ್ ದೆ. ಗೆಳೆತನದ ಅರ್ಥ ಗೊತ್ತಿಲ್ಲದವರ ಜೊತೆಗೆ ಸಂಬಂಧ, ಮಾತುಕತೆ ವ್ಯರ್ಥ. ಈ ನೆಲದ ೕ ಅಂಥದ್ದು. ಗಂಡಸು ಏನೇ ಮಾಡಿದರೂ ನಡೆಯುತ್ತೆ. ಓದು ಬರಹದಿಂದ ಮಾತ್ರ ಷ್ಯ ಬದಲಾಗಲ್ಲ ಎನ್ನೋದಕ್ಕೆ ಇಂಥವರೇ ಸಾಕ್ಷಿ...'' ಕಣ್ಣು ತುಳುಕಿ ಬಂದವು. ತನ್ನ ವೇಲ್‌ನಿಂದ ಮುಚ್ಚಿಕೊಂಡು ಬಿಕ್ಕಿದಳು. ಅವನು ಮುಂದಕ್ಕೆ ಕೈಚಾಚಿ ಯುವತಿಯ ರಮಿಸ ದನಾದರೂ ಹಿಂದಕ್ಕೆ ಕೈತೆಗೆದುಕೊಂಡು ಹಾಗೆ ಅವಳನ್ನೆ ನೋಡುತ್ತಾ ಕ್ಷಣಕಾಲ ಕುಳಿತ ಕಣ್ಣುಗಳೂ ತೇವಗೊಂಡವು. ಒಂದೇ ಸಮನೆ ರೋದಿಸತೊಡಗಿದ. ನೆಲಕ್ಕೆ ಹಣೆ ಹಚ್ಚಿ ಡಗಿದ. ಅವನು ರೋದಿಸುವ ದನಿ ಕೇಳಿ ಯುವತಿ ವೇಲ್ ಸರಿಸಿ ನೋಡಿದಳು. ''ನೀನು ಅಳುತ್ತಿ? ನೀನಗೇನಾಯ್ತು?'' ತೇವಗೊಂಡಿದ್ದ ಕೆನ್ನೆ ಮೇಲೆ ಅಂಗೈಯಿಂದ ಸವರಿಕೊಂಡಳು. ಎಷ್ಟು ಅನ್ಯಾಯ ನಡೀತಿದೆ. ಒಂದಲ್ಲ ಒಂದು ತೆರನಾಗಿ ಜನಸಾಮಾನ್ಯರಿಗೆ ಮುಕ್ತ ಬದುಕು, ಯ ಬದುಕು ಕನಸಾಗಿದೆ. ಈ ಸರ್ಟಿಫಿಕೇಟ್‌ಗಳಿಗೆ ಬೆಲೆಯಿಲ್ಲದಾಗಿದೆ'' ಎನ್ನುತ್ತ ್ಮರು ಚೂರಾಗಿದ್ದ ವಿವಿಧ ಡಾಕ್ಯುಮೆಂಟ್‌ಗಳನ್ನು ಅವಳತ್ತ ಹಿಡಿದು ತೋರಿಸಿದ. ದಷ್ಟಿದ್ದ ಮಾರ್ಕ್ಸ್‌ಕಾರ್ಡ್ ಒಂದರ ಮೇಲೆ ಐಐಟಿ ಎಂಬ ದೊಡ್ಡ ಅಕ್ಷರ ಕಂಡು ಬೆರಗಾದ ತಿ, ''ನೀನು ಏನು ಓದಿದ್ದಿಯಾ?'' ಚುಟುಕಾಗಿ ಕೇಳಿದಳು. ಅವನಿಗೆ ನಗು ಬಂತು. ಿಂದ ನನ್ನ ಅಳೆಯಬೇಡಿ. ಓದಿದವರು ಬುದ್ಧಿವಂತರು ಎಂಬ ಭ್ರಮೆಬೇಡ. ಇದು ನನ್ನ ಎಲೆಕ್ಟ್ರಾನಿಕ್ ಇಂಜಿನಿಯರ್ ವಿಭಾಗದ ಮಾರ್ಕ್ಸ್‌ಕಾರ್ಡ್. ಐ ಸ್ಟುಡ್ ಫಸ್ಟ್ ಇನ್ ದ್ಯಾಟ್ ್. ಕ್ಯಾಂಪಸ್ ಇಂಟರ್‌ವ್ಯೂದಲ್ಲಿ ಮೊದಲ ಬಾರಿಗೆ ಸೆಲೆಕ್ಟ್ ಆಗಿ ಕ್ಯಾಲಿಫೋರ್ನಿಯದ ರ್ನೊನಲ್ಲಿ ನಾಲ್ಕು ವರ್ಷ ಕೆಲಸ ಮಾಡಿದೆ. ಕೆಲಸ ಮಾಡುತ್ತಿದ್ದ ಕಂಪೆನಿ ಮುಚ್ಚಿದ ಮೇಲೆ ಹುಡುಕಾಡಿದರೂ ಕೆಲಸ ಸಿಗದೆ ಇಂಡಿಯಾಗೆ ಬಂದೆ. ಇಲ್ಲೂ ಕೆಲಸಕ್ಕಾಗಿ ಅಲೆದೆ. ಸಿಕ್ಕಿದ್ದು ಇಲ್ಲಿ ಕುಳಿತು ತುಂಡಾದ ನನ್ನ ಡಾಕ್ಯುಮೆಂಟ್‌ಗಳನ್ನು ನಿಮ್ಮಂಥವರಿಗೆ ತೋರಿಸಿ, ಅನುಕಂಪ ವ ಕೆಲಸ'' ಗಹಗಹಿಸಿ ನಗತೊಡಗಿದ. ಸಮೀಪದಲ್ಲಿ ಹೊರಟವರಿಗೆ ಇವನ ನಗೆ ವೆಂಬಂತೆ ಕೇಳಿತೊ ಏನೋ ''ಡರ್ಟಿ ಫೆಲೊ'' ಎಂದು ವಟಗುಟ್ಟುತ್ತಾ, ಅವನ ಮುಂದೆ ಯುವತಿ ಬಗ್ಗೆ ಅನುಕಂಪವಿದೆ ಎಂಬಂತೆ ತಿರುಗಿ ನೋಡುತ್ತಾ ನಡೆದರು. ''ಈ ಅನುಕಂಪ ಸುವ ಜನರೇ ನನ್ನ ಪ್ರಕಾರ ಅತ್ಯಂತ ಅಸಹಾಯಕ ಜನ. ಆದರೂ ನೋಹಾರ್ಮ್ ್'' ನಿರುಪಯುಕ್ತ ವಸ್ತುಗಳನ್ನು ತುರುಕುವಂತೆ ಚೂರಾದ ಡಾಕ್ಯುಮೆಂಟ್‌ಗಳನ್ನು ಮತ್ತೆ ುರ್ ಬ್ಯಾಗ್‌ಗೆ ಸೇರಿಸಿದ.

ಕೆಲಸದ ವ್ಯಕ್ತಿಯನ್ನು ಅದರಲ್ಲೂ ಐಷಾರಾಮಿ ಜೀವನಕ್ಕೆ ಬೇಕಾಗುವಷ್ಟು ದುಡಿಯದ ದಿರನ್ನು ಈ ಜಗತ್ತಿನಲ್ಲಿ ಯಾವ ಹೆಣ್ಣೂ ಇಷ್ಟಪಡಲ್ಲ ಅನ್ನಿಸುತ್ತೆ. ಅದೆಷ್ಟು ಪ್ರೀತಿಯಿಂದ ತೆ ಜೊತೆಯಾಗಿದ್ದಳು ಅವಳು. ಎಲ್ಲಾ ನಾಟಕ. ಮಗುವನ್ನಾದರೂ ಜೊತೆಗೆ ಉಳಿಸದೆ ಬಿಟ್ಟಳು. ಅವಳ ಸೌಂದರ್ಯ, ಚೆಲುವಿಗೆ ಬೆಂಕಿ ಇಕ್ಕಬೇಕು. ಸೌಂದರ್ಯ ಮತ್ತು ಚೆಲುವು ಮಾನಸಿಕ ಮತ್ತು ಬೌದ್ಧಿಕ ವಿಕಸನಕ್ಕೂ ಹೆಲ್ಪ್ ಆದರೆ ಮಾತ್ರ ಅದಕ್ಕೆ ಹೆಚ್ಚು ಬೆಲೆ ದೆ. ಇಲ್ಲವಾದರೆ ಅತ್ಯಂತ ಸುಂದರವಾದ ಶೋಕೇಸ್‌ನಲ್ಲಿ ತೆಗೆದಿಟ್ಟ ಬಾಂಬಿನಂತೆ, ಚಿನ್ನದ ಲ್ಲಿ ತೆಗೆದಿಟ್ಟ ಕಬ್ಬಿಣದ ಕತ್ತಿಯಂತೆ ಅಲ್ಲವೆ ಮೇಡಂ?'' ಅವನ ಪ್ರಶ್ನೆಗೆ ಯುವತಿ ಿಯಾದಳು. ಒಂದು ಗರಿಕೆಯನ್ನು ಕಿತ್ತುಕೊಂಡು ತೆಳುಗುಲಾಬಿ ವರ್ಣದ ಪಾದಗಳ ಮೇಲೆ ೊಂಡಳು. ''ಮೇಡಂ, ಅಲ್ಲಿ ಕಾಣುತ್ತಿದೆಯಲ್ಲ, ಕೆಂಗಲ್ ಹನುಮಂತರಾಯ ಕಟ್ಟಿಸಿದ '' ಎಂದು ಅವನು ಕೈಮಾಡಿ ತೋರಿಸಿದತ್ತ ಯುವತಿ ಹೊರಳಿನೋಡಿದಳು. ಭವ್ಯವಾದ ಸೌಧ ಎದ್ದುಬರುವಂತೆ ಕಂಡಿತು. ''ಅದಕ್ಕೆ ಗೋರಿ ಅನ್ನುವಿಯೆಲ್ಲ...'' ಅವನ ದಡ್ಡತನಕ್ಕೆ ುಸಿ ನಕ್ಕಳು. ''ಮೇಡಂ, ಇಡೀ ಕರ್ನಾಟಕದ ಆರು ಕೋಟಿ ಜನರ ಕನಸುಗಳೆಲ್ಲಾ ಅಲ್ಲಿ ೋಗಿವೆ. ಭವ್ಯವಾದ ಗೋರಿ ಕಟ್ಟಿಸಿದ್ದಾರೆ... ಇನ್ನೂ ನೂರಾರು ವರ್ಷ ಜನತೆಯ ಕನಸುಗಳು, ಮನಗಳು, ಕೋರಿಕೆಗಳನ್ನು ದಫನ್ ಮಾಡಲು ವಿಶಾಲ ಜಾಗೆಯೇ ಬೇಕಲ್ಲ, ಅದಕ್ಕೆ ಅಷ್ಟು ಗೋರಿ ಕಟ್ಟಿಸಿದ್ದಾರೆ. ಗೋರಿ, ಗೋರಿ...'' ಹತ್ತಾರು ಬಾರಿ ಅಂದು ಮತ್ತೆ ಮತ್ತೆ ಜೋರಾಗಿ . ಅವನ ದನಿಗೆ ಅರಳೆಮರದಲ್ಲಿದ್ದ ಎರಡ್ಮೂರು ಗೊರವಂಕಗಳು ಗೂಡಿನಿಂದ ಹೊರಬಂದು ತೊಡಗಿದವು. ''ಈ ಹಕ್ಕಿಗಳು ಬೇರೆ ಕೇಡು. ಎಲ್ಲವೂ ಜನವಿರೋಧಿ ಸರ್ಕಾರಗಳ ಪರವೇ ವೆ. ಗೊರವಂಕಗಳೂ ನಮ್ ಮುಖ್ಯಮಂತ್ರಿಗಳಿಗೆ, ಸಚಿವ ಮಹಾಶಯರಿಗೆ ಆದಷ್ಟು ಬೇಗ ರದ ವಿರುದ್ಧ ನಾನು ಮಾತನಾಡಿದ ಮಾತುಗಳನ್ನು ಮುಟ್ಟಿಸುವ ತವಕ. ದೇಶದಲ್ಲಿ ಚೇಲಾಗಳ ಹೆಚ್ಚುತ್ತಿದೆ. ಪ್ರಭಾವಿಗಳ ಬಾಲ ಬಡಿದರೆ ಸಾಕು ಈ ನಾಡಿನಲ್ಲಿ ಬೇಕಾದ ಕೆಲಸ ಕೊಳ್ಳಬಹುದು. ಅರ್ಹರಿಗೆ, ಪ್ರಾಮಾಣಿಕರಿಗೆ ಬೆಲೆಯಿಲ್ಲ. ನಾಡಿನ ಜನರ ಅಳಲಿಗೆ ಿಗೆ ಕಿವಿಗೊಡದ, ಕೇವಲ ನರಸತ್ತ ನಾಯಕರೇ ಅಲ್ಲಿ ಇರೋದರಿಂದಲೇ ನಾನು ಆ 'ಗೋರಿ' ಅಂತ ಕರೆದಿದ್ದು... ಅದರ ಎದುರಿಗೆ ಇದೆಯಲ್ಲ'' ಗಹಗಹಿಸಿ ನಗತೊಡಗಿದ.

## ಸಾದರ ಸ್ವೀಕಾರ

**ಆಟಿಸಂ ಇರುವ ನಿಮ್ಮ ಮಗುವಿಗೆ ಹೇಗೆ ಸಹಾಯ ಮಾಡಬಹುದು ?**
*ಅನು : ಡಾ॥ಸಿ. ಆರ್. ಚಂದ್ರಶೇಖರ್*
ಪುಟ : ೫೬ — ಬೆಲೆ : ರೂ. ೮೦

**'ಆಟಿಸಂ' ಮಕ್ಕಳ ಲಾಲನೆ-ಪಾಲನೆ** — *ಡಾ॥ ಟೋನಿ ಆಟ್‌ವುಡ್*
*ಅನು : ಡಾ॥ಸಿ. ಆರ್. ಚಂದ್ರಶೇಖರ್*
ಪುಟ : ೬೪ — ಬೆಲೆ : ರೂ. ೪೫

**ಖಗೋಳ ವಿಜ್ಞಾನದ ಕಥೆ** — *ಉದಯ್ ಪಾಟೀಲ್*
*ಅನು : ಡಾ॥ ಪಿ. ಆರ್. ವಿಶ್ವನಾಥ್*
ಪುಟ : ೫೬ — ಬೆಲೆ : ರೂ. ೭೫

**ಆಹಾ ! ಎಷ್ಟೊಂದು ಚಟುವಟಿಕೆಗಳು** — *ಅರವಿಂದ ಗುಪ್ತ*
*ಅನು : ವಿ. ಎಸ್. ಎಸ್. ಶಾಸ್ತ್ರಿ*
ಪುಟ : ೧೨೮ — ಬೆಲೆ : ರೂ. ೧೫೦

**ಮಾಡಿ ಕಲಿ** — *ಅರವಿಂದ ಗುಪ್ತ*
*ಅನು : ವಿ. ಎಸ್. ಎಸ್. ಶಾಸ್ತ್ರಿ*
ಪುಟ : ೧೨೮ — ಬೆಲೆ : ರೂ. ೧೫೦

**ಜೀವಜಗತ್ತಿನ ಕೌತುಕಗಳು – ನಿದ್ರೆ ವಿಶ್ರಾಂತಿ** — *ಡಾ॥ ಎನ್. ಎಸ್. ಲೀಲಾ*
ಪುಟ : ೭೨ — ಬೆಲೆ : ರೂ. ೭೫

**ಜೀವಜಗತ್ತಿನ ಕೌತುಕಗಳು – ಹುಟ್ಟು ಸಾವು** — *ಡಾ॥ ಎನ್. ಎಸ್. ಲೀಲಾ*
ಪುಟ : ೮೮ — ಬೆಲೆ : ರೂ. ೭೫

**ದೇಶ ವಿದೇಶಗಳ ವಿನೋದ ಕಥೆಗಳು** (ಮಕ್ಕಳ ಕಥೆಗಳ ಸಂಗ್ರಹ)
*ಶಾಂತಾರಾಮ ಸೋಮಯಾಜಿ*
ಪುಟ : ೧೦೪ — ಬೆಲೆ : ರೂ. ೪೦

**ಚಿಟ್ಟೆ ಹಾಡು ಮತ್ತು ಇರುವೆ ಮದುವೆ** (ಮಕ್ಕಳ ಕಥೆಗಳ ಸಂಗ್ರಹ)
*ಶಾಂತಾರಾಮ ಸೋಮಯಾಜಿ*
ಪುಟ : ೧೦೪ — ಬೆಲೆ : ರೂ. ೪೦

**ಸರ್ವರಿಗೂ ಸಮಪಾಲು** (ಮಕ್ಕಳ ಕಥೆಗಳ ಸಂಗ್ರಹ) — *ಬೇದ್ರೆ ಮಂಜುನಾಥ*
ಪುಟ : ೮೮ — ಬೆಲೆ : ರೂ. ೪೦

**ಚೀನಾದ ಚಿಟ್ಟೆ ಕಥೆಗಳು** (ಮಕ್ಕಳ ಕಥೆಗಳ ಸಂಗ್ರಹ) — *ಬೇದ್ರೆ ಮಂಜುನಾಥ*
ಪುಟ : ೮೦ — ಬೆಲೆ : ರೂ. ೪೦

**ಅಧಿಕಾರದ ಕುರುಡು** (ಮಕ್ಕಳ ಕಥೆಗಳ ಸಂಗ್ರಹ)
*ಬಿ. ಎಸ್. ರುಕ್ಕಮ್ಮ; ಎಸ್. ಆರ್. ರಂಗಮಣಿ*
ಪುಟ : ೧೨೦ — ಬೆಲೆ : ರೂ. ೪೦

**ಬಾಯಿ ಇದ್ದವರು ಬರದಲ್ಲೂ ಬದುಕುತ್ತಾರೆ** (ಮಕ್ಕಳ ಕಥೆಗಳ ಸಂಗ್ರಹ)
*ಬಿ. ಎಸ್. ರುಕ್ಕಮ್ಮ; ಎಸ್. ಆರ್. ರಂಗಮಣಿ*
ಪುಟ : ೧೨೦ — ಬೆಲೆ : ರೂ. ೪೦

**ನೀತಿ-ನಡತೆಯ ಕಥೆಗಳು** (ಮಕ್ಕಳ ಕಥೆಗಳ ಸಂಗ್ರಹ)
*ವಿ. ರಾಮಚಂದ್ರ ಶಾಸ್ತ್ರಿ*
ಪುಟ : ೯೬ — ಬೆಲೆ : ರೂ. ೪೦

**ಪುಟಾಣಿ ಪದ್ಯಗಳು** — *ಡಾ॥ ಪಿ. ನಾರಾಯಣ ಭಟ್*
ಪುಟ : ೫೬ — ಬೆಲೆ : ರೂ. ೩೦

ಮೇಲಿನ ಹದಿನೈದು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಬೆಂಗಳೂರು - ೫೬೦ ೦೦೧

''ಯಾಕೆ ಏನಾಯ್ತು?'' ಯುವತಿ ಆಶ್ಚರ್ಯದಿಂದಲೇ ಕೇಳಿದಳು. ''ಇರಲಿ ಬಿಡಿ ಮೇಡಂ. ನಿಮ್ಮಂಥ ಸಜ್ಜನರ ಮುಂದೆ ಹಂಚಿಕೊಳ್ಳುವ ಜೋಕ್ ಅದಲ್ಲ. ನಮ್ಮ ಊರ್ ಕಡೆ ಯಾವುದೇ ದೇವಸ್ಥಾನವಿರಲಿ. ದೇವರ ಮೂರ್ತಿ ಎದುರಿಗೆ ಬಸವಣ್ಣ ಮೂರ್ತಿಯನ್ನು ಕೂಡಿಸಿರುತ್ತಾರೆ. ಅದನ್ನು ಯಾಕೆ ಕೂಡಿಸಿರುತ್ತಾರೊ ನನಗೆ ನಿಜವಾಗಿಯೂ ಗೊತ್ತಿಲ್ಲ. ಆದರೆ ನನ್ನ ಗೆಳೆಯರು ಜೋಕ್ ಮಾಡುತ್ತಿದ್ದುದು ಹೀಗೆ : ದೇವಸ್ಥಾನದ ಒಳಗಿರುವ ಈಶ್ವರ ಲಿಂಗ ಮತ್ತು ಬಸವಣ್ಣನದು ಸಲಿಂಗ ಕಾಮವಂತೆ! ರಾಜಕಾರಣಿಗಳಂತೆ, ಅಧಿಕಾರಿಗಳಂತೆ ಬುದ್ಧಿವಂತನಾದ ಈಶ್ವರ ತನ್ನ 'ಕೆಲಸ' ಮುಗಿದ ಮೇಲೆ ಗರ್ಭಗುಡಿಯನ್ನು ಪ್ರವೇಶಿಸಿ ಏನೂ ಮಾಡಿಲ್ಲವೆಂಬಂತೆ ಕುಳಿತುಬಿಟ್ಟನಂತೆ. ತನ್ನ ಕೆಲಸ ಮುಗಿಸಿಕೊಂಡು, ತನಗೆ ಕೊಡಬೇಕಾದುದನ್ನು ಕೊಡದೆ ಮಳ್ಳನಂತೆ ಕುಳಿತ ಈಶ್ವರ ಹೊರಗೆ ಬರುವುದನ್ನೇ ಕಾಯುತ್ತಿದ್ದಾನಂತೆ ಬಸವಣ್ಣ!'' ಮತ್ತೆ ಗಹಗಹಿಸಿ ನಕ್ಕ. ಯುವತಿ ಮುಖ ತಲೆತಗ್ಗಿಸಿ ಕುಳಿತಳು. ''ನಾನು ಹೇಳಲಿಲ್ಲವೆ ನಿಮ್ಮಂಥ ಸಜ್ಜನರು ಕೇಳಬಾರದು ಅಂತ. ಏನ್ ಮಾಡುವುದು, ನನ್ನ ಬಾಯಲ್ಲಿ ಯಾವ ಮಾತೂ ನಿಲ್ಲಲ್ಲ. ಹೋಗಲಿ ಬಿಡಿ. ಪಾಪ ವಿರಹವೇದನೆಯ ಬಸವಣ್ಣನಂತೆ ಮುಖ ಕೆಂಪಗೆ ಮಾಡಿಕೊಂಡು ಕುಳಿತಿದೆಯಲ್ಲ ಹೈಕೋರ್ಟ್ ಕಟ್ಟಡ. ಅದರ ಪಾಡೂ ಹಾಗೇನೆ. ಅದಕ್ಕೆ ಡೇಂಜರ್ ಬಣ್ಣ ಬಳಿದು ಚೆನ್ನಾಗಿ ಮಾಡಿದ್ದಾರೆ. ಇಲ್ಲಿ ಬಂದರೆ ನಿಮಗೆ ಅಪಾಯ ತಪ್ಪಿದ್ದಲ್ಲ. ನ್ಯಾಯ ಕೇಳಲು ಹೋದ ಅದೆಷ್ಟೋ ಜನಸಾಮಾನ್ಯರ ರಕ್ತದಲ್ಲಿ ಅದ್ದಿದಂತೆ ಕಾಣುತ್ತಿದೆಯಲ್ಲ ಆ ಕಟ್ಟಡ.'' ಅವನ ಮಾತುಗಳು ಬೇಸರ ತರಿಸಿದವೊ ಏನೋ ಯುವತಿ ಇನ್ನೇನು ತನ್ನ ರೂಮ್‌ಗೆ ಹೋಗಬೇಕು ಎಂದು ರೆಡಿಯಾಗತೊಡಗಿದಳು. ನೆಲಕ್ಕೆ ಕೈಯೂರಿ ಏಳಬೇಕೆಂದವಳನ್ನೆ ದಿಟ್ಟಿಸಿ ನೋಡಿದ ಅವನು, ''ಏನ್ ಮೇಡಂ ನೀವು... ನಿಮಗೆ ನಾನೆಷ್ಟು ಗೌರವ ಕೊಟ್ಟು ಮಾತನಾಡಿಸುತ್ತಿದ್ದೇನೆ. ನೀವು ನೋಡಿದರೆ ಆ ನಾಲ್ವರಂತೆ,'' ಫರ್ ಮರದತ್ತ ಕೈಮಾಡಿ ತೋರಿಸಿ, ''ನನ್ನ ಮಾತುಗಳನ್ನು ಕೇಳಿಸಿಕೊಳ್ಳದೆ ಹೊರಟುಹೋಗುತ್ತಿದ್ದೀರಲ್ಲ. ಪ್ಲೀಸ್. ನೀವಾದರೂ ನಾನು ಬರೆದ ಪತ್ರಗಳತ್ತ ಕಣ್ಣುಹಾಯಿಸಿ. ನನ್ನ ಲ್ಯಾಪ್‌ಟಾಪ್‌ನಲ್ಲೆ ಟೈಪ್‌ಮಾಡಿಟ್ಟಿದ್ದೇನೆ. ಈ ದೇಶದಲ್ಲಿ ಹಸಿವು, ಬಡತನ, ನಿರುದ್ಯೋಗ ಸಮಸ್ಯೆಗಳಿಗೆ ತುರ್ತಾಗಿ ಪರಿಹಾರ ಕಂಡುಹಿಡಿಯಬೇಕು. ಇಲ್ಲವಾದರೆ, ಬೆಂಗಳೂರಿನ ಈ ಗೋರಿಯ ಮೇಲೆ ನಿಂತು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಅಂತ ಬರೆದಿರುವೆ'' ಎಂದು ಜೋರಾಗಿ ಓದಿದ. ಸ್ವಲ್ಪ ದೂರದ ಕಲ್ಲಿನ ಬೆಂಚಿನ ಮೇಲೆ ಕುಳಿತ ಹರೆಯದ ಯುವ ಜೋ... ಪರಸ್ಪರ ಮುತ್ತಿಕ್ಕಬೇಕೆಂದವರು ತಮ್ಮನ್ನು ಯಾರೋ ಕೂಗಿದಂತೆನಿಸಿತೊ ... ಕ್ಷಣಕಾಲ ಇತ್ತ ನೋಡಿದರು. ''ಇವು ನಮ್ಮಂತೆಯೇ ಇರಬೇಕು'' ಎಂದುಕೊ... ಪರಸ್ಪರ ಮರ ಬಳ್ಳಿಯಂತೆ ಅಪ್ಪಿಕೊಂಡು, ಮುತ್ತುಗಳ ಎಣಿಸತೊಡಗಿದರು. ''... ಮೇಡಂ, ಅಲ್ಲಿ. ಅಷ್ಟಕ್ಕೆ ಅವರ ಪ್ರೀತಿ ಕೊನೆಗೊಳ್ಳುತ್ತೆ. ಕ್ಷಣಿಕ ಹುಡುಗಾಟಕ್ಕೆ ... ಕಳೆದುಕೊಳ್ಳುವುದು ಕಡಿಮೆಯಾದರೂ, ಅವಳು ಭಾರಿ ಬೆಲೆ ತೆತ್ತಬೇಕಾಗುತ್ತ... ಜಗದಲ್ಲಿ ಹೆಣ್ಣಿಗೊಂದು ನ್ಯಾಯ, ಗಂಡಿಗೊಂದು ನ್ಯಾಯ...'' ಇನ್ನೂ ... ಮುಂದುವರೆದಿತ್ತು. ಯುವತಿ ಇನ್ನೇನು ಹೋಗಿಬಿಟ್ಟರಾಯ್ತು. ಅಂತ ಎದ್ದುನಿಂತು, ವೇಲ್‌ಅನ್ನು ಸರಿಮಾಡಿಕೊಂಡಳು.

''ಮೇಡಂ, ಇನ್ನೂ ಒಂದೆರಡು ನಿಮಿಷ ಕುಳಿತುಕೊಳ್ಳಿ. ನನ್ನ ಬ್ಲಾಗ್‌ನಲ್ಲಿ ... ಲೇಖನಗಳನ್ನು ನಿಮಗೆ ತೋರಿಸುತ್ತೇನೆ. ಒಂದೊಂದು ಲೇಖನಕ್ಕೆ ಪರ-ವಿರೋ... ಹತ್ತಾರು ಪ್ರತಿಕ್ರಿಯೆಗಳು. ಲೇಖನಗಳಿಗೆ ಬಂದ ಪ್ರತಿಕ್ರಿಯೆಗಳಿಗಿಂತ ... ಪ್ರತಿಕ್ರಿಯೆಗಳು ಬಂದಿರೋದು ನನ್ನ ಬ್ಲಾಗ್‌ನ ಹೆಸರಿಗೇ! ನೀವೇ ನೋಡಿ...'' ... ತನ್ನೆರಡು ಕೈಗಳನ್ನು ಮುಂದಕ್ಕೆ ಚಾಚಿ, ಲ್ಯಾಪ್‌ಟ್ಯಾಪ್ ಹಿಡಿದವನಂತೆ ಕುಳಿತ. ''... ಮೇಲ್‌ನ ಇನ್ ಬಾಕ್ಸ್ ನೋಡಿ. ಎಷ್ಟೊಂದು ಅನ್ ಆನ್ಸರ್ಡ್ ಮೆಸೆಜೆಸ್ ... ಇವುಗಳಿಗೆಲ್ಲಾ ಉತ್ತರಿಸಲು ನನಗೆ ಪುರುಸೊತ್ತು ಇಲ್ಲ. ಮೇಡಂ, ಪ್ಲೀಸ್ ಕುಳಿತುಕೊಳ್ಳಿ... ದಯನೀಯವಾಗಿ ಬೇಡಿದ್ದಕ್ಕೊ ಏನೋ ಯುವತಿ ನಿರ್ವಾಹಲ್ಲದೆ ಕುಳಿತಳು. ... ಹುಚ್ಚಾಟಕ್ಕೆ ಬೇಸರಪಟ್ಟುಕೊಂಡರೂ, ''ನಾನು ತಂದ ಬ್ರೆಡ್, ಐಸ್‌ಕ್ರೀಂ ತಿನ್ನುವಿಯಾ... ಕುಳಿತುಕೊಳ್ಳುತ್ತೇನೆ. ಇಲ್ಲವಾದರೆ ಈ ಕೂಡಲೇ ಹೋಗಿಬಿಡುತ್ತೇನೆ'' ಎಂದು ಷ... ವಿಧಿಸಿದಳು. ಅವನು ಹ್ಞೂಂಗುಟ್ಟಿದ. ''ಮೇಡಂ, ಈ ಲೇಖನ ನೋಡಿ'' ಎನ್ನುತ್ತ... ಮಡಿಚಿದ ಕೈಗಳನ್ನು ಅವಳ ಬಳಿಗೆ ಒಯ್ದ. ''ರಾಜ್ಯದಲ್ಲಿರೋದು ರೈತರ... ಸರ್ಕಾರವಂತೆ! ಮುಖ್ಯಮಂತ್ರಿ ಮಹಾನುಭಾವರು ರೈತರ ಹೆಸರಲ್ಲೆ ಪ್ರಮಾಣ ... ಸ್ವೀಕರಿಸಿದ್ದಾರೆ. ಕಳೆದ ಒಂದು ವರ್ಷದಲ್ಲಿ ವಿವಿಧ ಸಂಕಷ್ಟಗಳಿಂದ ರಾಜ್ಯದಲ್ಲಿ ಫಿಫ್ಟಿ... ಹಂಡ್ರೆಡ್ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇಟ್ಸ್ ಎ ಶೇಮ್ ಟು ದ ನೇಷನ್, ದ ವ್ಹೋಲ್ ಮ್ಯಾನ್‌ಕೈಂಡ್! ಎಸ್‌ಇಝಡ್ ಹೆಸರಲ್ಲಿ ಗ್ರಾಮಾಂತರ ಪ್ರದೇ...

ಾರು ಎಕರೆ ಜಮೀನನ್ನು ರೈತರ ಒಪ್ಪಿಗೆ ಇಲ್ಲದೆ, ಪರಿಹಾರ ಕೊಡುವ ನೆಪದಲ್ಲಿ ಕೇಂದ್ರ ಸರ್ಕಾರಗಳೇ ಜಂಟಿಯಾಗಿ ದೌರ್ಜನ್ಯ ಮಾಡಿ ಕಸಿದುಕೊಳ್ಳುತ್ತಿವೆ.'' ಿ ಅವನು ನೆಲಕ್ಕೆ ಹಣೆಯನ್ನು ಎರಡ್ಮೂರು ಬಾರಿ ಜಜ್ಜಿಕೊಂಡು ಬೋರಾಡಿ ಾಡಗಿದ. ''ಪ್ಲೀಸ್ ಸುಮ್ಮನಿರಿ. ಯು ಹ್ಯಾವ್ ಟು ಬೇರ್ ಆಲ್ ದೀಸ್ ...'', ಕಪಾಳದ ಮೇಲಿನಿಂದ ಇಳಿದ ಕಣ್ಣೀರು ಅವನ ಮೀಸೆ, ಕುರುಚಲು ಲ್ಲೂ ಹರಿಯಿತು. ''ಎಲ್ಲರೂ ಹೀಗೆ ಮೇಡಂ, ಸಹಿಸಬೇಕು ಅಂತ ಸುಲಭವಾಗಿ ಿತ್ತಾರೆ. ಸಾವಿರಾರು ಜನರನ್ನು ಹಾಡಹಗಲೆ ಧರ್ಮದ ಹೆಸರಲ್ಲಿ ಕೊಂದರೂ ು ಸರ್ಕಾರವನ್ನು ಕ್ಷಮಿಸಿಬಿಡಬೇಕು. ಅಲ್ಲಿಯ ರಾಜಕಾರಣಿಗಳು, ಪೊಲೀಸರು, ರಿಗಳು ಗೂಂಡಾಗಳಂತೆ ವರ್ತಿಸಿದರೂ ಸಹಿಸಬೇಕು. ಹೀಗೆ ಮೇಡಂ, ತೋರು ಹೇಳಿಬಿಡುತ್ತೀರಿ. ನಮ್ಮಂತವರ ಸಂಕಷ್ಟ ಯಾರಿಗೆ ಅರ್ಥವಾಗಬೇಕು...'' ು ಕೈಗಳನ್ನು ಮುಖಕ್ಕೆ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದ. ಸಮೀಪದಲ್ಲಿ ಟಿದ್ದ ನಾಲ್ಕಾರು ಜನ, ಅಲ್ಲಲ್ಲಿ ಕಲ್ಲಿನ ಬೆಂಚಿನ ಮೇಲೆ ಕುಳಿತ ಮೂರ್‍ನಾಲ್ಕು ಿಗಳು ಅರಳೆಮರದತ್ತ ಬಂದು ದೂರದಿಂದಲೇ ನೋಡತೊಡಗಿದರು. ಕ್ಷೆ ಬೇಡಲೆಂದು ಹೆಗಲಿಗೆ ಜೋಳಿಗೆ ಹಾಕಿದ್ದ ಹರಕು ಬಟ್ಟೆಯ ಒಬ್ಬ ಹುಡುಗ ಅವನಿಗಿಂತ ಸ್ವಲ್ಪ ಕಿರಿಯಳಾಗಿದ್ದ ಒಬ್ಬ ಹುಡುಗಿ ಏನೋ ನಡೀತಿದೆ ಎಂಬಂತೆ ಹೊಟ್ಟೆಯ ಆಕ್ರಂದನವನ್ನೂ ಮರೆತು ಯಾವುದೋ ಮೋಜಿನ ಆಟವೆಂಬಂತೆ ತುತ್ತಾ ನಿಂತರು. ಈ ಹುಡುಗರನ್ನು ಯಾವಾಗ ನೋಡಿದನೊ ಅವನು, ''ಬನ್ನಿ ಇಲ್ಲಿಬನ್ನಿ...'' ಎಂದು ಕರೆದ. ಯುವತಿ ತನಗೆ ಸರಿಯಾದ ಸಮಯವೆಂದು ತನ್ನ ಲ್ಡ್ ಶೂಗಳಲ್ಲಿ ಕಾಲು ತೂರಿಸಿ ಇನ್ನೇನು ಹೋಗಬೇಕೆಂಬುದರಲ್ಲಿ, ಯುವಕ ಬಳಿಗೆ ಅಡ್ಡೊಂದು ಬಡ್ಡೊಂದು ಕಾಲು ಇಡುತ್ತಾ ಬಂದು ಅವಳ ಕೈಯಲ್ಲಿದ್ದ ಬ್ಯಾಗ್ ಕಸಿದುಕೊಂಡ. ಸುತ್ತ ನಿಂತವರ ಕಣ್ಣಮುಂದೆಯೇ ಅವಳ ಕೈಹಿಡಿದು , ''ಬನ್ನಿ ಮೇಡಂ, ಈ ಮಕ್ಕಳಿಗೆ ತಿನ್ನಿಸಿ. ಆಗ ಸಾರ್ಥಕವಾಗುತ್ತೆ ನಿಮ್ಮ ಶ್''. ಯುವತಿ ಸುತ್ತ ನಿಂತ ಮಂದಿಯ ನೋಟದ ಇರಿತಕ್ಕೆ ತುತ್ತಾದಳೋ , ''ಬಿಡೋ ಹುಚ್ಚಾ, ನನ್ನ ಕೈ ಹಿಡಿತಿಯೇನು ?'' ಎಂದು ಕೂಗಾಡಿದಳು. ಮಾನ ಕಾಪಾಡಲೆಂದೇ ಹುಟ್ಟಿದ ಕಲಿಯುಗದ ಶ್ರೀಕೃಷ್ಣ ಪರಮಾತ್ಮನೆಂಬಂತೆ ಂತವರು ಓಡೋಡಿ ಬಂದರು. ಕ್ಯಾರಿಬ್ಯಾಗ್‌ನ್ನು ಹುಡುಗರ ಕೈಗೆ ಕೊಟ್ಟ ಅವನು, ಿ ಹುಚ್ಚ ಎನ್ನುತ್ತಿಯಾ ? ನಿನಗೆಷ್ಟು ಸೊಕ್ಕು ! ಇಷ್ಟೊತ್ತು ನನ್ನ ಬಳಿ ಕುಳಿತ ನೀನು . ಯಾವುದೇ ಕೆಟ್ಟ ಭಾವನೆಯಿಲ್ಲದೆ ಕೈಹಿಡಿದು ಕರೆದಿದ್ದಕ್ಕೆ ಹುಚ್ಚಾ ಎನ್ನುತ್ತಿಯಾ ? ಂತವರು ಹುಚ್ಚರು. ಅಲ್ಲಿ ಸೇಗರೇಟು ಸೇದುತ್ತಾ ಬರುತ್ತಿದ್ದಾರಲ್ಲ ಪೊಲೀಸರು ಹುಚ್ಚರು...'' ಗಹಗಹಿಸಿ ನಕ್ಕು, ಒಂದು ನಿಮಿಷದಲ್ಲೆ ''ಬನ್ನಿ ಮೇಡಂ, ಹಾಗೆ ದ್ದಕ್ಕೆ ನನ್ನನ್ನು ಕ್ಷಮಿಸಿ...'' ಎಂದು ಬೆವರೊಡೆದ ಮುಖ, ಕತ್ತಿನ ಮೇಲೆ ಕರವಸ್ತ್ರದಿಂದ ಕೊಳ್ಳುತ್ತಿದ್ದ ಅವಳ ಕಾಲುಹಿಡಿದು ಬೇಡಿಕೊಂಡ. ಅವನು ಕಾಲುಹಿಡಿದ ಕೂಡಲೇ ಜೋಲಿ ತಾಳದೆ ನೆಲಕ್ಕೆ ಕುಸಿದಳು. ಸುತ್ತ ನಿಂತ ಜನ, ''ನಮ್ಮೆದುರಿಗೇ ಯುವತಿಯ ಬಲಾತ್ಕಾರ ಮಾಡಲು ನಿನಗೆಷ್ಟು ಸೊಕ್ಕು ?'' ಎಂದು ಅಬ್ಬರಿಸಿ ಬಂದರು.

ಕ್ಷುಕ ಹುಡುಗರು ಇದ್ಯಾವುದೂ ತಮ್ಮ ವ್ಯಾಪ್ತಿಗೆ ಬರುವುದಿಲ್ಲ ಎಂಬಂತೆ ಸ್ವಲ್ಪ ಹೋಗಿ ಕುಳಿತು ಕ್ಯಾರಿಬ್ಯಾಗ್‌ನಲ್ಲಿದ್ದ ಬ್ರೆಡ್, ಬನ್, ಐಸ್‌ಕ್ರೀಮ್‌ಗಳನ್ನು ತೆಗೆದು ಕೊಂಡು ತಿನ್ನತೊಡಗಿದರು. ಅವನನ್ನು ನೆಲಕ್ಕೆ ಹಾಕಿ ಬಡಿದವರು ಯಾರೋ, ರು ಯಾರೊ, ಅಂಗಿ ಹರಿದವರು ಯಾರೊ, ಒಟ್ನಾರೆ ನೆಲಕ್ಕೆ ಬಿದ್ದ ಅವನು ಸವನೆ ಚೀರುತ್ತಿದ್ದ, ''ನನಗೆ ಬಡಿಯಲು, ಒದೆಯಲು ನಿಮಗೇನು ಹಕ್ಕಿದೆ ? ತಪ್ಪು ಮಾಡಿಲ್ಲ...'' ಎಂದು ಗೋಗರೆದ. ಜನರ ಗುಂಪು, ಗದ್ದಲ ಕಂಡ ೀಸರು ಡೊಳ್ಳು ಹೊಟ್ಟೆಯನ್ನು ಅತ್ತಿತ್ತ ತುಳುಕಾಡಿಸುತ್ತಾ ಬಂದರು. ಪೊಲೀಸರು ದ್ದಂತೆಯೇ ಜನ ಬಡಿಯುವುದನ್ನು ನಿಲ್ಲಿಸಿ, ತಲೆಗೊಂದು ಮಾತನಾಡ ಗಿದರು. ''ನೋಡಲು ಸಭ್ಯನಂತೆ ಕಾಣುವ ಇವನು, ಅಲ್ಲಿ ನಿಂತಿದ್ದಾರಲ್ಲ ಪಾಪ ಮೇಲೆ ಬಲಾತ್ಕಾರ ಮಾಡಲು ಮುಂದಾಗಿದ್ದ, ಸರ್. ಏನೊ ನಾವು ನೋಡಿದೆವು, ಮಾನ ಉಳೀತು''. ಯುವತಿ ಬಲಗೈಯಿಂದ ಬಾಯಿಮುಚ್ಚಿಕೊಂಡು ಂದೂ ಮಾತನಾಡದೆ ಗಾಬರಿಯಾಗಿ ನಿಂತಿದ್ದಳು. ''ಲೇ ಬೋಸೂಡಿ ಮಗನೆ, ಂಡ್ಯಾಗ ಹುಳಾ ಕಡಿತಾವೇನು ? ನಡಿ ಸ್ಟೇಷನ್ನಿಗೆ. ಅನ್ನ, ನೀರಿಲ್ಲದೆ ಕೂಡಿಹಾಕಿ ನಿನಗೆ ಬುದ್ಧಿ ಬರುತ್ತ...'' ಯಃಕಶ್ಚಿತ್ ಎಂಥದೊ ರೋಗ ಹತ್ತಿದ ಸೊಣಕಲು ದ ಹುಚ್ಚುನಾಯಿಯೆಂಬಂತೆ ಅವನನ್ನು ನೋಡಿದ ಪೊಲೀಸರು ಕೈಗಳಲ್ಲಿದ್ದ ಯಿಂದ ಅವನ ಗೋಣು ಎತ್ತಿದರು. ಒಂದೆರಡು ಹಲ್ಲು ಉದುರಿದ್ದವು. ತಲೆಗೆ ೋ ಕಲ್ಲಿನಿಂದ ಜಜ್ಜಿದ್ದರೂ ರಕ್ತ ಸುರಿಯುತ್ತಿತ್ತು. ''ಎದ್ದು ನಿಲ್ಲಲೆ ಬೋಳಿಮಗನೇ'' ಎಂದು ಕ್ವಾರಿ ಮೀಸೆಯ ಒಬ್ಬ ಪೊಲೀಸ್ ಅವನ ತೋಳನ್ನು ಹಿಡಿದು ಎತ್ತಿದ. ಅವನು ಮೈಯಲ್ಲಿ ತ್ರಾಣವಿಲ್ಲದಂತಾಗಿ ಜೋತುಬಿದ್ದ. ಮತ್ತೊಬ್ಬ ಪೊಲೀಸ್ ಮೊಣಕಾಲಿನಿಂದ ಅವನ ಕುಂಡೆಗೆ ಒದ್ದ, ಅವನು ಮುಂದಕ್ಕೆ ಬೀಳುತ್ತಿದ್ದಂತೆ ದೂರದಲ್ಲಿ ನಿಂತ ಯುವತಿ ಓಡಿಬಂದು ಅವನ ಎದೆಗೆ ಕೈಹಿಡಿದಳು. ''ಸರ್ ಇವರದ್ದೇನೂ ತಪ್ಪಿಲ್ಲ, ಹಿ ಈಸ್ ಮೆಂಟಲಿ ರಿಟಾರ್ಟೆಡ್.. ಅವನ ವರ್ತನೆ ಸ್ವಲ್ಪ ಎಕ್ಸೆಸ್ ಅನ್ನಿಸಿತು, ಅಷ್ಟೆ. ಪ್ಲೀಸ್ ಲೆಟ್ ಹಿಮ್ ಗೊ ಅವೆ'' ಅವಳ ಮಾತನ್ನು ಪೊಲೀಸರು ಎಷ್ಟು ಸರಿಯಾಗಿ ಕಿವಿಗೆ ಹಾಕಿ ಕೊಂಡರೂ ! ''ನಿಮ್ಮಂಥವರಿಗೆ ಇಂಥವರು ಹೀಗೆ ಕಾಣುತ್ತಾರೆ. ಹುಚ್ಚರಂತೆ ನಟಿಸುವವರು ದೊಡ್ಡ ಕ್ರಿಮಿನಲ್ ಇರ್‍ತಾರೆ. ಒದ್ದು ಜೈಲಿಗೆ ಹಾಕಿದರೆ ಇವರಿಗೆ ಹಿಡಿದ ಹುಚ್ಚು ಎಲ್ಲಾ ಬಿಟ್ಟು ಹೋಗುತ್ತೆ. ನೀವು ದೂರ ಸರಿದು ನಿಲ್ಲಿ'' ಎಂದು ಯುವತಿಯನ್ನು ದೂರ ಸರಿಸಿದರು.

ಪೊಲೀಸರು ಒಂದೊಂದೆ ಹೆಜ್ಜೆ ಮುಂದಕ್ಕೆ ಇಡುತ್ತಿದ್ದಂತೆ, ಅವನು ಕೊಸರಾಡ ತೊಡಗಿದ. ''ಹೇ ಬಿಟ್ಟಿ ನಾಯಿಗಳಾ, ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗ್ತೀರಿ. ಮಾಡಲಾರದ ತಪ್ಪಿಗೆ ನನ್ನ ಜೈಲಿಗೆ ಹಾಕ್ಬೇಕು. ಆದ್ರ ನೀವು ಮಾಡಿರೊ ತಪ್ಪುಗಳಿಗೆ ನಿಮ್ಮನ್ನು ಗಲ್ಲಿಗೇರಿಸಬೇಕು. ದೇಶದ ಸಾಮಾನ್ಯ ಜನರ ನೆತ್ತರು ಕುಡಿಯೋ ಎಲ್ಲರನ್ನೂ ಗಲ್ಲಿಗೇರಿಸಬೇಕು...'' ಶಕ್ತಿ ಇದ್ದಷ್ಟು ಕೂಗಾಡಿದ. ಪೊಲೀಸರು ಮತ್ತಷ್ಟು ಅವನನ್ನು ಬಿಗಿಯಾಗಿ ಹಿಡಿದು, ಹೆಜ್ಜೆಗೊಮ್ಮೆ ಮತ್ತೊಂದು ಕೈಯಲ್ಲಿದ್ದ ಲಾಠಿಯಿಂದ ಸಿಕ್ಕ ಸಿಕ್ಕಲ್ಲಿ ಬಡಿಯುತ್ತಾ ಪಾರ್ಕ್ ಗೇಟ್‌ನತ್ತ ಸಾಗಿದರು. ಯುವತಿಗೆ ಏನೊಂದೂ ತೋಚಲಿಲ್ಲ. ಜನರ ಗುಂಪು ಕರಗುತ್ತಿದ್ದಂತೆ, ಫರ್ ಮರದತ್ತ ನಡೆದಳು. ಅವನ ಮುಂದಿದ್ದ ಕಲ್ಲುಗಳು ಎಲ್ಲೆಂದರಲ್ಲಿ ಬಿದ್ದಿದ್ದವು. ಅವು ತನ್ನನ್ನು ನೋಡಿ ಗಹಗಹಿಸಿ ನಕ್ಕಂತೆ ಅನ್ನಿಸಿತು. ''ಐ ಆ್ಯಮ್ ವೆರಿ ಸಾರಿ ಯಂಗ್‌ಮ್ಯಾನ್....'' ಹೀಗೆ ಹತ್ತಾರು ಬಾರಿ ತನ್ನಷ್ಟಕ್ಕೆ ತಾನು ಅಂದು ಕೊಂಡಳು. ಅಲ್ಲೊಂದು ಇಲ್ಲೊಂದು ಬಿದ್ದ ನಾಲ್ಕು ಕಲ್ಲುಗಳ ಮಧ್ಯೆ ಕಾಲು ಮಡಿಸಿಕೊಂಡು ಕುಳಿತಳು. ಪಾರ್ಕಿನ ಹೊರಗೆ ನಿಂತಿದ್ದ ಜೀಪಿನಲ್ಲಿ ಅವನನ್ನು ಕೂಡಿಸಿ ಕೊಂಡ ಪೊಲೀಸರು ಭರ್‍ರನೆ ಸಾಗಿದರು. ಜೀಪಿನಿಂದ ಹೊರಗೆ ಅವನು ಇಣುಕಿ ಹಾಕಿದಂತೆ ಭಾಸವಾಯಿತು ಅವಳಿಗೆ. ''ಬಂದೇ ಬರುತ್ತೇನೆ. ನಿನ್ನ ಕೇಳುತ್ತೇನೆ...'' ಎಂದು ಕೂಗಿದಂತೆ ಅನ್ನಿಸಿತು. ಪಕ್ಕದಲ್ಲಿದ್ದ ಕಲ್ಲನ್ನು ಹಾಗೆ ಮುಟ್ಟಿದಳು. ತನಗೆ, ಅದಕ್ಕೂ ಬಹಳ ವ್ಯತ್ಯಾಸವಿಲ್ಲ ಎನ್ನಿಸಿತು. ಭಿಕ್ಷುಕ ಹುಡುಗ ಖಾಲಿ ಕ್ಯಾರಿಬ್ಯಾಗ್‌ನ್ನು ತನ್ನ ತಲೆಗೆ ಟೊಪ್ಪಿಗೆ ರೀತಿಯಲ್ಲಿ ಹಾಕಿಕೊಂಡು, ಸಿನಿಮಾ ಹೀರೊನಂತೆ ಬರುತ್ತಿದ್ದ. ಅವನ ಪಕ್ಕದಲ್ಲಿ ಐಸ್‌ಕ್ರೀಮ್ ಖಾಲಿ ಕಪ್‌ಗಳಲ್ಲಿ ತನ್ನ ಪುಟ್ಟ ಕೈಗಳನ್ನು ತೂರಿಸಿದ ಹುಡುಗಿ ತನ್ನ ಕೈಗಳು ಚೂಪಾಗಿ ಕಾಣುತ್ತಿರುವುದರ ಬಗ್ಗೆ ಬಲು ಸೋಜಿಗಗೊಂಡು ಫರ್ ಮರದ ಕೆಳಗೆ ಕುಳಿತ ಯುವತಿಯನ್ನು ಬೇಕೊ ಬೇಡವೊ ಎಂಬಂತೆ ನೋಡಿ ಸಾಗಿದಳು. ಯುವತಿ ತಲೆಯಲ್ಲಿ ಏನೊ ಥಟ್ಟೆಂದು ಹೊಳೆದು ಎದ್ದುನಿಂತಳು. ಪಾರ್ಕ್‌ನಿಂದ ಬಿರಬಿರನೆ ನಡೆದಳು. ಪಾರ್ಕ್‌ನ ಎದುರಿಗಿದ್ದ ಭವ್ಯ ಕಾಂಪ್ಲೆಕ್ಸ್‌ನ ಎರಡನೇ ಮಹಡಿಯಲ್ಲಿದ್ದ ಇಂಟರ್‌ನೆಟ್ ಕೆಫೆಯತ್ತ ನಡೆದಳು. ಅವನದು ನಿಜವಾಗಿಯೂ ಬ್ಲಾಗ್ ಇದ್ದರೆ ಅಲ್ಲಾದರೂ ಕ್ಷಮೆ ಕೇಳಬೇಕು. ಅವನ ವಿಚಾರ ಲಹರಿ, ಹಾಗೆ ಬರೆದ ಪತ್ರಗಳನ್ನು ಓದಬೇಕು. ಪ್ರತಿಕ್ರಿಯಿಸಬೇಕು...'' ಅಂದುಕೊಳ್ಳುತ್ತಾ ಇಂಟರ್‌ನೆಟ್ ಕೆಫೆ ಪ್ರವೇಶಿಸಿದಳು. ಗೂಗಲ್ ಸರ್ಚ್‌ನಲ್ಲಿ 'ಡಬ್ಲ್ಯೂಡಬ್ಲ್ಯೂಡಬ್ಲ್ಯೂ ಹುಚ್ಚ ಡಾಟ್ ಕಾಮ್' ಎಂದು ಟೈಪ್ ಮಾಡಿದಳು. ನೂರಾರು ಫೈಲ್‌ನೇಮ್‌ಗಳನ್ನು ಕಂಡು ನಿಧಿ ಸಿಕ್ಕವರಂತೆ ಮೊದಲಿದ್ದ 'ಹುಚ್ಚಬ್ಲಾಗ್‌ಸ್ಪಾಟ್ ಡಾಟ್ ಕಾಮ್' ಮೇಲೆ ಕ್ಲಿಕ್ ಮಾಡಿದಳು. ಬೂಟ್ ಆಗುತ್ತಿತ್ತು. ಇನ್ನೇನು ಒಂದೆರಡು ಕ್ಷಣಗಳಲ್ಲಿ... ತನ್ನಿಂದಲೇ ಆದ ತಪ್ಪಿಗೆ ಅವನ ಬಳಿ ಕ್ಷಮೆ ಯಾಚಿಸಬೇಕು... ಬಿಟ್ಟ ಕಣ್ಣುಗಳಿಂದ ಮಾನಿಟರ್‌ನ್ನೇ ನೋಡತೊಡಗಿದಳು. ಫೈಲ್ ಒಂದು ಓಪನ್ ಆಗುತ್ತಿದ್ದಂತೆ ಎದೆಬಡಿತ ಹೆಚ್ಚಾಯಿತು. ಬ್ಲಾಗ್ ಓಪನ್ ಆಗುತ್ತಿದ್ದಂತೆ ಕೀ ಬೋರ್ಡ್ ಮೇಲೆ ಇನ್ನೇನು ಬರೆಯಲು ಬೆರಳುಗಳು ಅವಸರಿಸಿ, ಅತ್ತಿತ್ತ ಬೆರಳುಗಳ ಆಡಿಸಿದಳು. ಬ್ಲಾಗ್ ರೂಲರ್ ಕೆಳಗೆ ಎರಡು ಸಾಲುಗಳನ್ನು ಓದುತ್ತಿದ್ದಂತೆಯೇ ನಿರಾಶೆ ಕಾರ್ಮೋಡ ಕವಿಯಿತು. 'ದ ಬ್ಲಾಗರ್ ಹ್ಯಾಸ್ ಟೆಂಪರರಲಿ ಡಿಸ್‌ಕನೆಕ್ಟೆಡ್ ಬ್ಲಾಗಿಂಗ್. ಡು ಯು ವಾಂಟ್ ಟು ಕನೆಕ್ಟ್ ಅಗೆನ್ ವಿಥ್ ಅನದರ್ ನೇಮ್' ಕಣ್ಣಿಗೆ ಕತ್ತಲೆ ಆವರಿಸಿದಂತಾಗಿ ಸ್ಟೂಲಿನಂತಿದ್ದ ಕುರ್ಚಿಯ ಹಿಂದಕ್ಕೆ ಬಾಗಿದಳು. ನೆಲದ ಮೇಲೆ ಮೂರ್ಛೆ ಹೋದಳು. ಒಂದೆರಡು ನಿಮಿಷಗಳ ನಂತರ ಎದ್ದು, ''ಐ ಆ್ಯಮ್ ರಿಯಲಿ ಸಾರಿ... ಐ ಆ್ಯಮ್ ಸಾರಿ'' ಎಂದು ಬಡಬಡಿಸತೊಡಗಿದಳು.

**ಕಲಿಗಣನಾಥ ಗುಡದೂರು**
ಇಂಗ್ಲಿಷ್ ಉಪನ್ಯಾಸಕ, ಸಂಕೇತ ಪಿ.ಯು. ಕಾಲೇಜ್, ಆದರ್ಶ ಕಾಲೋನಿ
ಸಿಂಧನೂರು - ೫೮೪ ೧೨೮, ರಾಯಚೂರು ಜಿಲ್ಲೆ




ನವೀನನ ಮನೆಯು ಹೆಸರಿಗೆ ತಕ್ಕಂತೆ ನವ ನವೀನವಾಗಿತ್ತು. ಇದು ಒಂದು ಹೊಸತನ ದಿಂದ ಕೂಡಿದ್ದು, ಬಂದವರೆಲ್ಲರೂ ಅದನ್ನು ಹೊಗಳುವವರೇ. ಇದಕ್ಕೆ ಮುಖ್ಯ ಕಾರಣ ಆ ಮನೆಯಲ್ಲಿದ್ದ ಎರಡಂತಸ್ತಿನ ಎತ್ತರದ ನಡುಮನೆ. ಬಂದ ಕೂಡಲೆ ಅದು ತನ್ನ ವಿಶಾಲತೆಯಿಂದ, ವೈವಿಧ್ಯತೆಯಿಂದ ಅತಿಥಿಗಳನ್ನು ಆಕರ್ಷಿಸುತ್ತಿತ್ತು.

ಅವನ ನಿವೇಶನವು ಚಿಕ್ಕದಿದ್ದುದರಿಂದ ನೆಲ ಅಂತಸ್ತಿನಲ್ಲೇ ಎಲ್ಲಾ ರೂಮುಗಳನ್ನು ಕಟ್ಟಲು ಆಗುತ್ತಿರಲಿಲ್ಲ. ಮೇಲೆ ಬೇರೆ ಮನೆ ಕಟ್ಟಿ ಬಾಡಿಗೆಗೆ ಕೊಡುತ್ತೇನೆ ಎಂಬ ಸಾಮಾನ್ಯ ಜನರ ಅನಿಸಿಕೆಯಿಂದ ಅವನು ದೂರ ಉಳಿದು ಮಹಡಿಯ ಮೇಲೂ ತನಗೆ ಬೇಕಾದಂತೆ ರೂಮುಗಳನ್ನು ಕಟ್ಟಿಸಿಕೊಂಡಿದ್ದ. ನೆಲದ ಮೇಲೆ ವೆರಾಂಡಾ, ನಡುಮನೆ, ಊಟದ ಮನೆ, ಸಾಮಾನ್ಯ ಶೌಚಾಲಯ, ಅಡುಗೆಮನೆ, ಯುಟಿಲಿಟಿ, ಗರಾಜ್ ಹಾಗೂ ಒಂದು ಚಿಕ್ಕ ಮಲಗುವ ಮನೆ (ಅತಿಥಿಗಳಿಗೆ) ಇತ್ತು. ಮಹಡಿಯ ಮೆಟ್ಟಿಲು ಹತ್ತಿ ಹೋದರೆ ಅಲ್ಲಿ ಕುಟುಂಬದವರ ನಡುಮನೆ, ಎರಡು ಮಲಗುವ ಮನೆಗಳೂ ಜೊತೆಗೆ ಹೊಂದಿಕೊಂಡಿರುವ ಶೌಚಾಲಯ, ಸ್ವಲ್ಪ ಟೆರೇಸ್ ಇದ್ದವು.

ಕೆಳಗಿನ ರೂಮುಗಳ ವಿಸ್ತೀರ್ಣ ಹೆಚ್ಚಿದ್ದು ಮೇಲಿನವುಗಳ ವಿಸ್ತೀರ್ಣ ಕಡಿಮೆ ಇತ್ತು. ಇವನ್ನು ಸರಿದೂಗಿಸಲು ಮೇಲೆ ಒಂದಿಷ್ಟು ಟೆರೇಸನ್ನು ಬಿಟ್ಟು ಉಳಿದಂತೆ ನಡುಮನೆಗೆ ಎರಡಂತಸ್ತಿನ ಎತ್ತರ ನೀಡಲಾಗಿತ್ತು.

ಮನೆಯ ವೆರಾಂಡಾ ಚಿಕ್ಕದಾಗಿದ್ದು, ಕುಳಿತು ಕೊಳ್ಳಲು ಕಲ್ಲಿನ ಬೆಂಚನ್ನು ಹಾಕಲಾಗಿತ್ತು. ಅಲ್ಲಿಯೇ ರಾತ್ರಿಯ ಹೊತ್ತು ದ್ವಿಚಕ್ರ ವಾಹನವನ್ನು ನಿಲ್ಲಿಸಲು ಅನುಕೂಲ ಕಲ್ಪಿಸಲಾಗಿತ್ತು. ಇಲ್ಲಿಂದ ಮನೆಯ ಮುಖ್ಯದ್ವಾರ, ಅಂದರೆ ನಡುಮನೆಗೆ ಹೋಗುವ ಬಾಗಿಲಿತ್ತು. ವೆರಾಂಡಾ ಒಂದು ರೀತಿಯ ಸೆಮಿಓಪನ್ ಆಗಿದ್ದು ಹಳೆಯ ಕಾಲದ ಜಗಲಿಯನ್ನು ನೆನಪಿಸಿದರೂ ಅದರಲ್ಲಿ ಏನೋ ಹೊಸತನವಿತ್ತು. ಈ ವೆರಾಂಡಾಗೆ ಹೊರಭಾಗದಲ್ಲಿ ಗೋಡೆಯೂ ಇರಲಿಲ್ಲ, ಬಾಗಿಲೂ ಇರಲಿಲ್ಲ. ಆದರೆ ಅದಕ್ಕೆ ಬದಲಾಗಿ ಗ್ರಿಲ್ ರೋಲಿಂಗ್ ಶಟರ್ ಹಾಕಿದ್ದರು. ಅದನ್ನು ಬೆಳಿಗ್ಗೆ ಒಮ್ಮೆ ತೆಗೆದು ಬಿಟ್ಟರೆ ವೆರಾಂಡಾ ಅರೆತೆರೆದ ರೂಮಾಗುತ್ತಿತ್ತು. ಅದನ್ನು ಮುಚ್ಚಿದರೂ ಗಾಳಿ, ಬೆಳಕು ಅದರ ಮೂಲಕ ದೊರೆಯುತ್ತಿತ್ತು. ಮುಚ್ಚಿದಾಗ ಮನೆಗೆ ಒಳ್ಳೆಯ ಭದ್ರತೆ ದೊರೆಯುತ್ತಿತ್ತು.

ವೆರಾಂಡಾದಿಂದ ನಡುಮನೆಗೆ ಪ್ರವೇಶವಿತ್ತು. ಈ ನಡುಮನೆಗೆ ಎರಡಂತಸ್ತಿನ ಎತ್ತರ ನೀಡಲಾಗಿತ್ತು. ಇದರಿಂದ ಅದಕ್ಕೆ ಒಂದು ರೀತಿಯ ಘನತೆ ಬಂದು ಇಡೀ ಮನೆಗೆಲ್ಲಾ ನಾನೇ ಪ್ರಮುಖ ಎಂದು ಸಾರಿ ಹೇಳುವಂತಿತ್ತು. ಇದರ ಮೇಲು ಭಾಗದಲ್ಲೇ ಮನೆಯ ಕುಟುಂಬದ ನಡುಮನೆ ಇದ್ದುದರಿಂದ ಮನೆಗೆ ಯಾರಾದರೂ ಬಂದರೆ ಮೇಲಿನಿಂದಲೇ ಬಗ್ಗಿ ನೋಡಬಹುದಿತ್ತು. ಇದರ ಭಾವಣಿ ಕುಟುಂಬ… ನಡುಮನೆಯಿಂದ ಕೆಳಗೆ ವೆರಾಂಡಾದವರೆಗ… ಇಳಿಜಾರಾಗಿ ಬಂದಿತ್ತು. ಅದರ ನಡುವೆ ಒಂ… ಡಾರ್ಮರ್ ಕಿಟಕಿ ಇದ್ದು, ಅದರ ಮೂಲ… ನಡುಮನೆಗೆ ಗಾಳಿ ಬೆಳಕು ಬರುತ್ತಿತ್ತು. ಅಲ್ಲ… ಮೇಲಿನ ಕುಟುಂಬದ ನಡುಮನೆಯಲ್ಲಿ ನಿಂತಾಗ ಈ… ಕಿಟಕಿಯ ಮೂಲಕ ಹೊರಗಿನ ಸುಂದರವಾದ ದೃ… ತುಂಬಾ ಚೆನ್ನಾಗಿ ಕಾಣುತ್ತಿತ್ತು. ಮನೆಯ ಮುಂದಿ… ರಸ್ತೆಯಲ್ಲಿದ್ದ ಮರ ಹೂ ಬಿಟ್ಟಾಗಲಂತೂ ಈ… ಕಿಟಕಿಯ ದೃಶ್ಯ ಕಲಾವಿದನೊಬ್ಬ ರಚಿಸಿದಂತೆ… ಸುಂದರವಾಗಿ ಕಾಣುತ್ತಿತ್ತು. ಈ ನಡುಮನೆಯ… ಎತ್ತರದಿಂದಾಗಿ ಮನೆಗೆ ಚೆನ್ನಾಗಿ ಗಾಳಿ ಬೀಸುತ್ತಿತ್ತು… ಅದರ ಸುತ್ತಮುತ್ತಲಿನ ಕೋಣೆಗಳಿಗೂ ಗಾ… ಬೆಳಕನ್ನು ನೀಡಲು ಇದು ಸಹಾಯ ಮಾಡುತ್ತಿತ್ತು… ಇದರ ಇಳಿಜಾರಾದ ಭಾವಣಿ ಮತ್ತು ಅದರ… ಮೇಲಿದ್ದ ಡಾರ್ಮರ್ ಕಿಟಕಿ ಮನೆಯ ಹೊರಗಿನ… ಸೌಂದರ್ಯಕ್ಕೂ ಒಳ್ಳೆಯ ಮೆರುಗನ್ನು ನೀಡಿದ್ದವು.

ಇದಕ್ಕೆ ಹೊಂದಿಕೊಂಡಂತೆಯೇ ಇದ್ದ… ಮಹಡಿಯ ಮೆಟ್ಟಿಲುಗಳು ಈ ನಡುಮನೆಯ… ಚೆಂದವನ್ನು ಹೆಚ್ಚಿಸಿದ್ದವು. ಅದರ ಮೇಲೆ ಹತ್ತಿ… ಹೋಗುವಾಗ ನಡುವೆ ಇದ್ದ ಲ್ಯಾಂಡಿಂಗ್ ಮೇಲೆ… ನಿಂತು ಅವಲೋಕಿಸಿದರೆ ಇಡೀ ನಡುಮನೆಯ… ದೃಶ್ಯ ಸುಂದರವಾಗಿ ಕಾಣುತ್ತಿತ್ತು. ಕೆಳಗಿನಿಂದಲೂ… ಈ ಮೆಟ್ಟಿಲು, ಡಾರ್ಮರ್ ಕಿಟಕಿಯಿಂದ ಬರುವ… ಬೆಳಕು, ಡಾರ್ಮರ್ ಕಿಟಕಿ, ಇಳಿಜಾರಾದ ಭಾವಣಿ… ಮೇಲಿನ ನಡುಮನೆಯ ನೋಟ ಇವು ಅತಿಥಿಗಳನ್ನು… ಆಕರ್ಷಿಸುತ್ತಿದ್ದುದರಲ್ಲಿ ಅತಿಶಯೋಕ್ತಿಯೇನೂ… ಇರಲಿಲ್ಲ. ಇದಲ್ಲದೇ ಈ ನಡುಮನೆಯ… ಒಳಾಂಗಣದ ಅಲಂಕಾರ, ಗೋಡೆಗಳ ಬಣ್ಣ… ಅವುಗಳ ಮೇಲೆ ಸುಂದರವಾಗಿ ಕಾಣುತ್ತಿದ್ದ… ಚಿತ್ರಗಳು ಈ ಕೋಣೆಯ ಮೆರುಗನ್ನು ಅ… ಕೋಣೆಯ ಎತ್ತರದಂತೆಯೇ ಎತ್ತರಕ್ಕೆ ಏರಿಸಿದ್ದವು.

ಒಟ್ಟಿನಲ್ಲಿ, ಈ ಡಬಲ್ ಹೈಟ್ ಎಂಬುದು… ಮನೆಯ ವಿನ್ಯಾಸದಲ್ಲಿ ಪ್ರಮುಖ ಪಾತ್ರವನ್ನು… ವಹಿಸುವುದರಲ್ಲಿ ಸಂದೇಹವೇ ಇಲ್ಲ. ಇದನ್ನು ಹೇ… ವಿನ್ಯಾಸ ಮಾಡಬೇಕು ಎಂದು ಕಲ್ಪಿಸಿಕೊಳ್ಳುವ… ವಾಸ್ತುಶಿಲ್ಪಿಯ ಪಾತ್ರ ಇಲ್ಲಿ ಬಹು ಮುಖ್ಯ. ಈ… ಕಲ್ಪನೆಯೇ ಮುಂದೆ ಮನೆ ಕಟ್ಟುವ ಕಂಟ್ರಾಕ್ಟರ್‌ನಿಂದ… ಸಾಕಾರಗೊಳ್ಳುತ್ತದೆ. ಇದು ವ್ಯರ್ಥ, ಸುಮ್ಮ… ಖರ್ಚು ಎನ್ನುವ ಮಂದಿಗೇನೂ ಕಡಿಮೆ ಇಲ್ಲ… ಆದರೆ ಇದನ್ನು ಹೇಗೆ ಕಲ್ಪಿಸಿಕೊಳ್ಳುತ್ತಾರೆ, ಹೇಗೆ ಇದು… ಬೇರೆ ರೀತಿಯಲ್ಲಿ ಉಪಯೋಗವಾಗುತ್ತದೆ ಎಂಬುದು… ಮುಖ್ಯ. ನಿಮಗೇನಾದರೂ ಸಾಧ್ಯವಾದರೆ ಡಬಲ್… ಹೈಟ್ ಕೊಟ್ಟು ನೋಡಿ, ಆದರೆ ಅತ್ಯುತ್ತಮವಾ… ಕಲ್ಪನೆಯೊಂದಿಗೆ ಎಂಬುದನ್ನು ಮರೆಯಬೇಡಿ.

**ಪ್ರೊ|| ಜಗದೀಶ ಚಂದ್ರ ಬಿ. ಎಸ್.**
ನಂ. ೪೪೨, ಮೊದಲನೆಯ ಮಹಡಿ, ೩೮ನೇ ಕ್ರಾಸ್
೫ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

## ತುಕ್ಕು

ಪ್ರಕಾಶಕ್ಕೂ
ಹಿಡಿಯಿತೆ - ಗುಕ್ಕು ?
ಇದೇನಿದು ಅಸ್ತಿತ್ವಕ್ಕಾಗಿ
ಕತ್ತಲೆಯ ಕದ-
ತಟ್ಟುವ ಹಕೀಕತ್ತು!

ಡಿ.ವಿ.ಬಡಿಗೇರ
ತೆಗ್ಗಿನಪೇಟೆ ಓಣಿ, ಗದಗ - ಬೆಟಗೇರಿ - ೫೮೨೧೦೨




























*With Best Compliments from*

## Shivam Books

812, 4th Main, 9th Block, Nagarabhavi 2nd Stage, Bangalore - 560 072. Ph : 080-2321 3410
New No. 129/3, Kumarappa Street, Nungambakkam, Chennai - 600 034. Ph : 044-2823 5821
Mobile : 98412 97901 E-mail : shivambooks@yahoo.co.in
Flat No. 304, Magpie Building, Nyati Enclave, Mohammedwadi, Pune - 411 028.



























## ಆಹ್ವಾನಿತ ಪ್ರತಿಕ್ರಿಯೆಗಳು

# ದೇಶದ ಸಂಪನ್ಮೂಲಗಳ ಲೂಟಿ ಸಾರ್ವಜನಿಕ ಮತ್ತು ಖಾಸಗಿ ಭಾಗವಹಿಸುವಿಕೆಯ ಮುಸುಕು

ಜನತಂತ್ರದ ಸಾಧ್ಯತೆಗಳು ವಿಸ್ತರಿಸುತ್ತಿರುವ ೨೧ನೆಯ ಶತಮಾನದಲ್ಲಿ ಅಭಿವೃದ್ಧಿಯ ವ್ಯಾಖ್ಯಾನಗಳೂ ಬದಲಾಗುತ್ತಿವೆ. 'ಅಭಿವೃದ್ಧಿ' ಎಂಬ ಪರಿಕಲ್ಪನೆ ಕೇವಲ ಕ್ರಿಯಾರೂಪಕ್ಕೆ ತನ್ನನ್ನು ಸೀಮಿತಗೊಳಿಸಿಕೊಳ್ಳದೆ ರಾಜಕಾರಣದ ನಡುವೆ ತನ್ನ ಆಧಿಪತ್ಯ ಸ್ಥಾಪಿಸತೊಡಗಿದೆ. ವರ್ಗ ಹಿತಾಸಕ್ತಿಗಳನ್ನು ಎತ್ತಿ ಹಿಡಿಯಲೆಂದೇ ಅಧಿಕಾರದ ಚುಕ್ಕಾಣಿ ಹಿಡಿಯಲು ಹೆಣಗುವ ಪಕ್ಷಗಳು ತಮ್ಮ ಗುರಿ ಸಾಧನೆಗೆ ಅಭಿವೃದ್ಧಿಯನ್ನು ವ್ಯಾಖ್ಯಾನಿಸುವ ರೀತಿ ಪ್ರಜಾಪ್ರಭುತ್ವದ ಅಂತಃಸತ್ವವನ್ನೇ ನಾಶ ಮಾಡುತ್ತಿದೆ. ಜನರ ಭಾಗವಹಿಸುವಿಕೆಯೇ ಅತಿಮುಖ್ಯ ಮೌಲ್ಯವಾಗಿರಬೇಕಾದ ಈ ಪ್ರಜಾಪ್ರಭುತ್ವ, ಇಂದು ತನ್ನ ಬದಲಾದ ಸ್ವರೂಪದಲ್ಲಿ ನಮ್ಮ ನಡುವೆ ಹಲವು ಪ್ರಶ್ನೆಗಳನ್ನು ಹುಟ್ಟುಹಾಕುತ್ತಿದೆ. ತಮ್ಮನ್ನು ಪ್ರತಿನಿಧಿಸಲು ಆರಿಸಿ ಕಳುಹಿಸಿರುವ ಪ್ರತಿನಿಧಿಗಳು ದೇಶಕ್ಕೆ ಅಗತ್ಯವಾಗಿರುವ ಆರ್ಥಿಕ, ಸಾಮಾಜಿಕ ಮೌಲ್ಯಗಳನ್ನು ಎಷ್ಟರಮಟ್ಟಿಗೆ ಪ್ರತಿಬಿಂಬಿಸುತ್ತಿದ್ದಾರೆ ಎನ್ನುವುದೂ ಈ ಹಲವು ಪ್ರಶ್ನೆಗಳಲ್ಲಿ ಒಂದು.

'ಆರ್ಥಿಕ ಅಭಿವೃದ್ಧಿ' ಮತ್ತು 'ಆರ್ಥಿಕ ಬೆಳವಣಿಗೆ'ಗಳ ನಡುವೆ ಸಾಕಷ್ಟು ಅಂತರವಿದೆ. ಒಂದಿದ್ದರೆ ಇನ್ನೊಂದು ತಾನಾಗಿಯೇ ಬರುತ್ತದೆನ್ನುವುದು ಕುತರ್ಕವಾದೀತು. ಆರ್ಥಿಕ ಹಿಂಜರಿತದ ಹೊರತಾಗಿಯೂ ಶೇ. ೬ರಿಂದ ೭ರಷ್ಟು ಜಿಡಿಪಿ ಬೆಳವಣಿಗೆ ಸೂಚ್ಯಂಕ ನಮ್ಮದು ಎಂದು ಬೀಗುತ್ತಿರುವ ಭಾರತದ ಮಾನವ ಅಭಿವೃದ್ಧಿ ಸೂಚ್ಯಂಕ ಮಾತ್ರ ಕೆಲವು ಸಬ್ ಸಹಾರನ್ ದೇಶಗಳಿಗಿಂತ ಕೆಳಗಿರುವುದೇ ಅಭಿವೃದ್ಧಿ-ಬೆಳವಣಿಗೆ ತರ್ಕವನ್ನು ಅಲ್ಲಗಳೆಯುತ್ತದೆ. ಅಷ್ಟು ಸಾಲದೆಂಬಂತೆ, ಆರ್ಥಿಕ ಬೆಳವಣಿಗೆಯ ಸ್ವರೂಪವೇನು, ಆರ್ಥಿಕ ನೀತಿಗಳು ಹೇಗಿರಬೇಕು, ದೇಶದ ಆರ್ಥಿಕತೆಯಲ್ಲಿ ಯಾರು ಭಾಗಿಗಳಾಗಬೇಕು ಎಂಬಿತ್ಯಾದಿ ಸೂಕ್ಷ್ಮ ವಿಷಯಗಳನ್ನು ನಿರ್ಧರಿಸುವ ಜವಾಬ್ದಾರಿಯುತ ಕೆಲಸ, ನಿರ್ದಿಷ್ಟ ಧೋರಣೆಗಳಿಗಂಟಿಕೊಂಡ ಕೆಲವೇ ಕೆಲವು ತಜ್ಞರ ಕೈಯಲ್ಲಿರುವಂತೆ ಭಾಸವಾಗುತ್ತದೆ. ಹಾಗಾಗಿ ದೇಶದ ಗತಿಯ ಬಗ್ಗೆ ಜನರ ನಿಜವಾದ ಕಳಕಳಿಯನ್ನು ಬದಿಗೊತ್ತಿ, ಬಂಡವಾಳಶಾಹಿಗಳ ನಡುವೆ ಚಾಲ್ತಿಯಲ್ಲಿರುವ ಖಾಸಗೀಕರಣ, ಆರ್ಥಿಕ ಅಭಿವೃದ್ಧಿಯ ಮಾದರಿಗಳನ್ನು ಸರ್ಕಾರ ನಮ್ಮ ಗಂಟಲಿನಲ್ಲಿ ತುರುಕಲು ಹೊರಟಾಗ ಹೆಚ್ಚು ಅಚ್ಚರಿಯಾಗುವುದಿಲ್ಲ. ಪೂರ್ಣ ಖಾಸಗೀಕರಣಕ್ಕಿಂತ ಒಂದು ಹೆಜ್ಜೆ ಹಿಂದಿರುವ ಸಾರ್ವಜನಿಕ ಉದ್ದಿಮೆ-ಖಾಸಗಿ ಉದ್ದಿಮೆಯ ಪಾಲುದಾರಿಕೆ, ಸದ್ಯಕ್ಕೆ ಉದಾರ ಮಾರುಕಟ್ಟೆ ನೀತಿಯ ಪ್ರತಿಪಾದಕರ ಮೆಚ್ಚಿನ ವಿಷಯ. ಭಾರತವು ಆರ್ಥಿಕ ಪ್ರಗತಿ ಸಾಧಿಸುವ ಹುಮ್ಮಸ್ಸಿನಲ್ಲಿ ತನ್ನ ಮೂಲಸೌಕರ್ಯ ಕ್ಷೇತ್ರದ ಹಲವು ರಂಗಗಳನ್ನು ಖಾಸಗಿಯವರಿಗೆ ತೆರೆದುಕೊಟ್ಟಿತು. ಶಿಕ್ಷಣ, ಆರೋಗ್ಯ, ವಿದ್ಯುತ್, ಸಾರಿಗೆ, ನಿರ್ಮಾಣ ಮುಂತಾದ ಪ್ರಮುಖ ವಿಭಾಗಗಳಲ್ಲಿ ಇಂದು ಖಾಸಗಿ ಉದ್ದಿಮೆಯ ಇರವು ಆಶ್ಚರ್ಯವೆನಿಸುವಷ್ಟು ಎದ್ದುಕಾಣುತ್ತಿದೆ. ಅಲ್ಲದೆ, ಇವುಗಳ ಜೊತೆ ಬೇರುಬಿಟ್ಟ ಆರ್ಥಿಕ ಫಲಕಾರಿತ್ವದ ವಾದದಿಂದಾಗಿ ಖಾಸಗಿ ಉದ್ದಿಮೆಯೆಂದರೆ ಅತ್ಯಂತ ದಕ್ಷ ಕಾರ್ಯನಿರ್ವಾಹಕ ಎಂಬ ಭ್ರಮೆ ಹುಟ್ಟಿಸಿದೆ. ಸರ್ಕಾರಿ ಉದ್ದಿಮೆಗಳು ಸಹಜವಾದ ಉಡಾಫೆಯಿಂದ ಜನಮನ್ನಣೆಯನ್ನು ಕಳೆದುಕೊಂಡಿರುವಲ್ಲಿ, ಖಾಸಗಿ ಬೆಂಬಲ ಅದಕ್ಕೆ ಚೇತರಿಕೆ ನೀಡುತ್ತದಾದರೂ, ಎಲ್ಲವನ್ನೂ ಲಾಭ-ನಷ್ಟದ ದೃಷ್ಟಿಯಲ್ಲೇ ನೋಡುವ ಖಾಸಗಿ ಉದ್ದಿಮೆಗಳಿಗೆ ಇಲ್ಲಿ ದೀರ್ಘಾವಧಿ ಬದ್ಧತೆ ಇಲ್ಲ. ಸರ್ಕಾರ ಜನರಿಗೆ ಉತ್ತರದಾಯಿಯಾಗಿರುವಂತೆ ಖಾಸಗಿಯವರು ಇರಲಾರರು. ಹಾಗಾಗಿ ಖಾಸಗಿ ಉದ್ದಿಮೆಗಳ ಋಣಾತ್ಮಕ ಎಕ್ಸ್‌ಟರ್ನ್ಯಾಲಿಟಿಗಳಿಗೆ ಬೆಲೆ ತೆರಬೇಕಾಗಿರುವುದು ಜನರೇ. ಸಾರ್ವಜನಿಕ ಪಾಲುದಾರಿಕೆಯ ಖಾಸಗಿ ಉದ್ದಿಮೆಗಳು ಪೂರ್ಣ ಸರ್ಕಾರಿ ಹಿಡಿತದ ಉದ್ದಿಮೆಗಳಿಗಿಂತ ನೂರ್ಮಡಿ ಹೆಚ್ಚು ಪರಿಣಾಮಕಾರಿಯಾಗಿವೆ, ಅಸಂಖ್ಯ ಕೆಲಸದ ಅವಕಾಶಗಳನ್ನು ಸೃಷ್ಟಿಸುತ್ತಿವೆ ಎಂಬಿತ್ಯಾದಿ ವಾದಗಳು, ಅವು ನಮ್ಮ ಪರಿಸರದ ಮೇಲೆ ಉಂಟು ಮಾಡುತ್ತಿರುವ ಪರಿಣಾಮ, ನೆಲದ ಮೇಲಿನ ಹಕ್ಕನ್ನು ಜನರಿಂದ ಕಸಿದುಕೊಳ್ಳುವ ಪರಿ, ಕುಸಿಯುತ್ತಿರುವ ಕಾರ್ಮಿಕರ ಸ್ಥಿತಿ ಮುಂತಾದವುಗಳ ಬಗ್ಗೆ ಮಾತೆತ್ತುವುದಿಲ್ಲ. ಗಣಿಗಾರಿಕೆ, ಭಾರಿ ಕೈಗಾರಿಕೆಗಳು, ರಾಸಾಯನಿಕ ತಯಾರಿಕಾ ಕೈಗಾರಿಕೆಗಳು ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಬಂಡವಾಳ ಹೂಡಲು ಉತ್ಸುಕವಾಗಿರುವುದು ಸಹಜವೇ. ಇಲ್ಲಿನ

ಸಂಪನ್ಮೂಲಗಳನ್ನು ಅಭಿವೃದ್ಧಿಯ ಮುಸುಕಿನಲ್ಲಿ ಲೂಟಿ ಮಾಡಿ, ಕೆಲವೇ ದಶಕಗಳಲ್ಲಿ ಇಲ್ಲಿನ ಪರಿಸರವನ್ನು ಹಾಳುಗೆಡವಿ ಮರಳುವುದು ಅವರಿಗೆ ಸುಲಭದ ಕೆಲಸ. ಇತ್ತ ಸರ್ಕಾರವೂ ಖಾಸಗಿ ಹೂಡಿಕೆ ಶೂನ್ಯವಾದೀತು ಎಂಬ ಭಯದಲ್ಲಿ ನಿಷ್ಠುರ ಧೋರಣೆ ತಳೆಯಲು ಹಿಂಜರಿಯುತ್ತದೆ. ಭಾರತದಲ್ಲಿ ಸರ್ಕಾರ ನಿಷ್ಠುರವಾಗುವುದು ತನ್ನ ಜನರೊಂದಿಗೆ ಮಾತ್ರ : ಕೃಷಿಕರಿಂದ ಫಲವತ್ತಾದ ಭೂಮಿಯನ್ನು ಕಸಿದುಕೊಳ್ಳುವಾಗ, ಖಾಸಗಿಯವರಿಗೆ ಸಾವಿರಾರು ಕೋಟಿಗಳನ್ನು ಅತ್ಯಂತ ಕಡಿಮೆ ಬಡ್ಡಿದರದಲ್ಲಿ ಸಾಲವಾಗಿ ಕೊಟ್ಟು ಅವರಿಗೆ ಕಾರ್ಮಿಕರಿಂದ ಯಾವುದೇ ಸಮಸ್ಯೆಗಳು ಬರಲಾರದು ಎಂದು ಆಶ್ವಾಸನೆ ಕೊಡುವಾಗ, ಇತ್ಯಾದಿ. ಆರ್ಥಿಕ ಪ್ರಗತಿ ಬೃಹತ್ ಖಾಸಗಿ ಹೂಡಿಕೆಗಳಿಂದ ಮಾತ್ರ ಸಾಧ್ಯ ಎಂಬ ಗೊಡ್ಡು ತತ್ವಕ್ಕೆ ಇನ್ನೂ ನಾವು ಜೋತುಬಿದ್ದಿರುವುದು ಈಗಿನ ಗೊಂದಲಗಳಿಗೆ ಮುಖ್ಯ ಕಾರಣ. ಬೆಳವಣಿಗೆಯು ಅಭಿವೃದ್ಧಿಯಾಗಿ ರೂಪಾಂತರ ಗೊಳ್ಳಲು ಆರ್ಥಿಕತೆಯ ಎಲ್ಲ ಮಗ್ಗಲುಗಳಿಗೂ ಸಮಾನ ಪೋಷಣೆ ಸಿಗಬೇಕು. ಕೃಷಿರಂಗದ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರುವ ಸರ್ಕಾರ, ಕೈಗಾರಿಕೆ ಮತ್ತು ಇತರ ರಂಗಗಳಲ್ಲಿ ಸ್ವಂತಿಕೆಯನ್ನು ತೋರದೆ ವಿದೇಶಿ ಹೂಡಿಕೆಗಳಿಗೆ ತೆರೆದುಕೊಳ್ಳುತ್ತಾ, ತನ್ನ ಅಸ್ತಿತ್ವವನ್ನೇ ಇಲ್ಲವಾಗಿಸುತ್ತಾ ಹೋದರೆ ಜಿಡಿಪಿಯ ಅಂಕಿ-ಸಂಖ್ಯೆಗಳು ಹೆಚ್ಚುತ್ತವೆಯೇ ಹೊರತು ಜನರ ಜೀವನ ಮಟ್ಟವಲ್ಲ. ಆರ್ಥಿಕ ಬೆಳವಣಿಗೆಯಿಂದ ಸೃಷ್ಟಿಯಾಗುವ ಸಂಪತ್ತು ಜನರಿಗೆ ತಲುಪುತ್ತಿಲ್ಲವಾದ್ದರಿಂದ ಸರ್ಕಾರ ಇನ್ನಷ್ಟು ಗಟ್ಟಿ ನಿಲುವು ತಳೆದು ಕಾರ್ಯೋನ್ಮುಖವಾಗಬೇಕಿದೆ. ರಾಷ್ಟ್ರೀಕರಣವೆಂದರೆ ಹೌಹಾರ ಬೇಕೆನ್ನುವುದು ಬಂಡವಾಳಶಾಹಿಗಳು ನಮಗೆ ಕಲಿಸಿಕೊಟ್ಟ ಪಾಠ; ಹಾಗಾಗಿ ಅದನ್ನು ಪಾಲಿಸಬೇಕಾಗಿಲ್ಲ. ಜಗತ್ತಿನ ಹಲವಾರು ಸಮಾಜವಾದಿ ರಾಷ್ಟ್ರಗಳ ಅನುಭವ ನಮಗೆ ಮಾದರಿಯಾಗಬೇಕು. ಬೊಲಿವಿಯಾದಲ್ಲಿ ತೀರ ಇತ್ತೀಚಿನವರೆಗೂ ಮುಕ್ಕಾಲು ಪಾಲು ಸಂಪನ್ಮೂಲಗಳು ಖಾಸಗಿಯವರ ಸ್ವತ್ತಾಗಿದ್ದವು. ಇದೀಗ ಹಂತಹಂತವಾಗಿ ಸಾಂವಿಧಾನಿಕ ತಿದ್ದುಪಡಿಯ ಮೂಲಕ ಸರ್ಕಾರ ತನ್ನ ಇರವನ್ನು ಸಾಬೀತುಪಡಿಸಲು ಶುರು ಮಾಡಿದ ಮೇಲೆ ಶಿಕ್ಷಣ, ಆರೋಗ್ಯ, ಆಹಾರ ಭದ್ರತೆ ಮುಂತಾದವುಗಳ ಪರಿಸ್ಥಿತಿ ಸುಧಾರಿಸತೊಡಗಿದೆ. ವೆನೆಜ್ಞುವೆಲಾದ ಅಧ್ಯಕ್ಷರು ದೇಶವನ್ನು ಕ್ಲೋಸ್ಡ್ ಇಕಾನಮಿ ಮಾಡಲು ಹೊರಟಿದ್ದಾರೆಂದು ಹುಯ್ಯಲಿಡುವವರು, ಆ ದೇಶ ಇತ್ತೀಚಿನ ದಿನಗಳಲ್ಲಿ ಆರ್ಥಿಕ ಹಿಂಜರಿತದ ಹೊರತಾಗಿಯೂ ಜಿಡಿಪಿ ಮತ್ತು ಮಾನವ ಅಭಿವೃದ್ಧಿ ಸೂಚ್ಯಂಕ ಆಧಾರಿತ ಪಟ್ಟಿಯಲ್ಲಿ ವೇಗವಾಗಿ ಮೇಲೇರುತ್ತಿದೆ ಎನ್ನುವುದನ್ನು ಗಮನಿಸಬೇಕು.

ಭಾರತದಲ್ಲಿ ಅಭಿವೃದ್ಧಿ ರಾಜಕಾರಣ ಹೊಸದಾಗಿ ಉದಯಿಸುತ್ತಿದೆ. ಅಭಿವೃದ್ಧಿ ಎನ್ನುವ ಪರಿಕಲ್ಪನೆ ಮಾತ್ರ ಎಲ್ಲರ ಪಾಲಿಗೆ ಹೊಮೋಜಿನಸ್ ಅಂಶವಾಗಿ ಉಳಿದಿಲ್ಲ ಎನ್ನುವುದನ್ನು ನಾವು ಗಮನಿಸಬೇಕು. ಅಭಿವೃದ್ಧಿಯ ಬೆಲೆ ತೆರಬೇಕಾದವರು ಯಾರೋ, ಆದರ ಫಲಾನುಭವಿಗಳು ಇನ್ಯಾರೋ ಎನ್ನುವಂತಹ ಪರಿಸ್ಥಿತಿಯಲ್ಲಿ ನಾವು ನಮ್ಮ ಆರ್ಥಿಕ ನೀತಿಗಳ ಬಗ್ಗೆ ಮರುಚಿಂತನೆ ನಡೆಸಬೇಕಾಗಿದೆ. ಖಾಸಗಿ ಹೂಡಿಕೆಯೇ ಬೇಡವೆನ್ನುವುದು ಅಸಂಗತವಾದೀತು. ನಮಗೆ ಬೇಕಾಗಿರುವುದು ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳ ದುರುಪಯೋಗವನ್ನು ತಡೆಯಬಲ್ಲ ಸಮರ್ಥ ಸರ್ಕಾರಿ ನಿಯಂತ್ರಣಗಳು. ಸರ್ಕಾರ ಮೂಗು ತೂರಿಸದೆ ಬಂಡವಾಳಶಾಹಿಗಳ ಕೈಗೊಂಬೆಯಾಗಿದ್ದಲ್ಲೆಲ್ಲಾ ಆರ್ಥಿಕತೆಗಳು ಹೇಗೆ ಮುಗ್ಗರಿಸಿವೆ ಎನ್ನುವುದು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಚರಿತ್ರೆಗಳಲ್ಲಿ ದಾಖಲಾಗಿದೆ. ಸರ್ಕಾರ ದಕ್ಷವಾಗಿಲ್ಲ ಎಂದು ದೇಶ ನಡೆಸುವುದನ್ನೇ ಹೊರಗುತ್ತಿಗೆಗೆ ನೀಡುವುದಕ್ಕಿಂತ, ಸಾಂಸ್ಥಿಕ ಸುಧಾರಣೆಗೆ ಕೈ ಹಚ್ಚುವುದು ಒಳ್ಳೆಯ ಯೋಜನೆ. ಇಲ್ಲಿ ರಾಲ್ಸ್‌ನ ನ್ಯಾಯದ ಬಗೆಗಿನ ಸಿದ್ಧಾಂತ ನೆನಪಿಗೆ ಬರುತ್ತದೆ : ಎಲ್ಲಿ ಸಂಪನ್ಮೂಲಗಳನ್ನು ಜನರ ಅನುಭೋಗಕ್ಕೆ ಸಮನಾಗಿ ಹಂಚಲು ಸಾಧ್ಯವಿಲ್ಲವೋ, ಅಂತಹ ಸಂದರ್ಭದಲ್ಲಿ ಸಮಾಜದ ತಳಮಟ್ಟದಲ್ಲಿರುವ ತೀರ ಅಸಹಾಯಕರಿಗೆ ಹೆಚ್ಚಿನ ಪಾಲು ದಕ್ಕುವಂತೆ ಅವುಗಳನ್ನು ಹಂಚಲು ಪ್ರಯತ್ನಿಸಬೇಕು. ಇದು ಆರೋಗ್ಯವಂತ ಪ್ರಜಾಪ್ರಭುತ್ವದ ನ್ಯಾಯದ ಪರಿಕಲ್ಪನೆಯೂ ಹೌದು. ಮುಕ್ತ ಆರ್ಥಿಕತೆಯ ಮೂಲಕ ಸಂಪತ್ತು ಹೆಚ್ಚಿಸುವ ಬದಲು ಸಮಾಜದ ಎಲ್ಲ ಜನರಿಗೂ ನ್ಯಾಯಯುತ ಅಭಿವೃದ್ಧಿ, ಉತ್ತಮ ಜೀವನ ಮಟ್ಟವನ್ನು ತಲುಪಿಸಲು ಸಾಧ್ಯವಾದರೆ, ಅಷ್ಟರಮಟ್ಟಿಗೆ ಅದೊಂದು ಯಶಸ್ವಿ ಜನತಂತ್ರವೆನ್ನಿಸಿಕೊಳ್ಳುತ್ತದೆ.

**ಸಾಕ್ಷಿ**
ಮೊದಲ ಬಿ.ಎ., ಎಲ್‌ಎಲ್.ಬಿ. ತರಗತಿ, ನ್ಯಾಷನಲ್ ಲಾ ಸ್ಕೂಲ್
ಆಫ್ ಇಂಡಿಯ ಯೂನಿವರ್ಸಿಟಿ, ನಾಗರಬಾವಿ, ಬೆಂಗಳೂರು - ೫೬೦ ೦೭೨

# ನಿಮ್ಮ ಆಹ್ವಾನಕ್ಕೆ ನನ್ನ ಪ್ರತಿಕ್ರಿಯೆ ಹೀಗಿದೆ

ನನಗೀಗ ೭೦ರ ಹರೆಯ. ಸ್ವಾತಂತ್ರ್ಯಪೂರ್ವದಲ್ಲಿ ಜನಿಸಿದವ. ಪಂಡಿತ ನೆಹರೂರವರ ಸಮಾಜವಾದದ ಕನಸು ಕರಗಿಹೋದದ್ದನ್ನು ನೋಡಿದವ. ಸಮಾಜ ಕಟ್ಟುತ್ತಿದ್ದಾಗ ಅದರಿಂದಾದ ಸಮಸ್ಯೆ ರಾಷ್ಟ್ರೀಯ, ಸಾಮಾಜಿಕ ಹಾಗೂ ಆರ್ಥಿಕ ಬಿಕ್ಕಟ್ಟಿನಿಂದ ಹೊರಬರುವ ಪ್ರಯತ್ನವನ್ನು ಸಮೀಪದಿಂದ ನೋಡಿ ನಲುಗಿದವ.

೧೯೬೦-೧೯೬೪ರಲ್ಲಿ ಕಾಲೇಜಿನಲ್ಲಿದ್ದಾಗ ಎಡಪಂಥೀಯ ವಿಚಾರಕ್ಕೆ ಮೋಹಗೊಂಡು, ಕಾರ್ಮಿಕ ಸಂಘಟನೆ ಹಾಗೂ ಕಾರ್ಮಿಕ ಚಳವಳಿಯಿಂದಲೇ ನಮ್ಮ ದೇಶದ ಸಮಸ್ಯೆಗಳ ನಿವಾರಣೆ ಸಾಧ್ಯವೆಂದು ನಂಬಿದ್ದೆ. ಆದರೆ ನನ್ನ ಹಾಗೂ ನನ್ನಂಥವರ ಕನಸುಗಳು ಕಮರಿಹೋದದ್ದನ್ನು ನೋಡಿದೆ. ಸಾರ್ವಜನಿಕ ಕ್ಷೇತ್ರಗಳಲ್ಲಿಯ ಲಂಚಗುಳಿತನ, ಬೇಜವಾಬ್ದಾರಿತನ, ಅಶಿಸ್ತು, ಸ್ವಾರ್ಥದಿಂದಾಗಿ ಸರಕಾರಿ ವಲಯದ ಉದ್ದಿಮೆಗಳು ಅಪಾರ ನಷ್ಟ ಅನುಭವಿಸಿ, ದೇಶದ ಪಾಲಿಗೆ ಶಾಪವಾಗಿ ಪರಿಣಮಿಸಿದವು. ಇದಕ್ಕೆ ಅಧಿಕಾರಿಶಾಹಿ ಎಷ್ಟು ಕಾರಣವೋ ಅಷ್ಟೇ ಅಥವಾ ಅದಕ್ಕೂ ಹೆಚ್ಚು ಸ್ವಾರ್ಥ ರಾಜಕಾರಣವೂ ಕಾರಣವಾಗಿದೆ. ಇದರಿಂದ ದೇಶದಲ್ಲಿ ಬಡತನ ಹೆಚ್ಚಿತ್ತೇ ಹೊರತು ನಿರ್ಮೂಲನವಾಗಲಿಲ್ಲ. ಇಲ್ಲಿಯೇ ನಕ್ಸಲ್‌ವಾದದ ಬೀಜ ಬಿತ್ತಲ್ಪಟ್ಟಿದೆ.

ಈ ದುರಂತಕ್ಕೆ ಮಂಗಳ ಹಾಡಲು ಹೊಸ ಆರ್ಥಿಕ ನೀತಿಯನ್ನು ತಂದವರು ನಮ್ಮವರೇ ಆದ ಶ್ರೀ ಪಿ. ವಿ. ನರಸಿಂಹರಾಯರು. ಜಗತ್ತಿನಲ್ಲಿ ಆಗ ನಡೆಯುತ್ತಿದ್ದ ಸ್ಥಿತ್ಯಂತರಗಳನ್ನು ಗಮನಿಸಿ ಜಗತ್ತಿನೊಡನೆ ಹೊಸ ಹೆಜ್ಜೆ ಹಾಕಲು ನಿರ್ಣಯಿಸಿ, ಖಾಸಗಿ ವಲಯವು ದೇಶದ ಅಭಿವೃದ್ಧಿಯಲ್ಲಿ ಪಾಲುಗಾರನಾಗಲು ಅವಕಾಶ ಮಾಡಿಕೊಟ್ಟರು, ಜೊತೆಗೆ ಲೈಸೆನ್ಸ್ ಪರ್ಮಿಟ್ ಅಧಿಕಾರಕ್ಕೆ ಕಡಿವಾಣ ಹಾಕಿದರು. ಇದರಿಂದ ಅಧಿಕಾರಿಶಾಹಿಗಳಲ್ಲಿಯ ಲಂಚಗುಳಿತನಕ್ಕೆ ಹಾಗೂ ಸಾರ್ವಜನಿಕ ವಲಯದಿಂದ ಸಂಪತ್ತನ್ನು ಕಬಳಿಸುತ್ತಿದ್ದ ರಾಜಕಾರಣಿಗಳಿಗೆ ಸ್ವಲ್ಪಮಟ್ಟಿಗೆ ಅಂಕುಶವಿತ್ತಂತಾಗಿದೆ. ಆದರೆ ಸಂಪೂರ್ಣವಾಗಿ ನಿರ್ಮೂಲನೆಯಾಗಿಲ್ಲ.

ಖಾಸಗಿ-ಸಾರ್ವಜನಿಕ ಪಾಲುಗಾರಿಕೆಯಿಂದ ದೇಶದಲ್ಲಿ ಸಂಪತ್ತನ್ನು ನಿರ್ಮಿಸುವ ಕಾರ್ಯ ನಡೆದಿದೆ. ಆದರೆ ಅದರ ಫಲ ಮಾತ್ರ ಇನ್ನೂ ಸಾಮಾನ್ಯನ ವರೆಗೆ ತಲುಪಿಲ್ಲ. ನೀವೇ ಹೇಳಿದ ಹಾಗೆ ಈಗ ದೇಶದಲ್ಲಿ ರೆಡ್ಡಿ-ಅಂಬಾನಿ ಬಂಧುಗಳಂತೆ ಉದ್ದಿಮೆದಾರರು ಬಲಿಷ್ಠರಾಗಿ ಬಹುಪಾಲನ್ನು ತಮ್ಮದಾಗಿರಿಸಿಕೊಂಡಿದ್ದಾರೆ. ಆದರೆ ಒಂದು ಸಂತಸದ ಸಂಗತಿಯೆಂದರೆ ಬಲಿಷ್ಠ ಮಧ್ಯಮವರ್ಗವು ನಿರ್ಮಾಣವಾಗುತ್ತಿದೆ. ಐ.ಐ.ಟಿ., ಐ.ಐ.ಎಂ. ಹಾಗೂ ಅನೇಕ ತಾಂತ್ರಿಕ ಸಂಸ್ಥೆಗಳಿಂದ ಸಾವಿರಾರು ವಿದ್ಯಾರ್ಥಿಗಳು ಬಲಿಷ್ಠ ಹಾಗೂ ಸಂಪನ್ನ ಭಾರತ ನಿರ್ಮಿಸಲು ತಮ್ಮದೇ ಆದ ಮಾರ್ಗವನ್ನು ಹುಡುಕುತ್ತಿದ್ದಾರೆ. ಅದು ನಾವು ೬೦ ವರ್ಷಗಳ ಹಿಂದೆ ಆರಿಸಿಕೊಂಡ ಮಾರ್ಗಕ್ಕಿಂತ ಭಿನ್ನವಾಗಿದೆ. ನಾವೀಗ ಭಿಕ್ಷಾಪಾತ್ರೆ ಹಿಡಿದು ದೇಶ ದೇಶ ಅಲೆಯುವ ಅವಶ್ಯಕತೆಯಿಲ್ಲ. ಜಗತ್ತಿನ ನಾನಾಮೂಲಗಳಿಂದ ಬಂಡವಾಳ ಹರಿದುಬರುತ್ತಿದ್ದು ದೇಶವು ಆರ್ಥಿಕ ಪ್ರಗತಿಯ ಹಾದಿಯಲ್ಲಿದೆ : ಇದರ ಲಾಭ ನಮ್ಮ ಹಳ್ಳಿಯ ಬೀರನಿಗೂ ಕೆಂಚವ್ವನಿಗೂ ತಲುಪಬೇಕು. ಅವರ ಹಸಿವೆ ಹಿಂಗಿ ಅವರು ದೇಶಕಟ್ಟುವ ಕಾರ್ಯದಲ್ಲಿ ಸಮಭಾಗಿಯಾಗಬೇಕು. ಆದುದರಿಂದ ಈ ಹೊಸ ಹಾದಿ ನಮಗೆ ಸುಖ, ಸಂತೋಷ ತರುವುದೋ ಎಂಬುದನ್ನು ಕಾದು ನೋಡೋಣ. ಮೇಲಿಂದ ಕೆಳಗಿನವರೆಗೆ ಹರಿದುಬರುತ್ತದೆ ಎಂಬ ಸಿದ್ಧಾಂತವು ಬರೇ ಪುಸ್ತಕದಲ್ಲಿಯೇ ಉಳಿಯುವುದೋ ಅಥವಾ ಸಮಾಜಕ್ಕೆ, ದೇಶಕ್ಕೆ ಸಹಾಯವಾಗುವುದೋ ಎಂಬುದನ್ನು ತಿಳಿಯಲು ಎರಡು ದಶಕಗಳವರೆಗೆ ಕಾಯೋಣ. ಒಂದು ವೇಳೆ ನಮ್ಮ ಸಾಮಾನ್ಯನ ಆಶೆ ನಿರಾಶೆಯಾದರೆ ಮತ್ತೆ ಕೆಂಪು ಧ್ವಜ ಹಿಡಿದು ಹೋರಾಟಕ್ಕೆ ಇಳಿಯೋಣ.

**ಹ. ಶ್ರೀ. ಆಡೂರ**
ನಂ. ೧೦೩, ಆದಿತ್ಯ ಅಪಾರ್ಟ್‌ಮೆಂಟ್, ಆಶಾನಗರ, ಠಾಕೂರ್ ಕಾಂಪ್ಲೆಕ್ಸ್,
ಕಾಂಡಿವಲಿ (ಪೂರ್ವ), ಮುಂಬಯಿ - ೪೦೦ ೧೦೧

## ಆಗಸದ ಅಲೆಮಾರಿಗಳು

ಬಿ. ಎಸ್. ಶೈಲಜಾ

**ಪುಟ : ೧೪೮**

**ಬೆಲೆ : ರೂ. ೯೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೯, ಬೆಂಗಳೂರು - ೧

…ಕಾಯಗಳ ಬಗ್ಗೆ ಮಾಹಿತಿಯಿರುವ ಈ ಪುಸ್ತಕ …ರಾಷ್ಟ್ರೀಯ ಖಗೋಳ ವಿಜ್ಞಾನ ವರ್ಷ - ೨೦೦೯ಕ್ಕೆ …ಲ್ಯ ಕಾಣಿಕೆಯಾಗಿದೆ. ಪ್ರಾರಂಭದಲ್ಲಿಯೇ ಮನ …ುವುದು ಇಲ್ಲಿನ ಆತ್ಮಾಕರ್ಷಕ ಶೈಲಿ. ಮೋಡಿ …ವಂಥ ಸ್ವಾರಸ್ಯಕರ ನಿರೂಪಣೆ. ಪುಸ್ತಕ ಹಿಡಿದು … ಊಟ, ತಿಂಡಿ, ನಿದ್ದೆಗಳ ಪರಿವೆಯಿಲ್ಲದೆ ನಿಮ್ಮ …ೖ ಗರಿಗೆದರಿ ಗ್ರಹತಾರೆಗಳೊಂದಿಗೆ ನೀವೂ …ಬಂತೆ ತಲ್ಲೀನರಾಗುತ್ತೀರಿ. ಗ್ರಹ, ನಕ್ಷತ್ರ, ಉಪಗ್ರಹ, …ಕೇತುಗಳಂಥ ವಿಸ್ಮಯಗಳನ್ನು ಪ್ರತ್ಯೇಕ ಅಧ್ಯಾಯ …ಪರಿಚಯಿಸಿದ್ದಾರೆ. ಪ್ರಾಚೀನ ಕಾಲದ ನಂಬಿಕೆಗಳು, …ದಂತೆ ಹೊಸ ಹೊಸ ಸಂಶೋಧನೆ, ವಿಜ್ಞಾನಿಗಳಿಗೆ …ದ ಪ್ರಭುತ್ವದ 'ಶನಿಕಾಟ', 'ಗ್ರಹಚಾರ'ಗಳು ಇವೆಲ್ಲ …ಕ ಐತಿಹಾಸಿಕ ಘಟನೆಗಳೊಂದಿಗೆ ವಿವರಿಸಲಾಗಿದೆ. … ರಹಸ್ಯಗಳನ್ನೆಲ್ಲ ಬಿಟ್ಟುಕೊಡುತ್ತ, ಆದರೆ ಮರುಕ್ಷಣ …ಗೂಢವಾಗುತ್ತ ಸಾಗುವ ಖಗೋಳ ವಿಜ್ಞಾನದ ಈ …ಬರೆದವರು ಸುವಿಖ್ಯಾತ ಖಗೋಳಶಾಸ್ತ್ರಜ್ಞರು.

## ಏಳು ಗ್ರೀಕ್ ನಾಟಕಗಳು

ಅನುವಾದ : ಸಿ. ಪಿ. ಕೆ.

**ಪುಟ : viii + ೪೩೪**

**ಬೆಲೆ : ರೂ. ೩೦೦**

**ಸಂವಹನ,** ೧೨/೧ಎ, ಈವ್ನಿಂಗ್ ಬಜಾರ್ ಹಿಂಭಾಗ, ಶಿವರಾಂ ಪೇಟೆ, ಮೈಸೂರು - ೫೭೦ ೦೦೧

ಪ್ರಾಚೀನ ಗ್ರೀಕ್ ನಾಟಕಕಾರ …ಸ್ಕಿಲಸ್, ಸಾಫೊಕ್ಲಿಸ್ ಮತ್ತು ಯೂರಿಪಿಡಿಸ್ …ರು. ಮೂವರೂ ಸಮಕಾಲೀನರೇ. ಗ್ರೀಕ್ …ಗಳು ರಕ್ತರಂಜಿತವಾಗಿದ್ದುದರಿಂದ ಈ ಮೂವರೂ … ಅಥವಾ ರುದ್ರಭೀಷಣ ನಾಟಕಗಳನ್ನು ಬರೆದಿರ …. ಸುಮಾರು ಎರಡೂವರೆ ಸಾವಿರ ವರ್ಷಗಳಷ್ಟು …ವಾದ ಇಲ್ಲಿನ ನಾಟಕಗಳು ಅಂದಿನ ಗ್ರೀಕ್ ಚರಿತ್ರೆ, …ು ಭಾಗವಾಗಿ ನಮ್ಮ ಮುಂದಿವೆ. ಎಲ್ಲೆಲ್ಲೂ …ೕನ್ಮಾದ, ರಣೋತ್ಸಾಹ, ಸೇಡಿನ ಕಿಡಿಗಳು ಮಿಂಚಿವೆ. … ಮಾನವತೆ ಪ್ರತಿಪಾದಿಸಲ್ಪಟ್ಟಿದೆ. ಯುದ್ಧದ ಅನರ್ಥ …ಮತ್ತು ದುರಂತ ಫಲಗಳನ್ನು ಬಿಂಬಿಸುವ ಇವನ್ನು …ೕಕಿಸಿದಾಗ, ಮನುಷ್ಯ ಏಕಿಷ್ಟು ಕ್ರೂರಿಯಾಗಿ …ು ಪ್ರಶ್ನಿಸಿದಾಗ ಎಲ್ಲೂ ಉತ್ತರ ಸಿಕ್ಕುವುದಿಲ್ಲ. …ಮಾತೇಕೆ, ಇಂದೂ ಸಹ ಪ್ರಪಂಚದಲ್ಲಿ ನಡೆಯು…ು ಇಂಥ ಪ್ರವೃತ್ತಿಯೇ. ಮೂವರು ನಾಟಕಕಾರರ …ಟಕಗಳನ್ನು ಇಲ್ಲಿ ಸಿ.ಪಿ.ಕೆ. ಅನುವಾದಿಸಿದ್ದಾರೆ. …ಂಗಭೂಮಿ, ನಾಟಕಗಳ ಬಗ್ಗೆ ವಿವರಣೆಯೂ ಇದೆ.

## ಬಹುರೂಪಿ ಗಾಂಧಿ

ಇಂಗ್ಲಿಷ್ ಮೂಲ : ಅನು ಬಂದ್ಯೋಪಾಧ್ಯಾಯ; ಕನ್ನಡಕ್ಕೆ : ಹೆಚ್. ಎನ್. ಗೀತಾ

**ಪುಟ : ೧೪೮** **ಬೆಲೆ : ರೂ. ೯೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೯, ಬೆಂಗಳೂರು - ೫೬೦ ೦೦೧

ಗಾಂಧೀಜಿ ಬದುಕಿದ್ದ ಕಾಲಕ್ಕಿಂತ ಇಂದಿನ ಜನಜೀವನದಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಮೌಲ್ಯಗಳು ನಶಿಸಿಲ್ಲವಾದರೂ ಅವುಗಳ ಆಚರಣೆ ಮತ್ತು ಅರ್ಥೈಸುವ ರೀತಿ ಭಿನ್ನವಾಗಿದೆ. ಗಾಂಧೀಜಿ ಸರಳತೆ ಮತ್ತು ಸ್ವಾವಲಂಬನೆಗೆ ಹೆಚ್ಚು ಮಹತ್ವ ಕೊಡುತ್ತಿದ್ದುದು ಮಾತ್ರವಲ್ಲ; ಅದನ್ನು ಅವರ ಜೀವನದಲ್ಲಿ ಅಳವಡಿಸಿಕೊಂಡು ಬಾಳಿದ ಅಪೂರ್ವ ವ್ಯಕ್ತಿ. ಎಲ್ಲ ಕೆಲಸಗಳನ್ನವರು ಗೌರವಿಸುತ್ತಿದ್ದರಲ್ಲದೆ, ಸ್ವಾವಲಂಬನೆಯ ಭಾಗವಾಗಿ ತಾವೇ ಸ್ವತಃ ಮಾಡುತ್ತಿದ್ದುದನ್ನು ಈ ಪುಸ್ತಕ ನಮಗೆ ವಿವರವಾಗಿ ತಿಳಿಸುತ್ತದೆ. ಕೈತಪ್ಪಿ ಒಂದು ಬೀಗದ ಕೈಗೊಂಚಲು ಕೆಳಗೆ ಬಿದ್ದಾಗ, ಯಾರಾದರೂ ಎತ್ತಿಕೊಡಲಿ ಎಂದು ಸುತ್ತಮುತ್ತ ನೋಡುವ ನಮ್ಮಂಥವರು, ಈ ಪುಸ್ತಕದಲ್ಲಿ ವಿವರಿಸಿದ ಗಾಂಧಿ ಮಾಡಿದ ಕೆಲಸಗಳನ್ನು ಮಾಡುವುದುಂಟೆ? ಮಾಡಿದರೆ ನಾವು ಮಹಾತ್ಮರೇ ಸರಿ! ಅದ್ಭುತ ಕೆಲಸಗಳನ್ನು ಮಾಡಿದ್ದ ಅಸಾಮಾನ್ಯ ವ್ಯಕ್ತಿಯೆಂದು ಪರಿಚಯಿಸಲ್ಪಟ್ಟ ಈ ಕೃತಿಯಿಂದ ಗಾಂಧೀಜಿಯ ಬಹುಮುಖ ಆಸಕ್ತಿ ಮತ್ತು ಅವರ ಬದುಕಿನ ಸರಳತೆಯ ಅರಿವು ನಮಗಾಗುತ್ತದೆ. ಆರ್. ಕೆ. ಲಕ್ಷ್ಮಣ್ ಮತ್ತು ನಿಕಿ ಥಾಮಸ್ ರಚಿಸಿರುವ ರೇಖಾಚಿತ್ರಗಳು ಪುಸ್ತಕದ ಅಂದವನ್ನು ಹೆಚ್ಚಿಸಿವೆ.

## ಧರ್ಮದ ಹೆಸರಿನಲ್ಲಿ (ಗುಜರಾತ್ - ಯಜ್ಞಪಶುಗಳಿಗಾಗಿ ಒಂದು ಹೋರಾಟ)

ಮಲಯಾಳಂ ಮೂಲ : ಆರ್. ಬಿ. ಶ್ರೀಕುಮಾರ್; ಅನುವಾದ : ಡಾ|| ಸಾರಾ ಅಬೂಬಕ್ಕರ್

**ಪುಟ : xvi + ೮೮** **ಬೆಲೆ : ರೂ. ೭೦**

**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨, ಮೈಕ್ರೋವೇವ್ ಸ್ಟೇಶನ್ ರಸ್ತೆ, ಮಂಗಳೂರು - ೫೭೫ ೦೦೬

ಅಹಮದಾಬಾದಿನ ಪತ್ರಕರ್ತನೊಬ್ಬ ಉದ್ಗರಿಸಿದ್ದನಂತೆ – "ಶ್ರೀಕುಮಾರ್, ಮೋದಿ ತನ್ನ ತಾಯಿಯ ಹೆಸರನ್ನಾದರೂ ಮರೆತಾರು; ಆದರೆ ನಿಮ್ಮ ಹೆಸರನ್ನು ಆತ ಮರೆಯಲಾರ." ಇದು ಗುಜರಾತಿನ ಕೋಮುಗಲಭೆಗಳ ಸಮಯದಲ್ಲಿ ಸತ್ಯ ನಿಷ್ಠುರ ವರದಿ ನೀಡಿದ್ದ ಅಲ್ಲಿನ ನಿಷ್ಠಾವಂತ ಪೊಲೀಸ್ ಅಧಿಕಾರಿ ಶ್ರೀಕುಮಾರ್ ಬಗ್ಗೆ ಕೇಳಿಬಂದ ಪ್ರಶಂಸೆ ಮಾತು. ಕೋಮುಗಲಭೆಗಳನ್ನು ವಿಶ್ವ ಹಿಂದೂ ಪರಿಷತ್ ಹುಟ್ಟುಹಾಕುತ್ತದೆಂದೂ, ಮುಸ್ಲಿಂ ಜನಾಂಗದ ನಿರ್ನಾಮ ಇದರ ಗುರಿಯೆಂದೂ, ಇದರಲ್ಲಿ ಮುಖ್ಯಮಂತ್ರಿ ನರೇಂದ್ರ ಮೋದಿಯ ಕೈವಾಡವಿದೆಯೆಂದೂ ಮುನ್ಸೂಚನೆ ನೀಡಿದ್ದಲ್ಲದೆ ಆಯೋಗಕ್ಕೂ ಇವರು ವರದಿ ಸಲ್ಲಿಸಿದ್ದರು. ಸರಕಾರವು ಪೊಲೀಸ್ ವರಿಷ್ಠರನ್ನು ಕರೆಸಿ 'ಮೌಖಿಕ ಆಜ್ಞೆ' ನೀಡುವುದು, ಗಲಭೆ ನಡೆದಾಗ ಪೊಲೀಸರನ್ನು ನಿಯಂತ್ರಿಸುವುದು (ಗಲಭೆಕೋರರನ್ನಲ್ಲ!), ಅವರ ತಪ್ಪು ಆಜ್ಞೆಗಳನ್ನು ಪಾಲಿಸದೆ ಸೆಟೆದುನಿಂತ ಅಧಿಕಾರಿಗೆ ಹಿಂಬಡ್ತಿ, ವರ್ಗಾವಣೆ, ಕಿರುಕುಳ – ಇಂತಹ ಮೋದಿ ದುರಾಡಳಿತದ ಬಗ್ಗೆ ಇಲ್ಲಿ ವಿವರಗಳಿವೆ. ಮೋದಿಯನ್ನು ಕನಸಿನಲ್ಲೂ ಕಾಡುತ್ತ, ಪ್ರವಾಹಕ್ಕೆದುರಾಗಿ ಈಜುತ್ತ, ಸರಕಾರದ ವಿರುದ್ಧ ಕಾನೂನು ಸಮರದಲ್ಲಿ ಗೆದ್ದಿರುವ ಶ್ರೀಕುಮಾರ್ ಇದನ್ನು ಬರೆದಿದ್ದಾರೆ. ಮಲಯಾಳ ಮೂಲದ ಇದನ್ನು ಅನುವಾದಿಸಿದವರು ಶ್ರೀಮತಿ ಸಾರಾ ಅಬೂಬಕ್ಕರ್. ಸಾರಾ ಅವರು ನಮ್ಮ ಮಧ್ಯದ ಯಶಸ್ವಿ ಲೇಖಕಿ. ಅನೇಕ ಪ್ರಶಸ್ತಿಗಳನ್ನು ಗಳಿಸಿದ್ದಾರೆ.

## ಪರಿಶ್ರಮ (ಹೋರಾಟದ ಬದುಕು ಬರಹ)

ಎಸ್. ವೆಂಕಟರಾಮ್

**ಪುಟ : xvi + ೪೫೬** **ಬೆಲೆ : ರೂ. ೨೫೦**

**ಅಭಿನವ,** ೧೭/೧೮-೨, ಮೊದಲನೇ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

ಎಸ್. ವೆಂಕಟರಾಮ್ ಅವರು ಒಬ್ಬ ಕಾರ್ಮಿಕ ಮುಂದಾಳು ಹಾಗೂ ಸಮಾಜವಾದಿ ಹೋರಾಟಗಾರರು. ಸುಮಾರು ನಲವತ್ತು ವರ್ಷಗಳಷ್ಟು ಹಿಂದಿನ ಕರ್ನಾಟಕದಲ್ಲಿನ ಬಹುತೇಕ ಕಾರ್ಮಿಕ ಸಂಘಟನೆಗಳ ನಿಕಟ ಪರಿಚಯ ಹಾಗೂ ಅವುಗಳ ಕಾರ್ಯ ವಿಧಾನಗಳ ಬಗ್ಗೆ ಸಂಪೂರ್ಣ ತಿಳಿವಳಿಕೆ ಅವರಿಗಿತ್ತು. ಅಂದು ಲಾಭದಾಯಕವಾಗಿ ನಡೆಯುತ್ತಿದ್ದ, ಹೆಸರುವಾಸಿಯಾಗಿದ್ದ ಸಾರ್ವಜನಿಕ ಕ್ಷೇತ್ರದ ಕಾರ್ಖಾನೆ, ಟೆಕ್ಸ್ಟೈಲ್, ಬಟ್ಟೆ ಗಿರಣಿಗಳಲ್ಲಿನ ಅನೇಕ ಕಾರ್ಮಿಕ ಸಂಘಗಳ ಅಧ್ಯಕ್ಷರಾಗಿಯೂ ಅವರು ಕಾರ್ಯ ನಿರ್ವಹಿಸಿದ್ದಾರೆ. ನಮ್ಮ ದೇಶದ ಬಡವ-ಶ್ರೀಮಂತ, ಧಣಿ-ಸೇವಕ, ಮಾಲಿಕ-ಕಾರ್ಮಿಕ ಇವರ ನಡುವಿನ ಸಂಬಂಧಗಳು ಏಕೆ ಕಹಿಯಾಗಿರುತ್ತವೆ ಹಾಗೂ ಎಲ್ಲ ಸಮಸ್ಯೆಗಳೂ ಬಿಡಿಸಲಾಗದ ಕಗ್ಗಂಟಾಗಿರುವುದೇಕೆಂದು ಅವರು ತಾತ್ವಿಕವಾಗಿ ಚಿಂತಿಸಿದ್ದಾರೆ. ಕಾರ್ಮಿಕ ವರ್ಗದಲ್ಲಿಯೂ ಆರ್ಥಿಕವಾಗಿ ಉಚ್ಚ, ಮಧ್ಯಮ, ಕನಿಷ್ಠ ಎಂಬಂತಹ ತಾರತಮ್ಯದ ಭಾವನೆಗಳು ನುಸುಳಿದ್ದನ್ನು ಮನಗಂಡು ಅವರು ಮನನೊಂದಿದ್ದಾರೆ. ರಷ್ಯಾ ಮುಂತಾದ ವಿದೇಶಗಳಿಗೆ ನೀಡಿದ ಭೇಟಿಯ ಅನುಭವಗಳನ್ನೂ ದಾಖಲಿಸಿದ್ದಾರೆ.

– ಇಂದಿರಾಕುಮಾರಿ

೩೪/೧೧, ೨ನೇ ಕ್ರಾಸ್, ಜಾಂಟಿ ಡ್ರೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

ಚೋಮ್‌ಸ್ಕಿ ಅವರನ್ನು ಕಮ್ಯುನಿಸ್ಟರೆಂದು ಹೇಳುವುದು
ಚೋಮ್‌ಸ್ಕಿ ಮಾರ್ಕ್ಸ್‌ಅನ್ನು ಮೆಚ್ಚುತ್ತಾರೆ; ಆದರೆ ಯಾವ ವ್ಯ
ಹೆಸರನ್ನಿಟ್ಟ ಐಡಿಯಾಲಜಿಗಳನ್ನೂ ತಾವು ಸ್ವೀಕರಿಸುವುದಿಲ್ಲ ಎನ್ನು
'ಡಿಫಿಸಿಟ್ ಆಫ್ ಡೆಮೊಕ್ರಸಿ' - ಪ್ರಜಾಪ್ರಭುತ್ವದೊಳಗಿನ ಆಚರಣೆ
ಕೊರತೆ ಎನ್ನುವುದು ಇತ್ತೀಚೆಗೆ ಇವರು ಪದೇಪದೇ ಬಳಸುವ
ವಿನ್ಯಾಸವಿದ್ದು, ಅವರ ಎಲ್ಲ ಚರ್ಚೆಗೂ ಆಧಾರವಿದ್ದಂತೆ ತೋರು
ಅವರು ತಾವು ನಾಗರಿಕ ಸಮಾಜ ವಿರೋಧಿ ಅರಾಜಕತಾವಾದಿ
ಎನ್ನುತ್ತಾರೆ. ಈಗಿನ ಪ್ರಜಾಪ್ರಭುತ್ವಗಳ ಆಚರಣೆಯನ್ನು ನಿರಂ
ಟೀಕಿಸುತ್ತಾ, ಹೋರಾಟ ನಡೆಸುತ್ತಾ ಹೋದಂತೆ, ಅದು ಸುಧಾರಿಸುವು
ಎಂಬುದು ಇವರ ವಿಶ್ವಾಸವೆನ್ನುವಂತೆ ತೋರುತ್ತದೆ. ತಾವು ಏಕಾ
ಯಲ್ಲ, ಜನಪರ ಹೋರಾಟಗಳಲ್ಲಿ ಸತತ ಭಾಗವಹಿಸುವ ಆಕಾ
ಯುಳ್ಳವರು ಎನ್ನುತ್ತಾರೆ ೮೦ರ ಹರೆಯದ ಚೋಮ್‌ಸ್ಕಿ. ಇವರ
ಗಳನ್ನು ವ್ಯಾಸಂಗ ಮಾಡುವುದು, ಅವರ ಪ್ರತಿದಿನದ, ಹೇಳಿಕೆಗಳ



# ಎಚ್ಚರಗೊಂಡ ಸಾಮಾಜಿಕ ಪ್ರಜ್ಞೆ ಕ್ರಿಯಾಶೀಲತೆಗೆ ಪ್ರೇರಣೆ

## – ನೋಮ್ ಚೋಮ್‌ಸ್

೧೯೭೦ರಷ್ಟು ಹಿಂದೆಯೇ ನೆಹರೂ ಸ್ಮಾರಕ ಉಪನ್ಯಾಸ ನೀಡಲು ಭಾರತಕ್ಕೆ ಬಂದಿದ್ದ ಈತ ನಮ್ಮ ದೇಶದಲ್ಲಿ, ಕೊನೆಯಪಕ್ಷ ಬುದ್ಧಿಜೀವಿಗಳು ಎಂದೆನಿಸಿಕೊಳ್ಳುವವರ ನಡುವೆ ಸುಪರಿಚಿತ. ತದನಂತರ ಭಾರತಕ್ಕೆ ಹಲವಾರು ಬಾರಿ ಭೇಟಿ ನೀಡಿದ್ದಾರೆ. ಅವರನ್ನು ಓದದೆಯೂ ಅವರ ಹೆಸರನ್ನು ಬಳಸಿಕೊಳ್ಳುವುದು ನಮ್ಮ ಕೆಲವು ಬುದ್ಧಿಜೀವಿಗಳ ನಡುವೆ ಒಂದು ಫ್ಯಾಶನ್ ಕೂಡ. ಸಮಕಾಲೀನ ರಾಜಕೀಯ ಚಿಂತನೆಯ ಮೇಲೆ ಒಬ್ಬ ನಿರಂತರ ಟೀಕಾಕಾರನಾಗಿ ಈತನ ಪಾತ್ರ ನಿರ್ಲಕ್ಷಿಸಲಾರದಷ್ಟು ಪ್ರಭಾವಯುತವಾದುದು. ಮೂಲತಃ ಈತ ಭಾಷಾಶಾಸ್ತ್ರಜ್ಞನಾಗಿ ಮಹತ್ತರ ಸಾಧನೆ ಮಾಡಿದ್ದಾರೆ. ಆದರೂ ಈತ ರಾಜಕೀಯ ವಿಮರ್ಶಕನಾಗಿ ಹೆಸರಾದುದು ಮೊಟ್ಟಮೊದಲು ೧೯೬೦ರ ದಶಕದಲ್ಲಿ ವಿಯತ್ನಾಂ ಯುದ್ಧದ ವಿರುದ್ಧ ಅಮೆರಿಕ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡು, ತೋರಿದ ಎದೆಗಾರಿಕೆಗಾಗಿ. ಅದಕ್ಕೆ ಹಿಂದೆಯೂ ಮಾರ್ಟಿನ್ ಲೂಥರ್ ಕಿಂಗ್‌ನ ನಾಗರಿಕ ಹಕ್ಕು ಚಳುವಳಿಯಲ್ಲಿ ಭಾಗವಹಿಸಿದ ಅನುಭವ ಇವರದು. ಅಂದಿನಿಂದ ಇಂದಿನವರೆಗೂ ಅಮೆರಿಕಾ ಸರ್ಕಾರದ ಎಲ್ಲ ನೀತಿಗಳನ್ನೂ ಅಂದಂದಿಗೆ ವಿಮರ್ಶಿಸುತ್ತಾ, ಅಲ್ಲಿಯ ಮಾಧ್ಯಮಗಳಿಗೂ, ಸರ್ಕಾರಕ್ಕೂ, ಉದ್ದಿಮೆದಾರರಿಗೂ ಬೇಡವಾಗಿ, ಸಮಸ್ಯೆಯಾಗಿ, ಅಮೆರಿಕಾದ ಆಳುವ ವರ್ಗದ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಇವರು, ಬಹುಶಃ ಅದೇ ಕಾರಣಕ್ಕೆ, ಅಂತರರಾಷ್ಟ್ರೀಯವಾಗಿ, ಮೆಚ್ಚುಗೆ, ಅಭಿಮಾನ, ಅಪಾರ ಖ್ಯಾತಿಯನ್ನು ಪಡೆದಿದ್ದಾರೆ. ಇವರಿಗೆ ಹಿಂದಿನ ಹಲವಾರು ಗಣ್ಯರು, ಬರ್ಟ್‌ರೆಂಡ್ ರಸೆಲ್, ಎಡ್ವರ್ಡ್ ಸೈಯದ್ ಮುಂತಾದವರು ಸಮಕಾಲೀನ ಸಾಮಾಜಿಕ, ರಾಜಕೀಯ ಟೀಕಾಕಾರರಾಗಿ ಪ್ರಸಿದ್ಧರಾಗಿದ್ದರೂ, ಚೋಮ್‌ಸ್ಕಿಯವರಂತೆ ಎಲ್ಲ ಪ್ರಭುತ್ವಗಳ ಎಲ್ಲ ನಡವಳಿಕೆಗಳನ್ನು, ಜಗತ್ತಿನಾದ್ಯಂತ ಗಮನಿಸುತ್ತಾ, ಅವು ಹೊರಗೆಡವುತ್ತಿದ್ದಂತೆಯೆ ಅವುಗಳ ಪೊಳ್ಳುತನವನ್ನು, ಪ್ರಜಾಪ್ರಭುತ್ವ ವಿರೋಧೀ ಸೆಲೆಗಳನ್ನು, ಎಳೆಎಳೆಯಾಗಿ ಬಿಡಿಸಿಡುತ್ತಾ, ಯಾವ ರಾಜಿಯನ್ನೂ ಮಾಡಿಕೊಳ್ಳದೆ ಛಲದಿಂದ ಪ್ರಗತಿಪರ ಹೋರಾಟಗಳೊಡನೆ ಹೆಗಲುಕೊಟ್ಟು ನಾಲ್ಕು ದಶಕಗಳಿಗೂ ಮಿಕ್ಕು ನಿಂತವರು ಹೆಚ್ಚು ಕಂಡುಬರುವುದಿಲ್ಲ. ಇವರಿಗೆ ನಮ್ಮ ಅರುಂಧತಿ ರಾಯ್ ಅವರನ್ನು ಕಂಡರೆ ಬಹುಮೆಚ್ಚುಗೆ.

ಗಮನಿಸುವುದು, ಪ್ರತಿಯೊಂದು ಪ್ರಗತಿಪರ, ಜನಪರ ಹೋರಾಟ
ಅಗತ್ಯವೆನ್ನಬಹುದು. ಅಕ್ಯಾಡೆಮಿಕ್ ಆಗಿ ವಿದ್ವಾಂಸರೆಂದೆನಿಸಿಕೊಂ
ಜ್ಞಾನಿಯಾಗಿಯೂ, ಸಾಮಾಜಿಕವಾಗಿ ಹೊಣೆಗಾರಿಕೆ ನಿರ್ವಹಿ
ಇಂಥವರನ್ನು ಗಮನಿಸಿಯೇ 'ಜ್ಞಾನಿನಾ ಚರಿತುಂ ಶಕ್ಯಂ ಸ
ರಾಜ್ಯಾದಿ ಲೌಕಿಕಂ' ಎಂಬ ಮಾತು ಬಂದಿರಬಹುದೆ ? (ಜ್ಞಾನಿ
ವನಿಂದ ರಾಜ್ಯಾದಿ ಲೌಕಿಕಗಳನ್ನು ಚೆನ್ನಾಗಿ ನಿರ್ವಹಿಸುವುದು ಸಾ
ಜ್ಞಾನಿ ಅಂದರೆ ಯಾರು ? ಜ್ಞಾನಿಯಾದವನಿಗೆ ಮಾತ್ರ ಸಾಧ್ಯ
ಜ್ಞಾನಿಗೂ ಸಾಧ್ಯವೇ ! ಒಟ್ಟಿನಲ್ಲಿ ಇವರು ಪ್ರಭುತ್ವದಲ್ಲಿ ಆಜೀವ ವಿ
ಪಕ್ಷವಾಗಿರುವುದಂತೂ ಸ್ಪಷ್ಟ. ಅಂತೆಯೇ ಜನತೆಯ ಸಾಕ್ಷಿಪ್ರಜ್ಞೆ.

ಅವರು 'ಹೊಸತು' ಪತ್ರಿಕೆಗೆ ದಿನಾಂಕ ೧೧/೧೨-೯-೨
ರಂದು ಮೆಸಾಚುಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ
ಶಾಸ್ತ್ರ ವಿಭಾಗದ ಪ್ರಾಚಾರ್ಯರ ತಮ್ಮ ಕೋಣೆಯಲ್ಲಿ ನೀಡಿದ ಸಂದ
ವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. 'ಹೊಸತು' ಪತ್ರಿಕೆಯ ಸಹಸಂಪಾ
ಎಸ್. ಪಾರ್ಥಸಾರಥಿಯವರು, ಅಮೆರಿಕ ಸಂಯುಕ್ತ ಸಂಸ್ಥಾ
ಇತ್ತೀಚೆಗೆ ನಡೆಸಿದ ಪ್ರವಾಸ ಸಂದರ್ಭದಲ್ಲಿ, ಖುದ್ದಾಗಿ ಈ ಸಂದ
ನಡೆಸಿದರು. ಜಿ.ಆರ್. ಮೊದಲಿಗೆ ಚೋಮ್‌ಸ್ಕಿಯವರಿಗೆ ಪತ್ರ
ಸಂದರ್ಶನವನ್ನು ಯಾಚಿಸಿ, ಹಲವಾರು ಪ್ರಶ್ನೆಗಳನ್ನು ಮುಂದಿಟ್ಟ
ಸಂದರ್ಶನದ ಪಾಠವನ್ನು ಇಲ್ಲಿ ಸಾದರಪಡಿಸಲಾಗಿದೆ.

**ಸಂದರ್ಶನ, ಲೇಖನ ಮತ್ತು ಚಿತ್ರಗಳು : ಕೆ. ಎಸ್. ಪಾರ್ಥಸಾ**

**ಹೊ** ಸತು : ಅಮೆರಿಕ ಸಂಯುಕ್ತ ಸಂಸ್ಥಾನ
ಸಂ)ದಲ್ಲಿರುವ ವಿಶ್ವವಿದ್ಯಾಲಯಗಳಲ್ಲಿ ಮತ್ತಿತರ
ಗಳಲ್ಲಿ, ಅಲ್ಲಿಯ ವ್ಯವಸ್ಥೆಯ ಸ್ವರೂಪದಿಂದಾಗಿ,
ಂಥ ಕ್ರಿಯಾಶೀಲ ಬೌದ್ಧಿಕ ವ್ಯಕ್ತಿಗಳು ಉದ್ಭವಿಸು
ಅಪರೂಪದ ಸಂಗತಿ ಎಂದು ಹೇಳುತ್ತಾರೆ. ಅಂತಹ
ೂಪದ ವ್ಯಕ್ತಿತ್ವ ನಿಮ್ಮದು. ಹೀಗೆ ಆಗಿರುವುದಕ್ಕೆ
ದೇ ವಿಶಿಷ್ಟ ಹಿನ್ನೆಲೆ ಏನಾದರೂ ಇದೆಯೇ?
ು ಶಿಸ್ತಿನ ಅಧ್ಯಯನ ಕೇಂದ್ರದಲ್ಲಿ, ಭಾಷಾಶಾಸ್ತ್ರ
ನೀವು ಪಾರಂಗತರಾಗಿ, ಸಾಟಿಯಿಲ್ಲದ ಮೇಲುಗೈ
ಸುತ್ತಿದ್ದಂತೆಯೇ, ನೀವು ಸಾಮಾಜಿಕ ಸಂಗತಿಗಳ
ಯೂ ಪ್ರತಿಕ್ರಿಯಿಸುವ ಒತ್ತಡಕ್ಕೆ ಒಳಗಾದಿರಿ
ಹುದೆ? ಹೀಗೆ ಎರಡೂ ಕ್ಷೇತ್ರಗಳಲ್ಲಿ ಸರಾಗವಾಗಿ
ೂಳ್ಳುವ ಚಾತುರ್ಯ ನಿಮಗೆ ಹೇಗೆ ಕೈಗೂಡಿತು?

**ೋಮ್ ಚೋಮ್ಸ್ಕಿ:** ನನ್ನ ಭಾಷಾಶಾಸ್ತ್ರದ
ಕ್ಕೂ, ನನ್ನ ಸಾಮಾಜಿಕ ಧೋರಣೆಗಳಿಗೂ ಅಂಥ
ಸಂಬಂಧ ಇಲ್ಲದಿರಬಹುದು. ನಾನು ತುಂಬ
ು ವಯಸ್ಸಿನಲ್ಲೇ, ಹತ್ತು ವರ್ಷದವನಿದ್ದಾಗ,
ಿಷ್ ಸಿವಿಲ್ ವಾರ್ ಹಾಗೂ ಹಿಟ್ಲರನ ಫ್ಯಾಸಿಸಂ
ು ಶಾಲೆಯ ಪ್ರಬಂಧಗಳನ್ನು ಬರೆದಿದ್ದೆ. ನನ್ನ
ುತ್ತಲ ಆಗುಹೋಗುಗಳ ಪರಿಜ್ಞಾನ ನನಗೆ
ಾಗಲೂ ಇತ್ತು. ನನ್ನ ಕುಟುಂಬ ಮತ್ತು ಸಮೀಪದ
ರು ಸ್ವಲ್ಪ ಕಾರಣ ಇದಕ್ಕೆ. ಅಂದಿನಿಂದಲೂ
ಪರ ಜನತಾ ಚಳುವಳಿಗಳ ಜತೆ ಅಮೆರಿಕದಲ್ಲೂ,
ಿಕವಾಗಿಯೂ ನಿಕಟ ಸಂಬಂಧ ಇಟ್ಟುಕೊಂಡಿದ್ದೇನೆ.
ನಾಗರಿಕ ಹಕ್ಕು ಚಳುವಳಿ, ತದನಂತರ ವಿಯತ್ನಾಂ ಯುದ್ಧ ವಿರೋಧಿ ಚಳುವಳಿಗಳಲ್ಲಿ ಯುವಕರೊಡನೆ, ಕಾರ್ಮಿಕರೊಡನೆ ಮತ್ತು ವಿದ್ಯಾರ್ಥಿಗಳೊಡನೆ ಸಂಪರ್ಕ ಬೆಳೆಸಿಕೊಂಡಿದ್ದೇನೆ. ಬೌದ್ಧಿಕ ವ್ಯಕ್ತಿ ತನ್ನ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಬೇಕೆಂಬ ನಂಬಿಕೆ ನನಗೆ ಇದೆ. ಕಲೆಯೋ, ವಿಜ್ಞಾನವೋ, ಮಾನವಿಕವೋ, ಯಾವುದೇ ಶಿಸ್ತಿನ ಅಧ್ಯಯನವೂ ಬುದ್ಧಿಯನ್ನು ಹರಿತಗೊಳಿಸಿ, ವಾಸ್ತವದ ನೆಲೆಯಲ್ಲಿ ಅದನ್ನು ನೆಲೆಗೊಳಿಸುತ್ತದೆ. ಇದರೊಡನೆ ನಮ್ಮ ನಮ್ಮ ಸಾಮಾಜಿಕ ಹಿನ್ನೆಲೆಯೂ ನಮ್ಮ ಸಾಮಾಜಿಕ ಪ್ರಜ್ಞೆಯನ್ನು ಎಚ್ಚರಗೊಳಿಸಿದ್ದರೆ, ಇವೆರಡರ ಮೇಳ ನಮ್ಮನ್ನು ಕ್ರಿಯಾಶೀಲವಾಗುವಂತೆ ಪ್ರೇರೇಪಿಸುತ್ತದೆ. ಇದಕ್ಕೆ ಬೌದ್ಧಿಕ ಪ್ರಾಮಾಣಿಕತೆ ಅಗತ್ಯ. ಸೋಗಲಾಡಿತನ ಅಲ್ಲ.

**ಹೊ :** ಬುದ್ಧಿಜೀವಿಗಳ ವಿಶೇಷ ಜವಾಬ್ದಾರಿಯನ್ನು ಕುರಿತು ಬರ್ನಾಲ್, ಸಿ. ಪಿ. ಸ್ನೋ ಮುಂತಾದವರು ಚಿಂತಿಸಿದ್ದಾರೆ. ಪಾಲ್ ಬರನ್ ಕ್ರಿಯೆಯಲ್ಲಿ ತೊಡಗಿದಾಗಲೇ ಬುದ್ಧಿಜೀವಿಗೆ ಹಾಗೆ ಕರೆಸಿಕೊಳ್ಳುವ ಅಧಿಕಾರ ಎಂದು ಹೇಳಿದ್ದಾರೆ. ಗ್ರಾಂಶಿ ಆ ಬಗ್ಗೆ ಗಹನವಾದ ಸಿದ್ಧಾಂತ ರೂಪಿಸಿದ್ದಾರೆ. ನಿಮ್ಮನ್ನು ಸಂಧಿಸಲು ಬರುವಾಗ, ಬಸ್ಸಿನಲ್ಲಿ ಹದಿನೆಂಟಕ್ಕೂ ಚಿಕ್ಕ ಹರೆಯದವರಿರಬಹುದು, ಯಾರೋ ದಂಪತಿಗಳು ನನ್ನೊಡನೆ ಕುಳಿತಿದ್ದರು. ಅವರನ್ನು ಮಾತನಾಡಿಸಿದೆ. ಅವರು ಹೋಮ್‌ಲೆಸ್, ಸರ್ಕಾರದ ಧರ್ಮಛತ್ರದಲ್ಲಿ ವಾಸ, ಕೆಲಸವಿಲ್ಲ, ಹೈಸ್ಕೂಲ್ ಶಿಕ್ಷಣವೂ ಇಲ್ಲ. ಎಮ್‌ಐಟಿಗೆ ಅವರೂ ಬರುತ್ತಿದ್ದರು. ನಿಮ್ಮಲ್ಲಿ ಹಳೆಯ ಪೇಪರ್ ಕೊಂಡು ಮಾರಿ ಸಂಪಾದಿಸಲು. ಆ ಹುಡುಗಿ ಸ್ವಂತ ಓದುತ್ತಾಳಂತೆ, ಬರಹಗಾರಳಾಗುತ್ತಾಳಂತೆ. ಅವಳ ಕನಸು ನನಗೆ ರೋಮಾಂಚನ ನೀಡಿತು. ನಿಮ್ಮ ಒಂದು ಲೇಖನದ ಪ್ರತಿಯನ್ನು ಆಕೆಗೆ ಓದಲು ಕೊಟ್ಟೆ. ನಿಮ್ಮನ್ನು ಒಮ್ಮೆ ಸಂಧಿಸಲು ಹೇಳಿದ್ದೇನೆ. ಅವಳು ಬುದ್ಧಿಜೀವಿ ಅಲ್ಲವೆ?

**ನೋಮ್ :** ಬುದ್ಧಿಜೀವಿಗಳು ಸಮಾಜದಲ್ಲಿ ಕೆಲವು ಸವಲತ್ತುಗಳನ್ನು ಕೊಳ್ಳದೆಯೇ ಅನುಭವಿಸುತ್ತಾರೆ. ಅವರಿಗೆ ಆ ಹುಡುಗಿಗೆ ದೊರಕದಂತಹ ಮಾಹಿತಿಗಳು ಮತ್ತು ಅನುಕೂಲಗಳು ಲಭ್ಯ. ಸಮಾಜ ಅವರಿಗೆ ವಿಶಿಷ್ಟ ಮನ್ನಣೆ ನೀಡುತ್ತದೆ. ಅವರದೊಂದು ಪ್ರಿವಿಲೇಜ್‌ಡ್ ವರ್ಗ. ಆ ಹುಡುಗಿ ಸ್ವಂತ ಪ್ರಯತ್ನದಿಂದ ಶಿಕ್ಷಣ ಪಡೆದು, ಬುದ್ಧಿವಂತ ಕಾರ್ಮಿಕಳಾಗಬಹುದು. ಅವಳು ಎಂದೆಂದೂ ಬುದ್ಧಿಜೀವಿಯಾಗುವುದೇ ಇಲ್ಲವೆನ್ನಲಾಗದು. ಆದರೂ ಅದು ಅನೇಕ ಸದವಕಾಶಗಳ ಅಪರೂಪದ ಸಂದರ್ಭಕ್ಕೆ ಕಾಯಬೇಕು. ನನ್ನ ಮಟ್ಟಿಗೆ ಈ ಕಾರಣದಿಂದಲೇ, ಸಮಾಜ ಕುರಿತಾಗಿ ನನಗೆ ಹಲವು ನೈತಿಕ ಹೊಣೆಗಾರಿಕೆಗಳೂ ಅಂಟಿಕೊಳ್ಳುತ್ತವೆ. ಅಂದರೆ ನಾನು ಪ್ರಾಮಾಣಿಕನಾಗಿದ್ದರೆ. ಆಗ ಅದನ್ನು ನಿಭಾಯಿಸಲು ಮುಂದುವರಿಯುವುದು ಅನಿವಾರ್ಯ.

**ಹೊ :** ಬುದ್ಧಿಜೀವಿಗಳು ಎಂದರೆ ಬೇಜವಾಬ್ದಾರಿಯವರು, ಭಾವನಾವಾದಿ, ಆದರ್ಶ ಕಲ್ಪನಾವಾದಿ, ಒಳಗೊಳಗೇ ಬುಡಮೇಲು ಮಾಡುವಂತಹ ಚಿಂತನೆಗಳಲ್ಲಿ ತೊಡಗುವವರು, ಅನಾಯಕವಾದಿ ಎಂದೆಲ್ಲಾ ಹಳಿಸಿಕೊಳ್ಳುವುದುಂಟು?

**ನೋಮ್ :** ಅವೆಲ್ಲವುಗಳಲ್ಲಿ ಒಂದಿಷ್ಟು ಸತ್ಯ ಹುದುಗಿರಬಹುದು. ನಾನು ಒಂದಿಷ್ಟು ಅನಾಯಕವಾದಿ ಇರಬಹುದು. ಆಗಾಗ್ಗೆ ನನಗೆ ಅನಿಸುವುದುಂಟು: ಪ್ರಭುತ್ವದ ಶೋಷಣೆಯನ್ನು, ದಬ್ಬಾಳಿಕೆಯನ್ನು, ತಪ್ಪುಗಳನ್ನು, ಅದರ ಅಧಿಕಾರ ಪಲ್ಲಟಗೊಳಿಸುವಂತೆ, ಅಭದ್ರವಾಗುವಂತೆ ಖಂಡತುಂಡವಾಗಿ, ವಾಸ್ತವದ, ಸತ್ಯದ ಆಧಾರದ ಮೇಲೆ ಖಂಡಿಸಹೊರಟಾಗಲೆಲ್ಲಾ, ಅವರು ಹೇಳಿದ್ದು ಸರಿತಪ್ಪು ಎಂಬ ವಿಮರ್ಶೆ ಮಾಡದೆ, ಅಂಥವರನ್ನು ಅನಾಯಕ, ಅರಾಜಕರೆಂದು, ಪ್ರಭುತ್ವ ಮತ್ತು ಅದರ ಪೋಷಕರು ಆರೋಪಿಸಿ, ಅವರ ಪ್ರಭಾವವನ್ನು ತೊಡೆದುಹಾಕಲು ಪ್ರಯತ್ನಪಡುತ್ತಾರೆ. ಬುದ್ಧಿಜೀವಿಗೆ ತನ್ನ ವಿಶಿಷ್ಟ ಸ್ಥಾನಮಾನದಿಂದಾಗಿ ಸಮಕಾಲೀನ ಸಮಸ್ಯೆಗಳನ್ನು ಗಮನಿಸುತ್ತಾ, ಅವುಗಳ ನಡುವೆ ಒಂದು ತರ್ಕಬದ್ಧ ಗತಿ ಮತ್ತು ಅವಕ್ಕೆ ಆದರ್ಶಮಯ ಪರಿಹಾರದ ಹುಡುಕಾಟ, ಹಾಗೂ ಸಮರ್ಥನೆಯಲ್ಲಿ ತೊಡಗುವುದೂ ಒಂದು ಮಾನವ ಸಹಜ ಪ್ರವೃತ್ತಿ. ಈ ಅರ್ಥದಲ್ಲಿ ಎಲ್ಲ ನೊಬೆಲ್ ಪಾರಿತೋಷಕ ಪಡೆದವರೂ ಬುದ್ಧಿಜೀವಿಗಳು ಎಂದು ಎನಿಸಿಕೊಳ್ಳದಿರಬಹುದು. ಸಾಮಾಜಿಕ ಪ್ರಜ್ಞಾವಲಯದ ಸೆಳೆತಕ್ಕೆ ಬುದ್ಧಿಜೀವಿ ಹೊರತಲ್ಲ. ಅವರೂ, ಆ ಹುಡುಗಿಯೂ ಶಿಕ್ಷಣ ಪಡೆದವರು. ಈ ಹುಡುಕಾಟದ ಪ್ರವೃತ್ತಿಯಲ್ಲಿ ನಿರಂತರ ತೊಡಗಿರುವುದರ ಮೂಲಕ ಬುದ್ಧಿಜೀವಿ ತನ್ನ ಸಾಮಾಜಿಕ ಸ್ಥಾನಮಾನಕ್ಕೆ ಅರ್ಹತೆಯನ್ನು ಸಮರ್ಥಿಸಿಕೊಳ್ಳಬಹುದು. ಅದೇ ಅವನ ವಿಶಿಷ್ಟತೆ.

**ಹೊ :** ನೀವು ಮಾರ್ಕ್ಸ್‌ವಾದಿಯೇ? ಕಮ್ಯುನಿಸ್ಟರೆ? ಏನಾದರೂ ಇಸಂ ಬೆಂಬಲಿಸುತ್ತೀರಾ? ಲಿಬರ್ಟೇರಿಯನ್ ಸೋಷಿಯಲಿಸಂ ನಿಮ್ಮದು ಎನ್ನುತ್ತಾರಲ್ಲ?

**ನೋಮ್ :** ವ್ಯಕ್ತಿಗಳ ಹೆಸರನ್ನಿಟ್ಟ ಇಸಂಗಳಲ್ಲಿ ನನಗೆ ವಿಶ್ವಾಸವಿಲ್ಲ. ನನ್ನ ಮಾರ್ಗವೂ ಹೊಸದೂ ಅಲ್ಲ, ವಿಶಿಷ್ಟವೂ ಅಲ್ಲ. ಕಮ್ಯುನಿಸಂ, ಸೋಷಿಯಲಿಸಂ ಎಲ್ಲ ಕೇವಲ ಪದಗಳು. ಅವು ಯಾವುವೂ ನಮಗೆ ಹೇಳಬೇಕೆಂಬುದನ್ನೆಲ್ಲಾ ತಮ್ಮ ಅರ್ಥವ್ಯಾಪ್ತಿಯಲ್ಲಿ ಒಳಗೊಂಡಿಲ್ಲ. ಹಾಗೂ ನಾವು ಜಾಗತಿಕವಾಗಿ ಕಂಡಿರುವ ವಿವಿಧ ಕಮ್ಯುನಿಸ್ಟ್ ಮತ್ತು ಎಡಪಕ್ಷಗಳು ವಾಸ್ತವವಾಗಿ ಕಮ್ಯುನಿಸಂ ಅಥವಾ ಮಾರ್ಕ್ಸ್‌ವಾದವನ್ನು ಪ್ರತಿನಿಧಿಸುತ್ತಿಲ್ಲ.

"ನಾನು ಒಂದು ರೀತಿಯ ಅರಾಜಕ ಅನಾಯಕ ಒಲವಿನವನು."
– ನೋಮ್ ಚೋಮ್ಸ್ಕಿ (೧೯೮೮)

ರಷ್ಯದಲ್ಲಿ ನಾವು ಕಂಡದ್ದು ಪಕ್ಷದ ಸರ್ವಾಧಿಕಾರ. ಅದು ಕಾರ್ಮಿಕರ, ರೈತರ ಅಧಿಕಾರವಾಗಿರಲಿಲ್ಲ. ಆ ಅಧಿಕಾರ ದಬ್ಬಾಳಿಕೆಯಲ್ಲಿ ತೊಡಗಿತ್ತು. ಇವೆಲ್ಲ ಏನಿದ್ದರೂ ಲಿಬರಲ್, ಸೋಷಿಯಲ್ ಡೆಮೊಕ್ರಾಟಿಕ್ ಮಾದರಿಯವು ಅಷ್ಟೆ. ಇಂದಿನ ವಾಸ್ತವವೆಂದರೆ ಎಲ್ಲೆಲ್ಲೂ ಪ್ರಭುತ್ವ ಮತ್ತು ದೈತ್ಯ ವಾಣಿಜ್ಯ ಘಟಕಗಳು, ಬೂರ್ಷ್ವಾ ಪ್ರಜಾಪ್ರಭುತ್ವದ ಮಾದರಿಯಲ್ಲಿ, ತಮ್ಮ ಜಂಟಿ ಅಧಿಕಾರವನ್ನು ಸ್ಥಿರಗೊಳಿಸಿಕೊಂಡಿವೆ. ನಮಗೆ ಬೇಕಾಗಿರುವುದು ಜನಸಮುದಾಯ ತಾವೇ ರಚಿಸಿಕೊಂಡ ಪಕ್ಷ, ತಾವೇ ನಿಯಂತ್ರಿಸುವ, ನೀತಿ ನಿರೂಪಿಸುವ, ಜನಪ್ರಿಯ ಪಕ್ಷ. ಹಾಲಿ ಇರುವ ಪಕ್ಷಗಳು ವಾಣಿಜ್ಯಲೋಕಕ್ಕೆ ಸೇರಿದವು, ಅವರ ಸಮೂಹ ಮಾಧ್ಯಮಗಳು ಅವನ್ನು, ಪ್ರಭುತ್ವವನ್ನು, ಪ್ರಜೆಗಳ ವಿವಿಧ ಗುಂಪುಗಳ ಒಲವನ್ನು ಪ್ರಭಾವಿಸಿ, ರೂಪುಗೊಳಿಸಿ, ನಿಯಂತ್ರಿಸುತ್ತಿವೆ. ಇದರ ವಿರುದ್ಧ ಜನಸಮೂಹವನ್ನು ಎಚ್ಚರಿಸುವುದು ಇರುವ ಸಮಸ್ಯೆ. ಇರುವ ಪಕ್ಷಗಳೇ, ಕೆಲವೊಮ್ಮೆ ಇರುವ ಅವಕಾಶಗಳನ್ನು ಬಳಸಿಕೊಂಡು, ಒಂದಿಷ್ಟು ಪ್ರಜಾಪ್ರಭುತ್ವಾತ್ಮಕ ಬದಲಾವಣೆಗಳನ್ನು ಸಾಧಿಸಿದ್ದರೂ, ಇದು ಸಂಪೂರ್ಣ ಪ್ರಜಾಪ್ರಭುತ್ವವಲ್ಲ. ಎಲ್ಲೆಡೆ, ಅದರಲ್ಲೂ ಅಮೆರಿಕದಲ್ಲಿ, ಪ್ರಜಾಪ್ರಭುತ್ವದ ಕೊರತೆ (ಡೆಮೊಕ್ರಾಟಿಕ್ ಡಿಫಿಸಿಟ್) ತುಂಬಿದೆ.

ನೀವು ಅಮೆರಿಕದಲ್ಲಿ ಕೆಲವು ತಿಂಗಳುಗಳಿಂದ

> ಭಾಷಾಶಾಸ್ತ್ರ ಅಭ್ಯಾಸವು, ನಿಯಮಾನುಸಾರ ವರ್ತನೆ ಹಾಗೂ, ನಿಯಮಾಧಾರಿತ ಸಂರಚನೆ ಯೊಂದರ ಚೌಕಟ್ಟಿನಲ್ಲಿ, ಅಪರಿಮಿತ, ಸ್ವಾಯತ್ತ ಸೃಜನಶೀಲ ವಿಕಸನವಾಗುವ ಸಾಧ್ಯತೆ ಇದ್ದು ಮನುಷ್ಯನ ಬೌದ್ಧಿಕ ಅಂತರ್ಗತ ಸ್ವಭಾವಗುಣಗಳ ಅನುಭವ ನೀಡುತ್ತದೆ.
>
> —ನೋಮ್ ಚೋಮ್‌ಸ್ಕಿ

ಇದ್ದೀರಾಗಿ, ಗಮನಿಸಿರಬಹುದು. ಅದು ಆರೋಗ್ಯ ಸುಧಾರಣಾ ಮಸೂದೆಯ ಬಗೆಗಿನ ರಾಷ್ಟ್ರವ್ಯಾಪಿ ಚರ್ಚೆಯ ವಿಷಯ. ಇದೇ ರಿಪಬ್ಲಿಕನ್ ಪಕ್ಷ ಹಲವಾರು ಬಾರಿ ಇಂಥ ಸುಧಾರಣೆಯ ಅಗತ್ಯದ ಬಗ್ಗೆ ಚರ್ಚೆ ಮಾಡಿದ್ದರೂ, ಇಂದು ವಿರೋಧ ಪಕ್ಷದಲ್ಲಿ ಕುಳಿತು, ಈ ಮಸೂದೆಯನ್ನು ಸಂಪೂರ್ಣವಾಗಿ ವಿರೋಧಿಸುತ್ತಿದೆ. ಇಂಥ ಸುಧಾರಣೆ ಮಾಡುತ್ತೇವೆಂದು ಸಾರಿ, ಆರಿಸಿ ಬಂದಿರುವ ಡೆಮಾಕ್ರಾಟಿಕ್ ಪಕ್ಷದ ಸದಸ್ಯರೇ ಈಗ ಅದರ ವಿರುದ್ಧ ಮಾತನಾಡುತ್ತಿದ್ದಾರೆ. ಈ ಕರಡು ಮಸೂದೆಯಲ್ಲಿ ಅನೇಕ ವಿಷಯಗಳಿವೆ. ಸಾರ್ವಜನಿಕ ಕ್ಷೇತ್ರದಲ್ಲಿ ಖಾಸಗಿ ಕಂಪನಿಗಳಿಗೆ ಪೈಪೋಟಿ ನೀಡಲು ಒಂದು ವಿಮಾ ಕಂಪನಿಯನ್ನು ಸ್ಥಾಪಿಸಬೇಕೆಂಬುದು ಹಲವಾರು ವಿಷಯಗಳಲ್ಲಿ ಒಂದು ಮಾತ್ರ. ಬಹುಶಃ ಈ ಮಸೂದೆ ಅಂಗೀಕೃತವಾಗದೆ ಹೋಗಬಹುದು ಅಥವಾ ಸಾರ್ವಜನಿಕ ಯೋಜನೆಯನ್ನು ಕೈಬಿಡಬಹುದು. ಖಾಸಗೀ ವಿಮಾ ಕಂಪನಿಗಳ, ಔಷಧಿ ತಯಾರಕರ ಲಾಭಕೋರತನ, ಸೂಕ್ಷ್ಮವಾದ ಏಕಸ್ವಾಮ್ಯ

ಇವುಗಳಿಗೆ ಸಾರ್ವಜನಿಕ ಕಂಪನಿ ಸವಾಲಾಗುತ್ತದೆ: ಕಾರಣ; ಅಷ್ಟೇ ಸಾಕು ಇದನ್ನು ವಿರೋಧಿಸಲು. ಖಾಸಗೀ ಹಿತಾಸಕ್ತಿಗಳು ಮಾಧ್ಯಮಗಳನ್ನು ನಿಯಂತ್ರಿ ಶಾಸಕರಿಗೆ ಚುನಾವಣೆಯಲ್ಲಿ ಹಣ ನೀಡಿ, ಅವರ ನಿಯಂತ್ರಿಸಿ, ತನ್ಮೂಲಕ ಈ ಮಸೂದೆ ಆಗದ ನೋಡಿಕೊಳ್ಳಲು ಪ್ರಯತ್ನಿಸುತ್ತಿವೆ. ಜಗತ್ತಿನ ಅ ಶ್ರೀಮಂತ ರಾಷ್ಟ್ರ ಅಮೆರಿಕ ಮಿಕ್ಕವರಿಗಿಂತ ದುಪ್ ವ್ಯಯ ಮಾಡುತ್ತದೆ ಆರೋಗ್ಯ ಕ್ಷೇತ್ರದಲ್ಲಿ, ಆದರ ನಮ್ಮ ಆರೋಗ್ಯ ವ್ಯವಸ್ಥೆ ಹಿಂದುಳಿದ ರಾಷ್ಟ್ರಗಳ ನಾಚುವಂತ ಕಳಪೆಯದು. ಈಗಲೂ ಐದು ಕೋ ಬಡಜನರಿಗೆ ಇಲ್ಲಿ ಆರೋಗ್ಯ ಸೇವೆ ದಕ್ಕುತ್ತಿ ಪ್ರಭುತ್ವವನ್ನು ವಾಣಿಜ್ಯ ಹಿತಾಸಕ್ತಿಗಳು ನಿಯಂತ್ರಿ ವುದರಿಂದ ಹೇಗೆ ಪ್ರಜಾಪ್ರಭುತ್ವದ ಕೊ ಉಂಟಾಗುತ್ತದೆ ಎಂಬುದಕ್ಕೆ ಇದು ಒಂ ಉದಾಹರಣೆ. ಇದೇ ಪರಿಸ್ಥಿತಿ ಕೈಗಾರಿಕಾನೀ ವಿದೇಶಾಂಗನೀತಿ, ಯುದ್ಧ, ಪರಿಸರ ಸಂರಕ್ಷ ಮುಂತಾದ ಕ್ಷೇತ್ರಗಳಲ್ಲಿ ವ್ಯಕ್ತವಾಗಿವೆ. ಈ ಸೂ



ನೋಮ್ ಚೋಮ್‌ಸ್ಕಿ ಮತ್ತು ಕೆ. ಎಲ್. [illegible]

ಗಳನ್ನು ಹೆಕ್ಕಿ ತೆಗೆದು ಜನತೆಯ ಮುಂದೆ ವುದು ಬುದ್ಧಿಜೀವಿಗೆ ಸಾಧ್ಯ, ಕರ್ತವ್ಯ. ಅದರ ಮವನ್ನು, ಪ್ರಭುತ್ವ ನೀಡುವ ಹಿಂಸೆಯನ್ನು, ಸುವುದೂ ಅವನಿಗೆ ಅನಿವಾರ್ಯ. ಯಾವುದೇ ರ ವ್ಯವಸ್ಥೆಯಲ್ಲೂ ನಿರ್ದುಷ್ಟವಾದ ಪರಿಸ್ಥಿತಿ ಆರೋಗ್ಯ ಸೇವೆ ಎಂಬುದು ಅಗತ್ಯಕ್ಕೆ ದೊರೆಯಬೇಕೆ ವಿನಾ ಅದು ವ್ಯಕ್ತಿಯ ವ ಶಕ್ತಿ, ಸಂಪತ್ತು, ಸ್ಥಾನಮಾನಗಳನ್ನು ವಲ್ಲ ಎನ್ನುವುದು ನಾಗರಿಕ ಸಮಾಜದ ಲಕ್ಷಣ. ಲ್ಲೂ ನಾಗರಿಕರಾಗಿಲ್ಲ; ಅದಕ್ಕೆ ಸಮಾಜದ ಸೇವಾ , ಲಾಭೈಕ ದೃಷ್ಟಿಯ ಖಾಸಗಿಯ ಕೈಯಲ್ಲಿ ಂಡಿರುವುದೆ ಕಾರಣ.

**ೂ** : ''ಒಳಕೋಣೆಯ ಹುಡುಗರೆಂದು'' ಯ ಹಿಂದಿನ ಪ್ರಭಾವಿಗಳನ್ನು ಕುರಿತು ಎರಡು ಳ ಹಿಂದೆಯೇ ಜಾಲಾಡಿದ್ದಿರಿ. ಅದು ಹೇಗೆ ಇನ್ನೂ ಅಮೆರಿಕಾ ಸಂಸ್ಥಾನದ ವ್ಯವಸ್ಥೆಯಲ್ಲಿ ಯಕವಾಗಿ ಪ್ರಭಾವಿಗಳಾಗಿ ಉಳಿದಿದ್ದಾರಲ್ಲ?

**ೋಮ್** : ಅದು ಇಂದಿನ ಬಂಡವಾಳ ವ್ಯವಸ್ಥೆಯ ಸ್ವರೂಪ. ಪ್ರಜಾಪ್ರಭುತ್ವದ ಕೊರತೆ ಅದರ ಅವುಗಳ ವಿರುದ್ಧ ಚುರುಕಾದ ಸಾಮೂಹಿಕ ಾಟಗಳನ್ನು ಸಂಘಟಿಸಲು ಆಗದಿರುವುದಕ್ಕೂ ಕಾರಣ. ಆದರೂ ಅಲ್ಲಲ್ಲೆ ಹೋರಾಟಗಳು ುತ್ತಿರುವುದೂ ವಾಸ್ತವ. ಇವುಗಳು ಹೆಚ್ಚಬೇಕು, ವೆ ಎಂಬ ವಿಶ್ವಾಸ ಹೋರಾಟಗಾರರಿಗೆ ಅಮೆರಿಕದ ಜನಸಾಮಾನ್ಯರ ಅನಿಸಿಕೆಗಳು ಗ್ಯಕರವಾದುವೇ. ಇಲ್ಲಿಯ ಮಾಧ್ಯಮಗಳು ಈ ವನ್ನು ಮುಚ್ಚಿಡುತ್ತಿವೆ. ನಮ್ಮದು ಜಗತ್ತಿನಲ್ಲೇ ಂದ ಸ್ವಾತಂತ್ರ್ಯವುಳ್ಳ ದೇಶ. ದುರದೃಷ್ಟವೆಂದರೆ ಜನ ತಪ್ಪು ಅಭಿಪ್ರಾಯಗಳ ಬಿಗಿತಕ್ಕೆ, ಪ್ರಚಾರದ ವೈಖರಿಗೆ ತುತ್ತಾಗುತ್ತಾರೆ. ಅವರನ್ನು ತಿದ್ದುವ ಸಾಮೂಹಿಕ ಚಳುವಳಿಗಳ ಸಂಘಟನೆ ಹೆಚ್ಚಬೇಕಾಗಿದೆ. ಜನರೇ ಅವರ ಸರ್ಕಾರದ ಅಧಿಕಾರಕ್ಕೆ ಹೊಣೆ. ಅವರಿಗೆ ಬೇಡದ ಸರ್ಕಾರವನ್ನು ಕಿತ್ತೊಗೆಯುವುದೂ ಅವರಿಗೆ ಸಾಧ್ಯವಿದೆ.

**ಹೊ** : ಇಸ್ರೇಲ್ ದೇಶದ ಯಹೂದಿಗಳು ಫ್ಯಾಸಿಸಂನ ಆಘಾತಕ್ಕೆ ದಬ್ಬಾಳಿಕೆಗೆ ಒಳಗಾಗಿದ್ದವರು. ಅವರೇಕೆ ಪ್ಯಾಲೆಸ್ಟೈನ್ ಜನರನ್ನು ಹೀಗೆ ದಮನ ಮಾಡುತ್ತಿದ್ದಾರೆ? ಅವರಿಂದ ಒಂದಿಷ್ಟು ಉದಾರತೆಯನ್ನು ನಿರೀಕ್ಷಿಸುವುದು ತಪ್ಪೆ?

**ನೋಮ್** : ದಬ್ಬಾಳಿಕೆಗೆ ಒಳಗಾದವರು ಸೇಡು ಪ್ರವೃತ್ತಿಯನ್ನು ಬೆಳೆಸಿಕೊಳ್ಳುವುದು, ತಮಗೆ ಯಾರ ಮೇಲೆ ಅದನ್ನು ತೀರಿಸಿಕೊಳ್ಳಲು ಸಾಧ್ಯವಾಗುತ್ತದೆ ಅಲ್ಲಿ ಹಾಗೆ ತೊಡಗಿಸಿಕೊಳ್ಳುವುದು ಇತಿಹಾಸದಲ್ಲಿ ಪದೇಪದೇ ಕಾಣಿಸಿಕೊಂಡಿದೆ. ಇದರ ಬಗ್ಗೆ ಯಾವ ಭ್ರಮೆಯೂ ಬೇಡ. ಭಾರತದಲ್ಲಿ ದಲಿತರ ವಿರುದ್ಧ, ಪರಿಶಿಷ್ಟ ಜನಾಂಗದವರ ವಿರುದ್ಧ ನಡೆಯುವ ಶೋಷಣೆಗಳು ಇಂಥವೆ. ತಮ್ಮ ತಾಯ್ನಾಡಿನಲ್ಲಿ ನ್ಯಾಯಾಲಯದ ಅನ್ಯಾಯದ ತೀರ್ಪಿಗೊಳಗಾಗಿ, ಹಿಂಸೆಗೆ ಒಳಗಾಗಿ, ದಬ್ಬಾಳಿಕೆಗೆ ಒಳಗಾಗಿ, ಗಡಿಪಾರು ಮಾಡಲ್ಪಟ್ಟ ಜನರೆ ಅಮೆರಿಕದಲ್ಲೂ, ಆಸ್ಟ್ರೇಲಿಯ ದಲ್ಲೂ ಮೂಲ ನಿವಾಸಿಗಳನ್ನು ನಾಶಮಾಡಲು ಮುಂದುವರಿದಿದ್ದೂ ಕರಿಯರನ್ನು ಗುಲಾಮರಾಗಿಸಿ ಕೊಂಡುದು, ಇಂಥದೇ ಸ್ವಭಾವದ್ದು. ಇದು ಒಂದು ರಾಜನೀತಿಯಂತೆ ಇಂದೂ ಮುಂದುವರಿದಿದೆ.

**ಹೊ** : ಹಾಗಾದರೆ ಇದರಿಂದ ಬಿಡುಗಡೆಯೇ ಇಲ್ಲವೆ?

**ನೋಮ್** : ನಾಗರಿಕತೆಯ ಬೆಳವಣಿಗೆ ನಿಧಾನ ವಾಗಿಯೇ ಆದರೂ ಸ್ಪಷ್ಟವಾಗಿ ಮುಂದುವರಿಯುತ್ತಿದೆ. ಅಮೆರಿಕದಲ್ಲಿ ಒಬ್ಬ ಕರಿಯ ಮತ್ತು ಒಬ್ಬ ಮಹಿಳೆ ದೇಶದ ಅತ್ಯುಚ್ಚ ಸ್ಥಾನಕ್ಕೆ ಸ್ಪರ್ಧಿಸಿದ್ದು, ಇಂಥ ಒಂದು ಸ್ವಾಗತಾರ್ಹ ಬೆಳವಣಿಗೆ. ಪ್ರಗತಿಯ ಬೆಳವಣಿಗೆ, ಅನೇಕ ಏಳುಬೀಳುಗಳಿದ್ದರೂ ಅದರ ಗತಿ, ದಿಕ್ಕು ಸ್ಪಷ್ಟವಾದುದು. ಇತಿಹಾಸದ ಮಾರ್ಗವೇ ಹಾಗೆ. ಅದು ಒಟ್ಟಾರೆ ಊರ್ಧ್ವ ಮುಖವೇ.

ನಿಮ್ಮ ಉತ್ತರ ಪ್ರದೇಶದಲ್ಲಿ ಒಬ್ಬ ದಲಿತ ಮಹಿಳೆ ಅಧಿಕಾರಕ್ಕೆ ಬಂದಿರುವುದು, ಬೊಲಿವಿಯಾದಲ್ಲಿ ಒಬ್ಬ ರೈತ ಕಾರ್ಮಿಕ ಅಧಿಕಾರಕ್ಕೆ ಬಂದಿರುವುದು ಇಂಥದೆ ಜನತಾ ಚಳುವಳಿಗಳ ಮೂಲಕ. ಸಾವಕಾಶ ವಾದರೂ, ಖಚಿತವಾಗಿ ಬದಲಾವಣೆಗಳನ್ನು ತರುವುದು, ನಮ್ಮ ಪ್ರಜಾಪ್ರಭುತ್ವದಲ್ಲಿನ ಕೊರತೆಯನ್ನು ತುಂಬಿಕೊಳ್ಳುವುದು, ನಮ್ಮ ಸಮಾಜವನ್ನು ಬಂಡವಾಳದ ಶೋಷಣೆಯಿಂದ ಬಿಡಿಸಿ, ಮತ್ತಷ್ಟು ನಾಗರಿಕವಾಗಿಸುವುದು ಸಾಧ್ಯ ಎಂಬ ಆಶಾಭಾವನೆಗೆ ಇಂಬುಕೊಡುತ್ತದೆ.

**ಹೊ** : ನೀವು ಇತ್ತೀಚೆಗೆ ಭಾರತ-ಅಮೆರಿಕ ಅಣು ಒಪ್ಪಂದ ಒಂದು ಗಂಭೀರವಾದ ವಿಷಯ, ಅದು ಒಂದು ಬಿಕ್ಕಟ್ಟು ಎಂದು ಪ್ರಸ್ತಾಪಿಸಿದ್ದೀರಿ. ಅದೇನು ಅಂಥ ಬಿಕ್ಕಟ್ಟು? ನಮ್ಮ ಎಡಪಕ್ಷಗಳು ಅದನ್ನು ವಿರೋಧಿಸಿವೆ. ಅದು ದೇಶ ತನ್ನ ತಾಂತ್ರಿಕ ಅಭಿವೃದ್ಧಿಯನ್ನು ಸಾಧಿಸಿ, ಅಣು ಸಂಬಂಧಿತ ಸ್ವಯಂ ನಿರ್ಭರತೆಯನ್ನು ಸಾಧಿಸಲು ತಡೆ ಉಂಟುಮಾಡಿ, ನಮ್ಮ ಸಾರ್ವಭೌಮತೆಯನ್ನು ಮೊಟಕುಗೊಳಿಸಿದೆ ಎನ್ನುವುದು ಅವರ ಆತಂಕ. ಎಡಪಕ್ಷಗಳು ಅಣುಬಾಂಬ್ ವಿರೋಧಿ ಹಾಗೂ ಅಣ್ವಸ್ತ್ರ ವ್ಯಾಪಕವಾಗುವುದನ್ನು

... ವಿಜ್ಞಾನ ಕ್ಷೇತ್ರದಲ್ಲಿ ಕೃಷಿ ಮಾಡುವುದು ಉಪಯುಕ್ತವಾದುದು. ...ಆ ಮಾರ್ಗದಲ್ಲಿ ಪುರಾವೆ, ವಾದಪ್ರತಿವಾದ, ಸಕಾರಣ, ತಾರ್ಕಿಕ ಚಿಂತನಾಕ್ರಮ ಇವುಗಳ ಅರ್ಥ ದಕ್ಕುತ್ತದೆ. ...ಜೀವನದ ಇತರ ಕ್ಷೇತ್ರಗಳಿಗೆ ಅವನ್ನು ಅನ್ವಯಿಸುವ ಸಾಮರ್ಥ್ಯ ಬರುತ್ತದೆ.

– ನೋಮ್ ಚೋಮ್‌ಸ್ಕಿ (೧೯೮೮)

ತಡೆಹಿಡಿಯುವವರು. ಸಾರ್ವತ್ರಿಕವಾಗಿ ಅದನ್ನು ನಿಶ್ಶಸ್ತ್ರೀಗೊಳಿಸಬೇಕು ಎಂಬುದು ಈ ಹಿಂದೆಯೂ ಅವರ ನಿಲುವು. ನೀವು ಕಾಣುವ ಬಿಕ್ಕಟ್ಟು ಎಂಥದು ?

**ನೋಮ್ :** ಈ ಒಪ್ಪಂದ ಭಾರತ ತನ್ನ ಅಣ್ವಸ್ತ್ರವನ್ನು ವಿಸ್ತರಿಸಿಕೊಳ್ಳಲು ನೆರವಾಗುತ್ತದೆ. ಹಾಗೂ ಇದು ಪಾಕಿಸ್ತಾನವನ್ನು ತನ್ನದೇ ಅಣ್ವಸ್ತ್ರ ವಿಸ್ತರಣೆಗೆ ಪ್ರೇರೇಪಿಸುತ್ತದೆ. ಈ ಬೆಳವಣಿಗೆ ಆತಂಕಕಾರಿ. ಈ ಒಪ್ಪಂದದ ಜತೆಜತೆಗೇ ಅಮೆರಿಕದೊಡನೆ ಭಾರತ ಮಿಲಿಟರಿ ವಲಯದಲ್ಲಿ ಮತ್ತಷ್ಟು ಬೆಸೆದುಕೊಳ್ಳುತ್ತಿದೆ. ಈ ಬೆಳವಣಿಗೆಯು ವಿಶ್ವಶಾಂತಿಯ ದೃಷ್ಟಿಯಿಂದ ಆತಂಕಕಾರಿ. ಅಣ್ವಸ್ತ್ರಗಳ ಪ್ರಸರಣೆಗೆ ಇದು ಮತ್ತಷ್ಟು ಅವಕಾಶ ಮಾಡಿಕೊಡುತ್ತಿದೆ. ಅಮೆರಿಕವೂ ಸೇರಿದಂತೆ ಎಲ್ಲರನ್ನು ಸೇರಿಸಿ, ಭಾರತ ಅಣ್ವಸ್ತ್ರ ನಿಷೇಧ ಒಪ್ಪಂದಕ್ಕೆ, ಪ್ರಸರಣವನ್ನು ತಡೆಯುವುದಕ್ಕೆ, ಕೆಲಸ ಮಾಡಬೇಕಾಗಿತ್ತು. ಎಡಪಕ್ಷಗಳು ತಮ್ಮ ವಿರೋಧಕ್ಕೆ ಸಾರ್ವಭೌಮತೆಯ ಕಾರಣವನ್ನು ಮುಂದಿಟ್ಟಿದ್ದು ಸರಿಯಲ್ಲ. ಈ ಒಪ್ಪಂದ ಅಣ್ವಸ್ತ್ರ ಪ್ರಸರಣಕ್ಕೆ ಕಾರಣವಾಗುತ್ತದೆಂದು ವಿರೋಧಿಸಬೇಕಾಗಿತ್ತು.

**ಹೊ :** ಪಾಕಿಸ್ತಾನಕ್ಕೆ ಬಾಂಬು ಮಾಡಿಕೊಳ್ಳಲು ನೆರವಾದ ಅಮೆರಿಕ, ಚೀನಾ ತಾವೇ ಪ್ರಸರಣ ಒಪ್ಪಂದಕ್ಕೆ ಸಹಿ ಹಾಕಿಲ್ಲ. ಭಾರತ ತನ್ನನ್ನು ತಾನು ರಕ್ಷಿಸಿಕೊಳ್ಳುವುದು ಹೇಗೆ? ಭಾರತದ ಎಡಪಕ್ಷಗಳು ಮೂಲತಃ ಅಣು ಬಾಂಬ್ ವಿರೋಧಿ ಹಾಗೂ ವಿಶ್ವಶಾಂತಿ ಚಳುವಳಿಯ ಪಕ್ಷಪಾತಿ ಎನ್ನುವುದು ತಮಗೂ ತಿಳಿದಿರಬಹುದು. ಭಾರತದ ಹಾಗೂ ಪಾಕಿಸ್ತಾನದ ಶಾಂತಿ ಚಳುವಳಿಗಳು ಒಂದೇ ಉದ್ದೇಶ ಉಳ್ಳವು.

**ನೋಮ್ :** ಹೌದು, ಅಮೆರಿಕ ಪಾಕಿಸ್ತಾನವನ್ನು ಮತ್ತು ಭಾರತವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತಿದೆ ಹಾಗೂ ಬಾಂಬ್ ಪ್ರಸರಣಕ್ಕೆ ಕಾರಣವಾಗುತ್ತಿದೆ. ಭಾರತ ಅದನ್ನು ವಿರೋಧಿಸಬೇಕಾಗಿತ್ತು. ಅಲ್ಲಿಯ ಚಳುವಳಿಗಳು ಹೀಗೆ ಹೇಳಬೇಕಾಗಿತ್ತು. ಸ್ವಾಯತ್ತೆ ಹೋಯ್ತು ಅಂತ ಅಲ್ಲ.

**ಹೊ :** ಪ್ಯಾಲೆಸ್ಟೈನ್ ಸಮಸ್ಯೆಯ ಪರಿಹಾರಕ್ಕೆ ನೀವು ಏನಾದರೂ ನೀಲಿನಕಾಶೆ ತಯಾರಿಸಿದ್ದೀರಾ ?

**ನೋಮ್ :** ಪ್ಯಾಲೆಸ್ಟೈನ್ ಜನರ ವಿರುದ್ಧ ಎಡೆಬಿಡದೆ ದಬ್ಬಾಳಿಕೆ ನಡೆಸಿ, ಅವರ ಮನೋದಾರ್ಢ್ಯವನ್ನು ಮುರಿಯುವುದು, ಹಾಗೂ ಅವರ ಪ್ರದೇಶಗಳನ್ನು ಆಕ್ರಮಿಸಿಕೊಳ್ಳುತ್ತಾ, ಪ್ಯಾಲೆಸ್ಟೈನ್ ಒಂದು ಸ್ವಯಂ ನಿರ್ಭರ ರಾಷ್ಟ್ರವಾಗಿ ಉಳಿಯಲಾರದಂಥ ಪರಿಸ್ಥಿತಿ ಉಂಟುಮಾಡುವುದು ಇಸ್ರೇಲ್‌ನ ಉದ್ದೇಶ. ಪಶ್ಚಿಮ ತಟದ ಪ್ರದೇಶವನ್ನು ಆಕ್ರಮಿಸಿಕೊಂಡರೆ, ಪ್ಯಾಲೆಸ್ಟೈನ್ ಒಂದು ದೇಶವಾಗಿ ಸ್ವತಂತ್ರವಾಗಿ ಉಳಿಯಲಾರದು. ಅದು ಇಸ್ರೇಲ್‌ನಿಂದ ಸುತ್ತುವರಿಯಲ್ಪಡುತ್ತದೆ, ಅದರ ಅಡಿಯಾಳಾಗುತ್ತದೆ ಎಂಬುದು ಲೆಕ್ಕಚಾರ.

ಕಾನೂನಿನನ್ವಯ ಸ್ಪಷ್ಟವಾಗಿ ಚುನಾಯಿಸಿ ಬಂದಿರುವ ಹಮಾಸ್ ಆಡಳಿತವನ್ನು ಅಧಿಕೃತವೆಂದು ಸ್ವೀಕರಿಸದೆ ಇರುವುದು, ಹಾಗೂ ಗಾಜಾ ತಾಕನ್ನು ಆಕ್ರಮಿಸಿಕೊಂಡಿರುವುದು ಎರಡೂ ಒಪ್ಪತಕ್ಕ ವಿಷಯವಲ್ಲ. ಹಮಾಸ್ ಪದೇ ಪದೇ ತಾವು ಇಸ್ರೇಲ್ ರಾಜ್ಯದ ಅಸ್ತಿತ್ವವನ್ನು ಸ್ವೀಕರಿಸುವುದಾಗಿಯೂ, ಎರಡು ರಾಜ್ಯಗಳ ಸ್ಥಾಪನೆಯೇ ಸರಿಯಾದ ಪರಿಹಾರವೆಂದು ಒಪ್ಪಿಕೊಂಡಿದೆ. ಪ್ಯಾಲೆಸ್ತೀನಿಯರು ಅವಲಂಬಿಸಿರುವ ಕುಡಿಯುವ ನೀರಿನ ಮೂಲವನ್ನೆಲ್ಲ ಇಸ್ರೇ

ಸಿಕೊಂಡಿರುವುದು ಖಂಡನೀಯ ಮತ್ತು
ಥಾ ಸ್ವೀಕರಿಸಲಾಗದು. ಅದು ಮಾನವೀಯ
ಹಕ್ಕುಗಳ ವಿರುದ್ಧ ದುರಾಕ್ರಮಣ.
ಬಾಮ ಈ ಸಮಸ್ಯೆಯನ್ನು ಪರಿಹರಿಸುವರೆಂದು
ಲಾಗದು. ಆತ ಕೇವಲ ಹಾರಿಕೆಯ ಮಾತು
ಆಡುತ್ತಿದ್ದಾರೆ. ಕಳೆದ ಮೂವತ್ತು ವರ್ಷ
ದಲೂ ಪರಿಹಾರದ ಸ್ವರೂಪ ಸ್ಪಷ್ಟವಾಗಿದೆ. ಅದು
ತವಾಗಿದೆ. ವಿಶ್ವಸಂಸ್ಥೆಯ ತೀರ್ಮಾನವೂ ಇದೆ.
ಅತಿಕ್ರಮಿಸಿದ ಪ್ಯಾಲೆಸ್ತೈನ್ ಪ್ರದೇಶದಲ್ಲಿ
ಲಿಗಳ ವಸತಿಯನ್ನು ಸ್ಥಾಪಿಸುತ್ತಿರುವುದು
ನು ವಿರೋಧಿ ಎಂದು ಅಮೆರಿಕದ, ಇಸ್ರೇಲಿನ
ವಿಶ್ವ ನ್ಯಾಯ ಸ್ಥಾನಗಳು ತೀರ್ಪಿತ್ತಿವೆ. ಅದು
ರರಾಷ್ಟ್ರೀಯ ಕಾನೂನಿನಂತೆಯೂ ಬಾಹಿರ
ದು, ಜಿನೀವಾ ಒಡಂಬಡಿಕೆಗೆ ವಿರುದ್ಧ
ದು. ಹಮಾಸ್ ಇಸ್ರೇಲ್‌ಅನ್ನು ನಾಶಪಡಿಸಲು
ಸುತ್ತಿದೆ ಎಂಬ ಅಪವಾದದಲ್ಲಿ ಒಂದಿಷ್ಟು
ಳಿರಬಹುದು. ಅದರಲ್ಲಿ ಆಶ್ಚರ್ಯವೇನಿಲ್ಲ.
ಕದ ಮೂಲನಿವಾಸಿಯೊಬ್ಬನನ್ನು ಕೇಳಿದರೆ
ಅಮೆರಿಕ ಸರ್ಕಾರದ ವಿರುದ್ಧ ಹಾಗೆಯೇ
ಯಾನು. ಮೆಕ್ಸಿಕೋ ಜನರ ಅರ್ಧಕ್ಕೂ ಹೆಚ್ಚು
ದೇಶವನ್ನು ಆಕ್ರಮಿಸಿಕೊಂಡಿರುವ ಅಮೆರಿಕದ
ಮೆಕ್ಸಿಕೋ ಜನವೂ ಇದೇ ರೀತಿ ಹೇಳಿಯಾರು.
ತಿ ಎಂದರೆ, ಹಮಾಸ್ ಎರಡು ರಾಜ್ಯಗಳ
ರಕ್ಕೆ ಮನ್ನಣೆಯ ಸಮ್ಮತಿ ನೀಡಿದೆ. ಪ್ಯಾಲೆಸ್ತೈನ್
ಈಗ ಇಸ್ರೇಲ್ ಆಕ್ರಮಿಸಿಕೊಂಡಿರುವ
ಶಗಳನ್ನು ಸೇರಿಸಿಕೊಂಡಾಗಲೆ, ಅದು ಒಂದು
ರುಬಲ್ಲ ಸಮರ್ಥ ಘಟಕವಾಗಿ ರಾಜ್ಯವಾಗುವುದು
ಅದಕ್ಕೆ ಸಾಕಷ್ಟು ಜೀವನಾವಶ್ಯಕ ಸಂಪನ್ಮೂಲ
ಲಭ್ಯವಾಗುವುದು ಆಗ ಮಾತ್ರ ಸಾಧ್ಯ.
ಮೆರಿಕದ ಸಾಧಾರಣ ಜನರಲ್ಲಿ ಒಂದು
ರುಲ್ಲಿ ತಮ್ಮ ಪ್ರಭುತ್ವವು ಒಂದು ರೀತಿ ಅನಾಗರಿಕ,
ನಿಗೆ ಹೊರತಾದುದು ಎಂಬ ಅನಿಸಿಕೆ
ತವಿದೆ. ಯಾವುದೇ ಕಾನೂನುಗಳು ನಮ್ಮ
ತ್ವಕ್ಕೆ ಅನ್ವಯಿಸುವುದಿಲ್ಲ. ಅದು ಗೌರವಿಸು
ಲ್ಲ. ಇಸ್ರೇಲ್ ಕೂಡ ಇಂಥದೆ ಒಂದು ರಾಜ್ಯ.
ಮೀರಿದ್ದು, ಕಳ್ಳಕಾಕರಂತೆ!
ೂ : ಐಎಂಎಫ್, ವರ್ಲ್ಡ್ ಬ್ಯಾಂಕ್, ಮತ್ತು
ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳು
ದ್ಧಿಶೀಲ ಮತ್ತು ಹಿಂದುಳಿದ ರಾಷ್ಟ್ರಗಳ
ಕ್ತಿಗೆ ವಿರುದ್ಧವಾದ ನೀತಿಗಳನ್ನು ಅನುಸರಿ
. ಇದನ್ನು ಸರಿಪಡಿಸುವುದು ಹೇಗೆ ?
**ೋಮ್ :** ಈ ಸಂಸ್ಥೆಗಳನ್ನು ಸ್ಥಾಪಿಸಿದ್ದು
ರಾಷ್ಟ್ರಗಳಿಗೆ ನೆರವು ನೀಡಲಲ್ಲ, ಬದಲಾಗಿ
ಳನ್ನು ನಿಯಂತ್ರಿಸಲು ಎಂಬುದನ್ನು ಗ್ರಹಿಸಬೇಕು.
ಬ್ಯಾಂಕು ಎಂಬುದು ಅಮೆರಿಕದ ಟ್ರೆಜರಿಯ
ಮುಂದುವರಿದ ಅಂಗವಷ್ಟೆ. ಬಡದೇಶಗಳಿಗೆ
ಳ ಅಗತ್ಯವಿರುವುದೂ ನಿಜ. ಈ ರಾಷ್ಟ್ರಗಳಿಗೂ
ಸಂಸ್ಥೆಗಳ ಆಡಳಿತದ ವ್ಯವಸ್ಥೆಯಲ್ಲಿ
ವಹಿಸುವ ಅವಕಾಶ ಬೇಕು, ದನಿ ಬೇಕು.
ಿನ ಜಿ-೨೦ ಶೃಂಗಸಭೆಯಲ್ಲಿ ಈ ವಿಷಯ



ಚರ್ಚಿತವಾಗಿ, ಹಿಂದುಳಿದ ರಾಷ್ಟ್ರಗಳಿಗೆ ಅಧಿಕಾರದಲ್ಲಿ ಪ್ರವೇಶ ನೀಡುವ ಸೂಚನೆ ಬಂದಿದೆ. ಇದು ಹೇಗೆ ರೂಪುಗೊಳ್ಳುವುದು ಎಂದು ಕಾದುನೋಡಬೇಕು. ಈ ಸಂಸ್ಥೆಗಳು ವಿಶ್ವಸಂಸ್ಥೆಯ ಅಧೀನಕ್ಕೆ ಒಳಪಡದಿರುವುದೂ ಸರಿಯಲ್ಲ. ಇದನ್ನು ಸರಿಪಡಿಸಬೇಕು. ವಿಶ್ವ ವ್ಯಾಪಾರ ಸಂಸ್ಥೆಯೂ ಅದೇ ರೀತಿ ವಿಶ್ವಸಂಸ್ಥೆಯ ಹಿಡಿತಕ್ಕೆ ಸಿಗದೆ ಬೆಳೆಯುತ್ತಿದೆ. ವಿಶ್ವಸಂಸ್ಥೆ ತಾನೆ ನಡೆಸುತ್ತಿದ್ದ ವಾಣಿಜ್ಯ ಚರ್ಚೆಗೆ ಇದರಿಂದ ಧಕ್ಕೆಯಾಗಿದೆ. ಇಲ್ಲೆಲ್ಲಾ ಕಂಡುಬರುವುದು ಪ್ರಜಾಪ್ರಭುತ್ವದ ಕೊರತೆ. ಅದನ್ನು ತುಂಬಿಕೊಡುವುದು ಅಗತ್ಯ.

**ಹೊ :** ಇತ್ತೀಚೆಗೆ ಕ್ಯೂಬಾ ಕುರಿತಂತೆ ವಾಷಿಂಗ್‌ಟನ್ನಿನಲ್ಲಿ ಒಂದಿಷ್ಟು ಗುಸಗುಸ ಸುದ್ದಿ ಕೇಳಿಬಂದಿದೆ. ಅದಕ್ಕೆ ಏನಾದರೂ ಅರ್ಥವಿದೆಯೆ? ಕ್ಯೂಬಾ ಸಮಸ್ಯೆಯ ಪರಿಹಾರ ಸನ್ನಿಹಿತವೆ? ಜಾಗತಿಕವಾಗಿ ಈ ಕುರಿತು ಏನು ಮಾಡಬೇಕು? ಬರುವ ದಿನಗಳಲ್ಲಿ ಲ್ಯಾಟಿನ್ ಅಮೆರಿಕದಲ್ಲಿ ಏನೆಲ್ಲ ನಿರೀಕ್ಷಿಸಬಹುದು?

**ನೋಮ್ :** ಅಂಥ ಶಬ್ದಗಳಿಗೆ ಏನೂ ಅರ್ಥ ಇಲ್ಲ. ಅಧ್ಯಕ್ಷರ ಹಿಂದಿನ, ತೆರೆಮರೆಯ, ಆಳುವ ವ್ಯವಸ್ಥೆಯ ಹಿಡಿತ, ಅದರ ದೀರ್ಘಕಾಲೀನ ಉದ್ದೇಶಗಳು ಏನು ಎಂಬುದೇ ಮುಖ್ಯ. ಈ ಭೂಭಾಗದಲ್ಲಿ ಕ್ಯೂಬಾ ಇತರರಿಗೆ ಸ್ಫೂರ್ತಿ ನೀಡುವ ಉದಾಹರಣೆಯಾಗಿ ಸೆಟೆದು ನಿಲ್ಲಕೂಡದು ಎಂಬುದೇ ಆ ಉದ್ದೇಶ. ೧೯ನೆಯ ಶತಮಾನದ ಮನ್ರೋ ವಿಚಾರ ಅದು. ಅದು ಇನ್ನೂ ಬದುಕಿದೆ. ಸುಮಾರು ಒಂದೂವರೆ ಶತಮಾನ ಕ್ಯೂಬಾ ಅಮೆರಿಕದ ಶೋಷಣೆಯ ಹಿಡಿತದಲ್ಲಿ ಇತ್ತು. ಕ್ಯಾಸ್ಟ್ರೋ ಅದನ್ನು ಬದಲಾಯಿಸುವ ಅಪರಾಧವೆಸಗಿದ್ದಾರೆ. ಆತನನ್ನು ಕ್ಷಮಿಸುವುದು ಹೇಗೆ? ಕಿಸಿಂಜರ್ ಹೇಳಿದ್ದ ''ಈ ವಿಷಕ್ರಿಮಿ ಹರಡುವುದಕ್ಕೆ ಮುಂಚೆ ಅದನ್ನು ಮೂಲತಃ ಮುಗಿಸಿಬಿಡಬೇಕು'' ಎಂದು. ಇತ್ತೀಚೆಗೆ ನಡೆದ ಒಂದು ಸಂಗತಿ. ಇದು ಮಾಧ್ಯಮಗಳಲ್ಲಿ ಹೊರಬರದಂತೆ ತಡೆದಿದ್ದಾರೆ. ಟೆಕ್ಸಾಸ್ ಆಯಿಲ್ ಕಂಪನಿಯ ಮಾಲೀಕರ ಪ್ರತಿನಿಧಿಗಳು ಕ್ಯೂಬಾ ಸರ್ಕಾರದ ಪ್ರತಿನಿಧಿಗಳೊಂದಿಗೆ ಮೆಕ್ಸಿಕೋದಲ್ಲಿ ಒಂದು ಸುಪ್ರಸಿದ್ಧವಲ್ಲದ ಹೊಟೇಲ್ ಒಂದರಲ್ಲಿ ಗೌಪ್ಯವಾಗಿ ಸಂಧಿಸಿದರು. ಹೊಟೇಲಿನ ಮಾಲೀಕ ಅಮೆರಿಕದವನು. ಅಮೆರಿಕದ ಟ್ರೆಜ಼ರಿ ಇಲಾಖೆ ಕ್ಯೂಬಾದವರನ್ನು ಹೊಟೇಲಿನಿಂದ ಹೊರಹಾಕಲು ಹೊಟೇಲಿನ ಮಾಲೀಕನಿಗೆ ತಾಕೀತು ಮಾಡಿತು. ಹೊರಹಾಕಲಾಯಿತು. ಇದು ತನ್ನ ಆಂತರಿಕ ವಿಷಯದಲ್ಲಿ ಹಸ್ತಕ್ಷೇಪವೆಂದು ಮೆಕ್ಸಿಕೋ ಸರ್ಕಾರ ಪ್ರತಿಭಟಿಸಿದರೂ ಅದನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಕ್ಯೂಬಾದ ಸಾಗರ ತಟ ಪ್ರದೇಶಗಳಲ್ಲಿ ಇರುವ ಪೆಟ್ರೋಲ್ ನಿಕ್ಷೇಪವನ್ನು ಅಭಿವೃದ್ಧಿಪಡಿಸಲು ಬಂಡವಾಳ ಹೂಡಿಕೆ ಚರ್ಚೆಯ ವಿಷಯವಾಗಿತ್ತು. ಅಂದರೆ ಇಂದೋ ನಾಳೆಯೋ, ಪರಸ್ಪರ ಆರ್ಥಿಕ ಹಿತಾಸಕ್ತಿಗಳ ಕಾರಣ ರಾಜಕೀಯ ಸಮಸ್ಯೆ ಪರಿಹಾರವಾಗುತ್ತದೆ. ಅಂದರೆ ವಾಸ್ತವದಲ್ಲಿ ಈ ಸಮಸ್ಯೆ ಸಮಸ್ಯೆಯೇ ಅಲ್ಲ. ಅಮೆರಿಕದ ನೀತಿಯ ವಿರುದ್ಧ ನಿರಂತರವಾಗಿ ಸ್ಥಳೀಯ ಹಾಗೂ ಜಾಗತಿಕ ಒತ್ತಾಯ ಮಾಡುವ ಚಳುವಳಿಗಳನ್ನು ನಡೆಸುತ್ತಲೇ ಇರಬೇಕು. ಕ್ಯೂಬಾದಲ್ಲೂ ಮಾನವೀಯ ಹಕ್ಕುಗಳ ದಮನ ಕೆಲವೇಳೆ ಕಂಡುಬರುತ್ತದೆ. ಅದನ್ನು ವಿರೋಧಿಸಬೇಕೆಂದು ಕ್ಯೂಬಾದ ರೇಡಿಯೋನಲ್ಲಿ ನಾನು

> ಮುಕ್ತ ಉದ್ಯಮ ಎಂದರೆ ಶ್ರೀಮಂತರಿಗಾಗಿ ಸಮಾಜವಾದ. ಅಂದರೆ ಸಾರ್ವಜನಿಕರು ಬೆಲೆ ತೆರುತ್ತಾರೆ. ಶ್ರೀಮಂತರು ಲಾಭ ಗಳಿಸುತ್ತಾರೆ.
>
> – ನೋಮ್ ಚೋಮ್‌ಸ್ಕಿ

ಪ್ರಶ್ನೆ: ಪ್ರಭುತ್ವವನ್ನು, ಬಂಡವಾಳ ವ್ಯವಸ್ಥೆಯನ್ನು ಕಟುವಾಗಿ ಟೀಕಿಸುತ್ತೀರಿ. ಆದರೆ ಪರ್ಯಾಯ ಏನು ಎಂದು ಸೂಚಿಸುವ ಜವಾಬ್ದಾರಿ ನಿಮ್ಮದಲ್ಲವೋ ?

ನೋಮ್ : ಈ ಕುರಿತು ಸಲಹೆ ನೀಡಲು ನನಗೆ ಒಲವಿಲ್ಲ; ಏಕೆಂದರೆ ಪ್ರತಿಯೊಬ್ಬರೂ ಈ ಕುರಿತು ತಮ್ಮ ಕ್ರಿಯಾ ಯೋಜನೆಯನ್ನು ತಾವೇ ಯೋಚಿಸಿಕೊಂಡು ನಿರ್ಧರಿಸಿಕೊಳ್ಳಬೇಕು, ಕ್ರಿಯಾಶೀಲರಾಗಬೇಕು ಅದನ್ನು ಸಾಧಿಸಲು; ಬೇರಾರೋ ಅವನ್ನು ನಮಗಾಗಿ ನಿರ್ಧರಿಸುತ್ತಾರೆ, ನಾನು ಅದಕ್ಕಾಗಿ ಕಾಯುತ್ತಾ, ಪರಿಸ್ಥಿತಿಯ ಕೇವಲ ಅವಲೋಕನದಲ್ಲಿ ನಿರತನಾಗಿರುತ್ತೇನೆ ಎನ್ನುವುದು ಗುಲಾಮತನದ ಲಕ್ಷಣ.

ನಮ್ಮ ವ್ಯಕ್ತಿಸ್ವಾತಂತ್ರ್ಯಕ್ಕೆ ಇರುವ ತೀರ ಅಪಾಯಕಾರೀ ಆಪತ್ತೆಂದರೆ ಬೃಹತ್ ವಾಣಿಜ್ಯ ಘಟಕಗಳಿಂದ (ಅವುಗಳ ಪ್ರಚಾರ) ಶಕ್ತಿ, ಜನತೆಯನ್ನು ಆರ್ಥಿಕವಾಗಿ ಶೋಷಣೆಗೆ ಒಳಗಾಗಿಸಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಬಂಧನಕ್ಕೊಳಗಾಗಿಸುತ್ತದೆ. ಪ್ರಭುತ್ವಕ್ಕೆ ಕೊನೆಯ ಪಕ್ಷ ಮತದಾರರ ಎಗ್ಗಾದರೂ ಇದೆ. (ಅದನ್ನು ನಿಯಂತ್ರಿಸುವ ವಾಣಿಜ್ಯ ಘಟಕಗಳಿಗೆ ಈ ಭಯ ಇಲ್ಲ.) ಪ್ರಮುಖ ಬಹುರಾಷ್ಟ್ರೀಯ ಕಂಪನಿಗಳ ಸಂಪನ್ಮೂಲ ಪ್ರಭುತ್ವದ ಸಂಪನ್ಮೂಲಗಳಿಗಿಂತ ಬಹುಪಾಲು ಹೆಚ್ಚಿನದು... ಅವು ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳಲು ಏನು ಬೇಕಾದರೂ ಮಾಡುತ್ತವೆ. ಪ್ರಭುತ್ವದ ಅಧಿಕಾರವನ್ನು ಬುಡಮೇಲು ಮಾಡುತ್ತವೆ. ಅಮೆರಿಕದ ಕೃಷಿ ಇಲಾಖೆ ಮಿಸಿಸಿಪ್ಪಿಯ ಕಂಪನಿಯೊಂದಕ್ಕೆ ಬೀಜವನ್ನು ಬಂಜೆಯಾಗಿಸುವ ಕ್ರಮಕ್ಕೆ ಪೇಟೆಂಟ್ ನೀಡಿತು. ಅಂಥ ಬೀಜದಿಂದ, ಒಂದು ಫಸಲು ಬೆಳೆದರೂ, ಮರುಫಸಲಿಗೆ ಬೀಜ ದೊರೆಯುವುದಿಲ್ಲ. ಆಗ ರೈತ ಪ್ರತಿ ವರುಷವೂ ಈ ಕಂಪನಿಯಿಂದ ಬೀಜ ಕೊಳ್ಳುವಂತಾಯ್ತು. ಜನತೆಗೆ ಬಡತನ ನೀಡುತ್ತಾ, ಅದೇ ಸಮಯದಲ್ಲಿ ಕಂಪನಿಗೆ ಲಾಭ ನೀಡುವ ಖಾಸಗಿ ಉದ್ಯಮಗಳ ಹುನ್ನಾರಕ್ಕೆ ಇದೊಂದು ಉದಾಹರಣೆ.

ಒಬ್ಬನೇ ಪ್ರತ್ಯೇಕವಾಗಿ ಉಳಿದರೆ ಅವನಿಂದ ಏನೂ ಮಾಡಲಾಗುವುದಿಲ್ಲ... ಆದರೆ ಮಿಕ್ಕವರೊಡನೆ ಸೇರಿಕೊಂಡರೆ, ನೀನು ಬದಲಾವಣೆಯನ್ನು ತರಬಲ್ಲೆ.

ಭವಿಷ್ಯದಲ್ಲಿ, ಸಾಧ್ಯತೆಯಲ್ಲಿ ಭರವಸೆ ಬೇಕು. ಆದರೆ ಕ್ರಿಯಾಶೀಲನಾಗದ ಕೇವಲ ಭರವಸೆ ಹೊಂದಿದ್ದರೆ ಅದು ಈಡೇರುವುದಿಲ್ಲ.

ಉತ್ತಮವಾದ ಒಳ್ಳೆಯ ಸಮಾಜವನ್ನು ರಚಿಸಬೇಕು. ಅದರ ಸಾಧನೆಗೆ ಬಹುಮುಖ್ಯವಾಗಿ ಬೇಕಾದುದು ಸತ್ಯ, ವಾಸ್ತವ ಏನು ಎನ್ನುವ ತಿಳುವಳಿಕೆ. ಬರೆ ಸತ್ಯದ ಅನಾವರಣವಾದರೆ ಅದು ತನ್ನನ್ನು ತಾನು ಸ್ಥಾಪಿಸಿಕೊಳ್ಳುತ್ತದೆ ಎಂದು ಹೇಳಲಾರೆ. ಆದರೆ ಅದನ್ನು ಬಿಟ್ಟು ಇನ್ನೇನು ತಾನೆ ಬೇರೆ ಮಾರ್ಗ ಇದೆ? ಈಗಾಗಲೇ ಇರುವ ಜನಪ್ರಿಯ ಚಳುವಳಿಗಳಿಗೆ, ಅಲ್ಲಲ್ಲಿ ಇರುವ ಬಿಡಿಬಿಡಿ ಸತ್ಯಾನ್ವೇಷಕ ವ್ಯಕ್ತಿಗಳು ಅವರ ಕಾರ್ಯಕ್ರಮಗಳಿಗೆ ಸಹಾಯವಾಗುವ ಸತ್ಯಗಳನ್ನು ಹೆಕ್ಕಿ ಹೆಕ್ಕಿ ನೀಡುವ ಕೆಲಸ ಮಾಡಬೇಕು. ಅದನ್ನು ನಾನು ಮಾಡುತ್ತೇನೆ. ಸತ್ಯವನ್ನು ಬಿಚ್ಚಿಡುವುದು, ಸುಳ್ಳುಗಳನ್ನು ಬಹಿರಂಗಗೊಳಿಸುವುದು ಬುದ್ಧಿಜೀವಿಯ ಪ್ರಥಮ ಜವಾಬ್ದಾರಿ.

ಭಯೋತ್ಪಾದಕರ ವಿರುದ್ಧ ಯುದ್ಧ ಎಂಬುದು ತಾರ್ಕಿಕವಾಗಿ ಅಸಂಬದ್ಧ. ಯುದ್ಧವೇ ಭಯೋತ್ಪಾದನೆ.

– ನೋಮ್ ಚೋಮ್‌ಸ್ಕಿ (೨೦೦೨)

ಹೇಳಲು ಅವರು ನನಗೆ ಅವಕಾಶ ನೀಡಿದ್ದರು !

ಲ್ಯಾಟಿನ್ ಅಮೆರಿಕದಲ್ಲಿ ಆಗುತ್ತಿರುವ ಬದಲಾವಣೆಗಳು ತುಂಬ ಆಶಾದಾಯಕವಾದುವು. ಮನ್ರೋನೀತಿಯು ವಿಫಲವಾಗುತ್ತಿರುವುದು ಸ್ಪಷ್ಟ. ಬೊಲಿವಿಯಾದ ಅಧ್ಯಕ್ಷ ಹೇಳಿದಂತೆ "ಇದೇ ಮೊಟ್ಟ ಮೊದಲಿಗೆ ಅಲ್ಲಿಯ ಜನ ತಮ್ಮ ಆಗುಹೋಗುಗಳನ್ನು ತಮ್ಮ ಕೈಯಲ್ಲೇ ತೆಗೆದುಕೊಂಡಿದ್ದಾರೆ." ಕ್ಯೂಬಾದಲ್ಲಿ, ವೆನಿಜುವೆಲ, ಬ್ರೆಜಿಲ್ ಮುಂತಾದ ಹಲವಾರು ದೇಶಗಳಲ್ಲಿ ಆಗುತ್ತಿರುವ ಬದಲಾವಣೆಯ ಅರ್ಥ ಇದೇ. ಬ್ರೆಜಿಲ್‌ನ ನಾಯಕ ಸಮಾಜದ ತೀರ ಕೆಳಸ್ತರದಿಂದ ಬಂದವರು. ಇದೇ ಮೊದಲಿಗೆ ಬೊಲಿವಿಯಾದಲ್ಲಿ ಸ್ಥಳೀಯ ಮೂಲ ಜನಾಂಗದವನನ್ನು ಅಧಿಕಾರಕ್ಕೆ ತರಲಾಗಿದೆ. ವೆನಿಜೂಲ ತನ್ನ ವಲಯದ ರಾಷ್ಟ್ರಗಳಿಗೆ ತುಂಬ ಕಡಿಮೆ ದರದಲ್ಲಿ ಪೆಟ್ರೋಲ್‌ನ್ನು ಸರಬರಾಜು ಮಾಡುತ್ತಿದೆ. ಕ್ಯೂಬಾ ಬಡರಾಷ್ಟ್ರಗಳಿಗೆ ಚೆನ್ನಾಗಿ ತರಬೇತಿ ಪಡೆದ, ಸೇವಾ ಮನೋಭಾವನೆಯ ವೈದ್ಯಕೀಯ ಕಾರ್ಮಿಕರನ್ನು ಹೆಚ್ಚು ಸಂಖ್ಯೆಯಲ್ಲಿ ಕಳುಹಿಸುತ್ತಿದೆ. ಈ ಎಲ್ಲ ಸಂದರ್ಭಗಳಲ್ಲೂ ಅಮೆರಿಕ ಮಧ್ಯೆ ಪ್ರವೇಶಿಸಲು ಪ್ರಯತ್ನಿಸಿ, ವಿಫಲವಾಯಿತು. ಲ್ಯಾಟಿನ್ ಅಮೆರಿಕದ ರಾಜ್ಯಗಳು ತಮ್ಮದೇ ಆರ್ಥಿಕ ಒಕ್ಕೂಟವನ್ನು ಬಹಳ ಬೇಗನೆ ಸ್ಥಾಪಿಸಿಕೊಂಡಿದ್ದಾರೆ. ಅದರ ಹೆಸರು UNASUR. ವೆನಿಜುವೆಲ ಒಡ್ಡಿರುವ ಸವಾಲನ್ನು ಎದುರಿಸುವುದು ಅಮೆರಿಕಕ್ಕೆ ತುಂಬ ಕಷ್ಟ. ಇತ್ತೀಚೆಗೆ ಪೆಟ್ರೋಲ್ ಬೆಲೆ ಗಗನಕ್ಕೆ ಏರಿದಾಗ ಅಮೆರಿಕದಲ್ಲೂ ಬಡಜನ ಬಹಳ ಕಷ್ಟಕ್ಕೊಳಗಾದರು. ನಾನಿರುವ ಬೋಸ್ಟನ್ ಪ್ರದೇಶದಲ್ಲಿ ಚಳಿ ವಿಪರೀತ. ಬಡವನ ಮನೆಯಲ್ಲೂ ಪೆಟ್ರೋಲ್ ಬೇಕು ಶಾಖ ಉತ್ಪತ್ತಿ ಮಾಡಿಕೊಳ್ಳಲು. ನಮ್ಮ ಕೆಲವು ಸೆನೆಟರ್‌ಗಳು ದೇಶದ ಪೆಟ್ರೋಲ್ ವಿತರಕ ಕಂಪನಿಗಳಲ್ಲಿ ಮೊರೆಯಿಟ್ಟರು : ಬಡವರಿಗೆ ಒಂದಿಷ್ಟು ಸುಲಭ ದರದಲ್ಲಿ ಪೆಟ್ರೋಲ್ ನೀಡಿ ಅಂತ. ಅಮೆರಿಕದ ಸ್ಥಳೀಯ ಕಂಪನಿಗಳು ಇದಕ್ಕೆ ಮುಂದಾಗಲಿಲ್ಲ. ಆದರೆ ವೆನಿಜುವೆಲ ಮೂಲದ ವಿತರಕ ಕಂಪನಿಗಳು ಅಮೆರಿಕದ ಛಳಿಯ ಪ್ರದೇಶದಲ್ಲೆಲ್ಲಾ ಸುಲಭ ದರದಲ್ಲಿ ಪೆಟ್ರೋಲ್ ವಿತರಿಸಿ, ಬಡವರಿಗೆ ನೆರವು ನೀಡಿದುವು. ಈ ಎಲ್ಲ 'ಕೆಟ್ಟ' ಉದಾಹರಣೆಗಳು ಹಾಕಿಕೊಡುವ ಮೇಲ್ಪಂಕ್ತಿ ಅಮೆರಿಕಕ್ಕೆ ನುಂಗಲಾರದ ತುತ್ತಾಗಿದೆ.


ನೋಮ್ ಚೋಮ್‌ಸ್ಕಿ ಮತ್ತು ಕೆ. ಎಸ್. ಪಾರ್ಥಸಾರಥಿ

ಕೊಲಂಬಿಯಾದಲ್ಲೂ ಅಮೆರಿಕ ಅಲ್ಲಿ ಮಾಫಿಯಾ ನಾಯಕತ್ವಕ್ಕೆ ಬೆಂಬಲ ನೀಡಿದೆ. ಅಲ್ಲಿ ಸರ್ವಾಧಿಕಾರಿಯನ್ನು ಅಧಿಕಾರದಲ್ಲಿ ಉಳಿಸಲು ಪ್ರಯತ್ನ. ಒಟ್ಟಿನಲ್ಲಿ ಕ್ಯೂಬಾವೂ ಸೇರಿದಂತೆ, ಲ್ಯಾಟಿ ಅಮೆರಿಕದ ಬೆಳವಣಿಗೆಗಳು ಆಶಾದಾಯಕವಾದು ಹಳೆಯ ಅನುಭವಗಳಿಂದ ಪಾಠ ಕಲಿಯುವು ಚಿಲಿಯಲ್ಲಿ ಆದ ದುರಂತದ ದಿನಗಳಿಂದಲೂ ಎಡೆಬಿ ಸಾಮೂಹಿಕ ಹೋರಾಟಗಳನ್ನು ನಡೆಸಿಕೊಂ ಬಂದಿರುವುದು, ಇವುಗಳ ಪರಿಣಾಮವೇ ಇಂ ಬೆಳವಣಿಗೆ. ಪ್ರಾಯಶಃ ಅ.ಸಂ.ಸಂಸ್ಥಾನ ಲ್ಯಾಟಿ ಅಮೆರಿಕನ್ ದೇಶಗಳೊಡನೆ ಇಂದು ಸಹಕರಿಸಿ, ಬಾಳ್ವೆ ಮಾಡುವುದು ತನ್ನದೇ ಶ್ರೇಯಸ್ಸಿಗೆ ಪೂ ವೆಂದೂ ಅನಿವಾರ್ಯವೆಂದೂ ಗ್ರಹಿಸೀತು. ಟೆಕ ಆಯಿಲ್ ಕಂಪನಿ ಅಲ್ಲಿ ಹಣ ಹೂಡ ಮುಂದಾದುದಕ್ಕೆ ಇದೇ ಅರ್ಥ ಇರಬಹುದು.

**ಹೊ** : ನಿಮ್ಮ ಆಪ್ತ ಕಾರ್ಯದರ್ಶಿ ೨೦ ನಿಮಿ ಎಂದಿದ್ದರು. ನೀವು ೪೫ ನಿಮಿಷ ಮಾತನಾಡಿದಿ ನಾವು ನಿಮಗೆ ತುಂಬ ಆಭಾರಿ. ನೀವು ಕರ್ನಾಟ ಆಗಮಿಸಬೇಕೆಂದು ನಾವು ಬಯಸುತ್ತೇ ನಮಸ್ಕಾರ !

**ನೋಮ್** : ನನಗೂ ಸಂತೋಷ. ನಿಮ್ಮ ಬರುವ ಬಯಕೆ ನನಗೂ ಇದೆ. ಎಂದಾದ ಬರುತ್ತೇನೆ. ನಮಸ್ಕಾರ !

ಕೆ. ಎಸ್. ಪಾರ್ಥಸಾರಥಿ
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ
ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

# ಹಾಸ್ಯಪ್ರಜ್ಞೆ ಮತ್ತು ಪ್ರಜ್ಞಾವಂತ ಹಾಸ್ಯ

ಎಚ್. ವಿ. ನಟರಾಜ

)ನು ಸ್ವಾಮಿ ಇದು ? ಇಷ್ಟೊಂದು ಗಂಭೀರ
ಗಳ ಮಧ್ಯೆ ಸ್ವಲ್ಪ ಹಗುರ ಮಾಡಿಕೊಳ್ಳೋಣ
ಯಾವುದೋ ವಿಚಾರಗೋಷ್ಠಿಗೆ ವಿಷಯ
ಸುವ ಹಾಗೆ ಪ್ರಾರಂಭ ಮಾಡ್ತಿದೀರಲ್ಲ? ಅಂತ
ಭಾವಿಸೋದಾದ್ರೆ 'ಆತಂಕ ಪಡಬೇಡಿ,
ರವಾದದ್ದೇನನ್ನೂ ಹೇಳೋದಿಲ್ಲ (ಯಾಕೇಂದ್ರೆ
ಗೊತ್ತಿಲ್ಲವಲ್ಲ!), ಸ್ವಲ್ಪ ಬೇರೆ ರೀತಿಯಲ್ಲಿ
ಭ ಮಾಡೋಣ ಅಂತ ಅಷ್ಟೆ' ಅಂತ
ೀದಕ್ಕೆ ಇಷ್ಟಪಡ್ತೀನಿ.

ಗ ಹೇಳಿದ ಹಾಗೆ, 'ಬೇರೆ' ತರಹ ಹೇಳೋದೇ
ಅನ್ನಬಹುದು. ಯಾಕೇಂದ್ರೆ ವಿಷಯಗಳನ್ನು
ಗಿ ಅಥವಾ ಒಗ್ಗರಣೆ ಇಲ್ಲದೆ ಪ್ರಸ್ತಾಪ
ೀದು ಸಾಮಾನ್ಯವಾಗಿ ಕಂಡುಬರುವ ಸ್ಥಿತಿ.
ಕ್ಕಿಂತ ಹೆಚ್ಚಾಗಿ ವಿಷಯದ ನಿರೂಪಣೆ
ಯಾಗಿ ಇದ್ದಾಗ ಸ್ವಾರಸ್ಯಕರವೂ ಆಗತ್ತೆ,
ೂ ಹುಟ್ಟತ್ತೆ.

ದ್ದಾಗೆ, ಹಾಸ್ಯಪ್ರಜ್ಞೆ ಎಲ್ಲರಲ್ಲೂ ಇದ್ದೇ ಇರತ್ತೆ.
ಅಂತೀರಿ ತಾನೆ ? ಇಲ್ಲದೇ ಇದ್ದಿದ್ರೆ ಇಷ್ಟು ಕಷ್ಟ
(ಟಿ)ಲೆಗಳಲ್ಲೂ ಮನುಷ್ಯ ೭೦-೮೦ ವರ್ಷ
ೀಕ್ಕೆ ಆಗ್ತಾ ಇತ್ತಾ? ಆದರೆ ಕೆಲವರಲ್ಲಿ ಇದು
ಣತ್ತೆ, ಉಳಿದವರಲ್ಲಿ ಅಡಗಿರತ್ತೆ ಅನ್ನಬಹುದು.
ನ್ಯವಾಗಿ ಅಧ್ಯಾಪಕರು ಗಂಭೀರ ಸ್ವಭಾವದವರು,
ಅದು ಅಪರೂಪ; ಯಾಕೇಂದ್ರೆ, ವಿದ್ಯಾರ್ಥಿಗಳು
ವಾಗಿ ಪರಿಗಣಿಸಬಾರದು ಅನ್ನೋ ಅಭಿಪ್ರಾಯ
ಆ ಕಾರಣದಿಂದಲೇ ಬೀChi ಯಂತಹವರು
ಅಥವಾ ಸ್ಕೂಲಿನ ಬಗ್ಗೆ ತುಂಬ ಸುಂದರ
ಗಳನ್ನು ಬರೆದಿದ್ದಾರೆ. ಒಬ್ಬ ಹುಡುಗನನ್ನು
ಸರು ಎಳೆದೊಯ್ಯುತ್ತಿರುವಾಗ ಆ ಹುಡುಗ
ಸುವುದನ್ನು ಕಂಡು 'ತಿಮ್ಮ' ಅವನನ್ನು
ೂಂಡು ಹೋಗುತ್ತಿರುವುದು ಜೈಲಿಗೆ ತಾನೆ ?
ಲ್ಲವಲ್ಲ, ಅವನು ಯಾಕೆ ಅಳಬೇಕು, ಎಂದು
ಪ್ರಸಂಗ ಒಂದೆಡೆಯಾದರೆ ವಿದೇಶಕ್ಕೆ
ಲು ಅಣಿಯಾಗಿದ್ದ ಮೇಷ್ಟರ ಖರ್ಚಿಗೆಂದು
ಎತ್ತಿ ಹಣ ಶೇಖರಿಸುವಾಗ ಹಣ ಕಡಿಮೆಯಾಗಿ
''ತಿಮ್ಮಾ, ಈ ಹಣದಿಂದ ನಾನು ವಿದೇಶಕ್ಕೆ
ಲಿಕ್ಕೆ ಮಾತ್ರ ಸಾಕಾಗತ್ತೆ, ಬರುವುದಕ್ಕೆ ಏನು

ಮಾಡಲಿ ?'' ಎಂದಾಗ, ತಿಮ್ಮ ''ಹೌದು ಮೇಷ್ಟ್ರೆ, ನಮಗೂ ಅದೇ ಬೇಕಾಗಿರುವುದು'' ಎಂದಾಗ ಮೇಷ್ಟ್ರು ಮೂರ್ಛೆ ಹೋಗಿರಬೇಕಲ್ಲವೆ ?

ನಮ್ಮ ಮೆಚ್ಚಿನ ಎಚ್‌ಎನ್ ಆಗಾಗ್ಗೆ ಹೇಳುತ್ತಿದ್ದ ಕೋ. ಸಂಪದ್ಗಿರಿರಾಯರ ಮಾತನ್ನು ಇಲ್ಲಿ ಉಲ್ಲೇಖಿಸಬಹುದು. ಇಂಗ್ಲಿಷ್ ತರಗತಿಯಲ್ಲಿ ಪಾಠವನ್ನೆಲ್ಲ ತಪ್ಪದೇ ಇಂಗ್ಲಿಷ್‌ನಲ್ಲಿ ಬೋಧಿಸುತ್ತಿದ್ದ ಸಂಪದ್ಗಿರಿರಾಯರು ಯಾರೇ ವಿದ್ಯಾರ್ಥಿಯನ್ನು ದಂಡಿಸುವಾಗ ಕನ್ನಡವನ್ನು ಬಳಸುತ್ತಿದ್ದುದನ್ನು ಒಬ್ಬರು ಪ್ರಶ್ನಿಸಿದಾಗ ಅವರು ಉತ್ತರಿಸಿದರಂತೆ 'ಯಾಕೇಂದ್ರೆ ಅವನಿಗೆ ಅರ್ಥ ಆಗಲಿ ಅಂತ'.

ಇವುಗಳಲ್ಲೆಲ್ಲ ನಾವು ಗಮನಿಸಬೇಕಾದ ಅಂಶವೆಂದರೆ ಸೂಕ್ಷ್ಮವಾದ ಹಾಗೂ ಯಾರಿಗೂ ನೋವು ತಾರದ ಹಾಸ್ಯ. ಇಂತಹುದನ್ನು ನೀಡುವವರು ಹಾಗೂ ಆನಂದಿಸುವವರಿಗೆ ಮಾತ್ರ ಹಾಸ್ಯಪ್ರಜ್ಞೆ ಇದೆ ಎನ್ನಬಹುದು.

ಇನ್ನು ಹಾಸ್ಯಪ್ರಜ್ಞೆ ಇರಬೇಕೇ ಬೇಡವೇ ಎಂಬುದು. ಇಲ್ಲದಿದ್ದರೆ ನಷ್ಟವೇನು ಎಂಬುದಕ್ಕೆ ಉತ್ತರವಿಲ್ಲವೇನೋ. ಆದರೆ ಹಾಸ್ಯಪ್ರಜ್ಞೆಯಿಂದ ಅತಿ ಬಿಗು ಪರಿಸ್ಥಿತಿಯಲ್ಲಿ ಸ್ವಲ್ಪ ಮಟ್ಟಿಗಿನ ತಿಳಿಯಾದ ವಾತಾವರಣ ಮತ್ತು ವೈಯಕ್ತಿಕವಾಗಿ ಮನಸ್ಸಿನ ಕ್ಷೋಭೆಗೆ ವಿರಾಮ ನೀಡಬಹುದು.

ಪೀಲೂ ಮೋದಿಯವರು ಲೋಕಸಭೆಯ ತುಂಬ ಕ್ಲಿಷ್ಟಕರ ಚರ್ಚೆಗಳ ಸಂದರ್ಭಗಳಲ್ಲಿ ತಮ್ಮ ನವಿರಾದ ಹಾಸ್ಯದಿಂದ ಸನ್ನಿವೇಶವನ್ನು ತಿಳಿಯಾಗಿಸಿ, ಸದಸ್ಯರು ಹೆಚ್ಚಿನ ಹುರುಪಿನಿಂದ ವಾದ-ಪ್ರತಿವಾದಗಳನ್ನು ಮಾಡಲು ಅನುವು ಮಾಡಿಕೊಡುತ್ತಿದ್ದರಂತೆ. ಉದಾಹರಣೆಗೆ, ಅವರು ಪತ್ರಗಳನ್ನು ಬರೆಯುವಾಗ Dear IG (Indira Gandhi) ಎಂದು ಪ್ರಾರಂಭಿಸಿ ಮುಗಿಸುವಾಗ Yours PM (Piloo Mody) ಎಂದು ಬರೆಯುತ್ತಿದ್ದರಂತೆ.

ವೈಯಕ್ತಿಕವಾಗಿ ನೋಡಿದರೆ, ಹಾಸ್ಯಪ್ರಜ್ಞೆಯಿಂದ ದುಗುಡ-ದುಮ್ಮಾನಗಳಿಂದ ಮನಸ್ಸು ದೂರವಾಗಿ ಅನವಶ್ಯಕ ಕಾರಣಗಳಿಗಾಗಿ ಪರಿತಾಪ ಹೊಂದುವ ಸ್ಥಿತಿಯಿಂದ ಹೊರಬರಬಹುದು. ಕೋಪ, ಅಸೂಯೆ ಮುಂತಾದ ನಕಾರಾತ್ಮಕ ಭಾವನೆಗಳನ್ನು ಬಿಡಲು ಹಾಸ್ಯಪ್ರಜ್ಞೆ ಒಂದು ಉತ್ತಮ ಮಾರ್ಗ. ಕೋಪದ ಸಂದರ್ಭದಲ್ಲಿಯೇ ಒಂದು ಮಾತು ಹೇಳುವುದಾದರೆ - ಕೋಪ ಬಂದಾಗ ಒಂದು, ಎರಡು, ಮೂರು ಹೀಗೆ ಹತ್ತರವರೆಗೆ ಎಣಿಸಬೇಕು, ಯಾಕೆಂದರೆ ಆಗ ಹೆಚ್ಚು ಸಮಯ ಸಿಕ್ಕುತ್ತದೆ; 'ಒಳ್ಳೆಯ' ಬೈಗುಳಗಳು ನೆನಪಿಗೆ ಬರುತ್ತವೆ.

ಹಾಸ್ಯಪ್ರಜ್ಞೆ ಕೆಲವರಿಗೆ ಮೊದಲಿನಿಂದಲೂ (ಹುಟ್ಟುವಾಗಲೇ) ಬಂದಿರುತ್ತದೆ, ಉಳಿದವರು ಕ್ರಮೇಣ ರೂಢಿಗೆ ತಂದುಕೊಳ್ಳಬಹುದು. ಸಮಯಕ್ಕೆ/ಸಂದರ್ಭಕ್ಕೆ ತಕ್ಕ ಉಕ್ತಿಗಳನ್ನು ಹೇಳುವುದು ಒಂದು ಬಗೆಯ ಪ್ರತಿಭೆಯೇ ಸರಿ. ಕನ್ನಡದ ಮಟ್ಟಿಗೆ ಹೇಳುವುದಾದರೆ ಕೈಲಾಸಂ, ಬೀChi, ವೈಎನ್ಕೆಯವರನ್ನು ಈ ಪ್ರಕಾರದಲ್ಲಿ ಮುಖ್ಯವಾಗಿ ಹೆಸರಿಸಬಹುದು. ಚಾಟೂಕ್ತಿಗಳಿಗೆ ಹೆಸರಾದ ಕೈಲಾಸಂ ವೈಖರಿಗೆ ಉದಾಹರಣೆ : 'ನೀವು Pure ಕನ್ನಡದಲ್ಲಿ ಯಾಕೆ ಬರೆಯಲ್ಲ' ಅಂತ ಕೇಳಿದ್ದಕ್ಕೆ 'ನಾನು ಬರೆಯೋದೇ Pure ಕನ್ನಡದಲ್ಲಿ' ಅಂತ ಕೇಳಿದವರ 'ಶುದ್ಧ' ಕನ್ನಡ ಪ್ರಶ್ನೆಗೆ 'ಕೈ' ಉತ್ತರ. 'What's the difference between Bernard Shaw and you ?' ಅಂದ್ರೆ 'He is Irish and I am an Iyerish' ಅನ್ನಬೇಕೆ ? ಬೀChi ಯವರು 'ಸುಧಾ' ವಾರಪತ್ರಿಕೆಯಲ್ಲಿ ಓದುಗರ ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದ



ಪರಿಯೂ ವಿಭಿನ್ನವಾಗಿರುತ್ತಿತ್ತು. 'ನಿಮ್ಮ ಪೂರ್ತಿ ಹೆಸರನ್ನು ಕೇಳಬಹುದೆ ?'

ಉತ್ತರ – 'ಕೇಳಬಹುದು' 'ಭೂಮಿಗೂ ಆಕಾಶಕ್ಕೂ ಅಂತರ ಎಷ್ಟು?' ಉತ್ತರ - 'ಅಂತರ ಎಲ್ಲಿದೆ ? ಭೂಮಿ ಮುಗಿದ ಕೂಡಲೇ ಆಕಾಶ'

ಒಂದು ಸಭೆಯಲ್ಲಿ ಬೀChiಯವರನ್ನು 'ನೀವು ಸಾಯಿಬಾಬಾರನ್ನು ಭೇಟಿ ಮಾಡಿದ್ದೀರಾ !' ಎಂದು ಕೇಳಿದಾಗ, ತಕ್ಷಣ ಬೀChi 'ಇಲ್ಲ, ಇಬ್ಬರು ಮಹಾನ್ ವ್ಯಕ್ತಿಗಳು ಭೇಟಿ ಮಾಡುವುದಿಲ್ಲ' ಎಂದು ಹೇಳಿ ತಕ್ಷಣವೇ, 'ಹೀಗೆ ಹೇಳಿ, ನಾನು ಸಾಯಿಬಾಬಾ ಅವರನ್ನು ಮಹಾನ್ ವ್ಯಕ್ತಿ ಮಾಡಿದ್ದೇನೆ' ಎಂದರಂತೆ.

ನನ್ನ ತಲೆಹರಟೆಯೊಂದನ್ನು ಹೇಳುತ್ತೇನೆ. 'ಕೃಪಯಾ ಪಾಲಯ ಶೌರೇ' ಎಂಬುದು ಒಂದು ಜನಪ್ರಿಯ ಚಾರುಕೇಶಿ ರಾಗದ ಕೃತಿ. ನಾನು ಅದನ್ನು 'ಕೃಪಯಾ ಪಾಲಯ ಕ್ಷೌರೇ' ಎಂದಾಗ ಹಿರಿಯರು ಮುನಿಸಿಕೊಂಡರು. ನಾನು ಕೊಟ್ಟ ಉತ್ತರ 'ನಾನು ಹೇಳುತ್ತಿರುವುದು ಕ್ಷೌರಿಕನಿಗೆ; ಕೂದಲನ್ನು ಹುಷಾರಾಗಿ ನೋಡಿಕೋ ಎಂದು' ಎಂದಾಗ ಹಿರಿಯರಿಗೆ ಸ್ವಲ್ಪ ಸಮಾಧಾನ ವಾಗುತ್ತಿತ್ತು. ನಾನು ಮತ್ತೂ ಸಮಜಾಯಿಷಿ ನೀಡುತ್ತಿದ್ದುದು ಅದು ಚಾರು 'ಕೇಶಿ' ರಾಗವಲ್ಲವೆ ? ಎಂದು. ಮುನಿಸು ಮಾಯವಾಗಿ ಮುಗುಳ್ನಗೆಗೆ ಬದಲಾಗುತ್ತಿತ್ತು.

ನನ್ನ ಗೆಳೆಯ ಎನ್. ರಾಮನಾಥ್ ಕನ್ನಡದಲ್ಲೂ ಅತಿ ಸುಂದರ ಶ್ಲೇಷೆಗಳನ್ನು ಮಾಡಬಹುದು ಎಂಬುದಕ್ಕೆ ತಮ್ಮದೇ ವಾಕ್ಯದಲ್ಲಿ ಹೇಳುತ್ತಾರೆ. ಒಬ್ಬ ವ್ಯಕ್ತಿ ದನಗಳ ಗುಂಪನ್ನು ನೋಡಿಕೊಳ್ಳುವ ಆತುರದಲ್ಲಿ ಹಸುವಿನ ಕಾಲ್ತುಳಿತಕ್ಕೆ ಸಿಕ್ಕಿ ಸತ್ತನಂತೆ. ಈ ಪ್ರಸಂಗವನ್ನು ಮೂರೇ ಪದಗಳಲ್ಲಿ ರಾಮನಾಥ್ ಹೇಳು

''ಗೋವಿಂದ ಗೋವಿಂದ(ನಿಂದ) ಗೋ...ವಿಂದ.''

ನನ್ನ ಉದ್ದೇಶ ಇಷ್ಟೆ. ಹಾಸ್ಯಪ್ರಜ್ಞೆ ಯಾ ಸೀಮಿತವಲ್ಲ ಅಥವಾ ಯಾರೊಬ್ಬರ ಸ್ವತ್ತೂ ಅದು ಅಪೇಕ್ಷಣೀಯ ಮತ್ತು ಸಾಮಾನ್ಯ ಎಲ್ಲರೂ ಹೊಂದಿರುವುದೇ ಆಗಿದೆ.

ಇನ್ನು ಜವಾಬ್ದಾರಿ ಅಥವಾ ಹೊ ಅರಿತ ಹಾಸ್ಯದ ಬಗ್ಗೆ ಸಂಕ್ಷಿಪ್ತ ಹೇಳಿಬಿಡುತ್ತೇನೆ. ಹಾಸ್ಯಪ್ರಜ್ಞೆ ಇರುವು ಒಳ್ಳೆಯದು ಎಂದಮಾತ್ರಕ್ಕೆ ವಿಷಯಗಳ ಹಗುರವಾಗಿ ಪರಿಗಣಿಸಬೇಕು ಎಂಬುದು ಅಲ್ಲವೇ ಅಲ್ಲ. ಮಾನವೀಯತೆಯೇ ಅತ್ಯಂತ ಶ್ರೇ ಗುಣ ಎಂಬುದರಲ್ಲಿ ಯಾವ ಸಂಶಯವೂ ಇ ಇಂತಹ ಸಂದರ್ಭದಲ್ಲಿಯೇ ಸದಭಿರುಚಿಯ ಹಾಸ್ಯ ಪ್ರಾಮುಖ್ಯ ಎದ್ದುಕಾಣುತ್ತದೆ. ಮೌಲಿಕ ಹಾಸ್ಯ ಬಹು ಚಾರ್ಲಿ ಚಾಪ್ಲಿನ್‌ನ ಮಾದರಿಗೆ ಉತ್ತಮ ನಿದರ್ಶನ. ಹಾಸ್ಯ ಮುಡಿಪಾದ ಸಭೆಗಳಾಗಲೀ, ನಾಟಕಗಳಾಗಲೀ, ಸಿನಿಮಾಗಳಾಗಲೀ ನನ್ನ ಮ ಒಳ್ಳೆಯ ದಾರಿ ತೋರಲಾರವು. ಹಾಸ್ಯದ ರಸವೂ ಒಂದು ಭಾಗವಷ್ಟೇ ಹೊ ಅದೇ ಊಟವಾಗಲು ಸಾಧ್ಯವಿಲ್ಲ.

ಒಟ್ಟಿನಲ್ಲಿ ನನಗೆ ಹಾಸ್ಯಪ್ರಜ್ಞೆ ಇದೆ ಎಂದುಕೊಂಡು ಈ ಲೇಖನ ಬರೆದಿದ್ದ ಅದು ಹೇಗಿದೆ ಎಂದು ಹೇಳುವ ಜವಾಬ್ದಾರಿ ಸಂಪಾದಕರಿಗೆ ಹಾಗೂ ಓದುಗ (ಪ್ರಕಟವಾದರೆ) ಬಿಟ್ಟಿದ್ದು.

ಎಚ್. ವಿ. ನಟರಾಜ
ನಂ. ೨೦೦, ೪೫ನೇ ಅಡ್ಡರಸ್ತೆ, ೮ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೭೦

ೀವರು ಮನುಷ್ಯನನ್ನು ಸೃಷ್ಟಿಸಿದ; ಮನುಷ್ಯರು ಧರ್ಮವನ್ನು ಸೃಷ್ಟಿಸಿದರು. ಧರ್ಮವು ಮನುಷ್ಯರ ನಡುವೆ ೆಗಳನ್ನೆಬ್ಬಿಸಿತು; ಕಂದಕಗಳನ್ನು ತೋಡತೊಡಗಿತು. ಮನುಷ್ಯರು ಧರ್ಮಗಳನ್ನು ಸೃಷ್ಟಿಸಿ ಮನುಷ್ಯರ ಮೇಲೆ ರು ಕಟ್ಟುಪಾಡುಗಳನ್ನು ವಿಧಿಸಿ ಮನುಷ್ಯರು ಕೇವಲ ಮನುಷ್ಯರಾಗಿ ಮಾತ್ರ ಬದುಕಲು ಸಾಧ್ಯವಾಗದಂತಹ ಯನ್ನು ನಿರ್ಮಾಣ ಮಾಡಿದರು.

ರ್ಮಿಕ ಕಟ್ಟುಪಾಡುಗಳ ಸೃಷ್ಟಿ ಯಾಕೆ ಆಗುತ್ತದೆ? ಇದಕ್ಕೆ ಇಸ್ಲಾಂ ಧರ್ಮವನ್ನೇ ಉದಾಹರಣೆಯನ್ನಾಗಿ ಕೊಳ್ಳಬಹುದು.

ರೇಬಿಯಾ ದೇಶದಲ್ಲಿ ಮಹಮ್ಮದ್ ಪೈಗಂಬರ್ ಹುಟ್ಟಿದಾಗಿನ ಅಂದಿನ ಸಾಮಾಜಿಕ ಪರಿಸ್ಥಿತಿಯನ್ನು ಅರ್ಥ ಕೊಂಡರೆ ಈ ಕೆಲವು ಕಟ್ಟುಪಾಡುಗಳು ಹೇಗೆ ಸೃಷ್ಟಿಯಾದುವೆಂಬುದು ಅರ್ಥವಾಗಬಹುದು.

ವಾದಿಗಳು ಜನ್ಮ ತಾಳಿದ ಸಂದರ್ಭದಲ್ಲಿ ಮಹಿಳೆಯರನ್ನೂ ಹೆಣ್ಣು ಮಕ್ಕಳನ್ನೂ ಪ್ರಾಣಿಗಳಿಗಿಂತ ಕೀಳಾಗಿ ಕಾಣುವ ಸ ಅದಾಗಿತ್ತು. ಹೆಣ್ಣು ಮಗುವನ್ನು ಜೀವಂತವಾಗಿ ಗೋರಿಯಲ್ಲಿಡುವ ಪರಿಪಾಠವೂ ಇತ್ತು. ಮಹಿಳೆಯರಿಗೆ ರಕ್ಷಣೆಯೂ ಇರಲಿಲ್ಲ. ಬೀದಿಯಲ್ಲಿ ಸುಂದರವಾದ ಮಹಿಳೆಯರು ನಡೆದುಕೊಂಡು ಹೋಗುತ್ತಿದ್ದರೆ ಪುರುಷರು ಮೇಲೆ ಆಕ್ರಮಣ ಮಾಡಿ ಅವರನ್ನು ಹೊತ್ತೊಯ್ಯುತ್ತಿದ್ದರು. ಪುರುಷರು ತಮಗಿಷ್ಟ ಬಂದಷ್ಟು ಹೆಂಡತಿಯರನ್ನೂ ೊಳ್ಳುತ್ತಿದ್ದರು. ಮಹಿಳೆಯರು ಎಲ್ಲ ರೀತಿಯ ದೌರ್ಜನ್ಯಗಳಿಗೂ ತುತ್ತಾಗುತ್ತಿದ್ದರು. ಯಹೂದ್ಯರು ಬಡವರಿಂದ ವಸೂಲು ಮಾಡುತ್ತಾ ಅವರ ರಕ್ತ ಹೀರುತ್ತಿದ್ದರು. ಹೀಗಾಗಿಯೇ ಪ್ರವಾದಿಗಳು ತಮ್ಮ ಸುತ್ತಲೂ ನಡೆಯುತ್ತಿದ್ದ , ಅನ್ಯಾಯ, ದೌರ್ಜನ್ಯಗಳನ್ನು ನಿಲ್ಲಿಸಿ, ಮನುಷ್ಯರು ಸುಖ, ಶಾಂತಿಯಿಂದ ಬದುಕಲೆಂಬ ಆಶಯದಿಂದ ಜದ ಮೇಲೆ ಕೆಲವು ಕಟ್ಟುಪಾಡುಗಳನ್ನು ವಿಧಿಸಿದರು. ಇಸ್ಲಾಂ ಎಂಬ ಶಬ್ದದ ಅರ್ಥವೇ ಶಾಂತಿ ಎಂಬುದಾಗಿದೆ. ಜದ ಅಂದಿನ ಆ ಅಶಾಂತಿ ತೊಲಗಿ ಶಾಂತಿ ನೆಲೆಗೊಳ್ಳಲೆಂಬ ಹಾರೈಕೆ ಪ್ರವಾದಿಗಳದ್ದಾಗಿರಬಹುದು.

ುರ್‌ಆನ್ ಗ್ರಂಥದಲ್ಲಿ ನೂರ ಹದಿನಾಲ್ಕು ಅಧ್ಯಾಯಗಳಿದ್ದು ಸುಮಾರು ಆರು ಸಾವಿರದ ನೂರು ಶ್ಲೋಕಗಳಿವೆ. ಳಲ್ಲಿ ಸುಮಾರು ಮುನ್ನೂರು ಶ್ಲೋಕಗಳಿಗೆ ಮಾತ್ರ ಸಮನಾದ, ಖಚಿತವಾದ ವ್ಯಾಖ್ಯಾನವನ್ನು ನೀಡಿ ವಿವರಿಸಲು ಗುರುಗಳಿಗೆ ಸಾಧ್ಯವಾಗಿದೆ ಎನ್ನಲಾಗುತ್ತಿದೆ. ಉಳಿದ ಶ್ಲೋಕಗಳ ಅರ್ಥ ವಿವರಣೆಯಲ್ಲಿ ಮತ ಪಂಡಿತರಲ್ಲಿ ಾಭಿಪ್ರಾಯವಿಲ್ಲ. ಈ ಅರ್ಥ ವಿವರಣೆಯ ವ್ಯತ್ಯಾಸದಿಂದಾಗಿಯೇ ಎಲ್ಲ ಮುಸ್ಲಿಂ ರಾಷ್ಟ್ರಗಳಲ್ಲಿ ಏಕರೂಪದ ನುಗಳಾಗಲಿ, ಪರಂಪರೆಗಳಾಗಲಿ ಇಲ್ಲ. ಕೆಲವು ರಾಷ್ಟ್ರಗಳಲ್ಲಿ ಕಾನೂನಿನ ಮುಖಾಂತರ ಬಹುಪತ್ನಿತ್ವವನ್ನು ಲಾಗಿದೆ. ನಿಕಾನಾಮದಲ್ಲಿ ಮಹಿಳೆ ತನಗಿಷ್ಟವಾದ ನಿಯಮಗಳನ್ನೊಡ್ಡಬಹುದು. ವಿಚ್ಛೇದನದ ಹಕ್ಕು ತನಗಿರ ದೂ ಕೇಳಿಕೊಳ್ಳಬಹುದು. ಆದರೆ ಇಂದಿನ ಸಮಾಜ ಪುರುಷರ ಅಧಿಕಾರವನ್ನು ಮೊಟಕುಗೊಳಿಸುವಂತಹ

> ಯಾವ ಧರ್ಮದ ಯಾವ ಕಟ್ಟುಪಾಡುಗಳೂ ಸಮಾಜದ ಪುರುಷರನ್ನು ನಲುಗಿಸುವುದಿಲ್ಲ. (ದಲಿತರನ್ನು ಹೊರತುಪಡಿಸಿ) ಅವರ ಸ್ವಾತಂತ್ರ್ಯಕ್ಕೆ ಯಾವ ತಡೆಯೂ ಇಲ್ಲ. ಆತ ತನಗಿಷ್ಟವಾದವರನ್ನು ಮದುವೆಯಾಗಬಹುದು. ಆದರೆ ಓರ್ವ ಹೆಣ್ಣು ಅನ್ಯ ಧರ್ಮದ ಪುರುಷನನ್ನು ಮದುವೆಯಾಗಬಯಸಿದರೆ ಇಂದು ಇಡೀ ಊರು ಹೊತ್ತಿ ಉರಿಯುತ್ತದೆ! ನಮ್ಮ ಸಂವಿಧಾನದ ಪ್ರಕಾರ ಬಹುಪತ್ನಿತ್ವ ನಿಷಿದ್ಧವಾಗಿದ್ದರೂ ಹಿಂದೂ ಸಮಾಜ ಈ ವಿಷಯದಲ್ಲಿ ಮುಸ್ಲಿಮರಿಗಿಂತ ಹಿಂದೆ ಬಿದ್ದಿಲ್ಲ. ಧಾರ್ಮಿಕ ಕಟ್ಟುಪಾಡುಗಳೆಲ್ಲವೂ ಮನುಷ್ಯ ಸೃಷ್ಟಿಯೇ ಹೊರತು, ದೇವರಿಗೂ ಈ ಕಟ್ಟುಪಾಡುಗಳಿಗೂ ಯಾವುದೇ ಸಂಬಂಧವೂ ಇಲ್ಲ ಎಂಬುದನ್ನು ನಾವು ಅರ್ಥೈಸಿಕೊಳ್ಳಬೇಕಾಗಿದೆ.

# ಧಾರ್ಮಿಕ ಕಟ್ಟುಪಾಡುಗಳು





ಸಾರಾ ಅಬೂಬಕ್ಕರ್

ನಿಯಮಗಳನ್ನು ಒಪ್ಪಿಕೊಳ್ಳಲು ಸಿದ್ಧವಿರುತ್ತದೆಯೇ ? ಹಾಗೆ ಕೇಳಿದ ಹೆಣ್ಣು ಮಗಳು ಕೊನೆಯವರೆಗೆ ಅವಿವಾಹಿತೆಯಾಗಿಯೇ ಬಾಳಬೇಕಾಗಬಹುದಲ್ಲವೇ ?

ಪ್ರವಾದಿಗಳ ಮರಣಾನಂತರ ಒಂದು ಯುದ್ಧದ ಸಂದರ್ಭದಲ್ಲಿ ಅವರ ಮೊಮ್ಮಗ ನೊರ್ವನು ಒಂದು ದಿನಕ್ಕಾಗಿ ಓರ್ವ ಹೆಣ್ಣನ್ನು ನಿಕಾಹ್ ಮಾಡಿಕೊಂಡನೆಂಬುದು ಇತಿಹಾಸ. ಈ ಘಟನೆಯನ್ನೆತ್ತಿಕೊಂಡು ಇಂದಿಗೂ ಅರಬರು ಒಂದು ತಿಂಗಳಿಗೆಂದೊ ಎರಡು ತಿಂಗಳಿಗೆಂದೊ ಒಪ್ಪಂದ ಮಾಡಿಕೊಂಡು ಮದುವೆಯಾಗುತ್ತಾರೆ. ಊರಿಗೆ ಹಿಂದಿರುಗುವಾಗ ಒಪ್ಪಂದದಂತೆ ವಿಚ್ಛೇದನ ನೀಡಿ ಹೋಗುತ್ತಾರೆ. ಈ ಮದುವೆಗೆ 'ಮುತ್ತಾ ಮ್ಯಾರೇಜ್' ಎನ್ನಲಾಗಿದ್ದು ಮುಸ್ಲಿಂ ವ್ಯಕ್ತಿ ನಿಯಮದಲ್ಲಿ ಈ ನಿಯಮ ಒಳಗೊಂಡಿದೆ. ಖುರ್‌ಆನಿನಲ್ಲಿ ಈ ನಿಯಮಕ್ಕೆ ಸಮರ್ಥನೆ ಇಲ್ಲ, ಆದರೂ ಸಮಾಜದಲ್ಲಿ ಈ ನಿಯಮ ಇದೆ. ಕೆಲವು ವರ್ಷಗಳ ಹಿಂದೆ ಕೇರಳದಲ್ಲಿ ಅರಬ್ ದೇಶದ ೭೫ ವರ್ಷದ ಮುದುಕ ನೊಬ್ಬನು ಹದಿನಾರು ವರ್ಷದ ಹುಡುಗಿಯನ್ನು ಈ ನಿಯಮದಂತೆ ಮದುವೆಯಾದ ಘಟನೆಯೂ ನಡೆದಿದೆ. ಆರಾಧನೆಗಳಲ್ಲಿ ಹೆಣ್ಣು, ಗಂಡೆಂಬ ಭೇದವಿಲ್ಲದಿದ್ದರೂ ಸಾಮಾಜಿಕ ನಿಯಮಗಳೆಲ್ಲವೂ ಪುರುಷರ ಇಚ್ಛೆಗನುಗುಣವಾಗಿಯೇ ನಡೆಯುತ್ತವೆ.

ಧಾರ್ಮಿಕ ಕಟ್ಟುಪಾಡುಗಳಲ್ಲಿ ಆರಾಧನಾ ಕ್ರಮಗಳೂ ಒಳಗೊಂಡಿವೆ. ಆದರೆ ಆರಾಧನಾ ಕ್ರಮಗಳೂ ಪುರುಷರಿಗೆ ಮಾತ್ರ ಸೀಮಿತವಾಗದೆ ಸ್ತ್ರೀ ಪುರುಷರೆಲ್ಲರೂ ಕೈಗೊಳ್ಳಬೇಕಾದ ಕ್ರಮಗಳಾಗಿವೆ. ಐದು ಹೊತ್ತಿನ ನಮಾಜ್, ರಮಜಾನ್ ತಿಂಗಳ ಉಪವಾಸ, ಕಡ್ಡಾಯ ದಾನ, ಹಜ್ ಯಾತ್ರೆ, ನಿರಾಕಾರನಾದ ಏಕ ದೇವನಲ್ಲಿ ಮತ್ತು ಪ್ರವಾದಿಗಳಲ್ಲಿ ವಿಶ್ವಾಸ ಇವು ಸ್ತ್ರೀ ಪುರುಷರೆಲ್ಲರಿಗೂ ಕಡ್ಡಾಯವಾಗಿದೆ. ದುಷ್ಟ ಆಲೋಚನೆ, ದುಷ್ಕೃತ್ಯ ಮುಂತಾದುವನ್ನು ತಡೆಯಲು ಐದು ಹೊತ್ತು ಆರಾಧನೆ (ನಮಾಜ್), ಹಸಿವೆಂದರೇನೆಂದು ತಿಳಿಯಲು ಉಪವಾಸ, ಉಳ್ಳವರು ನಿರ್ಗತಿಕರಿಗೆ ದಾನ ಮಾಡಲೇಬೇಕೆಂದು ಕಡ್ಡಾಯ ದಾನ, ಆರ್ಥಿಕವಾಗಿ ಹಾಗೂ ದೈಹಿಕವಾಗಿ ಸಮರ್ಥರಾದವರಿಗೆ ಹಜ್ ಯಾತ್ರೆ ಕಡ್ಡಾಯ. ಹೀಗೆ ಈ ಕ್ರಮಗಳು ಅಂದಿನ ತೀರಾ ಅನಾಗರಿಕರಾಗಿದ್ದ, ಕ್ರೂರಿಗಳಾಗಿದ್ದ ಅರಬರನ್ನು ಸರಿದಾರಿಗೆ ತರಲು ಪ್ರವಾದಿ[illegible] ರೂಪಿಸಿದ ಕಟ್ಟುಪಾಡುಗಳಾಗಿವೆ. ಹಾಗೆಯೇ ಕೊಲೆ, ವ್ಯಭಿಚಾರ, ಮದ್ಯಸೇ[illegible] ಬಡ್ಡಿ ಪಡೆಯುವುದು, ಅನಾಥ ಮಕ್ಕಳ ಸೊತ್ತುಗಳನ್ನಪಹರಿಸುವುದು, ಹೆ[illegible] ಮನನೋಯಿಸುವುದು, ಇವೆಲ್ಲವೂ ಮಹಾಪಾಪವೆಂದೂ, ನಿಷಿದ್ಧವೆಂ[illegible] ಪ್ರವಾದಿಗಳ ಬೋಧನೆಯಾಗಿತ್ತು.

ಪ್ರವಾದಿಗಳು ಸ್ತ್ರೀವಾದಿಯಾಗಿದ್ದರೆಂದು ಹೇಳಲು ಅವರು ಮಹಿಳೆಯರಿ[illegible] ರೂಪಿಸಿದ ಕೆಲವು ನಿಯಮಗಳೇ ಸಾಕ್ಷಿಯಾಗಿವೆ.

ಇಸ್ಲಾಂ ಧರ್ಮ ಹೆಣ್ಣಿನ ಮೇಲೆ ಪಾವಿತ್ರ್ಯತೆಯ ಹೊರೆಯನ್ನು ಹೊರಿ[illegible] ಗಂಡನ ಮರಣದ ಬಳಿಕ ಅವಳು ಪುನರ್ವಿವಾಹವಿಲ್ಲದೆ ಎಂದೆಂದೂ ವಿ[illegible] ಯಾಗಿಯೇ ದಿನ ನೂಕಬೇಕಾಗಿಲ್ಲ. ಈ ವಿಧವಾ ವಿವಾಹ ಮತ್ತು ಪುನರ್ವಿವಾ[illegible] ಮಹಿಳೆಗೆ ದೊರೆತ ಅತ್ಯುತ್ತಮ ಕೊಡುಗೆ. ವಿಧವೆಯಾದರೂ ಸಮಾಜದಲ್ಲಿ ಆ[illegible] ಗೌರವಯುತ ಸ್ಥಾನವಿದ್ದೇ ಇದೆ. ಪ್ರವಾದಿಗಳು ತಾವೇ ಪ್ರಥಮ ಬಾರಿಗೆ ತಮಗಿ[illegible] ಹಿರಿಯರಾದ ಓರ್ವ ವಿಧವೆಯನ್ನು ವಿವಾಹವಾಗಿ ಸಮಾಜದ ಪುರುಷರಿಗೆ ಅತ್ಯುತ್ತ[illegible] ಮೇಲ್ಪಂಕ್ತಿ ಹಾಕಿಕೊಟ್ಟರು. ಪ್ರವಾದಿಗಳು ಓರ್ವ ವಿಧವೆಯನ್ನು ವಿವಾಹವಾಗದಿದ್ದ[illegible] ಇಂದು ಈ ಸಮಾಜದ ಪುರುಷರು ವಿಧವಾ ವಿವಾಹವನ್ನು ನಿಷೇಧಿಸುತ್ತಿದ್ದರು !

ಹೆಂಡತಿಯಾದವಳು ವ್ಯಭಿಚಾರದಂತಹ ದೊಡ್ಡ ತಪ್ಪು ಮಾಡಿದ್ದರೂ, ಆಕೆ ತ[illegible] ತಪ್ಪನ್ನು ಒಪ್ಪಿಕೊಂಡು ಕ್ಷಮೆ ಕೇಳಿ, ಮುಂದೆ ಅಂತಹ ಅಪರಾಧವೆಸಗಲಾರೆನೆಂ[illegible] ಆಶ್ವಾಸನೆ ಇತ್ತರೆ ಆಕೆಗೆ ಕ್ಷಮೆ ನೀಡಬೇಕು; ಮಾತ್ರವಲ್ಲ ಮುಂದೆಂದೂ [illegible] ವಿಷಯವನ್ನೆತ್ತಿಕೊಂಡು ಆಕೆಯನ್ನು ಅಪಹಾಸ್ಯ ಮಾಡಿ ನೋಯಿಸಬಾರದು ಎಂದ[illegible] ಪ್ರವಾದಿಗಳು ಬೋಧಿಸಿದ್ದಾರೆ. ಮಹಿಳೆಯೋರ್ವಳು ತನ್ನ ಮನೆಯಲ್ಲಿ ಯಾವಾ[illegible] ಸೌಕರ್ಯಗಳನ್ನು ಹೊಂದಿದ್ದಾಳೆಯೊ ಆ ಎಲ್ಲಾ ಸೌಕರ್ಯಗಳನ್ನೂ ನಿನ್ನ ಮನೆಯ[illegible] ಹೊಂದಿಸಿಕೊಡಲು ಸಾಧ್ಯವಿದ್ದರೆ ಮಾತ್ರ ಅಂತಹ ಸ್ತ್ರೀಯನ್ನು ಮದುವೆಯಾಗಬೇ[illegible]

# ಜಾನ್ ಫ್ಲಿನ್

**(ಕೆನಡಾ ಕವಿತೆ)**

ಪತ್ರಿಕೆಗಳಲ್ಲಿ ಜಾನ್ ಫ್ಲಿನ್ ಕುರಿತಾಗಿ
ಏನಾದರೊಂದಿಷ್ಟು ಓದಿರುವಿರಾ ನೀವು ?
ಆತನೀಗೀಗ ಎಪ್ಪತ್ತೆಂಟು ಮೀರಿದ ವಯಸ್ಸು
ಟೋರೊಂಟೊ ನಗರದಲಿ ಅವನ ವಾಸ್ತವ್ಯ-
ಸೆರೆಮನೆಯ ಭದ್ರ ಸರಳುಗಳ ಹಿಂದೆ !

ಅಲ್ಲ, ಆತ ಬಲು ಘೋರ ಅಪರಾಧಿಯೇನಲ್ಲ
ವೃದ್ಧಾಪ್ಯದ ವೇತನ ಪಡೆವ ಹಣ್ಣು ಮುದುಕ !
ಪ್ರತಿ ತಿಂಗಳು ಅವನ ಕೈ ಸೇರುವುದು ಮೂವತ್ತು
ಅಷ್ಟರಲ್ಲೇ ನಡೆಯಬೇಕವನ ಮೂರು ಹೊತ್ತು !

ಅವನು ಕುಡಿವವನಲ್ಲ, ತಂಬಾಕು ಸೇದುವನಲ್ಲ
ಯಾವ ಅಪರಾಧಕ್ಕೂ ಕೈ ಹಾಕುವವನಲ್ಲ,
ಇತರ ಲೋಗರ ಹಾಗೆ ಜಗ್ಗಿ ತಿಂಬುವನಲ್ಲ
ಸೊರಗಿ ಬಲು ತೆಳುವಾದ ಮೈಕಟ್ಟಿನವನು !

ಅವನ ವೇತನದಲ್ಲಿ ಮೂರು ವಾರದ ಬದುಕು
ಸಾಗುವುದು, ಬರಿಗೈಯೆ ಉಳಿದ ಸಮಯ !
ನಾಲ್ಕನೆಯ ವಾರವೂ ಬದುಕಬೇಕೆಂದಿರಲು
ಸೆರೆಮನೆಯ ಆಸರವ ತಾನಾಗಿ ಅರಸಬೇಕು !

ಅಂತೆಯೇ ತಾನಾಗಿ 'ಬೇಡಿ'ಕೊಳ್ಳುವನಾತ
ಹಾದಿ-ಬೀದಿಯಲಿ ಕಾಡಾಡಿಯಂತೆ ನಡೆದು !
ತಾನಾಗಿ ಕೈಸೆರೆಗೆ ಕೈ ಮುಂದೆ ಮಾಡುವನು
ಸೆರೆಮನೆಯ ಹಸಿಗೂಳ ಸವಿಯ ನೆನೆದು !

ಜಾನ್ ಫ್ಲಿನ್ನನ ಹಾಗೆ ಮುಪ್ಪಿನವರೆಷ್ಟೊ ಜನ
ಸಿರಿ ಮೆರೆವ ಟೋರೊಂಟೊ ನಗರದಲ್ಲಿದ್ದವರು
ಯೌವನದ ಬಿಸಿ ಆರಿ ಇಳಿಗಾಲ ಕಂಡವರು
ಈ ನಾಡ ಬದುಕಿನಲಿ ಸಹಜ ಸವಿಗಾಣದವರು !

ವರುವರುಷವೂ ಮೂರನೆಯ ಸಮರಸಿದ್ಧತೆಗೆಂದು
ಕೋಟಿಗಟ್ಟಲೆ ಹಣ ಬಜೆಟ್ಟಿನಲ್ಲಿಡುವ ಮೇಲಿನ ಜನ
ನಮ್ಮ ಬಡ ಮುದುಕರ ಮೊಗದ ಮೇಲಿನಿತು ನಗೆ
ಮೂಡುವೊಲು ಹರಿಸಬಾರದೇ ಒಂದಿನಿತು ಗಮನ ?



ಮೂಲ : **'ಸ್ಕಾಟ್'** (೧೯೪೭)
**ಕೆನಡಾದ ಕಾರ್ಮಿಕ ವರ್ಗದ ಖ್ಯಾತ ಕವಿ**

ಕನ್ನಡಕ್ಕೆ : **ಡಾ|| ಬಿ. ಎ. ಸನದಿ**
'ಮಿಲನ', ವಿನಾಯಕ ಸಾ ಮಿಲ್ ಎದುರು, ಹೆರವಟ್ಟಾ, ಕುಮಟಾ (ಉ. ಕ.) - ೫೮೧ ೩೩೨

ದರೆ ನಿಮ್ಮ ಅಂತಸ್ತಿಗೆ ಸಮನಾದವಳನ್ನೇ ವಿವಾಹವಾಗಿರಿ ಎಂಬುದೂ ಆನ್ ವಾಕ್ಯವಾಗಿದೆ. ಕುಲೀನ ಸ್ತ್ರೀಯ ಮೇಲೆ ವ್ಯಭಿಚಾರದ ಆಪಾದನೆ ಸಿದವನಿಗೆ ಕಠಿಣ ಶಿಕ್ಷೆ ನೀಡಬೇಕೆಂಬುದೂ ಕೂಡ ಪ್ರವಾದಿಗಳ ಬೋಧನೆ ದೆ. ಆದರೆ ಸಮಾಜದಲ್ಲಿ ಇಂತಹ ನಿಯಮಗಳ ಅನುಷ್ಠಾನ ಇಲ್ಲವೇ ಇಲ್ಲವೆನ್ನ ರು. ವ್ಯಭಿಚಾರ ಮಾಡದ ಓರ್ವ ಹೆಣ್ಣಿನ ಮೇಲೆ ವ್ಯಭಿಚಾರದ ಆರೋಪವನ್ನು ಿ ಆಕೆಯ ಗಂಡನಿಂದ ಆಕೆಯ ತಲಾಖ್ ನೀಡಿಸಿದ ಉದಾಹರಣೆಗಳಿವೆ.

ಚ್ಛೇದನೆಯ ಸಂದರ್ಭದಲ್ಲೂ ಹಲವಾರು ನಿಯಮಗಳನ್ನು ಪಾಲಿಸ ಗಿದೆ. ಎರಡೂ ಕುಟುಂಬಗಳ ಹಿರಿಯರು ಸಮನಾದ ವಿಚಾರಣೆ ನಡೆಸಿ ಅವರ ರ್ಮೈತ್ರಿಗೆ ಪ್ರಯತ್ನಿಸಬೇಕೆಂದೂ, ಅದು ತೀರಾ ಅಸಾಧ್ಯವೆಂದಾದರೆ ು ತಿಂಗಳ ಗಡುವು ನೀಡಿ ಆ ಮೂರು ತಿಂಗಳೂ ಒಂದೇ ಮನೆಯಲ್ಲಿ ವಾಸ ಪುನರ್ಮೈತ್ರಿಗೆ ಅವಕಾಶ ಒದಗಿಸಬೇಕೆಂಬುದು ನಿಯಮ. ಆದರೆ ಪ್ರಧಾನ ಸಮಾಜ ಸುಲಭದ ವಿವಾಹ ವಿಚ್ಛೇದನ ಪದ್ಧತಿಯನ್ನು ಸುಲಭವಾಗಿ ಸೌಕರ್ಯಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಿದೆ. ನಿಯಮ, ನಿಬಂಧನೆಗಳೆಲ್ಲವೂ ಆನಿನ ಕಡತಗಳಲ್ಲಿ ಭದ್ರವಾಗಿರುತ್ತವೆ!

ಹರ್ ಎಂಬುದು ಗಂಡನಾದವನು ಪ್ರಥಮ ಹೆಂಡತಿಯನ್ನು ಸ್ಪರ್ಶಿಸಬೇಕಾದಾಗ ಆಕೆಗೆ ಬೇಕಾದ ಒಂದು ಬಹುಮಾನವೇ ಹೊರತು ದನದ ಬಳಿಕ ನೀಡಬೇಕಾದ ಜೀವನಾಂಶ ಅಲ್ಲ. ಅದಕ್ಕೂ ಹಾದಿ ಕಂಡುಕೊಂಡಿದೆ. ಮದುವೆಯ ರ್ಭದಲ್ಲಿ ದೊಡ್ಡ ಮೊತ್ತದ ಮೆಹರ್‌ಗೆ ಳ್ಳುವುದು; ಮದುವೆಯ ಬಳಿಕ ಅದನ್ನು ಯಿಂದ 'ಮಾಫ್' ಮಾಡಿಸಿಕೊಳ್ಳುವುದೂ ುತ್ತದೆ. ಮೆಹರ್, ಗಂಡನು ಹೆಂಡತಿಗೆ ಕೊಡ ಗಿದ್ದರೂ ಕೆಲವು ರಾಷ್ಟ್ರಗಳಲ್ಲಿ ಅದನ್ನು ನಿಕಾಹ್‌ನ ರ್ಭದಲ್ಲಿ ಆಕೆಯ ತಂದೆಗೆ ನೀಡುವ ಪರಿಪಾಠವೂ ೀಗೆ ಹಣ ನೀಡಲಾಗದ ಸೌದಿ ಅರೇಬಿಯಾದ ರು ದೂರದ ಆಫ್ರಿಕಾ ದೇಶಗಳಿಂದ ಬಡ ಹೆಣ್ಣು ನ್ನು ಮದುವೆಯಾಗುವುದೂ ಇದೆ. ತಂದೆ ರ ಧನದಾಹದಿಂದಾಗಿ ಅರಬ್ ದೇಶದ ಹೆಣ್ಣು ಪ್ರಾಯ ಮೀರಿದರೂ ಅವಿವಾಹಿತರಾಗಿ ಕೊನೆಗೆ ಶ್ರೀಮಂತನೋರ್ವನ ಸವತಿಯ ಬಾಳಬೇಕಾದ ದುರವಸ್ಥೆಯೂ ಇದೆ.

ಹಿಳೆಯರ ಮೇಲಾಗುತ್ತಿರುವ ಆಕ್ರಮಣವನ್ನು ಲು ಅವರು ಪರಪುರುಷರ ಮುಂದೆ ಬರುವಾಗ ತಮ್ಮ ಸೌಂದರ್ಯವನ್ನು ಆದಷ್ಟು ಮಾಡಿಕೊಳ್ಳಬೇಕೆಂದೂ, ತಲೆಮೇಲಿನ ಬಟ್ಟೆಯನ್ನು ಎದೆಯ ಮೇಲೆಳೆದುಕೊಳ್ಳ ೂ ಪ್ರವಾದಿಗಳೆಂದರು. ಮರುಭೂಮಿಯ ಬಿರುಗಾಳಿಯಿಂದ ಎದ್ದ ಮರಳಿನ ಂದ ತಮ್ಮ ಕಿವಿ, ಕಣ್ಣು, ಮೂಗುಗಳನ್ನು ರಕ್ಷಿಸಿಕೊಳ್ಳಲು ಅಲ್ಲಿ ಸ್ತ್ರೀ ರೆಲ್ಲರೂ ತಲೆಯ ಮೇಲೆ ದೊಡ್ಡ ಬಟ್ಟೆ ಹಾಕಿಕೊಳ್ಳುವ ರೂಢಿ ಇಂದಿಗೂ ಆ ಬಟ್ಟೆಯನ್ನು ಎದೆಯ ಮೇಲೆಳೆದುಕೊಳ್ಳಿರೆಂದು ಹೇಳಿದರೇ ಹೊರತು ಮೇಲೆ ಬಟ್ಟೆ ಕಡ್ಡಾಯವೆಂದೇನೂ ಹೇಳಿಲ್ಲ. ಸೌಂದರ್ಯ ಮರೆಮಾಡಿ ಂದಾಗ ಸ್ತ್ರೀಯರ ಸೌಂದರ್ಯ ಎಲ್ಲೆಲ್ಲಿದೆ ಎನ್ನುತ್ತಾ, ತಲೆಗೂದಲಲ್ಲೂ ಸೌಂದರ್ಯವಿದೆಯೆಂದು ಪುರೋಹಿತರು ತೀರ್ಮಾನಿಸಿರಬಹುದು!

ಪ್ರಗತಿಪರ ಬೋಧನೆಗಳನ್ನಂತೂ ಪುರುಷಪ್ರಧಾನ ವ್ಯವಸ್ಥೆ ಸ್ತ್ರೀಯರಿಂದ ಾಚಿದೆ ಎಂದೇ ಹೇಳಬೇಕಾಗಿದೆ. ಅದರಲ್ಲಿ ಮುಖ್ಯ ವಿಷಯ ಸ್ತ್ರೀ ಶಿಕ್ಷಣ. ದೇಶದಿಂದ ಚೀನಾದವರೆಗೆ ಪ್ರಯಾಣ ಮಾಡಿ ಸ್ತ್ರೀ ಪುರುಷರೆಲ್ಲರೂ ್ಯಾಸ ಪಡೆಯಬೇಕು ಎಂಬುದು ಪ್ರವಾದಿಗಳ ಬೋಧನೆ. ಆದರೆ ಇಂದು ನಿಗಳು ಹೆಣ್ಣು ಮಕ್ಕಳ ಶಾಲೆಗಳನ್ನು ನೆಲಸಮ ಮಾಡಿ ಹೆಣ್ಣು ಮಕ್ಕಳನ್ನು ನಾಲ್ಕು ಗಳೊಳಗೆ ಬಂಧಿಯಾಗಿಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ.

ರುಷಪ್ರಧಾನ ಸಮಾಜದಲ್ಲಿ ಧಾರ್ಮಿಕ ಕಟ್ಟು ಕಟ್ಟಳೆಗಳೆಲ್ಲವೂ ಕೇವಲ ಕ ಗ್ರಂಥಗಳಲ್ಲಿ ವಿವರಿಸಿದವುಗಳು ಮಾತ್ರವಾಗಿರುವುದಿಲ್ಲ. ಕಾಲಕ್ರಮೇಣ ಅವುಗಳು ಪುರುಷರ ಅನುಕೂಲಕ್ಕೆ ತಕ್ಕಂತೆ ಮಾರ್ಪಾಟಾಗಿರುತ್ತವೆ.

ಇಸ್ಲಾಂ ಧರ್ಮವೆಂಬುದು ಒಂದು ಜೀವನ ಕ್ರಮವಷ್ಟೆ ಹೊರತು ಅದೊಂದು ಧರ್ಮವೆಂದು ತಿಳಿದುಕೊಳ್ಳಬೇಕಾಗಿಲ್ಲ. ಧಾರ್ಮಿಕ ಕಟ್ಟುಪಾಡುಗಳನ್ನು ಅನುಸರಿಸುತ್ತಾ ತಮಗಿಷ್ಟವಿಲ್ಲದ ಜೀವನಕ್ರಮವನ್ನು ಒತ್ತಾಯಪೂರ್ವಕವಾಗಿ ಕೈಗೊಳ್ಳಬೇಕಾಗಿಲ್ಲ. ತಾವು ಬೋಧಿಸಿದ ಜೀವನಕ್ರಮ ಇಷ್ಟವಿಲ್ಲದವರಮೇಲೆ ಒತ್ತಾಯಪೂರ್ವಕವಾಗಿ ಯಾವ ನಿಯಮವನ್ನೂ ಹೇರಬಾರದು ಎಂಬುದೂ ಕೂಡ ದೇವ ವಾಕ್ಯವೇ ಆಗಿದೆ. 'ನೀನು ಬೋಧಿಸಿದರೆ ಸಾಕು. ಶಿಕ್ಷಿಸುವ ಕೆಲಸ ನನ್ನದು' ಎಂಬುದು ಪ್ರವಾದಿಗಳಿಗೆ ದೇವರ ಸಂದೇಶವಾಗಿದೆ.

ಇಂದು ನಾವು ಕಾಣುತ್ತಿರುವ ಸಮಾಜದಲ್ಲಿ ಪ್ರವಾದಿಗಳ ಬೋಧನೆಯ ಅನುಷ್ಠಾನವಾಗುತ್ತಿದೆಯೇ? ಧರ್ಮದ ಹೆಸರಿನಲ್ಲಿ ಹಲವಾರು ಕಟ್ಟುಪಾಡುಗಳನ್ನು ವಿಧಿಸಿ ಮಹಿಳೆಯರನ್ನು ನಿಯಂತ್ರಿಸುವ ಪರಿಪಾಠ ಪ್ರವಾದಿಗಳ ಮರಣಾನಂತರ ಪ್ರಾರಂಭವಾಗಿದೆ. ಹೆಣ್ಣುಮಕ್ಕಳನ್ನು ಶಿಕ್ಷಣದಿಂದ ವಂಚಿಸಲಾಗುತ್ತಿದೆ. ಅವರಲ್ಲಿ ತಿಳುವಳಿಕೆ ಮೂಡಿದರೆ ಅವರು ತಮ್ಮನ್ನು ಪ್ರಶ್ನಿಸಬಹುದೆಂಬ ಭಯ ಈ ಜನರನ್ನು ಕಾಡುತ್ತಿರಬಹುದು. ವಿವಾಹ, ವಿಚ್ಛೇದನ (ತಲಾಖ್) ಎಲ್ಲವೂ ಏಕಪಕ್ಷೀಯವಾಗಿಯೇ ನಡೆಯುತ್ತಿದೆಯೇ ಹೊರತು ಹೆಣ್ಣಿನ ಅಭಿಪ್ರಾಯಕ್ಕೆ ಬೆಲೆ ಇಲ್ಲ ಅಥವಾ ಅಭಿಪ್ರಾಯ ವ್ಯಕ್ತಪಡಿಸುವ ಅವಕಾಶವೇ ಆಕೆಗಿಲ್ಲ.

ಮಹಿಳೆಯರ ಮೇಲೆ ಹೊರಿಸಿದ ಧಾರ್ಮಿಕ ಕಟ್ಟುಪಾಡುಗಳು ವಿವಿಧ ಧರ್ಮಗಳಲ್ಲಿ ವಿವಿಧ ರೂಪದಲ್ಲಿವೆ. ಹಿಂದು ಸಮಾಜದ ಧಾರ್ಮಿಕ ಕಟ್ಟುಪಾಡುಗಳು ಹಲವು ವಿಧದಲ್ಲಿ ಮಹಿಳೆಯರ ಶೋಷಣೆಗೆ ಹಾದಿ ಮಾಡಿವೆ. ಓರ್ವ ಹೆಣ್ಣು ಮಗು ಹುಟ್ಟಿದ ಗಳಿಗೆಯೇ ಆಕೆಯ ಭವಿಷ್ಯಕ್ಕೆ ಕಂಟಕವಾಗುವುದಿದೆ. ಆಕೆ ಮೂಲಾ ನಕ್ಷತ್ರದಲ್ಲಿ ಹುಟ್ಟಿದವಳಾದರೆ ಕೆಲವೊಮ್ಮೆ ಆಕೆ ಬದುಕು ಪೂರ್ತಿ ಅವಿವಾಹಿತಳಾಗಿಯೇ ಇರಬೇಕಾದಂತಹ ಪರಿಸ್ಥಿತಿಯನ್ನು ಎದುರಿಸಬೇಕಾಗಬಹುದು. ಜಾತಿ, ಧರ್ಮ, ಜಾತಕ, ಗೋತ್ರಗಳೆಲ್ಲವೂ ಹೆಣ್ಣಿನ ವೈವಾಹಿಕ ಬದುಕಿಗೆ ತಡೆಗೋಡೆಗಳಾಗಿವೆ. ವಿದೇಶಿಯರಿಗೆ ನಮ್ಮ ಈ ಜಾತಿ, ಧರ್ಮಗಳ ಕಟ್ಟುಪಾಡುಗಳು ಅರ್ಥವಾಗುವುದಿಲ್ಲ. ವಿದೇಶಿಯನೊಬ್ಬನು ಸಿನಿಮಾ ನಟನೊಬ್ಬನೊಡನೆ ಕೇಳುತ್ತಾನೆ: ''ಪರೀಕುಟ್ಟಿ ಕರುತ್ತಮ್ಮಳನ್ನು ಮದುವೆಯಾಗಲು ಯಾಕೆ ಸಾಧ್ಯವಾಗುವುದಿಲ್ಲ?'' (ತಗಳಿ ಶಿವಶಂಕರ ಪಿಳ್ಳೆಯವರ ಖ್ಯಾತ ಕಾದಂಬರಿ ಆಧಾರಿತ 'ಚೆಮ್ಮೀನ್' ಎಂಬ ಸಿನಿಮಾವನ್ನು ನೋಡಿದವರ ಪ್ರಶ್ನೆ) ಇಂತಹ ಧಾರ್ಮಿಕ ಕಟ್ಟುಪಾಡುಗಳೇ ಮನುಷ್ಯರ ನಡುವೆ ಗೋಡೆಗಳೇಳುವಂತೆ ಮಾಡಿವೆ. ವಿಧವಾ ವಿವಾಹ, ಪುನರ್ವಿವಾಹಗಳೆಲ್ಲವೂ ಇಸ್ಲಾಮಿನಲ್ಲಿ ಮಹಿಳೆಯರಿಗೆ ದೊರೆತ ಕೊಡುಗೆಯಾಗಿದ್ದರೆ, ಹಿಂದೂ ಧರ್ಮದ ಮನು ಧರ್ಮಶಾಸ್ತ್ರದಂತೆ ಮಹಿಳೆಯರಿಗೆ ವೈಧವ್ಯ ಶಾಪವಾಗಿದೆ. ವಿಧವೆ ಅಶುಭದ ಸಂಕೇತ. ವಿವಾಹ ಮುಂತಾದ ಮಂಗಳ ಕಾರ್ಯಗಳ ಸಂದರ್ಭದಲ್ಲಿ ವಿಧವೆಯ ಉಪಸ್ಥಿತಿಯೇ ಅಮಂಗಳಕರವಾಗಿದೆ. ಸ್ವಂತ ಮಕ್ಕಳ ವಿವಾಹ ಸಮಾರಂಭದಲ್ಲೇ ವಿಧವೆಯಾದ ತಾಯಿ ಪಾಲ್ಗೊಳ್ಳುವಂತಿಲ್ಲ. ಅತ್ಯಾಚಾರಕ್ಕೆ ತುತ್ತಾದ ಹೆಣ್ಣು ಅಸ್ಪೃಶ್ಯಳಲ್ಲ ಎಂದು ಇಸ್ಲಾಂ ಧರ್ಮ ಬೋಧಿಸಿದರೆ ಹಿಂದೂ ಸಮಾಜದಲ್ಲಿ ಆಕೆ ನಾಯಿ ಮುಟ್ಟಿದ ಮಡಕೆಯೇ ಸರಿ. ಇಸ್ಲಾಮಿನಲ್ಲಿ ಅಸ್ಪೃಶ್ಯತೆ ಎಂಬುದು ಇಲ್ಲವೇ ಇಲ್ಲ. ಒಂದೇ ಗೋತ್ರದಲ್ಲಿ ಮದುವೆಯಾದರೆ ಆ ಹೆಣ್ಣು ಗಂಡುಗಳನ್ನು ರಕ್ತಸಂಬಂಧಿಗಳೇ ಮರ್ಯಾದಾ ಹತ್ಯೆ ಎಂದು ಗುಂಡಿಟ್ಟು ಕೊಲೆ ಮಾಡುವವರೆಗಿನ ದೌರ್ಜನ್ಯವನ್ನು ಹಿಂದೂ ಸಮಾಜಗಳಲ್ಲಿ ಎಸಗಲಾಗುತ್ತದೆ.

ಮರ್ಯಾದಾ ಹತ್ಯೆ ಮಾಡುವುದರಲ್ಲಿ ಮುಸ್ಲಿಂ ಸಮಾಜವೂ ಹಿಂದೆ ಬಿದ್ದಿಲ್ಲ. ಪಾಕಿಸ್ತಾನದ ಬುಡಕಟ್ಟು ಜನಾಂಗದವರು ಇಸ್ಲಾಂ ಧರ್ಮಾನುಯಾಯಿಗಳಾಗಿದ್ದರೂ ಸಮಾಜದಲ್ಲಿ ಮರ್ಯಾದಾ ಹತ್ಯೆಯ ಹೆಸರಿನಲ್ಲಿ ಮಹಿಳೆಯರ ಮೇಲೆ ಅತ್ಯಾಚಾರ, ಕೊಲೆ ಎಲ್ಲವೂ ನಡೆಯುತ್ತದೆ. ಕಳೆದ ವರ್ಷ ಬುಡಕಟ್ಟು ಜನಾಂಗದ ಐದು ಜನ ಮಹಿಳೆಯರನ್ನು ಜೀವಂತವಾಗಿ ಗೋರಿ ಮಾಡಿದ ಘಟನೆ ನಡೆದಿದೆ. ತಮಗಿಷ್ಟ

ಇರುವವರನ್ನು ಮದುವೆಯಾಗಲಿಚ್ಛಿಸಿದ್ದೇ ಇವರು ಮಾಡಿದ ಅಪರಾಧವಾಗಿತ್ತು. ಇವರನ್ನು ದೂರದ ಹಳ್ಳಿಗಾಡಿಗೆ ಕರೆದೊಯ್ದು ಗುಂಡಿಟ್ಟು ಅವರು ಸಾಯುವ ಮೊದಲೇ ಹೊಂಡಕ್ಕೆ ತಳ್ಳಿ ಅವರ ಮೇಲೆ ಕಲ್ಲು ಮತ್ತು ಕೆಸರ ರಚಲಾಯಿತು. ಈ ವಿಷಯವನ್ನು ಸಂಸತ್ ಸದಸ್ಯೆಯೊಬ್ಬರು ಸೆನೇಟಿನಲ್ಲಿ ಎತ್ತಿದಾಗ, ಬಲುಚಿಸ್ತಾನದ ಸದಸ್ಯರೊಬ್ಬರು ಆಕೆಯನ್ನು ತಡೆದು, ಅದು ಬುಡಕಟ್ಟು ಜನರ ಸಂಪ್ರದಾಯದಂತೆ ನಡೆದ ಘಟನೆಯಾದುದರಿಂದ ಇದನ್ನು ಸೆನೇಟಿನಲ್ಲಿ ಚರ್ಚಾವಿಷಯವಾಗಿಸಬಾರದು ಎಂದರು ! ಅಂದು ಅಧ್ಯಕ್ಷ ಸ್ಥಾನದಲ್ಲಿದ್ದವರೂ ಕೂಡ ಈ ವಾದವನ್ನು ಬೆಂಬಲಿಸಿದರು. ಮಾತ್ರವಲ್ಲ ಬುಡಕಟ್ಟು ಜನರ ಸಂಪ್ರದಾಯದ ಕುರಿತು ವಿಮರ್ಶಿಸಬಾರದೆಂದೂ, ಈ ಸದಸ್ಯೆ ಬಲೂಚಿಸ್ತಾನಕ್ಕೆ ಭೇಟಿ ನೀಡಿ ಅಲ್ಲಿನ ಸಂಪ್ರದಾಯದ ಕುರಿತು ತಿಳಿದುಕೊಳ್ಳಬೇಕೆಂದೂ ಸಲಹೆ ನೀಡಿದರು ! ಹೀಗೆ ಧಾರ್ಮಿಕ ಕಟ್ಟುಪಾಡುಗಳನ್ನು ದಾಟಿ ಸಾಮಾಜಿಕ ಸಂಪ್ರದಾಯಗಳಿಗೆ ಆದ್ಯತೆ ನೀಡಿ ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯ ಮತ್ತು ಕೊಲೆಯನ್ನು ಸಮರ್ಥಿಸುವ ಪುರುಷರೂ ನಮ್ಮ ನಡುವೆ ಇದ್ದಾರೆ.



ಮುಸ್ಲಿಂ ಸಮಾಜ ಬೃಹತ್ ನದಿಯಂತಾದರೆ, ಹಿಂದೂ ಸಮಾಜವೆಂಬುದು ಮಹಾಸಾಗರ. ಅಲ್ಲಿ ನೂರಾರು ಜಾತಿಗಳು; ವಿಭಿನ್ನ ಜಾತಿಗಳಲ್ಲಿ ವಿಭಿನ್ನ ಕಟ್ಟುಪಾಡುಗಳು, ನೂರಾರು ದೇವರುಗಳು. ಮನು ಧರ್ಮಶಾಸ್ತ್ರದ ಪ್ರಕಾರ ಮನುಷ್ಯರನ್ನೇ ಮೇಲುಕೀಳೆಂದು ವಿಭಜಿಸಲಾಗಿದೆ. ದೇವರ ಮೂರ್ತಿಯನ್ನಿಟ್ಟರೂ ಆ ಮೂರ್ತಿಯ ಬಳಿಗೆ ಹೋಗಲು, ಪೂಜಿಸಲು ಎಲ್ಲರಿಗೂ ಅಧಿಕಾರವಿಲ್ಲ. ಶೂದ್ರರು ಬಾಗಿಲ ಹೊರಗಾದರೆ, ದಲಿತರು ಬೇಲಿಯ ಹೊರಗೆ. ಈ ಸಮಾಜದಲ್ಲಿ ಎಂತೆಂತಹ ಸಂತರು ಹುಟ್ಟಿಬಂದರೂ, ಎಂತೆಂತಹ ಸಮಾಜ ಸುಧಾರಕರು ಕಾಣಿಸಿಕೊಂಡರೂ ಇಂತಹ ತಾರತಮ್ಯಗಳನ್ನು ಹೋಗಲಾಡಿಸಿ, ಎಲ್ಲ ಮನುಷ್ಯರೂ ಸಮಾನರಾಗಿ ಬದುಕುವಂತಹ ಅವಕಾಶ ಕಲ್ಪಿಸಲು ಇಂದಿಗೂ ವಾಗಿಲ್ಲ. ಧರ್ಮದ ಹೆಸರಿನಲ್ಲಿ ಗುಜರಾತಿನಲ್ಲಿ ಜನಾಂಗ ದ್ವೇಷ, ಖೈರ್ಲಾಂಜಿಯ ಇಡೀ ಹಳ್ಳಿಯ ಒಂದು ಕುಟುಂಬದ ನಾಲ್ವರ ಮೇಲೆ ಜನಾಂಗದ ಹೆ ನಡೆಸಿದ ದೌರ್ಜನ್ಯ ನಮ್ಮೆದೆಗೆ ನಾಟದ ಗಳಾಗಿವೆ. ಸತ್ತ ಹೆಣದ ಮೇಲೆ ಕೂಡ ಅತ್ಯಾಚಾರ ವಂತಹ ಕ್ರೌರ್ಯವನ್ನು ಖೈರ್ಲಾಂಜಿಯ ಮನು ತೋರಿದರು. ಈ ದೌರ್ಜನ್ಯ ದಲಿತ ಸಮುದಾ ಮೇಲಾದ ಕಾರಣ ಪೊಲೀಸರು, ವೈದ್ಯರು, ಸ ಪತ್ರಿಕೆಗಳೆಲ್ಲವೂ ಆ ಕುಟುಂಬಕ್ಕೆ ಯಾವ ರೀತಿ ಅ ವೆಸಗಿದೆ ಎಂಬುದನ್ನು ಗಮನಿಸಿದಾಗ ನಾನೂ ಕೂ ಜನರ ಸಹನಾಗರಿಕಳು ಎನ್ನಲು ನಾಚಿಕೆಯಾಗುತ್ತಿದೆ

ಯಾವ ಧರ್ಮದ ಯಾವ ಕಟ್ಟುಪಾಡು ಸಮಾಜದ ಪುರುಷರನ್ನು ನಲುಗಿಸುವುದಿಲ್ಲ. (ದಲಿ ಹೊರತುಪಡಿಸಿ) ಅವರ ಸ್ವಾತಂತ್ರ್ಯಕ್ಕೆ ಯಾವ ತಡೆಯೂ ಇಲ್ಲ. ಆತ ತನಗಿಷ್ಟ ವರನ್ನು ಮದುವೆಯಾಗಬಹುದು. ಆದರೆ ಓರ್ವ ಹೆಣ್ಣು ಅನ್ಯ ಧರ್ಮದ ಪುರುಷ ಮದುವೆಯಾಗಬಯಸಿದರೆ ಇಂದು ಇಡೀ ಊರು ಹೊತ್ತಿ ಉರಿಯುತ್ತದೆ! ಸಂವಿಧಾನದ ಪ್ರಕಾರ ಬಹುಪತ್ನಿತ್ವ ನಿಷಿದ್ಧವಾಗಿದ್ದರೂ ಹಿಂದೂ ಸಮಾಜ ವಿಷಯದಲ್ಲಿ ಮುಸ್ಲಿಮರಿಗಿಂತ ಹಿಂದೆ ಬಿದ್ದಿಲ್ಲ.

ಧಾರ್ಮಿಕ ಕಟ್ಟುಪಾಡುಗಳೆಲ್ಲವೂ ಮನುಷ್ಯ ಸೃಷ್ಟಿಯೇ ಹೊರತು, ದೇವರಿಗೂ ಕಟ್ಟುಪಾಡುಗಳಿಗೂ ಯಾವುದೇ ಸಂಬಂಧವೂ ಇಲ್ಲ ಎಂಬುದನ್ನು ಅರ್ಥೈಸಿಕೊಳ್ಳಬೇಕಾಗಿದೆ.

ಸಾರಾ ಅಬೂಬಕ್ಕರ್
ಮೈಕ್ರೋವೇವ್ ಸ್ಟೇಷನ್ ರಸ್ತೆ, ಲೇಡಿ ಹಿಲ್, ಮಂಗಳೂರು - ೫೭೫ ೦೦೬

# ರಾಜಕೀಯ ಆರ್ಥಿಕತೆ

ಮಾನವನಿಗೆ ಸ್ವರ್ಗಲೋಕವು ನೀಡಿರುವ ಅತ್ಯಂತ ಉದಾತ್ತವಾದ ವರವೆಂದರೆ ರಾಜಕೀಯ ಆರ್ಥಿಕತೆ.'' ಉಂಡಾಡಿ ಬೈರನ್ ದೇಶಭ್ರಷ್ಟನಾಗಿ ವೆನಿಸ್ಸಿನಲ್ಲಿದ್ದನಲ್ಲಾ, ಅವನು ಮಹಾ ಪ್ರತಿಭಾವಂತ. ತನಗೇನಾದರೂ ಜೀವನದ ಪ್ರವಾಹವನ್ನು ಬದಲಿಸಿ ಮೊದಲಿನ ಸ್ಥಿತಿಯನ್ನು ಪುನರಪಿ ಲುಪಲು ಸಾಧ್ಯವಿದ್ದಿದ್ದರೆ ತನ್ನೆಲ್ಲಾ ವ್ಯರ್ಥ ಜೀವನವನ್ನು ಒಂದೇ ಏಟಿಗೆ ಕೊನೆಗಾಣಿಸಿ, ಪಾನಮತ್ತನಾಗದೆ, ಬಹಳ ಮಸ್ಥಿತಿಯಲ್ಲಿ, ಸರಳವಾಗಿ ಸಾಹಿತ್ಯರಚನೆಯಲ್ಲಿ ತೊಡಗಿಬಿಡುವುದಾಗಿ ಹೇಳಿದ್ದಾನೆ. ಎಂತಹ ಸಾಹಿತ್ಯ ? ಅದೇ ಮೊದಲಿನ ಛಂದೋಬದ್ಧವಾದ ಬಾಲಿಶ ಪದ್ಯಗಳಲ್ಲ; ಬದಲಾಗಿ, ರಾಜಕೀಯ ಆರ್ಥಿಕತೆಯನ್ನು ಕುರಿತ ಪ್ರಬಂಧಗಳು. ಸ್ವತಃ ವಾಷಿಂಗ್‌ಟನ್ ಸಹ ಈ ರಾಜಕೀಯ ಆರ್ಥಿಕತೆಯ ವಿಜ್ಞಾನದಲ್ಲಿ ಆಸಕ್ತಿ ಹೊಂದಿದ್ದ. ಎಷ್ಟು ಮೋಹಕ ವಿಜ್ಞಾನವಿದೆಂದು ಅವನು ಉದ್ಗರಿಸಿದ್ದ.

**ಮೂಲ : ಮಾರ್ಕ್ ಟ್ವೇನ್**
**ಕನ್ನಡಕ್ಕೆ : ಡಾ|| ಜಿ. ಆರ್.**



**ಒ**ಳ್ಳೆಯ ಸರ್ಕಾರಕ್ಕೆ ರಾಜಕೀಯ ಆರ್ಥಿಕತೆಯು ಮೂಲಾಧಾರ. ವಿಶ್ವದ ಎಲ್ಲ ವಿದ್ವಜ್ಜನರೂ ಎಲ್ಲ ಕಾಲಗಳಲ್ಲೂ ಈ ವಿಷಯದ ಬಗ್ಗೆ–

(ಇಲ್ಲಿಗೆ ನನ್ನ ಬರವಣಿಗೆ ನಿಂತಿತು. ಯಾರೋ ನನ್ನನ್ನು ನೋಡಲು ಬಂದಿದ್ದಾರಂತೆ, ನಾನು ಹೊರಗೆ ಹೋಗಿ ಬಾಗಿಲಲ್ಲೇ ಅವರನ್ನು ಭೇಟಿಯಾಗಬೇಕಾಗಿದೆ. ನಾನು ಹೋಗಿ ಆತನನ್ನು ಸಂಧಿಸಿದೆ, ಏತಕ್ಕಾಗಿ ಬಂದಿದ್ದೆಂದು ವಿಚಾರಿಸಿದೆ. ಹಾಗೆ ಮಾಡುತ್ತಿರುವಾಗೆಲ್ಲಾ ರಾಜಕೀಯ ಆರ್ಥಿಕತೆಯ ಬಗೆಗಿನ ನನ್ನ ಚಿಂತನೆಯನ್ನು ಹಿಡಿತದಲ್ಲಿರಿಸಿಕೊಂಡಿದ್ದೆ. ಅದಕ್ಕೆ ಮುಕ್ಕಾಗಬಾರದು, ಜಾಡು ತಪ್ಪಬಾರದೆಂದು ಗಟ್ಟಿಯಾಗಿ ಮನಸ್ಸಿನಲ್ಲಿ ದೃಢವಾಗಿರಿಸಿ ಕೊಂಡಿದ್ದೆ. ಮನಸ್ಸಿನಲ್ಲೇ ಯೋಚಿಸುತ್ತಿದ್ದೆ, ಈ ಹಾಳಾದವನು ಎಲ್ಲಿಯಾದರೂ ಕಾಲುವೆಗೆ ಬಿದ್ದು ಸರಕು ತುಂಬಿಕೊಂಡುಹೋಗುತ್ತಿರುವ ಹಡಗಿನಡಿ ಸಿಕ್ಕು, ಗೋಧಿ ಮೂಟೆಗಳಡಿ ಜಿದ್ದುಹೋಗಬಾರದೇ ಎಂದು. ನನಗೋ ಆತುರ, ಆದರೆ ಅವನು ತಂಪಾಗಿ ನಿಂತಿದ್ದ, ಪ್ರಪಂಚದ ಎಲ್ಲ ಸಮಯವೂ ತನ್ನದೇ ಎಂಬ ಭಾವದಲ್ಲಿ. ''ನಿಮಗೆ ತೊಂದರೆ ಕೊಡುತ್ತಿದ್ದೇನೆ, ಕ್ಷಮಿಸಿ'' ಎಂದವನು, ನನ್ನ ಸಹಾಯಕ್ಕೇ ಬಂದಿರುವುದಾಗಿ ಉಲಿದ; ''ನಿಮಗೆ ಮಿಂಚಿನಿಂದ ರಕ್ಷಣೆಗಾಗಿ ಕೆಲವು ವಿದ್ಯುತ್ ನಿರೋಧಕ ಕಂಬಿಗಳು ಬೇಕಲ್ಲವೇ ?'' ಎಂದ. ''ಹೌದ್ಹೌದು, ...ಏನದು ಹೇಳಿ'' ಎಂದು ತ್ವರೆಮಾಡಿದೆ. ಆತ ನಿಸೂರಾಗಿ ನಿಂತೇ ಇದ್ದ, ನಿಧಾನವಾಗಿ ಹೇಳಲಾರಂಭಿಸಿದ : ''ಏನೂ ಇಲ್ಲ... ಅಂದರೆ ವಿಶೇಷವಾದ್ದೇನೂ ಇಲ್ಲ, ಅಲ್ಲ, ಸುಮ್ಮನೆ ನೋಡಿದೆ. ನಿಮ್ಮ ಮನೆಯ ಮೇಲೊಂದು ಕಂಬಿ ನಿಲ್ಲಿಸಲೇ ಎನಿಸಿತು.'' ನನಗೆ ಮನೆಯನ್ನು ಸಂಭಾಳಿಸಿ ಗೊತ್ತಿಲ್ಲ, ಅದಕ್ಕೆ ನಾನು ಹೊಸಬ. ಹೊಟೇಲುಗಳಲ್ಲಿ, ಹಾಸ್ಟೆಲ್‌ಗಳಲ್ಲಿ, ಹೇಗೋ ಕಾಲಯಾಪನೆ ಮಾಡಿದ್ದೇನೆ. ನನ್ನ ಅನುಭವ ಹೊಂದಿರುವ ಬೇರೆಯವರಂತೆ ನಾನೂ ಸಹ ಮನೆ ನೋಡಿಕೊಳ್ಳುವುದರಲ್ಲಿ ನಿಸ್ಸೀಮನೆಂಬಂತೆ ನಟಿಸುತ್ತೇನೆ. ಯಾರೋ ಹೊರಗಿನವರಿಗೆಲ್ಲಾ ನನ್ನ ಪರಿಸ್ಥಿತಿ ಏಕೆ ತಿಳಿಯಬೇಕು ! ಆದ್ದರಿಂದ ಲೋಕಾಭಿರಾಮವಾಗಿ ಅವನಿಗೆ ಹೇಳಿದೆ : ''ಹೌದು ನೋಡಿ, ಕೆಲದಿನಗಳಿಂದ ಅದನ್ನೇ ಯೋಚಿಸುತ್ತಿದ್ದೆ; ಆರೋ ಎಂಟೋ ವಿದ್ಯುತ್ ನಿರೋಧಕ ಕಂಬಿಗಳನ್ನು ನಿಲ್ಲಿಸಬಾರದೇಕೆ ಎಂದು ಆಲೋಚಿಸುತ್ತಿದ್ದೆ.'' ನಮ್ಮ ಆಗಂತುಕನಿಗೆ ಗಾಬರಿಯಾದಂತೆ ಕಂಡಿತು. ಏನೋ ಪ್ರಶ್ನಾರ್ಥಕ ಚಿಹ್ನೆ ಅವನ ಮುಖದಲ್ಲಿ ಎದ್ದುತೋರಿತು. ನಾನು ಶಾಂತತೆಯ ಮುದ್ದೆಯಾಗಿ ಸ್ಥಿರವಾಗಿ ನಿಂತೇ ಇದ್ದೆ. ನಾನೇನಾದರೂ ತಪ್ಪು ಮಾಡಿದರೆ ಅದು ನನ್ನ ಮುಖಭಾವದಲ್ಲಿ ಗೋಚರಿಸಕೂಡದೆಂದು ನಿರ್ಧರಿಸಿದ್ದೆ. ಅವನೆಂದ, ''ನಿಮ್ಮಂತಹ ಗಿರಾಕಿಗಳನ್ನು ಹೊಂದುವುದು ನನ್ನ ಸೌಭಾಗ್ಯ, ಬೇರೆಯವರ ಬಗ್ಗೆ ಆ ಮಾತು ಹೇಳಲಾದೀತೆ !'' ಸರಿ ಹಾಗಾದರೆ, ಎನ್ನುತ್ತಾ ರಾಜಕೀಯ ಆರ್ಥಿಕತೆಯ ಚಿಂತನೆಯ ಕೊಂಡಿ ಕಳಚಿಬೀಳದಂತೆ ನಿಗಾವಹಿಸಿದೆ. ಅಷ್ಟರಲ್ಲಿ ಆತನೇ ಮುಂದುವರಿಸಿದ : ''ಸರಿಯೇ, ಆದರೆ ನಿರ್ದಿಷ್ಟವಾಗಿ ಎಷ್ಟು ಜಾಗಗಳಲ್ಲಿ ಕಂಬಿಗಳನ್ನು ನಿಲ್ಲಿಸಬೇಕೆಂದು ನೀವು ಹೇಳಲಿಲ್ಲವಲ್ಲಾ! ಅವು ಮನೆಯ ಯಾವ ಭಾಗಗಳಲ್ಲಿರಬೇಕು ಮತ್ತು ಕಂಬಿಯ ಗುಣಮಟ್ಟ ಹೇಗಿರಬೇಕು ಎಂದು ಹೇಳಲಿಲ್ಲ ನೀವು.'' ಇದೆಂತಹ ಫಜೀತಿಗೆ ಸಿಲುಕಿದೆನೆಂದು ಸ್ವಲ್ಪ ಪರಿತಪಿಸಿದೆ. ಮನೆ ಸಂಭಾಳಿಸುವುದೆಂದರೆ ಇದೆಲ್ಲಾ ಸೇರಿರುತ್ತದೆಯೆ ? ಅದನ್ನು ತೋರ್ಪಡಿಸದೆ ಸಲೀಸಾಗಿ ನುಡಿದೆ, ನಾನೊಬ್ಬ ತೀರಾ ಹೊಸಬ ಎಂಬುದನ್ನು ಅವನಿಗೆ ಗೊತ್ತುಪಡಿಸದಂತೆ : ''ನೋಡಿ, ಒಂದು ಎಂಟು ಕಂಬಿಗಳನ್ನು ನಿಲ್ಲಿಸಿ. ಎಲ್ಲಾ ಮಾಳಿಗೆಯ ಮೇಲೇ ಇರಲಿ. ಉತ್ತಮ ಗುಣಮಟ್ಟದ ಕಂಬಿಗಳನ್ನೇ ತನ್ನಿ.'' ಅಷ್ಟಕ್ಕೇ ಅವನು ನನ್ನನ್ನು ಬಿಡುವಂತೆ ತೋರಲಿಲ್ಲ. ಅವನು ಹೇಳಲುಪಕ್ರಮಿಸಿದ : ''ಸರಳವಾದ ಕಂಬಿಗಳನ್ನೇ ತರೋಣವಂತೆ ಬಿಡಿ. ಒಂದಡಿಗೆ ಇಪ್ಪತ್ತು ಸೆಂಟುಗಳು, ಅಷ್ಟೆ. ತಾಮ್ರದ ಲೇಪ ಇರಬೇಕೆಂದಾದರೆ ಅಡಿಗೆ ೨೫ ಸೆಂಟು. ತವರದ ಲೇಪವಿದ್ದು ಸ್ವಲ್ಪ ಅತ್ತಿತ್ತ ಬಗ್ಗಿರುವಂತಹು

ದಾದರೆ ಮೂವತ್ತು ಸೆಂಟು. ಅದು ಭಾರಿ ಸುರಕ್ಷಿತವಾದ್ದು. ಎಂಥ ಸಿಡಿಲು ಬಡಿದರೂ ಜಗ್ಗುವುದಿಲ್ಲ. ಎಲ್ಲಿಗೆ ಹೊಡೆದರೂ ಭಯವಿಲ್ಲ ಸ್ವಾಮಿ, ನಾನು ಭರವಸೆ ಕೊಡುತ್ತೇನೆ. ಸಿಡಿಲಿನ ಭರವೆಲ್ಲಾ ಅಲ್ಲೇ ಉಡುಗಿಹೋಗುತ್ತದೆ, ಮುಂದಕ್ಕೆ ಹರಿಯುವ ಅದರ ಹೊಂಚೆಲ್ಲಾ ಭಗ್ನವಾಗಿಬಿಡುತ್ತದೆ ನೋಡಿ.'' ಭಗ್ನ! ಇದೆಂತಹ ಮಾತಪ್ಪಾ ಎನಿಸಿತು. ಅದೂ ಇಂಥವನಿಂದ. ಭಾಷಾಶಾಸ್ತ್ರ ಅಂತಿರಲಿ, ಅದೇನೋ ಹೇಳಿದನಲ್ಲ, ಅತ್ತಿತ್ತ ಸ್ವಲ್ಪ ಬಾಗಿರುವಂಥದು, ಎಂದು. ಅದು ನನಗೆ ಹಿಡಿಸಿತು. ಅದನ್ನೇ ತೆಗೆದುಕೊಳ್ಳೋಣ ಎಂದೆ. ಅವನಿಗೆ ಹರ್ಷವಾಗಿರಬೇಕು. ಹುರುಪಿನಿಂದ ಹೇಳಲಾರಂಭಿಸಿದ : ''ಎಲ್ಲಾ ಒಟ್ಟು ೨೫೦ ಅಡಿ ಸಾಕು ಬಿಡಿ. ಆದರೆ ೪೦೦ ಅಡಿ ಎಂದಿಟ್ಟುಕೊಳ್ಳುವುದು ಲೇಸು. ಅದೇ ಕ್ಷೇಮ ಅನ್ನಿ. ಆಗ ಕೆಲಸ ಅತ್ಯುತ್ತಮವಾಗಿ ಮುಗಿಸಬಹುದು ನೋಡಿ. ಯಾರೇ ನೋಡಿದರೂ ಆಹಾ! ಎಂದು ತಲೆಬಾಗುವಂತಿರಬೇಕಲ್ಲವೇ? ಎಂಥ ಅದ್ಭುತ ಕೌಶಲ್ಯ, ಸಮತೋಲನ, ಎಂದು ಜನ ಬೆರಗಾಗಬೇಕು. ಹುಟ್ಟಿದಾಗಿನಿಂದ ಇಷ್ಟು ಸುಸಂಯೋಜಿತ ಕಂಬಿಗಳನ್ನು ಎಲ್ಲೂ ಕಂಡಿರಲಿಲ್ಲವೆಂದು ಯಾರಾದರೂ ಮೂಗಿನ ಮೇಲೆ ಬೆರಳಿಡುವಂತಿರಬೇಕು, ಸ್ವಾಮಿ. ಅದಕ್ಕೇ ಹೇಳಿದ್ದು, ೪೦೦ ಅಡಿ ಇರಲಿ, ಎಂದು.'' ನನ್ನ ಮೇಲೆ ಅವನಿಗೇನೂ ಜಿದ್ದಿರಲಿಲ್ಲ. ಪಾಪ, ಎಂತಹ ಸಭ್ಯ. ಶತಪ್ರಯತ್ನ ಮಾಡಿ ಸೊಗಸಾಗಿ ಕಂಬಿಗಳನ್ನು ನಿಲ್ಲಿಸಬೇಕೆಂದಿದ್ದಾನೆ. ನಾನು ಹೇಳಿದೆ : ''ಆಯಿತು, ಹಾಗೇ ಮಾಡಿ, ೪೦೦ ಅಡಿಗಳೇ ಆಗಲಿ. ಎಂತಹ ಅಚ್ಚುಕಟ್ಟು ಕೆಲಸ ಮಾಡಬೇಕೆಂದಿದ್ದೀರೋ ಮಾಡಿ.'' ರಾಜಕೀಯ ಆರ್ಥಿಕತೆಯ ಲೇಖನಕ್ಕೆ ಬೇಗ ಹಿಂದಿರುಗಬೇಕೆಂದು ನನ್ನ ಕಾತುರ. ಆದ್ದರಿಂದ ಆತನನ್ನು ಅಷ್ಟಕ್ಕೇ ಬಿಟ್ಟೆ. ಲೇಖನದ ಬಗೆಗಿನ ಚಿಂತನೆಗೆ ಅರ್ಧಗಂಟೆ ತೊಡಕುಂಟಾಗಿತ್ತು. ಹೋಗಲಿ, ಈಗ ಮುಂದುವರಿಸಬಹುದಲ್ಲಾ.)

– ತಮ್ಮೆಲ್ಲ ಪ್ರತಿಭೆಯನ್ನೂ ಕ್ರೋಡೀಕರಿಸಿ, ಜೀವನಾನುಭವ ಹಾಗೂ ವಿದ್ವತ್ತನ್ನು ಸಾರವತ್ತಾಗಿ ಬಳಸಿ ಚಿಂತನೆ ನಡೆಸಿದ್ದಾರೆ. ವ್ಯಾಪಾರದ ವಹಿವಾಟುಗಳನ್ನು ನಿಯಂತ್ರಿಸುವ ಕಾನೂನಿನ ಅಮೋಘ ವಿದ್ವಾಂಸರು, ಅಂತರರಾಷ್ಟ್ರೀಯ ಬೌದ್ಧಿಕ ಬಣ. ಎಲ್ಲ ಕಾಲ - ನಾಗರಿಕತೆ - ರಾಷ್ಟ್ರೀಯತೆಗಳಲ್ಲೂ, ಝುರತುಷ್ಟ್ರನಿಂದ ಹಿಡಿದು ಹಾರೇಸ್ ಗ್ರೀಲಿವರೆಗೆ –

(ಇಲ್ಲಿ ಮತ್ತೆ ನನಗೆ ಅಡಚಣೆಯುಂಟಾಯಿತು. ನಾನು ಕೆಳಗೆ ಹೋಗಿ ಆ ... ನಿರೋಧಕ ಕಂಬಿ ಮನುಷ್ಯನೊಡನೆ ಇನ್ನೇನೋ ಚರ್ಚೆ ಮಾಡಬೇಕಾಯಿತು. ... ಚಿಂತನೆಯ ಸುಂದರ ಹೊಳೆಗೆ ಇವನು ಕಟ್ಟೆ ಕಟ್ಟುತ್ತಿದ್ದಾನಲ್ಲಾ ಎಂದು ವ್ಯಗ್ರ... ಅದೆಷ್ಟು ಅನನ್ಯ ಶಬ್ದಗಳಲ್ಲಿ ನನ್ನ ಚಿಂತನಾ ಪ್ರವಾಹಕ್ಕೆ ಅಭಿವ್ಯಕ್ತಿ ನೀಡಹೊರಟಿದ್ದೆ! ಶಬ್ದಗಳ ಒಂದೊಂದಕ್ಷರವೂ ಮಂದಗತಿಯ ಮೆರವಣಿಗೆಯಲ್ಲಿ ಹೊ... ಬರುವಂತಿದ್ದವು. ಒಂದು ಸ್ತರದಿಂದ ಇನ್ನೊಂದಕ್ಕೆ ತೆರಳಲು ಅವಕ್ಕೆ ಕನಿಷ್ಠ ... ನಿಮಿಷಗಳು ಬೇಕಾಗುತ್ತಿದ್ದವೇನೋ ಎನಿಸುತ್ತದೆ. ಅದನ್ನೆಲ್ಲಾ ಒತ್ತಟ್ಟಿಗಿಟ್ಟು ನಾನು ... ವ್ಯಕ್ತಿಯೊಡನೆ ವ್ಯವಹರಿಸಬೇಕಾಗಿ ಬಂದಿತ್ತು. ಮತ್ತೆ ಅದೇ ಮುಖ : ಶಾಂತ... ಸಿಹಿಮಾತು; ನಾನಾದರೋ ಒಳಗೇ ಬೇಗುದಿಗೆ ಒಳಗಾಗಿದ್ದೆ. ಅದೇ... ಗಂಭೀರವಾಗಿ ಚಿಂತಿಸುತ್ತಿದ್ದಂತೆ ಕಂಡ, ಕಾಲುಗಳನ್ನು ಹರಡಿನಿಂತಿದ್ದ. ರೋಡ್... ಕಲಾಸಸ್ ಎಂದರೆ ಇವನೇ ಇರಬೇಕು : ಒಂದು ಕಾಲು ನನ್ನ ಎಳೆಯ ತರ... ಸಸಿಗಳ ಮೇಲೆ ಮತ್ತು ಇನ್ನೊಂದು ನನ್ನ ಹೂಗಿಡಗಳ ಮೇಲೆ. ಕೈಗಳನ್ನು ಪಿರ... ಮೇಲಿರಿಸಿ ತಲೆಯ ಟೋಪಿಯನ್ನು ಒಂದು ಕಡೆಗೆ ವಾಲಿಸಿದ್ದ. ಒಂದು ಕಣ್ಣುಮು... ಇನ್ನೊಂದರಿಂದ ಟೀಕಾಪ್ರಹಾರಕ್ಕೆ ಗುರಿಮಾಡುವಂತೆ, ಆದರೆ ಮೆಚ್ಚುಗೆ... ಭಾವದಿಂದ, ನನ್ನ ಮನೆಯ ಹೊಗೆಯುಗುಳುವ ಗೂಡಿನತ್ತ ದೃಷ್ಟಿಯಿರಿಸಿದ್ದ. ಅ... ಅವನ ಪ್ರಮುಖ ಶತ್ರು ಎನ್ನುವಂತೆ ನೋಡುತ್ತಿದ್ದವನು ನನ್ನತ್ತ ತಿ... ಹೇಳಲಾರಂಭಿಸಿದ : ''ನಿಮಗನಿಸುವುದಿಲ್ಲವೆ, ಜೀವನದಲ್ಲಿ ಕೆಲಕ್ಷಣಗಳನ್ನು ಕಂ... ಜೀವಂತವಿರುವುದು ಎಷ್ಟು ಆನಂದಮಯ ಎನಿಸುತ್ತದೆ, ಅಲ್ಲವೆ? ನೋಡಿ ಸ್ವಾ... ಒಂದು ಹೊಗೆಗೂಡಿನ ಮೇಲೆ ಎಂಟು ವಿದ್ಯುತ್ ನಿರೋಧಕ ಕಂಬಿಗ... ನೋಡಿದಾಗ ಉಂಟಾಗುವ ಪುಳಕ ಅಸಾಮಾನ್ಯವಾದುದು. ಅದನ್ನು ನೀವೆಂದಾದ... ಅನುಭವಿಸಿದ್ದೀರೋ ಇಲ್ಲವೋ ತಿಳಿಯದು.'' ಅಂತಹ ಅದ್ಭುತಗಳಾವುವೂ ... ನೆನಪಿನಲ್ಲಿರಲಿಲ್ಲವೆಂದು ಹೇಳಿದೆ. ಅಷ್ಟೇ ಸಾಕು, ಅವನು ಮತ್ತೆ ಆರಂಭಿ... ''ನಾನು ಹೇಳಲಿಲ್ಲವೆ? ಪ್ರಾಕೃತಿಕ ದೃಶ್ಯವೈಭವ ಎನ್ನುವುದೇನಾದರೂ ಇದ್ದರೆ ಅ... ನಿಮ್ಮ ಮನೆಯ ಮೇಲಿನ ಕಂಬಿಗಳದು. ಅದಕ್ಕಿಂತಲೂ ಉತ್ತಮವಾದದ್ದು ಬೇಕಾ...

## ಆ ಲಯ

ಗಾಯಕಿಯ ಕಂಠದಲ್ಲಿ ಸದ್ದಿಲ್ಲದೆ
ಬಂದು ಕುಳಿತ ಕೋಗಿಲೆ
ಸ್ವರ ಹೊಮ್ಮಿಸಿ ಪಂಚಮದಲ್ಲಿ
ನಿರಾಯಾಸ ಸಂಚರಿಸಿ
ಮಂದ್ರ, ತಾರಗಳಲ್ಲಿ
ಮಧ್ಯಮದಲ್ಲಿ
ನಿಂತು, ಉಕ್ಕಿಸಿದ ರಾಗದ ಅಲೆಗಳು
ದಿಗಂತಗಳಿಗಪ್ಪಳಿಸಿ
ಲಯವಾಗುತ್ತ
ಹುಟ್ಟುತ್ತ
ಚಕ್ರಗತಿಯ ಸಂಚಾರದ ನಡುವೆ
ನಿಮೀಲಿತ ನೇತ್ರಳಾಗಿ
ಆಕೆ
ನಿಧಾನಕ್ಕೆ
ನಿದ್ದೆ ಹೋದಳು
ಸ್ವರಗಳಲೆಗಳ ನಡುವೆ
ಬಯಲಾದಳು – ಆ
ಲಯವಾದಳು.

ಸುಬ್ರಾಯ ಚೊಕ್ಕಾಡಿ
ಚೊಕ್ಕಾಡಿ - ೫೭೪ ೨೧೨ ದ.ಕ.



ಗರ ಜಲಪಾತಕ್ಕೆ ಹೋಗಬೇಕು, ಅಷ್ಟೆ.'' ಹಾಗಿದ್ದರೆ ಬಾಕಿ ಉಳಿದ ಕೆಲಸ ಒಂದೇ ಎಂದಾಯಿತು: ನನ್ನ ಯು ನೋಡುಗರ ಕಣ್ಣುಗಳಿಗೆ ಅಮೋಘವಾಗಿ ೀಕಾದರೆ ಆತ ಮಾಡಬೇಕಾಗಿದ್ದುದು ಅಲ್ಪ; ಹೊಗೆಗೂಡಿನ ಮೇಲೆ ಕಂಬಿಗಳನ್ನು ಇರಿಸಬೇಕೋ ಬಿಟ್ಟು ಇನ್ನುಳಿದವುಗಳನ್ನು ಸ್ವಲ್ಪ ಚೊಕ್ಕಟ ವುದು. ಆಗ ಕಣ್ಣಿಗೆ ರಾಚುವಂತಿರುತ್ತದೆ. ಅದೆಂತಹ ತೆಯ ಸಂಗಮ! ನೋಡಿದ ಕ್ಷಣವೇ ಣೀಯ ಅನುಭವವಾಗುವಂತೆ ಕಂಗೊಳಿಸುವ ೂಡುಗಳು! ಒಂದು ರಾಜ್ಯವನ್ನೇ ಗೆದ್ದ ಧನ್ಯತೆಯು ಮಾಲೀಕನಿಗೆ ತಟ್ಟಬೇಕು.

ಷ್ಟೆಲ್ಲಾ ಅತಿಶಯೋಕ್ತಿಗಳ ಆಗರವಾಗಿದ್ದಾನಲ್ಲ ಈತ ಬೆರಗಾದೆ. ನಾನವನನ್ನು ಕೇಳಿದೆ: ''ಅಯ್ಯಾ ಸಭ್ಯ, ಪುಸ್ತಕಗಳಿಂದ ಏನಾದರೂ ಮಾತನಾಡುವುದನ್ನು ೂೀ ಹೇಗೆ? ಆ ಪುಸ್ತಕ ನನಗೂ ಸ್ವಲ್ಪ ಕೊಟ್ಟಿರು ?'' ಅದಕ್ಕವನು ಮುಸಿನಕ್ಕು ಹೇಳಿದ: ''ನಾನು ಾಡುವ ಶೈಲಿಯನ್ನು ಪುಸ್ತಕಗಳು ಹೇಳಿಕೊಡುವುದು ? ಮಿಂಚಿನ ಪರಿಚಯ ಬೇಕು, ಸ್ವಾಮಿ; ಆಗ ಯಾವ ಆತಂಕವೂ ಇಲ್ಲದೆ ಷಣಾ ಕಲೆಯಲ್ಲಿ ಪ್ರಾವೀಣ್ಯ ತಾನೇ ತಾನಾಗಿ ಬರುತ್ತದೆ.'' ಹೀಗೆ ಹೇಳಿದವನೇ ೂೀ ಲೆಕ್ಕಾಚಾರ ಮಾಡಲಾರಂಭಿಸಿದ. ಅದರ ಪರಿಣಾಮ ಇದು: ''ನೋಡಿ , ಇನ್ನೊಂದೆಂಟು ಕಂಬಿಗಳನ್ನು ಸೇರಿಸಿ ನಿಮ್ಮ ಮಾಳಿಗೆಯ ಮೇಲೆ ಎಲ್ಲೆಡೆ ನಿಲ್ಲಿಸಿಬಿಡೋಣ. ಆಗ ನೋಡಿ ಗಮ್ಮತ್ತು: ಅದೇನೂ ದುಬಾರಿಯಲ್ಲ. ೂರಡಿ, ಅಷ್ಟೆ. ಸಾಕಾಗಿಬಿಡುತ್ತೆ. ಮೊದಲ ಎಂಟು ಕಂಬಿಗಳಿಗೆ ಲೆಕ್ಕ ಮಾಡಿ ನಲ್ಲಾ, ಅದು ನನಗೆ ಖಚಿತವಾಗಿರಲಿಲ್ಲ. ಮೊದಲಿಗೆ ಹಾಗೇ ನೋಡಿ, ಲೆಕ್ಕ ುವುದಿಲ್ಲ. ನಾನು ಹೇಳಿದ್ದೆನಲ್ಲಾ, ಅದಕ್ಕೆ ಒಂದು ನೂರು ಅಡಿಗಳಷ್ಟು ಜಾಸ್ತಿ ಬಹುದು ಅನಿಸುತ್ತದೆ.'' ಈತನ ಪುರಾಣ ಮುಗಿಯುವುದಿಲ್ಲ, ನನ್ನ ಲೇಖನ ವರಿಯುವುದಿಲ್ಲ. ನಾನು ಸ್ವಲ್ಪ ಬಿರುಸಾಗಿಯೇ ಗದರಿಸಿದೆ: ''ನೋಡಪ್ಪ , ನನಗೆ ಬಹಳ ತುರ್ತು ಕೆಲಸವಿದೆ, ನನ್ನ ಸಮಯ ಮತ್ತು ತಲೆ ತಿನ್ನಬೇಡ. ಬೇಕೋ ಸರಿಯಾಗಿ ಒಮ್ಮೆಗೆ ಹೇಳಿ ಮುಗಿಸು.'' ಅವನಿಗೇನೂ ಕೋಪ ತೆ ಕಾಣಲಿಲ್ಲ. ಮತ್ತೆ ಅದೇ ರಾಗ: ''ಅಷ್ಟೇಕೆ ಅಸಮಾಧಾನ ನಿಮಗೆ! ಬಿಡಿ, ು ಹೇಳಿದ್ದೆನಲ್ಲ ಹಾಗೆ ಎಂಟೇ ಕಂಬಿಗಳನ್ನು ನಿಲ್ಲಿಸಿ ಕೆಲಸ ಮುಗಿಸಿಬಿಡೋಣ ರೆ, ಕೆಲವು ಅಡ್ಡ ಕಸುಬಿಗಳು ಹಾಗೆಯೇ ಮಾಡಿಬಿಡುತ್ತಾರೆ. ನಾನು ಚನೆ ಮಾಡಿದೆ. ಛೆ, ಹಾಗೆ ಮಾಡುವುದೆ! ಈತ ಯಾರೋ ನನಗೆ ಅಪರಿಚಿತ. ಾಗೆ ತಿಳಿದೂ ತಿಳಿದೂ ಅನ್ಯಾಯವೆಸಗುವುದೆ! ನನ್ನಿಂದ ಆಗದು ಸ್ವಾಮಿ; ೂಡುವ ಬದಲು ಸಾಯುವುದು ಲೇಸು. ಹೌದು, ಯಜಮಾನರೆ, ನನ್ನ ನಗಳೆಲ್ಲಾ ಅಂಥವೇ, ಹೇಳಿ ಕೇಳಿ ನಿಮ್ಮ ಮನೆಯ ಮಾಳಿಗೆ ಭಣಗುಟ್ಟುತ್ತಿದೆ, ರೂ ವಿದ್ಯುತ್ ನಿರೋಧಕ ಕಂಬಿ ಇಲ್ಲ. ಹೀಗಿರುವಾಗ ಮನೆಯನ್ನು ಹಾಗೆ ೀಗಲಾದೀತೆ. ನಾನು ಅಂತಹ ಹಾದಿ ತುಳಿಯುವವನಲ್ಲ, ಸ್ವಾಮಿ. ವರು ನನಗೆ ಅಪಚಾರ ಮಾಡುವುದನ್ನು ನಾನು ಸಹಿಸುತ್ತೇನೆಯೆ? ಹಾಗೆ ನಿಮಗೂ ಅಪಚಾರ ಕೂಡದು. ಹೇಳಿದೆನಲ್ಲಾ, ನೀವು ನನಗೆ ುವಾದದ್ದೇ ಈಗ. ಸರಿ, ನಿಮ್ಮಿಷ್ಟದಂತೆಯೇ ಆಗಲಿ. ಆದರೆ, ಆಮೇಲೆ ಕದಿಂದ ಆ ಪಾಪಿ, ಜಗಳಗಂಟಿ, ವಿಧ್ವಂಸಕ, ಏನೋ ಸಂದೇಶ ತಂದು ನೆಗೆ ಸಂದೇಶ ಮುಟ್ಟಿಸುತ್ತಾನಲ್ಲ, ಆಗ...'' ತಕ್ಷಣವೇ ಅವನನ್ನು ತಡೆದು : ''ಆಯಿತು, ಆಯಿತು, ಆ ಮಾತೆಲ್ಲಾ ಏಕೆ? ಇನ್ನೆಂಟು ಸೇರಿಸ ? ಐನೂರು ಅಡಿ ಹೆಚ್ಚು ಮಾಡಬೇಕು ತಾನೆ. ಮಾಡಿ, ಹಾಗೇ ಮಾಡಿ, ೀನು ಮಾಡಬೇಕೆನಿಸುತ್ತದೋ ಎಲ್ಲಾ ಮಾಡಿ. ಆದರೆ ನಿಮ್ಮ ಭಾವನೆಗಳಿಗೆ ಬೇಡ, ಅವನ್ನು ನಿಮ್ಮ ಹಿಡಿತದಲ್ಲಿ ಇಟ್ಟುಕೊಳ್ಳಿ. ನಿಘಂಟಿನಲ್ಲಿರುವ ಷ್ಟು ಮೀರಿ ಹೋಗುವ ಅವಶ್ಯಕತೆ ಇಲ್ಲ. ಅದಂತಿರಲಿ, ನೀವು ಹೇಳಿದ್ದನ್ನು ಸರಿಯಾಗಿ ಅರ್ಥಮಾಡಿಕೊಂಡಿದ್ದೇನೆಂದು ನಂಬುತ್ತೇನೆ. ನಿಮ್ಮ ಕೆಲಸ . ಒಳ್ಳೆಯದು, ನಾನಿನ್ನು ಹೋಗಿ ನನ್ನ ಲೇಖನದ ಕೆಲಸ ಮುಂದುವರಿಸಲು

ಸ್ವಾಮೀಜಿ ಈಗ ಗೃಹಸ್ಥ



ಗೃಹಸ್ಥ ಜೀವನ ಬೇಜಾರು ಬಂದ್ಮೇಲೆ ಮತ್ತೆ ಸ್ವಾಮೀಜಿ ಆಗಬಹುದು ಬಿಡಿ...?!

ಅನುಮತಿ ನೀಡುತ್ತೀರಿ ತಾನೆ!'' ಇಷ್ಟೆಲ್ಲಾ ಮುಗಿದ ಮೇಲೆ ಇಡೀ ಒಂದು ಗಂಟೆ ಕುಳಿತಿದ್ದೇನೆ, ಹಾಗೇ ಸುಮ್ಮನೆ ಕುಳಿತಿದ್ದೇನೆ. ಆಲೋಚನಾ ಲಹರಿ ಮುಂದಕ್ಕೆ ಹೋಗುತ್ತಲೇ ಇಲ್ಲ. ಅದೆಲ್ಲೋ ನಿಂತುಹೋಗಿತ್ತು. ಈ ಮನುಷ್ಯ ಬಂದು ತಡೆಯುಂಟುಮಾಡಿದಾಗ ನಾನೇನು ಆಲೋಚಿಸುತ್ತಿದ್ದೆ? ಹ್ಞಾ, ತಿಳಿಯಿತು, ಕೊನೆಗೂ ತಿಳಿದೇಹೋಯಿತು. ನಾನೀಗ ಬರವಣಿಗೆಯನ್ನು ಮುಂದಕ್ಕೆ ಕೊಂಡೊಯ್ಯಬಹುದು.)

– ಈ ವಿಷಯದ ಬಗ್ಗೆ ತಮ್ಮ ತಮ್ಮಲ್ಲಿ ಜಟಾಪಟಿ ಮಾಡಿಕೊಂಡಿದ್ದಾರೆ ಮತ್ತು ಅವರ ಪೈಕಿಯೆಲ್ಲಾ ಅತ್ಯಂತ ಮೇಧಾವಿಯಾದವನೂ ಕೂಡ ಒಳ್ಳೆಯ ಪ್ರತಿದ್ವಂದ್ವಿಯೊಡನೆ ಸೆಣಸುತ್ತಿದ್ದೇನೆಂಬ ಭಾವನೆಯನ್ನೇ ತಾಳಿದ್ದಾನೆ; ಏಕೆಂದರೆ, ಈ ವಿಷಯ ಅಂತಹ ಚತುರ ಸಂಘರ್ಷ ಪಟು. ಒಮ್ಮೆ ಉರುಳಿಸಿದರೆ ಮತ್ತೆ ನಗುನಗುತ್ತಾ ಹೊಸ ಪಟ್ಟು ಹಾಕಲು ಬರುವಂತಹ ಕುಸ್ತಿಯಾಳು ಇದು. ಮಹಾನ್ ಕನ್‌ಫ್ಯೂಶಿಯಸ್ ಒಮ್ಮೆ ಹೇಳಿದ್ದ, ತಾನು ಪೊಲೀಸ್ ದಳದ ಮುಖ್ಯಸ್ಥನಾಗುವುದಕ್ಕಿಂತ ಉದ್ದಾಮ ರಾಜಕೀಯ ಆರ್ಥಿಕತೆಯ ಚಿಂತಕನಾಗಲು ಹೆಚ್ಚು ಬಯಸುವುದಾಗಿ. ಸಿಸೆರೊ ಸಹ ಆಗಾಗ್ಗೆ ಹೇಳುತ್ತಿದ್ದುದುಂಟು, ರಾಜಕೀಯ ಆರ್ಥಿಕತೆಯೆಂಬುದು ಮಾನವನ ಮನಸ್ಸು ಈವರೆಗೆ ಕಲ್ಪಿಸಿಕೊಂಡಿರುವ ಅತ್ಯದ್ಭುತ ಪರಿಕಲ್ಪನೆ, ಎಂದು. ಅದಕ್ಕಿಂತಲೂ ಉಚ್ಚವಾದದ್ದೇನೂ ಮಾನವನ ಮನಸ್ಸಿಗೆ ಹೊಳೆದಿಲ್ಲ. ನಮ್ಮವನೇ ಆದ ಗ್ರೀಲಿ ಕೂಡ ಅಸ್ಫುಟವಾಗಿ, ಆದರೆ ಬಹಳ ಅಧಿಕಾರಯುತವಾಗಿ ಹೇಳಿರುವುದೇನೆಂದರೆ –

(ಅವನೇ ಮತ್ತೆ. ಇನ್ನಾರು ಬಂದು ವಿಘ್ನ ಒಡ್ಡುತ್ತಾರೆ! ಆ ವಿದ್ಯುತ್ ನಿರೋಧಕ ಕಂಬಿ ಮನುಷ್ಯ ಹೇಳಿ ಕಳಿಸಿದ. ಸರಿ, ಯಥಾಪ್ರಕಾರ ನಾನು ಕೆಳಗಿಳಿದು ಹೋದೆ. ಅಸಹನೆಯು ನನ್ನಲ್ಲಾಗಲೇ ಮಡುಗಟ್ಟಿತ್ತು. ಅವನ ಹಸನ್ಮುಖ ಮೊದಲಿನಂತೆಯೇ ರಾರಾಜಿಸುತ್ತಿತ್ತು. ನಿಧಾನವಾಗಿ ಆರಂಭಿಸಿದ: ''ಕ್ಷಮಿಸಿ, ನಿಮಗೆ ಅಡ್ಡಿಯುಂಟು ಮಾಡಲು ಹೇಸುತ್ತೇನೆ; ಅದಕ್ಕಿಂತಲೂ ಸಾಯುವುದು ಹೆಚ್ಚು ಸ್ವಾಗತಾರ್ಹ. ಆದರೆ ಏನು ಮಾಡುವುದು! ಕೆಲಸಕ್ಕೆಂದು ನೀವು ನನ್ನನ್ನು ನೇಮಿಸಿಕೊಂಡಿದ್ದೀರಿ, ಒಳ್ಳೆಯ ಕಸುಬುದಾರನಾಗಿ ನಾನದನ್ನು ಚಂದವಾಗಿ ಮಾಡಿಕೊಡಬೇಕು. ಅದು ನನ್ನ ನೀತಿ. ಕೆಲಸ ಮುಗಿದನಂತರ ಆಯಾಸ ಪರಿಹರಿಸಿಕೊಳ್ಳಲು ವಿರಾಮ ಮತ್ತು ಮನೋಲ್ಲಾಸ ಬೇಕಾಗುತ್ತದೆನ್ನಿ. ಈಗ ಏನಾಗಿಹೋಯಿತೆಂದರೆ, ಇನ್ನೇನು ವಿರಮಿಸಲು ಹೊರಟುಬಿಟ್ಟಿದ್ದೆ. ಅಷ್ಟರಲ್ಲೊಮ್ಮೆ ನಿಮ್ಮ ಮನೆಯತ್ತ ಕಣ್ಣು ಹೊರಳಿಸಿದೆ. ಎಂಥಾ ಪ್ರಮಾದವಾಯಿತೆಂಬ ಅರಿವು ಬಂದಿತು, ನೋಡಿ. ಅದೇನಾಯಿತೋ, ಹೇಗಾಯಿತೋ, ನನ್ನ ಲೆಕ್ಕವೆಲ್ಲಾ ಎಡವಟ್ಟಾಗಿಬಿಟ್ಟಿದೆ, ಸ್ವಾಮಿ. ನಿಮ್ಮ ಮನೆಯ ಮೇಲೆ ನನಗೆ ಮಮತೆ ಮೂಡಿಬಿಟ್ಟಿದೆ; ವೈಯಕ್ತಿಕ ಹಿತಾಸಕ್ತಿಯೆಂದು ಬೇಕಾದರೂ ಅನ್ನಿ. ನಿಮ್ಮ ಮನೆಯ ಮೇಲೇನೋ ಹದಿನಾರು ವಿದ್ಯುತ್ ನಿರೋಧಕ ಕಂಬಿಗಳನ್ನು ನಿಲ್ಲಿಸುತ್ತೇವೆ, ಸರಿ. ಆದರೆ ನೆಲದ ಮೇಲೆ? ಆ ಹದಿನಾರು ಕಂಬಿಗಳಿಗೆ ನೆಲದ ಮೇಲೇನು ರಕ್ಷಣೆ...'' ನಾನು ಗಟ್ಟಿಯಾಗಿ ಅರಚಿದೆ: ''ಸಾಕು ಮಾಡಪ್ಪಾ, ಶ್ರೇಷ್ಠತಮ; ನನ್ನನ್ನು ಶಾಂತವಾಗಿರಲು ಬಿಡುತ್ತೀಯಾ? ಹೋಗು, ನೂರೈವತ್ತು ಕಂಬಿ ನೆಡು. ಅಡಿಗೆಮನೆಯ ಮೇಲೊಂದಷ್ಟನ್ನು ನಿಲ್ಲಿಸು. ಆ ಕೊಟ್ಟಿಗೆ ಇದೆಯಲ್ಲಾ, ಅದರ ಮೇಲೆ ಹತ್ತೋ ಹನ್ನೆರಡೋ ಕೂಡಿಸು. ಆ ಹಸುವನ್ನೂ ಮರೆಯಬೇಡ, ಅದರ ಕೋಡುಗಳ ಮೇಲೆ ಎರಡು ಕಂಬಿಗಳಿಗೆ ವಿಜೃಂಭಿಸಲಿ, ಆಯಿತೆ? ಅಲ್ಲಿ ಅಡಿಗೆಯವಳಿದ್ದಾಳಲ್ಲ, ಅವಳ ತಲೆಯ ಮೇಲೂ ಒಂದು ಕುಕ್ಕು. ಈ ಹಾಳು ಜಾಗದ ಸುತ್ತೆಲ್ಲಾ ನಿನಗೆಲ್ಲೆಲ್ಲಿ ಬೇಕೋ ಅಲ್ಲೆಲ್ಲಾ ನಿಲ್ಲಿಸು, ತಿಳಿಯಿತೆ. ಕಡೆಗೆ ಈ ನನ್ನ ಭವ್ಯವಾದ ಮನೆಯು ತವರದ ತವರೂರಾಗಲಿ, ಸೊಟ್ಟಸೊಟ್ಟ ಕಂಬಿಗಳ ಗೂಡಾಗಲಿ, ಏನಾದರೂ ಆಗಿಹೋಗಲಿ! ಮೊದಲು ನೀನಿಲ್ಲಿಂದ ತೊಲಗು. ಅದೆಷ್ಟು ಸಾಮಗ್ರಿಯನ್ನು ತರುತ್ತೀಯೋ ಎಲ್ಲಾ ತಾ, ಅಷ್ಟನ್ನೂ ನಿಲ್ಲಿಸು. ವಿದ್ಯುತ್ ನಿರೋಧಕ ಕಂಬಿಗಳು ಮುಗಿದುಹೋದರೆ ತೊಂದರೆಯಿಲ್ಲ; ಬೇರೇನಾದರೂ ಕಂಬಿಗಳನ್ನು ತಂದುಬಿಡು: ಡಿಕ್ಕಿ ಕಂಬಿ, ಚಾಚಿದ ಕಂಬಿ, ಮೆಟ್ಟಿಲು ಕಂಬಿ, ಆಡುಬೆಣೆ ಕಂಬಿ, ಹೀಗೆ ಏನು ಬೇಕಾದರೂ ತಾ. ನಿನ್ನ ಬಕಾಸುರ ಹೊಟ್ಟೆಗೆ ಇನ್ನೂ ಬೇರೆ

ಕಂಬಿಗಳು ಬೇಕಾದರೆ ಅವನ್ನೂ ತಾ. ಆಗ ನನ್ನ ಮನೆಯ ಮೇಲಿನ ಕೃತಕ ದೃಶ್ಯಾವಳಿಯು ನಿನಗೆ ತೃಪ್ತಿ ತರುತ್ತದಲ್ಲವೆ? ಹೋಗು, ಏನು ಬೇಕಾದರೂ ಮಾಡು, ಮೊದಲು ನನ್ನ ಮಿದುಳಿಗೆ ವ್ಯವಧಾನ ಕೊಡು, ಉರಿದುಹೋಗುತ್ತಿರುವ ನನ್ನ ಹೃದಯಕ್ಕೆ ಸ್ವಲ್ಪ ಚಿಕಿತ್ಸೆ ಅಗತ್ಯವಾಗಿದೆ.'' ಇಷ್ಟು ದೀರ್ಘ ಆರ್ಭಟ ಅವನನ್ನು ವಿಚಲಿತನನ್ನಾಗಿಸಲಿಲ್ಲ. ಶಾಂತತೆಯ ಮುಖಮುದ್ರೆ ಅವನನ್ನೆಂದೂ ತೊರೆಯುವುದಿಲ್ಲವೇನೊ! ಅದೇ ಮುಸಿನಗು ಮುಖದ ಮೇಲೆ ಲಾಸ್ಯವಾಡುತ್ತಿತ್ತು. ಅವನಿಗೆ ಕಬ್ಬಿಣದ ಕಂಬಿ ಬೇಕೋ ಅಥವಾ ಅವನೇ ಕಬ್ಬಿಣವೋ ಎನ್ನುವಂತಿದ್ದ. ಅವನ ಮಣಿಕಟ್ಟಿಗೆ ಎಂಥದೋ ಪಟ್ಟಿ ಸುತ್ತಿಕೊಂಡಿದ್ದ. ಅದನ್ನು ನಯವಾಗಿ ಮೇಲೆ-ಕೆಳಗೆ ಮಾಡುತ್ತಾ ಹೇಳಿದ: ''ಯಜಮಾನ್ರೆ, ನಾನೀಗ ಹೊರಟು ಗೂನುಬೆನ್ನು ಮಾಡಿಕೊಂಡು ಕೂತುಬಿಡುತ್ತೇನೆ.'' ಇದೆಲ್ಲಾ ಮೂರು ಗಂಟೆಗಳ ಹಿಂದಿನ ಸಮಾಚಾರ. ಶಾಂತಚಿತ್ತನಾಗಿ ಕುಳಿತು ನನ್ನ ಬರವಣಿಗೆ ಮುಂದುವರಿಸಬಲ್ಲೆನೆಂಬ ಮಾತು ಪ್ರಶ್ನಾರ್ಹ. ನನ್ನ ವಿಷಯ ಎಷ್ಟು ಅಗಾಧವಾದ್ದು, ಶ್ರೇಷ್ಠವಾದ್ದು. ರಾಜಕೀಯ ಆರ್ಥಿಕತೆ ಏನು ಸಾಮಾನ್ಯವೆ! ಯತ್ನಿಸಬೇಕು, ಯತ್ನಿಸಬೇಕೆಂಬ ಆಶಯವನ್ನು ನಾನು ಕಿತ್ತೊಗೆಯಲಾರೆ. ಆ ವಿಷಯ ನನ್ನ ಹೃದಯಕ್ಕೆ ಅಷ್ಟೊಂದು ಸಮೀಪವಾದ್ದು, ಮಿದುಳಿಗೆ ಪ್ರಿಯವಾದ್ದು. ವಿಶ್ವದ ತಾತ್ವಿಕ ಚಿಂತನೆಯಲ್ಲಿ ಇದಕ್ಕೆ ಸಮಾನವಾದ್ದು ಬೇರೇನಿದೆ! ಬರೆಯಲುಪಕ್ರಮಿಸಿದೆ.)

''ಮಾನವನಿಗೆ ಸ್ವರ್ಗಲೋಕವು ನೀಡಿರುವ ಅತ್ಯಂತ ಉದಾತ್ತವಾದ ವರವೆಂದರೆ ರಾಜಕೀಯ ಆರ್ಥಿಕತೆ.'' ಆ ಉಂಡಾಡಿ ಬೈರನ್ ದೇಶಭ್ರಷ್ಟನಾಗಿ ವೆನಿಸ್ಸಿನಲ್ಲಿದ್ದನಲ್ಲಾ, ಅವನು ಮಹಾ ಪ್ರತಿಭಾವಂತ. ತನಗೇನಾದರೂ ಜೀವನದ ಪ್ರವಾಹವನ್ನು ಬದಲಿಸಿ ಮೊದಲಿನ ಸ್ಥಿತಿಯನ್ನು ಪುನರಪಿ ತಲುಪಲು ಸಾಧ್ಯವಿದ್ದಿದ್ದರೆ ತನ್ನೆಲ್ಲಾ ವ್ಯರ್ಥ ಜೀವನವನ್ನು ಒಂದೇ ಏಟಿಗೆ ಕೊನೆಗಾಣಿಸಿ, ಪಾನಮತ್ತನಾಗದೆ, ಬಹಳ ಸಮಸ್ಥಿತಿಯಲ್ಲಿ, ಸರಳವಾಗಿ ಸಾಹಿತ್ಯರಚನೆಯಲ್ಲಿ ತೊಡಗಿಬಿಡುವುದಾಗಿ ಹೇಳಿದ್ದಾನೆ. ಎಂತಹ ಸಾಹಿತ್ಯ? ಅದೇ ಮೊದಲಿನ ಛಂದೋಬದ್ಧವಾದ ಬಾಲಿಶ ಪದ್ಯಗಳಲ್ಲ; ಬದಲಾಗಿ, ರಾಜಕೀಯ ಆರ್ಥಿಕತೆಯನ್ನು ಕುರಿತ ಪ್ರಬಂಧಗಳು. ಸ್ವತಃ ವಾಷಿಂಗ್‌ಟನ್ ಸಹ ಈ ರಾಜಕೀಯ ಆರ್ಥಿಕತೆಯ ವಿಜ್ಞಾನದಲ್ಲಿ ಆಸಕ್ತಿ ಹೊಂದಿದ್ದ. ಎಷ್ಟು ಮೋಹಕ ವಿಜ್ಞಾನವಿದೆಂದು ಅವನು ಉದ್ಗರಿಸಿದ್ದ. ಬೇರೆ ದೊಡ್ಡ ಹೆಸರುಗಳೂ ಇವೆ: ಬೇಕರ್, ಬೆಕ್ವಿತ್, ಜಡ್ಸನ್, ಸ್ಮಿತ್... ಎಲ್ಲರೂ ಅನರ್ಘ್ಯವಾದ ಸಂಬಂಧ ಹೊಂದಿದ್ದವರೇ. ಆ ಮಹಾಸಾಮ್ರಾಟ ಹೋಮರ್ ಇದ್ದನಲ್ಲಾ, ಅವನು ತನ್ನ 'ಇಲಿಯಡ್'ನ ಒಂಭತ್ತನೆಯ ಅಧ್ಯಾಯದಲ್ಲಿ ರಾಜಕೀಯ

ಆರ್ಥಿಕತೆಯ ಮಹತ್ವವನ್ನು ಎಷ್ಟು ಉದಾತ್ತವ
ಗಂಭೀರವಾದ, ಮಾತುಗಳಲ್ಲಿ ಶ್ಲಾಘಿಸಿದ್ದಾನೆಂಬು
ತಿಳಿದರೆ ಈ ವಿಷಯದ ಆಳ-ಅಗಲ ವಿವೇಚ
ಸಿಗುತ್ತದೆ. ಆ ಪ್ರಾಚೀನ ಕವಿಯ ಕಲ್ಪನೆಗಳ ಅಗಾ
ಮತ್ತು ಅವಕ್ಕೆ ಸರಿಹೊಂದುವ ಕವಚ ತೊಡಿ
ಅವನಲ್ಲಿರುವ ಶಬ್ದಭಂಡಾರ, ಅವನ ಪ್ರತಿವೆ
ಗಹನತೆ, ಇವೆಲ್ಲಾ ರಾಜಕೀಯ ಆರ್ಥಿಕತೆಂ
ಕುರಿತ ಅವನ ಪದ್ಯಕ್ಕೆ ಮೆರುಗು ತಂದುಕೊ
ಅದನ್ನು ಅನನ್ಯವಾಗಿಸಿವೆ. ಬೇರೆಲ್ಲಾ ಕಾಲಗಳ
ಪದ್ಯಗಳಿಗಿಂತಲೂ ಹೆಚ್ಚಾಗಿ ಹೊಗ
ಪಾತ್ರವಾಗಿರುವ ಅವನ ಪದ್ಯ –

''ಇನ್ನೊಂದು ಮಾತನ್ನೂ ಆಡಬೇಡ, ತಿಳಿಂ
ನಿನಗೆ ಪಾವತಿಸಬೇಕಾದ್ದೆಷ್ಟು ಎಂಬುದನ್ನು ಪ
ಹೇಳಿ ಸದಾಕಾಲಕ್ಕೂ ವಿರಮಿಸು. ಇನ್ನು ಈ ಕಡೆ
ಹಾಕಬೇಡ. ಎಷ್ಟು? ಒಂಬೈನೂರು ಡಾಲರುಗ
ಅಷ್ಟೇ ಏನು ? ತೆಗೆದುಕೊ, ಈ ನನ್ನ ಚೆಕ್ ಇದೆಂ
ಅದನ್ನು ಅಮೆರಿಕಾದ ಯಾವ ಬ್ಯಾಂಕಿಗೆ ಕೊ
ಅದನ್ನು ಮಾನ್ಯಮಾಡಿ ನಿನಗೆ ನಗದು
ಕೊಡುತ್ತಾರೆ. ಅದಿರಲಿ, ಓಹೋ, ರಸ್ತೆಯಲ್ಲಿ ಅ
ಜನಜಂಗುಳಿ ? ಏನು ? – 'ವಿದ್ಯುತ್ ನಿರೋ
ಕಂಬಿಗಳನ್ನು ನೋಡುತ್ತಿದ್ದಾರೆ' ಎಂದೆ
ಅಯ್ಯೋ ನನ್ನ ಜೀವವೇ, ನೀನು ಹಾಯಾಗಿ
ಅಲ್ಲ, ಅವರು ತಮ್ಮ ಜೀವಮಾನದಲ್ಲಿ ಎ

ದ್ಯುತ್ ನಿರೋಧಕ ಕಂಬಿಯೊಂದನ್ನು ನೋಡಿರ ಲ್ಲವೆ? ಏನೆಂದೆ - 'ಒಂದೇ ಮನೆಯ ಮೇಲೆ ಷ್ಟೊಂದು ಕಂಬಿಗಳ ಮೆದೆಯನ್ನು ಕಂಡಿರಲಿಲ್ಲ' ಂದೆಯಾ? ನೀನು ಹೇಳಿದ್ದನ್ನು ನಾನು ಸರಿಯಾಗಿ ಹಿಸಿದ್ದೇನೆ ತಾನೆ? ತಾಳು, ನಾನೇ ಹೊರಗೆ ಬಂದು ಮೂಢಜನರಲ್ಲಿ ಉಕ್ಕಿಬರುತ್ತಿರುವ ತೀವ್ರ ಾವನೆಗಳನ್ನೊಮ್ಮೆ ಕೇಳಿಕೊಂಡುಬಿಡುತ್ತೇನೆ.''

ಮೂರು ದಿನಗಳ ತರುವಾಯ. – ಸಾಕಪ್ಪಾ ಸಾಕು ನಿಸಿಬಿಟ್ಟಿದೆ. ಇಪ್ಪತ್ತನಾಲ್ಕು ಗಂಟೆಗಳ ಕಾಲ ನಮ್ಮ ೊಳೆಯುತ್ತಿರುವ ಮನೆಯದೇ ಮಾತು, ಅದರದೇ ಸ್ಮಯ. ನಾಟಕ ಮಂದಿರಗಳೆಲ್ಲಾ ಖಾಲಿ ಹೊಡೆಯು ದ್ದುವಂತೆ: ಇನ್ನೇನು ತಾನೆ ಆದೀತು! ಅವರ ಯಾವ ದೃಶ್ಯ ವೈಭವವೂ ನಮ್ಮ ಮನೆಯ ಅಪೂರ್ವ ೃಶ್ಯಾವಳಿಯನ್ನು ಸರಿಗಟ್ಟುವಂತಿರಲಿಲ್ಲ. ನಮ್ಮ ದ್ಯುತ್ ನಿರೋಧಕ ಕಂಬಿಗಳೆದುರು ಅವರ ಾತುರ್ಯವೆಲ್ಲಾ ಸಪ್ಪೆಯಾಗಿಬಿಟ್ಟಿತ್ತು. ಅದೇನು ನ! ರಾತ್ರಿ-ಬೆಳಿಗ್ಗೆ ಎನ್ನದೆ ನಮ್ಮ ರಸ್ತೆಯಲ್ಲೆಲ್ಲಾ ಜಿಬಿಜಿ. ಎಷ್ಟೋ ಮಂದಿ ಪಟ್ಟಣದ ಆಸುಪಾಸಿನ ಳ್ಳಿಗಳಿಂದಲೂ ಬಂದಿದ್ದರಂತೆ. ಇಂತಹ ೃಶ್ಯ ಅವರಿಗಿನ್ನೆಲ್ಲಿ ದೊರೆಯಲು ಸಾಧ್ಯವಿತ್ತು! ರಡನೆಯ ದಿನ ಏನೋ ಒಂದು ವಿಧದ ಬಿಡುಗಡೆ ಕ್ಕಿತು. ಜೋರು ಮಳೆ, ಸಿಡಿಲು, ಗುಡುಗು ಲವಾಗಿ ಅಪ್ಪಳಿಸಲಾರಂಭಿಸಿದಾಗ ನನ್ನ ಮನೆಯನ್ನು ಂರಿಯಾಗಿಸಿಕೊಂಡಿದ್ದುವೆನಿಸಿತು. ಇತಿಹಾಸಕಾರ ೋಸೆಫಸ್ ವಿಚಿತ್ರವಾದ ಪರಿಭಾಷೆಯಲ್ಲಿ ೀಳುವಂತೆ ಅವು ನನ್ನ ಮನೆಗೆ ''ಧಾಳಿ ಇಕ್ಕಿದ್ದುವು.'' ಲ್ಲಿಗೆ ನಾಟಕರಂಗದ ಆಸನಗಳೆಲ್ಲಾ ಖಾಲಿ ುದುವು. ಹೀಗೆ ಮಳೆ ಅಪ್ಪಳಿಸದಿದ್ದರೆ ಜನ ತೆಪ್ಪಗೆ ರಳುತ್ತಿದ್ದರೋ ಇಲ್ಲವೋ ಅನುಮಾನ. ಐದು ಮಿಷದಲ್ಲಿ ರಸ್ತೆಯಲ್ಲಿ ಒಂದು ನರಪಿಳ್ಳೆಯೂ ಲ್ಲದಂತಾಯಿತು. ರಸ್ತೆ ಇರಲಿ, ನನ್ನ ಮನೆಯ ರ್ಧ ಮೈಲಿ ಪರಿಧಿಯಲ್ಲಿ ಯಾವ ಪ್ರೇಕ್ಷಕನೂ ಳಿದಿರಲಿಲ್ಲ. ಸ್ವಾರಸ್ಯವೆಂದರೆ, ಆ ಸುತ್ತಮುತ್ತಲಲ್ಲಿ ತ್ತರದ ಮನೆಗಳು ಭರ್ತಿಯಾಗಿದ್ದವು: ಕಿಟಕಿ, ಾಳಿಗೆ, ಎಲ್ಲಾ! ಇನ್ನೇನಾಗಲು ಸಾಧ್ಯವಿತ್ತು, ಲ್ಲವೆ? ಆಕಾಶದಿಂದ ಉದುರುವ ನಕ್ಷತ್ರಗಳು, ಲ್ಟೈ ನಾಲ್ಕರಂದು ಸಿಡಿಸಲಾಗುವ ಪಟಾಕಿಗಳು, ವೆಲ್ಲಾ ಇಪ್ಪತ್ತು ವರ್ಷಗಳಲ್ಲಿ ಎಷ್ಟು ಗಮಗಿಸಿರಬಹುದು! ಅಷ್ಟನ್ನೂ ಮೀರಿಸಿದ್ದ ಳಕು, ಮಳೆಯ ಭೋರ್ಗರೆತ. ಅಷ್ಟೊಂದು ನಗಳು ಕೂಡಿಟ್ಟ ಮಳೆ ಒಂದೇ ದಿನ ದಿಢೀರನೆ ರಿದುಹೋಯಿತು; ಅದೂ ಒಂದೇ ಒಂದು ಾಳಿಗೆಯ ಮೇಲೆ ಎನ್ನುವಂತೆ. ಮಳೆಯು ಸೃಷ್ಟಿಸಿದ್ದ ಂಧಕಾರದ ಹಿನ್ನೆಲೆಯಲ್ಲಿ ನನ್ನ ಮನೆ ಮಾತ್ರ ಕಣ್ಣಿಗೆ ಚುವಂತೆ ನಿಂತಿತ್ತು. ಯಾವ ನಕ್ಷತ್ರ, ಪಟಾಕಿಯೂ ್ನ ಮನೆಯನ್ನು ಅಷ್ಟು ನಯನಮನೋಹರ ನ್ನಾಗಿಸಲು ಶಕ್ಯವಿರಲಿಲ್ಲ. ಸರಿಯಾಗಿ ಎಣಿಸಿಟ್ಟಿದ್ದಂತೆ ಂಚು ನನ್ನ ಮನೆಗೆ ಒಟ್ಟು ಏಳುನೂರ ಅರವತ್ನಾಲ್ಕು ರಿ ಬಿರುಸಿನ ಭೇಟಿ ನೀಡಿತಂತೆ; ಅದೂ ಕೇವಲ ವತ್ತು ನಿಮಿಷಗಳಲ್ಲಿ. ಪಾಪ, ಪ್ರತಿಬಾರಿಯೂ ಅವು ನಮ್ಮ ಮನೆಯ ಮೇಲೆ ವಿಜೃಂಭಿಸುತ್ತಿದ್ದ ಯಾವುದಾದರೊಂದು ಕಂಬಿಗೆ ತಾಗಿ ಠಸಕ್ಕೆಂದು ಭೂಮಿಗೆ ಇಳಿದುಹೋಗುತ್ತಿದ್ದುವಂತೆ. ಎಷ್ಟು ವಿಧೇಯವಾದ ಕಂಬಿಗಳು ಮತ್ತು ಸುರುಳಿ ಸುತ್ತಿಕೊಂಡು ಎಲ್ಲವನ್ನೂ ನಮ್ರವಾಗಿಸಿಬಿಡುವ ಕಂಬಿಗಳು! ಸರಣಿ ಸರಣಿಯಾಗಿ ಬಂದ ಮಿಂಚಿಗೆ ಇದೇನಾಗುತ್ತಿದೆಯೆಂದು ತಿಳಿಯಲು ಕೂಡ ಅವಕಾಶ ಸಿಗಲಿಲ್ಲ. ಇಷ್ಟೆಲ್ಲಾ ಹೊಡೆತಗಳ ನಡುವೆಯೂ ಜರುಗಿದ್ದು ಒಂದೇ ಒಂದು ಆಕಸ್ಮಿಕ: ಮಾಳಿಗೆಯ ಮೇಲೆ ಒಂದು ತುಣುಕಿನಷ್ಟು ಸಿಬುರೆದ್ದಿತ್ತು, ಅಷ್ಟೆ. ಅದೂ ಆಗುತ್ತಿರಲಿಲ್ಲವೇನೋ, ಆದರೆ ಏನಾಯಿತೆಂದರೆ ಆ ಭಾಗದ ಮಗ್ಗುಲಲ್ಲಿದ್ದ ಕಂಬಿಗಳು ಮಿಂಚಿನ ಕಾರಣದಿಂದಾಗಿ ಕಾರ್ಯನಿರತವಾಗಿದ್ದುವು. ತಗುಲಿದ್ದ ಮಿಂಚನ್ನೆಲ್ಲಾ ನೆಲಕ್ಕೆ ಸಾಗಿಸುವುದನ್ನು ಸತತವಾಗಿ ನೆರವೇರಿಸಬೇಕಾಗಿ ಬಂದಿದ್ದಿತಲ್ಲಾ, ಅದರಿಂದ ಜರುಗಿದ ಚಿಕ್ಕ ಆಕಸ್ಮಿಕ ಇದು, ಅಷ್ಟೆ. ಪ್ರಪಂಚ ಸೃಷ್ಟಿಯಾದಾಗಿನಿಂದ ಇಂತಹ ಘಟನೆ ಎಂದೂ ಸಂಭವಿಸಿದ್ದುದಿಲ್ಲ. ಒಂದು ಇಡೀ ದಿನ ಬೆಳಿಗ್ಗೆ ಮತ್ತು ರಾತ್ರಿ ನಮ್ಮ ಕುಟುಂಬದ ಯಾರೂ ಕಿಟಕಿಯಿಂದ ತಲೆ ಹೊರಹಾಕಲಿಲ್ಲ; ಆದರೂ ತಲೆಗಳೆಲ್ಲಾ ನುಣ್ಣಗಾಗಿಬಿಟ್ಟಿದ್ದವು. ಬಿಲಿಯರ್ಡ್ಸ್ ಆಟದ ಭಾರಿ ಗೋಲಿಗಳು ಅಷ್ಟು ನುಣುಪಾಗಿರಲಿಲ್ಲವೆನ್ನುತ್ತಾರೆ. ಕೂದಲೆಲ್ಲಾ ಹೇಗೆ ಮತ್ತು ಎಲ್ಲಿಗೆ ಹಾರಿಹೋಯಿತೋ ತಿಳಿಯಲೇ ಇಲ್ಲ. ಪ್ರಿಯ ಓದುಗರು ನಾನು ಹೇಳುವುದನ್ನು ನಂಬುವುದಾದರೆ ಹೇಳುತ್ತೇನೆ, ನಮ್ಮಲ್ಲಿ ಯಾರೊಬ್ಬರೂ ಹೊರ ಹೋಗುವ ಯೋಚನೆಯನ್ನೇ ಮಾಡುವಂತಿರಲಿಲ್ಲ. ಅಂತೂ ಕಡೆಗೆ ಮುತ್ತಿಗೆಯು ಮುಗಿಯಿತು; ಏಕೆಂದರೆ, ಮೇಲಿನ ಮೋಡಗಳಲ್ಲಿ ಕಿಂಚಿತ್ತು ವಿದ್ಯುತ್ತೂ ಉಳಿದಿರಲಿಲ್ಲ. ನನ್ನ ವಿದ್ಯುತ್ ನಿರೋಧಕ ಕಂಬಿಗಳ ಸನಿಹಕ್ಕೆ ಸುಳಿಯಲು ಹೇಗೂ ಅದಕ್ಕೆ ಸಾಧ್ಯವಾಗುತ್ತಿರಲಿಲ್ಲ, ಬಿಡಿ. ಅವುಗಳ ಹಸಿವಿಗೆ ಎಲ್ಲೆ ಎಲ್ಲಿತ್ತು! ಇಷ್ಟೆಲ್ಲಾ ಕಾಂಡಗಳು ಮುಕ್ತಾಯವಾದ ಮೇಲೆ ನಾನು ಮನೆಯ ಹೊರಕ್ಕೆ ಕಾಲು ಹಾಕಿದೆ. ಧೈರ್ಯವಿದ್ದ ಮೂರ್ನಾಲ್ಕು ಕೆಲಸಗಾರರನ್ನು ಹಿಡಿದು, ಮಾಳಿಗೆಯ ತುಂಬ ಹರಡಿಹೋಗಿದ್ದ ಆ ಭಯಾನಕ ಅಸ್ತ್ರಗಳನ್ನು ಅವರ ಸಹಾಯದಿಂದ ಕೀಳಿಸಿ ಹಾಕುವವರೆಗೆ ನಾವು ಯಾರೂ ಒಂದು ಅಗುಳು ಅನ್ನ ತಿನ್ನಲಿಲ್ಲ, ಒಮ್ಮೆಯಾದರೂ ರೆಪ್ಪೆ ಮುಚ್ಚಲಿಲ್ಲ. ಮೂರು ಕಂಬಿಗಳನ್ನು ಮಾತ್ರ ಹಾಗೆಯೇ ಉಳಿಸಿಕೊಂಡೆವು: ಮನೆಯ ಮೇಲೊಂದು, ಅಡಿಗೆಮನೆಯ



ಮೇಲೊಂದು, ಮತ್ತು ಕೊಟ್ಟಿಗೆಯ ಮೇಲೊಂದು. ಸದ್ಯ, ಅವೆಲ್ಲಾ ಈಗಲೂ ಮನೆಯ ಮೇಲೆ ಹಾಗೇ ನಿಂತಿವೆ. ಕಂಬಿಗಳ ಸಂತೆಯನ್ನು ನನ್ನ ಮನೆಯ ಮೇಲಿಂದ ಪಲ್ಲಟಗೊಳಿಸುವತನಕ – ನಾನು ಹೇಳುವುದನ್ನು ನಂಬಿ – ಯಾರೊಬ್ಬರೂ ನಮ್ಮ ಬೀದಿಯಲ್ಲಿ ಸುಳಿಯಲಿಲ್ಲ. ಹಾಗೆ ಮಾಡಲು ಧೈರ್ಯ ಎಲ್ಲಿಂದ ಬರಬೇಕು! ಕಂಬಿಗಳ ಭರ್ತ್ಸನೆಯಿಂದ ಎಲ್ಲಾ ತತ್ತರಿಸಿಹೋಗಿದ್ದರು. ಹಾಗೆಯೇ ಇನ್ನೊಂದು ಮಾತನ್ನು ಹೇಳಿಬಿಡುತ್ತೇನೆ: ಆ ಭಯಂಕರ ಕಾಲದಲ್ಲಿ ರಾಜಕೀಯ ಆರ್ಥಿಕತೆಯನ್ನು ಕುರಿತ ನನ್ನ ಪ್ರಬಂಧವನ್ನು ಮುಂದುವರಿಸಲಿಲ್ಲ. ಈಗಲಾದರೂ ಆ ಕೆಲಸವನ್ನು ಕೈಗೊಳ್ಳೋಣವೆಂದರೆ ನನ್ನ ನರಗಳು ಮತ್ತು ಮಿದುಳು ಇನ್ನೂ ಸಮಸ್ಥಿತಿಗೆ ಬಂದಿಲ್ಲ.

*(ನ್ಯೂಯಾರ್ಕಿನ 'ಮಂತ್ಲಿ ರಿವ್ಯೂ' ಇದನ್ನು ತನ್ನ ಮಾರ್ಚ್ ೨೦೦೫ರ ಸಂಚಿಕೆಯಲ್ಲಿ ಪ್ರಕಟಿಸಿತ್ತು.)*

ಮೂಲ : **ಮಾರ್ಕ್ ಟ್ವೇನ್**
ಕನ್ನಡಕ್ಕೆ : **ಡಾ|| ಜಿ. ಆರ್.**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಅಡ್ಡರಸ್ತೆ, ಕಾವೇರಿ ನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

# ಸಂಭೋಳಿ ಭೋ

**೧. ಹೊಲೆಯೆಂಬ ಹುಲುಬೀಜ**

ಬಿಳಿಯ ತೆಳು ಎಳೆಯೊಂದು ಹೊಯ್ದು ಹೊಲಿದಂತ
ಕಪ್ಪುರಾತ್ರಿಯ ನಾಲ್ಕನೆಯ ಜಾವದಲಿ
ಆಲಕ್ಕೆ ಜೋತ ಬಾವಲಿ ರೆಕ್ಕೆ ಪಟಪಟಿಸಿ
ನಿದ್ದೆಗೆ ಸಜ್ಜಾಗುವ ಹೊತ್ತು
ಕೂಸಿನ ನೆತ್ತಿ ನೆಲ ಹತ್ತಿ , ಸೂಲಗಿತ್ತಿ ಕವಳದ
ರಸ ನುಂಗಿ
ಮಣ್ಣ ಸೂರ್ಯನಂಥ ಹೆಣ್ಣು ಕೂಸೆಂದು
ಎತ್ತಿ ಮೊರಕ್ಕಿಟ್ಟಳು.

ಮೊರದಲ್ಲಿ ಮಾಸು ಸುತ್ತಿ ಮೈ ಒತ್ತಿ
ವಿಲಿವಿಲಿಯೆಂದು ತೆಗೆದ ಬಾಯೊಳಗೆ
ಇಳಿದ ಮಾಸಿನ ರಕುತವ ಚೀಪುತ್ತ
ಕೂಸು ತನ್ನ ಸುತ್ತಿದ ಬಸಿರಿನ ಜವೆ ಹರಿದು
ಕಣ್ಣೆವೆ ತೆಗೆದು ಬೆಳಕಿನ ಪುಲಕಕ್ಕೆ ಕುಲುಕುಲು ಅಂತು

ರಕುತ ಹಪ್ಪಳೆಗಟ್ಟಿ ಬಿರಿಬಿರಿ ಅಂದು
ಕೂಸು ಚಳಿ ಬಂದು ಚಿಳಿಚಿಳಿ ಬಿಕ್ಕಿತು
ಬಿಕ್ಕಳಿಕೆಗುಂಟ ಮಾಸಿನ ಕಸುರ ನುಂಗಿ
ಗಂಟಲುಬ್ಬಿ ಕಣ್ಣಾಲಿ ತೇಲಿತು

ಸೂಲಗಿತ್ತಿ ತೋರುಬೆರಳ ಕೊಕ್ಕೆಯ ಮಾಡಿ
ಗಂಟಲನಕ ನುಗ್ಗಿಸಿ ಕಪಕಪ ಅಂತ ಕಕ್ಕಿಸಿ
ಬೆನ್ನುನೀವಿ ಬಿಸಿನೀರ ಎರೆಯುತ್ತ
ಕಿವಿಯಲ್ಲುಸುರಿದಳು
'ತಾಯ ಕೈಗಿಂತ ನೀರ ಕೈ ದೊಡ್ಡದು ಮಗಾ'.

ಹೆಣ್ಣು ಕೂಸಿನ ಹೆರಿಗೆಯಲಿ ಸೂಲಗಿತ್ತಿಯ
ಉಡಿಗೆ ಸೊಗಸಿಲ್ಲ
'ಮನೆಗೊಂದು ಗಂಡು ಬರಲಿ, ಕೇಳಿದ್ದ ಕೊಡುವೆ'
ಬಿಳಿಗೋಡೆಯ ಮೇಲೆ ಬಿಳಿಬಣ್ಣದ ಬರಹ
ತಿಳಿಯದವರಿಲ್ಲ ಕಣಾ ಅದರ ನಡೆಯ
ನೆತ್ತರು ಬಸಿವ ತಾಯ ಕಣ್ಣಲ್ಲಿ ನೆತ್ತರ ಪಸೆ
'ಗಂಡು ಮಗನ ಕೊಡು ಶಿವನೆ, ಮತ್ತೊಮ್ಮೆ ಹಡೆವೆ
ಸಾವ ಸೂತಕವ ಹೊದ್ದು ನಡೆವೆ'

**೨. ಮುಳ್ಳ ಸಿದಿಗೆಯ ಮೈ ಕಂಟಿ**

ಕೂಸಿಗೀಗ ಒರಲೋ ಗಾಳಿಯ ಒಗತನ
ಕುಣುಬಿಯ ಜೋಲು ಮೊಲೆಗೂ ನೆತ್ತರಾಟ
ನಾಗೊಂದಿಗೆಯ ಅಕ್ಕಿ ಬೇಳೆಗಳೆಲ್ಲ
ಕೊತಕೊತ ಕುದ್ದು
ಮೆಂತೆ ಜೇರಿಗೆ ಅಂಟು ಶ್ಯಾವಿಗೆ ಇಲ್ಲ ಯಾವುದಕ್ಕೂ
ಹಾಲುಕ್ಕಿಸೋ ತಾಕತ್ತು
ಎಂಥ ಬರಾಕಸ್ತು ಈ ಕೂಸು 'ತಾಯಿದ್ದರೂ
ತಾಯ ಹಾಲಿಲ್ಲ'
ಓಡಿ ಬರುವಳು ಕುಣುಬಿ ಕಾಲ ಮೀಟುತ್ತ -
ನನ ಕಂದಾ ಎಂಥ ಬುದ್ಧಿಯೆ ನಿಂಗೆ
ಒಂದು ಕುಂಯ್ಕಿಲ್ಲ ಕುಸುಕಿಲ್ಲ
ಮಳೆಹನಿಯಂತೆ ಹೊರಸಿಳಿದು
ಹೊಸಿಲು ದಾಟಿತು ಕೂಸು
ಕಾಯಿ ಒಡೆದವರಿಲ್ಲ ಪೂಜೆ ಅಂದವರಿಲ್ಲ
ತಾ ದಾಟಿದ ಹೊಸಿಲಿಗೆ ತಾನೇ ನೀರು ನಿಡಿ ತೋರಿ
ರಂಗೋಲಿಯಿಟ್ಟಿತು ಕೂಸು
'ಬಳ್ಳಿಗಿಂತಲೂ ಕಂಟಿಯ ಬೇರು ಗನಗಟ್ಟಿ'

ಊರಾಂತ ಊರಿಗೇ ಗೊಂಬೆಯಂತಹ ಕೂಸು
ನೋಡಿದರೆ ಕಣ್ತಂಪು, ಕೇಳಿದರೆ ಕಿವಿಜುಮ್ಮು
ತುಟಿವಾರೆಯ ಒನಪಿನಲಿ ಕುಣಿವ ನಂದಿಕೋಲು

**೩. ಒಡಲ ಕಿಚ್ಚಿನ ಹೂ ಗಂಧ**

ಆ ಕೂಸಿಗೀಗ ದಶಾವತಾರ ಕಂಡಿರೇ ನೀವು
ನಿಮ್ಮ ಮನೆಯಂಗಳದಲಿ ಪೊರಕೆ ಹಿಡಿದು
ಅಡಿಗೆ ಮನೆ ಕುಕ್ಕರಿನ ಸದ್ದಿನ ಗುಂಟ
ಎತ್ತಲೋ ತೇಲುತ್ತ
ಖಾರದ ಕೈಯಲಿ ಕಣ್ಣ ನೀವುತ್ತ
ಯಾವುದೋ ಕಾಗದ ಫೈಲುಗಳಲಿ
ಸೊಂಡಿಲಿಯಂತೆ
ಇರಬಹುದು, ಗದ್ದೆ ಬದುವಿನಲಿ
ನಂಜು ತಿಂದ ಕಾಲುಗಳಲಿ
ಗಾರ್ಮೆಂಟ ಫ್ಯಾಕ್ಟರಿಯ ಉಬ್ಬಸದ ನಗೆಯಲ್ಲಿ
ಹತ್ತು ಮನೆ ಮುಸುರೆ ತಿಕ್ಕುವ ಆ ಕಾಯಕದಲ್ಲಿ



ಇರಬಹುದು ಇಲ್ಲೇ ನಿಮ್ಮ ಹಾದಿಯಲ್ಲೇ
ನಿಮ್ಮ ಮೈ ತಾಗಿ, ನಿಮ್ಮ ಮಗುವಿನ ತಾಯಾಗಿ
ಸದಾ ಓಡುತ್ತಾಳೆ ಮೀನಿನ ಬುಟ್ಟಿ ಹೊತ್ತವಳಂತೆ
ಮುಗ್ಗುವ ಮುಂಚೆ ಮುಟ್ಟಿಸುವ ಗರಜಿನಲಿ
ಹಾಳಿಕೊಟ್ಟೆಯಿಂದ ಹರಿವ ಹೆಣಜುನಾತದ ನೀರು
ಗಲ್ಲಕೆ ಎದೆಗೆ ನಿಧಾನ ಹೊಕ್ಕಳ ಸುಳಿಗೆ
ಇಳಿಇಳಿದರೂ ಎಂಥ ಪುಲಕವೂ ಇಲ್ಲದೆ

ಕೈಯಲ್ಲೊಂದು ಹಸಿದಂಟು ಹಿಡಿದು
ಕಾಗೆ ಓಡಿಸುವವಳಂತೆ
ಸಂಭೋಳಿ ಭೋ ಎಂಬ ಸದ್ದಿಲ್ಲದ ಗೌಜಿನಲಿ

ಕಾದಿದ್ದಾಳೆ, ನಾಳೆಯ ಸೂರ್ಯ ಹೊಸ ಹಸಿರ ಹೆರುವನೆಂದು
ಮಾವಿನ ಹೂ ಗಮಲು ಹರವುತ್ತ ಎಲ್ಲ ನಾತವ ನುಂಗುತ್ತದೆಂದು
ಒಳಹೊರಗು ಸುಟ್ಟು ಹುಡಿಯಾದ ಮಣ್ಣ
ತಳಾತಳದ ಚಿಗುರಿನಂತೆ
ಥೇಟ್, ಕುಣುಬಿಯ ಮಣಿಸರದ ಪಲುಕಿನಂತೆ.

ವಿನಯಾ
'ಸಮೃದ್ಧಿ', ನಂ. ೧೨೪, ಕೆ.ಐ.ಟಿ.ಬಿ. ಕಾಲೋನಿ
ಶ್ರೀನಗರ, ಧಾರವಾಡ - ೫೮೦ ೦೦೩



# ಕರ್ನಾಟಕದ ಶ್ರಮಜೀವಿ ವರ್ಗದ ಉಗಮ ಹಾಗೂ ವಿಕಾಸ

೧೮ನೇ ಶತಮಾನದಲ್ಲಿ ಕೈಗಾರಿಕಾ ಕ್ರಾಂತಿ ಇಂಗ್ಲೆಂಡಿನಲ್ಲಿ ಆರಂಭವಾಗಿ ೧೯ನೇ ಶತಮಾನದಲ್ಲಿ ಅದು ಉಚ್ಛ್ರಾಯ ಸ್ಥಿತಿ ಮುಟ್ಟಿತು. ಇಂಗ್ಲೆಂಡಿನಿಂದ ಅದು ಜಗತ್ತಿನ ವಿವಿಧ ದೇಶಗಳಿಗೆ ಹರಡಿತು. ಯಂತ್ರಗಳ ಬಳಕೆ ಆರಂಭವಾಗಿದ್ದುದರಿಂದ ಕುಶಲಕರ್ಮಿಗಳ ಸಾಧನ ಸಲಕರಣೆಗಳನ್ನು ಕೈಗಾರಿಕಾ ಕ್ರಾಂತಿ ಬದಲಾಯಿಸಿತು.

೧೯ನೇ ಶತಮಾನದ ಮಧ್ಯಭಾಗದಿಂದ ಭಾರತದಲ್ಲಿ ಆಧುನಿಕ ಎನ್ನಬಹುದಾದ ಕೈಗಾರಿಕೆಗಳು ಪ್ರಾರಂಭವಾದವು. ಭಾರತದಲ್ಲಿ ಉದ್ಯಮಗಳು ಸ್ಥಾಪನೆಯಾಗಬಾರದು ಎಂಬ ಸ್ಪಷ್ಟ ಉದ್ದೇಶಗಳನ್ನು ಗ್ರೇಟ್ ಬ್ರಿಟನ್ ಸರ್ಕಾರವು ಹೊಂದಿದ್ದರೂ ಕೂಡ ಕೃಷಿಯಾಧಾರಿತ ಕಚ್ಚಾ ವಸ್ತುಗಳನ್ನು ಕೈಗಾರಿಕೆಗಳಲ್ಲಿ ಉಪಯೋಗಿಸುವ ಉದ್ದೇಶಗಳನ್ನಂತೂ ಅದು ಹೊಂದಿತ್ತು. ಪ್ರಾರಂಭದಲ್ಲಿ ಕುಂಟುತ್ತಲೇ ಸಾಗಿದ ಭಾರತದ ವಸಾಹತುಶಾಹಿ ಕೈಗಾರಿಕಾ ಬೆಳವಣಿಗೆ ರೈಲು ಮಾರ್ಗ, ಸುಧಾರಿತ ಸಂಪರ್ಕ ಮತ್ತು ಅಂಚೆ ವ್ಯವಸ್ಥೆಯಿಂದಾಗಿ ಕಾಲಕ್ರಮೇಣ ಪ್ರಗತಿಯನ್ನು ಸಾಧಿಸಿತು. ಹಳೆಯ ಮೈಸೂರು ರಾಜ್ಯ – ಬಹಳ ಕಾಲದಿಂದಲೂ ಸಣ್ಣ ಪ್ರಮಾಣದಲ್ಲಿ ಉಪಯುಕ್ತವಾದ ಮತ್ತು ಉತ್ತಮವಾಗಿದ್ದ ಹಲವಾರು ಕೈಗಾರಿಕೆಗಳನ್ನು ಹೊಂದಿತ್ತು. ಈ ಸಣ್ಣ ಕೈಗಾರಿಕೆಗಳಲ್ಲಿ ತೊಡಗಿಸಿದ್ದ ಬಂಡವಾಳ ಅಲ್ಪ ಪ್ರಮಾಣದ್ದು ಹಾಗೂ ವಿದೇಶೀಯವಾದುದಾಗಿತ್ತು. ತಾಂತ್ರಿಕತೆ ಅಥವಾ ಸಂಘಟನೆಗಿಂತ ಸ್ಥಳೀಯ ಜನರಲ್ಲಿನ ನೈಪುಣ್ಯತೆಯು ಆರಂಭಕಾಲದ ಕೈಗಾರಿಕೆಗಳ ಬೆಳವಣಿಗೆಗೆ ಕಾರಣವಾಗಿತ್ತು. ನೈಸರ್ಗಿಕ ಸಂಪನ್ಮೂಲಗಳು ಮತ್ತು ಚಾರಿತ್ರಿಕ ಕಾರಣಗಳು ಸರಕುಗಳ ಉತ್ಪಾದನೆಯನ್ನು ಸ್ಥಳೀಯಗೊಳಿಸಿತ್ತು. ಸರಕುಗಳ ಮಾರುಕಟ್ಟೆಯು ದೇಶೀಯ ಮತ್ತು ಸ್ಥಳೀಯ ಗಡಿಗಳಿಗೆ ಸೀಮಿತವಾಗಿತ್ತು.

ಹಳೆಯ ಮೈಸೂರು ರಾಜ್ಯ – ಬಹಳ ಕಾಲದಿಂದಲೂ ಸಣ್ಣ ಪ್ರಮಾಣದಲ್ಲಿ ಉಪಯುಕ್ತವಾದ ಮತ್ತು ಉತ್ತಮವಾಗಿದ್ದ ಹಲವಾರು ಕೈಗಾರಿಕೆಗಳನ್ನು ಹೊಂದಿತ್ತು. ಈ ಸಣ್ಣ ಕೈಗಾರಿಕೆಗಳಲ್ಲಿ ತೊಡಗಿಸಿದ್ದ ಬಂಡವಾಳ ಅಲ್ಪ ಪ್ರಮಾಣದ್ದು ಹಾಗೂ ವಿದೇಶೀಯವಾದುದಾಗಿತ್ತು. ತಾಂತ್ರಿಕತೆ ಅಥವಾ ಸಂಘಟನೆಗಿಂತ ಸ್ಥಳೀಯ ಜನರಲ್ಲಿನ ನೈಪುಣ್ಯತೆಯು ಆರಂಭಕಾಲದ ಕೈಗಾರಿಕೆಗಳ ಬೆಳವಣಿಗೆಗೆ ಕಾರಣವಾಗಿತ್ತು. ನೈಸರ್ಗಿಕ ಸಂಪನ್ಮೂಲಗಳು ಮತ್ತು ಚಾರಿತ್ರಿಕ ಕಾರಣಗಳು ಸರಕುಗಳ ಉತ್ಪಾದನೆಯನ್ನು ಸ್ಥಳೀಯಗೊಳಿಸಿತ್ತು. ಸರಕುಗಳ ಮಾರುಕಟ್ಟೆಯು ದೇಶೀಯ ಮತ್ತು ಸ್ಥಳೀಯ ಗಡಿಗಳಿಗೆ ಸೀಮಿತವಾಗಿತ್ತು.

೧೮ನೇ ಶತಮಾನದ ಅಂತ್ಯದ ವೇಳೆಗೆ ಮೈಸೂರು ಪ್ರಾಂತ್ಯ ವ್ಯಾಪಾರ, ವಾಣಿಜ್ಯ ಮತ್ತು ಉತ್ಪಾದನಾ ರಂಗಗಳಲ್ಲಿ ಸಾಕಷ್ಟು ಮುಂದುವರಿದಿತ್ತು. ಇದು ಬುಕಾನನ್ ಮತ್ತು ಹೇಯ್ನ್‌ರಂತಹ ಪಾಶ್ಚಾತ್ಯ ವೀಕ್ಷಕರ ಗಮನವನ್ನು ಸೆಳೆದಿತ್ತು. ಇವರ ಬರಹಗಳಲ್ಲಿ ಅಂದಿನ ಕೈಗಾರಿಕೆಗಳ ವಿಷಯವನ್ನು ಪ್ರಸ್ತಾಪಿಸಲಾಗಿದೆ.

ವೈಟ್‌ಫೀಲ್ಡ್ ಹತ್ತಿರ ಸುಣ್ಣದ ಕಲ್ಲುಗಳನ್ನು ಸುಟ್ಟು ಬಿಳಿಸುಣ್ಣವನ್ನು ಸುಮಾರು ಹತ್ತು ಕುಟುಂಬಗಳು ತಯಾರಿಸುತ್ತಿದ್ದವು. ಇದಕ್ಕೆ ಕಲ್ಲಿದ್ದಲನ್ನು ಉರುವಲಾಗಿ ಬಳಸುತ್ತಿದ್ದರು. ಇದನ್ನು ಗಂಡಸರು ಅಗೆದು ತೆಗೆಯುತ್ತಿದ್ದರೆ ಹೆಂಗಸರು ಮನೆಗೆ ಸಾಗಿಸುತ್ತಿದ್ದರು. ಶ್ರೀರಂಗಪಟ್ಟಣದಲ್ಲಿನ ಕಲ್ಲುಗಣಿಯಲ್ಲಿ ಬೇಕಾದ ಆಕಾರಕ್ಕೆ ಕಲ್ಲು ದಿಮ್ಮಿಗಳನ್ನು ಕತ್ತರಿಸಿ ತೆಗೆಯುತ್ತಿದ್ದರು.

ಚನ್ನಪಟ್ಟಣದಲ್ಲಿ ಕಚ್ಚಾವಸ್ತುಗಳನ್ನು ಬಳಸಿ ಗಾಜನ್ನು ತಯಾರಿಸಿ, ಗಾಜಿನ ವಿವಿಧ ಉಪಕರಣಗಳು, ಗಾಜಿನ ಬಳೆಗಳು ಮತ್ತು ಬಾಟಲುಗಳನ್ನು ತಯಾರಿಸುತ್ತಿದ್ದರು. ಸಂಗೀತ ಉಪಕರಣಗಳ ತಂತಿಯನ್ನು ತಯಾರಿಸುವುದರಲ್ಲಿ ಚನ್ನಪಟ್ಟಣ ಹೆಸರು ಪಡೆದಿತ್ತು. ಇವುಗಳನ್ನು ದೇಶದ ನಾನಾ ಭಾಗಗಳಿಗೆ ಸರಬರಾಜು ಮಾಡುತ್ತಿದ್ದರು. ಲಿಂಗ ಬಣಜಿಗರ ಮನೆತನವೊಂದು ಉತ್ತಮವಾದ ಬಿಳಿ ಸಕ್ಕರೆಯನ್ನು ಅರಮನೆಯ ಉಪಯೋಗಕ್ಕಾಗಿ ಸಿದ್ಧಪಡಿಸುತ್ತಿದ್ದಿತು. ಇದರ ಉತ್ಪಾದನಾ ವಿಧಾನವನ್ನು ಇವರು ರಹಸ್ಯವಾಗಿಟ್ಟಿದ್ದರು.

ದೇಶದ ನಾನಾ ಭಾಗಗಳಲ್ಲಿ ಕಬ್ಬಿಣ ಕುಲುಮೆಗಳಿಂದ ಕಬ್ಬಿಣ ತಯಾರಿಸುತ್ತಿದ್ದರು. ಕಬ್ಬಿಣವನ್ನು ಭಾಗಶಃ ಕಪ್ಪು ಮರಳಿನಿಂದ ಮತ್ತು ಭಾಗಶಃ ಘಟಪ್ರಭದಲ್ಲಿ ದೊರೆಯುತ್ತಿದ್ದ ಅದಿರಿನಿಂದ ತಯಾರಿಸುತ್ತಿದ್ದರು. ಈ ಕಪ್ಪು ಮಣ್ಣು ಮಳೆಗಾಲದ ನಾಲ್ಕು ತಿಂಗಳಲ್ಲಿ ಕಾಣಸಿಕೊಳ್ಳುತ್ತಿತ್ತು. ಪ್ರವಾಹಭರಿತ ಕಾಲುವೆಗಳಲ್ಲಿ ದೇಶದ ನಾನಾ ಭಾಗಗಳಲ್ಲಿ ಈ ಅದಿರು ಕಂಡುಬರುತ್ತಿತ್ತು. ಕಬ್ಬಿಣವು ಮಧುಗಿರಿ, ಚನ್ನರಾಯನದುರ್ಗ, ಹಾಗಲವಾಡಿ, ದೇವರಾಯನದುರ್ಗ ಮುಂತಾದ ಕಡೆ ಮಳೆಯಕಾಲದ ಪ್ರವಾಹವು ತರುತ್ತಿದ್ದ ಕಪ್ಪು ಮರಳಿನಲ್ಲಿ ಅಥವಾ ಕಣೆ ಕಲ್ಲಿನ ಬಂಡೆಗಳಲ್ಲಿ ದೊರಕುತ್ತಿತ್ತು. ಇಲ್ಲಿ ತಯಾರಿಸುತ್ತಿದ್ದ ಕಬ್ಬಿಣವನ್ನೆಲ್ಲ ರಫ್ತುಮಾಡುತ್ತಿದ್ದರು. ಕೆಲಸಗಾರರು ಮೊದಲೇ ವರ್ತಕರಿಂದ ಮುಂಗಡ ಪಡೆದು ಕಬ್ಬಿಣವನ್ನು ಸರಬರಾಜು ಮಾಡುತ್ತಿದ್ದರು. ಈ ಉಕ್ಕಿನಿಂದ ಕಲ್ಲುಕುಟಿಗರ ಉಳಿಗಳು, ಕತ್ತಿಗಳು, ಚಾಕುಗಳು



ಡಾ॥ ಸಿದ್ದಲಿಂಗ ಸ್ವಾಮಿ

ಹಾಗೂ ಸಂಗೀತವಾದ್ಯಗಳ ತಂತಿಗಳನ್ನು ತಯಾರಿಸುತ್ತಿದ್ದರು. ಎಲ್ಲೆಲ್ಲಿ ಉದ್ದಿಮೆಗಳು ಪರಿಣಾಮಕಾರಿಯಾಗಿದ್ದವೊ ಹಾಗೂ ಶ್ರಮದ ವೆಚ್ಚವು ವಸ್ತುವಿನಲ್ಲಿ ಅಧಿಕವಾಗಿತ್ತೋ ಅಲ್ಲಿ ದೇಶೀಯ ಕೈಗಾರಿಕೆಗಳು ತಮ್ಮ ಸ್ಥಾನ ಹಾಗೂ ಅಸ್ತಿತ್ವ ಕಾಯ್ದುಕೊಂಡಿದ್ದವು.

**ಅವನತಿಯ ಹಾದಿಯಲ್ಲಿ**

ಬ್ರಿಟಿಷರ ಆಳ್ವಿಕೆಯು ಅದರ ಪರಕೀಯ ತಾತ್ವಿಕ ನೆಲೆಗಟ್ಟಿನಿಂದ ಮತ್ತು ಉನ್ನತ ಆರ್ಥಿಕತೆಯ ಸ್ವರೂಪದ ಪ್ರಾತಿನಿಧ್ಯದಿಂದ ಹಳೆಯ ಸಾಮಾಜಿಕ ಮತ್ತು ಆರ್ಥಿಕ ಬುನಾದಿಯನ್ನು ಹಾಳುಗೆಡೆಸಿತು. ಅದು ಯಾವುದೇ ಹೊಸದೊಂದು ಕ್ರಮದೊಂದಿಗೆ ಬದಲಾಯಿಸದೆಯೇ ರಾಷ್ಟ್ರದ ವಿದೇಶಿ ವ್ಯಾಪಾರವನ್ನು ಏಕಸ್ವಾಮ್ಯಗೊಳಿಸುವ ಮುಖೇನ, ವಸಾಹತುಶಾಹಿಗಳು ಸ್ಥಳೀಯ ಕೈಗಾರಿಕೆಗಳನ್ನು ಅವುಗಳ ಸಾಂಪ್ರದಾಯಿಕ ಬಾಹ್ಯ ಮಾರುಕಟ್ಟೆಗಳಿಂದ ವಂಚಿಸಿದರು. ಹಾಗಾಗಿ, ವಸಾಹತುಶಾಹಿಯು ಕೃಷಿ ಮತ್ತು ಕುಶಲಕಲೆಗಳ ನಡುವಿನ ವಿವಿಧ ಸಮುದಾಯಗಳ ನಡುವೆ ಇದ್ದ ಬಾಂಧವ್ಯವನ್ನು ನಾಶಮಾಡಿತು. ಅಗ್ಗದ ಬೆಲೆಯ ಕೈಗಾರಿಕಾ ವಸ್ತುಗಳನ್ನು ದೇಶೀಯ ಮಾರುಕಟ್ಟೆಯಲ್ಲಿ ಆಮದು ಮಾಡುವ ಮೂಲಕ ಮತ್ತು ಸ್ಥಳೀಯ ಕೈಗಾರಿಕೆಗಳ ಮೇಲೆ ದುಬಾರಿ ತೆರಿಗೆ ವಿಧಿಸುವ ಮೂಲಕ ಹಳ್ಳಿ ಪಟ್ಟಣಗಳಲ್ಲಿ ನೆಲೆಯಾಗಿದ್ದ ಕರಕುಶಲ ಕೈಗಾರಿಕೆಗಳ ನಾಶವನ್ನು ಉಲ್ಬಣಗೊಳಿಸಿತು.

ಬ್ರಿಟಿಷ್ ಸರ್ಕಾರದ ಮುಕ್ತ ವ್ಯಾಪಾರ ನೀತಿ ಕುಶಲಕರ್ಮಿಯನ್ನು ಅನಾನುಕೂಲತೆಯತ್ತ ತಳ್ಳತೊಡಗಿತು. ಅದು ಅವರ ವಂಶಪಾರಂಪರ್ಯದ ಕುಲಕಸುಬುಗಳನ್ನು ಬಿಟ್ಟು ಕೃಷಿ ಅವಲಂಬಿತರಾಗುವಂತೆ **ಅವರ ವೃತ್ತಿವ್ಯಾಪಾರದಿಂದ ಕುಂಠಿತಗೊಳ್ಳುತ್ತಿದ್ದ ಅತ್ಯಮೂಲ್ಯ ಗಳಿಕೆಯನ್ನು ಬಿಟ್ಟುಕೊಟ್ಟು ಭೂಮಿಯಿಂದ ದೊರಕುವ ಕನಿಷ್ಠ ಜೀವನಾಂಶದ ಮೇಲೆ ಬದುಕುವಂತೆ ಮಾಡತೊಡಗಿತು. ಅಲ್ಲದೇ, ವಿದೇಶಿ ಪೈಪೋಟಿಯನ್ನು ತಾಳಲಾರದೆ ಕುಶಲಕರ್ಮಿಗಳು ಕೃಷಿ ಅವಲಂಬಿತರಾಗಬೇಕಾಯಿತು.**

ಐತಿಹಾಸಿಕ ಮಾಹಿತಿಯ ಪ್ರಕಾರ ವಿದೇಶಿ ವಸ್ತುಗಳನ್ನು ತೆರಿಗೆ ಮುಕ್ತಗೊಳಿಸಿ ಸ್ಥಳೀಯ ಮಾರುಕಟ್ಟೆಗಳೊಳಗೆ ಪ್ರವೇಶಿಸಲು ಅನುಮತಿಸಿದಂದಿನಿಂದ ಗೃಹ ಕೈಗಾರಿಕೋತ್ಪನ್ನಗಳು ಮಾಯವಾಗತೊಡಗಿ ಅವುಗಳ ಜಾಗದಲ್ಲಿ ವಿದೇಶಿ ವಸ್ತುಗಳು ತುಂಬಿಕೊಳ್ಳತೊಡಗಿದವು ಮತ್ತು ಕುಶಲಕರ್ಮಿಗಳ ಸಂಖ್ಯೆ ಕ್ಷೀಣಿಸುತ್ತಾ ಕೃ ಜನಸಂಖ್ಯೆ ಗಣನೀಯ ಏರಿಕೆ ತೋರುವ ಪ್ರವೃತ್ತಿ ಪ್ರಕಟಗೊಳ್ಳತೊಡ ಕುಶಲಕರ್ಮಿ ತನಗರಿವಿಲ್ಲದಂತೆಯೇ ತನ್ನ ಹೊಟ್ಟೆಯ ಮೇಲೆ ಹೊಡೆಸಿಕೊಂ ವನಾಗಿ ಮತ್ತು ಪೈಪೋಟಿ ತಡೆಯಲು ಅಸಮರ್ಥನಾಗಿ ತನ್ನ ಅಲ್ಪ ಬಂಡವಾಳ ತೆಗೆದು ಕೃಷಿ ಮೂಲದ ಚಟುವಟಿಕೆಗಳಲ್ಲಿ ಹೂಡಲು ತೊಡಗಿದನು.

ಅವನತಿಗೊಂಡ ಹಲವಾರು ಕೈಗಾರಿಕೆಗಳಲ್ಲಿ ಕೈನೂಲುವಿಕೆ, ಲೋ ಕೈಗಾರಿಕೆಗಳು, ಚಿನ್ನದ ಜರತಾರಿ, ಕಾಗದ ತಯಾರಿಕೆ, ಗಾಜಿನ ಬಳೆ ತಯಾರಿ ಮತ್ತು ತಂತಿ ಉತ್ಪಾದನಾ ಉದ್ದಿಮೆಗಳು ಮುಖ್ಯವಾದವುಗಳು. ದೂರಸಂ ಮಾಧ್ಯಮಗಳು ಅಭಿವೃದ್ಧಿಗೊಂಡು ತತ್ಪರಿಣಾಮವಾಗಿ ಯೂರೋಪಿನೊ ಸಂಪರ್ಕ ಏರ್ಪಡುತ್ತಿದ್ದ ಅದೇ ಸಂದರ್ಭದಲ್ಲಿ ಬಹುತೇಕ ಸ್ವದೇಶಿ ಉದ್ದಿಮೆ ಅವನತಿಯತ್ತ ಹೊರಳುತ್ತಿದ್ದುದಕ್ಕೆ ಗ್ರಾಮೀಣ ಆರ್ಥಿಕ ಜೀವನ ಅ ಗೊಂಡುದರ ಪರಿಣಾಮ ಎಂದು ಕಾರಣ ನೀಡಲಾಗಿದೆ. ಆದಾಗ್ಯೂ ಅಂತಹ ಬ ಸಾರ್ವತ್ರಿಕ ಅಂಶವೊಂದೇ ಅಲ್ಲದೆ ಪ್ರತಿ ಉದ್ದಿಮೆಯೂ ಕೆಲವು ವಿಶೇಷ ಕಾ ಗಳಿಂದಾಗಿ ಕೃಶಿಸುತ್ತಿದ್ದವು.

ಕೈಯಿಂದ ನೂಲು ತೆಗೆಯುವ ಉದ್ದಿಮೆ ಮೈಸೂರು ಪ್ರಾಂತ್ಯದ ಅತಿ ವ ಉದ್ದಿಮೆಗಳಲ್ಲೊಂದಾಗಿತ್ತು. ಭಾರತದಲ್ಲಿ ಹತ್ತಿ ಗಿರಣಿಗಳು ಉಗಮಗೊ ವರೆಗೂ ಉತ್ಪಾದನಾ ಗಾತ್ರ ಮತ್ತು ಮೌಲ್ಯಗಳ ದೃಷ್ಟಿಯಿಂದ ಮತ್ತು ಉದ್ದಿಮೆಯಲ್ಲಿ ತೊಡಗಿದ್ದ ಜನಸಂಖ್ಯೆಯನ್ನು ಗಣನೆಗೆ ತೆಗೆದುಕೊ ನಿರ್ಧರಿಸುವುದಾದರೆ ಕೈನೂಲು ತಯಾರಿಕಾ ಉದ್ದಿಮೆ ಅತ್ಯಮೂಲ್ಯ ಪ್ರಾಮು ಪಡೆದಿತ್ತು. ಮಾರುಕಟ್ಟೆಯಲ್ಲಿ ಗಿರಣಿಯಿಂದ ಉತ್ಪಾದಿತ ನೂಲಿನ ಆಗಮನ ಅದು ಗಂಭೀರ ಹಿನ್ನಡೆ ಅನುಭವಿಸಿತು. ಕೈಮಗ್ಗ ನೇಕಾರರು ಎಂದಿನಿಂದ ನೂಲನ್ನು ಉದಾತ್ತವಾಗಿ ನೋಡತೊಡಗಿದರೋ ಅಂದಿನಿಂದ ಗುಡಿ ಕೈ ಯಂತಿದ್ದ ಕೈನೂಲುವಿಕೆ ಉದ್ದಿಮೆ ಮಾಯವಾಗತೊಡಗಿತು. ಕೃಷಿಕ ವರ್ಗದವರಿ ಉದ್ದಿಮೆ ಒಂದು ಉಪಯುಕ್ತ ಉಪಕಸುಬಾಗಿ ಹೊಂದಿಕೊಂಡಿತ್ತು.

ಲೋಹದ ಉದ್ಯಮಗಳಲ್ಲಿ ಕಬ್ಬಿಣದ ಕೈಗಾರಿಕೆ ಪ್ರಧಾನ ಉದ್ಯಮವಾಗಿತ್ತು. ಬ್ಬಿಣದ ಅದಿರು ಕರಗಿಸುವ ಸ್ಥಳಗಳ ಪೈಕಿ, ಮಾಗಡಿ, ಚಿಕ್ಕನಾಯಕನಹಳ್ಳಿ, ಳವಳ್ಳಿ, ಹೆಗ್ಗಡದೇವನಕೋಟೆ ಮತ್ತು ಕಡೂರು, ಶಿವಮೊಗ್ಗ ಮತ್ತು ಚಿತ್ರದುರ್ಗ ಲ್ಲೆಗಳ ಹಲವಾರು ವಿಭಾಗಗಳು ಪ್ರಮುಖವಾದವುಗಳಾಗಿದ್ದವು. ಪ್ರಚಲಿತವಿದ್ದ ಧಿ-ವಿಧಾನಗಳು ಬಹಳ ಪ್ರಾಚೀನವಾದವುಗಳಾಗಿದ್ದವು. ೧೮೭೦ರಲ್ಲಿ ಉಕ್ಕಿನ ತ್ಪಾದನೆಯೂ ಸಹ ಅವರಿಗೆ ಗೊತ್ತಿರಲಿಲ್ಲ. ಮೈಸೂರಿನ ಕಬ್ಬಿಣ ಕಾರ್ಯಗಾರ ಜ್ಯದ ಬಹುತೇಕ ಬೇಡಿಕೆಯನ್ನು ಪೂರೈಸುತ್ತಿತ್ತು.

ಕಂಚಿನ ಅಚ್ಚುಹಾಕುವುದು ಮತ್ತು ಉಕ್ಕಿನ ಲೋಹ ಉದ್ಯೋಗವನ್ನು ಮಾಗಡಿ, ಲಮಂಗಲ ಮತ್ತು ಶ್ರವಣಬೆಳಗೊಳಗಳಲ್ಲಿ ನಡೆಸಲಾಗುತ್ತಿತ್ತು. ದೀಪಸ್ತಂಭಗಳು ತ್ತು ಸುಂದರವಾದ ನಿತ್ಯೋಪಯೋಗಿ ಸಲಕರಣೆಗಳನ್ನು ಈ ಸ್ಥಳಗಳಲ್ಲಿ ಯಾರಿಸಲಾಗುತ್ತಿತ್ತು. ಸ್ಥಳೀಯ ಬಹುತೇಕ ಬೇಡಿಕೆ ಈ ಉದ್ದಿಮೆಗಳನ್ನು ಲಹುತ್ತಿತ್ತು. ಆದರೆ ಈ ಉದ್ದಿಮೆಗಳು ೧೯೧೪ರ ಹೊತ್ತಿಗೆ ಕ್ಷೀಣಿಸಿದ ಹಂತ ಲುಪಿದ್ದವು. ದೇಶದ ತುಂಬ ಅಲ್ಯೂಮಿನಿಯಂ ಮತ್ತು ಹೊಳಪುಲೇಪಿತ ಕುಗಳಂತಹ ಅತಿ ಕಡಿಮೆ ಬೆಲೆಯ ಬದಲಿ ವಸ್ತುಗಳ ಮಹಾಪೂರವೇ ರಿದುಬಂದುದರ ಪ್ರಯುಕ್ತ ಕಲಾತ್ಮಕ ಲೋಹದ ಉದ್ಯಮ ಕ್ಷೀಣಗೊಂಡಿತ್ತು.

ಸುಮಾರು ೧೮೭೦ರ ವರೆಗೆ ಬೆಂಗಳೂರಿನಲ್ಲಿ ಚಿನ್ನದ ಜರತಾರಿ ತಯಾರಿಕಾ ದ್ದಿಮೆ ನಡೆದುಕೊಂಡು ಬರುತ್ತಿತ್ತು. ಬೆಂಗಳೂರು ಜಿಲ್ಲೆಯಲ್ಲಿ ನೆಲೆಸಿದ್ದ ಗೆಯವರು ಎಂಬ ಒಂದು ಜಾತಿಯ ಜನರಿಗೆ ಮಾತ್ರ ಈ ಕಸುಬು ಗೊತ್ತಿತ್ತು. ತ್ಪಾದನೆ ಪ್ರಕ್ರಿಯೆಗೆ ಅತ್ಯಂತ ನಾಜೂಕಿನ ನೈಪುಣ್ಯತೆಯ ಅವಶ್ಯಕತೆಯಿತ್ತು. ನ್ಸ್‌ನಿಂದ ಚಿನ್ನದ ಜರತಾರಿ ಆಮದಿನೊಂದಿಗೆ ಈ ಉದ್ದಿಮೆಯೂ ೧೮೭೦ರ ಳಿಗೆ ಮಾಯವಾಗತೊಡಗಿತು. ಮೈಸೂರಿನಲ್ಲಿ ಕಾಗದ ಉತ್ಪಾದನೆಯನ್ನು ಸಹ ಯುತ್ತಿಸಲಾಗಿತ್ತು ಎಂಬ ವಿಷಯ ಆಸಕ್ತಿ ಹುಟ್ಟಿಸುವಂಥದ್ದಾಗಿದೆ. ಚೆಲುವೆ ಮಾಡಲು ಕಾದ ಸೋಡ ಮತ್ತು ಸುಣ್ಣದ ಲಭ್ಯತೆ ಸಮೀಪದಲ್ಲಿದ್ದುದರ ಪ್ರಯುಕ್ತ ಈ ಉದ್ದಿಮೆ ೀಯವಾಗಿ ನೆಲೆಗೊಳ್ಳಲು ಪ್ರಭಾವ ಬೀರಿರಬಹುದು.

ಚಿತ್ರದುರ್ಗ ಜಿಲ್ಲೆಯಲ್ಲಿ ಗಾಜಿನ ಬಳೆಗಳನ್ನು ತಯಾರಿಸಲಾಗುತ್ತಿತ್ತು. ಅಗ್ಗವಾದ ೇಶಿ ವಸ್ತುಗಳ ಆಮದು ಪ್ರಾರಂಭಗೊಂಡಿದ್ದರಿಂದ ಈ ಉದ್ದಿಮೆಗಳು ಣೆಯಾಗತೊಡಗಿದುವು. ತಂತಿ ತಯಾರಿಸುವ ಉದ್ದಿಮೆ ಪಕ್ವವಾದ ಪ್ರಾಚೀನತೆ ಂದಿತ್ತು. ವೈಭವಯುತ ಮೈಸೂರು, ಸಂಗೀತೋಪಕರಣಗಳ ತಂತಿ ತಯಾರಿಕೆಗೆ ಹಳ ಪ್ರಸಿದ್ಧಿಯಾಗಿತ್ತು. ಈ ತಂತಿಗಳ ಉತ್ಪಾದನೆಯಲ್ಲಿ ಸ್ಥಳೀಯವಾಗಿ ತಯಾರಿಸಿದ ತ್ಕೃಷ್ಟ ಉಕ್ಕಿನ ಬಳಕೆ ಮಾಡಲಾಗುತ್ತಿತ್ತು. ಸ್ಥಳೀಯ ಕಬ್ಬಿಣ ಮತ್ತು ಉಕ್ಕಿನ ಯಾರಿಕೆಗಳ ಅವನತಿಯೊಂದಿಗೆ ಈ ಉದ್ದಿಮೆ ವಿನಾಶ ಅನುಭವಿಸಿತು. ೧೯ನೇ ಮಾನದ ಮಧ್ಯಭಾಗದಲ್ಲಿ ಬ್ರಿಟಿಷ್ ವಸಾಹತುಶಾಹಿಗಳಿಂದ ವೈಭವಯುತ ಮೈಸೂರಿನ ಶೋಷಣೆಯಲ್ಲಿ ಹೊಸ ಆಕಾರಗಳು ಗೋಚರಗೊಳ್ಳತೊಡಗಿದುವು. ಈ ಹಿಂದಿನ ಅವಧಿಯಲ್ಲಿ ಒಂದು ನಮೂನೆಯ ವಸಾಹತುಶಾಹಿ ಸುಲಿಗೆಯ ಹಳೆಯ ಮಾದರಿಗಳನ್ನುಳಿಸಿಕೊಂಡು, ಹೊಸ ಪರಿಸ್ಥಿತಿಯಲ್ಲಿ ವಸಾಹತಿನ ಶೋಷಣೆಗೆ ಮೂಲಾಧಾರ ಕ್ರಮೇಣ ಬ್ರಿಟಿಷ್ ಬಂಡವಾಳ ಹೂಡಿಕೆಯತ್ತ ಹೊರಳಿತು. ಈ ಹೊಸ ವಿಧಾನಗಳಿಂದ ಮೈಸೂರನ್ನು ಶೋಷಣೆ ಮಾಡಲು ಸಾಧ್ಯವಾಯಿತು. ಏಕೆಂದರೆ ಮೈಸೂರು ಪ್ರಾಂತ್ಯವನ್ನು ಈಗಾಗಲೇ ಜಾಗತಿಕ ಬಂಡವಾಳ ಆರ್ಥಿಕತೆಯೊಳಕ್ಕೆ ಸೆಳೆಯಲಾಗಿತ್ತು ಮತ್ತು ಕೈಗಾರಿಕಾ ಅಭಿವೃದ್ಧಿಗೆ ಬೇಕಾದ ಪ್ರಾಥಮಿಕ ಸನ್ನಿವೇಶಗಳು ಆಗಲೇ ಅಸ್ತಿತ್ವದಲ್ಲಿದ್ದವು. ಬಂಡವಾಳಶಾಹಿ ಪದ್ಧತಿಯನ್ನು ಬೆಳೆಸಿದಂತಹ ಉತ್ಪಾದನಾ ಕಲಾ ಕೌಶಲ್ಯವನ್ನು ಕೈಗಾರಿಕಾ ಕ್ರಾಂತಿ ಎಂಬುದಾಗಿ ಬಣ್ಣಿಸಲಾಗಿದೆ. ಕೃಷಿಯಾಧಾರಿತ ಕಚ್ಚಾವಸ್ತುಗಳನ್ನು ದೊರಕಿಸಿಕೊಡುವ ಒಳನಾಡು ಪ್ರದೇಶವನ್ನು ಹೊಂದಿರುವ ರೇವು ಪಟ್ಟಣ ಮತ್ತು ರೈಲು ಮಾರ್ಗದ ಅನುಕೂಲತೆಯನ್ನು ಹೊಂದಿರುವ ಸ್ಥಳಗಳು ಕೈಗಾರಿಕಾ ಬೆಳವಣಿಗೆಯ ತಾಣಗಳಾದವು.

ಆದುದರಿಂದ, ಮೈಸೂರಿನ ಸ್ವದೇಶಿ ಉದ್ದಿಮೆಗಳು ನಶಿಸತೊಡಗಿದವು. ಹೊಸ ಆವಿಷ್ಕಾರಗಳು ಪುರಾತನ ಉತ್ಪಾದನಾ ವಿಧಾನಗಳನ್ನು ಬದಲಿಸಿ ಹೊಸ ಉದ್ದಿಮೆಗಳ ಉಗಮಕ್ಕೆ ನಾಂದಿ ಹಾಡಿದವು. ಯಂತ್ರಗಳ ಅಳವಡಿಕೆಗೆ ವ್ಯಾಪಕ ಕೈಗಾರಿಕಾ ಸಂಸ್ಥೆಗಳ ಅವಶ್ಯಕತೆಯಿತ್ತು. ತತ್ಪರಿಣಾಮವಾಗಿ, ನೂತನ ಗಿರಣಿ ಮತ್ತು ಆಧುನಿಕ ಕೈಗಾರಿಕೆಗಳ ಉಗಮವಾಯಿತು. ಕಾರ್ಮಿಕರು ತಮ್ಮ ಮನೆಗಳಲ್ಲೇ ಉಳಿದು ಮಾಡುವಂತಹ ಕಾರ್ಯಗಳಲ್ಲಿ ಯಾವುದೇ ಅನುಕೂಲತೆಗಳಿರಲಿಲ್ಲ. ಸಾವಿರಾರು ಕಾರ್ಮಿಕರನ್ನು ಅತಿ ದೊಡ್ಡ ಕೈಗಾರಿಕೆಗಳಲ್ಲಿ ದುಡಿಸಲು ಸೇರಿಸಿ





ಕೊಳ್ಳಲಾಯಿತು. ಆದುದರಿಂದ ಯಂತ್ರಯುಗದಲ್ಲಿ, ದೊಡ್ಡ ಕೈಗಾರಿಕೆಗಳಲ್ಲಿ ತಯಾರಾದ ದೊಡ್ಡ ರೂಪದ ಗ್ರಾಹಕ ವಸ್ತುಗಳು ಅಗ್ಗದ ದರದಲ್ಲಿ ಮಾರಾಟಗೊಳ್ಳತೊಡಗಿದವು. ಮಾರುಕಟ್ಟೆಯಲ್ಲಿ ಕಡಿಮೆ ದರದಲ್ಲಿ ಆದರೆ ವ್ಯಾಪಕ ಶ್ರೇಣಿಯಲ್ಲಿ ಹೊಸ ಬಂಡವಾಳಶಾಹಿ ಗ್ರಾಹಕ ವಸ್ತುಗಳ ಪ್ರಸರಣವು ಹೊಸ ರೈಲು ಮತ್ತು ಉಗಿಬಂಡಿಗಳ ಆವಿಷ್ಕಾರದಿಂದ ಸುಗಮಗೊಂಡಿತು. ನಂತರ ಯಾಂತ್ರಿಕ ಉತ್ಪಾದನೆ ವಿದ್ಯುಚ್ಛಕ್ತಿ ಪ್ರವೇಶದೊಂದಿಗೆ ಮತ್ತಿಷ್ಟು ಅಭಿವೃದ್ಧಿಗೊಂಡಿತು.

ಕೈಗಾರಿಕೆ ಉತ್ಪಾದನೆಯಲ್ಲಿನ ಯಾವುದೇ ಅನುರೂಪವಾದ ಹೆಚ್ಚಳವಿಲ್ಲದ ಈ ವಿನಾಶ ರಾಷ್ಟ್ರದ ಆರ್ಥಿಕ ಅಭಿವೃದ್ಧಿಗೆ ಅತಿ ಮುಖ್ಯವಾಗಿ ಪೂರಕವಾಗಿ ರೂಪಗೊಂಡ ಗ್ರಾಮೀಣ ಜನಸಂಖ್ಯಾ ಸ್ಫೋಟಕ್ಕೆ ಅಡಿಪಾಯ ಹಾಕಿತು. ಸಣ್ಣ ಗಾತ್ರದ ಚದುರಿದ ಉತ್ಪಾದನೆ ವ್ಯಾಪಕಶ್ರೇಣಿ ಉತ್ಪಾದನೆಯ ಅವಶ್ಯಕತೆಯೊಂದಿಗೆ ಹೊಂದಿಕೊಳ್ಳಲಾರದ ವೈರುಧ್ಯಕ್ಕೆ ಒಳಗೊಂಡಿತು.

ಈ ರೀತಿಯ ಪುರಾತನ ಉತ್ಪಾದನಾ ವಿಧಾನಗಳ ವಿನಾಶವು ಕಾರ್ಮಿಕ ಸಂಘಟನೆಯ ಹೊಸ ಹೊಸ ರೀತಿಗಳನ್ನು ಬೆಳಕಿಗೆ ತಂದಿತು, ಉತ್ಪಾದನಾ ಪಡೆಗಳ ಅಭಿವೃದ್ಧಿಗೆ ಪ್ರೋತ್ಸಾಹ ದಾಯಕವಾಯಿತು ಮತ್ತು ಉತ್ಪಾದನೆಯ ತಾಂತ್ರಿಕ ನೆಲೆಗಟ್ಟನ್ನು ಸಹ ಬದಲಾಯಿಸಿತು. ಈ ಸಂಗತಿಯಲ್ಲಿ, ವರ್ತಕ ಬಂಡವಾಳದಿಂದ ಕೈಗಾರಿಕಾ ಅಂತಸ್ತಿಗೆ ಆಗುವ ಸ್ಥಿತ್ಯಂತರ, ಉತ್ಪಾದಕನ ಒಡೆತನ ಕಸಿದುಕೊಂಡು ಅವನನ್ನು ಕೂಲಿ ಕಾರ್ಮಿಕನನ್ನಾಗಿ ಮಾರ್ಪಾಡುಗೊಳಿಸುತ್ತದೆ. ಆದಾಗ್ಯೂ, ಪುರಾತನ ಉತ್ಪಾದನಾ ರೀತಿಯ ಮೂಲಭೂತ ಪರಿವರ್ತನೆಗೆ ಸುದೀರ್ಘ ಕಾಲದ ತಯಾರಿ ಬೇಕಾಗುತ್ತದೆ. ಹಲವೊಮ್ಮೆ, ಹೊಸ ಗುಣಮಟ್ಟದ ಮೂಲಭೂತ ಪರಿವರ್ತನೆಗೆ ಬೇಕಾದ ಸನ್ನಿವೇಶಗಳ ಪಕ್ವತೆಯು ಬೆಳೆಯು ತ್ತಿರುವ ಮಾರುಕಟ್ಟೆಯ ಅವಶ್ಯಕತೆಯೊಂದಿಗೆ ಸರಿಸಾಟಿಯಾಗಲಾರದು. ಆ ರೀತಿಯ ಕರಕುಶಲ ಉದ್ದಿಮೆಯಲ್ಲಿ ಬಂಡವಾಳ ಶಾಹಿತ್ವದ ಅಭಿವೃದ್ಧಿ, ಭಾರತದ ಸನ್ನಿವೇಶಕ್ಕೆ ಸರಿಹೊಂದಲಿಲ್ಲ.



ಕರ್ನಾಟಕದಲ್ಲಿನ ಕೈಗಾರಿಕಾಭಿವೃದ್ಧಿ, ಸಮತೋಲನವಿಲ್ಲದ ಕುಂಠಿತಗೊಂಡ ಹಾಗೂ ಮಂದಗತಿಯ ಲಕ್ಷಣ ಹೊಂದಿತ್ತು. ಇದು ಏಕೆಂದರೆ, ಭಾರತೀಯ ಕೈಗಾರಿಕೆ ಬಂದು ತಡವಾಗಿ, ಅಂದರೆ ಯೂರೋಪ್ ಮತ್ತು ಇತರೆ ರಾಷ್ಟ್ರಗಳಲ್ಲಿ ಪ್ರಾರಂಭಗೊಂಡ ದೀರ್ಘಕಾಲದ ನಂತರ ಪ್ರಾರಂಭವಾದದ್ದಾಗಿತ್ತು. ಹೆಚ್ಚಾಗಿ, ನಗರ ಪ್ರದೇಶಗಳಲ್ಲಿನ ಕೈಗಾರಿಕೆಗಳಲ್ಲಿ ಆಸಕ್ತಿಯುಳ್ಳ ಭಾರತದಲ್ಲಿದ್ದ ಬ್ರಿಟಿಷ್ ವಸಾಹತುಶಾಹಿ ಅಧಿಕಾರಿಗಳ ನೀತಿ ... ತಂತ್ರಗಳು ಕೈಗಾರಿಕೀಕರಣದತ್ತ ಮಾಡಿದ ಪ್ರ... ಗಳಿಗೆ ಅಡಚಣೆಯೊಡ್ಡುತ್ತಿದ್ದವು. ಭಾರತದ... ಬ್ರಿಟಿಷ್ ಸರ್ಕಾರವು ಹೀಗಾಗಿ, ಹೊಸ... ಉಗಮಗೊಂಡ ಭಾರತೀಯ ಕೈಗಾರಿಕೆ... ಉನ್ನತಮಟ್ಟದ ರಕ್ಷಣೆಯನ್ನು ಒದಗಿಸಲಿಲ್ಲ.

ಭಾರತದಲ್ಲಿನ ಇನ್ನಿತರ ಭಾಗಗಳಲ್ಲಿ... ಕರ್ನಾಟಕದಲ್ಲಿನ ಕಾರ್ಮಿಕ ವರ್ಗವೂ ... ಪಾಶ್ಚಿಮಾತ್ಯ ಕೈಗಾರಿಕಾ ಸಮಾಜಗಳಲ್ಲಿನ ಸ... ಪದಸ್ಥನಿಗಿಂತ ವಿಭಿನ್ನವಾದ ಉಗಮ ಚಾರಿ... ಹೊಂದಿದ್ದನು. ಬಹುತೇಕ ಪಾಶ್ಚಿಮಾತ್ಯ ಸ... ಗಳಲ್ಲಿ, ಕೈಗಾರಿಕಾ ಕಾರ್ಮಿಕ ವರ್ಗದ ಉಗ... ಬಹುತೇಕ ನಗರವಾಸಿಗಳಿಂದ, ಕುಶಲಕ... ಗಳಿಂದ ಮತ್ತು ನಗರ ಆರ್ಥಿಕತೆಯ ಸಾಮ... ಗುಂಪುಗಳಿಂದ ಎಂದು ಗುರುತಿಸಲಾ... ಗ್ರಾಮಾಂತರ ಪ್ರದೇಶಗಳ ಕಾರ್ಮಿಕರು ಕೈಗಾ... ಕಾರ್ಮಿಕ ವರ್ಗದ ಶ್ರೇಣಿಗಳನ್ನು ಹಿರಿದುಗೊಳಿಸುತ್ತಿದ್ದರೂ ಸಹ, ಅ... ವಲಸೆಗಾರರು ಹೊಸದಾಗಿ ಅಭಿವೃದ್ಧಿಗೊಂಡ ಕೈಗಾರಿಕಾ ಕೇಂದ್ರಗಳಲ್ಲಿ ಬಹು... ವಿಲೀನಗೊಂಡರು.

ಇನ್ನೊಂದೆಡೆ, ಕರ್ನಾಟಕದ ಕೈಗಾರಿಕಾ ದುಡಿಯುವ ವರ್ಗ ಸಾಂಪ್ರದಾ... ಜಾತಿ, ಗ್ರಾಮದ ಕ್ರಮಾಗತ ಆಧಾರಿತವಾಗಿದ್ದ ಅತ್ಯಂತ ಕೆಳಗಿನ ಪದರ... ಉಗಮವಾದುದಾಗಿತ್ತು. ಕೈಗಾರಿಕಾ ಕೇಂದ್ರಗಳನ್ನು ಸೇರಿದ ಮೊದಲ ವಲಸೆಗಾ... ಅವಲಂಬಿತ ಕೃಷಿಕರಲ್ಲ. ಆದರೆ ಕ್ಷಾಮ/ಸಾಂಕ್ರಾಮಿಕ ರೋಗಗಳಂತಹ ಆ... ಮತ್ತು ಸಾಮಾಜಿಕ ಅಹಿತಕರ ಸನ್ನಿವೇಶಗಳಿಂದ ವಿಪರೀತ ರೋಸಿಹೋ... ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ದುರ್ಬಲಗೊಂಡಿದ್ದ ಗು... ಸೇರಿದವರಾಗಿದ್ದರು.

೧೮೭೧-೧೮೮೦ರ ದಶಕದಲ್ಲಿ ೧೮೭೬ ಮತ್ತು ೧೮೭೭ರಲ್ಲಿ ರಾಜ್ಯದಾ... ಉಂಟಾದ ಮಹಾಕ್ಷಾಮದಿಂದಾಗಿ ವೈಭವಯುತ ರಾಜ್ಯದ ಜನಸಂಖ್ಯೆ... ಶೇಕಡ ೧೭.೨೦ ಇಳಿತವಾಯಿತು ಎಂಬ ಅಂಶವನ್ನು ೧೮೭೧ರಿಂದ ೧೯... ವರೆಗಿನ ಪ್ರತಿ ದಶವಾರ್ಷಿಕ ಜನಗಣತಿಯಿಂದ ಪ್ರತಿ ಜಿಲ್ಲಾವಾರು ಜನಸಂಖ್ಯೆ... ಕಾಣಬಹುದು. ತದನಂತರ ಎರಡು ದಶಕಗಳಲ್ಲಿ ಜನಸಂಖ್ಯೆ ಏಕಪ್ರಕಾರ... ಹೆಚ್ಚಳಗೊಂಡಿತು. ಆದರೆ ೧೯೦೧ರ ನಂತರದ ಹತ್ತು ವರ್ಷಗಳಲ್ಲಿ ಪ್ರಮುಖ... ಪ್ಲೇಗ್ ಮತ್ತು ಮಲೇರಿಯ ಹಾವಳಿಯಿಂದಾಗಿ ಹಿಂದಿನ ಎರಡು ದಶಕಗ... ಅನುಕ್ರಮವಾಗಿ ಶೇಕಡ ೧೮.೧ ಮತ್ತು ಶೇಕಡ ೧೨.೧ರ ಜನಸಂಖ್ಯೆ ಬೆಳವಣಿ... ಬದಲಾಗಿ ಈ ದಶಕದ ಹೆಚ್ಚಳ ಶೇಕಡ ೪.೮೦ಕ್ಕೆ ಇಳಿಯಿತು. ಮಲೆನಾ... ಕಡೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಕೊನೆಯ ದಶಕದಲ್ಲಿ ಪ್ರಮುಖವಾಗಿ ... ಹರಡಿದ್ದ ಮಲೇರಿಯ ರೋಗದಿಂದಾಗಿ ಜನಸಂಖ್ಯೆಯಲ್ಲಿ ಶೇಕಡ ೪... ಇಳಿತಾಯ ತೋರಿತು. ಅತ್ಯಂತ ಕಠಿಣ ಸಂದರ್ಭಗಳಲ್ಲಿ ನೌಕರಿ ಹುಡುಕಿಕೊ... ನಗರ ಪ್ರದೇಶಗಳಿಗೆ ಅವರು ವಲಸೆಹೋದ ಅಂಶವನ್ನು ಕಾಣ... ಗ್ರಾಮೀಣ ಕಾರ್ಮಿಕರನ್ನು ನಗರಗಳಿಗೆ ಸೆಳೆಯಲಿಲ್ಲ, ತಳ್ಳಲ್ಪಟ್ಟರು ಎಂಬ ಅಂ... ಪ್ರತಿಪಾದಿಸಿದರೆ ಅದು ತಪ್ಪಾಗಲಾರದು. ಹೇಗಾದರೂ ಕೈಗಾರಿಕಾ ಸಂ... ಸಾಕಷ್ಟು ವೇಗಗತಿಯಲ್ಲೇನಾದರೂ ವಿಕಸಿಸಿದ್ದರೆ, ಈ ಆಂದೋಲನ ತಾತ್ಕಾಲಿ... ಹೆಚ್ಚಾಗಿರುತ್ತಿತ್ತು. ಹೇಗಾದರೂ, ಅಂತಹ ಸಂದರ್ಭ ಒದಗಿಬಾರದ ಕ... ದಿಂದಾಗಿ, ವಲಸೆಗಾರ ಜನಸಮೂಹ ಗ್ರಾಮೀಣ ಉದ್ಯೋಗಾವಕಾಶ ಕಾಣತೊ... ಕೂಡಲೇ ತಮ್ಮ ಗ್ರಾಮಗಳಿಗೆ ಹಿಂದಿರುಗಿದರು. ಪರಿಣಾಮ ಸ್ವವೇದ್ಯ ಕಾ... ಕಾರ್ಮಿಕರು ಕಡಿಮೆಯಾಗತೊಡಗಿದರು ಹಾಗೂ ಗ್ರಾಮದಿಂದ ನಗರಕ್ಕೆ ... ನಗರದಿಂದ ಗ್ರಾಮಕ್ಕೆ ಹರಿವು ಸಹ ಕಡಿಮೆಯಾಯಿತು.

ಪಾಶ್ಚಿಮಾತ್ಯ ಕೈಗಾರಿಕಾ ಕಾರ್ಮಿಕ ವರ್ಗದ ಉಗಮಕ್ಕೂ ಕರ್ನಾಟಕದ ಕೈ... ಕಾರ್ಮಿಕ ವರ್ಗದ ಉಗಮಕ್ಕೂ ಇರುವ ಬಹುಮುಖ್ಯ ವ್ಯತ್ಯಾಸವಿದೇ. ಔದ... ಕಾರ್ಮಿಕ ವರ್ಗವು ಹೊಸ ವಾತಾವರಣದ ಅವಶ್ಯಕತೆಗಳಿಗೆ ಹೊಂದಿಕೊ...

ಹಜವಾಗಿಯೆ ದೀರ್ಘಕಾಲ ತೆಗೆದುಕೊಂಡಿತು. ಈ ವಿಳಂಬವು ಕರ್ನಾಟಕದ ಧುನಿಕ ಕೈಗಾರಿಕೀಕರಣದ ನಿಧಾನ ಮತ್ತು ಮಂದಗತಿಯ ಬೆಳವಣಿಗೆಯಿಂದಾಗಿ ನ್ನೂ ಸುದೀರ್ಘವಾಯಿತು.

೧೮೮೧-೧೯೧೧ರ ಅವಧಿಯಲ್ಲಿ ಘನ ಮೈಸೂರಿನಲ್ಲಿ ಕೆಲವೇ ಕೆಲವು ಟುವಟಿಕೆಗಳು ಚಾಲ್ತಿಯಲ್ಲಿದ್ದವು. ಚಿನ್ನದ ಗಣಿಕಾರ್ಯ ಹೊರತಾಗಿಸಿ, ಕೇವಲ ರಡು ಮುಖ್ಯ ಕೈಗಾರಿಕೆಗಳು ಪ್ರಾರಂಭವಾದುವು ಹಾಗೂ ಆ ಎರಡೂ ಜವಳಿ ಗಾರಿಕೆಗಳಾಗಿದ್ದು ಪರಕೀಯರಿಂದ ನಡೆಸಲ್ಪಡುತ್ತಿದ್ದವು. ೧೯೧೩-೧೪ರಲ್ಲಿ ೧೦೦ ಶ್ವಶಕ್ತಿ ಉಪಯೋಗಿಸುತ್ತಿದ್ದ ಕೇವಲ ೮ ಕಾರ್ಖಾನೆಗಳು ಮಾತ್ರ ಇದ್ದವು. ಚಿನ್ನದ ಣಿಗಳು, ಎರಡು ಜವಳಿ ಕಾರ್ಖಾನೆಗಳು ಬೆಂಗಳೂರಿನಲ್ಲಿ, ದಾವಣಗೆರೆಯಲ್ಲಿನ ರಡು ಹತ್ತಿ ಗಿರಣಿಗಳು, ಸಕ್ಕರೆ ಕಾರ್ಖಾನೆ, ಲೋಕೋಪಯೋಗಿ ಇಲಾಖೆಯ ಯಾರ್ಗಾರ, ಬೆಂಗಳೂರಿನಲ್ಲಿ ದಕ್ಷಿಣ ಭಾರತದ ಕೈಗಾರಿಕೆಗಳು (ಹೆಂಚಿನ ರ್ಖಾನೆ) ಉದ್ಯಮಗಳು ತಲೆ ಎತ್ತಿದವು.

ಏಕೆ ಬಹುಸಂಖ್ಯಾತ ಔದ್ಯಮಿಕ ಕಾರ್ಮಿಕರು ಬಹುಕಾಲದವರೆಗೂ ಮನಸ್ಸಿನಲ್ಲಿ ಕೃಗರಾಗಿದ್ದು, ಯಾವುದೇ ಸಂದರ್ಭದಲ್ಲಿ ಕಾರ್ಖಾನೆ ಕೆಲಸವನ್ನು ತ್ಕಾಲಿಕವಾಗಲೀ ಅಥವಾ ಖಾಯಂ ಆಗಿ ಬಿಟ್ಟುಕೊಟ್ಟು ತಮ್ಮ ಮನೆಗಳಿಗೆ ಂದಿರುಗಲು ತವಕಿಸುತ್ತಿದ್ದರು ಎಂಬ ಮನೋವೈಜ್ಞಾನಿಕ ಅಂಶವನ್ನು ಇದು ವರಿಸುತ್ತದೆ. ಹೇಗಿದ್ದರೂ, ಕಾಲಕಳೆದಂತೆ ಸನ್ನಿವೇಶಗಳು ಬದಲಾದವು. ಪ್ರಥಮ ಗತಿಕ ಯುದ್ಧ ಘನ ಮೈಸೂರಿನಲ್ಲಿ ಕೈಗಾರಿಕೀಕರಣಗೊಳ್ಳಲು ಅವಕಾಶಕಲ್ಪಿಸಿತು ಗೂ ಇದು ನಗರ ಕಾರ್ಮಿಕ ವರ್ಗ ವೃದ್ಧಿಯಾಗಲು ನಾಂದಿಯಾಯಿತು.

ಭಾರತದ ಇನ್ನಿತರೆ ಕಡೆಗಳಲ್ಲಿದ್ದಂತೆ, ಕರ್ನಾಟಕದಲ್ಲಿಯೂ ಸಹ, ಆಧುನಿಕ ಗಾರಿಕಾ ಅಭಿವೃದ್ಧಿಗೆ ಮುನ್ನ ಕೂಲಿ ದುಡಿಮೆ ವರ್ಗದ ಉದಯವಾಯಿತು, ಆದರೆ ಲ್ಲಿನ ಪರಿಣಾಮಗಳು ಮಾತ್ರ ವಿಭಿನ್ನವಾಗಿದ್ದವು. ಇಂಗ್ಲೆಂಡಿನಲ್ಲಿ ಉದಾಹರಣೆಗೆ, ಗಾರಿಕಾ ಕ್ರಾಂತಿಗೆ ಮುನ್ನ ಕೃಷಿಕ್ರಾಂತಿ, ಜಾಗೀರುದಾರು ಬಾಂಧವ್ಯದ ಒಡಕು, ರುಮಠಗಳ ವಿಸರ್ಜನೆ, ಭೂಸಾಗುವಳಿಯಲ್ಲಿನ ವಿಧಾನಗಳ ಬದಲಾವಣೆಗಳು ತೆದುಹೋಗಿದ್ದವು. ಅಲ್ಲಿನ ಸ್ಥಾನಪಲ್ಲಟಗೊಂಡ ಕಾರ್ಮಿಕ ಸಮುದಾಯ ತ್ರವಾಗಿ ವಿಕಸಿತಗೊಳ್ಳುತ್ತಿದ್ದ ಕೈಗಾರಿಕೆಗಳಲ್ಲಿ ಸೇರಿಹೋದರು. ಇತ್ತ ಕರ್ನಾಟಕದಲ್ಲಿ ಧುನಿಕ ಕೈಗಾರಿಕೀಕರಣ ಬಹಳ ಕಾಲ ವಿಳಂಬವಾಗಿ ಆಗಿತ್ತು. ಜೊತೆಗೆ, ರ್ಮಿಕ ಸಮುದಾಯ – ಬಹುತೇಕ ಮಂದಿ ತಮ್ಮ ಸಾಂಪ್ರದಾಯಿಕ ಜೀವನಾಧಾರ ಸುಬುಗಳಿಂದ ಕಿತ್ತೊಗೆಯಲ್ಪಟ್ಟ ಕುಶಲಕರ್ಮಿಗಳು ಮತ್ತು ಕಸುಬುದಾರರಿಂದ ಡಿದ್ದಾಗಿತ್ತು ಮತ್ತು ಅವರು ತಮ್ಮ ವ್ಯವಸಾಯದ ಕಸುಬುಗಳಿಗೆ ಹಿಂದಿರುಗು ದನ್ನು ಬಿಟ್ಟು ಬೇರೆ ಇನ್ನಿತರ ಪರ್ಯಾಯವಿರಲಿಲ್ಲ. ವ್ಯವಸಾಯೇತರ ರಂಗಗಳಿಂದ ರಂಗಕ್ಕೆ ಜನಸಂಖ್ಯಾ ವರ್ಗಾವಣೆ ಜೊತೆಗೆ ಜನಸಂಖ್ಯಾ ಹೆಚ್ಚಳದಿಂದುಂಟಾದ ರಿದ್ರ್ಯ ಮತ್ತು ಬಡತನ, ಜಮೀನಿನ ಭಾಗೀಕರಣ, ದೋಷಪೂರಿತ ಕಂದಾಯ ರ್ಧರಣೆ, ಬಡ್ಡಿಗೆ ಹಣ ನೀಡುವ ವರ್ಗದವರಿಂದ ಕೃಷಿಕರ ಸುಲಿಗೆ, ಂತಾದವುಗಳು ಜಮೀನು ರಹಿತ ಕಾರ್ಮಿಕ ವರ್ಗದ ಸೃಷ್ಟಿಗೆ ಕಾರಣವಾದವು.

ಹೀಗಾಗಿ, ಕರ್ನಾಟಕದಲ್ಲಿನ ದುಡಿಮೆ ವರ್ಗದ ಉಗಮವನ್ನು ಎರಡು ತಗಳಾಗಿ ವಿಭಜಿಸಬಹುದು. ಮೊದಲ ಅವಧಿಯಲ್ಲಿ, ೧೯೨೦ಕ್ಕೆ ಮುನ್ನ ತೋಟ





ಉದ್ಯಮದಲ್ಲಿ ಒಂದು ಹಳೆಯ ಕಾರ್ಮಿಕಪಡೆ ಉದ್ಭವವಾಯಿತು. ಈ ವಸಾಹತು ಕಾರ್ಮಿಕ ಪಡೆ ಪಿತೃಯಜಮಾನಿಕೆಯಡಿಯಲ್ಲಿ ಬದುಕುತ್ತಿತ್ತು ಹಾಗೂ ಅಸಂಘಟಿತ ವಾಗಿತ್ತು. ಎರಡನೇ ಹಂತ ಜವಳಿ ಮತ್ತು ಚಿನ್ನದ ಗಣಿಗಳಂತಹ ಕೈಗಾರಿಕೆಗಳ ಆಧುನಿಕ ಕಾರ್ಮಿಕ ಪಡೆಯಿಂದ ಬೆಳೆದು ಬಂದುದಾಗಿತ್ತು. ಚಿನ್ನದ ಗಣಿಯು ರಾಜ್ಯದಲ್ಲಿ ಅತ್ಯಂತ ಪ್ರಮುಖವಾದ ಉದ್ದಿಮೆಯಾಗಿತ್ತು. ಈ ಉದ್ದಿಮೆ ಸುಮಾರು ೨೬೫೦೦ ಮಂದಿಗೆ ನೌಕರಿ ಒದಗಿಸಿತ್ತು. ಹತ್ತಿ, ರೇಷ್ಮೆ ಮತ್ತು ಉಣ್ಣೆಯ ಉದ್ದಿಮೆಗಳು ರಾಜ್ಯದಲ್ಲಿ ಚಿನ್ನದ ಗಣಿಗಾರಿಕೆ ಉದ್ಯಮದ ನಂತರದ ಬಹುಮುಖ್ಯ ಉದ್ದಿಮೆಗಳಾಗಿದ್ದವು.

ಕರ್ನಾಟಕವು ತನ್ನ ಹತ್ತಿ, ಉಣ್ಣೆ ಕಾರ್ಖಾನೆಗಳು, ಚಿನ್ನದ ಗಣಿಗಾರಿಕೆ ಮುಂತಾದ ಕೈಗಾರಿಕೆಗಳಿಂದಾಗಿ ನೆರೆರಾಜ್ಯಗಳಿಂದ ವಲಸೆ ಕಾರ್ಮಿಕರನ್ನು ನಿರಂತರವಾಗಿ ಸೆಳೆಯುತ್ತಿತ್ತು. ಜವಳಿ ಉದ್ದಿಮೆಯೊಂದೇ ಅಗ್ಗದ ಕಾರ್ಮಿಕನಿಗಾಗಿ ದೊಡ್ಡ ಬೇಡಿಕೆಯನ್ನು ಉಂಟುಮಾಡಿತ್ತು ಮತ್ತು ಆಗಿನ ಮದ್ರಾಸ್ ಪ್ರಾಂತ್ಯದ ಹಲವಾರು ಜಿಲ್ಲೆಗಳಿಂದ ಕಾರ್ಮಿಕರ ಗುಂಪು ವಲಸೆಗೆ ಕಾರಣವಾಗಿತ್ತು. ಜವಳಿ ಕಾರ್ಖಾನೆಗಳಲ್ಲಿ ಶೇಕಡ ೫೦ಕ್ಕಿಂತಲೂ ಹೆಚ್ಚು ಕಾರ್ಮಿಕರು ಮೈಸೂರೇತರರು ಹಾಗೂ ಚಿನ್ನದ ಗಣಿಗಳಲ್ಲಿ ಅವರು ಶೇಕಡ ೭೦ಕ್ಕಿಂತಲೂ ಹೆಚ್ಚಾಗಿದ್ದರು.

ಹಾಗಾಗಿ ೧೯ನೇ ಶತಮಾನದ ಮಧ್ಯಭಾಗದಲ್ಲಿ ಕರ್ನಾಟಕದ ಆಧುನಿಕ ಕೈಗಾರಿಕೆಯ ನೈಜ ಅಡಿಪಾಯವು ಹಾಕಲ್ಪಟ್ಟಿತು. ತೋಟದ ಉದ್ಯಮ, ಜವಳಿಗಿರಣಿ ಮತ್ತು ಗಣಿಗಾರಿಕೆ ಬಂಡವಾಳಶಾಹಿ ಉತ್ಪಾದನೆ ವಿಧಾನ ಆಧಾರಿತವಾದ ಇವೆಲ್ಲವೂ ೧೮೫೦-೧೮೮೦ರ ಅವಧಿಯಲ್ಲಿ ಮೈಸೂರಿನಲ್ಲಿ ನೈಜ ಆರಂಭ ಹೊಂದಿದವು. ಇಲ್ಲಿ ಆರಂಭವಾದ ಬಹುತೇಕ ಉದ್ಯಮಗಳು ಬ್ರಿಟಿಷ್ ಬಂಡವಾಳವನ್ನು ಹೊಂದಿದ್ದವು. ಕೆಲವು ಕೈಗಾರಿಕೆಗಳು ಭಾರತೀಯರ ಒಡೆತನಕ್ಕೆ ಸೇರಿದ್ದವು. ಕೈಗಾರಿಕೆಗಳು, ಪ್ಲಾಂಟೇಷನ್ ಉದ್ಯಮ ಮತ್ತು ರೈಲ್ವೆಗಳ ಬೆಳವಣಿಗೆಗಳಿಂದಾಗಿ ಕಾರ್ಮಿಕ ವರ್ಗವು ರೂಪುಗೊಂಡಿತು. ಪ್ರಥಮ ಜಾಗತಿಕ ಯುದ್ಧದವರೆಗೆ ಕರ್ನಾಟಕದ ಔದ್ಯಮೀಕರಣದ ಪ್ರಗತಿಯ ಎರಡು ಬಹುಮುಖ್ಯ ವಿಶೇಷಣಗಳೆಂದರೆ – ೧) ಮಂದಗತಿಯ ಮತ್ತು ಅವಿಚ್ಛಿನ್ನ ಕೈಗಾರಿಕಾ ಬೆಳವಣಿಗೆ ಮತ್ತು ೨) ಬೆಂಗಳೂರಿನ ಹತ್ತಿ ಕೈಗಾರಿಕೋದ್ಯಮದಲ್ಲಿ ಕೈಗಾರಿಕಾ ಕಾರ್ಮಿಕವರ್ಗ ಸಾಪೇಕ್ಷವಾಗಿ ಉನ್ನತ ಮಟ್ಟದಲ್ಲಿ ಕೇಂದ್ರೀಕೃತಗೊಂಡದ್ದು.

**ಡಾ|| ಸಿದ್ದಲಿಂಗ ಸ್ವಾಮಿ**
ಇತಿಹಾಸ ಉಪನ್ಯಾಸಕರು
ನಂ. ೬೯೦
೧೧ನೇ 'ಜಿ' ಕ್ರಾಸ್,
ವಿನಾಯಕ ಬಡಾವಣೆ
೯ನೇ ಬ್ಲಾಕ್, ೨ನೇ ಹಂತ
ನಾಗರಬಾವಿ
ಬೆಂಗಳೂರು - ೫೬೦ ೦೭೨



ಪಿ. ಶ್ರೀನಿವಾಸ್ (ವಾಸು)

# ರಸಗೊಬ್ಬರಕ್ಕೆ ಸಬ್ಸಿಡಿ ನೀತಿ: ಪೌಷ್ಟಿಕ ಮಣ್ಣು ಮತ್ತು ಆಹಾರ ಕೊರತೆಯ ಭೀತಿ

ಇದೊಂದು ವೈಜ್ಞಾನಿಕ ಪುರಾವೆಯುಳ್ಳ ವರದಿ: ಭಾರತದಲ್ಲಿ ರಾಸಾಯನಿಕ ಗೊಬ್ಬರಗಳ ಬಳಕೆ, ...ಗುತ್ತಿರುವ ಖರ್ಚು, ಇವುಗಳ ಅಡ್ಡಪರಿಣಾಮಗಳ ಕುರಿತಂತೆ ಪಶ್ಚಿಮ ಬಂಗಾಲದ ಇನ್‌ಸ್ಟಿಟ್ಯೂಟ್ ಆಫ್ ...ಗ್ರಿಕಲ್ಚರ್‌ನ ಡಾ॥ ಬಿ. ಸಿ. ರಾಯ್, ಪ್ರೊ॥ ಜಿ. ಎನ್. ಚಟ್ಟೋಪಾಧ್ಯಾಯ ಮತ್ತು ಯುನೈಟೆಡ್ ...ಗ್‌ಡಮ್‌ನ ಯೂನಿವರ್ಸಿಟಿ ಆಫ್ ಎಕ್ಸೆಟೆರ್‌ನ ಡಾಕ್ಟರ್ ರೇಯಿಸ್ ಟಿರಾಡೊ ಇವರನ್ನೊಳಗೊಂಡ ತಂಡ ...ಕೆಸಿದ ಅಧ್ಯಯನದ ವರದಿಯನ್ನು ಗ್ರೀನ್‌ಪೀಸ್ ಸಂಸ್ಥೆ ಪ್ರಕಟಿಸಿದೆ. ನಮ್ಮ ದೇಶದಲ್ಲಿ ಕೃಷಿಗಾಗಿ ನಾವು ...ಳಸುತ್ತಿರುವ ರಾಸಾಯನಿಕ ಗೊಬ್ಬರಗಳ ಪ್ರಮಾಣ ವರ್ಷದಿಂದ ವರ್ಷಕ್ಕೆ ಏರುತ್ತಿದೆ. ಸರ್ಕಾರ ಇದಕ್ಕಾಗಿ ...ಡುತ್ತಿರುವ ಸಬ್ಸಿಡಿ ಮೊತ್ತವೂ ಸಹ ಏರುತ್ತಿದೆ. ಇವುಗಳನ್ನು ಕುರಿತಂತೆ ಇಲ್ಲಿ ದಾಖಲಿಸಿರುವ ಅಂಕಿ-...ಶಗಳು ದಂಗುಬಡಿಸುತ್ತವೆ. ಕೃಷಿಯಲ್ಲಿ ನಾವಿಂದು ವಿವೇಚನೆಯಿಲ್ಲದೆ, ಮಿತಿಯಿಲ್ಲದೆ, ರಾಸಾಯನಿಕ ...ಬ್ಬರಗಳ ಸಾಧಕ-ಬಾಧಕಗಳ ಅರಿವಿಲ್ಲದೆ, ವಿವಿಧ ಬಗೆಯ ರಾಸಾಯನಿಕ ಗೊಬ್ಬರಗಳನ್ನು ಬಳಸುತ್ತಿದ್ದೇವೆ. ...ರ್ಕಾರವೂ ಸಹ ರಾಸಾಯನಿಕ ಗೊಬ್ಬರಗಳಿಗಾಗಿ ಹೊಸ ನೀತಿಯನ್ನೇ ರೂಪಿಸುತ್ತಿದೆ. ಮಣ್ಣಿನ ಪೌಷ್ಟಿಕತೆಯಲ್ಲಿ ...ಸಮತೋಲನೆ ಉಂಟುಮಾಡುವ ರಾಸಾಯನಿಕ ಗೊಬ್ಬರಗಳ ಮಿತಿ ಮೀರಿದ ಬಳಕೆ ಹಾಗೂ ಅವುಗಳನ್ನು ...ಳಸಲು ರೈತರನ್ನು ಪ್ರೇರೇಪಿಸುವತ್ತ ಸರ್ಕಾರ ಕೊಡುತ್ತಿರುವ ಸಬ್ಸಿಡಿ ಮತ್ತು ಇದಕ್ಕಾಗಿ ಸೃಷ್ಟಿಸಿರುವ ವ್ಯವಸ್ಥೆಗಳ ...ನುವೆ ಇರುವ ಸಂಬಂಧ ಗಾಬರಿ ಹುಟ್ಟಿಸುತ್ತದೆ. ಇದರಿಂದ ಒಂದೆಡೆ ನಮ್ಮ ದೇಶದ ಅತ್ಯಮೂಲ್ಯ ಸಹಜ ...ಪನ್ಮೂಲವಾಗಿರುವ ಮಣ್ಣು ತನ್ನ ಉತ್ಪಾದನಾ ಸಾಮರ್ಥ್ಯ ಕಳೆದುಕೊಳ್ಳುತ್ತಿದ್ದರೆ, ಮತ್ತೊಂದೆಡೆ ಆಹಾರ ಉತ್ಪಾದನೆಯು ಕೂಡ ಕಡಿಮೆಯಾಗುತ್ತಿದೆ. ರಾಸಾಯನಿಕ ಗೊಬ್ಬರಗಳು ಪರಿಸರದಲ್ಲಿಯೂ ಸೇರಿಕೊಂಡು ಮತ್ತಷ್ಟು ಹಾನಿ ಉಂಟುಮಾಡತೊಡಗಿವೆ. ಕೃತಕ ರಾಸಾಯನಿಕ ಗೊಬರಗಳು ಕೆಲವು ಬಗೆಯ ಸಸ್ಯಾಗಾರ ಅನಿಲಗಳನ್ನು ಅಂದರೆ ಇಂಗಾಲದ ಡೈಆಕ್ಸೈಡ್, ಕ್ಲೋರೋ ಫ್ಲೋರೋ ಕಾರ್ಬನ್ಸ್ ಇತ್ಯಾದಿ ಅನಿಲಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಿಡುಗಡೆ ಮಾಡುತ್ತಿರುವುದರಿಂದ, ಹವಾಮಾನದಲ್ಲಿ ತೀವ್ರತರದ ಬದಲಾವಣೆಗಳಾಗುತ್ತಿವೆ. ಇದು ನಮ್ಮ ದೇಶದ ಆಹಾರ ಉತ್ಪಾದನೆಯಲ್ಲಿ ದುಷ್ಪರಿಣಾಮವನ್ನು ಬೀರತೊಡಗಿದೆ. ಸಮಾಧಾನಕರ ಅಂಶವೆಂದರೆ, ವಿಫಲಗೊಂಡಿರುವ ಈ ವ್ಯವಸ್ಥೆಗೆ ಪರ್ಯಾಯವೂ ಸಿಕ್ಕಿದೆ. ರಾಸಾಯನಿಕ ಗೊಬ್ಬರಗಳಿಗೆ ಬದಲಿಯಾಗಿ ಬಳಸಬಹುದಾದ ಈ ವಿಧಾನಗಳು ಪ್ರಕೃತಿಪೂರಕವಾಗಿ, ಸರಳವಾಗಿ ಹಾಗೂ ಸುಲಭವಾಗಿ ಪ್ರತಿಯೊಬ್ಬ ರೈತರೂ ಅಳವಡಿಸಿಕೊಳ್ಳಬಹುದಾಗಿದೆ. ಇಂತಹ ಪರಿಹಾರಕ ಕ್ರಮಗಳನ್ನು ಜಾರಿಗೊಳಿಸುವುದರ ಮೂಲಕ ಪ್ರಕೃತಿಪೂರಕ ಕೃಷಿ ವ್ಯವಸ್ಥೆಯನ್ನು ಅಳವಡಿಸಿಕೊಂಡು ಆಹಾರ ಮತ್ತು ಪೌಷ್ಟಿಕಾಂಶ ಭದ್ರತೆಯನ್ನೂ ಸಹ ಪಡೆಯಬಹುದು.

---

ಹಲವು ವರ್ಷಗಳಿಂದ ರಾಸಾಯನಿಕ ಗೊಬ್ಬರಗಳ ಸತತ ಹಾಗೂ ಮಿತಿಮೀರಿದ ಬಳಕೆಯಿಂದ ಇಂದು ನಮ್ಮ ದೇಶದಲ್ಲಿ ಆಹಾರ ಉತ್ಪಾದನೆ ಹೆಚ್ಚಾಗಲು ತೊಡಕಾಗಿದೆ. 'ಹಸಿರು ಕ್ರಾಂತಿ'ಯ ಹೆಸರಿನಲ್ಲಿ ೧೯೬೦ರ ದಶಕದಲ್ಲಿ ಭಾರತದಲ್ಲಿ ಆಧುನಿಕ ಕೃಷಿ ಪದ್ಧತಿಯನ್ನು ಪರಿಚಯಿಸಲಾಯಿತು. ಕೃತಕ ಗೊಬ್ಬರಗಳು ಮತ್ತು ರಾಸಾಯನಿಕ ಕ್ರಿಮಿನಾಶಕಗಳ ಅಧಿಕ ಪ್ರಮಾಣದ ಬಳಕೆಯೇ ಪ್ರಧಾನವಾಗಿದ್ದ ಈ ಪದ್ಧತಿಯಿಂದ ಕೃತಕ ಗೊಬ್ಬರಗಳ ಬಳಕೆ ವರ್ಷಗಳು ಉರುಳಿದಂತೆ ಹೆಚ್ಚಾಗುತ್ತಲೇ ಇದೆ. ೧೯೫೦-೫೧ರ ಅವಧಿಯಲ್ಲಿ ಕೇವಲ ೦.೦೭ ಮಿಲಿಯನ್ ಟನ್ ಬಳಕೆಯಾದರೆ, ೨೦೦೮-೦೯ರಲ್ಲಿ ೨೩.೧೫ ಮಿಲಿಯನ್ ಟನ್ ಆಗಿದೆ. ಪ್ರಾರಂಭದಲ್ಲಿ ಆಹಾರೋತ್ಪಾದನೆ ಗಮನಾರ್ಹವಾಗಿ ಹೆಚ್ಚಿದ್ದರೂ, ಐದು ದಶಕಗಳ ನಂತರದ ಚಿತ್ರಣವೇ ಬೇರೆಯಾಗಿದೆ. ಕೃತಕ ಗೊಬ್ಬರಗಳ ವಿವೇಚನಾರಹಿತ ಬಳಕೆಯಿಂದ ನಮ್ಮಲ್ಲಿರುವ ಪ್ರಮುಖ ಸಂಪನ್ಮೂಲವಾದ ನಿಸರ್ಗ ಸಹಜ ಮಣ್ಣು ಬರಡಾಗುತ್ತಿದೆ. ಇದರ ಪರಿಣಾಮವಾಗಿ ಆಹಾರೋತ್ಪಾದನೆ ಕುಸಿತಗೊಂಡಿದೆ.

ಭಾರತದ ವಿವಿಧ ವಲಯಗಳಲ್ಲಿ ದಾಖಲಿಸಿರುವ ಅಂಕಿ-ಅಂಶಗಳ ಪ್ರಕಾರ ರಾಸಾಯನಿಕ ಗೊಬ್ಬರಗಳ ಬಳಕೆಯ ಪ್ರಮಾಣದಲ್ಲಿ ವಲಯದಿಂದ ವಲಯಕ್ಕೆ

# ಚರಿತ್ರೆ - ಭೂಗೋಳದ ಕೆಲವು ಬಿಡಿ ಚಿತ್ರಗಳು


ರವಿ ಅಜ್ಜೀಪುರ

ಬಡಗಿ ಬೆಸ್ತ ಕುರುಬ ಕುಂಬಾರ...ರ
ನಡುವೆ
ದೇವದಳ್ಳಾಳಿ - ಪುಣ್ಯ ವ್ಯಾಪಾರಿಗಳ ತೆಗಳಿ
ಮುಳ್ಳ ಶಿಲುಬೆಗೆ ಬಡಿಸಿಕೊಂಡನು
ಒಡವಿಯ ಮಗ ಏಸು ದೇವ!

ಮಡಿಯ ಮಡುವಿಂದ ಸಿಡಿದು
ಕೇರಿ ಕೇರಿಯ ಒಡನಾಟದಲ್ಲಿ
ಕುಲದ ಕೇಡ ಮೆಟ್ಟಲೆತ್ನಿಸಿದ
ಕಾಯಕದ ಕಲ್ಯಾಣದಣ್ಣನನ್ನು
ಬುಡ ಭದ್ರ ಕೆಂಡಗಣ್ಣುಗಳ ದಳ್ಳುರಿ
ಅಟ್ಟಾಡಿ ಮುಳುಗಿಸಿತೆ ಕೃಷ್ಣೆಯಲ್ಲಿ?

(ನಿಜಕ್ಕೂ ಪುಣ್ಯವಂತ :
ಆ ಸಂಘಾರಾಮದ ಹುಣ್ಣಿಮೆ ಚಂದ್ರ!)

ಸಬಕೋ ಸನ್ಮತಿಯ ಬೇಡಿದ
ನಿಜರಾಮ ಭಕ್ತ : ಸಬರಮತಿ
ತಾತನನು
ಸುಟ್ಟು ಕೆಡವಿತು
ಮನುಮತಿಯ ಕೋವಿ!

ದೇಶದ ಕೋಶ ದೋಚುತ್ತಿದ್ದ
ಪರಂಗಿ ಗಡವಗಳನ್ನೋಡಿಸಲು
ಬೆದರು ಗುಂಡೆಸೆದ, ಸಮ ಸಮಾಜದ
ಕನಸುಗಣ್ಣಿನ ತರುಣ ಸಿಂಗನಿಗೆ
'ನೇಣು ಭಾಗ್ಯ'!

ಹಿಟ್ಲರನ ಗಿರಣಿ-ಗಾಣಗಳಲ್ಲಿ
ಹಿಟ್ಟು-ಹಿಂಡಿಯಾದವರ ಹಿಂಡು :
ದೇಶಾಂತರ ಕಂಡರೂ
ಟೆಂಟು ಹಾಕಿಕೊಂಡಲ್ಲೆ
ಸಾಕಿಕೊಂಡಿದೆ
ಅವನ ಭೂತವನ್ನು!

ಸೈತಾನ ಸಂತತಿಯ ಹೈಜಾಕಿನಲ್ಲಿ
ಲಬಲಬಿಸುತ್ತಿರುವ
ಮೆಕ್ಕಾದ ಹಜರತನ ಕಂಡು
ಗಹಗಹಿಸುತ್ತಿದ್ದಾನೆ,
ಕೋರೆದಾಡೆಯ 'ನರೋತ್ತಮ' :
ಗುಜರಾತಿನ ಗಂಡು!

ಮತ್ತಷ್ಟು ಉಸಿರು ಕಟ್ಟುತ್ತಿದ್ದಾನೆ
ಕಗ್ಗತ್ತಲು ನಾಡುಗಳ ಕರಿಯ :
ಇನ್ನಷ್ಟು ಭಾರವಾಗಿ
ಅವನೆದೆಯ ಮೇಲಿನ ಬಿಳಿಯ!

(ಮೆತ್ತನೆಯ ಕಳ್ಳನಂತೆ
ಟೋಕಿಯೋದ ಕುಳ್ಳ!)

ಜಾತಿ ಕುದುರೆಯ
ಚಿಹ್ನೆ - ಚಹರೆಗಳನ್ನರಿಯದ
ಕುರುಡು ಜಾಕಿಗಳೆಲ್ಲ
ಯಾಂಕಿಗಳ ಡಾಂಕಿಗಳನೇರಿ
ಜಗವ ಜಯಿಸುವ ರೇಸಿಗಿಳಿದಿವೆ
ಲಂಗು - ಲಗಾಮುಗಳ ಹಂಗಿಲ್ಲದೆ!

ಬಿರು ಬೇಸಿಗೆಯ ಹಳದಿ ನೆಲವನ್ನು
ತಕ್ಕಮಟ್ಟಿಗೆ ತಂಪಿಸಿ
ಸೊಂಪಾಗಿಸಿದ ಕೆಂಪಣ್ಣಗಳಿಗೂ
ಮೆಟ್ಟಿಕೊಳ್ಳುತ್ತಿದೆ
ಶ್ವೇತ ಭವನದ ಸುಡು'ಗಾಳಿ'!

'ಚಿಕ್ಕದರ ಚಂದ'ಕ್ಕೆ
ಚೊಕ್ಕದೊಂದು ನಿ(ಜ) ದರ್ಶನ :
ಬಿಲ್-ಬುಷ್ಷರಿಗೆ ಬಗ್ಗದೆ
ಕುಗ್ಗದೆ ಸೆಟೆದು ನಿಂತ ಕ್ಯೂಬಾ!
ಬಡ-ಬಗ್ಗರ ಕಣ್ಣ ಕಾಬಾ!

ಹಸಿದ ಒಡಲಿಗೆ ವಿಷದ ಮದ್ದೆರೆದ
ಹಸಿರು ಕ್ರಾಂತಿಯ ಹರಿಕಾರ
ಹೆಸರಾಂತನಾದನು!
ಅವನ ಕಸವ, ನುಂಗಿ ನುಂಗಿ
ಹಡೆಹಡೆದು, ರಕ್ತ ಹೀನತೆ
ಸುಸ್ತು, ಏದುಸಿರು, ಬಂಜೆತನ
ನಿತ್ಯ ಕನ್ಯೆ ವಸುಂಧರೆಗೆ!

ಎತ್ತಿನ ರೋಗಕ್ಕೆ ಎಮ್ಮೆಗೆ
ಬರೆಯೆ?

ಬಿ. ರಾಜಣ್ಣ
ನಂ. ೧೩೩, ೮ನೇ 'ಬಿ' ಮುಖ್ಯರಸ್ತೆ, ೪ನೇ ಹಂತ
೩ನೇ ಬ್ಲಾಕ್, ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯

# ಕಸ್ತೂರಿ ಬಾಯರಿ

ಮಿಟ್ಟು ತೋಟದ ಧಪಣಿ ದಾಟಿ, ಹೆಗಡೆಯವರ ಮನೆಯ ಅಂಗಳಕ್ಕೆ ಲಿಟ್ಟಾಗ ಸಂಜೆಯ ಸೂರ್ಯ ಮುಳುಗುತ್ತಿದ್ದ. ಹೆಗಡೆಯವರ ಹೆಂಡತಿ ೕವರ ಮುಂದೆ ನೀಲಾಂಜನ ಹಚ್ಚುತ್ತಿದ್ದರು. ಮಿಟ್ಟು ಅಂಗಳದಲ್ಲಿ ನಿಂತು ಮ್ಮಾ ಅಮ್ಮಾ ಎಂಬ ಕೂಗು ಹಾಕಿದಳು. ತಲೆಯ ಮೇಲೆ ಕಾ ಕಾ ಎಂದು ರಲುತ್ತ ಕಾಗೆ ಹಿಂಡು ಹಾರಿಹೋಯ್ತು. ಹೆಗಡೆಯವರಿನ್ನೂ ತೋಟದಿಂದ ಂದಿರಲಿಲ್ಲ. ಅಂಗಳದಲ್ಲಿಯೇ ಎಡಭಾಗದಲ್ಲಿದ್ದ ದೊಡ್ಡ ಹಟ್ಟಿಯು ಂಬ ಆಗತಾನೇ ಗುಡ್ಡದಿಂದ ಮೇಯ್ದು ಬಂದ ದೊಡ್ಡ ಗುಂಪಿನ ಮ್ಮ, ಆಕಳು, ಕರುಗಳು ಕೊರಳಿನ ಗಂಟೆಯನ್ನು ಶಬ್ದ ಮಾಡುತ್ತ ಣ ಹುಲ್ಲಿಗೆ ಬಾಯಿ ಹಾಕಿದ್ದವು. ಮಿಟ್ಟು ಒಮ್ಮೆ ಹಟ್ಟಿಯ ಕಡೆ ೋಡಿದಳು. ಕೆಲಸದ ಕಮಲ ಕರುಗಳಿಗೆ ಗಂಜಿ ಕುಡಿಸುತ್ತಿದ್ದಳು. ಂಜಿಯ ವಾಸನೆ ಅವಳ ಮೂಗಿನಲ್ಲಿ ಇಳಿದು ಹೊಟ್ಟೆಯಲ್ಲಿ ವಿಚಿತ್ರ ಸಮಳ ಶುರುವಾಯ್ತು. ಅವಳಿಗೆ ಫಕ್ಕನೆ ತಾನು ಬಂದ ಕೆಲಸ ನಪಾಯ್ತು. ಮತ್ತೆ ಅಮ್ಮನವರನ್ನು ಕೂಗಿದಳು. ದೊಡ್ಡ ಮನೆ ಒಳಗಿನಿಂದ ೂರಗೆ ಬಂದು ಹಣಕಿ ಹಾಕಲು ಕೆಲವು ನಿಮಿಷಗಳೇ ಬೇಕಾಗುತ್ತವೆ. ೂರದು ಎಂದು ಹೆಗಡೆ ಅಮ್ಮ ಹೊರಗೆ ಬಂದರು. ಅಂಗಳದಲ್ಲಿ ನಿಂತ ಟ್ಟು ಕಂಡ ಕೂಡಲೇ ಎಂತದು ಹೆಣ್ಣೇ ಕತ್ತಲು ಮಾಡಿ ಬಂದೆಯಲ್ಲಾ ಅಪ್ಪೆ ೕಗಿದೆ ಅಂತ ಪ್ರಶ್ನೆ ಕೇಳಿದಳು.

''ಅಪ್ಪೆಗೆ ದಮ್ಮು ಹೆಚ್ಚಾಗಿದೆ. ಅದಕ್ಕೆ ಒಂದು ವಾರದಿಂದ ತೋಟದ ಲಸಕ್ಕೆ ಬರಲಾಗಲಿಲ್ಲ. ಅಪ್ಪ ಎರಡು ದಿವಸದಿಂದ ಮನೆಕಡೆ ತಲೆ ಹಾಕಿಲ್ಲ. ಮ್ಮನ ಹತ್ತಿರ ಎರಡು ಸೇರು ಅಕ್ಕಿ ಇಸ್ಕಂಡು ಬಾ ಅಂತ ಕಳಿಸ್ಕತೆ. ಚೀಲ ತಂದಿದ್ದಿ.



# ಬಿದಿರು ಮೆಳೆ

ಮ್ಮ ಚೂರು ಗುಣ ಆದ ಕೂಡಲೇ ಬರತ್ತಾಳಂತೆ.'' ಮಿಟ್ಟು ಒಂದೇ ಉಸುರಿಗೆ ವರದಿ ಒಪ್ಪಿಸಿದಳು. ಗಡೆ ಅಮ್ಮನವರು ಮನೆಯ ಬಾಗಿಲಿಗೆ ಬಂದವರನ್ನು ಎಂದೂ ಬರಿಕೈಲಿ ಹಿಂದಿರುಗಿ ಕಳಿಸಿದವರಲ್ಲ. ತ್ತೋ ಈಗ ಬಂದೆ ಅಂತ ಹೇಳಿ ಸೀದಾ ಪಡಸಾಲೆಯಲ್ಲಿ ತುಂಬಿಟ್ಟ ಅಕ್ಕಿ ಸಂದೂಕದಿಂದ ನಾಲ್ಕೈದು ರು ಅಕ್ಕಿ ಪಾತ್ರೆಯಲ್ಲಿ ಹಾಕಿ ಜೊತೆಯಲ್ಲಿ ನಾಗೊಂದಿಗೆಗೆ ಕಟ್ಟಿದ ಒಂದು ಸೌತೆಕಾಯಿಯನ್ನು ಡಿದುಕೊಂಡು ಬಂದು ಅಂಗಳದಲ್ಲಿ ನಿಂತಿದ್ದ ಮಿಟ್ಟುವಿನ ಚೀಲಕ್ಕೆ ಅಕ್ಕಿ ಸುರಿದು ಸೌತೆಕಾಯನ್ನು ುಲ್ಲಿ ಇರಸಿ 'ಪದಾರ್ಥಕ್ಕೆ' ಅಂದರು. ಮಿಟ್ಟುವಿಗೆ ಒಳಗೊಳಗೆ ಖುಷಿ ಆಯ್ತು. ಅಕ್ಕಿ ಕೇಳಿದುದಕ್ಕಿಂತ ಜಾಗಿ, ಮೇಲೆ ಸೌತೆಕಾಯಿ ಅವಳಿಗೆ ಹೊಟ್ಟೆಯಲ್ಲಿ ಹಸಿವೆ ಭಗ್ಗ ಅಂದಿತು. ಅವಳು ಸರಭರ ಕತ್ತಲಲ್ಲಿ ಗಿಹೋದಳು. ಐತ, ಅವನಪ್ಪಯ್ಯ, ಈಗ ಮಿಟ್ಟು ಎಲ್ಲರೂ ಈ ಹೆಗಡೆ ಮನೆಯ ಒಕ್ಕಲು. ಐತನ ಪ್ಪಯ್ಯ ತೀರಿಹೋದಾಗ ಮಿಟ್ಟು ಆಗತಾನೆ ಹುಟ್ಟಿದ್ದಳು. ಕೊನೆತೆಗೆಯಲು ಐತ ಹೆಸರುವಾಸಿಯಾಗಿದ್ದ. ೕಲಾಗಿ ಹೆಗಡೆಮನೆಯ ಕಾಯಂ ಒಕ್ಕಲು ತೋಟದ ಕೆಲಸಗಳೊಂದಿಗೆ ಗದ್ದೆ ಬೇಸಾಯಕ್ಕೂ ಕೈ ಜ್ಜಿದ್ದ. ಮತ್ತೆ ಆಚೆ ಈಚೆ ಊರಿನ ತೋಟಕ್ಕೆ ಕೊನೆ ತೆಗೆಯಲು ಹೋಗುತ್ತಾನೆ. ಬಂದ ಹಣದಲ್ಲಿ ಹೊಟ್ಟೆ ಂಬಾ ಕಳ್ಳು ಇಳಿಸಿ ಮನೆಗೆ ತಪ್ಪದೇ ಹಸಿ ಮೀನಿನೊಂದಿಗೆ ಬರುತ್ತಾನೆ. ಹೆಂಡತಿ ಮೀನಿನ ಸಾರು ಡದಿದ್ದರೆ ಸೌದೆಯಿಂದ ಅವಳನ್ನು ಜಪ್ಪುತ್ತಾನೆ. ಎಂಟರ ಮಿಟ್ಟು ಶಾಲೆ, ಆಟ, ಮನೆಕೆಲಸದೊಟ್ಟಿಗೆ ಾಲೂ ಅಪ್ಪ ಅಮ್ಮನ ಜಗಳಕ್ಕೆ ಸಾಕ್ಷಿಯಾಗುತ್ತಾಳೆ. ಐತ ಒಮ್ಮೊಮ್ಮೆ ವಾರಗಟ್ಟಲೆ ಮನೆಗೆ ಬರುವುದಿಲ್ಲ. ಅಪ್ಪೆ ಮಗಳು ಸ್ವಲ್ಪ ನೆಮ್ಮದಿಯಲ್ಲಿರುತ್ತಾರೆ.

ಗೂರಲು ದಮ್ಮನ್ನು ಮಲೆನಾಡಿಗೆ ಮದುವೆ ಆಗಿ ಬಂದಾಗಿನಿಂದ ಮಿಟ್ಟುವಿನ ಅಮ್ಮ ತನ್ನದಾಗಿರಿಸಿ ಂಡಿದ್ದಳು. ಬಂಗಡೆ ಮೀನು ಮಳೆಗಾಲದಲ್ಲಿ ಸಾಕಷ್ಟು ತಿಂದರೂ ಅವಳಿಗೆ ಈ ದಮ್ಮು ಾಗ ಕಾಡುತ್ತಿತ್ತು. ಹೆಗಡೆ ಮನೆಯವರ ತೋಟದಲ್ಲಿ ಕೆಲಸಕ್ಕೆ ಕೈ ಹಚ್ಚಿದಳೆಂದರೆ ಆರು ಆಳಿನ ಕೆಲಸ ್ಳೇ ಮಧ್ಯಾಹ್ನ ಮೂರುಗಂಟೆಯವರೆಗೆ ಮಾಡಿ ಮುಗಿಸುತ್ತಿದ್ದಳು. ಹೀಗಾಗಿ ಹೆಗಡೆಯವರ ಡತಿಗೆ ಮಿಟ್ಟುವಿನ ಅಮ್ಮನನ್ನು ಕಂಡರೆ ಹಾಗೂ ಮುದ್ದಾದ ಮಿಟ್ಟುವನ್ನು ಕಂಡರೆ ಇತರ ುಕಾಳುಗಳಿಗಿಂತ ಕೊಂಚ ಪ್ರೀತಿ ಜಾಸ್ತಿ. ಪೇಟೆಯಲ್ಲಿ ಓದುತ್ತಿದ್ದ ತಮ್ಮ ಮಗಳ ಸ್ವಲ್ಪ ಮಾಸಿದ,

ಹೊರಗೆ ಎಲ್ಲೂ ಬೆಳಕು ಕಾಣದ ಕತ್ತಲೆ, ಭೋರೆಂದು ಸುರಿಯುವ ಮಳೆ. ಮಿಟ್ಟಿ ನಿದ್ರೆಯಲ್ಲಿ ಮುಳುಗಿದ್ದಳು. ಕನಸಿನಲ್ಲಿ ರಾಕ್ಷಸ ಬಂದು ಅವಳನ್ನು ಮೈತುಂಬ ಗಾಯ ಮಾಡಿದಂತೆ, ಅವನ ಕೈಯಿಂದ ತಪ್ಪಿಸಿಕೊಳ್ಳಲು ಆಗದ ರಾಕ್ಷಸನ ಭಾರ ದೇಹ ಅವಳ ಮೇಲೆ ಬಿದ್ದಂತೆ, ಎಲ್ಲೋ ಎಲ್ಲಾ ನರನಾಡಿಗಳನ್ನು ಕತ್ತರಿಸಿದಂತೆ, ಮಿಟ್ಟಿ ಉಸಿರಾಡಲು ಕಷ್ಟಪಡುತ್ತಿದ್ದಳು. ಎಲ್ಲಾ ಮಂಪರು ಜಡೀ ಮಳೆ. ಅವಳಿಗೆ ತಾನು ಎಲ್ಲಿಯೋ ಕೊಚ್ಚಿ ಕೊಚ್ಚಿ ಹೋದಂತೆ ಪಾಪಿ ರಾಕ್ಷಸ ಅವಳನ್ನು ನಜ್ಜು ಗುಜ್ಜು ಮಾಡಿದಂತೆ ಅನಿಸಿತು. ಎಚ್ಚರವಾದಾಗ ಸ್ವಲ್ಪ ಬೆಳಕು ಹರಿದಿತ್ತು. ಅಪ್ಪ ಅವಳ ಹಾಸಿಗೆಯಲ್ಲಿದ್ದ. ಮಿಟ್ಟಿಯ ಅಂಗಿಯ ತುಂಬ ರಕ್ತದ ಕಲೆಗಳು. ಅವಳು ಗಾಬರಿಯಾಗಿ, ಮಳೆಯನ್ನು ಲೆಕ್ಕಿಸದೇ ಹೆಗ್ಗಡೆಯವರ ಅಂಗಳಕ್ಕೆ ಬಂದು ನಿಂತು 'ಅಮ್ಮಾ' ಅಂತ ಜೋರಾಗಿ ಒರಲಿದಳು. ಮತ್ತೆ ಧೊಪ್ಪೆಂದು ಅವರ ಮನೆಯ ಚಾವಡಿಯಲ್ಲಿ ಬೋರಲಾಗಿ ಬಿದ್ದಳು. ಬಚ್ಚಲು ಮನೆಯ ಹಂಡೆ ಒಲೆಗೆ ಬೆಂಕಿ ಹಾಕಿ ಒಳಗೆ ಬರುತ್ತಿದ್ದ ಹೆಗ್ಗಡತಿಗೆ ಮಿಟ್ಟಿ ಚಾವಡಿಯಲ್ಲಿ ಬಿದ್ದ ಸದ್ದು ಕೇಳಿಸಿತು. ಹಾಲು ಕರೆಯಲು ಬಂದ ಚಂದುವಿಗೂ ಅಮ್ಮಾ ಅಂತ ಒರಲಿದ ಶಬ್ದ ಹಾಗೂ ದೊಪ್ಪಂತ ಬಿದ್ದ ಸಪ್ಪಳ ಕೊಟ್ಟಿಗೆಯಲ್ಲಿ ಕೇಳಿಸಿತು.

ಗಿಡ್ಡವಾದ, ಫ್ಯಾಶನ್ ಹೋಗಿರುವ ಅಂಗಿಗಳು ಫ್ರಾಕುಗಳು ಮಿಟ್ಟಿಯ ಪಾಲಿಗೆ ಇರುತ್ತಿದ್ದವು. ಮಿಟ್ಟಿ ಸುಂದರವಷ್ಟೇ ಅಲ್ಲ, ಅತ್ಯಂತ ಚುರುಕಿನ ಹುಡುಗಿ. ಹಾಡಿಯಲ್ಲಿ ಕಷಾಯಕ್ಕೆ ಇಂತಹ ಬೇರಿನ ತುಂಡನ್ನು ಹುಡುಕಿಕೊಂಡು ಬಾ ಅಂತ ಹೇಳಿದ ತಕ್ಷಣ ಹತ್ತೇ ನಿಮಿಷದಲ್ಲಿ ಇಡೀ ಹಾಡಿಯ ದಟ್ಟ ಮರಗಿಡಗಳ ಮಧ್ಯೆ ಬೇರನ್ನು ಹುಡುಕಿ ತರುತ್ತಿತ್ತು ಹುಡುಗಿ. ಅದೇ ಹಳ್ಳಿಯ ಕೂಲಿ ಕಾರ್ಮಿಕರ ಮಕ್ಕಳಿಗೆಂದೇ ತೆರೆದ ಸರಕಾರಿ ಏಕೋಪಾಧ್ಯಾಯ ಶಾಲೆಯಲ್ಲಿ ಮಿಟ್ಟಿ ನಾಲ್ಕನೇ ತರಗತಿಯಲ್ಲಿ ಓದುತ್ತಿದ್ದಾಳೆ. ಮಾಸ್ತರು ಮೀಟಿಂಗಿಗೆ ತಾಲ್ಲೂಕಿಗೆ ಹೋದಾಗ, ತಾನೇ ಒಂದು ಎರಡು ಮೂರನೇ ಕ್ಲಾಸಿನ ಮಕ್ಕಳಿಗೆ ಮಗ್ಗಿ ಅಕ್ಷರಗಳನ್ನು ಓದಿಸಿ ಮಿಟ್ಟಿಯಕ್ಕಾ ಎಂಬ ಹೆಸರನ್ನು ಪಡೆದಿದ್ದಾಳೆ. ಮಿಟ್ಟಿಯ ಮತ್ತೊಂದು ಸ್ವಭಾವ ಎಂದರೆ ಯಾರು ಏನು ಕೆಲಸ ಹೇಳಿದರೂ ತಪ್ಪದೇ ಮಾಡುವುದು. ಹೆಗಡೆಯವರ ಮನೆಯ ತೋಟದ ಕೊನೆತೆಗೆಯುವ ಐತ ಪಕ್ಕದ ಊರಿನಲ್ಲಿರುವ ಅಡಕೆ ತೋಟಗಳಿಗೂ ಕೊನೆ ತೆಗೆಯುವುದಕ್ಕೆ ಹೋಗುತ್ತಿದ್ದ. ದುಡಿಕೆ ಏನೂ ಕಡಿಮೆ ಇರಲಿಲ್ಲ. ಆದರೆ ದುಡಿದದ್ದೆಲ್ಲವೂ ಅರ್ಧ ಸೆರೆ, ಹೆಣ್ಣಿನ ಸಹವಾಸಕ್ಕೆ ಸೋರಿಹೋಗಿಬಿಡುತ್ತಿತ್ತು. ಮನೆಯಲ್ಲಿ ಗೂರಲು ಹೆಂಡತಿ, ಐತ ಹೊರಗೆ ಹೋದವನು ಕೆಲವರ ಗೆಳೆತನ ಮಾಡಿದ್ದ ಸುದ್ದಿ ಮಿಟ್ಟಿಯ ತಾಯಿಯ ಕಿವಿಗೆ ಬಿದ್ದಿತ್ತು. ವಡೇರ ಮನೆ ತೋಟದ ಕೆಲಸ, ತನ್ನ ದಮ್ಮು, ಮಗಳ ಆರೈಕೆ, ಮನೆಗೆಲಸ ಈ ಕುಡುಕ ಗಂಡನನ್ನು ತಡೆದು ದಿನಾ ಒಂದಕ್ಕೂ ಅವನೊಂದಿಗೆ ಎಲ್ಲಿ ಬಡಿತ ತಿನ್ನಲಿ ಅಂತ ಅವಳು ಅವನನ್ನು ಅವನ ಪಾಡಿಗೆ ಕೈಬಿಟ್ಟಿದ್ದಳು. ಮನೆಗೆ ಬಂದರೆ, ಇಲ್ಲಾ ಮನೆಯ ಕಡೆ ಇದ್ದಾಗ ಐತ ಎಂದೂ ತನ್ನ ಹೆಂಡತಿಯನ್ನು ಮಗಳನ್ನು ಪ್ರೀತಿಯಿಂದ ಮಾತನಾಡಿಸುತ್ತಿರಲಿಲ್ಲ. ಮಿಟ್ಟಿ ಅಪ್ಪನ ಕುಡಿದ ಕೆಂಪುಕಣ್ಣುಗಳನ್ನು ಕಂಡೊಡನೆ, ಬೇಲಿದಾಟಿ ಹಾಡಿಯಲ್ಲಿ ಹಣ್ಣುಗಳನ್ನು ಹುಡುಕುತ್ತ ತಿನ್ನುತ್ತ ಸಾಗಿಬಿಡುತ್ತಿದ್ದಳು. ಅವಳಿಗೆ ವಯಸ್ಸಿಗೆ ಮೀರಿದ ಗಾಂಭೀರ್ಯ, ಹೇಳಲಾಗದ ಮೌನದ ಕಣಿವೆಯಲ್ಲಿ ಅವಳು ಒಬ್ಬಂಟಿಯಾಗಿ ತಿರುಗುತ್ತಿದ್ದಳು. ಒಮ್ಮೊಮ್ಮೆ ಹಾಡಿ ಮೂಲೆಯ ಕೆರೆದಂಡೆಯ ಮೇಲೆ ಬೆಳೆದ ಕೇದಿಗೆ ಬನದಲ್ಲಿ ಹೋಗಿ ಮಗ್ಗಿ ಬರೆಯುತ್ತ ಕುಳಿತುಬಿಡುತ್ತಿದ್ದಳು.

ಮಿಟ್ಟಿಗೆ ಬಣ್ಣದ ರಂಗೋಲಿ ಎಳೆ ಹಾಗೂ ಬಣ್ಣದ ಚಿತ್ರಗಳು ಬಹಳ ಪ್ರೀತಿ.
ಸೋಗೆಮನೆಯ ಗೋಡೆಯ ನಾಲ್ಕೂ ಬದಿಗೂ ಮಿಟ್ಟಿ ಕೆಂಪುಮಣ್ಣು ಹಾ
ಸುಣ್ಣದಿಂದ ಎಲ್ಲರೂ ನಾಚುವಂತಹ ಗೆರೆ ಚಿಕ್ಕಿ ಚಿತ್ರಗಳನ್ನೇ ಬರೆದಿದ್ದ
ಶಾಲೆಯಲ್ಲೂ ಹಾಗೆ, ಎಲ್ಲರಕ್ಕಿಂತ ಮೊದಲು ಹೋದ ಮಿಟ್ಟಿ ಬೋರ್ಡನ್ನು ಚೆ
ನೀರು ಹಚ್ಚಿ ತೊಳೆದು ಕರಿಹಲಗೆಯ ಅಂಚಿಗೆ ಚಿತ್ತಾರಗಳನ್ನು ಬಳಪದಿಂದ ಮೂ
ಆ ದಿನದ ಹಾಜರಾತಿ ದಾಖಲಾತಿ ಬರೆದು ಕರಿಹಲಗೆ ಒಂದು ಸುಂದರ ಚಿ
ಎಂಬಂತೆ ಮಾಡಿಬಿಡುತ್ತಿದ್ದಳು. ಅವಳ ಪಾಟಿಚೀಲವೂ ಅಷ್ಟು ನೀಟು. ಅವ
ಪುಸ್ತಕದ ಒಂದು ಪುಟವೂ ಮಡಿಚಿರಬಾರದು. ಎಲ್ಲಾ ಒಂದನೇ ತರಗತಿ ಎರಡ
ಮೂರನೇ ತರಗತಿ ಮಕ್ಕಳು ಮಿಟ್ಟೀಯಕ್ಕಾ ಮಿಟ್ಟೀಯಕ್ಕಾ ಅಂತ ಅವಳ
ತಮ್ಮೆಲ್ಲ ಪುಸ್ತಕಗಳಿಗೆ ಬೈಂಡು ಮತ್ತು ಕವರುಗಳನ್ನು ಹಾಕಿಸಿಕೊಳ್ಳುತ್ತಿದ್ದರು.
ಅಂದದ ಚೆಂದದ ಬಾಲ್ಯದ ಬದುಕಿಗೆ ಒಮ್ಮೊಮ್ಮೆ ಸರಿಸಲಾಗದ ರೌನ
ಬಡಿದುಕೊಂಡುಬಿಟ್ಟಿರುತ್ತದೆ. ಅಂತಹ ಬರ್ಬರತೆ ಮಿಟ್ಟೀಯ ಬದುಕಿನಲ್ಲಿ ಕಾ
ಆಗಿ ಬಂದು ಸ್ಥಾಪಿತಗೊಂಡಿತು.

ಮೊನ್ನೆ ಬಹಳ ಜೋರಾಗಿ ಬಂದ ಮುಂಗಾರು ಮಳೆ, ಎರಡು ಮೂರು ತಿಂ
ಒಂದೇ ಸಮನೆ ನೆಲಮುಗಿಲು ಒಂದಾದ ಹಾಗೆ ಏಕತ್ರವಾಗಿ ಜಡಿದು ಸುರಿದಾಗ,
ಕೊಳಿಸಿ ಮಿಟ್ಟಿಯ ಅಮ್ಮನ ದಮ್ಮು ತೀವ್ರ ಹೆಚ್ಚಾಗಿ, ಆಸ್ಪತ್ರೆಯ ಔಷಧ ಉಪ
ಏನೊಂದೂ ಫಲಿಸದೇ ದಿಢೀರೆಂದು ತೀರಿಕೊಂಡಳು. ಧೋ ಧೋ ಸುರಿಯ
ಮಳೆಯ ಹನಿಯೊಂದಿಗೆ ಮಿಟ್ಟಿಯ ಕಣ್ಣೀರಿನ ಹನಿಯೂ ಸೇರಿಕೊಂಡಿತು. ಎ
ಘಟ್ಟದ ಕೆಳಗೆ ಇರುವ ಒಬ್ಬ ಅಜ್ಜಿ, ಮಳೆಯಲ್ಲಿ ಘಟ್ಟ ಏರಿ ಬರಲೇ
ಹೆಗಡೆಯವರು ಮುಂದಾಗಿ ಅಂತ್ಯಕ್ರಿಯೆಗಳನ್ನು ಮುಗಿಸಿದರು. ಒಂದು ಗ
ಬೇಯಿಸಲು ಬಾರದ ಮಿಟ್ಟಿ, ಗಂಜಿ ಮಡಿಕೆಯನ್ನು ಒಲೆಯ ಮೇಲಿಟ್ಟು
ತೊಳೆದು ಹಾಕಿ ಅಪ್ಪ ಐತನ ನೆರವಿನಿಂದ ಹೊಟ್ಟೆ ಹಸಿವು ತುಂಬಿಕೊಂಡಳು. ಐ
ಹೆಂಡತಿ ಸತ್ತ ನೆವ ಒಂದೇ ಸಾಕಾಗಿತ್ತು. ಅವನ ಕುಡಿತ ಇನ್ನೂ ಜೋರಾಯಿತು. ಕೆ
ಹುಚ್ಚು ಹೆಂಗಸರ ಸಹವಾಸ ಐತನನ್ನು ಪೂರ್ತಿ ಮುಳುಗಿಸಿಬಿಟ್ಟವು. ಅವನ ಕುಡಿ

ಂಪು ಕಣ್ಣುಗಳು ಮತ್ತು ಅವನ ದರ್ಪದ ಮಾತುಗಳು
ಂಟ್ಟಿಯನ್ನು ಪೂರ್ತಿ ಮೌನವಾಗಿರಿಸಿದವು.

ಮಿಟ್ಟಿಯ ಪರಿಸ್ಥಿತಿ ತಿಳಿದ ಹೆಗಡೆಯವರ ಹೆಂಡತಿ ಂಟ್ಟಿಗೆ ಸ್ವಲ್ಪ ಆದಾಯ ಹುಟ್ಟುಹಾಕುವ ಸಣ್ಣಪುಟ್ಟ ುನೆಗೆಲಸವನ್ನು ಮಾಡಲು ಹೇಳಿದರು. ಪೇಟೆ ದಿಯಾದರೆ ಮಾಡಲು ನೂರೆಂಟು ಕೆಲಸ. ಗಡೆಯವರ ತೋಟದ ಮನೆಯಲ್ಲಿ ಮಾಡಿದಷ್ಟು ುಗಿಯಲಾಗದಷ್ಟು ಕೆಲಸಗಳಿರುತ್ತಿತ್ತು. ಹೆಗಡೆ ಮ್ಮನವರು ಮಿಟ್ಟಿಗೆ ಶಾಲೆಗೆ ಹೋಗುವ ವೇಳೆ ೊಳಗೆ ಬೆಳಿಗ್ಗೆಯ ಸಣ್ಣಪುಟ್ಟ ಕೆಲಸಗಳನ್ನು ಹೇಳಿ ಾಡಿಸುತ್ತಿದ್ದರು. ಮಿಟ್ಟಿ ಇದ್ದಕ್ಕಿದ್ದಂತೆ ಸಂಸಾರದ ಾರವನ್ನು ಹೆಗಲ ಮೇಲೆ ಹೊತ್ತಳು. ಎಂಟು ುಷದ ಬಾಲೆ ಬೆಳಿಗ್ಗೆ ಬೇಗ ಎದ್ದು ತನ್ನ ಇಡೀ ಮನೆ ಸ ಗುಡಿಸಿ ಒಲೆಯ ಮೇಲೆ ಅಪ್ಪನಿಗೆ ತನಗೆ ಊಟಕ್ಕೆ ಂಜಿ ತಯಾರು ಮಾಡಲು ಅಕ್ಕಿ ತೊಳೆದು ಹಾಕಿ, ೊಲ್ಲಗೆ ಉರಿ ಉರಿಸಿ, ಒಡೇರ ಮನೆಯ ಹೆಬ್ಬಾಗಿಲಿಗೆ ಂದು, ಕಸ ಗುಡಿಸಿ ರಂಗೋಲಿ ಎಳೆದು, ಬಚ್ಚಲು ಮನೆಯ ಹಂಡೆಗೆ ಬರಲು ತುಂಬಿ ಂಕಿ ಕಾಯಿಸಿ, ಚೌಕಿಯ ಹೊರಕೋಣೆಗಳನ್ನೆಲ್ಲಾ ತಿಕ್ಕಿ ತಿಕ್ಕಿ ಒರೆಸಿ, ಅಮ್ಮನವರು ೊಟ್ಟ ತಿಂಡಿ ಕಾಫಿಯನ್ನೂ ಸೇವಿಸಿ, ಸೀದಾ ಮನೆಗೆ ಬಂದು ಸ್ನಾನ ಮಾಡಿ ಶಾಲೆಗೆ ಡುತ್ತಿದ್ದಳು. ಮಧ್ಯಾಹ್ನದ ಹೊತ್ತಿಗೆ ಅಲ್ಲಿ ಇಲ್ಲಿ ಹೋದ ಐತ ಮೀನುಗಳನ್ನು ತಂದು ಂಗಳಿಗೆ ಸಾರು ಮಾಡಿ ಇಡುತ್ತಿದ್ದ. ಅಕ್ಕಪಕ್ಕದಲ್ಲಿಯ ಕಾಯಂ ಕೆಲಸಗಾರರು ಾರಕ್ಕೊಮ್ಮೆ ಮಿಟ್ಟಿಯ ತಲೆಸ್ನಾನ ಮಾಡಿಸಿ ಎಣ್ಣೆತೀಡಿ ಜಡೆ ಹೆಣೆಯುತ್ತಿದ್ದರು. ನಾಲೂ ಸುತ್ತಲು ಕುಳಿತು ಮಿಟ್ಟಿಯ ದೌರ್ಭಾಗ್ಯಕ್ಕೆ ಉಳಿದ ಕೂಲಿಕಾರರು ರುಗುತ್ತಿದ್ದರು. ಮೆಲ್ಲಗೆ ಚಿಗುರುತ್ತಿರುವ ಮಿಟ್ಟಿಗೆ ಮುಂಜಾಗ್ರತೆಯ ಮಾತುಗಳನ್ನು ೀಳುತ್ತಿದ್ದರು. ಐತ ಕುಡಿದು ಬಂದಾಗ ಅವನೊಟ್ಟಿಗೆ ಹೆಚ್ಚಿಗೆ ಮಾತುಬೇಡ ಅಂತ ೀಳುತ್ತಿದ್ದರು. ಮಿಟ್ಟಿ ಮರುಮಾತಿಲ್ಲದೇ ಹೂಂಗುಡುತ್ತಿದ್ದಳು. ಅವಳಿಗೆ ತಾನೊಂದು ಾಲಿ ಚೀಲ ಅಂತ ಅನಿಸುತ್ತಿತ್ತು. ಜನರ ಗುಸುಗುಸು ಪಿಸುಪಿಸು ಅವಳ ಮನಸ್ಸಿಗೆ ರ್ಥ ಹೊಳೆಯುತ್ತಿರಲಿಲ್ಲ. ಮುದವಿರದ ಮುಂಜಾನೆ ಮಧ್ಯಾಹ್ನ ಅವಳು ಒಂಟಿ ಕ್ಕಿಯಾದಳು. ಎಷ್ಟು ಕೆಲಸ ಮಾಡಿದರೂ ಅಪ್ಪನ ಮುಖದಲ್ಲಿ ಅತೃಪ್ತಿ. ಸಿಗುತ್ತಿದ್ದ ಾಲಿಯನ್ನು ಕೂಡ ಅಪ್ಪನೇ ಇರಿಸಿಕೊಳ್ಳುತ್ತಿದ್ದ. ಮಿಟ್ಟಿ ಶಾಲೆಗೆ ಹೋದಾಗ ಮಾತ್ರ ತರ ಮಕ್ಕಳೊಡನೆ ಖುಷಿಯಿಂದ ಇರುತ್ತಿದ್ದಳು. ಒಮ್ಮೊಮ್ಮೆ ಹಾಡಿಯಿಂದ ಕಟ್ಟಿಗೆ ುರಿದು ತಂದಾಗ, ಇಲ್ಲಾ ಹೆಕ್ಕಿ ತಂದಾಗ ಕೈಗಳಲ್ಲಿ ರಕ್ತ ಒಸರುತ್ತಿತ್ತು. ತೀರಾ ೀಸರವಾದಾಗ ಮಿಟ್ಟಿ ಹಾಡಿಯ ಮೂಲೆಯಲ್ಲಿರುವ ಕೆರೆದಂಡೆಯ ಹತ್ತಿರ ಇದ್ದ ದಿಗೆ ಬನದಲ್ಲಿ ತಿರುಗಾಡಿ ಬರುತ್ತಿದ್ದಳು. ಋತುಗಳು ಸರಿದುಹೋದವು. ಮಿಟ್ಟಿ ಬ್ಬೆಯನ್ನು ನೆನಪಿಸಿ ಅಳುತ್ತಿದ್ದಳು. ಐತನ ಹಾರಾಟ ಎಲ್ಲೆ ಮೀರಿತ್ತು. ಮಿಟ್ಟಿ ಅವನು ಡಿದು ಬಂದಾಗಲೆಲ್ಲಾ ನೆರೆಹೊರೆಯ ಗುಡಿಸಿಲಿನಲ್ಲಿ ಹೋಗಿ ಕುಳಿತುಬಿಡುತ್ತಿದ್ದಳು. ಮ್ಮೊಮ್ಮೆ ಹರಿದ ಎಲ್ಲಾ ಬಟ್ಟೆಗಳನ್ನು ಹೊಲೆಯುತ್ತ ಕಾಲಹರಣ ಮಾಡುತ್ತಿದ್ದಳು.

ಬೆಳಿಗ್ಗೆ ಎದ್ದ ತಕ್ಷಣ ಮಿಟ್ಟಿ ಮುಖಕ್ಕೆ ನೀರು ಎರಚಿಕೊಂಡು, ತಮ್ಮ ಸೋಗೆಯ ನೆಯ ಸುತ್ತಲೂ ಇರುವ ದಟ್ಟ ಹಾಡಿಯ ಓಮ ಲೇಪಿಸಿದ ಹಸಿರನ್ನು ನಸ್ಸಿನೊಳಗೆ ಇಳಿಸಿಕೊಂಡು ಆಮೇಲೆ ಅಂಗಳದ ಮೂಲೆಯಲ್ಲಿರುವ ಹಟ್ಟಿ ಚ್ಚಲಿನ ಒಲೆ ಮೇಲೆ ನೀರು ತುಂಬಿಸಿಟ್ಟ ಮಡಿಕೆಯ ತಳಕ್ಕೆ ಅಡಿಕೆಯ ಸೋಗೆ, ಂಗಿನ ಬರಲಿನಿಂದ ಧಗಧಗ ಉರಿಹಚ್ಚಿ ಸ್ವಲ್ಪ ಕುಳಿತು ಕೈಕಾಲು ಕಾಯಿಸಿ, ಆಮೇಲೆ ೋಗೆ ಹೊದಿಸಿದ ಅಂಗಳದ ಕಸ ವೈನಾಗಿ ಗುಡಿಸಿ, ನೀರು ಚಿಮುಕಿಸಿ ಚೆಂದದ ೆಗಳ ರಂಗೋಲಿ ಇಡುತ್ತಿದ್ದಳು. ಅವಳು ಎಳೆಯುತ್ತಿದ್ದ ಪ್ರತಿಯೊಂದು ಗೆರೆಯೂ ುರವಾಗಿ ಮೂಡಿಬರುತ್ತಿದ್ದವು. ಅವಳಿಗೆ ಪಕ್ಕನೆ ಅಮ್ಮನ ನೆನಪಾಗಿ ಒಡೇರ ಮನೆ ಸ ಮುಗಿಸಿ ಶಾಲೆಗೆ ಹೋಗಬೇಕಲ್ಲಾ ಅಂತ, ಒಲೆಯ ಮೇಲೆ ಅಪ್ಪನಿಗೆ ತನಗೆ ಾ ಮಾಡಿ, ಮಧ್ಯಾಹ್ನದ ಗಂಜಿ ಕುದಿಯಲು ಇಟ್ಟು ಹೆಗಡೆಯವರ ಮನೆಯ ಂಗಳದಲ್ಲೂ ಚಿತ್ತಾರದ ರಂಗೋಲಿ ಇಡಲು ಮುಂದಾಗುತ್ತಿದ್ದಳು. ಒಮ್ಮೊಮ್ಮೆ ಗಿನ ಜಾವ ಎಚ್ಚರವಾದರೆ ಅವಳಿಗೆ ಅಬ್ಬೇ ಇಲ್ಲದ್ದು ನೆನಪಾಗಿ ಒಬ್ಬಳೇ ಸಿಗೆಯಲ್ಲಿ ಮುಳುಮುಳು ಅಳುತ್ತಿದ್ದಳು.

**ರಾಜಕೀಯ**

ಸಾಮಾನ್ಯ ಜ್ಞಾನವೂ
ಇಲ್ಲದೆಯೇ
ನಯವಾಗಿ ನವಿರಾಗಿ
ವಂಚಿಸುವ
ಸದಾ ಚಟುವಟಿಕೆಯ
ಆಟ

ಕಾವೇರಿ

ಒಂಟಿತನದ ಮಳೆಯಲ್ಲಿ ದಿನಾ ನೆನೆಯುತ್ತಿದ್ದ ಮಿಟ್ಟಿಗೆ ಹೆಗಡೆಯವರ ಅಮ್ಮ ಕೊಡುವ ಬಿಸಿಬಿಸಿ ಹಲಸಿನ ಕಡಬು, ಅಕ್ಕಿತರಿ ಕಡಬು, ಪತ್ರೊಡೆ, ಬಿಸಿ ಕಾಫಿ ತನ್ನ ಅಬ್ಬೇನೇ ಅವರಲ್ಲಿ ಇದ್ದು ತನಗೆ ಉಣಿಸುತ್ತಿದ್ದಾಳೆ ಎಂಬ ಭಾವ ಹೊಂದಿ ತನ್ನ ಮಂಕುತನವನ್ನು ಒಡಿಸಿಬಿಡುತ್ತಿದ್ದಳು. ಪೇಟೆ ಕಡೆ ಹೋದಾಗಲೊಮ್ಮೆ ಹೆಗಡೆ ಅಮ್ಮ ಅವಳ ಸೈಜಿನ ಬಣ್ಣದ ಬಳೆಗಳು, ಕ್ಲಿಪ್, ರಿಬ್ಬನ್, ಬಿಂದಿ ಎಲ್ಲವನ್ನೂ ಅವಳ ಕೈಗಿರಿಸುತ್ತಿದ್ದಳು. ಈ ಮಧ್ಯೆ ಐತ ಕುಡಿದು ಗಟಾರದಲ್ಲಿಯೋ, ಬೇರೆಲ್ಲೋ ಬಿದ್ದ ಸುದ್ದಿ ಹೆಗಡೆ ಅಮ್ಮನ ಕಿವಿಗೆ ಬಿದ್ದರೆ, ಅವ ಮನೆಯಲ್ಲಿ ಇದ್ದನೆಂಬ ಸುದ್ದಿ ತಿಳಿದರೆ ತಾವೇ ತೋಟದ ಕೊನೆಯ ಬೇಣಿಯ ಹತ್ತಿರವಿರುವ ಅವನ ಸೋಗೆ ಮನೆಯ ಅಂಗಳಕ್ಕೆ ಕಾಲಿರಿಸುತ್ತಿದ್ದಳು. ''ಎಂತದ ಐತ ಹೆಣ್ಣಿನ ಚಿಂತೆ ಕಾಂಬದೇ, ನಿನ್ನ ಹೊರಲಾಟ ಕಾಂಬದೇ, ಹೆಗಡೇರು ಹೇಳಿ ಕಳ್ಸಿಸ್ಯಾರೆ ಈ ಪರಿ ಆಟ ದೇಹಕ್ಕೂ ಒಳ್ಳೇದಲ್ಲ. ಇದನ ಹ್ಯಾಂಗ ಕಡಿಮೆ ಮಾಡಿಯೋ ಎಂತ ಕಥೆ'' ಅಂತ ಸ್ವಲ್ಪ ಏರಿದ ಸ್ವರದಲ್ಲಿ ಮಾತನಾಡಿದರ ಐತನ ಧ್ವನಿ ಪಡ್ಚ.

ಗೂನೆ ಇಳಿಸಲು ಪಕ್ಕದ ಊರುಗಳಿಗೆ ಹೋದರೆ ಐತ, ವಾರಗಟ್ಟಲೇ ಮನೆ ಹತ್ತಿರ ಸುಳಿಯುತ್ತಿರಲಿಲ್ಲ. ಈ ಮಧ್ಯೆ ಐತನ ಬಂಧುಗಳು ಅವನಿಗೆ ಇನ್ನೊಂದು ಮದುವೆ ಮಾಡಲು ಒಡಾಡುತ್ತಿದ್ದರು. ಹೆಂಡ ಹೆಣ್ಣು ಅಂತ ಐತ ಮಿಟ್ಟಿಯ ಬಗೆಗಿನ ಕಾಳಜಿಯನ್ನು ಮನಸ್ಸಿನಿಂದ ತೆಗೆದುಹಾಕಿದ್ದ. ಅಪ್ಪ ಐತ ಮನೆಗೆ ಬರದಿದ್ದಾಗ, ಪಕ್ಕದ ಒಕ್ಕಲು ಮನೆಯ ಯಶೋದೆಯ ಮಕ್ಕಳು ಮಿಟ್ಟಿಯ ಜೊತೆಗೂಡುತ್ತಿದ್ದರು. ರಾತ್ರಿಯ ಬುಡ್ಡಿಯ ಬೆಳಕಿನಲ್ಲಿ ಮಿಟ್ಟಿ ತನ್ನ ಅಕ್ಷರಲೋಕದಲ್ಲಿ ಕಾಗುಣಿತದ ಲೋಕದಲ್ಲಿ ಯಶೋದೆಯ ಮಕ್ಕಳೊಂದಿಗೆ, ರಾತ್ರಿಯ ಕತ್ತಲನ್ನು ಕಳೆಯುತ್ತಿದ್ದಳು. ಹೆಗಡೆ ಅಮ್ಮ ಚೂರು ಹುಳಿಸಾರು ಕೊಡುತ್ತಿದ್ದು, ಗಂಜಿ ಬೇಯಿಸಲು ಮಾತ್ರ ಕಲಿತಿದ್ದ ಮಿಟ್ಟಿ ಅಪ್ಪನಿಲ್ಲದೇ ಹೇಗೋ ಹಾಗೆ ದಿನಗಳನ್ನು ಉರುಳಿಸುತ್ತಿದ್ದಳು. ಅಬ್ಬೆಯ ನೆನಪಾಗಿ ಕಣ್ಣೀರು ಇಡುತ್ತಿದ್ದಳು. ಒಕ್ಕಲು ಮನೆಯವರು ''ನಿನ್ನ ಅಪ್ಪ ಆ ಪಾಟಿ ಕುಡುಕ ಯಾವ ಹೆಣ್ಣು ಮುಂದೆ ಬಂದು ಅವನನ್ನು ಮದುವೆ ಆಗ್ತಾಳೆ. ಇದು ನೀನು ಗಂಡನ ಮನೆಗೆ ಹೋಗುವವರೆಗೆ ಬೇಯಿಸಿ ಹಾಕುವುದು ತಪ್ಪುವುದಿಲ್ಲ. ಹುಷಾರು ಹೆಣ್ಣೇ ಕುಡಿದಾಗ ಗಂಡಸು ಅಪ್ಪ ಎಂಬುದು ಮರೆತಿರುತ್ತಾನೆ'' ಅಂತೆಲ್ಲ ಹೇಳಿದಾಗ ಒಂಭತ್ತು ವಯಸ್ಸಿನ ಇನ್ನೂ ಮೈನೆರೆಯದ ಮಿಟ್ಟಿಗೆ ಅವರ ಮಾತುಗಳು ಅರ್ಥವೇ ಆಗುತ್ತಿರಲಿಲ್ಲ. ಹೆಗಡೆ ಅಮ್ಮನವರು ಕೂಡ ದಿನಾಲೂ ಮನೆಗೆ ವಾಪಸ್ಸು ಬರುವಾಗ ಜಾಗ್ರತೆ ಮಿಟ್ಟಿ ಅನ್ನುತ್ತಿದ್ದರು. ಯಾಕೋ ಇತ್ತೀಚೆಗೆ ಆ ಮಾತುಗಳು ಅವಳಿಗೆ ಎದೆಯಲ್ಲಿ ಒಂಥರಾ ಹೆದರಿಕೆ ಹುಟ್ಟುಹಾಕಿತು.

ಮಿಟ್ಟಿ ಈ ಸಲ ನಾಲ್ಕನೇ ತರಗತಿ ಪಾಸಾಗಿದ್ದಾಳೆ. ಗುಡ್ಡೇ ಮೇಲಿನ ಶಾಲೆಯಲ್ಲಿ ಐದನೇ ತರಗತಿಯವರೆಗೆ ಮಾತ್ರ ಕ್ಲಾಸುಗಳಿದ್ದವು. ಈ ಹಂಡಬಂಡ ಹಳ್ಳಿಯ ಬದುಕಿನಲ್ಲಿ ಅಬ್ಬೆಯನ್ನು ಕಳೆದುಕೊಂಡ ಮಿಟ್ಟಿ, ಕುಡುಕ ಅಪ್ಪನ ಕೆಂಗಣ್ಣನ್ನು ಎದುರಿಸಲು ತನಗೆ ತಾನೇ ತಾಯಿ ಆಗಿದ್ದಾಳೆ. ಶಾಲೆಯಲ್ಲಿ ಮನೆಯಲ್ಲಿ ಹೆಗಡೇರ ಮನೆಯಲ್ಲಿ ಹೋದ ವರ್ಷಕ್ಕಿಂತ ಈ ವರ್ಷ ಅವಳ ಜವಾಬ್ದಾರಿ ಹೆಚ್ಚಿದೆ. ಈ ಸಲ ಯುಗಾದಿಗೆ ಮಿಟ್ಟಿ ಎಲ್ಲಾ ಒಕ್ಕಲುಗಳ ಸೋಗೆ ಮನೆಯ ಮಣ್ಣಿನ ಗೋಡೆಗೆ ತಾನೇ ಕೇಡಿಮಣ್ಣು ಹಾಗೂ ಸುಣ್ಣದಿಂದ ಚೆಂದದ ಗಿಳಿ, ಹಕ್ಕಿ, ನವಿಲು, ವಿವಿಧ ಗೆರೆ ರಂಗೋಲಿ, ಪಾದಗಳು ಹೂಗಳನ್ನು ಚಿತ್ರಿಸಿದ್ದಾಳೆ. ಸೆಗಣಿ ಸಾರಿಸಿದ ಗುಡಿಸಲ ಮುಂದೆ ತಾನೇ ರಂಗೋಲಿ ಎಳೆಗಳನ್ನು ಎಳೆದು ಬಂದಿದ್ದಾಳೆ. ಒಕ್ಕಲು ಹಕ್ಕಲಲ್ಲಿ ಮಿಟ್ಟಿ ಒಂದು ತಂಪಾದ ತಂಗಾಳಿಯಂತೆ ಎಲ್ಲರ ಎದೆಯನ್ನು ಮೀಟಿ, ಪ್ರೀತಿಯನ್ನು ತನ್ನೆದೆಗೆ ರವಾನಿಸಿಕೊಂಡಿದ್ದಾಳೆ. ಒಕ್ಕಲು ಹಕ್ಕಲಲ್ಲಿ ಇನ್ನೂ ಟಿ.ವಿ. ಬರದಿದ್ದ ಕಾರಣ ಎರಡು ಮೂರು ಮನೆಯ ಅಂಗಳದಲ್ಲಿ ಹಚ್ಚಿಡುವ ರೇಡಿಯೋಗೆ, ಆಕಾಶವಾಣಿ ಕಾರ್ಯಕ್ರಮಗಳನ್ನು ವೇಳೆ ಸಿಕ್ಕಾಗ ರಂಗೋಲಿ ಎಳೆಯುವಾಗ ಮೆಲ್ಲಗೆ ಕಿವಿಯಾಲಿಸುತ್ತಿದ್ದಳು. ಆಗಾಗ ಹಾಡಿಯಲ್ಲಿ ಗೇರುಹಣ್ಣು ಚೀಪುತ್ತಲೋ, ನೇರಳಹಣ್ಣು ಕಿಸೆಗೆ ತುಂಬುತ್ತಲೋ, ತನಗೆ ತೀರ ಬೇಸರವಾದಾಗ ಕೆರೆದಂಡೆಯ ಕೇದಿಗೆಯ ಬನದಲ್ಲಿ ತಿರುಗಾಡಿ ಬರುತ್ತಿದ್ದಳು. ಮಿಟ್ಟಿ ಈಗ ಬೈತಲೆ ತೆಗೆದು ತನ್ನ ಜಡೆಗಳನ್ನು ತಾನೇ ಹೆಣೆದು

ಕೊಳ್ಳುತ್ತಾಳೆ. ಈ ಮನೆ ತನ್ನದೇ ಎಂಬಂತೆ ನೆಲವನ್ನು ವಾರಕ್ಕೊಂದು ಬಾರಿ ಶೆಗಣಿ ಹಚ್ಚಿ ಸಾರಿಸುತ್ತಾಳೆ. ಐದನೆಯ ತರಗತಿಯಲ್ಲಿ ಖುಷಿಯಿಂದ ಓದುತ್ತಿದ್ದಾಳೆ. ಬರುವ ಮಳೆಗಾಲದ ಮಧ್ಯಕ್ಕೆ ಮಿಟ್ಟಿಗೆ ಒಂಭತ್ತು ಮುಗಿಯುತ್ತೆ. ಅವಳೀಗ ಆ ದಟ್ಟ ಕಾನುವಿನ ಪುಟ್ಟ ಹಳ್ಳಿಯ ಹಾರುವ ಗಿಳಿಮರಿ. ಹಸಿರು ಕಾನು, ಗದ್ದೇ, ಕೆರೆದಂಡೆ, ನೀಲ ಆಕಾಶ, ಬೆಳ್ಳಕ್ಕೀ ಸಾಲು, ಶಾಲೆಯ ಮಕ್ಕಳು, ಒಕ್ಕಲು ಮನೆಯ ಗೋಡೆ, ಹೆಗ್ಗಡತಿ ಎಲ್ಲರೂ ಮಿಟ್ಟೀ ಮಿಟ್ಟಿ ಎಂದು ಕೂಗುತ್ತಾರೆ. ಮಿಟ್ಟಿ ಆ ಪುಟ್ಟ ಹಳ್ಳಿಯಲ್ಲಿ ಚಿತ್ತಾರವಾಗಿ ಮಿನುಗುತ್ತಿದ್ದಾಳೆ. ಅವಳು ಸೋಮಾರಿ ಆಗಿರಲಿಲ್ಲ. ಚಲಿಸುತ್ತಿದ್ದಳು. ಜಿಗಿಯುತ್ತಿದ್ದಳು. ಓಡುತ್ತಿದ್ದಳು. ಜಡೆ ಉದ್ದವಾಗಿತ್ತು. ದಿನಾಲು ಒಬ್ಬರಲ್ಲ ಒಬ್ಬರು ಅಬ್ಬಲಿಗೆ ಮಾಲೆ ಕೊಡುತ್ತಿದ್ದರು. ಎಲ್ಲಾ ಸೂಕ್ಷ್ಮ ಭಾವಗಳೊಂದಿಗೆ ಅವಳು ಹೆಣ್ಣಾಗುವ ಪ್ರಕ್ರಿಯೆಗಳಿಗೆ ಸಿದ್ಧಳಾಗುತ್ತಿದ್ದಳು. ಕಣ್ಣು ದೊಡ್ಡ ಕಣ್ಣುಗಳ ತುಂಬ ಕನಸುಗಳ ಟೊಂಗೆ ಹರಡಿದಳು. ಯುಗಾದಿಯ ಕೋಗಿಲೆ ಅವಳ ಕಣ್ಣುಗಳ ರೆಂಬೆಗಳಲ್ಲಿ ಕುಳಿತು ಹಾಡಿತು. ಈ ಸಲ ಬಂದ ಮಳೆಗಾಲ ಎಂದಿನಂತೆ ಇರಲಿಲ್ಲ. ನೆಲಮುಗಿಲು ಒಂದಾಗುವಂತೆ ಸುತ್ತಲಿನ ಕೆರೆ, ನದಿ, ಹಳ್ಳಕೊಳ್ಳ ಎಲ್ಲವೂ ಬಳಿದುಕೊಂಡು, ಕೊಚ್ಚಿಕೊಂಡು ಹೋಗುವಷ್ಟು ಧಾರಾಕಾರ ಮಳೆ. ಅಡಿಕೆ ಕೊಯ್ಲು ಇಲ್ಲದ ಕಾರಣ ಐತ ಮನೆಯಲ್ಲಿಯೇ ಇದ್ದ. ಹೆಗಡೆಯವರ ತೋಟಕ್ಕೆ ಗೊಬ್ಬರ ಹಾಕಲು, ಗದ್ದೇ ಬಯಲಿನ ನೀರು ಹರಿದು ಹೋಗಲು ತೋಡಿ ಕಡಿಯುವ, ಕಪ್ಪು ಕರೆಯುವ ದಿನಗೂಲಿಯ ಕೆಲಸಕ್ಕೆ ಹೋಗುತ್ತಿದ್ದ. ಸುರಿಯುವ ಮಳೆಗೆ ದಿನಾ ಪೇಟೆಯಿಂದ ಹುರಿಯುವ ಮೀನು, ಸರಾಯಿ ಪೊಟ್ಟಣ ಹಿಡಿದು ಬರುತ್ತಿದ್ದ. ಮಿಟ್ಟೀ ಅಪ್ಪ ತರುತ್ತಿದ್ದ ಹುರಿಯುವ ಮೀನು ಕಂಡಾಗ ಖುಷಿಯಾಗುತ್ತಿದ್ದಳು. ಆದರೆ ಅವನ ಸರಾಯಿ ಕೊಟ್ಟೆಗಳನ್ನು ಕಂಡಾಗ, ಸಣ್ಣಗೆ ಒಳಗೊಳಗೆ ಕಂಪಿಸುತ್ತಿದ್ದಳು. ಒಕ್ಕಲು ಮನೆಯವರು ಹೇಳಿದ ಮುಂಜಾಗ್ರತೆಯ ಮಾತುಗಳು ಗಂಟಲಲ್ಲಿ ಸಿಕ್ಕಿಹಾಕಿಕೊಂಡು ಅವಳು ಒದ್ದಾಡುತ್ತಿದ್ದಳು. ತಾನು ಐದನೆಯ ತರಗತಿಯಲ್ಲಿ ಓದುತ್ತಿದ್ದೇನೆ. ತನಗೆ ಎಲ್ಲಾ ತಿಳಿಯುತ್ತದೆ. ತಾನೀಗ ದೊಡ್ಡವಳಾಗುತ್ತಿದ್ದೇನೆ. ಅಪ್ಪನ ಕುಡಿತವನ್ನು ತಾನು ಬಿಡಿಸಬೇಕು. ಮನೆಯಲ್ಲಿ ಚೆಂದದ ಪಾತ್ರೆಗಳನ್ನು ತರಬೇಕು, ಅಂಗಳದಲ್ಲಿ ಅಬ್ಬಲಿಗೆ ಹೂವಿನ ಗಿಡ ನೆಡಬೇಕು, ದಿನಾಲೂ ಒಲೆ ಸಾರಿಸಿ ರಂಗೋಲಿ ಇಡಬೇಕು. ಉದ್ದ ಜಡೆಗೆ ವಾರದಲ್ಲಿ ಎರಡು ನೀರೆರೆದುಕೊಳ್ಳಬೇಕು, ಹೀಗೆ ಮಿಟ್ಟಿಯ ಕನಸುಗಳು. ಶಾಲೆಯಲ್ಲಿ ಮುಂದೆ ಬರಬೇ ಚೆನ್ನಾಗಿ ಓದಿ ನೌಕರಿ ಹಿಡೀ ಬೇಕು, ಹೀಗೆ ಒಂದರ ಹಿಂದೆ ಒಂದು ವಿಚಾರಗ ಪುಟ್ಟ ಮಂಡೆಯಲ್ಲಿ ಬರುತ್ತಿದ್ದವು. ಅವಳಿಗೆ ತಿಳಿಯದಂತೆ ಅವಳು ಅಮ್ಮನಾಗಿದ್ದ ಮಿಟ್ಟಿಯ ಎಳೆಯ ಕನಸುಗಳಿಗೆ ಬೆಂಕಿ ಬಿತ್ತು, ಈ ಸಲ ಬಂದ ಮಳೆಗಾಲ.

ಅಪ್ಪ ಕುಡಿದಿದ್ದ, ಹೊರಗೆ ಎಲ್ಲೂ ಬೆಳಕು ಕಾಣದ ಕತ್ತಲೆ, ಭೋರೆಂ ಸುರಿಯುವ ಮಳೆ. ಮಿಟ್ಟಿ ನಿದ್ರೆಯಲ್ಲಿ ಮುಳುಗಿದ್ದಳು. ಕನಸಿನಲ್ಲಿ ರಾಕ್ಷಸ ಬಂ ಅವಳನ್ನು ಮೈತುಂಬ ಗಾಯ ಮಾಡಿದಂತೆ, ಅವನ ಕೈಯಿಂದ ತಪ್ಪಿಸಿಕೊಳ್ಳಲು ಆ ರಾಕ್ಷಸನ ಭಾರ ದೇಹ ಅವಳ ಮೇಲೆ ಬಿದ್ದಂತೆ, ಎಲ್ಲೋ ಎಲ್ಲಾ ನರನಾಡಿಗಳ ಕತ್ತರಿಸಿದಂತೆ, ಮಿಟ್ಟಿ ಉಸಿರಾಡಲು ಕಷ್ಟಪಡುತ್ತಿದ್ದಳು. ಎಲ್ಲಾ ಮಂಪರು ಜಡೀ ಮ ಅವಳಿಗೆ ತಾನು ಎಲ್ಲಿಯೋ ಕೊಚ್ಚಿ ಕೊಚ್ಚಿ ಹೋದಂತೆ ಪಾಪಿ ರಾಕ್ಷಸ ಅವಳನ್ನು ನ ಗುಜ್ಜು ಮಾಡಿದಂತೆ ಅನಿಸಿತು. ಎಚ್ಚರವಾದಾಗ ಸ್ವಲ್ಪ ಬೆಳಕು ಹರಿದಿತ್ತು. ಅಪ್ಪ ಅ ಹಾಸಿಗೆಯಲ್ಲಿದ್ದ. ಮಿಟ್ಟಿಯ ಅಂಗಿಯ ತುಂಬ ರಕ್ತದ ಕಲೆಗಳು. ಅವಳು ಗಾಬರಿಯಾ ಮಳೆಯನ್ನು ಲೆಕ್ಕಿಸದೇ ಹೆಗ್ಗಡೆಯವರ ಅಂಗಳಕ್ಕೆ ಬಂದು ನಿಂತು 'ಅಮ್ಮಾ' ಅ ಜೋರಾಗಿ ಒರಲಿದಳು. ಮತ್ತೆ ಧೊಪ್ಪೆಂದು ಅವರ ಮನೆಯ ಚಾವಡಿಯ ಬೋರಲಾಗಿ ಬಿದ್ದಳು. ಬಚ್ಚಲು ಮನೆಯ ಹಂಡೆ ಒಲೆಗೆ ಬೆಂಕಿ ಹಾಕಿ ಒಳಗೆ ಬರು ಹೆಗ್ಗಡತಿಗೆ ಮಿಟ್ಟಿ ಚಾವಡಿಯಲ್ಲಿ ಬಿದ್ದ ಸದ್ದು ಕೇಳಿಸಿತು. ಹಾಲು ಕರೆಯಲು ಬ ಚಂದುವಿಗೂ ಅಮ್ಮಾ ಅಂತ ಒರಲಿದ ಶಬ್ದ ಹಾಗೂ ದೊಪ್ಪಂತ ಬಿದ್ದ ಸ ಕೊಟ್ಟಿಗೆಯಲ್ಲಿ ಕೇಳಿಸಿತು. ಇನ್ನೂ ಪೂರ್ತಿ ಬೆಳಗಾಗಿಲ್ಲ. ಈ ಸುರಿಯುವ ಮಳೆಯ ಯಾರು ಬಂದಿರಬಹುದು, ಅಂತ ಅವಳ ಕೊಟ್ಟಿಗೆಯಿಂದ ಚಾವಡಿಗೆ ಬರುವುದ ಹೆಗ್ಗಡತಿ ಕೈಯಲ್ಲಿ ಚಿಮಣಿ ಹಿಡಿದು ಬರುವುದಕ್ಕೂ ಸರಿ ಆಯ್ತು. ಅವರಿಬ್ಬರೂ ಮಿಟ್ಟಿಯನ್ನು ಕಂಡು ಗಾಬರಿ ಆದರು. ಮೆಲ್ಲನೆ ಎತ್ತಿ ಹೊಡಿಮಂಚದ ಮೆ ಮಲಗಿಸಿದರು. ಹೆಗ್ಗಡತಿಗೆ ಎಲ್ಲಾ ಅರ್ಥವಾಯ್ತು. ಅವರು ಮಾತೇ ಹೊರಡ ಸುಮ್ಮನೆ ಕುಳಿತುಬಿಟ್ಟರು. ಆಕಾಶದಲ್ಲಿ ಮಳೆರಾಯನ ಆರ್ಭಟ ಜೋರಾಗಿತ್ತು.

ಹೆಗ್ಗಡತಿ ಮೆಲ್ಲಗೆ ಗಾಳಿ ಬೀಸಿದರು. ಮಿಟ್ಟಿಯ ಅಂಗಿಯ ತುಂಬೆಲ್ಲಾ ರ ಕಲೆಗಳು. ತೊಡೆಗುಂಟ ಇಳಿದ ಹಸಿರಕ್ತ ಹುಡುಗಿ ಋತುಮತಿಯಾಗಿದಾ ಗಾಬರಿಯಿಂದ ಓಡಿ ಬಂದಿದ್ದಾಳೆ. ತಾಯಿ ಇಲ್ಲದ ತಬ್ಬಲಿ. ಏನು ಗೊತ್ತಾಗು ಪಾಪ. ಚಂದುವಿಗೆ ಗಾಳಿ ಬೀಸಲು ಹೇಳಿ ಬಟ್ಟೆ ತರಲು ಒಳಹೋದರು. ಚಂದು ಹುಡುಗಿ ಮೈನೆರೆತಿಲ್ಲ ಅಂತ ಅನಿಸಿಬಿಟ್ಟಿತು. ಮೆಲ್ಲನೆ ಮಿಟ್ಟಿಯ ಕಿವಿಯಲ್ಲಿ ಅ ಹೆಸರು ಕೂಗಿದಳು. ದಣಿದ ಮಿಟ್ಟಿ ಮೆಲ್ಲಗೆ ಕಣ್ಣು ತೆರೆಯಿತು. ತೊದಲುವ ಧ್ವನಿಯ ಸಪ್ಪದಲ್ಲಿ ಉಸುರಿದಂತೆ ಹೇಳಿತು, ''ಅಯ್ಯ ಬೆಳಿಗ್ಗಿನವರೆಗೆ ನನ್ನ ಹಾಸಿಗೆಯ ಮಲಗಿದ್ದ.'' ಚಂದುವಿಗೆ ಹೊರಗೆ ಗುಡುಗುವ ಸಿಡಿಲು ಎದೆಗೆ ಬಡಿದಂತೆ ಆಯಿ ಅವಳು ಜೋರಾಗಿ ಅಮ್ಮಾ ಅಮ್ಮಾ ಅಂತ ಹೆಗ್ಗಡತಿಯನ್ನು ಕರೆದಳು. ಬಟ್ಟೆ ಚೂರ ಕೈಯಲ್ಲಿ ಹಿಡಿದು ಹೊರಗೆ ಅವಸರವಸರವಾಗಿ ಬಂದ ಹೆಗ್ಗಡತಿಯನ್ನು ಕೈಹಿಡಿ ಪಕ್ಕಕ್ಕೆ ಒಂದರ್ಥದಲ್ಲಿ ಎಳೆದುಕೊಂಡು ಬಂದ ಚೆಂದು, ''ಅಮ್ಮಾ ಅನರ್ಥ ಆಗಿ ಹುಡುಗಿ ಮೈನೆರೆತಿಲ್ಲ, ಕುಡುಕ ಅಪ್ಪ ಬೆಳಿಗ್ಗವರೆಗೆ ಹಾಸಿಗೆಯಲ್ಲಿದ್ದ ಅ ಕನವರಿಸಿತು. ಈಗ ಏನಮ್ಮಾ ಮಾಡುವುದು, ಅಯ್ಯನನ್ನು ಎಬ್ಬಿಸಿ ಸುದ್ದಿ ತಿಳಿಸಿ. ಗಾ ಹೂಡಿಸಿ ಆಸ್ಪತ್ರೆಗೆ ಹೋಗುವಾ. ಮಳೆ ಬೇರೆ ಒಂದೇ ಸಮನೇ ಹೊಯ್ಯುತ್ತಿ ಅನ್ಯಾಯವಾಯ್ತು'' ಅಂತ ಚಂದು ಬಿಕ್ಕಲು ಶುರುವಿಟ್ಟುಕೊಂಡಳು. ಹೆಗ್ಗ ಕಲ್ಲುಬಂಡೆಯ ಹಾಗೆ ಸ್ವಲ್ಪ ಹೊತ್ತು ದಂಗಾಗಿ ನಿಂತುಬಿಟ್ಟರು. ಹೊರಗೆ ಮಳೆಗ ಆರ್ಭಟದಿಂದ ಬೀಸುತ್ತಲೇ ಇದೆ. ಪ್ರಚಂಡ ಗದ್ದಲ ಮಾಡುತ್ತಿದ್ದ ತೋಟ ಗಿಡಮರಗಳು. ಮನೆಯ ಹೆಂಚಿನ ಮೇಲೆ ಭೋರೆಂದು ಒಂದೇ ಸಮನೆ ಸುರಿಯು ಮಳೆ. ಮುಚ್ಚಿದ ಕಣ್ಣಿನ ಒಳಗೆ ಎಲ್ಲವೂ ಥರಥರನೆ ನಡಗುತ್ತವೆ. ರಾತ್ರಿ ಕನಸಿ ಬಂದ ರಾಕ್ಷಸ ಅಪ್ಪನಾಗಿದ್ದ ಎಂಬುದು ಮಿಟ್ಟಿಗೆ ತಿಳಿಯತೊಡಗಿತು. ಗಾಯದಿ ನೋವು ನರನರಗಳಲ್ಲಿ ಹೊಕ್ಕುಳ ಬಳ್ಳಿ ಯಾರೋ ಬುಡ ಹಿಡಿದು ಅಲ್ಲಾಡಿಸುತ್ತಿದ್ದ ಮಿಟ್ಟಿ ಪೂರ್ಣವಾಗಿ ತತ್ತರಿಸಿಬಿಟ್ಟದ್ದಳು. ನಿನ್ನೆ ಅಪನು ಅವಳನ್ನು ಜಗ್ಗಿ ಪೂರ್ತಿಯ ಮೈ ಮುರಿದುಕೊಂಡಿದ್ದ. ಅವಳು ತುಂಬ ಗಟ್ಟಿಯಾಗಿ ಕೂಗಿದರೂ, ಅದು ಹೆ ಧ್ವನಿಯಾಗಿ ಯಾರಿಗೂ ಕೇಳಲಿಲ್ಲ. ಹೊರಗಿನ ಗಾಳಿಯ ವೇಗವೂ ಪ್ರಚಂಡವಾಗಿ ಅವಳು ತೀವ್ರ ತೊಳಲಾಟದಲ್ಲಿ ತಾನು ಎಲ್ಲಿದ್ದೀನಿ ಎಂಬುದನ್ನು ಮರೆತು ಬಿಕ್ಕಿ ಅಳತೊಡಗಿದಳು. ಗಾಯ ಉರಿಯುತ್ತಿತ್ತು. ಒಡಲೊಳಗೆ ಹಸಿಯಾಗಿತ್ತು.

ಹೆಗ್ಗಡತಿ ಹೆಗ್ಗಡೆಯವರನ್ನು ಎಬ್ಬಿಸಿ ಸಂಗತಿ ತಿಳಿಸಿದರು. ಕೂಡಲೇ ಆಸ್ಪತ್ರೆಗೆ ೋಗಬೇಕು ಅಂತ ಹೇಳಿದರು. ಹೆಗ್ಗಡೆಯವರಿಗೆ ಬೆಳಿಗ್ಗೆ ಇಂತಹ ಆಘಾತಕಾರಿ ದ್ದಿ ಕೇಳಿ ದುಃಖ ಜೊತೆಗೆ ಸಿಟ್ಟೂ ಒತ್ತರಿಸಿ ಬಂತು. "ಎಲ್ಲಿದ್ದಾನೆ ಆ ಸೂಳೆ ಮಗ ಿದು ಎರಡು ತುಂಡು ಮಾಡಿ ಹಾಕ್ತೀನಿ" ಅಂತ ಜೋರಾಗಿ ಹೂಂಕರಿಸಿದಾಗ, ಗ್ಗಡತಿ ಅನುಭವದ ಸಮಾಧಾನದ ಮಾತುಗಳನ್ನು ಹೇಳಿದರು. "ನೀವು ಹಿಂಗೆಲ್ಲಾ ಯಿಮಾಡಿ ಪಬ್ಲಿಕ್ ಮಾಡಿದರೆ ಹೇಗೆ ? ಹೆಣ್ಣುಮಗು. ನಾಳೆ ಎಲ್ಲಾ ಇದೆ. ಸ್ವಲ್ಪ ಟ್ಟಾಗಿ ಆಸ್ಪತ್ರೆಗೆ ಹೋಗಿ ತೋರಿಸಿಕೊಂಡು ಬರೋಣ. ಐತ ಒಬ್ಬನನ್ನು ಕರೆದು ಲ್ಲಾ ವಿಚಾರಿಸಿದರಾಯ್ತು. ಮಗು ತುಂಬಾ ದಣಿದಿದೆ. ಮೊದಲು ಗಾಡಿ ಹೂಡಲು ಳಿ. ಜ್ವರ ಬಂದಿದೆ. ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತೇವೆ ಅಂತ ಗಾಡಿ ಂಜಣ್ಣನಿಗೆ ತಿಳಿಸಿ. ಅಷ್ಟರಲ್ಲಿ ಮಗುವಿನ ಬಟ್ಟೆ ಬದಲಾಯಿಸಿ ಬಾಯಿಗೆ ಒಂಚೂರು ಿ ಹಾಕ್ತೇವೆ. ಚೆಂದು ಒಟ್ಟಿಗೆ ನಾನೂ ಬರುತ್ತೇನೆ. ಆಸ್ಪತ್ರೆಗೆ ಡಾಕ್ಟರ ಹತ್ತಿರ ನಾನು ತನಾಡುತ್ತೇನೆ. ಗಂಡಸರಿಗೆ ಇಂತಹ ವಿಷಯಗಳನ್ನು ಹೇಗೆ ಹೇಳಬೇಕೆಂದು ತ್ತಾಗುವುದಿಲ್ಲ. ನೀವು ಮೊದಲು ಗಾಡಿ ಕಟ್ಟಿಸಿ." ಹೆಗ್ಗಡತಿ ತುಂಬ ಆತಂಕ ಲ್ಲಿದ್ದರು. ಆಸ್ಪತ್ರೆಯಲ್ಲಿ ಮಿಟ್ಟಿಯನ್ನು ಪರೀಕ್ಷಿಸಿದ ಕ್ಟರು ಇದು ರೇಪ್ ಕೇಸು ಅಂದರು. ಡೆಯವರು ವಿಷಯವನ್ನು ಹೆಚ್ಚಿಗೆ ಸಲು ಬಿಡಲಿಲ್ಲ. ಮಿಟ್ಟಿಗೆ ಔಷಧಿ ಪಚಾರವಾಯ್ತು. ಅವಳು ತನ್ನೇ ಆಡಲಿಲ್ಲ. ಹೆಣ್ಣು ರಿಕೊಂಡಿದೆ. ಎಲ್ಲಿಯೂ ಿ ಹರಡಿಸಬಾರದು ದು ಹೆಗ್ಗಡತಿ ಚಂದು ಕಟ್ಟುನಿಟ್ಟಾಗಿ ಹೇಳಿ . ಅವಳು ಪೂರ್ತಿ ಈ ಾತದಿಂದ ಹೊರಬರುವ ಕ ಹಿತ್ತಲಿನ ಮನೆಯಲ್ಲಿ ಮುವಿನೊಟ್ಟಿಗೆ ಇರಲಿ ತ ಹೆಗ್ಗಡತಿ ಹೇಳಿದರು. ಮಿಟ್ಟಿ ತಿಲ್ಲದೇ ಬರೀ ಕಣ್ಣೀರು ುತ್ತಿತ್ತು. ಮಳೆಯ ಆರ್ಭಟ ಕೊಂಚ ಮೆ ಆಗಿತ್ತು. ಹೋದ ಗಾಡಿಯಲ್ಲಿಯೇ ಳಿ ಹೆಗ್ಗಡೆಯವರ ಮನೆಯ ಅಂಗಳಕೆ ಗಾಡಿ ದು ನಿಂತಿತು. ಚೆಂದು ಮೆಲ್ಲಗೆ ಕೈ ಹಿಡಿದು ್ಟಿಯನ್ನು ಇಳಿಸಿಕೊಂಡಳು. ಪೂರ್ತಿ ಎಚ್ಚರದ ಾಗಿತ್ತು. ಹಿತ್ತಲಿನ ಮನೆಗೆ ಅವಳನ್ನು ಕರೆದು ಂಡು ಹೋದರು. ಹೆಗ್ಗಡತಿ ಮನೆಯೊಳಗೆ ೇಗಿ ಚಾಪೆ ದಿಂಬು ಹೊದಿಕೆ ವಸ್ತ್ರಗಳನ್ನು ುಕೊಟ್ಟರು. ಚಂದು ಚಾಪೆ ಹಾಸಿ ಮಿಟ್ಟಿ ್ನು ಮಲಗಿಸಿದಳು. ಹೊದಿಕೆ ಹೊದ್ದಿಸಿದಳು. ಟ್ಟಿಗೆ ಏನಾದರೂ ತಿಂಡಿ ಮಾಡಿ ತರುವೆ ೇಲೆ ಹಟ್ಟಿಗೆ ಹೋಗುವೆಯಂತೆ ಅಲ್ಲಿಯವರೆಗೆ ಅವಳ ರಲ್ಲಿರು ಅಂತ ಹೇಳಿ ಹೆಗ್ಗಡತಿ ದೊಡ್ಡ ಮನೆಯಳಗೆ ಸರಿದು ಹೋದರು. ನಿಂತರೂ ಮಳೆಗಳ ಹನಿಗಳು ಹೆಂಚಿನ ಮೇಲೆ ಗಿಡದಿಂದ ಉದುರುತ್ತಿದ್ದವು. ೂ ಬಿರುಗಾಳಿ ಬೀಸಿ ಸ್ತಬ್ಧವಾದಂತೆ ಮಾತಿಲ್ಲದೇ ಚೆಂದು ಮಲಗಿದ ಮಿಟ್ಟಿಯ ರಲ್ಲಿಯೇ ಶಿಲೆಯಂತೆ ಕುಳಿತಿದ್ದಳು.

ಂತ ಹೆಗಡೆಯವರಿಗೆ ಹೆದರಿ ಊರುಬಿಟ್ಟು ಹೋದ. ಆ ದಿನದಿಂದ ಮಾತು ದ ಮಿಟ್ಟಿ ಮತ್ತೆ ತಿರುಗಿ ಆ ಊರಿನಲ್ಲಿ ತನ್ನ ಬದುಕಿನಲ್ಲಿ ಮಾತೇ ಆಡಲಿಲ್ಲ. ತಿ, ಮನೆಮಗಳಂತೆ ಅವಳ ಕಾಳಜಿ ಮಾಡಿದರು. ಐದನೇ ಕ್ಲಾಸಿನ ಪರೀಕ್ಷೆ ಬರೆಯಲಿಲ್ಲ. ತನ್ನ ಮನೆಗೆ ಹೋಗಲು ಥರಥರ ನಡುಗುತ್ತಿದ್ದ ಮಿಟ್ಟಿಯನ್ನು ತಿ ಹಿತ್ತಲಿನ ಮನೆಯೊಳಗೆ ಅವಳನ್ನು ಭದ್ರವಾಗಿ ಕಾಪಿಟ್ಟರು. ಜಿಲ್ಲಾ ಡಾಕ್ಟರ ಹತ್ತಿರ ತಮಗೆ ತಿಳಿದಲ್ಲಿ ತೋರಿಸಿದರು. ತಾವು ಹೆತ್ತ ಮಗುವಿಗೆ ಆಘಾತವಾಗಿದೆ ಅಂತ ತೊಳಲಾಡಿದರು. ಊರಿನಲ್ಲಿ ಐತನ ಸಮಾಚಾರ ಗಾಳಿಯೊಂದಿಗೆ ಹರಡಿಕೊಂಡಿತು. ಮಿಟ್ಟಿ ದಿನ ಕಳೆದಂತೆಲ್ಲ ಶವದಂತೆ ಹೆಗ್ಗಡೆಯವರ ಮನೆಯ ಕೆಲಸಗಳನ್ನು ಮಾಡುತ್ತಿದ್ದಳು. ಅಲ್ಲೇ ಊಟ ಹಾಕುತ್ತಿದ್ದರು. ಹಿತ್ತಲಿನ ಮನೆಯಲ್ಲಿ ಮಲಗುತ್ತಿದ್ದಳು. ತುಂಬ ಬೇಸರವಾದಾಗ ಹಾಡಿಯ ಕೆರೆದಂಡೆಯ ಬಿದುರುಮೆಳೆ ಇರುವ ಜಾಗದಲ್ಲಿ ಹೋಗಿ ಕೂಡುತ್ತಿದ್ದಳು. ಅವಳ ಉದ್ದ ಜಡೆ, ಚಿಗರೆ ಕಣ್ಣುಗಳು, ಜಿಂಕೆ ಕಾಲುಗಳು ಎಲ್ಲಾ ಶಕ್ತಿ ಕಳೆದುಕೊಂಡವು. ಒಕ್ಕಲಿನ ಮನೆಗಳಲ್ಲಿ ಎಲ್ಲರೂ ಮಿಟ್ಟಿಯ ದೌರ್ಭಾಗ್ಯಕ್ಕೆ ಮರುಗುವವರೇ. ಇಡೀ ಹಳ್ಳಿಯ ಗೋಡೆ, ಮನೆ, ಗುಡಿಸಲುಗಳು, ಹಾಡಿಯ ಮರಗಳು, ಕೇದಿಗೆ ಬನ, ಬಿದುರು ಮೆಳೆ, ದನಕರುಗಳು ಮಿಟ್ಟಿ ಮೂಕಿಯಾಗಿದ್ದಕ್ಕೆ ಮರುಗಿದವು. ಅಪ್ಪ ಎನ್ನುವ ಆಸಾಮಿ ಅಪ್ಪಿತಪ್ಪಿಯೂ ಮಿಟ್ಟಿಯ ಬಗ್ಗೆ ವಿಚಾರಿಸಲು ಬರಲಿಲ್ಲ. ಶೃಂಗೇರಿ ಬದಿಯಲ್ಲಿ ಎಲ್ಲೋ ಇದ್ದಾನೆ ಎಂಬುದು ಸುದ್ದಿಯಾಗಿ ಹೆಗಡೆಯವರ ಕಿವಿ ಮುಟ್ಟಿತು. ಹೆಗ್ಗಡತಿ ತಮ್ಮ ಬೆಳೆಯುವ ಮಗಳೊಟ್ಟಿಗೆ ಮಿಟ್ಟಿಯನ್ನು ಪ್ರೀತಿಯಿಂದ ಬೆಳೆಸಿದರು. ಕರೆದರೆ ಸುಮ್ಮನೆ ಅವರ ಮುಂದೆ ಬಂದು ನಿಲ್ಲುವ ಮಿಟ್ಟಿಯನ್ನು ಕಂಡಾಗ ಅವರ ಎದೆಯಲ್ಲಿ ವಿಚಿತ್ರ ನೋವು ಹುಟ್ಟಿಕೊಳ್ಳುತ್ತಿತ್ತು. ಮಗಳು ಹೈಸ್ಕೂಲ ಕಾಲೇಜು ಮುಗಿಸಿ ಬಂದಾಗ, ಮಿಟ್ಟಿ ಮಾತ್ರ ಹೆಗ್ಗಡೆಯವರ ಮನೆಯ ಅಂಗಳ ಸಾರಿಸುವುದು, ಹೂಗಿಡಗಳಿಗೆ ನೀರು ಹಾಕುವುದು, ತೋಟದ ಕಳೆ ಕೀಳುವುದು, ಹೆಗ್ಗಡತಿಯೊಂದಿಗೆ ಹಪ್ಪಳ ಸೆಂಡಿಗೆ ತಯಾರಿಸುವುದು, ಸೀಗೆ ಕುಟ್ಟುವುದು ಮಾಡುತ್ತ ಎಳೆಯ ಕೈಗಳನ್ನು ಹುರಿಗೊಳಿಸಿದಳು. ಮೈಯೆಲ್ಲ ಕಣ್ಣಾಗಿ, ಕಣ್ಣೆಲ್ಲಾ ಕೈಯಾಗಿ ಹೆಗ್ಗಡತಿ ಅವಳ ಬದುಕು ಬವಣೆಯ ಉಡಿ ತುಂಬಿದರು.



ಹಿತ್ತಲಿನ ಗಿಡಗಳು ನೆರಳು ಚೆಲ್ಲಿವೆ. ಕೆರೆದಂಡೆಯ ಕೇದಿಗೆ ಹೊಯ್ಯುವ ಮಳೆಗೆ ಬಿರಿದಿವೆ. ಬಿದಿರಿನ ಮೆಳೆ ತುಂಬ ದಟ್ಟವಾಗಿ ಒಂದಕ್ಕೊಂದು ಬೆಸೆದು ನಿಂತಿವೆ. ಹೆಗ್ಗಡತಿ ಅಮ್ಮನ ಮುಟ್ಟು ನಿಂತಿದೆ. ಮಗಳ ಬಾಣಂತನ ಮಿಟ್ಟಿ ಓಡಾಡಿ ಮಾಡಿದ್ದಾಳೆ. ಮಳೆಗಾಲದ ಒಂದು ದಿನ ಹೊಟ್ಟೆ ತುಂಬ ಕಳ್ಳು ಕುಡಿದ ಮದವೇರಿದ ಐತ ಯಾವುದೋ ಊರಲ್ಲಿ ಜೋಲಿ ತಪ್ಪಿ ಬಿದ್ದು ಮಣ್ಣಾಗಿದ್ದಾನೆ. ಮಿಟ್ಟಿ ಇಪ್ಪತ್ತೈದರ ಆಸುಪಾಸಿನಲ್ಲಿ ಬರೀ ಹಾಡಿ, ಆಕಾಶ, ಕೆರೆದಂಡೆ, ಬಿದಿರು ಮೆಳೆ, ಅಂಗಳ ತೋಟ ಹೆಗ್ಗಡತಿಯ ಕೆಲಸಗಳೊಂದಿಗೆ ಮತ್ತಷ್ಟು ಮೌನವಾಗಿ ಕುಂತಿದ್ದಾಳೆ. ಕೆರೆದಂಡೆ ತುಂಬ ಹಬ್ಬಿದ ಮರಗಳ ಬೇರುಗಳಲ್ಲಿ ಏನೇನೋ ಹುಡುಕುತ್ತಾಳೆ. ಅನೈತಿಕ ಅತಿಕ್ರಮಣದ ರಾಕ್ಷಸ ಅವಳನ್ನು ಹಣ್ಣು ಮಾಡಿದೆ. ಅವಳು ಎಲ್ಲಾ ಕೊಳಕುಗಳಿಗೆ ಪಾತ್ರ ಆಗಿದ್ದಾಳೆ. ಮೊನ್ನೆ ಮುಂಗಾರಿನ ಭರದ ಮಳೆಗೆ ಬಿದಿರು ಮೆಳೆಯಲ್ಲಿ ಸಿಕ್ಕಿಹಾಕಿಕೊಂಡು ಹೊರಬರಲಾರದೇ ಒದ್ದಾಡಿ ಉಸಿರೆಳೆದಿದ್ದಾಳೆ.

ಕಸ್ತೂರಿ ಬಾಯರಿ
[illegible]

ವಾಡಿಕೆಯಲ್ಲಿರುವ ಭಾಷಾ ಬಳಕೆಯನ್ನು ಲಕ್ಷಿಸಿ, ...ನ್ಯ' ಮತ್ತು 'ಅನನ್ಯತೆ' ಎಂಬ ಪರಿಭಾಷೆಗಳನ್ನಿಲ್ಲಿ ...ನ್ವಯಿಸಲಾಗಿದೆ. ಇಂಗ್ಲಿಷ್‌ನಲ್ಲಿರುವ ಫಾರಿನ್ ಮತ್ತು ...ಜಿನಲ್ ಎಂಬ ನುಡಿಗಳನ್ನು ಇದಕ್ಕೆ ಸಂವಾದಿಯೆಂದು ...ಗಣಿಸಬಹುದು.

ಅನ್ಯ - ಅನನ್ಯತೆ
ಅಸ್ತಿತೆ - ಅಸ್ಮಿತೆ
ಪರಕೀಯ - ಸ್ವೀಯ
ಪರದೇಶಿ - ಸ್ವದೇಶಿ
ಬಹಿರಂಗ - ಅಂತರಂಗ
ಹೊರಗು - ಒಳಗು

...ಮೇಲ್ಕಾಣಿಸಿದ 'ದ್ವಂದ್ವಾತ್ಮಕ' ನೆಲೆಗಳನ್ನು ಕೇವಲ ...ರಿಗಳು ಅಥವಾ ವಿರುದ್ಧ ಧ್ರುವಗಳು ಎಂಬಂತೆ ...ಡಲಾಗುವುದಿಲ್ಲ. ಇವು ಒಂದರೊಳಗೊಂದು ...ತುಹೋಗುವ ವಿಚಾರಗಳೂ ಆಗಿವೆ. ಎಷ್ಟೋ ... ಇದು ಅನ್ಯ ಮತ್ತು ಇದು ಅನನ್ಯ ಎಂದು ಬಿಡಿಸಿ ...ರಿಸಲಾಗದ ರೀತಿಯಲ್ಲಿ ಒಂದರೊಳಗೊಂದು ...ಹೋಗಿರುತ್ತವೆ. ಇದಕ್ಕಿಂತಲೂ ವಿಚಿತ್ರವೆಂದರೆ, ...ಡ ಭಾಷೆಯ ಒಳನುಡಿ ವೈವಿಧ್ಯಗಳೇ (= ಶಿಷ್ಟಭಾಷೆ ...ತ್ತು ಪ್ರಮಾಣಭಾಷೆಯ ಕನ್ನಡವನ್ನು ಮಾತ್ರ ...ವರಿಗೆ) ಅನ್ಯವೆಂದು ತೋರಬಹುದು. ಕೇಂದ್ರಗಳ ...ರಿನಲ್ಲಿ ವಿಕೇಂದ್ರಗಳು ಅಥವಾ ಅಂಚುಗಳು ...ನ್ಯ'ವಾಗಿ ಕಾಣಬಹುದು. ಕನ್ನಡ ಸಾಹಿತ್ಯ ಸಂಸ್ಕೃತಿಯ ...ಯರು (ಉದಾಹರಣೆ : ಪಂಪ, ರನ್ನ, ಕುವೆಂಪು, ...ಂದ್ರೆ ಮುಂತಾದವರು) ಮುಂದೆ ಬರುವ ಕಿರಿಯರಿಗೆ ...ರು ಎನಿಸಿಬಿಡಬಹುದು. ಆದ್ದರಿಂದ, ಅನ್ಯ ಮತ್ತು ...ನ್ಯತೆಯ ಸಂಘರ್ಷಗಳನ್ನು ಬಹುಸೂಕ್ಷ್ಮ ದೃಷ್ಟಿಯಿಂದ ...ಶಿಸಬೇಕಾಗಿದೆ. ಈ ದೃಷ್ಟಿಯಿಂದ ಗೋಪಾಲಕೃಷ್ಣ ...ಗರ 'ನನ್ನ ನುಡಿ' ಬಹುಮುಖ್ಯವಾಗಿದೆ :

...ಅನ್ಯರೊರೆದುದನೆ ಬರೆದುದನೆ ಬರೆ ಬರೆದು
ಭಿನ್ನವಾಗಿದೆ ಮನವು. ಬಗೆಯೊಳಗನೆ ತೆರೆದು
ನನ್ನ ನುಡಿಯೊಳೆ ಬಣ್ಣ ಬಣ್ಣದಲಿ ಬಣ್ಣಿಸುವ
ಪನ್ನತಿಕೆ ಬರುವನಕ ನನ್ನ ಬಾಳಿದು ನರಕ...

ಇದು ಕವಿಯೊಬ್ಬನ ವ್ಯಕ್ತಿ ಪ್ರತಿಭೆಯ ಅನನ್ಯ ತುಡಿತ ಮಾತ್ರವಲ್ಲ! ಒಟ್ಟು ಕನ್ನಡ ಸಾಹಿತ್ಯ ಸಂಸ್ಕೃತಿ ಪರಂಪರೆಯ ಜೀವನಾಡಿಯಂತಿರುವ ಯುಗಯಾತ್ರೀಯಾದ ಅನನ್ಯ ತುಡಿತವಾಗಿದೆ. ಸೂರ್ಯ-ಚಂದ್ರರ ನೆರವಿನಿಂದ ಬೆಳಗುವ ವಸುಂಧರೆಗೆ ಸ್ವಯಂದೀಪಕತೆ, ಅವರಿವರ ನುಡಿಗಳನ್ನು ಕದ್ದು ಮರುನುಡಿಗೊಡುವ ದೆಸೆಗಳಿಗೆ ಮೀಸಲು ನಿನದ, ಸಂಧ್ಯಾರಾಗದಿಂದ ರಂಜಿತವಾಗುವ ಮೇಘಗಳಿಗೆ ಮೀಸಲು ಬಣ್ಣ ಸಿದ್ಧಿಯಾಗುವುದು ಎಂದಿಗೆ, ಎಂಬ ಮೀಸಲು ಪ್ರಶ್ನೆಗಳ ಮೂಲಕ ಅಡಿಗರ ಸ್ವಂತಿಕೆಯ ದಾಹವನ್ನು ತಿಳಿಯಬಹುದು. ಈ ದಾಹ ಕನ್ನಡ ಸಂಸ್ಕೃತಿಯ ದಾಹವೂ ಹೌದು!

ಅಡಿಗರು ಹೇಳುತ್ತಿರುವ ಅನ್ಯರು ಯಾರು? ಒಳಗಿನವರೆ? ಹೊರಗಿನವರೆ? ಅನ್ಯ ಮತ್ತು ಅನನ್ಯ ಬೇರೆ ಬೇರೆಯಲ್ಲ. ಕವಿ ಬೇಂದ್ರೆಯವರ ಬೆಳಗಿನೊಳಗಣ ಬೆಳಗು ಬಹು ಪ್ರಸಿದ್ಧವಾಗಿದೆ :

ಮೂಡಲ ಮನೆಯಾ ಮುತ್ತಿನ ನೀರಿನ
ಎರಕಾವ ಹೊಯ್ದಾ
ನುಣ್ಣ-ನ್ನೆರಕಾವ ಹೊಯ್ದಾ
ಬಾಗಿಲ ತೆರೆದೂ ಬೆಳಕು ಹರಿದೂ
ಜಗವೆಲ್ಲಾ ತೊಯ್ದಾ
ಹೋಯ್ತೋ - ಜಗವೆಲ್ಲಾ ತೊಯ್ದಾ

ಇಲ್ಲಿರುವ ಬಾಗಿಲು ಯಾವುದು ಮತ್ತು ಬೆಳಕು ಎಲ್ಲಿನದು, ಎಂಬ ಪ್ರಶ್ನೆ ಹಾಕಿಕೊಳ್ಳಬೇಕು. ಇದು ಮೂಡಣದ ಬಾಗಿಲು, ಮನೆಯ ಬಾಗಿಲು, ಮನದ ಬಾಗಿಲು – ಈ ಮೂರೂ ಆಗಬಹುದು. ಅಂತೆಯೇ, ಮೂಡಣದ ಬೆಳಕು, ಮನೆಯೊಳಗಿನ ಬೆಳಕು, ಮನದೊಳಗಿನ ಬೆಳಕು – ಈ ಮೂರೂ ಆಗಬಹುದು.

**ವಿ. ಚಂದ್ರಶೇಖರ ನಂಗಲಿ**

ಹೀಗೆ ನೋಡಿದರೆ ಮಾತ್ರ ಕವಿತೆಯ ಸಂಕೀರ್ಣತೆಯ ದರ್ಶನವಾಗುತ್ತದೆ. ಬಾಗಿಲು ತೆರೆದದ್ದು ಹೊರಗಿನಿಂದಲೆ? ಒಳಗಿನಿಂದಲೆ? ಬೆಳಕು ಹರಿದದ್ದು ಹೊರಗಿನಿಂದಲೆ? ಒಳಗಿನಿಂದಲೆ? – ಇಂಥ ಕ್ರಿಯಾಶೀಲ ಪ್ರಶ್ನೆಗಳಿಗೆ ಇಲ್ಲಿ ಅವಕಾಶವಿದೆ. ಹಲಸಂಗಿ ಗೆಳೆಯರು ಪ್ರಕಟಿಸಿದ 'ಗರತಿಯ ಹಾಡು' ಅದುವರೆಗೆ ಬೆಳಕಿಗೆ ಬಾರದಿದ್ದ ಕನ್ನಡ ಮೌಖಿಕ ಸಾಹಿತ್ಯದ ಒಳಗಿನೊಳಗಣ ಒಳಧಾರೆ. ಧಾರವಾಡದ 'ಗೆಳೆಯರ ಬಳಗ'ದ ಸಾಧನೆಯೂ ವಿಶಿಷ್ಟವಾಗಿದೆ. 'ಬೆಳಗು' ಕೇವಲ ಸೂರ್ಯೋದಯದ ಕವಿತೆಯಲ್ಲ! ಇದು ಕನ್ನಡ ನವೋದಯದ ಉದಯಗಾನ. ಕನ್ನಡ ಸಂಸ್ಕೃತಿಯೊಳಗಿನ ಬೆಳಕು ಹರಿದು ಬಾಗಿಲು ತೆರೆದಿದೆ. ಒಳಗಿನಿಂದ ಹೊರಗೆ ಮತ್ತು ಹೊರಗಿನಿಂದ ಒಳಗೆ ಎಂಬ ಇಬ್ಬಗೆಯ ಚಲನೆಗಳು ಇಲ್ಲಿವೆ. ಮಂಟೇಸ್ವಾಮಿ ಮತ್ತು ಮಲೆಮಾದೇಶ್ವರ ಕಾವ್ಯಗಳನ್ನು ಲಕ್ಷಿಸಿದರೆ, ಕನ್ನಡ ಸಂಸ್ಕೃತಿಯೊಳಗೇ ಇರುವ ಅನ್ಯಧಾರೆಗಳು ಕ್ರಮೇಣ ಅನನ್ಯವಾಗಿ ಮೂಡಿಬಂದಿರುವುದನ್ನಿಲ್ಲಿ ಮನಗಾಣಬಹುದು. ಇಂಗ್ಲಿಷ್ ವಿದ್ಯಾಭ್ಯಾಸ, ಪಾಶ್ಚಾತ್ಯ ಸಾಹಿತ್ಯದ ಪ್ರಭಾವಗಳು ಹೊರಗಿನಿಂದ ಹರಿದುಬಂದ ಬೆಳಕು! ಕನ್ನಡ ಸಂಸ್ಕೃತಿ ಈ ಅನ್ಯ ಧಾರೆಗಳಿಗೂ ಬಾಗಿಲು ತೆರೆದಿದೆ.

'ನನ್ನ ನುಡಿ'ಯಲ್ಲಿ ಅಡಿಗರು ಹೇಳಿರುವ ಮೀಸಲು ಬಣ್ಣ, ಮೀಸಲು ನಿನದ, ಸ್ವಯಂ ದೀಪಕತೆ ವಚನ ಸಾಹಿತ್ಯದಲ್ಲಿದೆ :

ಕಣ್ಣು ಮೀಸಲು ಶಿವನ, ಕೈ ಮೀಸಲು ಶಿವನ,
ಕಾಲು ಮೀಸಲು ಶಿವನ, ನಾಲಗೆ ಮೀಸಲು ಶಿವನ,
ಕಿವಿ ಮೀಸಲು ಶಿವನ, ನಾಸಿಕ ಮೀಸಲು ಶಿವನ,
ತನುಮನವೆಲ್ಲಾ ಮೀಸಲು ಶಿವನ
ಈ ಮೀಸಲು ಬೀಸರವಾಗದಂತಿರ್ದಡೆ
ಆತನೇ ಜಗದೀಶ ಕಾಣಾ! ರಾಮನಾಥ.

ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ಇಂದ್ರಿಯ

# ಕನ್ನಡ ಸಂಸ್ಕೃತಿಯಲ್ಲಿ ಅನ್ಯ ಮತ್ತು ಅನನ್ಯತೆಯ ಸಂಘರ್ಷಗಳು

**ಭಾಷಾ ಕ್ಷೇತ್ರದ 'ಲಿಖಿತ ನುಡಿಗಳು' ಜನ ವಿದೂರ ಭಾಷೆಯನ್ನು ಸೃಷ್ಟಿಸುತ್ತಿದ್ದರೆ, ಕೃಷಿಕ್ಷೇತ್ರದ 'ಸುಧಾರಿತ ತಳಿಗಳು' ಉತ್ಪತ್ತಿಕಾರಕವಾದ ಮಣ್ಣನ್ನು ವಿವೇಚನೆಯಿಲ್ಲದ ಕಂಪೆನಿ ಗೊಬ್ಬರ, ಕಂಪೆನಿ ಔಷಧಿಗಳಿಂದ ವಿಷಮಯಗೊಳಿಸುತ್ತಿರುತ್ತವೆ. ದೇಸಿಮೂಲದ ಬೀಜ-ಗೊಬ್ಬರ-ಔಷಧಗಳು ಮಣ್ಣಿನ ಪುನರುತ್ಪಾದನಾ ಶಕ್ತಿಯನ್ನು ಹೆಚ್ಚಿಸುತ್ತಿರುತ್ತವೆ. ಜನಪದರ ನಾಲಗೆಯ ನುಡಿಗಳು ಭಾಷೆಯ ಪುನರುತ್ಪಾದನಾ ಶಕ್ತಿಯನ್ನು ಹೆಚ್ಚಿಸುತ್ತಿರುತ್ತವೆ. ಭಾಷೆ, ಕೃಷಿ, ಸಂಸ್ಕೃತಿ, ಸಾಹಿತ್ಯ, ಸಿನೆಮಾ ಇವುಗಳಲ್ಲೆಲ್ಲ ಬಹು ಎಚ್ಚರದಿಂದ, ಬಹುಸೂಕ್ಷ್ಮ ದೃಷ್ಟಿಯಿಂದ ಅನ್ಯ ಮತ್ತು ಅನನ್ಯತೆಯ ಸಂಘರ್ಷಗಳನ್ನು ನಿರಂತರವಾಗಿ ಎದುರಿಸುತ್ತಲೇ ಇರಬೇಕಾಗುತ್ತದೆ.**

ಗಳಿಂದ ಪ್ರಾಪ್ತವಾಗುವ ಅನುಭವ ಜಗತ್ತು, ವಚನ ಸಾಹಿತ್ಯದ ಕನ್ನಡಿಗ ಇಲ್ಲಿಂದ ಮೂಡಿಬಂದಿದ್ದಾನೆ. ಇದು ಕನ್ನಡ ಸಂಸ್ಕೃತಿಯ ಬಿಂಬಜ್ಞಾನವಾಗಿದೆ. ಇಡೀ ವಚನ ಸಾಹಿತ್ಯವೇ ಕನ್ನಡದ ಪ್ರಪ್ರಥಮ ಮೀಸಲು ಸಾಹಿತ್ಯವಾಗಿದೆ. ಜೇಡರ ದಾಸಿಮಯ್ಯನ 'ಮೀಸಲು ವಚನ'ದಲ್ಲಿ ಆಹ್ವಾನ-ವಿಸರ್ಜನ (=ಅಲ್ಲಮನ ಸೊಲ್ಲುಗಳವು)ಗಳೆರಡೂ ಇವೆ. ಅನ್ಯದ ವಿಸರ್ಜನ, ಅನನ್ಯತೆಯ ಆಹ್ವಾನ ಇಲ್ಲಿದೆ. ಇದೇ ವಚನ ಚಳುವಳಿಯ, ಸಾಹಿತ್ಯದ ಅಂತಃಸತ್ವ !

ಕನ್ನಡ ಸಂಸ್ಕೃತಿಯಲ್ಲಿ ಅನ್ಯ ಮತ್ತು ಅನನ್ಯತೆಯ ಸಂಘರ್ಷಗಳನ್ನು ತಿಳಿಯಲು ಮೂರು ಪರಿಭಾಷೆಗಳನ್ನು ಬಳಸುತ್ತಿದ್ದೇನೆ : ಕನ್ನಡಾನುವಾದ, ಕನ್ನಡೀಕರಣ, ಕನ್ನಡತನ (= ಕುವೆಂಪು ಸೊಲ್ಲು). ಈ ಮೂರು ವಿಚಾರಗಳೇ ನನ್ನ ಇಂದಿನ ಭಾಷಣದ ತಿರುಳು ಎಂದು ಹೇಳಬಹುದು. ''ಸತ್ಯವೊಂದೇ ! ವಿಪ್ರರು ಅದನ್ನು ಅನೇಕ ಹೆಸರುಗಳಿಂದ ಕರೆಯುತ್ತಾರೆ'' – ಎಂಬಂತೆ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಸತ್ಯವನ್ನು ಹೇಳಲು ಅನೇಕಾನೇಕ ಪರಿಭಾಷೆಗಳನ್ನು ಬಳಸುವ ಮೂಲಕ ವಿಮರ್ಶಕರು ಓದುಗ ವಲಯವನ್ನು ಗೊಂದಲದ ಗೊಂಡಾರಣ್ಯಕ್ಕೆ ತಳ್ಳಿಬಿಡುತ್ತಾರೆ. ನಾನು ಹೀಗೆ ಮಾಡದೆ, ಅತ್ಯಂತ ಸರಳವಾದ ಅಷ್ಟೇ ಸಂಕೀರ್ಣವಾದ ಮೇಲಿನ ಮೂರು ಪರಿಭಾಷೆಗಳಿಂದ ಸತ್ಯವೊಂದನ್ನು ತಿಳಿಯಲು ಯತ್ನಿಸುತ್ತೇನೆ :

೧. ಕನ್ನಡಾನುವಾದ ೨. ಕನ್ನಡೀಕರಣ ೩. ಕನ್ನಡತನ

| ೧. ಕನ್ನಡಾನುವಾದ | ೨. ಕನ್ನಡೀಕರಣ | ೩. ಕನ್ನಡತನ |
|---|---|---|
| ಅಗ್ನಿಜ್ವಾಲೆ | ಸ್ವಯಂಪ್ರಭೆ | ಜೀವಪ್ರಭೆ |
| ಡಬ್ಬಿಂಗ್ | ರೀಮೇಕ್ | ಒರಿಜಿನಲ್ |

ಮೇಲ್ಕಾಣಿಸಿದ ವಿಚಾರಸರಣಿಯನ್ನು ಭಾಷೆ-ಸಾಹಿತ್ಯ-ವ್ಯಾಕರಣ, ಪ್ರಕೃತಿ ವಿಜ್ಞಾನಗಳು, ಮಾನವಿಕ ಅಧ್ಯಯನಗಳು, ತಂತ್ರಜ್ಞಾನ, ಸಿನೆಮಾ ಮುಂತಾದ ಸಕಲ ವಿಧವಾಗಿರುವ ಮೇಲು ರಚನೆಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಬಳಸಿದ್ದೇನೆ. ಕನ್ನಡದ ಪ್ರಥಮ ನವೋದಯದಲ್ಲೆ ಕನ್ನಡಾನುವಾದ, ಕನ್ನಡೀಕರಣ, ಕನ್ನಡತನಗಳೆಂಬ ಮೂರು ಧಾರೆಗಳಿವೆ.

ಕನ್ನಡಾನುವಾದ ಅಥವಾ ಅನುವಾದ ಮಾರ್ಗ ಎಂಬುದು ಅಗ್ನಿಜ್ವಾಲೆಯಿದ್ದಂತೆ ! ಬೆಂಕಿಯಿಂದ ಚಳಿ ಕಾಯಿಸಿಕೊಳ್ಳಬಹುದು, ಅಡುಗೆ ಮಾಡಿಕೊಳ್ಳಬಹುದು, ಸುಟ್ಟುಕೊಂಡು ಸಾಯಬಹುದು. ಅಗತ್ಯ ಮತ್ತು ಅಪಾಯಗಳೆರಡನ್ನೂ ಮೇಳೈಸಿಕೊಂಡಿರುವ 'ಕನ್ನಡಾನುವಾದ' ಕುರಿತು ಎಚ್ಚರವಿರಬೇಕು. ಕಾಳಿದಾಸಂಗಂ ಸಾಸಿರ್ಮಡಿ ಮಿಗಿಲೆಂದು ಜಂಭ ಕೊಚ್ಚಿಕೊಂಡ ಪೊನ್ನನು ಅದೇ ಕಾಳಿದಾಸನ ಕಾವ್ಯಗಳಿಂದ ಆಯ್ದ ಭಾಗಗಳನ್ನು ಅನುವಾದ ಮಾಡಿದ್ದಾನೆಂಬುದನ್ನು ಆಚಾರ್ಯ ಡಿ. ಎಲ್. ನರಸಿಂಹಾಚಾರ್ ತೋರಿಸಿಕೊಟ್ಟಿದ್ದಾರೆ. ಪೊನ್ನನ ಪ್ರತಿಭೆ ಅನುವಾದವೆಂಬ ಅಗ್ನಿಜ್ವಾಲೆಯಲ್ಲಿ ಸುಟ್ಟುಹೋಯಿತು.

ಕನ್ನಡೀಕರಣವು ಅನುವಾದ ಮಾರ್ಗಕ್ಕಿಂತ ಉನ್ನತವಾದುದು. ಪಂಪ-ರನ್ನರ ಕಾವ್ಯಗಳು ಕನ್ನ... ಕರಣಕ್ಕೆ ಅತ್ಯುತ್ತಮ ನಿದರ್ಶನಗಳು. ಪಂಪರ... ಸಂಸ್ಕೃತ ವಿರಚಿತ ಶಬ್ದಜ್ಞಾನದೊಳಗೆ ಕನ್ನಡ ಸಂಸ್ಕೃತಿ... ಬಿಂಬಜ್ಞಾನವನ್ನು ನಿರೂಪಿಸಿದರು. ಇದ... ಅರ್ಥಮಾಡಿಕೊಳ್ಳದೆ ದೋಷವೆಂದು ಬಗೆದ ಇಬ... ಸಂಸ್ಕೃತ ವಿದ್ವಾಂಸರ ಉದಾಹರಣೆ ಕೊಡುತ್ತೇನೆ :

**೧. ಕೆ. ಕೃಷ್ಣಮೂರ್ತಿ :** ನಾನು ಎಂ.ಎ. ಓದುತ್ತಿ... ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯ... ಕೇಂದ್ರವು ಡಾ|| ಜಿ. ಎಸ್. ಶಿವರುದ್ರಪ್ಪನ... ನೇತೃತ್ವದಲ್ಲಿ 'ಪಂಪ-ಒಂದು ಅಧ್ಯಯನ'ವ... ವಿಚಾರ ಸಂಕಿರಣವನ್ನು ಹಮ್ಮಿಕೊಂಡಿತ್ತು. ಇದ... ಭಾಗವಹಿಸಿದ್ದ ಡಾ|| ಕೆ. ಕೃಷ್ಣಮೂರ್ತಿಯವರು ಕ... ಕವಿಗಳು 'ನಾಗ' (= ಆನೆ) ಎಂಬ ಸಂಸ್ಕೃತ ಶಬ್ದ... ತಪ್ಪಾಗಿ ಅರ್ಥಮಾಡಿಕೊಂಡು (= ಸರ್ಪವೆಂದು ತಿ... ದುರ್ಯೋಧನನ ಧ್ವಜ ಲಾಂಛನವನ್ನು 'ಸರ್ಪ... ಎಂದು ನಿರೂಪಿಸಿದ್ದಾರೆ ಎಂದು ಪ್ರತಿಪಾದಿಸಿದ್ದಾರೆ... ಸಂಬಂಧ ಪ್ರಕಟಿತ ಪ್ರಶ್ನೋತ್ತರ ಹೀಗಿದೆ :

**ಪ್ರಶ್ನೆ :** ದುರ್ಯೋಧನನ ಲಾಂಛನದ ಪನ್ನಗಪತಾ... ಉರಗಪತಾಕ, ಇತ್ಯಾದಿಗಳು ಕನ್ನಡ ಕವಿ... ಸಂಸ್ಕೃತದ 'ನಾಗ' (= ಆನೆ) ಎಂಬುದನ್ನು ತ... ತಿಳಿದಿದ್ದರ ಪ್ರಯೋಗ ಎನ್ನುತ್ತೀರಿ. ಅ... ದುರ್ಯೋಧನನ ಛಲ, ಪ್ರತೀಕಾರ ಮನೋ... ಉರಗಪತಾಕ, ಸರ್ಪಧ್ವಜ, ಪನ್ನಗಪತಾಕ ...

ಾತುಗಳು ತುಂಬ ಧ್ವನಿಪೂರ್ಣ ಸಂಕೇತಗಳಾಗು ವೆಂದು ನಿಮಗೆ ಅನಿಸುವುದಿಲ್ಲವೆ ?

**ಉತ್ತರ** : ಮನೋವೈಜ್ಞಾನಿಕ ದೃಷ್ಟಿಯಿಂದ ಕವಿ ೊಬ್ಬನು ಧ್ವನಿಪೂರ್ಣವಾದ ಸಂಕೇತವಾಗುವಂತೆ ರ್ಯೋಧನನ ಧ್ವಜ-ಲಾಂಛನವನ್ನು ಸೃಷ್ಟಿಸ ೊರಟಾಗ ನೀವು ಎತ್ತಿದ ಪ್ರಶ್ನೆ, ಮಾಡುವ ಸೂಚನೆ ುಂಜಸವಾಗುತ್ತವೆ. ಆದರೆ ಮಹಾಭಾರತದ ್ಯಸರು ಅರ್ಜುನನ ಧ್ವಜದಲ್ಲಿ ಕಪಿಯನ್ನು, ೀಕೃಷ್ಣನ ಧ್ವಜದಲ್ಲಿ ಗರುಡನನ್ನು ಹೇಳಿಲ್ಲವೇ ? ಇಲ್ಲಿ ವರಿಗೆ ಇದ್ದುದನ್ನು ಇದ್ದಂತೆ ನಮೂದಿಸುವ ತಿಹಾಸಿಕ ವರದಿಗಾರನ ದೃಷ್ಟಿ ಮಾತ್ರ ವ್ಯಕ್ತ ಗುವುದಿಲ್ಲವೆ ? ಈ ಮಾತೇ ದುರ್ಯೋಧನನ ಜಕ್ಕೂ ಅನ್ವಯಿಸುತ್ತದೆ. ಅದನ್ನು ಅವರು ಆನೆ ಂದು ಹೇಳಿದ್ದು ನಿಜವಾದರೆ ಅದನ್ನು ಬದಲು ಾಡುವ ಸ್ವಾತಂತ್ರ್ಯ ಯಾವ ಕವಿಗೂ ಇರಲಾರದು.

ಅತ್ಯಂತ ಶ್ರೇಷ್ಠ ವಿದ್ವಾಂಸರಾದ ಕೃಷ್ಣಮೂರ್ತಿ ಅವರ ಮನೋಧರ್ಮವನ್ನು 'ಮೂಲವ್ಯಾಧಿ' (= ೂಲದ ಬಗ್ಗೆ ಇರುವ ನಿಷ್ಠೆ) ಎಂದೇ ೆಯಬೇಕಾಗಿದೆ.




ಹೆಣ್ಣನ್ನು ಅನಾದರದಿಂದ ಕಾಣುವ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕಿದ್ದ ರನ್ನನು ಮೀಸೆವೊತ್ತಣ್ಣಂದಿರಿಗಿಂತ ಮಿಗಿಲಾದ ರೀತಿಯಲ್ಲಿ (= ವಿಧವೆಯಾಗಿ ಒಳಗೊಳಗೆ ನವೆಯುತ್ತಿದ್ದ) ಅತ್ತಿಮಬ್ಬೆಯ ದುಃಖವನ್ನು ಕಾವ್ಯವನ್ನಾಗಿ ಪರಿವರ್ತಿಸಿದ್ದಾನೆ. ಅಮಾನವೀಯವಾದ 'ಸಹಗಮನ'ದಂಥ ದಳ್ಳುರಿಯಲ್ಲಿ ಬೆಂದು ಮಾಸ್ತಿ ಕಲ್ಲಾಗುವ ಹಿಂಸೆಯ ಎದುರಿನಲ್ಲಿ, ಮನವನ್ನು ಕಲ್ಲು ಮಾಡಿಕೊಂಡ ಮಾನಿನಿಯೆಂಬಂತೆ ಅತ್ತಿಮಬ್ಬೆಯನ್ನು ವರ್ಣಿಸಿರುವುದು ಸರಿಮಿಗಿಲಾಗಿದೆ. ಇಂಥ ಅತ್ತಿಮಬ್ಬೆಯ ಚರಿತೆಯಿಂದ ಪ್ರೇರಣೆಯನ್ನು ಪಡೆದ ಹರಿಹರನು ಮುಂದೆ ಬಸವಾದಿ ಶರಣರನ್ನು ಕುರಿತು ನೂತನರ-ರಗಳೆಗಳನ್ನು ಬಹುದೊಡ್ಡ ಪ್ರಮಾಣದಲ್ಲಿ ಸೃಷ್ಟಿಸಿ 'ಕನ್ನಡತನ'ವನ್ನು ಮೆರೆದಿದ್ದಾನೆ. ಕಾವ್ಯ ವಸ್ತುವಿಗೆ ಅನ್ಯಮೂಲದತ್ತ ಕಣ್ಣೆತ್ತಿಯೂ ನೋಡದೆ, ತನ್ನ ಸುತ್ತಣ ಬದುಕನ್ನೇ ಆಧರಿಸಿದ ಬಗೆಯನ್ನೇ ನಾನಿಲ್ಲಿ 'ಕನ್ನಡತನ'ವೆಂದು ಕರೆದಿದ್ದೇನೆ.

**೨. ಸುಕ್ತಂಕರ್** : ಸಂಸ್ಕೃತದ ವ್ಯಾಸ ಭಾರತವನ್ನು ಪುನಾರಚನೆ ಮಾಡುವ ಂದರ್ಭದಲ್ಲಿ ಭಾರತದ ಇತರ ಭಾಷೆಗಳು ಮತ್ತು ದೇಶಭಾಷೆಗಳಲ್ಲಿರುವ ಹಾಭಾರತದ ಕಾವ್ಯಗಳನ್ನು ಆಕರವಾಗಿ ಬಳಸಿಕೊಳ್ಳುವಾಗ, ಪಂಪ ರನ್ನರ ವ್ಯಗಳನ್ನು 'ತಗುಳ್ಚಿ ಪೋಲಿಪ' ಕಥನಗಳಾದ್ದರಿಂದ ಸಾಂಕರ್ಯ ಮಾರ್ಗದ ಚನೆಗಳೆಂದು ನಿರ್ಣಯಿಸಿ, ಹೊರಗಿಟ್ಟಿದ್ದನ್ನು ಕುರಿತು ಡಾ॥ ಎಲ್. ಬಸವರಾಜು ೀಗೆ ಪ್ರತಿಕ್ರಿಯಿಸಿದ್ದಾರೆ :

''...ಪ್ರೊ॥ ಸುಕ್ತಂಕರರಾದರೂ ವ್ಯಾಸ ಭಾರತವನ್ನು ಅತ್ಯಾಧುನಿಕವಾಗಿ ಿಷ್ಕರಿಸುವಲ್ಲಿ ನನ್ನಯ್ಯನ ತೆಲುಗು ಭಾರತ ಮುಂತಾದ್ದನ್ನು ಗಮನಿಸಿರುವರಾದರೂ, ಂಪ ಭಾರತವನ್ನು (ಅದರಲ್ಲಿ ಬರುವ ಅರ್ಜುನ ಪಾತ್ರವನ್ನು ಅರಿಕೇಸರಿಯೆಂಬ ್ಬ ಸಾಮಂತರಾಜನೊಡನೆ ಸಮೀಕರಿಸಲಾಗಿದೆಯಾಗಿ, ಆ ಮಟ್ಟಿಗೆ ಮೂಲ ರತಕ್ಕೆ ಭಿನ್ನವಾದ ಕೆಲವು ಧೋರಣೆಗಳೂ ವಿವರಗಳೂ ತಲೆದೋರಿರುವ ರಣಕ್ಕಾಗಿಯೇ) ಕೈಬಿಟ್ಟಿರುವುದೊಂದು ದುರದೃಷ್ಟದ ಸಂಗತಿ. ಈ ಹೇಳಿದ ುೀಕರಣ ಮತ್ತು ಅದಕ್ಕೆ ಹೊಂದುವಂತೆ ಮಾಡಿಕೊಂಡಿರುವ ಕೆಲವು ಣವೆನ್ನಬಹುದಾದ ವ್ಯತ್ಯಾಸಗಳನ್ನೂ ಸೇರ್ಪಡೆಗಳನ್ನೂ ನಿರ್ಲಕ್ಷಿಸುವುದಾದರೆ, ಕ್ಕಂತೆ ಪಂಪ ಭಾರತವು ವ್ಯಾಸ ಭಾರತದ ಪ್ರಾಚೀನ ಪಾರದರ್ಶನಕ್ಕೆ ಕನಕನ ಡಿಯೇ ಆಗಬಲ್ಲುದು...''

- *ಸರಳ ಪಂಪಭಾರತ (೧೯೯೯), ಅರಿಕೆ, ಪು. ೫*

'ನಾಗ' ಎಂದರೆ 'ಆನೆ' ಎಂಬ ಅರ್ಥದಲ್ಲೆ ನಾಗಪುರ (= ಹಸ್ತಿನಾವತಿ) ಮತ್ತು ನಾಗ ಎಂಬ ಪ್ರಯೋಗಗಳಿವೆ. ಕನ್ನಡ ಕವಿಗಳಾದವರು ತಪ್ಪಾಗಿ ಅರ್ಥಮಾಡಿ ಳ್ಳುವ ಪ್ರಶ್ನೆಯೇ ಇಲ್ಲ! ಮೂಲವ್ಯಾಧಿಗೊಳಗಾದರೆ ಎಂಥ ಪ್ರಮಾದಗಳಾಗುತ್ತವೆ ಬುದಕ್ಕೆ ಘನ ವಿದ್ವಾಂಸರಾದ ಕೆ. ಕೃಷ್ಣಮೂರ್ತಿ ಮತ್ತು ಸುಕ್ತಂಕರ್ ಇಬ್ಬರೂ ರ್ಶನವಾಗಿ ಉಳಿಯುತ್ತಾರೆ. ಮಡಿಮೈಲಿಗೆಯನ್ನು ಪಾಲಿಸುವ ವಿದ್ವಾಂಸರಿಗೆ ಂಪರನ್ನರ ಕಾವ್ಯಗಳು ಸಾಂಕರ್ಯಮಾರ್ಗದ ರಚನೆಗಳೆಂದು ಅನ್ನಿಸಬಹುದಾದರೂ, ುಗೆ ಇವರಿಬ್ಬರ ಕನ್ನಡೀಕರಣದ ಮಾರ್ಗವು ಅನನ್ಯತೆಯ ಪ್ರತೀಕವಾಗಿವೆ.

'ಕನ್ನಡತನ' ಎಂಬುದು ಕನ್ನಡೀಕರಣಕ್ಕಿಂತಲೂ ಒಂದು ಹೆಜ್ಜೆ ಮುಂದಿನದಾಗಿದೆ. ನ್ನನ 'ಅಜಿತ ಪುರಾಣ'ಕ್ಕೆ ಕೋಡಣಸಿನಂತಿರುವ 'ಅತ್ತಿಮಬ್ಬೆಯ ಚರಿತೆ'ಯು ್ನಡತನಕ್ಕೆ ಉತ್ತಮ ನಿದರ್ಶನವಾಗಿದೆ. ಪಂಪನನ್ನು ಹೆಜ್ಜೆ-ಹೆಜ್ಜೆಗೂ ುಸರಿಸಿಯೂ ತನ್ನ ಅನನ್ಯತೆಯನ್ನು ಕಾಯ್ದುಕೊಂಡಿರುವ ರನ್ನನು ಅತ್ತಿಮಬ್ಬೆಯ ಿತೆಯನ್ನು ಬರೆದು ಪಂಪನಿಗಿಂತಲೂ ಒಂದು ಹೆಜ್ಜೆ ಮುಂದಿಟ್ಟಿದ್ದಾನೆ. ್ರಯದಾತ ರಾಜರನ್ನು ಸಮೀಕರಿಸುವ ಪದ್ಧತಿಯಲ್ಲೆ ಕೃತಿ ರಚನೆ ಮಾಡಿರುವ ್ನನು ಅತ್ತಿಮಬ್ಬೆಯ ಸ್ತ್ರೀ ಮೂರ್ತಿಯನ್ನು ಮನಮುಟ್ಟುವಂತೆ ವರ್ಣಿಸಿದ್ದಾನೆ.

ಕನ್ನಡಾನುವಾದ-ಕನ್ನಡೀಕರಣ-ಕನ್ನಡತನಗಳೆಂಬ ಮೂರು ಹಾದಿಗಳಲ್ಲಿ ತುಂಬ ಎಚ್ಚರವಹಿಸಬೇಕಾಗಿರುವುದು ಕನ್ನಡಾನುವಾದದ ಬಗ್ಗೆ. ಈ ಮಾರ್ಗದಲ್ಲಿ ನಿರ್ಭೀತಿಯಿಂದ ನಡೆದ ಪೊನ್ನನು ಅವಳ ತೊಡುಗೆ ಇವಳಿಗಿಟ್ಟು ಜಂಭದ ಕೋಳಿಯಾದನು! ಪಂಪ-ರನ್ನರು ಸಂಸ್ಕೃತದ ಅಕ್ಷರ ಜಗತ್ತನ್ನು ಕನ್ನಡದ ಅನುಭವ ಜಗತ್ತಿಗೆ ರೂಪಾಂತರ ಮಾಡಿದರು. ಆದರೆ, ಇವರೆಲ್ಲರಿಗಿಂತ ಮಿಗಿಲಾದ ಅನನ್ಯತೆಯನ್ನು ವಚನಕಾರರಲ್ಲಿ ನೋಡುತ್ತೇವೆ. ವಚನಕಾರರು ಕನ್ನಡವನ್ನು ಸಂಸ್ಕೃತದ ಎತ್ತರಕ್ಕೆ ಏರಿಸಿದರು. ವಚನ ಸಾಹಿತ್ಯವೆಂದರೆ ಕನ್ನಡತನದ ಸ್ವಾತಂತ್ರ್ಯ ಧ್ವಜಾರೋಹಣವೆಂದೇ ಹೇಳಬಹುದು.

ಕನ್ನಡ ಸಂಸ್ಕೃತಿಯ ಮೂರು ಅಲೆಗಳನ್ನು ಕಾಲದ ಕಟ್ಟಳೆಯಲ್ಲಿಟ್ಟು ನೋಡುವುದಾದರೆ ಹೀಗಿರುತ್ತದೆ :

೧. ಪ್ರಾಚೀನ ಕಾಲ : ಸಂಸ್ಕೃತ ಭಾಷೆ ಮತ್ತು ಆರ್ಷೇಯ ಸಂಸ್ಕೃತಿ.

೨. ಮಧ್ಯಕಾಲೀನ ಕಾಲ : ಪರ್ಸೋ-ಅರಾಬಿಕ್ ಭಾಷೆ ಮತ್ತು ಮಧ್ಯಪ್ರಾಚ್ಯ ಸಂಸ್ಕೃತಿ.

೩. ಆಧುನಿಕ ಕಾಲ : ಇಂಗ್ಲಿಷ್ ಭಾಷೆ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿ.

ಮೇಲಿನ ಮೂರೂ ಭಾಷಾ ಸಂಸ್ಕೃತಿ (= ಗುರು)ಗಳೊಂದಿಗೆ ಕನ್ನಡ ಭಾಷಾ ಸಂಸ್ಕೃತಿ ಶಿಷ್ಯನಂತೆ ವರ್ತಿಸಿದೆ. ಇಲ್ಲಿ ಆರ್ಯ ಸಂಸ್ಕೃತಿ ಅಥವಾ ಹಿಂದೂ ಸಂಸ್ಕೃತಿ ಅಥವಾ ವೈದಿಕ ಸಂಸ್ಕೃತಿ ಎಂಬ ರಾಜಕೀಯ ವಾಸನೆಯುಳ್ಳ ಪದಗಳಿಗೆ ಬದಲು 'ಅತ್ಯಂತ ಹಿಂದಿನ' ಎಂಬರ್ಥದ 'ಆರ್ಷೇಯ' ಪದವನ್ನು ಉದ್ದೇಶಪೂರ್ವಕವಾಗಿ ಬಳಸಲಾಗಿದೆ. ಮೇಲ್ಕಾಣಿಸಿದ ಮೂರೂ ಭಾಷಾ ಸಂಸ್ಕೃತಿಗಳೊಂದಿಗೆ ಕನ್ನಡವು ಹೊಂದಿರುವ ಗುರು-ಶಿಷ್ಯ ಸಂಬಂಧ ಬಹುಸೂಕ್ಷ್ಮ ಮತ್ತು ವಿಸ್ಮಯಕಾರಕವಾಗಿದೆ. ಇದನ್ನು ಜೇಡರ ದಾಸಿಮಯ್ಯನವರ ಬೆಡಗಿನ ವಚನವೊಂದರ ಬೆಳಕಿನಲ್ಲಿಟ್ಟು ಬೆರಗನ್ನು ಒಳಹೊಕ್ಕು ನೋಡಬಹುದು :

*ತಲೆಯಿಲ್ಲದ ಗುರು, ಕಾಲಿಲ್ಲದೆ ನಿಂದ ನೋಡ !*
*ಒಡಲಿಲ್ಲದ ಶಿಷ್ಯನಾದ ಪರಿಯ ನೋಡ !*
*ಗುರುವಿನ ಒಡಲ ಬಗೆದು ಹುಟ್ಟಿದಾತ*
*ಒಡನೆ ಗುರುಸಹಿತ ನಿಂದ ನಿಲವನೇನೆಂಬೆನಯ್ಯಾ*
*ರಾಮನಾಥ !*

ಈ ಬೆಡಗಿನ ವಚನದಲ್ಲಿ ಗುರುಭಕ್ತಿ-ಗುರುಹತ್ಯೆಗಳೆರಡೂ ಹದವಾಗಿ ಬೆರೆತಿವೆ. ಇದು ಗುರುಭಕ್ತಿ, ಇದು ಗುರುಹತ್ಯೆ - ಎಂಬ ವಿಂಗಡಣೆ ಸರಳವಾದದ್ದು. ನಿಜವಾಗಿ ಆಗಬೇಕಾದುದೆಂದರೆ, ಗುರುಭಕ್ತಿ-ಗುರುಹತ್ಯೆಗಳ ವ್ಯತ್ಯಾಸ ಅಳಿಯಬೇಕು. ಜ್ಞಾನಕ್ಕೆ ಆದಿ ಆಧಾರವಿಲ್ಲ (= ಕಾಲಿಲ್ಲ). ಅಂತ್ಯವಿಲ್ಲ (= ತಲೆಯಿಲ್ಲ). ಶಿಷ್ಯನಿಗೆ ನಾನೆಂಬ ಅಹಂಕಾರವಿಲ್ಲ (= ಒಡಲಿಲ್ಲ), ಜ್ಞಾನದ ಗರ್ಭವನ್ನು ಹೊಕ್ಕು ಹೊರಬಂದಾತ (= ಬಗೆದು ಹುಟ್ಟಿದಾತ) ಸುಜ್ಞಾನಿಯಾಗಿ ಸಲ್ಲುವನು.

ಸಂಸ್ಕೃತ (= ಕೃತಯುಗ), ಪರ್ಸೋ-ಅರಾಬಿಕ್ (= ತ್ರೇತಾಯುಗ), ಇಂಗ್ಲಿಷ್

(= ದ್ವಾಪರಯುಗ) ಭಾಷೆಗಳ ಗುರುಸನ್ನಿಧಿಯಿಂದಾಗಿ ಕನ್ನಡಕ್ಕೆ ಶಿಷ್ಯತ್ವ ಪ್ರಾಪ್ತಿಯಾಗಿದೆ. ಗುರುಸನ್ನಿಧಿಯನ್ನು ಬಗೆದು ಹುಟ್ಟಿದ ಕನ್ನಡ ಶಿಷ್ಯನ (= ಕಲಿಯುಗದ) ಕಟ್ಟಳೆಯ ಕಲಿತನಕ್ಕೆ ಬೆರಗಾಗಲೇಬೇಕು. ಕನ್ನಡ ಭಾಷೆಯ ಪದಕೋಶ ಅಥವಾ ಕನ್ನಡ ನುಡಿಯ ಸೊಗಡುಗಳ ಕಣಜ ೧. ಕನ್ನಡಾನುವಾದ ೨. ಕನ್ನಡೀಕರಣ ೩. ಕನ್ನಡತನಗಳಿಂದ ಸಮೃದ್ಧವಾದ ರಾಶಿಯಾಗಿದೆ.

**ಕನ್ನಡಾನುವಾದ** : ಹೊಸ ವಸ್ತುವಿಗೆ ಹಳೆಯ ಪದಗಳ ನಿರ್ದೇಶನ ಇಲ್ಲಿರುತ್ತದೆ. ಇದರಲ್ಲಿ ಮೂರು ಬಗೆಗಳಿವೆ :

೧. ಆಕಾಶವಾಣಿ, ಜಂಗಮವಾಣಿ ಮಾದರಿ

೨. ಬಾನುಲಿ, ನಡೆಯುಲಿ ಮಾದರಿ

೩. ಸೀಮೆಸುಣ್ಣ, ಸೀಮೆಎಣ್ಣೆ, ಗುಂಡುಪಿನ್ನು ಮಾದರಿ

ಮೇಲಿನ ಮೂರು ಬಗೆಗಳಲ್ಲಿ ಮೊದಲೆರಡು ಮಾದರಿಗಳು ಸಮರ್ಪಕ ಭಾಷಾ ಬಳಕೆಯಲ್ಲ! ಮೂರನೆಯದಾದ ವರ್ಣನಾತ್ಮಕ ಮಾದರಿ ಒಪ್ಪಿಕೊಳ್ಳುವಂತಿದೆ. ಕನ್ನಡದಲ್ಲಿ ಮೊದಲೆರಡು ಬಗೆಗಳಿಗೆ ಸಿಕ್ಕಿರುವ ಪ್ರಾಶಸ್ತ್ಯದಿಂದಾಗಿ, 'ಆಡಳಿತ ಕನ್ನಡ'ವು ಜನ ವಿದೂರವಾಗಿಬಿಟ್ಟಿದೆ. ಈ ಕಾರಣದಿಂದಲೆ ಅನುವಾದ ಮಾರ್ಗವು ಅಪಾಯಕಾರಿಯಾಗಿದೆ.

**ಕನ್ನಡೀಕರಣ/ಕನ್ನಡತನ** : ಹೊಸವಸ್ತುವಿನ ಜೊತೆಗೆ ಹೊಸ ಪದದ ಆಗಮನವಿಲ್ಲಿದೆ. ಇದರಲ್ಲಿರುವ ಬಗೆಗಳಿವು :

೧. ಹೊಸ ವಸ್ತು + ಹೊಸ ಪದ = ರೈಲು, ಮೊಬೈಲು ಮಾದರಿ

೨. ಹಳೆಯ ವಸ್ತು + ಹೊಸ ಪದ = ಪ್ಲೇಟು, ರೈಸು ಮಾದರಿ

ಪಾತ್ರೆಯ ಮೇಲಿನ ಮುಚ್ಚಳ, ತಟ್ಟೆ, ಅನ್ನ ಇವು ಹಳೆಯ ವಸ್ತುಗಳು. ಇವನ್ನು ಹೊಸ ಪದಗಳಿಂದ ಕರೆಯುವ ಬಗೆ. ಇವೆರಡು ಬಗೆಗಳನ್ನು ಜನಪದರಲ್ಲಿ ಕಾಣುತ್ತೇವೆ.

ಕನ್ನಡ ಮಾತು ತಲೆಯೆತ್ತುವ ಬಗೆ - ಬಿ. ಎಂ. ಶ್ರೀಕಂಠಯ್ಯ

ಕಂಗ್ಲಿಷ್ ಎಂದರೆ ಭಯವೇಕೆ ? - ಕೆ. ವಿ. ನಾರಾಯಣ

ಈ ದಿಸೆಯ ಗಮನಾರ್ಹ ಲೇಖನಗಳಾಗಿವೆ.



**ಕನ್ನಡ ಕಳಚಿದ ಪೊರೆ** : ಹಳೆಯ ವಸ್ತುವನ್ನು ನಿರ್ದೇಶಿಸುವ ಹಳೆಯ ಪದ... ಕಾಲಕ್ರಮೇಣ ಕಳಚಿದ ಪೊರೆಗಳಾಗುವುದುಂಟು! ಉದಾಹರಣೆ : ಏತ, ಕ... ಹಲಗೆ, ಬಳಪ, ಇಕ್ಕಳ ಇತ್ಯಾದಿ. ಮೂಡ, ಪಡುವ, ಬಡಗ, ತೆಂಕ, ನೇಸರ, ತಿಂ... ಅರಿಲ್ ಎಂಬ ಅಚ್ಚಕನ್ನಡ ಪದಗಳು ಕಳಚಿದ ಪೊರೆಯಾಗಿದ್ದರೆ, ಪೂರ್ವ, ಪಶ್ಚಿ... ಉತ್ತರ, ದಕ್ಷಿಣ, ಸೂರ್ಯ, ಚಂದ್ರ, ನಕ್ಷತ್ರ - ಇವು ಸಂಸ್ಕೃತವಾಗಿದ್ದರೂ ಜನ... ಬಳಕೆಯಿಂದ ಮಾನ್ಯವಾಗಿವೆ.

ಭಾಷೆಯೊಂದರ ಪದಕೋಶ ಅಥವಾ ನುಡಿ ಕಣಜವನ್ನು ಸಮೃದ್ಧಗೊಳಿಸು... ಜನಭಾಷೆಗಳತ್ತ ಕಿವಿಗೊಡಬೇಕು. ಕನ್ನಡ ಜನಪದರ ನಾಲಗೆಯೇ ಆದಿಶಕ್ತಿ. ಆಡ... ಕನ್ನಡದ ಹೆಸರಿನಲ್ಲಿ ಅನುವಾದ ಮಾರ್ಗಕ್ಕೆ ಬೆಲೆಕೊಟ್ಟು ಜನವಿದೂರವಾಗು... ಕನ್ನಡಕ್ಕೆ ಶ್ರೇಯಸ್ಕರವಲ್ಲ! ಕನ್ನಡ ಜನಪದರ ಭಾಷಾಬಳಕೆಯನ್ನು ಆಲಿಸಿ, ಆಡ... ಕನ್ನಡದ ಪದಕೋಶವನ್ನು ರೂಪಿಸಬೇಕು. ಇದೇ ಭಾಷಿಕ ಪ್ರಜಾಪ್ರಭ... (= ಲಿಂಗ್ವಿಸ್ಟಿಕ್ ಡೆಮಾಕ್ರಸಿ). ಆದರೆ, ವಿದ್ವಜ್ಜನರ ಅನುವಾದ ಮಾರ್ಗಕ್ಕೆ ಸಿಕ್ಕಿ... ಮಾನ್ಯತೆಯಿಂದಾಗಿ ನಮ್ಮ 'ಆಡಳಿತ ಕನ್ನಡ'ದಲ್ಲಿ ಭಾಷಿಕ ಸರ್ವಾಧಿಕಾರ (= ಲಿಂಗ್ವಿ... ಡಿಕ್ಟೇಟರ್‌ಶಿಪ್) ವಿಜೃಂಭಿಸುತ್ತಿದೆ. ಕನ್ನಡಾನುವಾದವೆಂಬ ಅಗ್ನಿಜ್ವಾಲೆಯಲ್ಲಿ ಕ... ಸಂಸ್ಕೃತಿ ಸುಡುತ್ತಿರುವುದನ್ನು ಇನ್ನಾದರೂ ಅರ್ಥಮಾಡಿಕೊಳ್ಳಬೇಕು. ಸಂಸ್ಕೃತಿ... ಯಜಮಾನರುಗಳು ಕನ್ನಡ ಗೋವಿನ ಮುದ್ದು ಕರುಗಳಾಗಬೇಕೇ ಹೊ... ರಕ್ತಹೀರುವ ಉಣ್ಣೆಗಳಾಗಬಾರದು !

*ಉಣ್ಣೆ ಕೆಚ್ಚಲ ಹತ್ತಿ ಉಂಬುದೇ ನೊರೆವಾಲ ?*
*ಪುಣ್ಯಕ್ಷೇತ್ರದಲ್ಲಿ ಹುಟ್ಟಿ ಉಣ್ಣದವನು*
*ಆ ಉಣ್ಣೆಯಿಂದ ಕರಕಷ್ಟ ರಾಮನಾಥ.*

ಕನ್ನಡ ಜನಪದರೆಂದರೆ ಕನ್ನಡ ನುಡಿಯ ಜಂಗಮ ಜನಾರ್ದನರು. ಇವರು ... ಬದುಕಿನಲ್ಲಿ ಅಳವಡಿಸಿಕೊಂಡಿರುವ ಕನ್ನಡೀಕರಣ ಮತ್ತು ಕನ್ನಡತನಗ... ಉಣ್ಣದವರು ಆ ಉಣ್ಣೆಯಿಂದ ಕರಕಷ್ಟರಾಗುತ್ತಾರೆ. ಕನ್ನಡ ಭಾಷಾ ಸಂಸ್ಕೃತಿ... ಜೀವನಾಡಿಯನ್ನು ಬಲ್ಲ ಡಾ|| ಕೆ. ವಿ. ನಾರಾಯಣ ಅವರು ಹೀಗೆ ಹೇಳಿದ್ದಾ... "ಕನ್ನಡ ಸಂಸ್ಕೃತಿಗೆ ಈಗ ಒಳಗೊಳ್ಳುವ ನೆಲೆ ಒದಗಿಬಂದಿದೆ"... (ಪದ... ಮಯೂರ, ಆಗಸ್ಟ್ - ೨೦೦೭) ಕನ್ನಡದ ಯಜಮಾನ ಭಾಷೆ ಇನ್ನು ಮು... ಕನ್ನಡದ ಜನಭಾಷೆಗಳನ್ನು ಒಳಗೊಳ್ಳುವುದನ್ನು ಕಲಿಯಬೇಕು.

ಹತ್ತನೇ ಶತಮಾನದಲ್ಲಿ ಸಂಸ್ಕೃತ ವ್ಯಾಕರಣದ ಪಡಿಯಚ್ಚಿನಲ್ಲಿ ಕೇಶಿರಾ... ಶಬ್ದಮಣಿದರ್ಪಣ ಎರಕವಾಗಿ ಮೂಡಿಬಂದಿದೆ. ಇದರ ನಂತರ, ಒಂದು ಸಾ... ವರ್ಷಗಳಾದ ಮೇಲೆ, ಡಾ|| ಡಿ. ಎನ್. ಶಂಕರ್‌ಭಟ್ ಅವರ 'ಕನ್ನಡಕ್ಕೆ ಬೇ... ಕನ್ನಡದ್ದೇ ವ್ಯಾಕರಣ' (೨೦೦೦) ಎಂಬ ಗ್ರಂಥ ಅನನ್ಯವಾಗಿ ಒಡಮೂಡಿ... ಇದೊಂದು ಅಪೂರ್ವ ಗ್ರಂಥ. ಇದಕ್ಕೆ ಬೀಜರೂಪದಂತಿರುವ ಲೇಖನ : 'ಕ... ವ್ಯಾಕರಣದಲ್ಲಿ ಸಂಸ್ಕೃತದ ದೆವ್ವ' (೧೯೭೦) ಎಂಬುದನ್ನು ಡಿ. ಎನ್. ಶಂಕರ್‌ಭ... ಅವರೇ ಮೂವತ್ತು ವರ್ಷಗಳ ಹಿಂದೆಯೇ ರಚಿಸಿದ್ದನ್ನಿಲ್ಲಿ ಸ್ಮರಿಸಿಕೊಳ್ಳಬಹು... ಪ್ರಸ್ತುತ, ಡಿ.ಎನ್.ಎಸ್. ಅವರ ಶೈಲಿಯಲ್ಲೇ ಕನ್ನಡಕ್ಕೆ ಬೇಕಾದ ಕನ್ನಡತನ... ಪಟ್ಟಿಯನ್ನೇ ತಯಾರಿಸಬಹುದು :

೧. **ಕನ್ನಡಕ್ಕೆ ಬೇಕು ಕನ್ನಡದ್ದೇ ಕಥನಗಳು** - ಕ್ರಿ.ಶ. ಏಳನೆ ಶತಮಾನದ ... ಅರಭಟ್ಟನ ಶಾಸನದಿಂದ ಆರಂಭಗೊಂಡ ಕನ್ನಡ ಕಥನವು ಅತ್ತಿಮಬ್ಬೆ, ನೂ... ಶರಣರ ಕಥನದಲ್ಲಿ ಮೊಳಕೆಯೊಡೆದು, ಗಿಡವಾಗಿ ಬೆಳೆದು ಹೆಮ್ಮರವಾದ ಬಗೆಯ... ಕುವೆಂಪು ಕಾದಂಬರಿಗಳಲ್ಲಿ ಮನಗಾಣಬಹುದು. ನಂತರ ಇದು ಬಿಳಲು ಬ... ದೊಡ್ಡಾಲದ ಮರವಾಗಿ ವಿಸ್ತರಿಸುತ್ತಿರುವುದನ್ನು ಪ್ರತ್ಯಕ್ಷವಾಗಿ ಅನುಭವಿಸುತ್ತಿದ್ದೇವೆ.

೨. **ಕನ್ನಡಕ್ಕೆ ಬೇಕು ಕನ್ನಡದ್ದೇ ಸಾಹಿತ್ಯ** - ಕನ್ನಡದಲ್ಲಿ ಅನುವಾದ ಮಾಗ... ಪ್ರತಿಧ್ವನಿಗಳು ಅಥವಾ ಗುಹಾ ಧ್ವನಿಗಳು ಇವೆಯಾದರೂ ಅನನ್ಯತೆಗೆ ಬರಗಾಲ... ಜನಪದ ಸಾಹಿತ್ಯ, ವಚನ ಸಾಹಿತ್ಯ, ತತ್ವಪದಗಳು ಜೀವಪ್ರಭೆಯಂತೆ ತಮ್ಮ ಪಾ... ತಾವು ಕತ್ತಲೆಯಲ್ಲಿ ಈಜಾಡುತ್ತಿವೆ.

೩. **ಕನ್ನಡಕ್ಕೆ ಬೇಕು ಕನ್ನಡದ್ದೇ ವಿಮರ್ಶೆ** - ಪಾಶ್ಚಿಮಾತ್ಯ ಸಾಹಿತ್ಯ ವಿಮರ್ಶೆಯ... ಓದಿಕೊಂಡವರು ಅದನ್ನು ಕನ್ನಡದಲ್ಲಿ ಭಟ್ಟಿಯಿಳಿಸಿದಂತೆ ವಿಮರ್ಶೆ ಮಾ... ವುದುಂಟು. ಆದರೆ, "ಕನ್ನಡ ಸಂಸ್ಕೃತಿಗೆ ಈಗ ಒಳಗೊಳ್ಳುವ ನೆಲೆ ಒ... ಬಂದಿದೆ..." (ಕೆ. ವಿ. ನಾರಾಯಣ). ಕನ್ನಡ ತನ್ನ ಒಳಗನ್ನೇ ಆಹ್ವಾನ ಮಾ... ಕೊಳ್ಳುವ ಕಾಲಘಟ್ಟದಲ್ಲಿ ನಾವಿದ್ದೇವೆ. ಈ ದಿಸೆಯಲ್ಲಿ ಕೆ.ವಿ.ಎನ್. ಅವರ '...

ಡಿಗಳು ಸಾಕು' – ಎಂಬ ಪ್ರಸಿದ್ಧ ಲೇಖನವನ್ನು ಸ್ಮರಿಸಿ ಳ್ಳಬಹುದು.

೪. **ಕನ್ನಡಕ್ಕೇ ಬೇಕು ಕನ್ನಡದ್ದೇ ಪ್ರಕೃತಿ ವಿಜ್ಞಾನಗಳು** - ಡದಲ್ಲಿ ಪ್ರಕೃತಿ ವಿಜ್ಞಾನಗಳು ಅನನ್ಯವಾಗಿ ಮೂಡಿ ಬುತ್ತಿಲ್ಲ. ಶಾಲಾ-ಕಾಲೇಜುಗಳಲ್ಲಿ ಹೇಳಿಕೊಡುತ್ತಿರುವ ಪ್ರಕೃತಿ ಜ್ಞಾನಗಳು ಇಂಗ್ಲಿಷ್ ವಿದ್ಯಾಭ್ಯಾಸದ 'ಅನ್ಯ' ಫಲಗಳೇ ರತು, ಕನ್ನಡದ್ದೇ ನೆಲದ ಪ್ರಕೃತಿ ವಿಜ್ಞಾನಗಳಲ್ಲ. ಈ ಯಲ್ಲಿ ಶಿವರಾಮ ಕಾರಂತ, ಬಿ.ಜಿ.ಎಲ್. ಸ್ವಾಮಿ, ರ್ಣಚಂದ್ರ ತೇಜಸ್ವಿ ಅವರ ಪ್ರಯತ್ನಗಳು ಬಹು ವಿಶಿಷ್ಟವೂ ನ್ಯವೂ ಆಗಿವೆ. ಕನ್ನಡದಲ್ಲಿಯೇ ಪ್ರಕೃತಿ ವಿಜ್ಞಾನಗಳನ್ನು ಗೆ ರೂಪಿಸಬೇಕೆಂಬುದನ್ನು ವಿದ್ವಜ್ಜನರು ಗಂಭೀರವಾಗಿ ತನೆ ನಡೆಸಬೇಕು.

೫. **ಕನ್ನಡಕ್ಕೆ ಬೇಕು ಕನ್ನಡದ್ದೇ ಮಾನವಿಕ ಅಧ್ಯಯನಗಳು** - ದು ಶಾಲಾ-ಕಾಲೇಜು-ವಿಶ್ವವಿದ್ಯಾಲಯಗಳಲ್ಲಿ ಹೇಳಿ ಡುತ್ತಿರುವ ಮಾನವಿಕ ಅಧ್ಯಯನಗಳು ಇಂಗ್ಲಿಷ್ ವಿದ್ಯಾಭ್ಯಾಸದ ಅನ್ಯಫಲ ಗಿವೆ. ಕನ್ನಡ ಕಾದಂಬರಿಗಳ ಭವಿಷ್ಯ ಕುರಿತು ಯು. ಆರ್. ಅನಂತಮೂರ್ತಿ ರು ಮಾತನಾಡುತ್ತಾ ಸಮಾಜಶಾಸ್ತ್ರಜ್ಞ, ಅರ್ಥ ಶಾಸ್ತ್ರಜ್ಞ, ಸಂಸ್ಕೃತಿ ಶಾಸ್ತ್ರಜ್ಞರಿ ತಲೂ ತುಂಬ ಮಿಗಿಲಾದ ಕನ್ನಡ ಕಾದಂಬರಿಗಳ ಅನನ್ಯತೆಯ ಬಗ್ಗೆ ತನಾಡಿದ್ದಾರೆ. ಸ್ವಂತಿಕೆಯಿಲ್ಲದ ಶಾಸ್ತ್ರಜ್ಞರು 'ಸ್ಥಾವರ' ಆಗಿರುವುದನ್ನೂ, ಪ್ರತಿಭೆ ಂದ ಕೂಡಿದ ಕಾದಂಬರಿಕಾರರು ತಮ್ಮ ಕೃತಿಗಳಲ್ಲಿ 'ಜಂಗಮ'ವಾಗಿರುವುದನ್ನೂ ರಗಂಡು, ಇದನ್ನಾಧರಿಸಿದ ಕನ್ನಡ ಚಿಂತನೆಯನ್ನು ಇನ್ನಾದರೂ ರೂಪಿಸಬೇಕಾಗಿದೆ.

೬. **ಕನ್ನಡಕ್ಕೆ ಬೇಕು ಕನ್ನಡದ್ದೇ ತತ್ವಜ್ಞಾನ** – ಕನ್ನಡದ ಬೌದ್ಧಿಕ ಪರಂಪರೆಯ ದೊಡ್ಡ ಪ್ರತೀಕ ಅಲ್ಲಮಪ್ರಭು. ತತ್ವಜ್ಞಾನದ ಬೋಧನೆಯಲ್ಲಿ ಸ್ನಾತಕ ಮತ್ತು ತಕೋತ್ತರ ನೆಲೆಗಳಲ್ಲಿ ಅಲ್ಲಮಪ್ರಭು ಸಿಲಬಸ್ ಭಾಗವಾಗಿಯೇ ಬರಬೇಕು. ಡ ತತ್ವಜ್ಞಾನದ ಚೋಮೋಲುಂಗ್ಮಾ (= ಮೌಂಟ್ ಎವರೆಸ್ಟ್) ಅಲ್ಲಮಪ್ರಭು ಬುದು ಎಲ್ಲರಿಗೂ ಅರಿವಾಗಬೇಕು. ಇದರೊಂದಿಗೆ, ಕೈವಾರದ ತಾತಯ್ಯ, ನಾಳ ಶರೀಫ, ಕನಕದಾಸರು ಕೂಡ ಸೇರಿಕೊಳ್ಳಬೇಕು. ಕನ್ನಡ ಜನಪದರ ಅಜ್ಞಾತ ನೆಲೆಗಳು) ತತ್ವಜ್ಞಾನವು ಉನ್ನತವಾಗಿದೆ. ಇವೆಲ್ಲ ಕನ್ನಡದ ವಾಕ್ಯಾರ್ಥ ರ್ನವಾಗಿ ಮೂಡಿಬರಬೇಕು.

ಕೊನೆಯದಾಗಿ, ಅನುವಾದ ಮಾರ್ಗ ಮತ್ತು ಸಾಂಕರ್ಯ ಮಾರ್ಗಗಳಲ್ಲಿ ತುಳಿಯ ಕಾದ, ಕ್ರಮಿಸಬೇಕಾದ ದಾರಿ ಯಾವುದೆಂಬುದನ್ನು ತುಂಬ ಎಚ್ಚರದಿಂದ ನಿರ್ಣಯಿಸಿ ಳ್ಳಬೇಕು. ಇಲ್ಲದಿದ್ದರೆ, ಅಲ್ಲಮನು ಹೇಳಿದಂತೆ ''ನಿರ್ಣಯ ವಿನರಿಯದ ಮನವೆ! ುಡವನು ಆಹಾರಗೊಂಡೆಯಲ್ಲಾ?''... ಎಂಬ ಪರಿಸ್ಥಿತಿಗೊಳಗಾಗುತ್ತೇವೆ :

| ಅನುವಾದ ಮಾರ್ಗ | ಸಾಂಕರ್ಯ ಮಾರ್ಗ |
| --- | --- |
| ಮಡಿವಂತಿಕೆ | ಮೈಲಿಗೆ |
| ಭಾಷಿಕ ಹಿನ್ನಡೆ | ಭಾಷಿಕ ಮುನ್ನಡೆ |
| ಸುಧಾರಿತ ತಳಿಗಳು | ಜವಾರಿ ತಳಿಗಳು |
| ಲಿಖಿತ ನುಡಿಗಳು | ನಾಲಗೆಯ ನುಡಿಗಳು |
| ಸುಧಾರಿತ ಧರ್ಮಗಳು | ಹೃದಯ ಧರ್ಮಗಳು |
| ಡಬ್ಬಿಂಗ್ ವಿರೋಧಿ | ಡಬ್ಬಿಂಗ್ ಸ್ನೇಹಿ |
| ಕನ್ನಡ ಮಾದರಿ | ತೆಲುಗು ಮಾದರಿ |

ಪಂಪ-ರನ್ನರಿಂದ ಆರಂಭಗೊಂಡ ಸಾಂಕರ್ಯ ಮಾರ್ಗವನ್ನು ತೊರೆದು, ಅನುವಾದ ರ್ಗವನ್ನು ತುಳಿಯುತ್ತಿರುವ ಕನ್ನಡ ಭಾಷಾ ಸಂಸ್ಕೃತಿ ದಿಕ್ಕು ತಪ್ಪಿದ ನಾವೆಯ ಪಯಣ ದೆ. ಕನ್ನಡ ಸಿನೆಮಾರಂಗದಲ್ಲಿ ಡಬ್ಬಿಂಗ್ ವಿರೋಧಿ ಚಳುವಳಿಯೇ ನಡೆದಿದೆ. ಬಿ.ಎ. ಓದುತ್ತಿದ್ದಾಗ ಭಾರತೀಯ ಸಿನೆಮಾರಂಗದಲ್ಲಿ ಹಿಂದಿಗೆ ಪ್ರಥಮ ಇತ್ತು. ತೆಲುಗು ಎರಡನೆ ಸ್ಥಾನದಲ್ಲಿತ್ತು. ಆಗ ವರ್ಷವೊಂದಕ್ಕೆ ಅತಿ ಹೆಚ್ಚು ಯ ಸಿನೆಮಾಗಳು ಹಿಂದಿ ಸಿನೀರಂಗದಲ್ಲಿ ತಯಾರಾಗುತ್ತಿದ್ದವು. ಒಂದು ಕಾಲಕ್ಕೆ ಮಾ ನಿರ್ಮಿಸಲು ಚನ್ನೈ ಅನ್ನು ಆಧರಿಸಿದ್ದ ತೆಲುಗು ಸಿನೀರಂಗ ಕ್ರಮೇಣ ಹೈದರಾಬಾದ್ ವಾ ಭಾಗ್ಯನಗರ್‌ಗೆ ಸ್ಥಳಾಂತರಗೊಂಡಿತು. ಇಂದು ಇಡೀ ಭಾರತದಲ್ಲಿ ವರ್ಷ

**ಲಂಚ**

**ತಾಯಿಯಿಂದ ಬರುವ ಖಾಯಿಲೆಯಲ್ಲ ಪರಿಸರದಿಂದ ಆಯ್ದುಕೊಳ್ಳುವ ಅಂಟುರೋಗ**

ವೊಂದಕ್ಕೆ ಅತಿ ಹೆಚ್ಚು ಸಂಖ್ಯೆಯ ಸಿನೆಮಾಗಳು ತೆಲುಗಿನಲ್ಲಿ ತಯಾರಾಗುತ್ತಿವೆ. ಹಾಲಿವುಡ್‌ನ ಕ್ಲಾಸಿಕಲ್ ಸಿನೆಮಾಗಳಿಂದ ಹಿಡಿದು ಇಂದಿನ ಅತ್ಯಂತ ಕೆಟ್ಟ ಇಂಗ್ಲಿಷ್ ಸಿನೆಮಾಗಳವರೆಗೆ ನಾವಿಂದು ತೆಲುಗಿನಲ್ಲಿ ನೋಡುವ ಅವಕಾಶ ಲಭ್ಯವಿದೆ. ಈ ವಿಷಯದಲ್ಲಿ ತಮಿಳು ಕೂಡ ಹಿಂದೆ ಬಿದ್ದಿಲ್ಲ. ಹಾಲಿವುಡ್‌ನ ಕ್ಲಾಸಿಕಲ್ ಸಿನೆಮಾ ಮೆಕೆನ್ನಾಸ್ ಗೋಲ್ಡ್ ನಾನು ಹತ್ತಕ್ಕೂ ಹೆಚ್ಚು ಸಲ ನೋಡಿದ್ದೇನೆ. ತೀರ ಇತ್ತೀಚೆಗೆ ಇದನ್ನು ತೆಲುಗು ಡಬ್ಬಿಂಗ್ ನಲ್ಲೂ ನೋಡಿದೆ. ಇದಕ್ಕಾಗಿ ಅಳವಡಿಸಿದ್ದ ತೆಲುಗಿನ ಚುರುಕು ಸಂಭಾಷಣೆಗಳು ಹಾಡುಗಳು ಹೃದ್ಯವಾಗಿದ್ದವು. ಗ್ರೆಗರಿ ಪೆಕ್, ಓಮರ್ ಷರೀಫ್ ತೆಲುಗಿನಲ್ಲಿ ಮಾತನಾಡಿದ್ದು (= ವಾಯ್ಸ್ ಡಬ್ಬಿಂಗ್) ನನಗೆ ಖುಷಿ ಎನಿಸಿತು. ಆದರೆ, ಈ ಅವಕಾಶ ಕನ್ನಡಿಗರಿಗೆ ಬೇಡವೆ ? ಹೃತಿಕ್ ರೋಶನ್, ಶಾ ರುಖ್ ಖಾನ್, ಸಲ್ಮಾನ್ ಖಾನ್ ಮಾತ್ರವಲ್ಲದೆ ತಮಿಳು, ಮಲೆಯಾಳ, ಕನ್ನಡ ಸಿನೆಮಾಗಳು ಕೂಡ ತೆಲುಗು ಅವತರಣಿಕೆಗಳಲ್ಲಿ ಬರುತ್ತಲೇ ಇವೆ. ಅದೇ ರೀತಿ ತೆಲುಗು ಚಿತ್ರಗಳು ಹಿಂದಿ, ತಮಿಳು ಭಾಷೆಗಳಿಗೆ ಡಬ್ಬಿಂಗ್ ಮೂಲಕ ಹೋಗುತ್ತಲೇ ಇವೆ. ಕನ್ನಡ ಸಿನೀರಂಗ ಮಾತ್ರ ದ್ವೀಪ ಸದೃಶವೆಂಬಂತೆ ಏಕಾಂಗಿಯಾಗಿದೆ. ಡಬ್ಬಿಂಗ್ ವಿರೋಧಿಯಾಗಿ ಆಧುನೀಕರಣಕ್ಕೆ ಎರವಾಗಿದೆ.

'ಆಡಳಿತ ಕನ್ನಡ'ದ ಹೆಸರಿನಲ್ಲಿ ಭಾಷಿಕವಾಗಿ ಡಬ್ಬಿಂಗ್ ಮಾಡಿಕೊಳ್ಳುತ್ತಿರುವ ಕನ್ನಡ ಭಾಷಾ ಸಂಸ್ಕೃತಿಯು ಸಿನೆಮಾದಂತಹ ಸಮೂಹ ಮಾಧ್ಯಮಗಳ ವಿಷಯದಲ್ಲಿ ಡಬ್ಬಿಂಗ್ ವಿರೋಧಿಯಾಗಿರುವುದು ಆರೋಗ್ಯಕರವೆನಿಸುವುದಿಲ್ಲ. ಭಾಷಿಕವಾಗಿ ಡಬ್ಬಿಂಗ್ ವಿರೋಧಿಯಾಗಿರುವ 'ಆಡಳಿತ ತೆಲುಗು' ಇಂಗ್ಲಿಷ್‌ಅನ್ನು ಹೆಚ್ಚು ಹೆಚ್ಚಾಗಿ ಒಳಗೊಳ್ಳುತ್ತಿದೆ. ತೆಲುಗು ನ್ಯೂಸ್‌ಪೇಪರ್ ಮತ್ತು ಕನ್ನಡ ದಿನಪತ್ರಿಕೆಯನ್ನು ಕೈಗೆತ್ತಿಕೊಂಡು ತೌಲನಿಕವಾಗಿ ಪರಿಶೀಲಿಸಿದರೆ, ಅತಿ ಹೆಚ್ಚು ಪ್ರಮಾಣದ ಇಂಗ್ಲಿಷ್ ಶಬ್ದಗಳು ತೆಲುಗು ನ್ಯೂಸ್‌ಪೇಪರಿನಲ್ಲಿರುತ್ತವೆ. ಆಡಳಿತ ತೆಲುಗಿನ ಒಂದು ಸಣ್ಣ ಉದಾಹರಣೆಯನ್ನು ಹೇಳುವುದಾದರೆ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆಯ ಬಸ್ಸುಗಳಲ್ಲಿ ಚಾಲಕ, ನಿರ್ವಾಹಕ ಎಂಬ ಶಬ್ದಗಳು ಬಳಕೆಯಲ್ಲಿದ್ದರೆ ಆಂಧ್ರದ ಆರ್.ಟಿ.ಸಿ. ಬಸ್ಸುಗಳಲ್ಲಿ ಡ್ರೈವರ್, ಕಂಡಕ್ಟರ್ ಎಂಬ ಶಬ್ದಗಳೇ ಬಳಕೆಯಲ್ಲಿವೆ. ಈ ಸೂಚನೆ ಗಮನಿಸಿ :

– ಸ್ಟಾರ್ಟ್ ಚೇಸಿನ ೩ ನಿ... ಇಂಜಿನ್‌ನು ಐಡ್ಲಿಂಗ್ ಲೋ ವುಂಚವಲೆನು. ಇಂಜಿನ್ ಆಪೇ ಮುಂದು ಕೂಡಾ ಐಡ್ಲಿಂಗ್ ಲೋ ವುಂಚವಲೆನು.

– ಈ ಬಸ್ಸುಕು ಹೈಡ್ರಾಲಿಕ್ ಕ್ಲಚ್ ಉನ್ನದಿಕಾವುನ ಕ್ಲಚ್ ಪೆಡಲ್ ಪೈ ಕಾಲುವುಂಚಿ ಬಸ್ಸು ನಡುಪರಾದು.

– ಎಯಿರ್ ಕ್ಲೀನರ್ ಇಂಡಿಕೇಟರ್‌ಲೋ ಎರುಪುರಂಗು ಬ್ಯಾಂಡ್ ವಚ್ಚುನಪ್ಪುಡು ಎಯಿರ್ ಕ್ಲೀನರ್ ತೀಸಿ ಮೆಯಿಂಟ್‌ನೆನ್ಸ್ ಚೇಯವಲೆನು.

ಈ ಬಗೆಯ 'ತೆಲುಗು ಮಾದರಿ' ಕನ್ನಡ ಭಾಷಾ ಸಂಸ್ಕೃತಿಗೆ ಅಗತ್ಯವೆಂಬ ದೃಷ್ಟಿ ನನ್ನಲ್ಲಿದೆ.

ಭಾಷಾ ಕ್ಷೇತ್ರದ 'ಲಿಖಿತ ನುಡಿಗಳು' ಜನವಿದೂರ ಭಾಷೆಯನ್ನು ಸೃಷ್ಟಿಸುತ್ತಿದ್ದರೆ, ಕೃಷಿಕ್ಷೇತ್ರದ 'ಸುಧಾರಿತ ತಳಿಗಳು' ಉತ್ಪತ್ತಿಕಾರಕವಾದ ಮಣ್ಣನ್ನು ವಿವೇಚನೆಯಿಲ್ಲದ ಕಂಪೆನಿ ಗೊಬ್ಬರ, ಕಂಪೆನಿ ಔಷಧಿಗಳಿಂದ ವಿಷಮಯಗೊಳಿಸುತ್ತಿರುತ್ತವೆ. ದೇಸಿಮೂಲದ ಬೀಜ-ಗೊಬ್ಬರ-ಔಷಧಗಳು ಮಣ್ಣಿನ ಪುನರುತ್ಪಾದನಾ ಶಕ್ತಿಯನ್ನು ಹೆಚ್ಚಿಸುತ್ತಿರುತ್ತವೆ. ಜನಪದರ ನಾಲಗೆಯ ನುಡಿಗಳು ಭಾಷೆಯ ಪುನರುತ್ಪಾದನಾ ಶಕ್ತಿಯನ್ನು ಹೆಚ್ಚಿಸುತ್ತಿರುತ್ತವೆ. ಭಾಷೆ, ಕೃಷಿ, ಸಂಸ್ಕೃತಿ, ಸಾಹಿತ್ಯ, ಸಿನೆಮಾ ಇವುಗಳಲ್ಲೆಲ್ಲ ಬಹು ಎಚ್ಚರದಿಂದ, ಬಹುಸೂಕ್ಷ್ಮದೃಷ್ಟಿಯಿಂದ ಅನ್ಯ ಮತ್ತು ಅನನ್ಯತೆಯ ಸಂಘರ್ಷಗಳನ್ನು ನಿರಂತರವಾಗಿ ಎದುರಿಸುತ್ತಲೇ ಇರಬೇಕಾಗುತ್ತದೆ.

✤ *ಬಳ್ಳಾರಿಯಲ್ಲಿ ಐದು ದಶಕಗಳ ನಂತರ ನಾಡಹಬ್ಬದ ಆಚರಣೆಯನ್ನು ದಿನಾಂಕ ೧೯-೦೯-೨೦೦೯ರಿಂದ ೨೧-೦೯-೨೦೦೯ರವರೆಗೆ ಮೂರು ದಿನಗಳ ಕಾಲ ವೈ. ಮಹಾಬಳೇಶ್ವರಪ್ಪ, ಜೋಳದ ರಾಶಿ ದೊಡ್ಡನ ಗೌಡ ಷಷ್ಟಿಪೂರ್ತಿ ಟ್ರಸ್ಟ್ ಹಾಗೂ ಲೋಹಿಯಾ ಪ್ರಕಾಶನ ಸಂಯುಕ್ತವಾಗಿ ಸಂಘಟಿಸಿ, ಬಳ್ಳಾರಿಯ ಎಸ್. ಜಿ. ಪದವಿಪೂರ್ವ ಕಾಲೇಜಿನಲ್ಲಿ ನೆರವೇರಿಸಿತು. ೨೧-೦೯-೨೦೦೯ರಂದು ಸಮಾರೋಪ ಸಮಾರಂಭದಲ್ಲಿ ಮಾಡಿದ ಭಾಷಣವನ್ನು ಆಧರಿಸಿದ ಲೇಖನವಿದು.*

ವಿ. ಚಂದ್ರಶೇಖರ ನಂಗಲಿ
ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಾನಗಲ್ - ೫೮೧ ೧೦೪




# ಮಾಧ್ಯಮ ಸ್ವಾತಂತ್ರ್ಯ, ಜವಾಬ್ದಾರಿ ಮತ್ತು ವಸ್ತುನಿಷ್ಠತೆ ಎಂಬ ಮರೀಚಿಕೆಗಳು

ಡಾ|| ಹೆಚ್. ಎಸ್. ಈಶ್ವರ

**ಕೆ**ಲವು ವರ್ಷಗಳ ಹಿಂದಿನ ಮಾತು. ನಾನೊಂದು ಸಮ್ಮೇಳನದಲ್ಲಿ ಭಾಗವಹಿಸು ದಾಗಿ ಒಪ್ಪಿಕೊಂಡಿದ್ದೆ. ಸಮ್ಮೇಳನದ ಕಾರ್ಯಕರ್ತರು ತಮ್ಮ ಆಮಂತ್ರಣ ತ್ರಿಕೆಯಲ್ಲಿ ನನ್ನ ಹೆಸರನ್ನು ಪ್ರಕಟಿಸಿಯೂ ಇದ್ದರು. ಸಮ್ಮೇಳನದ ನಂತರದಲ್ಲಿ ಮುಖ ಪತ್ರಿಕೆಯೊಂದು ಆ ಸಮ್ಮೇಳನದ ಕಲಾಪಗಳನ್ನು ವರದಿ ಮಾಡುತ್ತಾ, ಮ್ಮೇಳನದಲ್ಲಿ ನನ್ನ ಹೇಳಿಕೆಗಳು 'ಅಸಂಬದ್ಧ'ವಾಗಿದ್ದುವು ಎಂದು ಉದಾರವಾಗಿ ಟೀಕೆ ಾಡಿತು. ವಾಸ್ತವದ ಸಂಗತಿಯೆಂದರೆ, ಕಾರಣಾಂತರಗಳಿಂದ ನಾನು ಆ ಸಮ್ಮೇಳನದಲ್ಲಿ ಾಗವಹಿಸಿರಲಿಲ್ಲ ಅಥವಾ ನನ್ನ ಭಾಷಣದ ಯಾವುದೇ ಸಿದ್ಧ ಪ್ರತಿಯನ್ನೂ ಕಳಿಸಿರಲಿಲ್ಲ. ಾಡದೇ ಇದ್ದ ಭಾಷಣದಲ್ಲಿ ಕಂಡುಬಂದ 'ಅಸಂಬದ್ಧ' ಹೇಳಿಕೆಗಳಿಗೆ ಪತ್ರಿಕಾ ರದಿಗಾರನ ಕಲ್ಪನೆಗಳಷ್ಟೇ ಆಧಾರವಾಗಿದ್ದವು. ಇದು ಮಾಧ್ಯಮಗಳ ಕಾರ್ಯ ಖರಿಯ ಒಂದು ನಿದರ್ಶನ ಮಾತ್ರ. ಈ ಒಂದು ಸಂದರ್ಭ, ಮಾಧ್ಯಮಗಳ ಸ್ವಾತಂತ್ರ್ಯ, ವಾಬ್ದಾರಿ ಹಾಗೂ ವಸ್ತುನಿಷ್ಠತೆಯನ್ನು ಕುರಿತ ನನ್ನ ಚಿಂತನೆಗೆ ಕಾರಣವಾಗಿದೆ.

ಪ್ರಸ್ತುತದಲ್ಲಿ ಮಾಧ್ಯಮಗಳ ಕಾರ್ಯ ನಿರ್ವಹಣೆಯನ್ನು ಗಮನಿಸಿದರೆ, ಮಾಧ್ಯಮ ್ರತಂತ್ರ್ಯ, ಮಾಧ್ಯಮಗಳ ಜವಾಬ್ದಾರಿ ಮತ್ತು ಮಾಧ್ಯಮಗಳಲ್ಲಿ ವಸ್ತುನಿಷ್ಠತೆ – ಈ ಪದ ಯೋಗಗಳು ಒಂದು ಬಗೆಯ ವಿರೋಧಾಭಾಸಗಳಾಗಿ ಕಂಡು ರುತ್ತವೆ. ಮಾಧ್ಯಮಗಳು ಇಂದು ಅಗಾಧವಾಗಿ ಬೆಳೆದಿದ್ದು, ಮ್ಮ ದೈನಂದಿನ ಜೀವನದಲ್ಲಿ ಹಾಗೂ ಸಾರ್ವಜನಿಕ ಗುಹೋಗುಗಳಲ್ಲಿ ಅಪಾರ ಪ್ರಮಾಣದ ಪ್ರಭಾವಬೀರುತ್ತಿವೆ ಎನ್ನುವುದು ನಿಜ. ವುಗಳ ಸಾರ್ಥಕತೆ, ಅವು ಎಷ್ಟು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತವೆ, ಎಷ್ಟು ವಾಬ್ದಾರಿಯುತವಾಗಿ ನಡೆದುಕೊಳ್ಳುತವೆ ಮತ್ತು ಎಷ್ಟು ವಸ್ತುನಿಷ್ಠವಾಗಿವೆ ಎನ್ನುವ ಾನದಂಡಗಳನ್ನೇ ಅವಲಂಬಿಸಿರುತ್ತದೆ ಎನ್ನುವ ಮಾತು ಕೂಡ ಅಷ್ಟೇ ನಿಜ.

ಸ್ವಾತಂತ್ರ್ಯ ಕುರಿತು ಯೋಚಿಸುವಾಗ ಹಲವು ಪ್ರಶ್ನೆಗಳು ನಮ್ಮ ಮುಂದೆ ತೆರೆದು ಳ್ಳುತ್ತವೆ. ಎಷ್ಟು ಸ್ವಾತಂತ್ರ್ಯ, ಯಾರ ಸ್ವಾತಂತ್ರ್ಯ; ಪರಮಾವಧಿ ಸ್ವಾತಂತ್ರ್ಯದ ಇತಿಮಿತಿ ಗೆ ಸಂಬಂಧಿಸಿದ ಜಿಜ್ಞಾಸೆಗೆ ಸುದೀರ್ಘವಾದ ಇತಿಹಾಸವೇ ಇದೆ. ಗ್ರೀಕ್ ತ್ಜ್ಞಾನಿಗಳ ಕಾಲಕ್ಕೆ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸೀಮಿತವಾಗಿದ್ದ ಈ ಚರ್ಚೆ, ನಂತರದ ೂರೋಪ್ ಮತ್ತು ಅಮೆರಿಕಾ ವಸಾಹತುಗಳಲ್ಲಿ, ವೃತ್ತಪತ್ರಿಕೆಗಳು ಬೆಳೆದ ಹಾಗೆ, ತ್ರಿಕಾ ಸ್ವಾತಂತ್ರ್ಯದ ಬಗೆಯ ಚರ್ಚೆಯಾಗಿ ಪರಿವರ್ತನೆಗೊಂಡು, ಈಗ ಎಲ್ಲ ಮಾಧ್ಯಮಗಳಿಗೆ ಅನ್ವಯಿಸುವಂತೆ ಮುಂದುವರಿದುಕೊಂಡು ಬಂದಿದೆ. ಈ ಸುದೀರ್ಘ ಚರ್ಚೆಯ ನಂತರದಲ್ಲೂ ನಮಗೆ ಸಮರ್ಪಕ ಉತ್ತರಗಳು ಸಿಕ್ಕಿವೆ ಎಂದು ತೋರುವುದಿಲ್ಲ; ಸಿಗದೆಯೂ ಹೋಗಬಹುದು.

ಅಭಿವ್ಯಕ್ತಿ ಸ್ವಾತಂತ್ರ್ಯ ಕುರಿತು ಮೊದಲು ಚಿಂತನೆ ನಡೆಸಿದವರು ಗ್ರೀಕ್ ದಾರ್ಶನಿಕರು. ಪ್ಲೇಟೋ ಅಭಿವ್ಯಕ್ತಿ ಸ್ವಾತಂತ್ರ್ಯದ ವಿರೋಧಿಯಾಗಿದ್ದ ಶ್ರೀಮಂತ ಶಾಹಿಯ ಪ್ರತಿಪಾದಕನಾಗಿದ್ದ ಪ್ಲೇಟೋ, ಅಧಿಕಾರದ ಸಮಾನ ಹಂಚಿಕೆ ಸಮಾಜದ ಅಧೋಗತಿಗೆ ಹಾದಿಯಾಗುತ್ತದೆ ಎಂದು ದೃಢವಾಗಿ ನಂಬಿದ್ದ. ಅವನ ಗುರು ಸಾಕ್ರಟೀಸ್ ಕೂಡ ಅಧಿಕಾರಕ್ಕೆ ವಿಧೇಯವಾಗಿರಬೇಕಾದ ದಾರ್ಶನಿಕ ಅವಶ್ಯಕತೆಯನ್ನು ಒಪ್ಪಿಕೊಂಡಿದ್ದ. ನಂತರದ ಶತಮಾನಗಳಲ್ಲಿ – ಪ್ರಮುಖವಾಗಿ ಯೂರೋಪ್‌ನಲ್ಲಿ – ಮೆಕೆವೆಲ್ಲಿ, ಹಬ್ಸ್, ಹೆಗೆಲ್ ಮುಂತಾದವರು, ರಾಜ್ಯದ ಹಿತದೃಷ್ಟಿಯಿಂದ ವ್ಯಕ್ತಿ ಸ್ವಾತಂತ್ರ್ಯ ವನ್ನು ಹತ್ತಿಕ್ಕುವುದು ಸಮರ್ಥನೀಯ ಎಂಬ ಅಭಿಪ್ರಾಯವನ್ನು ಹೊಂದಿದ್ದರು. ಈ ವಿಚಾರಧಾರೆಯನ್ನು ಇತಿಹಾಸದುದ್ದಕ್ಕೂ ಬಹಳಷ್ಟು ಆಡಳಿತಗಾರರು ಒಪ್ಪಿಕೊಂಡಿದ್ದು, ಬಹುಪಾಲು ಜನ ವ್ಯಕ್ತಿ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳಿಂದ ವಂಚಿತವಾಗಿದ್ದು ಚರಿತ್ರೆಯ ಕ್ರೂರ ಸತ್ಯ. ನಮ್ಮದೇ ಕಾಲದಲ್ಲಿ ನಮ್ಮ ದೇಶದಲ್ಲೇ ಈ ಸ್ವಾತಂತ್ರ್ಯಗಳು ಮೊಟಕುಗೊಂಡದ್ದು ನಮಗೆ ತಿಳಿದೇ ಇದೆ.

ಮೇಲಿನ ವಿಚಾರಧಾರೆಗೆ ಪ್ರಬಲವಾದ ವಿರೋಧ ಕೂಡ ವ್ಯಕ್ತವಾಗುತ್ತಲೇ ಬಂದಿದೆ. ಈ ಬಗೆಯ ವಿರೋಧವನ್ನು ನಾವು ಜಾನ್ ಮಿಲ್ಟನ್, ಜಾನ್ ಸ್ಟೂಯರ್ಟ್ ಮಿಲ್, ಥಾಮಸ್ ಜಫರ್‌ಸನ್ ಮುಂತಾದವರ ಬರವಣಿಗೆಗಳಲ್ಲಿ ಕಾಣಬಹುದು. ವಿಭಿನ್ನ 'ಅಭಿಪ್ರಾಯಗಳ ಸ್ವತಂತ್ರ ಮಾರುಕಟ್ಟೆ'ಯ ಕಲ್ಪನೆಯನ್ನು ಮಿಲ್ಟನ್ ಹೊಂದಿದ್ದು, ಅಂತಹ ಮಾರುಕಟ್ಟೆ ಸತ್ಯಾನ್ವೇಷಣೆಗೆ ಅವಶ್ಯಕವೆಂಬುದು ಅವನ ಅಭಿಪ್ರಾಯವಾಗಿದ್ದಿತು. ಅಂತೆಯೇ ಸ್ಟೂಯರ್ಟ್ ಮಿಲ್ ಕೂಡ ಅಭಿವ್ಯಕ್ತಿ ಸ್ವಾತಂತ್ರ್ಯದ ಪ್ರಬಲ ಪ್ರತಿಪಾದಕನಾಗಿದ್ದ. ಮಿಲ್‌ನ ಪ್ರಕಾರ ನಾವು ಯಾವುದೇ ಅಭಿಪ್ರಾಯವನ್ನು ಹತ್ತಿಕ್ಕಿದರೆ, ಅದು ಸತ್ಯವನ್ನು ಸಾಯಿಸಿದಂತೆ. ಕಾರಣ ಆ ಅಭಿಪ್ರಾಯದಲ್ಲಿ ಸತ್ಯಾಂಶದ ಕಣವೊಂದು ಇದ್ದಿರಲೂಬಹುದು. ಯಾವುದೇ ಪ್ರತಿರೋಧವನ್ನು ಕಾಣದ ಸತ್ಯವೂ ಕೂಡ ಮೂಢನಂಬಿಕೆಯ ರೂಪವನ್ನು ಪಡೆದುಕೊಳ್ಳುವ ಅಪಾಯವನ್ನು ಮಿಲ್ ಎಚ್ಚರಿಸುತ್ತಾನೆ.

ಈ ವಾದ ವಿವಾದಗಳ ನಡುವೆ ಬಹಳಷ್ಟು ಪ್ರಜಾಪ್ರಭುತ್ವ ರಾಷ್ಟ್ರಗಳು ಅಭಿವ್ಯಕ್ತಿ ಸ್ವಾತಂತ್ರ್ಯದ ಮಹತ್ವವನ್ನು ಸೈದ್ಧಾಂತಿಕವಾಗಿ ಒಪ್ಪಿಕೊಂಡಿವೆ. ರಾಷ್ಟ್ರೀಯ ಹಿತಾಸಕ್ತಿ ಮತ್ತು ಆಂತರಿಕ ಭದ್ರತೆಗಳ ಹೊರತಾಗಿ ಉಳಿದೆಲ್ಲ ವಿಚಾರಗಳಿಗೆ ಸಂಬಂಧಿಸಿದಂತೆ ತಮ್ಮ ಸಂವಿಧಾನಗಳಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಅವಕಾಶಗಳನ್ನು ಕಲ್ಪಿಸಿಕೊಟ್ಟಿವೆ. ಇಂತಹ ಅವಕಾಶಗಳು ಮಾಧ್ಯಮಗಳಿಗೂ ಅನ್ವಯಿಸುತ್ತವೆ. ಈ ಸಂವಿಧಾನಾತ್ಮಕ ನಿಬಂಧನೆಗಳು ಎಷ್ಟರಮಟ್ಟಿಗೆ ಕಾರ್ಯರೂಪದಲ್ಲಿ ಆಚರಣೆಗೆ ಬರುತ್ತವೆ ಎನ್ನುವ ವಿಚಾರ ಬೇರೆಯ ಮಾತು. ಅದು ಸಂದರ್ಭಕ್ಕೆ ತಕ್ಕಂತೆ ವ್ಯತ್ಯಯಗೊಳ್ಳುವುದನ್ನು ಕಾಣಬಹುದು.

ಈ ಬಗೆಯ ಸ್ವಾತಂತ್ರ್ಯದ ಲಾಭವನ್ನು ಪಡೆದುಕೊಂಡ ಮಾಧ್ಯಮಗಳು ಎಷ್ಟರಮಟ್ಟಿಗೆ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತವೆ ಎನ್ನುವ ಅಂಶ ನಿಜವಾಗಿಯೂ ಆಘಾತಕಾರಿ. ಮಾಧ್ಯಮ ಸಂಸ್ಥೆಗಳ ಕಾರ್ಯ ನಿರ್ವಹಣೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿ ನೋಡಿದರೆ, ಅನೇಕ ಮಾಧ್ಯಮಗಳು ಹೆಚ್ಚಿನ ಸಂದರ್ಭಗಳಲ್ಲಿ ಸರ್ಕಾರೇತರ ಒತ್ತಡಗಳಿಗೆ ಸಿಕ್ಕಿಕೊಂಡು, ಅನೇಕ ಬಗೆಯ ನಿರ್ಬಂಧಗಳ ಚೌಕಟ್ಟಿನಲ್ಲಿ ಕೆಲಸ ಮಾಡುವುದು ಕಾಣಬರುತ್ತದೆ. ಅಮೆರಿಕನ್ ಮಾಧ್ಯಮಗಳನ್ನು ಅವಲೋಕಿಸುವ ಸ್ಯಾಂಡ್‌ಮನ್ ಮತ್ತು ಅವನ ಸಹೋದ್ಯೋಗಿಗಳು ಇಂತಹ ಒತ್ತಡಗಳ ಒಂದು ಪಟ್ಟಿಯನ್ನೇ ತಯಾರಿಸಿದ್ದಾರೆ. ಕಾನೂನುಗಳ ಮೂಲಕ ಸರ್ಕಾರಗಳು ಹೇರುವ ಒತ್ತಡಗಳು ಇದ್ದೇ ಇವೆ. ಸರ್ಕಾರಿ ಒತ್ತಡಗಳಲ್ಲದೆ ಇತರ ಬಗೆಯ ಒತ್ತಡಗಳಿಗೂ ಮಾಧ್ಯಮಗಳು ಮಣಿಯುತ್ತವೆ ಎನ್ನುವುದು ಅವರ ವಾದವಾಗಿದೆ. ಅವೆಂದರೆ ಒಡೆತನದ ಏಕಸ್ವಾಮ್ಯತೆ, ಆಂತರಿಕ ಒತ್ತಡಗಳು, ಸ್ವಯಂಪ್ರೇರಿತ ಒತ್ತಡಗಳು, ಜಾಹಿರಾತುದಾರರ ಒತ್ತಡಗಳು, ಮತ್ತು ಸಾರ್ವಜನಿಕರ ಒತ್ತಡಗಳು. ಬೇರೆ ಬೇರೆ ಮೂಲಗಳಿಂದ ಮಾಧ್ಯಮ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುವ ಈ ಬಗೆಯ ಒತ್ತಡಗಳು ಭಾರತದ ಮಾಧ್ಯಮಗಳಿಗೂ ಅನ್ವಯಿಸುತ್ತವೆ ಎನ್ನುವ ಅಂಶವನ್ನು ಜಿ. ಎಸ್. ರಾಜಗೋಪಾಲ ಎನ್ನುವ ಸಂಶೋಧಕ ತಮ್ಮ ಸುದೀರ್ಘ ಸಂಶೋಧನಾ ಪ್ರಬಂಧದಲ್ಲಿ ದಾಖಲಿಸಿದ್ದಾರೆ.

ಮಾಧ್ಯಮಗಳ ಸ್ವಾತಂತ್ರ್ಯಹರಣಕ್ಕೆ ಕಾರಣವಾಗಿರುವ ಅಂಶಗಳಲ್ಲಿ ಮುಖ್ಯವಾದದ್ದು ಒಡೆತನದ ಏಕ ಸ್ವಾಮ್ಯತೆ, ಎಂದರೆ ಮಾಧ್ಯಮಗಳ ಮಾಲಿಕತ್ವ ಕೆಲವರ



ಪಾಲಾಗಿರುವ ಗುತ್ತಿಗೆ. ಕೇವಲ ಕೆಲವೇ ಬಂಡವಾಳಶಾಹಿಗಳು ಮಾಧ್ಯಮಗಳ ಮೇ
ಹಿಡಿತ ಸಾಧಿಸಿದ್ದು, ದುರ್ಬಲರು ಈ ಸ್ಪರ್ಧೆಯಲ್ಲಿ ಸೋಲುತ್ತಾ ಹೋಗುತ್ತಾ
ಅಥವಾ ಸಂಪೂರ್ಣವಾಗಿ ಹೊರಗುಳಿಯುತ್ತಾರೆ. ಈ ಒಂದು ಪ್ರವೃತ್ತಿ ಜಾಗ
ಮಟ್ಟದಲ್ಲಿ ಬೆಳೆಯುತ್ತಿದ್ದು, ಮಾಧ್ಯಮಗಳ ಮೇಲಿನ ಹತೋಟಿ ಹಿತಾ
ಗುಂಪುಗಳಲ್ಲಿ ಕೇಂದ್ರೀಕೃತವಾಗುತ್ತಿರುವ ಸ್ಥಿತಿ, ಮಾಧ್ಯಮಗಳು ಸ್ವತಂತ್ರವಾಗಿ ಕಾ
ನಿರ್ವಹಿಸುವ ಸನ್ನಿವೇಶಗಳನ್ನು ಅಪಾಯದ ಅಂಚಿಗೆ ತಂದೊಡ್ಡಿವೆ. ಭಾರತೀ
ಮಾಧ್ಯಮಗಳ ಸ್ಥಿತಿಯೂ ಬೇರೆಯಾಗಿಲ್ಲ. ಈ ದೇಶದ ಮಾಧ್ಯಮಗಳ ಮಾಲಿ
ವ್ಯವಸ್ಥೆಯನ್ನು ಪರಿಶೀಲಿಸಿದರೆ ಇದಕ್ಕೆ ಸಾಕಷ್ಟು ಪುರಾವೆ ದೊರೆಯುತ್ತದೆ. ಪ್ರಮು
ಪತ್ರಿಕೆಗಳು, ಅದರಲ್ಲೂ ಇಂಗ್ಲಿಷ್ ಪತ್ರಿಕೆಗಳು ಹಾಗೂ ನಿಯತಕಾಲಿಕೆಗಳು, ಬೆರಳೆ
ಯಷ್ಟು ಮಂದಿ ಖ್ಯಾತ ಉದ್ಯಮಿಗಳ ಅಥವಾ ಕೈಗಾರಿಕಾ ಗುಂಪುಗಳ ಸ್ವತ್ತಾಗಿದ್ದು,
ಉದ್ಯಮಿಗಳ ಹಾಗೂ ಅವರ ವ್ಯವಹಾರಗಳ ಹಿತಾಸಕ್ತಿಯನ್ನು ಕಾಪಾಡಿಕೊಳ
ಸಾಧನಗಳಾಗಿ ಕೆಲಸ ಮಾಡುತ್ತವೆ. ನಮ್ಮ ದೇಶದ ಪ್ರಮುಖ ಮಾಧ್ಯಮಗಳ ಗು
ಗಳನ್ನು ಪಟ್ಟಿ ಮಾಡಿದರೆ, ಆ ಸಂಖ್ಯೆ ಎರಡಂಕಿಯ ಮಿತಿಯನ್ನೂ ದಾಟುವುದ
ಟೈಮ್ಸ್ ಆಫ್ ಇಂಡಿಯಾ, ಇಂಡಿಯನ್ ಎಕ್ಸ್‌ಪ್ರೆಸ್, ಹಿಂದುಸ್ತಾನ್ ಟೈಮ
ಹಿಂದೂ, ಆನಂದ್ ಬಜಾರ್ ಪತ್ರಿಕಾ, ಈ ನಾಡು, ಮಲಯಾಳಂ ಮನೋರಮ
ಮಾತೃಭೂಮಿ ಇವೇ ಸಮೂಹಗಳು ನಮ್ಮ ಪತ್ರಿಕೆಗಳ ಪ್ರಸಾರದ ಸಿಂಹಪಾಲ
ಪಡೆದುಕೊಂಡಿವೆ. ಅಷ್ಟು ಮಾತ್ರವೇ ಅಲ್ಲ, ಈ ಸಮೂಹಗಳ ಮಾಲಿಕರೇ ಬೇ
ಬೇರೆ ಮಾಧ್ಯಮಗಳ ಮೇಲೆ ತಮ್ಮ ಹಿಡಿತವನ್ನು ಸಾಧಿಸುತ್ತಾ ಬಂದಿದ್ದಾರೆ. ಟೆಲಿವಿಷ
ಒಡೆತನ ಕೂಡ ಇದೇ ಹಾದಿಯಲ್ಲಿ ಸಾಗುತ್ತಿದೆ. ಬಹಳಷ್ಟು ಟೆಲಿವಿಷನ್ ಚಾನೆಲ್‌ಗ
ಖಾಸಗಿ ವ್ಯಕ್ತಿಗಳ – ಪ್ರಮುಖವಾಗಿ ರಾಜಕಾರಣಿಗಳು ಅಥವಾ ಉದ್ದಿಮೆದಾರರ
ಒಡೆತನವನ್ನು ಹೊಂದಿದ್ದು, ಅವರ ಮುಖವಾಣಿಗಳಾಗಿ ಕಾರ್ಯ ನಿರ್ವಹಿಸುತ್ತ
ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ, ಮಾಧ್ಯಮಗಳ ಮಾಲಿ
ಬೇರೆ ಬಗೆಯ ಉದ್ದಿಮೆಗಳ ಒಡೆತನವನ್ನೂ ಹೊಂದಿದ್ದು, ಈ ಎರಡೂ ಮಾಲಿಕತ್ವ
ನಂಟು ಕೇವಲವಾಗಿರುತ್ತದೆ. ತನ್ನದೇ ರಾಜಕೀಯ ನಿಲುವುಗಳನ್ನು ಅಥವಾ
ಉದ್ಯಮಕ್ಕೆ ಪೂರಕವಾಗುವ ಧೋರಣೆಗಳನ್ನು ಮಾಧ್ಯಮಗಳ ಮೂಲಕ ಪ್ರ
ಪಡಿಸಲಾಗುತ್ತದೆ; ವಿರೋಧಿ ನಿಲುವುಗಳನ್ನು ಸಂಪೂರ್ಣವಾಗಿ ಕಡೆಗಣಿಸಲಾಗು
ಅಥವಾ ಹತ್ತಿಕ್ಕಲಾಗುತ್ತದೆ. ಅಪ್ಟನ್ ಸಿಂಕ್ಲೇರ್ ಎಂಬ ಅಮೆರಿಕನ್ ಕಾದಂಬರಿಕ
ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿಯೇ ಮಾಧ್ಯಮಗಳು ಹಾಗೂ ಬೃಹ
ಉದ್ದಿಮೆದಾರರ ನಡುವೆ ನಡೆಯುವ ಒಳ ಒಪ್ಪಂದಗಳನ್ನು ಕುರಿತು ಹೇಳಿದಾ
ಉದ್ದಿಮೆದಾರರು ಮಾಧ್ಯಮದವರನ್ನು ಕೊಂಡುಕೊಳ್ಳುವ ಮೂಲಕ ಅಥ
ಮಾಧ್ಯಮದ ಒಡೆತನವನ್ನು ತಮ್ಮದಾಗಿಸಿಕೊಳ್ಳುವ ಮೂಲಕ ತಮ್ಮ ಕಾ
ಸಾಧನೆಗಳನ್ನು ಮಾಡಿಕೊಳ್ಳುತ್ತಾರೆ ಎನ್ನುವುದಾಗಿ ಸಿಂಕ್ಲೇರ್ ಪ್ರತಿಪಾದಿಸಿದ್ದಾನೆ. ನ
ದೇಶದಲ್ಲಿ 'ಜೂಟ್ ಪ್ರೆಸ್', 'ಶುಗರ್ ಲಾಬಿ ಪ್ರೆಸ್', 'ಟಾಡಿ ಪ್ರೆಸ್' ಮೊದಲ
ಹಣೆಪಟ್ಟಿಗಳು ಬಳಕೆಗೆ ಬಂದದ್ದೇ ಮೇಲಿನ ಸನ್ನಿವೇಶದಿಂದಾಗಿ.

ಮಾಧ್ಯಮಗಳು ಮಾಲಿಕರ ಒತ್ತಡಕ್ಕೆ ಮಾತ್ರವೇ ಒಳಗಾಗುವುದಿಲ್ಲ. ಅ
ಬೇರೆಯ ಒತ್ತಡಗಳಿಗೂ ಮಣಿದು ತಮ್ಮ ಸುದ್ದಿಗಳನ್ನು, ಕಾರ್ಯಕ್ರಮಗಳನ್ನು, ಸ
ನಿಲುವುಗಳನ್ನು ತಿರುಚಬೇಕಾದ ಅವಶ್ಯಕತೆಗಳೂ ಉಂಟು. ಪ್ರಮುಖವಾ
ಜಾಹಿರಾತುದಾರರು ಮಾಧ್ಯಮಗಳ ಮೇಲೆ ಪ್ರಭಾವ ಬೀರಬಹುದಾದ ಅಪಾಯ
ಸಾಧ್ಯತೆ ಇದೆ. ಜಾಹಿರಾತು ಮೂಲದ ಆದಾಯ ಮಾಧ್ಯಮಗಳ ಆರ್ಥಿಕ ಸ್ಥಿರ
ಅಡಿಪಾಯ ಎನ್ನುವ ವಾಸ್ತವವನ್ನು ಮರೆಯಬಾರದು. ಈ ದೇಶದಲ್ಲಿ ಜಾಹಿರಾ
ಮೇಲೆ ವ್ಯಯವಾಗುವ ಸುಮಾರು ಹನ್ನೆರಡು ಸಾವಿರ ಕೋಟಿ ರೂಪಾಯಿಗ
ಸರಿ ಸುಮಾರು ಮುಕ್ಕಾಲು ಭಾಗ ಮಾಧ್ಯಮಗಳಲ್ಲಿಯೇ ಬಳಕೆಯಾಗುತ್ತದೆ. 'ಪು
ಉಪಹಾರ ಇಲ್ಲ' ಎನ್ನುವ ಇಂಗ್ಲಿಷ್ ಮಾತೊಂದಿದೆ. ಜಾಹಿರಾತುಗಳ ಮೇ
ಅಷ್ಟೊಂದು ಗಾತ್ರದ ಹಣ ಸುರಿಯುವ ಉದ್ದಿಮೆದಾರರು ತಾವು ತೊಡಗಿಸ
ಬೃಹತ್ ಮೊತ್ತಕ್ಕೆ ಪ್ರತಿಫಲ ನಿರೀಕ್ಷಿಸುವುದು ಅನಿರೀಕ್ಷಿತವೇನೂ ಅಲ್ಲ. ಹಾಗ
ಜಾಹಿರಾತುದಾರರಿಗೆ ಮುಜುಗರ ಉಂಟುಮಾಡುವ ವಿಚಾರಗಳನ್ನು ಕಡೆಗಣ
ಅವರ ವ್ಯವಹಾರಗಳಿಗೆ ಅನುಕೂಲವಾಗುವ ಅಂಶಗಳನ್ನು ಪ್ರಚಾರ ಮಾಡು
ಜಾಹಿರಾತುದಾರರ ಮತ್ತು ಮಾಧ್ಯಮಗಳ ನಡುವಿನ 'ಕೊಡು ಕೊಳ್ಳುವ' ಅಂತಗ
ಹೊಂದಿಕೆಯನ್ನು ಯಾರೂ ಊಹಿಸಿಕೊಳ್ಳಬಹುದಾಗಿದೆ.

ಮುಂದುವರಿದು, ಮಾಧ್ಯಮಗಳು ಕಾರ್ಯ ನಿರ್ವಹಿಸುವುದು ಒಂದು ವ್ಯವ

ಸ್ಥೆಯ ಚೌಕಟ್ಟಿನಲ್ಲಿ, ಈ ಸಂಸ್ಥೆಗಳಲ್ಲಿ ಿಧ ಸಂಖ್ಯೆಯ ಉದ್ಯೋಗಿಗಳಿದ್ದು, ರು ಸಂಸ್ಥೆಯ ಶ್ರೇಣೀಕೃತ ವ್ಯವಸ್ಥೆಯ ಗವಾಗಿ ಕೆಲಸ ಮಾಡುತ್ತಾರೆ. ಗಾಗಿ ಮಾಧ್ಯಮಗಳ ಸರಕುಗಳು ಶ್ರೇಣಿ ವ್ಯವಸ್ಥೆಯ ಒಂದೊಂದು ತದಲ್ಲೂ ಪರಿಷ್ಕರಣೆಗೆ ಒಳಪಟ್ಟು, ಹಂತದಲ್ಲೂ ನಿಯಂತ್ರಿಸಲ್ಪಡು . ವರದಿಗಾರ ಕಳಿಸುವ ವರದಿ ಾದಕನ ಮರ್ಜಿಗೆ ತಕ್ಕಂತೆ ರ್ಪಾಡುಗೊಳ್ಳುತ್ತದೆ, ಅಥವಾ ಾದಕನ ಅಗ್ರ ಲೇಖನ ಮಾಲಿಕನ ರ್ಶನ ಅಥವಾ ನಿಲುವು ನ್ನು ಪ್ರತಿಬಿಂಬಿಸದೇ ಇರುವುದಿಲ್ಲ. ಧ್ಯಮ ಸಂಸ್ಥೆಗಳ ವಿವಿಧ ಹಂತಗಳಲ್ಲಿ ಬಗೆಬಗೆಯ 'ದ್ವಾರಪಾಲಕರು' ಇರುವ ಶವನ್ನು ಹಲವು ಸಂಶೋಧನೆಗಳು ದೃಢಪಡಿಸಿವೆ.



ಇನ್ನು ಸಾರ್ವಜನಿಕರು ಸಹ ಮಾಧ್ಯಮಗಳನ್ನು ನಿಯಂತ್ರಿಸುವುದು ಅಪರೂಪ ನಲ್ಲ. ಯಾವುದೋ ರಾಜಕೀಯ ಪಕ್ಷದ ಬೆಂಬಲಿಗರೋ ಅಥವಾ ಮತೀಯ ಂಪುಗಳೋ ಮಾಧ್ಯಮ ಕಛೇರಿಗಳ ಮೇಲೆ ದಾಳಿ ಮಾಡಿ, ಮಾಧ್ಯಮಗಳ ಮೇಲೆ ಡ ತಂದ ನಿದರ್ಶನಗಳು ಸಾಕಷ್ಟಿವೆ.

ಹೀಗೆ ಬಗೆ ಬಗೆಯ ಒತ್ತಡಗಳಿಗೆ ಒಳಗಾಗುವ ಮಾಧ್ಯಮಗಳು ನಿಜಕ್ಕೂ ಎಷ್ಟು ಂತ್ರವಾಗಿ ಕಾರ್ಯ ನಿರ್ವಹಿಸುತ್ತವೆ? ಎಲ್ಲ ಮಾಧ್ಯಮಗಳಿಗೂ ಅನ್ವಯ ಗುವಂತಹ ಒಂದು ಸಾಮಾನ್ಯ ತೀರ್ಮಾನಕ್ಕೆ ಬರುವುದು ಕಷ್ಟ. ಹಾಗಾದರೂ , ಎಲ್ಲ ಮಾಧ್ಯಮಗಳೂ ಸಾಕಷ್ಟು ಒತ್ತಡಗಳ ಮಿತಿಯಲ್ಲೇ ಕೆಲಸ ಮಾಡುತ್ತವೆ ನ್ನುವುದನ್ನು ಎಲ್ಲರೂ ಒಪ್ಪಿಕೊಳ್ಳಲೇಬೇಕು.

ಇನ್ನು ಮಾಧ್ಯಮಗಳ ಹೊಣೆಗಾರಿಕೆ, ಸಾಮಾಜಿಕ ಜವಾಬ್ದಾರಿಯ ವಿಚಾರ: ಾಜದಲ್ಲಿನ ಅರೆಕೊರೆಗಳಿಗೆ ಕೈಗನ್ನಡಿಯಾಗಿ, ರಾಷ್ಟ್ರದ ರಾಜಕೀಯ, ಆರ್ಥಿಕ, ಸ್ಕೃತಿಕ ಪ್ರಗತಿಗೆ ಪೂರಕವಾಗಿ ಕೆಲಸ ಮಾಡುತ್ತವೆ ಎಂಬ ಊಹೆಯೇ ಧ್ಯಮಗಳ ಸ್ವಾತಂತ್ರ್ಯಕ್ಕೆ ಸಮರ್ಥನೆ. ಜ್ಞಾನಾರ್ಜನೆ, ಶಿಕ್ಷಣ, ಮನರಂಜನೆ ತ್ತು ಸಾಮಾಜಿಕ ಆಗುಹೋಗುಗಳ ಬಗ್ಗೆ ಕಾವಲು ಕಾಯುವಿಕೆ – ಇವೇ ಧ್ಯಮಗಳ ಮುಖ್ಯ ಗುರಿಗಳು. ಹಾಗಾದರೂ ಈ ಉದ್ದೇಶಗಳನ್ನು ಈಡೇರಿಸುವಲ್ಲಿ ು ಎಷ್ಟು ಸಮರ್ಪಕವಾಗಿ ಕೆಲಸ ಮಾಡುತ್ತಿವೆ ಎನ್ನುವ ಬಗ್ಗೆ ಸಾಕಷ್ಟು ನುಮಾನಗಳಿವೆ. ಅವು ಈ ಘನವಾದ ಉದ್ದೇಶಗಳನ್ನು ನೆರವೇರಿಸುವಲ್ಲಿ ವ ಮಟ್ಟದಲ್ಲಿ ಸೋತುಹೋಗಿವೆ ಎಂದು ಮನವರಿಕೆಯಾಗಲು ಧ್ಯಮದಲ್ಲಿ ಅಡಕವಾಗಿರುವ ವಸ್ತುಗಳನ್ನು ಗಮನಿಸಿದರೆ ಸಾಕು.

ಮೋಸ, ವಂಚನೆ, ಅಪರಾಧ, ಲೆ, ಸುಲಿಗೆ, ಅಪಘಾತ, ಅನೈತಿಕ ಂಧ, ಭ್ರಷ್ಟಾಚಾರ, ಮೋಜಿನ ುಗಿಯರ ಬೆತ್ತಲೆ ಪ್ರದರ್ಶನ, ಕಾರಣಿಗಳ ಪರಸ್ಪರ ಕೆಸರೆರ ಮತ್ತು ಪೊಳ್ಳು ಭರವಸೆಗಳು ಂತಾದ ಭಕ್ಷ್ಯಗಳಿಂದ ಕೂಡಿದ ಯನ್ನು (ಇದನ್ನು 'ಸ್ಮಾರ್‌ಗ್ಯಾಸ್ ೀರ್ಡ್' ಎನ್ನುತ್ತಾರೆ) ಮಾಧ್ಯಮ ನಮಗೆ ನಿರಂತರವಾಗಿ ಗಿಸುತ್ತಲೇ ಹೋಗುತ್ತವೆ. ಕ್ಷುಲ್ಲಕ ರಗಳನ್ನು ವಿಜೃಂಭಣೆಗೊಳಿಸುವ ಲಕ ಮಾಧ್ಯಮಗಳು ತಮ್ಮ ಗಳನ್ನು ಜನಪ್ರಿಯಗೊಳಿಸುವ, ುಕಟ್ಟೆಯಲ್ಲಿ ಲಾಭಗಳಿಸುವ



ಪ್ರವೃತ್ತಿ ಇಂದು ಸಾಮಾನ್ಯವಾಗಿದೆ. ಮಹತ್ವದ ವಿಚಾರಗಳು ಮೂಲೆಗುಂಪಾಗಿ ಹೋಗುತ್ತಿವೆ. ಒಂದು ಕಾಲಕ್ಕೆ ಉದಾತ್ತ ಧ್ಯೇಯಗಳನ್ನು ಹೊಂದಿದ್ದ ಮಾಧ್ಯಮಗಳು ಇಂದು ಒಂದು ವ್ಯಾಪಾರವಾಗಿ ಬದಲಾಗಿವೆ. ಕ್ಷುಲ್ಲಕ ವಿಚಾರಗಳ ವೈಭವೀಕರಣಕ್ಕೆ ಇಂಗ್ಲಿಷ್ ಟೆಲಿವಿಷನ್ ಚಾನೆಲ್‌ಗಳು ಉತ್ತಮ ನಿದರ್ಶನಗಳನ್ನು ಒದಗಿಸಿಕೊಡುತ್ತವೆ. ಶಾರೂಕ್ ಖಾನ್‌ಗೆ ನ್ಯೂಯಾರ್ಕ್ ವಿಮಾನ ನಿಲ್ದಾಣದಲ್ಲಿ ಸುಂಕದ ಅಧಿಕಾರಿಗಳು ಕಿರುಕುಳ ಕೊಟ್ಟರು ಎನ್ನುವ ವಿಚಾರ ಮಹತ್ವದ ಸುದ್ದಿಯಾಗಿ ಪ್ರತಿ ಐದು ನಿಮಿಷಗಳಿಗೊಮ್ಮೆ ಬಿತ್ತರವಾಗುತ್ತದೆ. ಪಿ. ಟಿ. ಉಷಾಗೆ ಸರಿಯಾದ ವಸತಿ ವ್ಯವಸ್ಥೆ ಸಿಗದೆ ಆಕೆ ಹಾಕುವ ಕಣ್ಣೀರು ಮತ್ತೊಂದು ಮಹತ್ವದ ಸುದ್ದಿಯಾಗಿ 'ಆಕಾಶವೇ ಕಳಚಿಬಿದ್ದಂತೆ' ಮಾಧ್ಯಮಗಳು ಬೊಬ್ಬೆ ಇಡುತ್ತವೆ. ಶಾರೂಕ್ ಖಾನ್ ಅನುಭವಿಸಿದ ಹತ್ತುಪಟ್ಟು ಕಿರುಕುಳಗಳನ್ನು ನಾವು ಪ್ರತಿ ದಿನವೂ ವಿವಿಧ ಮೂಲಗಳಿಂದ ಅನುಭವಿಸುತ್ತಲೇ ಇರುತ್ತೇವೆ; ಉಷಾ ಕಣ್ಣೀರಿಗಿಂತ ಮಿಗಿಲಾಗಿ ನಮ್ಮ ಹೆಣ್ಣುಮಕ್ಕಳು ಬೇರೆ ಬೇರೆ ಕಾರಣಗಳಿಗೆ ಕಣ್ಣೀರು ಸುರಿಸುತ್ತಲೇ ಇರುತ್ತಾರೆ. ಆದರೆ ಇವ್ಯಾವೂ ಮಾಧ್ಯಮಗಳ ಗಮನಕ್ಕೆ ಬರುವುದೇ ಇಲ್ಲ. ಇದು ಸುದ್ದಿ ಮೌಲ್ಯಗಳ ಅಪಮೌಲ್ಯವಲ್ಲದೆ ಬೇರೇನೂ ಅಲ್ಲ.

ಇನ್ನು ಇಂತಹ ವಿಚಾರಗಳು ಓದುಗರ ಅಥವಾ ವೀಕ್ಷಕರ ಮೇಲೆ ಯಾವ ಬಗೆಯ ದುಷ್ಪರಿಣಾಮಗಳನ್ನು ಉಂಟುಮಾಡುತ್ತವೆ ಎನ್ನುವ ವಿಚಾರದ ಬಗ್ಗೆ ಜವಾಬ್ದಾರಿಯುತ ಮಾಧ್ಯಮ ವೃತ್ತಿಯವರು ತಲೆಕೆಡಿಸಿಕೊಳ್ಳುವ ಗೋಜಿಗೇ ಹೋಗುವುದಿಲ್ಲ. ಮಾಧ್ಯಮಗಳಲ್ಲಿ ನಿರೂಪವಾಗುವ ಹಿಂಸೆ, ಕ್ರೌರ್ಯ ಮುಂತಾದ ವಸ್ತುಗಳು ಯಾವ ಬಗೆಯ ಪರಿಣಾಮಗಳನ್ನು ಉಂಟುಮಾಡುತ್ತವೆ ಎನ್ನುವ ಬಗ್ಗೆ ಮನೋವಿಜ್ಞಾನಿಗಳು ನಿರ್ದಿಷ್ಟ ತೀರ್ಮಾನಗಳಿಗೆ ಬಂದಿದ್ದಾರೆ. ಮಾಧ್ಯಮಗಳಲ್ಲಿ ಬಿಂಬಿತವಾಗುವ ವಿಚಾರಗಳು ಒಂದು ಬಗೆಯ 'ಮಾದರಿ'ಗಳನ್ನು ಸೃಷ್ಟಿಸುವುದಷ್ಟೇ ಅಲ್ಲದೆ, ಅಪರಾಧೀ ಕೃತ್ಯಗಳನ್ನು ಮಾಡಲು ಬಗೆ ಬಗೆಯ ಚತುರತೆಗಳನ್ನು, ವಿಧಾನಗಳನ್ನು ಕಲಿಸುವಲ್ಲಿ ಸಹ ಸಹಕಾರಿಯಾಗುತ್ತವೆ. ಮಾಧ್ಯಮಗಳ ಈ ಬಗೆಯ ಬೇಜವಾಬ್ದಾರಿ ಮನೋಭಾವ ಸಾಮಾಜಿಕ ಕಳಕಳಿ ಇರುವ ಎಲ್ಲರೂ ಯೋಚಿಸಬೇಕಾದ ವಿಚಾರ. ಇಂಗ್ಲೆಂಡಿನ ಪ್ರಧಾನಿಯಾಗಿದ್ದ ಬಾಲ್ಡ್‌ವಿನ್ ಮಹಾಶಯ ಎಲ್ಲಿಯೋ ಹೇಳಿದ ಮಾತೊಂದು ನೆನಪಿಗೆ ಬರುತ್ತದೆ: ''ಜವಾಬ್ದಾರಿಯಿಲ್ಲದ ಅಧಿಕಾರವು ವೇಶ್ಯೆಯೊಬ್ಬಳ ವಿಶಿಷ್ಟ ಹಕ್ಕು.'' ಮಾಧ್ಯಮಗಳು ಅತ್ಯಂತ ಪ್ರಭಾವಶಾಲಿ ಸಾಧನಗಳು; ಆದರೆ ಜವಾಬ್ದಾರಿ ವಿಮುಖ ಅಧಿಕಾರ ಖಂಡಿತವಾಗಿಯೂ ಅಸಮರ್ಥನೀಯ.

ಇನ್ನು ಮಾಧ್ಯಮಗಳ ಭ್ರಷ್ಟಾಚಾರದ ಬಗ್ಗೆಯೂ ಸಾಕಷ್ಟು ಅನುಮಾನಗಳು ಇದ್ದೇ ಇವೆ. ಚುನಾವಣಾ ಅಭ್ಯರ್ಥಿಗಳಿಗೆ ಸಹಕಾರಿಯಾದ ಅಂಶಗಳನ್ನು ಪ್ರಚಾರ ಮಾಡಲು ಮತ್ತು ಅವರಿಗೆ ವಿರುದ್ಧವಾದ ವಿಚಾರಗಳನ್ನು ತಡೆಹಿಡಿಯಲು ಮಾಧ್ಯಮಗಳು ಬೇರೆ ಬೇರೆ ದರ ಪಟ್ಟಿಯನ್ನೇ ಹೊಂದಿರುವುದು ತಮಗೆ ತಿಳಿದಿದೆ ಎಂದು ಚುನಾವಣಾ ಆಯೋಗದ ಮಾಜಿ ಮುಖ್ಯಸ್ಥ ಎನ್. ಗೋಪಾಲಸ್ವಾಮಿಯವರು ಹೇಳಿದ್ದಾಗಿ 'ವಾಲ್ ಸ್ಟ್ರೀಟ್ ಜರ್ನಲ್'ನ ವರದಿಗಾರ ಪಾಲ್ ಬೆಕೆಟ್ ಉದ್ಧರಿಸಿದ್ದಾನೆ.

ಇಲ್ಲಿ ಪ್ರಸ್ತಾಪವಾಗಿರುವ ಮಾಧ್ಯಮಗಳ ಕಾರ್ಯ ನಿರ್ವಹಣೆಗೆ ಸಂಬಂಧಿಸಿದ

ಮೂರನೆಯ ಆಯಾಮ ವಸ್ತುನಿಷ್ಠತೆ. ಮಾಧ್ಯಮಗಳ ನೀತಿ ಸಂಹಿತೆಯಲ್ಲಿ ವಸ್ತುನಿಷ್ಠತೆಗೆ ಮಹತ್ವದ ಸ್ಥಾನವಿದೆ; ತಾವು ವರದಿ ಮಾಡುವ ವಿಚಾರಗಳು, ಸಂಗತಿ ವಸ್ತುನಿಷ್ಠ ವಾಗಿರಬೇಕೆಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ ವಾಸ್ತವ ಬೇರೆಯೇ ಆಗಿದೆ. ವಸ್ತುನಿಷ್ಠತೆ ಎಂದರೆ ವಾಸ್ತವದ ಯಥಾವತ್ತಾದ ಚಿತ್ರಣ. 'ವಾಸ್ತವ' ಎನ್ನುವುದು ಒಂದು ಇರುತ್ತದೆ ನಿಜ. ಆದರೆ ಈ ವಾಸ್ತವ ಒಬ್ಬೊಬ್ಬರಿಗೂ ಬೇರೆ ಬೇರೆಯೇ ಆಗಿರುತ್ತದೆ. ಉದಾಹರಣೆಯಾಗಿ ಒಂದು ರಾಜಕೀಯ ಹೇಳಿಕೆಯನ್ನು ತೆಗೆದುಕೊಳ್ಳಿ. ಈ ಹೇಳಿಕೆ ಒಂದು ನಿರ್ದಿಷ್ಟ ಸ್ವರೂಪ ದ್ದಾಗಿರುತ್ತದೆ. ಹಾಗಾದರೂ ಸಹ, ಅದನ್ನು ಅರ್ಥೈಸು ವವರು ಅವರವರ ಮನೋಧರ್ಮಕ್ಕೆ ಅನುಗುಣವಾಗಿ ಅವರದೇ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಒಬ್ಬರಿಗೆ ಆ ಹೇಳಿಕೆ ತೀವ್ರಗಾಮಿಯಾಗಿ ಕಂಡರೆ, ಇನ್ನೊಬ್ಬರಿಗೆ ಅದು ಪ್ರತಿಗಾಮಿಯಾಗಿ ಕಾಣಬಹುದು. ಈ ಬಗೆಯ ದ್ವಂದ್ವಕ್ಕೆ ಕಾರಣ ಹೇಳಿಕೆಯಲ್ಲ; ಹೇಳಿಕೆಯನ್ನು ಗ್ರಹಿಸುವವರ ವಿಭಿನ್ನ ದೃಷ್ಟಿಕೋನಗಳು, ಅವರ ವೈಯಕ್ತಿಕ ರಾಗ-ದ್ವೇಷಗಳು.

ನಮ್ಮ ರಾಗ-ದ್ವೇಷಗಳು ಹೇಗೆ ನಮ್ಮನ್ನು ವಂಚಿಸುತ್ತವೆ ಎನ್ನುವುದಕ್ಕೆ ಉತ್ತಮ ನಿದರ್ಶನ ನಮ್ಮ ಮಾಧ್ಯಮ ವರದಿಗಳೇ ಆಗಿವೆ. ಒಂದು ರಾಜಕೀಯ ಸಮಾವೇಶ ದಲ್ಲಿ ಒಂದು ನಿರ್ದಿಷ್ಟ ಸಂಖ್ಯೆಯ ಜನ ಹಾಜರಿರುತ್ತಾರೆ. ಇದನ್ನು ವರದಿ ಮಾಡುವ ವರದಿಗಾರ, ತನ್ನ ಪೂರ್ವಗ್ರಹ ಗಳಿಗೆ ಅನುಗುಣವಾಗಿ, ಶ್ರೋತೃಗಳ ಸಂಖ್ಯೆಯನ್ನು "ಅಪಾರ ಜನಸ್ತೋಮ" ಎಂದೋ, ಗಣನೀಯವಲ್ಲದ ಸಂಖ್ಯೆಯೆಂದೋ ವರದಿ ಮಾಡುತ್ತಾನೆ. ಸಭೆಯಲ್ಲಿನ ಸಂಖ್ಯೆ ಒಂದೇ ಆಗಿರುತ್ತದೆ, ಇದು ವಾಸ್ತವ. ವರದಿ ಗಾರರು ಮಾಡುವ ಅಂದಾಜಿನಲ್ಲಿ ಏರುಪೇರುಗಳಾಗು ವುದು ಅವರವರ ಪಕ್ಷಪಾತ, ಪೂರ್ವಗ್ರಹಗಳ ಕಾರಣ ದಿಂದಾಗಿ. ಈ ಬಗೆಯ ದೌರ್ಬಲ್ಯ ಮಾನವ ಸಹಜ ಎಂದುಕೊಳ್ಳಬಹುದಾದರೂ ಸಹ, ಮಾಧ್ಯಮಗಳಲ್ಲಿ ಹೆಚ್ಚುಮಟ್ಟಿನ ವಸ್ತುನಿಷ್ಠತೆ ಅಪೇಕ್ಷಣೀಯ ಎನ್ನಿಸುತ್ತದೆ.

ಈಚಿನ ದಿನಗಳಲ್ಲಿ ಕೆಲವು ಸಂದರ್ಭಗಳಲ್ಲಿ ಮಾಧ್ಯಮ ವರದಿಗಳನ್ನು ನಂಬುವುದೇ ಕಷ್ಟ ಎನ್ನುವಷ್ಟು ಉತ್ಪ್ರೇಕ್ಷೆಗಳನ್ನು ಗಮನಿಸಬಹುದು. ಮೊನ್ನೆ ಮೊನ್ನೆ ಆಂಧ್ರದ ಮುಖ್ಯಮಂತ್ರಿ ರಾಜಶೇಖರ ರೆಡ್ಡಿ ಹೆಲಿಕಾಪ್ಟರ್ ದುರಂತದಲ್ಲಿ ತೀರಿಕೊಂಡರು. ಎಷ್ಟೋ ನೂರು ಜನ ಅವರ ಅಭಿಮಾನಿಗಳು ಆತ್ಮಹತ್ಯೆ ಮಾಡಿಕೊಂಡು, ಅಥವಾ ಹೃದಯಾಘಾತದಿಂದ, ಪ್ರಾಣ ಕಳೆದುಕೊಂಡರು ಎಂದು ನಮ್ಮ ಮಾಧ್ಯಮಗಳು ವರದಿ ಮಾಡಿದವು. ರಾಜಶೇಖರ ರೆಡ್ಡಿಯವರು ಆಂಧ್ರದ ಜನರ ಪ್ರೀತಿ, ಮನ್ನಣೆಗಳಿಗೆ ಒಳಗಾಗಿದ್ದರು ಎನ್ನುವ ಬಗ್ಗೆ ಇಲ್ಲಿ ಆಕ್ಷೇಪಣೆಯೇ ಇಲ್ಲ; ಅವರು ಬಹುಪಾಲು ಜನರ ಆರಾಧ್ಯದೈವವೂ ಆಗಿದ್ದಿರಬಹುದು. ತಮ್ಮ ಮನೆಯಲ್ಲೇ ತಮ್ಮ ತಂದೆಯೋ, ಅಣ್ಣನೋ ಸತ್ತಾಗ ತೆಪ್ಪಗಿರುವ ಜನ, ಇನ್ಯಾರೋ ಸತ್ತಾಗ ಆತ್ಮಹತ್ಯೆಯನ್ನು ಈ ಗಣನೀಯ ಸಂಖ್ಯೆಯಲ್ಲಿ ಮಾಡಿಕೊಳ್ಳುತ್ತಾರೆಂದರೆ ನನಗಂತೂ ಉತ್ಪ್ರೇಕ್ಷೆ ಎನ್ನಿಸುತ್ತದೆ. ಬಹುಶಃ ಆ ದಿನ ಆಂಧ್ರದಲ್ಲಿ ಸತ್ತವರನ್ನೆಲ್ಲಾ ಲೆಕ್ಕಕ್ಕೆ ತೆಗೆದುಕೊಂಡು, ಅವರ ಸಾವಿಗೆ ರಾಜಶೇಖರ ರೆಡ್ಡಿಯವರ ಸಾವನ್ನು ಮಾಧ್ಯಮದವರು ಆರೋಪಿಸಿದರೆ? ಹಾಗೆಂದು ಸಹ ಕೆಲವು ಪತ್ರಿಕೆಗಳು ಬರೆದವು. ಇದರಲ್ಲಿ ಯಾವುದು ನಿಜ?

> **ಗೊತ್ತಿಲ್ಲ**
> ಯಾರು
> ಕಂಡಿಲ್ಲ
> ಕೃಷ್ಣ ತಿರುಗಿದ್ದು
> ಕನಕನ
> ಪ್ರೀತಿಗೋ !
> ಭಕ್ತಿಗೋ !
> ಮತ್ತೊಬ್ಬರ
> ಮನಃಸ್ಥಿತಿಗೋ ?
>
> ಕಮಲಂ ಅರಸು

ಈ ಸಂದರ್ಭದಲ್ಲಿ ನನಗೆ ಆಂಟನ್ ಚೆಕಾಫ್‌ನ ಕಥೆಯೊಂದರ ಪಾತ್ರ ನೆನಪಿಗೆ ಬರುತ್ತದೆ. ಆ ವ್ಯಕ್ತಿ ಹಲವು ಖೋಟಾ ನಾಣ್ಯಗಳನ್ನು ನಿಜವಾದ ನಾಣ್ಯ ಗಳೊಂದಿಗೆ ಸೇರಿಸಿಕೊಂಡು, ಯಾವುದು ಖೋಟಾ ಅಥವಾ ಯಾವುದು ನಿಜವಾದದ್ದು ಎಂದು ತಿಳಿಯದೆ, ಯಾವ ಗಳಿಗೆಯಲ್ಲಿ ತಾನು ಪೊಲೀಸರ ಕೈಗೆ ಸಿಕ್ಕಿಬೀಳುತ್ತೇನೆಂದು ಸದಾ ಚಡಪಡಿಸುತ್ತಾನೆ. ನಮ್ಮ ಮಾಧ್ಯಮಗಳಲ್ಲಿ ನಾವು ತಿಳಿಯುವ ಸುದ್ದಿಗಳು ನಮ್ಮನ್ನು ಚೆಕಾಫ್‌ನ ಪಾತ್ರಗಳ ಪರಿಸ್ಥಿತಿಗೇ ಒಯ್ದು ನಿಲ್ಲಿಸುತ್ತವೆ. ಮಾಧ್ಯಮಗಳ ಸುದ್ದಿಗಳಲ್ಲಿ ಯಾವುದು ಸತ್ಯ ಯಾವುದು ಅಸತ್ಯ ಎಂದು ನಿರ್ಧರಿಸುವುದೇ ಕಷ್ಟವಾಗುತ್ತದೆ. ನೀವು ಮಾಧ್ಯಮಗಳ ಮೂಲಕ ಓದುವ, ಕೇಳುವ, ವೀಕ್ಷಿಸುವ ಸುದ್ದಿ ಅಥವಾ ವಿಚಾರ ನಿಜವಾಗಿರಬಹುದು, ಸುಳ್ಳಾಗಿರಲೂಬಹುದು. ನಿಜವಾದ ಸುದ್ದಿಗಳನ್ನು ಸುಳ್ಳಾಗಿಸುವ, ಸುಳ್ಳನ್ನು ನಿಜವಾಗಿಸುವ ಚಾಕಚಕ್ಯತೆ ಗಳನ್ನು ಮಾಧ್ಯಮಗಳು ಚೆನ್ನಾಗಿ ರೂಢಿಸಿಕೊಂಡಿವೆ.

ಮಾಧ್ಯಮಗಳು ಹೆಚ್ಚು ವಸ್ತುನಿಷ್ಠವಾಗಲು, ಜವಾಬ್ದಾರಿ ಯುತವಾಗಲು ಮಾಧ್ಯಮಗಳು ಹೆಚ್ಚು ವೃತ್ತಿಪರವಾಗುವ ಅವಶ್ಯಕತೆ ಉಂಟು. ಯಾವುದೇ ವೃತ್ತಿ, ವೃತ್ತಿಯೆಂದು ಪರಿಗಣಿಸಲ್ಪಡಲು ಕನಿಷ್ಠ ಎರಡು ಅರ್ಹತೆಗಳನ್ನು ಹೊಂದಿರಬೇಕು. ಮೊದಲಿಗೆ, ಆ ಕ್ಷೇತ್ರದಲ್ಲಿ ಕೆಲಸ ಮಾಡಲು ಅವಶ್ಯಕವಾದ ತರಬೇತಿ ಪಡೆದುಕೊಳ್ಳ ಬೇಕು; ಎರಡನೆಯದು, ವೃತ್ತಿಗೆ ಸಂಬಂಧಿಸಿದಂತೆ ಒಂದು ನೀತಿ ಸಂಹಿತೆ ಇದ್ದು, ಅದು ಕಟ್ಟುನಿಟ್ಟಾಗಿ ಅನ್ವಯವಾಗಬೇಕು. ಈ ವಿಚಾರಗಳಿಗೆ ಸಂಬಂಧಿ ಸಿದಂತೆ ಪ್ರಸ್ತುತ ಮಾಧ್ಯಮಗಳ ಸನ್ನಿವೇಶದಲ್ಲಿ ಈ ಕೊರತೆಗಳು ಎದ್ದುಕಾಣುತ್ತವೆ. ವೃತ್ತಿಗೆ ಸಂಬಂಧಿಸಿದ ಯಾವುದೇ ಬಗೆಯ ತರಬೇತಿಯೂ ಇಲ್ಲದೆ ಮಾಧ್ಯಮಗಳಲ್ಲಿ ಕೆಲಸ ಪಡೆದುಕೊಳ್ಳುವ ಸಾಧ್ಯತೆ ಇದೆ. ಬೇರೆ ಬೇರೆ ನೀತಿ ಸಂಹಿತೆಗಳಿದ್ದರೂ ಸಹ, ಅವು ಕಾರ್ಯ ರೂಪದಲ್ಲಿ ಜಾರಿಯಾದದ್ದು ಇಲ್ಲ. ತಪ್ಪು ಮಾಡಿದ ವೈದ್ಯ ಅಥವಾ ವಕೀಲ ಮೆಡಿಕಲ್ ಕೌನ್ಸಿಲ್ ಅಥವಾ ಬಾರ್ ಕೌನ್ಸಿಲ್‌ನಿಂದ 'ಅನರ್ಹ' ಎಂದು ಹೊರಹಾಕಲ್ಪಡುತ್ತಾನೆ. ಅಂತಹ ಒಂದು ವ್ಯವಸ್ಥೆ ಮಾಧ್ಯಮಗಳಲ್ಲಿದ್ದರೆ, ಅದು ನನಗೆ ತಿಳಿಯದು.

ಈ ಮೇಲಿನ ವಿಶ್ಲೇಷಣೆಯ ಆಧಾರದ ಮೇ ಮಾಧ್ಯಮಗಳಿಗೆ ಸಂಬಂಧಪಟ್ಟ ಹಾಗೆ, 'ಸ್ವಾತ ಪರಿಕಲ್ಪನೆಗೆ ನಿರ್ದಿಷ್ಟ ವ್ಯಾಖ್ಯಾನವೊಂದನ್ನು ನಿ ಬಹುದು. ಮಾಧ್ಯಮ ಸ್ವಾತಂತ್ರ್ಯ ಎಂದರೆ 'ಪ್ರ ಅಥವಾ ಯಾವುದೇ ಬಗೆಯ ಬಾಹ್ಯ ಅಥವಾ ಆಂ ಒತ್ತಡಗಳಿಗೆ ಒಳಗಾಗದೆ, ವಾಸ್ತವ ಸಂಗತಿಗಳನ್ನು ನಿಷ್ಠವಾಗಿ ಹಾಗೂ ಜವಾಬ್ದಾರಿಯುತವಾಗಿ ವ್ಯಕ್ತಪಡಿ ಸ್ಥಿತಿ, ಸನ್ನಿವೇಶ' ಎಂಬುದಾಗಿ ಅರ್ಥೈಸಬಹುದು. ನಿಷ್ಠತೆ ಮತ್ತು ಸಾಮಾಜಿಕ ಹೊಣೆ ಯಾ ಜವಾ ಗಳಿಗೆ ಹೊರತಾಗಿ ಇಲ್ಲಿ ಸ್ವಾತಂತ್ರ್ಯವನ್ನು ಪರಿಗಣಿಸ ಬರುವುದಿಲ್ಲ. ಸ್ವಾತಂತ್ರ್ಯ, ಜವಾಬ್ದಾರಿ, ವಸ್ತುನಿಷ್ಠತೆ ಮೂರೂ ಒಟ್ಟಾಗಿ ಒಂದು ಬಗೆಯ ಸಮಷ್ಟಿ (ಗೆಸ್ಟಾ ಸ್ವರೂಪವನ್ನು ತಾಳಿ, ಒಂದರಿಂದ ಇನ್ನೊಂದು ಅವಿಭ ವಾಗಿ ಕಾರ್ಯನಿರ್ವಹಣೆ ಮಾಡಿದಾಗ ಮಾತ್ರ ಮಾಧ್ಯಮ ಸ್ವಾತಂತ್ರ್ಯ ಅರ್ಥಪೂರ್ಣವಾಗುತ್ತದೆ.

ಮಾಧ್ಯಮಗಳ ಸ್ವಾತಂತ್ರ್ಯ ಎಲ್ಲರಿಗೂ ಪ್ರಿ ವಾದದ್ದು; ಅದರ ಬಗ್ಗೆ ಎರಡು ಮಾತಿಲ್ಲ. ನ ನಾಯಿಗಳೂ ಪ್ರಿಯವಾದ ಪ್ರಾಣಿಗಳೇ. ಹಾಗಾದ ಸಹ ನಾಯಿಗಳು ಮನೆಯ ಮುಂದೆ ಗಲೀಜು ಮಾಡಿ ಅಥವಾ ದಾರಿಯಲ್ಲಿ ಹೋಗುವವರನ್ನು ಮನಸ ಇಚ್ಛೆ ಕಚ್ಚಿ ದಾಳಿ ಮಾಡಿದಾಗ, ನಾವು ಸುಮ್ಮನಿರು ಕ್ಕಾಗುವುದಿಲ್ಲ. ನಾಯಿಗಳ ಬಗ್ಗೆ ಏನಾದರೂ ಕೈಗೊಳ್ಳುವಂತೆ ಮನವಿ ಮಾಡಿಕೊಳ್ಳುತ್ತೇವೆ. ಅಂತೆ ಮಾಧ್ಯಮ ಸ್ವಾತಂತ್ರ್ಯ ತಪ್ಪುದಾರಿ ಹಿಡಿದಾಗ, ಏನಾದ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳ ಎನ್ನುವುದು ಇಲ್ಲಿನ ಆಶಯ.

**ಕೊನೆಯ ಮಾತು**

ಕೊನೆಯಲ್ಲಿ ಒಂದು ಮಾತು. ಇಷ್ಟೆಲ್ಲಾ ಹೇ ಮೇಲೂ ನಾಗರಿಕ ಸಮಾಜದ ಅಳಿವು ಉ ಅನಿವಾರ್ಯವಾಗಿ ಮಾಧ್ಯಮಗಳ ಆರೋ ನಿರ್ವಹಣೆಯನ್ನೇ ಅವಲಂಬಿಸಿರುತ್ತದೆ. ಮಾ ವಿಮುಕ್ತ ಸಮಾಜ ಕಲ್ಪನೆಗೂ ನಿಲುಕದಷ್ಟು ಅವು ಬದುಕಿನ ಅವಿಭಾಜ್ಯ ಅಂಗಗಳಾಗಿಹೋಗಿ ಅವುಗಳ ಅರೆಕೊರೆಗಳನ್ನು ಹೇಳಿದ ಮಾತ್ರಕ್ಕೆ ಮೇಲಿನ ವಿಚಾರಧಾರೆ ಮಾಧ್ಯಮ ವಿರೋಧಿ ಎ ಯಾರೂ ಪರಿಗಣಿಸಬೇಕಾಗಿಲ್ಲ. ಮಾಧ್ಯ ಇತಿಮಿತಿಗಳನ್ನು ಗಮನದಲ್ಲಿಟ್ಟುಕೊಂಡು ಮಾಧ್ಯಮಗಳ ಸರಕುಗಳನ್ನು ಅರ್ಥೈಸಬೇಕು, ಕೊಳ್ಳಬೇಕು ಎನ್ನುವುದು ಇಲ್ಲಿನ ವಿಚಾರ ಸರ ಸಾರಾಂಶ. ಈ ಮೊದಲೇ ಪ್ರಸ್ತಾಪವಾಗಿರುವ ಬೆಕೆಟ್‌ನ ಹೇಳಿಕೆಯೊಂದನ್ನು ಉದ್ಧರಿಸುವ ಮ ಇಲ್ಲಿನ ವಿಶ್ಲೇಷಣೆಯನ್ನು ಮುಗಿಸಬಹುದು : "ಸ್ವ (ಅದರ ನಿಜ ಅರ್ಥದಲ್ಲಿ) ಮಾಧ್ಯಮ ಶಕ್ತಿ ಪ್ರಜಾಪ್ರಭುತ್ವದ ಅವಿಭಾಜ್ಯ ಅಂಗ. ಭ್ರಷ್ಟ ಮಾ ಕುಲಗೆಟ್ಟ ಪ್ರಜಾಪ್ರಭುತ್ವದ ಲಕ್ಷಣ ಮತ್ತು ಅ ಶಾಶ್ವತಗೊಳಿಸುವ ಸಾಧನ ಎರಡೂ ಆಗಿರುತ್ತದೆ."


ಡಾ।। ಹೆಚ್. ಎಸ್. ಈಶ್ವರ
ಹೆಚ್.ಐ.ಜಿ. ೧೧, ಕೆ.ಹೆಚ್.ಬಿ. ಕಾಲೋನಿ, ಮೊದಲನೇ ಹ
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

ಸುಂದರ, ಸುದೃಢ, ಸ್ವಾಭಿಮಾನ ಸಂಪನ್ನ ...ನವ ಬದುಕಿಗೆ ಸಾಮಾಜಿಕ, ರಾಜಕೀಯ, ಆರ್ಥಿಕ ...ತ್ತು ಸಾಂಸ್ಕೃತಿಕ ನೆಲೆಗಳ ಬಲವರ್ಧನೆ ಅಗತ್ಯ. ...ದರಲ್ಲೂ ಬಹುರೂಪೀ ಸಾಂಸ್ಕೃತಿಕ ಪರಂಪರೆಗಳನ್ನು ...ಂದಿರುವ ನಾಡುಗಳಲ್ಲಿ ಪ್ರತಿಯೊಂದು ಸಮುದಾಯ ...ು, ಸಮಾನತೆಯ ನೆಲೆಯಲ್ಲಿ ವ್ಯವಹರಿಸಬೇಕು. ...ಧಿಕಾರದ ಅಧಿಕೃತ ಅಂಗಳಗಳಲ್ಲಿ ಮಾತ್ರವಲ್ಲ, ...ತ್ಪಾದನೆಯ ಫಲಿತಗಳಲ್ಲೂ, ಎಲ್ಲರಿಗೂ ...ಪಾಳು-ಸಮಪಾಲು' ದೊರೆಯಬೇಕು. ಬಡವರ ...ದು-ಸೃಜನಶೀಲತೆಗಳು ಒಡೆಯರ ಮೇಲ್ಮೆಗೆ ...ಟ್ಟಿಲಾಗದ ಸಮ ಸಂಸ್ಕೃತಿಗೆ ಗೊಬ್ಬರವಾಗಬೇಕು. ...ಂತಹ ಸಂತುಲಿತ ಸಮಾಜಕ್ಕಾಗಿ ೧೯ನೇ ...ಮಾನದಲ್ಲಿ ತುಡಿದ ಎರಡು ಚೈತನ್ಯಶೀಲ-...ಶೀಲ-ಸೃಜನಶೀಲ ಮನಸ್ಸುಗಳೇ 'ನಾಣು' ಮತ್ತು ...ರೇನ್'. ತಿರುವನಂತಪುರದ ಚೆಂಬಳಾಂತಿಯ

ದವರು. ಇವರು ಅರವೀಪುರದಲ್ಲಿ ೬-೨-೧೮೮೮ ರಂದು ಮಹಾ ಶಿವರಾತ್ರಿಯಂದು ಶಿವಾಲಯ ಪ್ರತಿಷ್ಠಾಪಿಸಿ, ''ವಿದ್ಯೆಯಿಂದ ಸ್ವತಂತ್ರರಾಗಿರಿ, ಸಂಘಟನೆಯಿಂದ ಬಲಯುತರಾಗಿರಿ, ಉದ್ಯಮದಿಂದ ಅಭ್ಯುದಯ ಹೊಂದಿರಿ'' ಎಂದವರು. ಅಲ್ಲಿಂದಲೇ ಕ್ರಾಂತಿಯಿಂದ ಶಾಂತಿಯತ್ತ, ಅರಿವಿನ ಜ್ಯೋತಿ ಹಚ್ಚುತ್ತಾ ಮುನ್ನಡೆದವರು. ಹೀಗಿದ್ದೂ, ಕೊನೆಗೆ ತನ್ನ ಅನುಯಾಯಿಗಳಿಂದಲೇ ಮಾನಸಿಕ ಹಿಂಸೆಗೆ ಗುರಿಯಾಗಿ, ೨೮ ಸೆಪ್ಟೆಂಬರ್ ೧೯೨೮ರಂದು ಶಾರದಾ ಮಠ ಸಮನ್ವಿತ, ವರ್ಕಳದ ಶಿವಗಿರಿಯಲ್ಲಿ ತನ್ನ ೭೪ನೇ ವಯಸ್ಸಿನಲ್ಲಿ ಕೊನೆಯುಸಿರೆಳೆದವರು. ಅದೇ ರೀತಿ ಸ್ವಾಮಿ ವಿವೇಕಾನಂದರು ಕಲ್ಕತ್ತಾದ 'ಸಿಮ್ಲಾ' ಎಂಬ ಸ್ಥಳದಲ್ಲಿ ೧೨ ಜನವರಿ ೧೮೬೩ರಂದು ಹುಟ್ಟಿ ''ಮೂಢನಂಬಿಕೆ ಮಾನವನ ದೊಡ್ಡ ಶತ್ರು, ಆದರೆ ಸ್ವಮತ ಭ್ರಾಂತಿ ಅದಕ್ಕಿಂತಲೂ ಹೆಚ್ಚು'' ಎಂದು

# ...ಮನುಜ ಮತ ವಿಶ್ವಪಥಕ್ಕೆ ಧ್ವನಿಯಾದ ...ಚೆಂಬಳಾಂತಿಯ 'ನಾಣು' ಸಿಮ್ಲಾದ 'ನರೇನ್'

...ಣು'; ಅವರೇ ಅರವೀಪುರದಲ್ಲಿ ಶಿವಾಲಯ ...ಷ್ಠಾಪಿಸಿ, ನಾರಾಯಣಗುರು (೧೮೫೪-೧೯೨೮) ...ದು ಗುರುತಿಸಲ್ಪಟ್ಟರೆ, ಅಮೆರಿಕಾದ ವಿಶ್ವಧರ್ಮ ...ಮ್ಮೇಳನದಲ್ಲಿ ಎಲ್ಲರ ಮನಗೆದ್ದ 'ನರೇನ್'; ಅವರೇ ...ಮಿ ವಿವೇಕಾನಂದ (೧೮೬೩-೧೯೦೨) ಎಂದು ...ರುತಿಸಲ್ಪಡುತ್ತಾರೆ. ಇವರಿಬ್ಬರೂ ಮನುಜಮತ-...ಪಥ ಎರಡರೊಡನೆಯೂ ಅನುಸಂಧಾನ ...ಸಿದ ಗಮನಾರ್ಹ ಪ್ರಯೋಗಶೀಲರು. ಅದರಲ್ಲೂ ...ವಾದಿಗಳಾಗಿ ಭಾವವಾದದ ನೆಲೆಯಿಂದ ವಿಚಾರ ...ದಕ್ಕೆ ಧ್ವನಿಯಾದವರು; ಪರಂಪರೆಯ ಪಂಜರದಲ್ಲಿ ...ಪಡಿಸುತ್ತಾ ಅಲ್ಲಿನ ಅಮಾನುಷ ಧ್ವನಿಗಳಿಗೆ ...ನವೀಯ ನೆಲೆಯಲ್ಲಿ ತಿರುಗಿಬಿದ್ದವರು. ತಮ್ಮ ...ನ್ಯತೆಯಿಂದಲೇ ಸಹಸ್ರಾರು ವರ್ಷಗಳ ಮಾನವ ...ತ್ರೆಯಲ್ಲಿ ತಮ್ಮ ಹೆಜ್ಜೆಗಳ ಗುರುತುಗಳನ್ನು ...ಬಲಿಸಿದವರು.

ನಾರಾಯಣಗುರುಗಳು ೨೦ ಆಗಸ್ಟ್ ೧೮೫೪ರಲ್ಲಿ ...ವಾಂಕೂರು ಸಂಸ್ಥಾನದ ತಿರುವನಂತಪುರ ...ದ ಚೆಂಬಳಾಂತಿ ಎಂಬ ಹಳ್ಳಿಯಲ್ಲಿ ಹುಟ್ಟಿ ...ನುಷ್ಯರೆಲ್ಲಾ ಒಂದೇ ಜಾತಿ, ಒಂದೇ ಧರ್ಮ, ...ತು ಅವರಿಗೆಲ್ಲಾ ಒಂದೇ ದೇವರು'' ಎಂದು ಸಾರಿ

ಅಮೆರಿಕಾದ ಚಿಕಾಗೋದಲ್ಲಿ ೧೧ ಸೆಪ್ಟೆಂಬರ್ ೧೮೯೩ರಂದು ವಿಶ್ವಧರ್ಮ ಸಮ್ಮೇಳನ ಉದ್ಘಾಟನಾ ಸಮಾರಂಭದಲ್ಲಿ ಗುಡುಗಿದವರು. ಅದರ ಮುಕ್ತಾಯ ಸಮಾರಂಭದಲ್ಲಿ ''ನಮಗೆ ಬೇಕಾದುದು ಹೋರಾಟ ವಲ್ಲ-ಸೌಹಾರ್ದ; ವಿನಾಶವಲ್ಲ – ಸ್ವೀಕಾರ; ವೈಮನಸ್ಸಲ್ಲ- ಸಾಮರಸ್ಯ ಮತ್ತು ಶಾಂತಿ'' ಎಂದು ಸಾರಿ ವಿಶ್ವಮಾನವ ಪರಿಕಲ್ಪನೆಗೆ ಚಾಲನೆ ನೀಡಿದವರು. ಹೀಗಿದ್ದೂ, ನಾರಾಯಣಗುರುಗಳಂತೆಯೇ, ಇವರು ಕೂಡ ತನ್ನ ಅನುಯಾಯಿಗಳ ಸಾಂಪ್ರದಾಯಿಕ ಮಡಿವಂತಿಕೆಗಳಿಂದ ಮಾನಸಿಕ ಹಿಂಸೆಯಲ್ಲಿ ಚಡಪಡಿಸುತ್ತಾ, ೪ ಜುಲೈ ೧೯೦೨ರಂದು ತಮ್ಮ ೩೯ನೇ ವಯಸ್ಸಿನಲ್ಲೇ ಕಲ್ಕತ್ತಾದ ರಾಮಕೃಷ್ಣ ಮಿಶನಿನ ಮುಖ್ಯಾಲಯವಾದ ಬೇಲೂರು ಮಠದಲ್ಲಿ ಕೊನೆಯುಸಿರೆಳೆದವರು.

ಶ್ರೇಣೀಕೃತ ಸಿದ್ಧಾಂತದ ಜಾತಿವಾದೀ ಮಡಿವಂತಿಕೆಯ ವೈದಿಕ ಮತದಲ್ಲಿ ದೇವತಾ ಪ್ರತಿಷ್ಠಾಪನೆಗೆ ಆಗಮಶಾಸ್ತ್ರದ ಹಿನ್ನೆಲೆಯಲ್ಲಿ ವಂಶಪಾರಂಪರಾಗತ ಹಕ್ಕು ಪಡೆದಿರುವ 'ಬ್ರಾಹ್ಮಣರ ಪರಮಾಧಿಕಾರ' ವಾಗಿತ್ತು. ಅದನ್ನು ಅತೀ ಶೂದ್ರರಾದ 'ಈಳವ' ಜನಾಂಗದ ನಾರಾಯಣಗುರು ಧಿಕ್ಕರಿಸಿ ನೈಯಾರ

ಕಲ್ಯಾಣದ ಕ್ರಾಂತಿಯ ಬಸವಣ್ಣನ ತಾತ್ವಿಕತೆ ಅವರ ಅನುಯಾಯಿಗಳಿಂದಲೇ ಮೂಲೆಗುಂಪಾದ ದುರ್ಗತಿಯೇ ನಾರಾಯಣ ಗುರು ಮತ್ತು ವಿವೇಕಾನಂದರ ತಾತ್ವಿಕತೆಗಳಿಗೂ ಉಂಟಾದದ್ದು ಯಾಕೆ ? ಈ ಪ್ರಶ್ನೆಗೆ ದೈವವಾದೀ ಸಿದ್ಧಾಂತದ ಭಾವವಾದದಿಂದ ಉತ್ತರ ಅರಸುವ ಬದಲು ವಿಚಾರವಾದದಿಂದ ಮರುಚಿಂತನೆ ನಡೆಸುವುದು ಸೂಕ್ತ. ೧೨ನೇ ಶತಮಾನದಲ್ಲಿ ಶರಣರಲ್ಲದವರನ್ನು ನಿರ್ಲಕ್ಷಿಸಿದ ಬಸವಪ್ರಜ್ಞೆ ೧೯ನೇ ಶತಮಾನದಲ್ಲಿ ಈಳವರಲ್ಲದವರನ್ನು ಗುಮಾನಿಯ ಕಣ್ಣುಗಳಿಂದಲೇ ಕಂಡ ಶಿವಗಿರಿಯ ಗುರುಪ್ರಜ್ಞೆ ಮತ್ತು ಬಂಗಾಳೀ ಭದ್ರಲೋಕದ ಲಕ್ಷ್ಮಣರೇಖೆಯನ್ನು ಮೀರದ ಬೇಲೂರಿನ ವಿವೇಕ ಪ್ರಜ್ಞೆಗಳು ಕೊನೆಗೂ ಭಾವವಾದದ ಪೀಠಸ್ಥ ಪರಂಪರೆಗೆ ಬಲಿಯಾದ ಚರಿತ್ರೆಯ ಚೈತನ್ಯರಹಿತ ಜಡ ನೆಲೆಗಳನ್ನು ಅರಿಯಬಹುದಾಗಿದೆ, ಅರಿಯಬೇಕಾಗಿದೆ.

✣ ✣ ✣

ಒಂದೆಡೆ ವಿವೇಕಾನಂದರು ಸಂಪ್ರದಾಯವಾದಿಗಳಿಗೆ ಶೂದ್ರ ಸನ್ಯಾಸಿಯಾದರೆ ನಾರಾಯಣಗುರುಗಳು ಕೇವಲ ಈಳವರ ಗುರುವಾಗಿ ಸೀಮಿತವಾದರು. ಇವರಿಬ್ಬರನ್ನು ಕುಬ್ಜರನ್ನಾಗಿಸಿದವರಾರು ? ಇದಕ್ಕೆ ಕಾರಣವೇನು ? ಉತ್ತರಕ್ಕಾಗಿ ಭಾವವಾದ ಮತ್ತು ವಿಚಾರವಾದಗಳ ಕಪ್ಪುಬಿಳುಪಿನ ಸಂತುಲಿತ ವಿವೇಚನೆ ಇನ್ನಾದರೂ ಆಗಬೇಕಾಗಿದೆ. ಇದರಿಂದಲೇ ಜಾಗತೀಕರಣ ಮತ್ತು ಕೋಮುವಾದದ ಉಭಯ ಪ್ರತಿಗಾಮೀ ತಾತ್ವಿಕತೆಗಳನ್ನು ಹಿಮ್ಮೆಟ್ಟಿಸಬಹುದು. ಅಧಿಕಾರಕ್ಕಾಗಿ ಭಾವವಾದ ಬೇಕಾದರೆ, ಅನ್ನಕ್ಕಾಗಿ ಭಯೋತ್ಪಾದನೆ ಅನಿವಾರ್ಯವಾಗಬಹುದು.

ರವಿ ರಾ. ಅಂಚನ್

ನದಿಗೆ ಧುಮುಕಿ ಅಲ್ಲಿಂದ ಆಯ್ದುತಂದ 'ಶಿಲಾಖಂಡ'ವನ್ನು ನೀರಿನಲ್ಲೇ ನಿಂತು ಗುರುಗಳ ನಿರೀಕ್ಷೆಯಲ್ಲಿದ್ದ ಅವರ ಮೊದಲ ಶಿಷ್ಯ ನಾಯರ್ ಜಾತಿಯ ಶೂದ್ರ ಬಾಲಕ ಶಿವಲಿಂಗ ದಾಸ್ ಸ್ವಾಮಿಗಳಿಗೆ ಹಸ್ತಾಂತರಿಸುತ್ತಾರೆ. ಹೀಗೆ ಶೂದ್ರಾತಿಶೂದ್ರರ ತಾತ್ವಿಕ ಸಾಮರಸ್ಯವನ್ನು ಸಾಂಕೇತಿಸುತ್ತಾ ನೀರಿನಿಂದ ದಡಕ್ಕೆ ಬಂದು ನಿಂತಾಗ, ಪುನಃ ಶಿಲಾಖಂಡವನ್ನು ಶಿಷ್ಯನಿಂದ ಪಡೆದು, ಅದನ್ನು ಪೂರ್ವ ನಿಶ್ಚಿತ ಸ್ಥಳದಲ್ಲಿ ಶಿವಲಿಂಗವಾಗಿ ಪ್ರತಿಷ್ಠಾಪಿಸುತ್ತಾರೆ.

ಶೂದ್ರ ಅತೀ ಶೂದ್ರರಲ್ಲಿ ಜಾಗೃತಿ ನಿರ್ಮಿಸಿದ ಈ ಶಿವಾಲಯದ ಪ್ರತಿಷ್ಠೆಯನ್ನು ಮೇಲ್ವರ್ಗದ ನಂಬೂದಿರಿಗಳು ಪ್ರಶ್ನಿಸಿದಾಗ ''ನಾನು ಪ್ರತಿಷ್ಠಾಪಿಸಿದ್ದು ಶೂದ್ರ ಶಿವ'' ಎನ್ನುತ್ತಾ, ಅವರನ್ನೇ ನಿರುತ್ತರಗೊಳಿಸಿದ್ದವರು ನಾರಾಯಣಗುರುಗಳು. ಅರವೀಪುರದ ಶಿಲಾಫಲಕದಲ್ಲಿ ''ಇಲ್ಲಿದೆ ಮಾದರಿಯ ತಾಣವೊಂದು, ಮನುಷ್ಯರ ಸೋದರಭಾವಕ್ಕೆ ಅನುವು ದೊರೆಯುವುದಿಲ್ಲಿ, ಜಾತಿಮತಗಳ ದ್ವೇಷಭಾವನೆಗೆ ಎಡೆಯಿಲ್ಲಿಲ್ಲಿ'', ಎಂಬ ಘೋಷವಾಕ್ಯವನ್ನು ಕೆತ್ತಿಸುತ್ತಾರೆ. ಇದು ಜಾತೀಯತೆಯನ್ನೂ, ಅಸ್ಪೃಶ್ಯತೆಯನ್ನೂ ಮೆಟ್ಟಿನಿಲ್ಲುವ ನಾರಾಯಣಗುರುಗಳ ಸಾಧನೆಗೆ ಜಗಿಹಲಗೆಯಾಗುತ್ತದೆ. ಆದರೆ ಅವರ ಕಾಲದಲ್ಲೇ, ಅದು ಜಾತಿ ರಾಜಕೀಯಕ್ಕೆ ಬಲಿಯಾಗಿ, ಸಂಕುಚಿತವಾದದ್ದು, ಅವರು ಅನುಭವಿಸಿದ ಮಾನಸಿಕ ಹಿಂಸೆ.

ವಿವೇಕಾನಂದರ ವಿಶ್ವಮಾನವ ಪರಿಕಲ್ಪನೆಯ ರಾಮಕೃಷ್ಣ ಮಿಶನ್ನಿನ ಮುಖ್ಯ ನೆಲೆ ಕಲ್ಕತ್ತದಲ್ಲಿನ ಬೇಲೂರು ಮಠದ ಪ್ರತಿಷ್ಠಾಪನೆ ೯ ಡಿಸೆಂಬರ್ ೧೮೯೮ರಲ್ಲಿ ನಡೆದಾಗ, ಅದರ ಉದ್ದೇಶದತ್ತ ಸ್ವಾಮಿ ವಿವೇಕಾನಂದರು ಬೆಳಕು ಚೆಲ್ಲುತ್ತಾ, ''ಧರ್ಮದ ಸಾರ್ವತ್ರಿಕ ಹಾಗೂ ಸಾರ್ವಕಾಲಿಕ ತತ್ವಗಳನ್ನು ಮಾತ್ರವೇ ಇಲ್ಲಿ ಬೋಧಿಸಲಾಗುವುದು. ಸರ್ವಧರ್ಮ ಸಹಿಷ್ಣುವಾದ ಈ ಕೇಂದ್ರದಿಂದ ಶಾಂತಿ, ಸ್ನೇಹ, ಸಮನ್ವಯಗಳ ಉಜ್ವಲ ಸಂದೇಶಗಳು ಹೊರಹೊಮ್ಮಿ ಸಮಸ್ತ ವಿಶ್ವವನ್ನೇ ಆವರಿಸಲಿವೆ... ಬಹುಜನರ ಹಿತಕ್ಕಾಗಿ, ಬಹುಜನರ ಸುಖಕ್ಕಾಗಿ. ಇದನ್ನು ಸಕಲ ಧರ್ಮಗಳ ಸಮನ್ವಯದ ವಿಶಿಷ್ಟ ಕೇಂದ್ರವನ್ನಾಗಿ – ಪುಣ್ಯಕ್ಷೇತ್ರವನ್ನಾಗಿ ಮಾಡಲೆಂದು ನಾವೆಲ್ಲಾ ನಮ್ಮ ಹೃದಯಾಂತರಾಳದಿಂದ ಪ್ರಾರ್ಥಿಸೋಣ'' ಎಂಬ ಮಾತುಗಳು ಅವರ ಮಾನವೀಯ ನಿಲುವುಗಳನ್ನು ಪರಿಚಯಿಸುತ್ತವೆ. ಆದರೆ ಈ ನಿಲುವು ಅರ್ಥವಾದದ್ದು ಮತ್ತು ಅನುಷ್ಠಾನಗೊಂಡದ್ದು ಇಬ್ಬರಲ್ಲಿ ಮಾತ್ರ ಎಂಬುವುದಕ್ಕೆ ಸ್ವಾಮಿ ವಿವೇಕಾನಂದರ ಪತ್ರಗಳೇ ಸಾಕ್ಷಿಯಾಗಿವೆ. ಅವರು ಸೋದರಿ ನಿವೇದಿತಾರವರಿಗೆ ಬರೆದ ಕೊನೆಯ ಪತ್ರದಲ್ಲಿ – ''ಪ್ರೀತಿ, ಮನುಷ್ಯತ್ವ, ಇವೆಲ್ಲಾ ಇನ್ನೂ ಪೂರ್ತಿ ಸತ್ತಿಲ್ಲ. ನನ್ನ ಪ್ರೀತಿಯ ಮಗಳೇ, ಒಂದೇ ಒಂದು ಬೀಜ ಸಾಕು, ಈ ಇಡೀ ಪ್ರಪಂಚವನ್ನು ವೃಕ್ಷ ಸಂಪತ್ತಿನಿಂದ ತುಂಬಲು ಒಂದೇ ಒಂದು ಬೀಜ ಸಾಕು... ಭಗವಂತನು ನಿನ್ನನ್ನು, ರಾಮಕೃಷ್ಣಾನಂದರನ್ನು ಹರಸಲಿ. ನನ್ನ ಕಾರ್ಯದಿಂದ ನಾನು ಸಂತೃಪ್ತನಾಗಿದ್ದೇನೆ. ನಿಮ್ಮಂತಹ ಒಬ್ಬ ಪ್ರಾಮಾಣಿಕ ವ್ಯಕ್ತಿಗಳನ್ನು ಬಿಟ್ಟುಹೋಗಲು ಸಾ... ವಾದದ್ದು ಮಹಾತ್ಮನೊಬ್ಬನ ಮಹತ್ವಾಕಾಂಕ್ಷೆ... ಮೀರಿದ್ದು'' ಎಂಬ ಮಾತಿನ ಒಳಗುದಿ ಅವರ ವಿಶ... ನಿಲುವಿಗೂ ಮತ್ತು ಅವರ ಅನುಯಾಯಿ... ಸಂಕುಚಿತ ನಿಲುವಿಗೂ ಕ್ಷ-ಕಿರಣ ಬೀರುತ್ತದೆ. ಇಂ... ಸಾಧಕ ವಿವೇಕಾನಂದರು ಶೂದ್ರ 'ಕಾಯ... ಜನಾಂಗದಲ್ಲಿ ಹುಟ್ಟಿದ ಅವರದಲ್ಲದ ತಪ್ಪಿ... ಅನುಭವಿಸಬೇಕಾದ ಮೇಲುಕೀಳಿನ ಸಾಮಾ... ನಿಲುವುಗಳನ್ನು ದರ್ಶಿಸುತ್ತದೆ.

ಕಲ್ಯಾಣದ ಕ್ರಾಂತಿಯ ಬಸವಣ್ಣನ ತಾತ್ವಿ... ಅವರ ಅನುಯಾಯಿಗಳಿಂದಲೇ ಮೂಲೆಗುಂಪಾ... ದುರ್ಗತಿಯೇ ನಾರಾಯಣಗುರು ಮತ್ತು ವಿವೇ... ನಂದರ ತಾತ್ವಿಕತೆಗಳಿಗೂ ಉಂಟಾದದ್ದು ಯಾಕೆ?... ಪ್ರಶ್ನೆಗೆ ದೈವವಾದೀ ಸಿದ್ಧಾಂತದ ಭಾವವಾದದಿ... ಉತ್ತರ ಅರಸುವ ಬದಲು ವಿಚಾರವಾದದಿಂದ ಮ... ಚಿಂತನೆ ನಡೆಸುವುದು ಸೂಕ್ತ. ೧೨ನೇ ಶತಮಾನ... ಶರಣರಲ್ಲದವರನ್ನು ನಿರ್ಲಕ್ಷಿಸಿದ ಬಸವ... ೧೯ನೇ ಶತಮಾನದಲ್ಲಿ ಈಳವರಲ್ಲದವ... ಗುಮಾನಿಯ ಕಣ್ಣುಗಳಿಂದಲೇ ಕಂಡ ಶಿವಗಿ... ಗುರುಪ್ರಜ್ಞೆ ಮತ್ತು ಬಂಗಾಳೀ ಭದ್ರಲೋಕದ ಲಕ್ಷ್ಮ... ರೇಖೆಯನ್ನು ಮೀರದ ಬೇಲೂರಿನ ವಿವೇಕ ಪ್ರಜ್ಞೆ... ಕೊನೆಗೂ ಭಾವವಾದದ ಪೀಠಸ್ಥ ಪರಂಪ... ಬಲಿಯಾದ ಚರಿತ್ರೆಯ ಚೈತನ್ಯರಹಿತ ಜಡ...

ನ್ನು ಅರಿಯಬಹುದಾಗಿದೆ, ಅರಿಯಬೇಕಾಗಿದೆ.

ಅರಿವೀಪುರದ ಶಿವಾಲಯದಿಂದ ಆರಂಭಿಸಿ, ರಳ (೨೯), ತಮಿಳುನಾಡು (೨) ಮತ್ತು ರ್ನಾಟಕದಲ್ಲಿ (೧) ಹೀಗೆ – ೩೨ ದೇವಸ್ಥಾನಗಳನ್ನು ತಿಷ್ಠಾಪಿಸಿದ ನಾರಾಯಣಗುರುಗಳು ೩೦ ಜೂನ್ ೨೭ರಲ್ಲಿ 'ಕಳವಂಗೋಡ' ಎಂಬ ಸ್ಥಳದಲ್ಲಿ ರ್ತಿ ರಹಿತ 'ಕನ್ನಡಿಯ ದೇವಾಲಯ' ತಿಷ್ಠಾಪಿಸುತ್ತಾರೆ. ಇದು ಇಂದು 'ಶಕ್ತೀಶ್ವರ ಕ್ಷೇತ್ರ' ಗಿ, ಅಪೂರ್ವ ತಾತ್ವಿಕ ಚಿಂತನೆಗಳಿಗೆ ಎಡೆಮಾಡಿ ಡುತ್ತಿದೆ. ಆದರೆ ನಾರಾಯಣಗುರುಗಳು ರಂಭಿಸಿದ ದೇವಾಲಯಗಳ ಸಂಖ್ಯೆ ೪೧ ಎಂದು, ವರಲ್ಲಿ ಶ್ರೀಲಂಕೆಯ ದೇವಾಲಯಗಳು ಸೇರಿದ್ದ ದು, ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ನೇನೇ ಇರಲಿ, ೧೮೮೮ರಿಂದ ನಾರಾಯಣ ರುಗಳು ಆರಂಭಿಸಿದ ದೇವಾಲಯಗಳ ಚಳುವಳಿ ೨೭ರಲ್ಲಿ "ಇನ್ನು ದೇವಾಲಯಗಳು ಸಾಕು. ವಾಲಯಗಳ ಪಕ್ಕದಲ್ಲಿ ಶಾಲೆಗಳು, ವಾಚನಾಲಯ , ಕೈಗಾರಿಕಾ ತರಬೇತಿ ಕೇಂದ್ರಗಳು ತಲೆಯೆತ್ತಲಿ" ಬ ಹೇಳಿಕೆಯೊಡನೆ ತನ್ನ ದೇವಾಲಯದ ಳುವಳಿಗಳಿಗೆ ಇತಿಶ್ರೀ ಹಾಡುತ್ತಾರೆ. ಅವರು ಪಿಸಿದ ದೇವಾಲಯಗಳ ಒಡೆತನವೂ ಶೂದ್ರರ ಬಲ್ಲೇ ಉಳಿದದ್ದು ಇಲ್ಲಿನ ವಿಶಿಷ್ಟತೆ. ಇದಕ್ಕೆ ರಿಕ್ತವಾಗಿ ಅವರ ಅನುಯಾಯಿಗಳೂ ಸೇರಿದಂತೆ ಗ್ರೆಸ್ಸಿನ ಕಾರ್ಯಕರ್ತರು ೩೦ ಮಾರ್ಚ್ ೨೪ರಲ್ಲಿ ನಡೆಸಿದ ಚಾರಿತ್ರಿಕ 'ವೈಕಂ ಸತ್ಯಾಗ್ರಹ' ದದ್ದು ದೇವಾಲಯ ಪ್ರವೇಶಕ್ಕಾಗಿಯೂ ಅಲ್ಲ; ರ ಒಡೆತನದಲ್ಲಿ ಪಾಲು ಪಡೆಯುವುದಕ್ಕೂ ಅಲ್ಲ, 'ಬರೇ ದೇವಸ್ಥಾನದ ಮುಂದಿನ ಹಾದಿಯನ್ನು ಕರು, ಶೂದ್ರಾತಿಶೂದ್ರರಿಗೆ ನಡೆದಾಡಲು ರ್ಬಂಧಿಸಬಾರದು' ಎಂಬ ಹಕ್ಕಿಗಾಗಿ. ಅದೇ ರೀತಿ ಬೇಡ್ಕರ್ ಅವರು ೧೯೨೭ರಿಂದ ೧೯೩೫ರ ಗಿನ ಅಸ್ಪೃಶ್ಯತೆಯ ಹಕ್ಕೊತ್ತಾಯದ ಚಳುವಳಿ ಲ್ಲಿ ಮಹಾರಾಷ್ಟ್ರದ ನಾಸಿಕ್‌ನ 'ಕಾಲಾರಾಮ ದಿರ' ಪ್ರವೇಶವೂ ಸೇರಿದ್ದರೂ, ತಮ್ಮ ಕಾರ್ಯ ತ್ರದಲ್ಲಿ ನಾರಾಯಣಗುರುಗಳು ದೇವಾಲಯ ಳುವಳಿಗಳ ಮುಖೇನ ನಡೆಸಿದ 'ಮೌನ ಕ್ರಾಂತಿ'ಯ ಕ ಮತ್ತು ತಾಂತ್ರಿಕ ಸಫಲತೆ ಮಿಕ್ಕ ಚಳುವಳಿಗಳಿಗೆ ಕೆ ದಕ್ಕಲಿಲ್ಲ, ಎಂಬುವುದು ಕೌತುಕದ ವಿಷಯ. ರೆ ಈ ತಾತ್ವಿಕತೆ ಮತ್ತು ತಾಂತ್ರಿಕತೆ ಎನ್ನುವುದನ್ನು ತ ಕೇರಳದ ಬಹು ಸಮುದಾಯಗಳು ಇಂದಿಗೂ ಮಾಲಿಕರ ಭಂಡತನ, ಬಂಡವಾಳಶಾಹಿಗಳ ತ್ಯಗಳನ್ನು ಮಾತ್ರವಲ್ಲ, ಕೋಮುಜ್ವಾಲೆಯ ರೀಕಗಳನ್ನು ನಿಯಂತ್ರಣದಲ್ಲಿಟ್ಟಿವೆ. ಆದರೆ ಈ ಕತೆಯನ್ನು ಅಲಕ್ಷಿಸಿದ ಕರಾವಳಿ ಕರ್ನಾಟಕದ ಗಳು ಕೋಮುಜ್ವಾಲೆಯಲ್ಲಿ ಬೇಯುತ್ತಿವೆ. ಹಾಗೆ ಡಿದರೆ, ಇಂದು ಕರ್ನಾಟಕ ರಾಜ್ಯವೇ ಭೂ ಲಿಕರ - ಬಂಡವಾಳಶಾಹಿಗಳ ಅಪವಿತ್ರ ಮೈತ್ರಿಗೆ ಾಗಿದೆ. ಇದರಿಂದ ಅತಂತ್ರರಾದಂತಹ ಬಡಜನ ಗಿ ಹಿಂಸೆಯ ಹಾದಿ ಹಿಡಿಯುತ್ತಿದ್ದಾರೆ. ಅದನ್ನು ೂಕಿನ ಬಲದಿಂದ ಮತ ಮಾನ್ಯರ ಮರ್ಜಿ ಹಿಡಿದು ನಿಗ್ರಹಿಸಲು ಹೊರಟ ಸರಕಾರಕ್ಕೆ ಎಲ್ಲೆಲ್ಲೂ ಮಾವೋವಾದದ 'ಭೂತ' ಭ್ರಮೆ ಹುಟ್ಟಿಸಿದೆ, ಅಧಿಕಾರಸ್ಥರ ನಿದ್ದೆಗೆಡಿಸಿದೆ. ನಾರಾಯಣಗುರುಗಳ ತಾತ್ವಿಕ ಅನುಯಾಯಿಗಳಾಗಿದ್ದ ಡಾ॥ ಪಲ್ಪು ಅವರನ್ನು ಪೋಷಿಸಿದ ಮಹಾನಗರ ಬೆಂಗಳೂರು. ಸ್ವಾಮಿ ವಿವೇಕಾನಂದರನ್ನು ೧೮೯೨ರಲ್ಲಿ ಡಾ॥ ಪಲ್ಪು ಭೇಟಿಯಾದದ್ದು ಬೆಂಗಳೂರಿನಲ್ಲೇ. ನಾರಾಯಣ ಗುರುಗಳ ಪ್ರಬಲ ಸಮರ್ಥಕರಾದ ಮಲಯಾಳಿ ಭಾಷೆಯ ಮಹಾಕವಿ ಕುಮಾರನ್ ಆಶಾನ್ ಕಲಿತದ್ದು, ಬೆಂಗಳೂರಿನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲೇ. ಇಂತಹ ಉದಾರವಾದೀ ನೆಲೆಯ ಕರ್ನಾಟಕ ಇಂದು ಕೋಮುವಾದಕ್ಕೆ ಕೊರಳೊಡ್ಡಿದೆ; ಬಸವಪ್ರಜ್ಞೆ ಬರಡಾಗಿದೆ!

"ಕೆಡುಕನ್ನು ಪ್ರತಿಭಟಿಸಬೇಕು" ಎಂದ ವಿವೇಕಾನಂದರು, "ತನ್ನ ದೇಶದ ಪದ್ಧತಿಗನುಸಾರವಾಗಿ, ಅಮೇರಿಕಾ ದೇಶದವನು ಏನು ಮಾಡುತ್ತಾನೆಯೋ,



ಅದೇ ಸರ್ವೋತ್ತಮ ಎಂಬುವುದು, ತನ್ನಂತೆ ಆಚರಿಸದವರು ಬಲು ಕೆಟ್ಟವನೆಂಬುವುದು ಅಮೇರಿಕನ್ನರ ಮತ. ತನ್ನ ಪದ್ಧತಿಗಳು ಮಾತ್ರವೇ ಶ್ರೇಷ್ಠವೆಂಬುವುದು, ಪ್ರಪಂಚದಲ್ಲಿ ಅದೇ ಸರ್ವೋತ್ಕೃಷ್ಟವಾದುದು ಎಂಬುವುದು, ಅವುಗಳಿಗನುಸಾರವಾಗಿ ನಡೆಯದವನು ಯಾವನೋ, ಆತನೇ ಅತ್ಯಂತ ದುಷ್ಟನು ಎಂಬುವುದು ಹಿಂದೂಗಳ ಅಭಿಪ್ರಾಯ. ನಾವು ಸ್ವಾಭಾವಿಕವಾಗಿ ಮಾಡುವ ತಪ್ಪು ಇದು, ಆದರೆ ಇದು ಕೆಡುಕನ್ನುಂಟುಮಾಡುವ ತಪ್ಪು. ಅನ್ಯರ, ಅನ್ಯ ಕುಲದವರ ಪದ್ಧತಿಗಳನ್ನು ನಮ್ಮ ಮಾನದಂಡದಿಂದ ಅಳೆಯಲು ನಾವೆಂದೂ ಇಷ್ಟಪಡಕೂಡದು. ಲೋಕಕ್ಕೆ ನಾವೇ ಅಳತೆಗೋಲಲ್ಲ. ಇದೇ ನಾವು ಕಲಿತುಕೊಳ್ಳಬೇಕಾದ ಮಹಾಪಾಠ." ಆದರೆ ಅವರ ಮಾತಿನ ತಿರುಳು ಜಾಗತೀಕರಣದ ಮತ್ತೇರಿದ ಬಂಡವಾಳಶಾಹೀ ನಿಯಂತ್ರಿತ ಇಂದಿನ ಭಾರತ ಸರಕಾರಕ್ಕೆ ಅರ್ಥವಾಗದು. ಹಿಂದೊಮ್ಮೆ 'ಶಾಹಬಾನು' ಪ್ರಕರಣದಲ್ಲಿ ಮುಸ್ಲಿಂ ಪುಷ್ಟೀಕರಣಕ್ಕಾಗಿ ಸಂವಿಧಾನವನ್ನೇ ತಿದ್ದುಪಡಿ ಮಾಡಿದ ಸ್ತ್ರೀವಿರೋಧಿ ಉಪಕ್ರಮದ ಉಪಶಮನಕ್ಕಾಗಿ ಬಾಬ್ರಿ ಮಸೀದಿಯ ಬೀಗ ತೆಗೆದು 'ರಾಮಲಲ್ಲಾ'ನ ಪೂಜೆಗೆ ಅನುವುಮಾಡಿ ಹಿಂದೂ ತುಷ್ಟೀಕರಣಕ್ಕೆ ಜಿಗಿದ ಅಂದಿನ ರಾಜೀವ ಗಾಂಧೀ ಸರಕಾರದ ನಿಲುವು ರಾಮಜನ್ಮ ಭೂಮಿಯ ಕೋಮುವಾದಕ್ಕೆ ಜೀವದಾನ ನೀಡಿತು. ಆ ಬಳಿಕ ಬಂದ ವಿ. ಪಿ. ಸಿಂಗ್‌ರವರ ಸಮ್ಮಿಶ್ರ ಜನತಾದಳದ ಸರಕಾರದಲ್ಲಿ ಅಂಗಪಕ್ಷವಾಗಿದ್ದ ಬಿ.ಜೆ.ಪಿ., ಸರಕಾರವನ್ನೇ ಕೋಮುವಾದದ ಹಗ್ಗದಿಂದ ಬಿಗಿಯುವ ಸನ್ನಾಹ ನಡೆಸಿದಾಗ ಅಂದಿನ ಪ್ರಧಾನಿ ವಿ. ಪಿ. ಸಿಂಗ್ ಮಂಡಲ ವರದಿಗೆ ಮೊರೆ ಹೊಕ್ಕರು. ಆಗ 'ನಿಮ್ಮಲ್ಲಿ ಮಂಡಲವಿದ್ದರೆ, ನಮ್ಮಲ್ಲಿ ಕಮಂಡಲ ಇದೆ' ಎಂದು ರುದ್ರಾವತಾರ ತಾಳಿದ ಕೇಂದ್ರೀಯ ಮಂತ್ರಿ ಅಟಲ್ ಬಿಹಾರಿ ವಾಜಪೇಯಿ, ಅಡ್ವಾನಿಯವರನ್ನು ರಥಯಾತ್ರೆಗೆ ದಬ್ಬಿದರು. ರಾಮಜನ್ಮ ಭೂಮಿಯತ್ತ ಅಡ್ವಾನಿಯ ರಥ ಚಲಿಸಿದಾಗ, ಅದನ್ನು ಬಿಹಾರದಲ್ಲಿ ಮುಖ್ಯಮಂತ್ರಿ ಲಾಲೂ ಪ್ರಸಾದ್ ಯಾದವ್ ತಡೆದರು. ಆಗ ಅಂದಿನ ಸರಕಾರ ಪತನವಾಯಿತು. ಮುಂದೆ ಕಾಂಗ್ರೆಸ್ ಸಮರ್ಥಿತ ಚಂದ್ರಶೇಖರ್ ಅವರ ಸರಕಾರದ ಪತನ, ರಾಜೀವ ಗಾಂಧಿಯವರ ಹತ್ಯೆ ಅನುಕಂಪದ ಅಲೆಯೇರಿ, ಪಿ. ವಿ. ನರಸಿಂಹರಾಯರ ಕಾಂಗ್ರೆಸ್ ಸರಕಾರದ ರಚನೆಯಾಗಿ, ಅದು ಅಮೇರಿಕಾದ ಜಾಗತೀಕರಣದ ತಾಳಕ್ಕೆ 'ತೈ' 'ತೈ' ಎಂದು ಕುಣಿಯ ಹತ್ತಿತ್ತು. ಈ ಗೆಜ್ಜೆಯ ಹೆಜ್ಜೆಗೆ ಮೃದಂಗ ನುಡಿಸಿದ ಅಂದಿನ ಅರ್ಥಮಂತ್ರಿ ಇಂದಿನ ಪ್ರಧಾನಿ ಡಾ॥ ಮನಮೋಹನ ಸಿಂಗ್ ಈಗ ಕುಣಿಯುತ್ತಿದ್ದಾರೆ. ಆದರೆ ಮೃದಂಗ ನುಡಿಸುವವರು ಬದಲಾಗುತ್ತಲೇ ಇದ್ದಾರೆ. ಅಂದು ಪ್ರಧಾನಿ ನರಸಿಂಹರಾವ್ ಜಾಗತೀಕರಣದ ಸಂಚನ್ನು ಮರೆಸಲು, ಅಂದಿನ ವಿರೋಧ ಪಕ್ಷದ ನಾಯಕ ವಾಜಪೇಯಿ ಅವರೊಂದಿಗೆ ಗುಪ್ತ ಮೈತ್ರಿಯಲ್ಲಿ ೬ನೇ ಡಿಸೆಂಬರ್ ೧೯೯೨ರಲ್ಲಿ ಬಾಬ್ರಿ ಮಸೀದಿಯ ಧ್ವಂಸಕ್ಕೆ ಮೂಕಸಾಕ್ಷಿಯಾದರು. ಅವರ ಉತ್ತರಾಧಿಕಾರಿಯಾಗಿ ಬಂದ ಪ್ರಧಾನಿ ವಾಜಪೇಯಿಯಿಂದ ಇಂದಿನವರೆಗೂ ಎಲ್ಲಾ ಭಾರತ ಸರಕಾರಗಳೂ ಕೋಮುವಾದದ ಮರೆಯಲ್ಲಿ ಬಂಡವಾಳಶಾಹಿಗಳ ಜಾಗತೀಕರಣದ ಸಂಚು ಮುಂದುವರಿಸಿವೆ. ಬಡವರನ್ನು ಒಡೆಯರ ಗುಲಾಮರನ್ನಾಗಿಸುವ ತಂತ್ರ ಕುತಂತ್ರಗಳು ಯಾವ ಎಗ್ಗೂ ಇಲ್ಲದೆ, ಮುಂದುವರಿದಿವೆ. ವಿವೇಕಾನಂದರ ಹುಟ್ಟೂರು, ಪಶ್ಚಿಮ ಬಂಗಾಳದಲ್ಲೂ ಮಾರ್ಕ್ಸ್‌ವಾದೀ ಮುಖ್ಯಮಂತ್ರಿ ಬುದ್ಧದೇವ ಭಟ್ಟಾಚಾರ್ಯ ಸರಕಾರ, ತನ್ನ ಬಂಡವಾಳಶಾಹೀ ಪರ ವಿರೋಧಿ ದ್ವಂದ್ವ ಚಿಂತನೆಗಳಿಂದ ಬಡಜನರ ಬದುಕಿಗೆ ಹೊರೆಯಾಗಿದೆ; ಇಲ್ಲಾ ಹೊರೆಯಾಗುವಂತೆ ಬಂಡವಾಳಶಾಹಿಗಳು ಜನಮಾನಸದಲ್ಲಿ ಗೊಂದಲ ನಿರ್ಮಿಸುತ್ತ ಕೋಮುವಾದದ ಉರಿಗೆ ಗಾಳಿ ಬೀಸುತ್ತಿದ್ದಾರೆ. ಬಡವರ ಬದುಕಿನಲ್ಲಿ ಬಿರುಕು ಸೃಷ್ಟಿಸುತ್ತಿದ್ದಾರೆ. ಇಂತಹ ಅತಂತ್ರದಲ್ಲಿ ದಿಗಿಲುಗೊಂಡ ಬಡವರು ಒಮ್ಮೆ ಮಾವೋವಾದಿಗಳತ್ತಲೂ ಇನ್ನೊಮ್ಮೆ

ಕೋಮುವಾದಿಗಳತ್ತಲೂ, ಆಸೆಯ ಕಣ್ಣುಗಳಿಂದ ನೋಡುತ್ತಿದ್ದಾರೆ. ಆಗ ವಿವೇಕಾನಂದರು ಹೇಳಿದ ಮಾತು - ''ಮನುಷ್ಯ ಸ್ವಭಾವದಲ್ಲಿ ಒಂದು ಅಪಾಯವಿದೆ. ಅದೇನೆಂದರೆ ಮಾನವನು ತನ್ನನ್ನು ತಾನು ಪರೀಕ್ಷಿಸಿಕೊಳ್ಳದಿರುವುದು.'' ಈ ಮಾತು ಅಲ್ಲಿನ ಎಡರಂಗದ ಸರಕಾರಕ್ಕೆ ಇನ್ನಾದರೂ ಅರ್ಥವಾಗಲಿ. ಈ ಮಣ್ಣಿನಲ್ಲಿ ಶ್ರಮಿಕರ ಸಮಾನತೆಯ ಧ್ವನಿ, ಗೌರವದ ಬದುಕಿಗೂ, ಕೋಮುವಾದದ ಬಂಡವಾಳಶಾಹೀ ಅರ್ಬುದ ರೋಗ ತಗಲದಿರಲಿ. ಒಂದೊಮ್ಮೆ ಹಾಗಾದಲ್ಲಿ ಅದನ್ನು ಪ್ರತಿಭಟಿಸುವ ಶಕ್ತಿ ಜನಪದರಲ್ಲಿ ಬಿತ್ತದಿರಲಿ.

ವಿದೇಶದಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನದಲ್ಲಿ ವಿವೇಕಾನಂದರು ''ಈ ಜಗತ್ತಿನಲ್ಲಿ ವಿಶ್ವಧರ್ಮ ಎನಿಸಿಕೊಳ್ಳುವಂಥದ್ದು ಏನಾದರೂ ಇರಬೇಕಾದರೆ, ಅದು ದೇಶಕಾಲಗಳ ಮಿತಿಯನ್ನು ಮೀರಬೇಕು. ಅದು ತಾನೂ ಅನಂತವಾಗಬೇಕಲ್ಲದೆ, ಅನಂತವಾದ ಭಗವಂತನನ್ನು ಸೇರಬೇಕು. ಆ ಧರ್ಮ ಭಾಸ್ಕರನ ಬೆಳಕು, ಕೃಷ್ಣನ ಅನುಯಾಯಿಗಳ ಮೇಲೆ, ಕ್ರೈಸ್ತರ ಅನುಯಾಯಿಗಳ ಮೇಲೆ, ಪಾಪಿಗಳ ಮೇಲೆ, ಪುಣ್ಯವಂತರ ಮೇಲೆ, – ಎಲ್ಲರ ಮೇಲೂ, ಒಂದೇ ಸಮಾನವಾಗಿ ಬೀಳಬೇಕು. ಅದು ವೈದಿಕವಾಗಲೀ, ಮಹಮ್ಮದೀಯವಾಗಲಿ, ಬೌದ್ಧವಾಗಲೀ ಅಥವಾ ಕ್ರೈಸ್ತವಾಗಲೀ ಆಗಿರದೆ, ಇವೆಲ್ಲದರ ಸಮಗ್ರೀಕರಣವಾಗಬೇಕು. ಸುಧಾರಣೆ ಅಥವಾ ಅಭಿವೃದ್ಧಿಗೆ ಅಪಾರ ಅವಕಾಶವನ್ನು ಹೊಂದಿರಬೇಕು. ಅದು ಪರಿಶುದ್ಧ ಕಾಡುಜನರಿಂದ ಹಿಡಿದು ಹೃದಯ ಬುದ್ಧಿಗಳ ತುತ್ತತುದಿಗೇರಿ ಸಾಮಾನ್ಯ


ಶಾರದಾದೇವಿ

ಮಾನವತೆಯ ಮೇರೆಯನ್ನೇ ಮೀರಿರುವ ಪ
ಮಾನವರ ಸರ್ವರಿಗೂ ಆಶ್ರಯವನ್ನೀಯುವಂ
ಆಗಿರಬೇಕು. ಅದು ತನ್ನ ವ್ಯವಸ್ಥೆಯಲ್ಲಿ ಹಿಂಸೆಗಾಗ
ಅಸಹಿಷ್ಣುತೆಗಾಗಲೀ ಎಡೆಗೊಡದೆ ಪ್ರತಿ
ನರನಾರಿಯರ ದಿವ್ಯತೆಯನ್ನು ಗುರುತಿಸುವ ಧ
ವಾಗಿರಬೇಕು. ಮಾನವತೆಯು ತನ್ನ ನೈಜ
ಸ್ವರೂಪವನ್ನು ಕಂಡುಕೊಳ್ಳುವಂತೆ ಮಾಡುವಲ್ಲಿ
ಧರ್ಮದ ವಿಶಾಲ ಪರಿಧಿಯು ಕೇಂದ್ರ
ವಾಗಿರಬೇಕು. ಅಂತಹ ಧರ್ಮವೊಂದನ್ನು ಕ
ಆಗ ಜಗತ್ತಿನ ರಾಷ್ಟ್ರಗಳೆಲ್ಲವೂ ಅದನ್ನು ಅನ
ಸುತ್ತವೆ.'' ಇಲ್ಲಿ ವಿವೇಕಾನಂದರ ವಿಶ್ವಶಾಂ
ಚಡಪಡಿಕೆಯು ಧ್ವನಿಸಿದೆ. ಆದರೆ ಅದನ್ನು ಸಾಧಿ
ಕಸುವು, ಭಾವವಾದದ ನೆಲೆಯಲ್ಲಿ ಎಂತು ಸಾಧ್ಯ ?

ಅದಕ್ಕಾಗಿ ವಿಚಾರವಾದದ ಬೇರುಗಳು
ಗೊಳ್ಳಬೇಕು. ಯಾಕೆ ಬಂಗಾಳದಲ್ಲಿ ಶ್ರಮಿ
ಅದರಲ್ಲೂ ಕೃಷಿ ಕೂಲಿಗಳು ಮತಾಂತರಗೊಂ
ಹೆಚ್ಚಾಗಿ ಇಸ್ಲಾಂ-ಇಸಾಯೀ ಧರ್ಮಗ
ಆಶ್ರಯಿಸಿದರು ? ಯಾಕೆ ಇಂದಿಗೂ ಬಂಗಾಳದ ಮೇಲ್ವರ್ಗದ ಭದ್ರ ಲೋಕ
ಬಡವರು ಗುಮಾನಿಯ ಕಣ್ಣುಗಳಿಂದಲೇ ನೋಡುತ್ತಿದ್ದಾರೆ ? ಅದೂ ಸುಮ
೩ ದಶಕಗಳ ಮಾರ್ಕ್ಸ್‌ವಾದೀ ಸರಕಾರವನ್ನು ಉಳಿಸಿಕೊಂಡಿರುವ ಪ
ಬಂಗಾಳದಲ್ಲಿ! ಅಂತೆಯೇ ವಿವೇಕಾನಂದರು ಗುಡುಗಿದ ಅಮೆರಿಕಾದ
ಬಂಡವಾಳಶಾಹಿಗಳ ನಿಯಂತ್ರಣದಲ್ಲಿ ಜಗತ್ತಿನ ಬಡವರನ್ನು ಸದೆಬಡಿಯ
ಸಿಡಿಮದ್ದುಗಳಾಗಿ ಹರಡುತ್ತಿವೆ. ಅವರ ಜಾಗತೀಕರಣ ಯಾರಿಗಾಗಿ ?
ಅಮೆರಿಕಾದ ಮೂಲ ನಿವಾಸಿಗಳಿಗಂತೂ ಖಂಡಿತಾ ಅಲ್ಲ. ಅಲ್ಲಿನ ಮಾನವಿ
ತುಡಿತದ ಮನಸ್ಸಿನವರು ತಮ್ಮ ಎದೆ ಮುಟ್ಟಿ ವಿವೇಚಿಸಬೇಕು. ಅಮೆರಿ
ರೆಡ್ ಇಂಡಿಯನರು ಏನಾದರು ? ಅಲ್ಲಿ ಅಪವಾದಕ್ಕಾಗಿ ಬದುಕುಳಿದ ಅ
ಈಗ ಹೇಗಿದ್ದಾರೆ ?

ನಾರಾಯಣಗುರುಗಳ ನೇತೃತ್ವದಲ್ಲಿ ಅವರದ್ದೇ ಆಲ್ವಾಯ್ ಅದ್ವೈತಾಶ್ರಮ
ಸರ್ವಧರ್ಮ ಸಮ್ಮೇಳನ ೪ ಮತ್ತು ೫ ಮಾರ್ಚ್ ೧೯೨೪ರಂದು ನಡೆಯಿ
ಇದು ವಿವೇಕಾನಂದರು ವಿದೇಶದಲ್ಲಿ ಭಾಗವಹಿಸಿದ ಸರ್ವಧರ್ಮ ಸಮ್ಮೇ
ನಡೆದ ೩೧ ವರ್ಷಗಳ ಅನಂತರ ಭಾರತದ ಮಣ್ಣಿನಲ್ಲಿ ನಡೆದ ಮೊ
ವಿಶ್ವಧರ್ಮ ಸಮ್ಮೇಳನ. ನಾರಾಯಣಗುರುಗಳು ಇದರ ಘೋಷವಾಕ್ಯದಲ್ಲಿ,
ಸರ್ವಧರ್ಮ ಸಮ್ಮೇಳನ ವಾದಿಸಲಿಕ್ಕಲ್ಲ... ವಾದಿಸಿ ಜಯಿಸಲಿಕ್ಕಲ್ಲ, ತಿಳಿ
ಮತ್ತು ತಿಳಿಸಲು'' ಎಂದು ಸಾರಿದ್ದರು. ಆ ಮಾತಿನ ತಾತ್ವಿಕತೆ ಅವರ ಜ
ಧ್ವನಿಯನ್ನು ಬಿಂಬಿಸುತ್ತದೆ. ಇದರೊಡನೆ ಈ ಸ್ವದೇಶೀ ಸಮ್ಮೇಳನದ ಹಿನ್ನೆಲೆ
ತಿಳಿಯುವುದು ಅಗತ್ಯ. ನಾರಾಯಣಗುರುಗಳ ಶೈಕ್ಷಣಿಕ ಅಭಿಯಾನದಲ್ಲಿ ನಾರಾ
ಗುರುಗಳು ಕೇರಳದಲ್ಲಿ ೧೮, ತಮಿಳುನಾಡಿನಲ್ಲಿ ೩ ಮತ್ತು ಶ್ರೀಲಂಕೆಯ
ಶೈಕ್ಷಣಿಕ ಸಾಮಾಜಿಕ ಸೇವಾಸಂಸ್ಥೆಗಳನ್ನು ಕಟ್ಟಿದರು. ಆದರೆ ಹಿಂದೊಮ್ಮೆ ಕೇರಳ
ಸಂದರ್ಶಿಸಿದ ವಿವೇಕಾನಂದರು ಅದನ್ನು – ''ಜಾತೀಯತೆಯ ಹುಚ್ಚರ ಆ
ಎಂದು ಕರೆದದ್ದು ಮಾತ್ರವಲ್ಲ, ೧೯ನೇ ಶತಮಾನದ ಕೊನೆಯ ದಶಕದಲ್ಲೂ
ಜಾತೀಯತೆಯ ವಾಗ್ವಾದ ನಡೆಯುತ್ತಲೇ ಇದ್ದದ್ದು, ಚಿಂತಿಸಬೇಕಾದಂತಹ ವಿ
ಇಂತಹ ಕಾಲದಲ್ಲಿ ಶೋಷಿತ ಹಿಂದೂಗಳು, ಅದರಲ್ಲೂ ಅಲ್ಲಿನ ಬಹುಸಂಖ್ಯಾತ
ಈಳವರು, ಸಾಮೂಹಿಕ ಮತಾಂತರಕ್ಕೆ ಚರ್ಚೆ ನಡೆಸಿದ್ದರು. ಒಂದು ಗು
ಹಿಂದೂಗಳಾಗಿಯೇ ಉಳಿದು ಸಾಮಾಜಿಕ ನ್ಯಾಯಕ್ಕೆ ಹೋರಾಡ
ಎಂದರೆ, ಇನ್ನೊಂದು – ಕ್ರೈಸ್ತಮತ ಇಲ್ಲವೇ ಇಸ್ಲಾಂ ಧರ್ಮಕ್ಕೆ ಮತಾಂತರಗೊ
ಕಳಕೊಂಡ ಸಮಾನತೆಯನ್ನು ಪಡೆಯಬೇಕೆಂದರು. ಮಗದೊಂದು ಗು
ಭಾರತೀಯ ಬೇರುಗಳನ್ನೊಳಗೊಂಡ ಮಾನವೀಯ ಹಿನ್ನೆಲೆಯ ಬೌದ್ಧಧ
ಮತಾಂತರಗೊಳ್ಳಬೇಕೆಂದು ತರ್ಕಿಸುತ್ತಿತ್ತು. ಇದಲ್ಲದೆ, ಇದೇ ಸಮ
ಕೋಟಿ ಕೋಟಿ ಮೌಲ್ಯದ ಆಸ್ತಿಯನ್ನು ಹೊಂದಿದ್ದ ನಾರಾಯಣಗು
ಚಳುವಳಿಯ ಭಾಗವಾಗಿದ್ದ, ಎಸ್‌ಎನ್‌ಡಿಪಿ ಸಂಸ್ಥೆಯಲ್ಲೂ ಅಧಿಕಾ

ಲ್ಲಯುದ್ಧ ನಡೆದಿತ್ತು. ಇಂತಹ ಸಂದರ್ಭದಲ್ಲಿ ನಾರಾಯಣಗುರುಗಳು "ಧರ್ಮ ಯಾವುದಾದರೇನು ? ಮನುಷ್ಯ ಒಳ್ಳೆಯವನಾಗಿದ್ದರೆ ಸಾಕಲ್ಲವೇ ?" ಎಂದು ಳುತ್ತಾ, ಸಾಮೂಹಿಕ ಮತಾಂತರಕ್ಕೆ ನಿಲುಗಡೆ ನೀಡಿದರು. ಮಾತ್ರವಲ್ಲ, ವ್ಯಕ್ತಿಯ ಉಡುಪು, ಆಚಾರ, ಜಾತಿ, ಧರ್ಮ ಯಾವುದೇ ಇರಲಿ, ಅವರೆಲ್ಲಾ ಾನವರು. ಆದುದರಿಂದ ಸಹಭೋಜನ ಮತ್ತು ಅಂತರ್‌ಜಾತೀಯ ವಿವಾಹಗಳಿಗೆ ಡ್ಡಬರಬಾರದು" ಎಂದರು. ಹೀಗಿದ್ದೂ, ಅವರ ಅನುಯಾಯಿಗಳಲ್ಲಿ ಕೆಲವು ಂಪು ಸಾಮಾಜಿಕ ಬಂಧನದ ಬಿಡುಗಡೆಗಾಗಿ ಮತಾಂತರದ ದಾರಿ ಹಿಡಿಯಿತು.

ಇಂದು ನಾರಾಯಣಗುರು ಮತ್ತು ವಿವೇಕಾನಂದರ ಪ್ರತಿಮೆಗಳು ತಿವಾದಿ ಮತ್ತು ಕೋಮುವಾದಿಗಳ ಅಸ್ತ್ರವಾಗುತ್ತಿವೆ. ಹಿಂದೊಮ್ಮೆ ಕಾಲಡಿಯ ಕರರು ಭಾವವಾದದ ಬಾವುಟ ಹಿಡಿದು, ಅದ್ವೈತ ಸಿದ್ಧಾಂತದ ಮುಖವಾಡ ಲ್ಲಿ ಎಬ್ಬಿಸಿದ ಪ್ರತಿಗಾಮೀ ಚಿಂತನೆಗಳ ಧೂಳುಗಳನ್ನು ಶುಚಿಗೊಳಿಸಿದ ಯೋಗಶೀಲರು ನಾರಾಯಣಗುರು ಮತ್ತು ವಿವೇಕಾನಂದರು ಸ್ಸುವುದರಲ್ಲಿ ಅನುಮಾನವಿಲ್ಲ. ಆದರೆ ಭಾವವಾದದ ಕೇಂದ್ರದಿಂದ ನ್ಯಾಸಗೊಂಡ ಈ ಉಭಯ ಅದ್ವೈತಿಗಳ ಸುಧಾರಣಾವಾದಿ ಯೋಗಶೀಲತೆ ಅವರ ಜೀವಿತ ಕಾಲದಲ್ಲೇ ಮಡಿವಂತಿಕೆಯ ತಿ ರಾಜಕೀಯಕ್ಕೆ ಬಲಿಯಾದದ್ದು ಒಂದು ವಿಪರ್ಯಾಸ, ದರೂ ಸರಿಯಾಗಲಾರದು. ಅದಕ್ಕಾಗಿ ಇದರ ಇನ್ನೊಂದು ಗ್ಗುಲನ್ನು ವಿವೇಚಿಸಬೇಕಾಗಿದೆ. ಅದ್ವೈತಿಗಳು ನಂಬಿದ ತ್ಮವೇ ಪರಮಾತ್ಮ' ಎನ್ನುವ ದೈವಕೇಂದ್ರಿತ ಚಿಂತನೆಗಳು ವರ ಬದುಕಿನಲ್ಲೇ ದೈವವಾದಕ್ಕೆ ಮಂಡಿಯೂರಿ ತಿಗಾಮೀ ನಿಲುವಿನತ್ತ ಸಾಗಿದ್ದನ್ನು ಅಧ್ಯಯನಶೀಲರು ಣಬಹುದಾಗಿದೆ. ಇದಕ್ಕೊಂದು ಉತ್ಕೃಷ್ಟ ಉದಾಹರಣೆ ದೆ. ವಿವೇಕಾನಂದರು ಕಲ್ಕತ್ತೆಯಲ್ಲಿ ಪ್ಲೇಗಿನ ಪರಿಹಾರಕ್ಕಾಗಿ ಮಕೃಷ್ಣ ಮಿಶನಿನ ಮುಖೇನ ತಮ್ಮ ವೈದ್ಯಕೀಯ ಸೇವೆಯನ್ನು ೦೧ರಲ್ಲಿ ನಡೆಸಿದರು. ಅಂದಿನ ದಾರುಣ ಸನ್ನಿವೇಶವನ್ನು ಮಿ ವೀರೇಶಾನಂದರು ಹೀಗೆ ಚಿತ್ರಿಸಿದ್ದಾರೆ: ಮಿ ವಿವೇಕಾನಂದರು ಪ್ಲೇಗು ಪರಿಹಾರಕ್ಕೆ ಕಾದ ಹಣವನ್ನು ಬೇಲೂರು ಮಠದ ಗವನ್ನು ಮಾರಿಯಾದರೂ, ಹೊಂದಿಸ ಕು ಎನ್ನುವ ಕಠೋರ ನಿರ್ಧಾರಕ್ಕೆ ದಿದ್ದರು. ಆದರೆ ಆ ಪ್ರಸ್ತಾಪವನ್ನು ಮಾತೆಯವರು (ಶ್ರೀ ಶಾರದಾಮಣಿ ವಿಯವರು) ನಿರಾಕರಿಸಿದ್ದುದರಿಂದ ರಾಟವಾಗಲಿಲ್ಲ. ಅವರು ಸ್ವಾಮೀಜಿಯವರಿಗೆ ಳಿದರು – "ಇದು ಏನು ಮಗು ? ಬೇಲೂರು ಮಠವನ್ನೇ ಮಾರಾಟ ಡಬೇಕೆಂದಿರುವಿಯೇನು ?... ಈ ಜಾಗವನ್ನು ವಿಕ್ರಯಿಸಲು ನಿನಗೆ ಅಧಿಕಾರ ನೇ ಎಲ್ಲಿದೆ ?" ಎಂಬ ಮಾತುಗಳು ಭಾವವಾದದ ಪೀಠಸ್ಥ ಪರಂಪರೆಯ ಡಿಮುತ್ತುಗಳು ಮಾತ್ರ. ಇಂತಹ ಹತ್ತು ಹಲವು ತಾತ್ವಿಕ ತಿರುಗುಬಾಣಗಳಿಂದ ತರಿಸಿಕೊಳ್ಳಲಾಗದ ವಿವೇಕಾನಂದರು ಒಂದು ದಿನ ೪ ಜುಲೈ ೧೯೦೨ರಂದು ಲೂರು ಮಠದ ಹಾಸುಗಲ್ಲಿನ ಮೇಲೆ ಭಾರವಾದ ಹೆಜ್ಜೆ ಹಾಕುತ್ತಾರೆ. ಅದರೊಡನೆ ಂಗುಟ್ಟುತ್ತಾರೆ - 'ಇನ್ನೊಬ್ಬ ವಿವೇಕಾನಂದ ಇದ್ದಿದ್ದರೆ ಅವನಿಗೆ ತಿಳಿಯುತ್ತಿತ್ತು – ಈ ವೇಕಾನಂದ ಏನು ?' ಎಂದು. ಅವರು ಅದೇ ದಿನ ಸಂಜೆಯ ಆರತಿಯ ಟಾನಾದದಿಂದ ಬಿಡುಗಡೆ ಪಡೆಯಲು ಕೋಣೆಯ ಕಿಟಕಿಗಳನ್ನು ಮುಚ್ಚುತ್ತಾರೆ. ೇ ಕಟ್ಟಿದ ಬೇಲೂರು ಮಠ ಸಂಕುಲದ ಸ್ಥಾವರಕ್ಕೆ ಮುಖ ತಿರುವುತ್ತಾ ನೆಯುಸಿರೆಳೆಯುತ್ತಾರೆ.

ಸ್ವಾಮಿ ವಿವೇಕಾನಂದ

ಅದೇ ರೀತಿ, ನಾರಾಯಣಗುರುಗಳು ತನ್ನ ಕೊನೆಯ ದಿನಗಳಲ್ಲಿ ಅತಂತ್ರ ದರು. ಅವರ ತಾತ್ವಿಕತೆಯಲ್ಲಿ ಬೆಳೆದ ಎಸ್‌ಎನ್‌ಡಿಪಿ ಮತ್ತು ಶ್ರೀ ನಾರಾಯಣ ರ್ಮ ಸಂಘಗಳು ಅಧಿಕಾರಕ್ಕಾಗಿ ಕಾಲು ಕೆರೆದು, ಜಗಳಕ್ಕೆ ಮುಂದಾದವು. ರಾಯಣಗುರುಗಳನ್ನು ನಿರ್ಲಕ್ಷಿಸಿ, ಅವರ ವಾದ ವಿವಾದ ಕೋರ್ಟಿನ ಕಟ್ಟೆ ಹತ್ತಿತು. ರಿಂದ ಬೇಸತ್ತ ಗುರುಗಳು ೪ ಸೆಪ್ಟೆಂಬರ್ ೧೯೨೬ರಂದು ತನ್ನ ೭೦ನೇ ವಯಸ್ಸಿನಲ್ಲಿ ತನ್ನ ಅನುಯಾಯಿಗಳಿಂದಲೇ ದೂರ ಸರಿದು ಶ್ರೀಲಂಕಾದಲ್ಲಿ ನಿರ್ಲಿಪ್ತ ಬದುಕಿಗೆ ಶರಣಾದರು. ಮುಂದೆ ಅನೇಕರ ಒತ್ತಡಕ್ಕೆ ಮಣಿದು ಮರಳಿ ಬಂದರಾದರೂ, ಅವರು ಯಾಂತ್ರಿಕವಾಗಿ ೧೧ ಜನವರಿ ೧೯೨೮ರಂದು 'ಶ್ರೀ ನಾರಾಯಣ ಧರ್ಮ ಸಂಘ'ವನ್ನು ರಿಜಿಸ್ಟರ್ ಮಾಡಿದ್ದಲ್ಲದೆ, ಸ್ವಾಮಿ ಬೋಧಾನಂದರನ್ನು ಸಂಸ್ಥೆಯ ಅಧ್ಯಕ್ಷರನ್ನಾಗಿಯೂ ಮತ್ತು ತನ್ನ ಉತ್ತರಾಧಿಕಾರಿಯನ್ನಾಗಿಯೂ ನಿಯುಕ್ತಿಗೊಳಿಸಿದರು. ಆದರೆ ನಾರಾಯಣಗುರುಗಳು ಬೆಳೆಸಿದ ಸಂಸ್ಥೆಯ ಕೋಟಿ ಕೋಟಿ ಮೌಲ್ಯದ ಸ್ಥಿರಚರ ಸೊತ್ತುಗಳ ಅಧಿಕಾರಕ್ಕಾಗಿ, ಕೋರ್ಟಿನಲ್ಲಿ ಕಿತ್ತಾಟ ಅವರ ಅನಂತರವೂ ೧೯೫೪ರವರೆಗೆ ಮುಂದುವರಿದು ಮುಂದೆ ರಾಜಕೀಯ ಮೈತ್ರಿಯಲ್ಲಿ ರಾಜಿಯಾದರೂ ಆಗಲೇ ಅವರ ತತ್ವಾದರ್ಶಗಳಿಗೆ ಗೋರಿ ಕಟ್ಟಲಾಗಿತ್ತು. ಆದರೆ ಅದನ್ನು ನೋಡಲು ಮಾತ್ರ ಗುರುಗಳಿರಲಿಲ್ಲ. ಅವರ ಗುರಿಯೂ ದಾರಿ ತಪ್ಪಿತ್ತು. ನಾರಾಯಣಗುರುಗಳು ೨೦ ಸೆಪ್ಟೆಂಬರ್ ೧೯೨೮ರಂದು ವರ್ಕಳದ ಶಿವಗಿರಿಯಲ್ಲಿ ಕೊನೆಯುಸಿರೆಳೆದರು. ಅಂದಿನ ರಾತ್ರಿಯೇ ಮಠವನ್ನು 'ಉಳಿಸುವ' ಮತ್ತು ಮಠವನ್ನು 'ಉರಿಸುವ' ಗುಂಪುಗಾರಿಕೆ ಅಧಿಕಾರಸ್ಥ ಮನಸ್ಸುಗಳು, ಅಸಭ್ಯ, ಅನಾಗರಿಕ ಜಾತಿ ರಾಜಕೀಯ ನಡೆಸಿದರು. ಮಕ್ಕಳಿಗಾಗಿ, ಮಕ್ಕಳಿಂದಲೇ, ಅರ್ಚಿಸಲ್ಪಡುವ ಶಿವಗಿರಿಯ ಶಾರದಾ ಮಂದಿರ ಮಾತ್ರ, ನಾರಾಯಣಗುರುಗಳ ತಾತ್ವಿಕತೆಯನ್ನು ನೆನಪಿಸುತ್ತಿದ್ದರೂ, ಇದನ್ನರಿಯದ ಮೂಢಮತಿಗಳು ಅಧಿಕಾರಕ್ಕಾಗಿ ಕಿತ್ತಾಡಹತ್ತಿದರು. ಇಂತಹ ಒತ್ತಡಗಳನ್ನು ಸಹಿಸದ ನಾರಾಯಣಗುರುಗಳ ಸಮರ್ಥ ಉತ್ತರಾಧಿಕಾರಿ ಪ್ರಗತಿಪರ ಚಿಂತಕ ಸ್ವಾಮಿ ಬೋಧಾನಂದರು ಗುರುಗಳು ಸಮಾಧಿಯಾದ ನಾಲ್ಕನೆಯ ದಿನ ಅಂದರೆ ೨೪ ಸೆಪ್ಟೆಂಬರ್ ೧೯೨೮ರಂದು "ಶಾಲೆಯ ಮಕ್ಕಳಿಗೆ ಅನ್ನ ಕೊಡಿ" ಎಂದು ಹೇಳುತ್ತಾ ಕೊನೆಯುಸಿರೆಳೆದ ದಾಖಲೆ ಇಂದಿಗೂ ಸಂಶೋಧಕರಿಗೆ ಇಲ್ಲಿಯ ನಿಗೂಢತೆಗಳನ್ನು ಕೆದಕುವ ಒಂದು ಸವಾಲೇ ಆಗಿದೆ. ಇದರೊಡನೆ ಬೋಧಾನಂದರು ತಾವೇ ಸಿದ್ಧಪಡಿಸಿ ಬೋಧಿಸುತ್ತಿದ್ದ ಸನ್ಯಾಸಿಗಳ ಪ್ರತಿಜ್ಞಾವಿಧಿ, "ನನ್ನ ಜಾತಿ ಯಾರ ಜಾತಿಗಿಂತಲೂ ಕಡಿಮೆಯಾದದ್ದು ಅಲ್ಲ, ಹಾಗೇನೇ ಅದು ಇನ್ನಿತರ ಯಾವ ಜಾತಿಯಿಂದಲೂ ಹೆಚ್ಚಿನದ್ದೂ ಅಲ್ಲ. ನಾನು ಜಾತಿಯ ಹೆಸರಿನಲ್ಲಿ ಯಾರಿಗೂ ದಾರಿಯನ್ನು ಬಿಟ್ಟುಕೊಡುವುದಿಲ್ಲ. ನಾನು ಜಾತಿಯ ಹೆಸರಿನಲ್ಲಿ ಅಸ್ಪೃಶ್ಯತೆಯ ಆಚರಣೆಯನ್ನು ಸಹಿಸುವುದಿಲ್ಲ. ಇದನ್ನು ನನ್ನ ಜೀವ ಕೊಟ್ಟಾದರೂ ವಿರೋಧಿಸುತ್ತೇನೆ. ಇದನ್ನು ನಾನು ತ್ರಿಕರಣಪೂರ್ವಕವಾಗಿ ಪಾಲಿಸುತ್ತೇನೆ ಎಂದು ಪ್ರತಿಜ್ಞಾಬದ್ಧನಾಗುತ್ತೇನೆ" ಎಂಬ ಪ್ರತಿಜ್ಞಾಬದ್ಧತೆಗೆ ಬದ್ಧರಾಗಿಯೆ, ಬೋಧಾನಂದರು ಬದುಕಿಗೆ ವಿದಾಯ ಹೇಳಿದರು. ಅದಾಗಲೇ ಈಳವರಲ್ಲದವರು ನಾರಾಯಣಗುರುಗಳ ಸ್ಥಾವರದಿಂದ ದೂರಸರಿದರು.

ಒಂದೆಡೆ ವಿವೇಕಾನಂದರು ಸಂಪ್ರದಾಯವಾದಿಗಳಿಗೆ ಶೂದ್ರ ಸನ್ಯಾಸಿಯಾದರೆ ನಾರಾಯಣಗುರುಗಳು ಕೇವಲ ಈಳವರ ಗುರುವಾಗಿ ಸೀಮಿತವಾದರು. ಇವರಿಬ್ಬರನ್ನು ಕುಬ್ಜರನ್ನಾಗಿಸಿದವರಾರು ? ಇದಕ್ಕೆ ಕಾರಣವೇನು ? ಉತ್ತರಕ್ಕಾಗಿ ಭಾವವಾದ ಮತ್ತು ವಿಚಾರವಾದಗಳ ಕಪ್ಪು ಬಿಳುಪಿನ ಸಂತುಲಿತ ವಿವೇಚನೆ ಇನ್ನಾದರೂ ಆಗಬೇಕಾಗಿದೆ. ಇದರಿಂದಲೇ ಜಾಗತೀಕರಣ ಮತ್ತು ಕೋಮುವಾದದ ಉಭಯ ಪ್ರತಿಗಾಮೀ ತಾತ್ವಿಕತೆಗಳನ್ನು ಹಿಮ್ಮೆಟ್ಟಿಸಬಹುದು. ಅಧಿಕಾರಕ್ಕಾಗಿ ಭಾವವಾದ ಬೇಕಾದರೆ, ಅನ್ನಕ್ಕಾಗಿ ಭಯೋತ್ಪಾದನೆ ಅನಿವಾರ್ಯವಾಗಬಹುದು.

ರವಿ ರಾ. ಅಂಚನ್
[illegible], ಟ್ರಸ್ ಟವರ್, ಮನೀಷ್ ಪಾರ್ಕ್, ಪಂಪ್ ಹೌಸ್
ಅಂಧೇರಿ ಪೂರ್ವ, ಮುಂಬಯಿ - ೪೦೦ ೦೯೩.

# ನಿಲುವುಗನ್ನಡಿಯ ಮುಂದೆ

## - ಶಿವಮೊಗ್ಗೆಯಿಂದ ಮೈಸೂರಿಗೆ




ಕೆಲವು ಸಾಹಿತಿಗಳ ಮತ್ತು ಕಲಾವಿದರ ಜೀವನದ ಪರಿಚಯ ಅಗತ್ಯಕ್ಕಿಂತಲೂ ಹೆಚ್ಚಾಗಿಯೇ ಇರುವುದು ವಿರಳವಲ್ಲ. ಸಿನಿಮಾ ನಟ-ನಟಿಯರ ಮತ್ತು ಕ್ರಿಕೆಟ್ ದಾಂಡಿಗರ ಬಗೆಗಿನ ಮಾಹಿತಿಯಂತೂ ಯಾವ ಮೂಲಿಕೆಯೂ ಲಭಿಸದ ಬೆಟ್ಟದಷ್ಟು ಗಾತ್ರವಾಗಿದೆ. ಆದರೆ ಇನ್ನೆಷ್ಟೋ ಸಾಹಿತಿಗಳನ್ನು ಕುರಿತಂತೆ ನಮಗೆ ಏನಾದರೂ ತಿಳಿದುಬರುವುದು ಅಪರೂಪ. "ಇದರಲ್ಲಿ ಹೇಳಿಕೊಳ್ಳುವಂಥದೇನಿದೆ'' ಎಂಬ ನಿಲುವು ಅವರದು. ಶೇಕ್ಸ್‌ಪಿಯರ್‌ನ ಲಾಂಡ್ರಿ ಬಿಲ್‌ಗಳೇನಾದರೂ ನಮಗಿಂದು ದೊರಕಿಬಿಟ್ಟರೆ ಅವನ 'ಹ್ಯಾಮ್ಲೆಟ್' ನಾಟಕ ಅರ್ಥಮಾಡಿಕೊಳ್ಳುವುದಕ್ಕೆ ಅದರಿಂದ ಸಹಾಯವೇನೂ ಆಗಲಾರದೆಂದು ಟಿ. ಎಸ್. ಎಲಿಯಟ್ ಬಹಳ ಹಿಂದೆಯೇ ಎಚ್ಚರಿಸಿದ್ದ. ಸಾಹಿತಿಯ ಯಾವುದೋ ಕೃತಿಯ ಹೂರಣವು ಅವರ ಜೀವನದ ಪರಿಚಯದಿಂದಾಗಿ ಹೆಚ್ಚು ಸಿಹಿಯಾಗಲಿ ಕಹಿಯಾಗಲಿ ಆಗಲಾರದೇನೋ ನಿಜ, ಆದರೆ ಸಾಮಾನ್ಯವಾಗಿ ಆ ಪರಿಚಯವು ಕೇವಲ ವೈಯಕ್ತಿಕವಾಗಿರದೆ ಒಂದು ಇಡೀ ಸನ್ನಿವೇಶದ ನಿರೂಪಣೆಯಾಗಿರುತ್ತದೆ. ಆ ದೃಷ್ಟಿಯಿಂದ 'ಹೊಸತು' ಡಾ|| ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟ ಅವರನ್ನು (ಕೆಲವರು ಅವರನ್ನು 'ನೈಶೀಲ ಭಟ್ಟ' ಎನ್ನುತ್ತಾರೆ, ಬಹುಶಃ ಕಾಲೆಳೆಯಲು ಇರಬಹುದು) ತಮ್ಮ ಬಗೆಗೇ ಬರೆದುಕೊಡಬೇಕೆಂದು ಕೇಳಿಕೊಂಡಿತು. ಆದರಿಂದ ಡಾ|| ಭಟ್ಟರು ಸಂಕೋಚದ ಮುದ್ದೆಯಾಗದೆ ಲೋಕಾಭಿರಾಮವಾಗಿ ನಮ್ಮೊಡನೆ ಈ ಲೇಖನದಲ್ಲಿ ಮಾತನಾಡಿದ್ದಾರೆ. ವಿದ್ವಾಂಸ-ಪ್ರಾಧ್ಯಾಪಕ-ಕವಿ-ವಿಮರ್ಶಕರಾದ ಈ ಸಜ್ಜನರೊಡನೆ ಅನುಸಂಧಾನಕ್ಕೆ ಇದೂ ಒಂದು ಮೆಟ್ಟಿಲಾದರೆ ಒಂದಕ್ಕೆ ಎರಡು ಸಿಕ್ಕಿದಂತೆಯೆ.

ಛಾಯಾಚಿತ್ರಗಳು : ಲೇಖಕರ ಸಂಗ್ರಹದಿಂದ

ನಮ್ಮ ಬದುಕನ್ನು ಕುರಿತು ನಾವೇ ಬರೆದುಕೊಂಡದ್ದು ಎಷ್ಟೇ ಪ್ರಾಮಾಣಿಕವಾಗಿದ್ದರೂ ಅದು ಕನ್ನಡಿಯಲ್ಲಿ ನೋಡಿಕೊಂಡ ಮುಖದಂತೆ. ಎಲ್ಲ ಸರಿಯಾಗಿಯೇ ಕಂಡರೂ ಅದು ನಮ್ಮ ಎಡಬಲಗಳನ್ನು ನಮಗೇ ತಿಳಿಯದಂತೆ ಬದಲಿಸಿಬಿಟ್ಟಿರುತ್ತದೆ.

ನನ್ನ ಹುಟ್ಟೂರು ಶಿವಮೊಗ್ಗ. ತಾಯಿ ಮೂಕಾಂಬಿಕೆ; ತಂದೆ ಶಿವರಾಮಭಟ್ಟರು. ನನಗೆ ನಾಲ್ಕು ಜನ ಅಕ್ಕಂದಿರು. ನಾನೇ ಕಡೆಯವನು. ನನಗೆ ಒಂದೂವರೆ ವರ್ಷವಾಗಿದ್ದಾಗ ನನ್ನ ತಂದೆ ತೀರಿಕೊಂಡರು.

ಇನ್ನೂ ಹತ್ತು ವರುಷದವರಿದ್ದಾಗಲೇ ಅಪ್ಪ ಅಮ್ಮರನ್ನು ಕಳೆದುಕೊಂಡ ನನ್ನ ತಂದೆ ತಮ್ಮ ಹುಟ್ಟೂರಾದ ಉಡುಪಿ ತಾಲೂಕಿನ ನೈವಾಡಿಯಿಂದ ಓಡಿಬಂದು ಶೃಂಗೇರಿಯ ಸಂಸ್ಕೃತ ಪಾಠಶಾಲೆ ಸೇರಿ ಹನ್ನೆರಡು ವರ್ಷ ವ್ಯಾಸಂಗ ಮಾಡಿದವರು. ನಂತರ ಹಾಸನದ ಪ್ರೈಮರಿ ಶಾಲೆಯೊಂದರಲ್ಲಿ ಉಪಾಧ್ಯಾಯರಾಗಿ, ಭದ್ರಾವತಿಯಲ್ಲಿ ಕೆಲಕಾಲ ಅರ್ಚಕರಾಗಿ ಅನಂತರ ಶಿವಮೊಗ್ಗೆಗೆ ಬಂದು ಪುರೋಹಿತ ವೃತ್ತಿಯಲ್ಲಿ ನೆಲೆನಿಂತರು.

ಬಡತನದಲ್ಲಿದ್ದರೂ ವಿದ್ಯಾವಂತರೆಂದೂ, ವೇದ ಶಾಸ್ತ್ರ ಬಲ್ಲವರೆಂದೂ ಊರಲ್ಲಿ ಅವರಿಗೆ ಗೌರವವಿತ್ತು. ಅನೇಕ ಜನ ಶಿಷ್ಯರಿಗೆ ಅವರು ವೇದ ಮಂತ್ರಗಳನ್ನು ಹೇಳಿಕೊಟ್ಟವರು. ಮೈಮೇಲೆ ಹೊದ್ದುಕೊಂಡ ಶಲ್ಯದ ಒಂದು ಕೊನೆಯಲ್ಲಿ ಯಾವಾಗಲೂ ಭಗವದ್ಗೀತೆಯ ಪುಟ್ಟ ಪುಸ್ತಕವೊಂದನ್ನು ಗಂಟುಹಾಕಿಕೊಂಡಿರುತ್ತಿದ್ದರು. ಎಲ್ಲೇ ಇದ್ದರೂ ಬಿಡುವು ಸಿಕ್ಕಾಗಲೆಲ್ಲ ಅದನ್ನು ಓದುತ್ತ ಕೂರುವರು. ಯಾರ ಜೊತೆಗೂ ಅಗತ್ಯಕ್ಕಿಂತ ಹೆಚ್ಚು ಮಾತಿಲ್ಲ. ಹರಟೆಯಂತೂ ಇಲ್ಲವೇ ಇಲ್ಲ. ಶಿಷ್ಯರೊಬ್ಬರು ಆ ಬಗ್ಗೆ ಕೇಳಿದ್ದಕ್ಕೆ "ಮಾತು ಹೆಚ್ಚಾದರೆ ಅದರಲ್ಲಿ ಸುಳ್ಳು ಹಣಿಕುತ್ತದೆ'' ಎಂದಿದ್ದರಂತೆ!

ಇದೆಲ್ಲ ಶಿವಮೊಗ್ಗೆಯಲ್ಲಿ ಹೆಸರಾಗಿದ್ದ ಅವರ ಶಿಷ್ಯ ಬಂಡೀಮಠದ ರಾಮಭಟ್ಟರು ನನ್ನ ಉಪನಯನದ ದಿನ ನನಗೆ ಹೇಳಿದ ಮಾತು. "ನಿಮ್ಮಪ್ಪ ದೊಡ್ಡ ವಿದ್ಯಾವಂತರು ಕಣಪ್ಪ. ಮಲಗುವಾಗಲೂ ಪುಸ್ತಕ ಓದುತ್ತ ಅದನ್ನು ಎದೆಯ ಮೇಲೆ ಇಟ್ಟುಕೊಂಡೇ ನಿದ್ದೆ ಮಾಡಿಬಿಡುತ್ತಿದ್ದರು. ನೀನೂ ಅವರ ಹಾಗೇ ವಿದ್ಯಾವಂತನಾಗಬೇಕು, ತಿಳೀತೇ ?'' ಅಂತ ಹೇಳಿ ನನಗೆ ಆಶೀರ್ವಾದ ಮಾಡಿದ್ದರು.

ನನ್ನ ತಂದೆ ಶಾಸ್ತ್ರನಿಯಮಗಳನ್ನು ತಪ್ಪದೆ ಪಾಲಿಸಿದವರೇ. ಆದರೆ ತಿಳಿಯದೆಯೇ ಅವರಿಂದ ಒಂದು ತಪ್ಪು ನಡೆದುಹೋಗಿತ್ತು. ದಿನವೂ ಪೂಜೆ, ಸಂಧ್ಯಾವಂದನೆ ಮಾಡುವಾಗ ಅವರು ವೇದ ಮಂತ್ರಗಳನ್ನು ಗಟ್ಟಿಯಾಗಿ ಹೇಳುತ್ತಿದ್ದರಂತೆ. ಅದನ್ನು ಕೇಳಿ ಕೇಳಿ ನನ್ನ ತಾಯಿಗೂ ಅವು ಬಾಯಿಪಾಠವಾಗಿಬಿಟ್ಟಿದ್ದುವು. ಸ್ತ್ರೀಯರಿಗೆ, ಶೂದ್ರರಿಗೆ ವೇದ ಕಲಿಸಬಾರದೆಂದು ಶಾಸ್ತ್ರವಿದೆಯಂತೆ. ಆದರೆ ನಾದಲಯಭರಿತವಾದ ವೇದ ಮಂತ್ರಗಳ ಉಚ್ಚಾರಣೆಯ ಆಕರ್ಷಣೆಯಿಂದಲೋ ಅಥವಾ ದೇವರಿಗೆ ಸರಿಯಾಗಿ ಕೇಳಿಸಲಿ ಎಂದೋ ನನ್ನ ತಂದೆ ಹಾಗೆ ಹೇಳುತ್ತಿದ್ದಿರಬೇಕು. ಮುಂದೆ ಹುಡುಗನಾದ ನಾನು ಇಷ್ಟವಿಲ್ಲದಿದ್ದರೂ ನನ್ನ ತಾಯಿಯ ಒತ್ತಾಯಕ್ಕಾಗಿ ಉದಾಸೀನದಿಂದ ಪೂಜೆ ಮಾಡುವಾಗ ಮಂತ್ರಗಳನ್ನು ಅಲ್ಲಲ್ಲಿ ತಪ್ಪಾಗಿ ಹೇಳುತ್ತಿದ್ದೆ. ಆಗ ನನ್ನ ತಾಯಿ ನನ್ನನ್ನು ತಿದ್ದುತ್ತಿದ್ದಳು. ಪುರುಷನೊಬ್ಬನ ತಪ್ಪನ್ನು ತಿದ್ದಲು ತಾನು ಕಲಿತ ಮಂತ್ರಗಳನ್ನು ಬಳಸಿದ್ದರಿಂದ ಶಾಸ್ತ್ರಗಳು (ಅರ್ಹಳಲ್ಲದಿದ್ದರೂ ವೇದ ಮಂತ್ರ ಕಲಿತ) ನನ್ನ ತಾಯಿಯನ್ನೂ ಕ್ಷಮಿಸಿರಬೇಕೆಂದು ಭಾವಿಸುತ್ತೇನೆ!

ನನ್ನ ತಂದೆ ತೀರಿಕೊಂಡಾಗ ನಾನಿನ್ನೂ ಒಂದೂವರೆ ವರ್ಷದವನು ಎಂದು ಆಗಲೇ ಹೇಳಿದೆ. ಮೊದಲೇ ಬಡತನದಲ್ಲಿದ್ದ ಮನೆಯಲ್ಲಿ ಈಗ ಪೂರ್ಣ ಅಮಾವಾಸ್ಯೆ ಕವಿದಿತ್ತು. ನನ್ನ ಅಕ್ಕಂದಿರಲ್ಲಿ ದೊಡ್ಡವಳಿಗೆ ಮಾತ್ರ ಮದುವೆಯಾಗಿತ್ತು. ನಾನೂ ಸೇರಿ ಉಳಿದ ನಾಲ್ಕು ಮಕ್ಕಳನ್ನು ಸಾಕುವ ಭಾರ ನನ್ನ ತಾಯ ಹೆಗಲಿಗೆ ಬಿತ್ತು.

ನನ್ನ ತಾಯಿ ಶಾಲೆ ಕಲಿತವಳಲ್ಲ. ಆದರೂ ಧೈರ್ಯಸ್ಥೆ, ವಿವೇಕಿ. ಯಾವ ಹೆಣ್ಣೂ ಕಂಗಾಲಾಗಬಹುದಾದ ಪರಿಸ್ಥಿತಿಯಲ್ಲಿ ಆಕೆ ಮಕ್ಕಳನ್ನು ಹೇಗಾದರೂ ಸಾಕಿ ಮೇಲೆ ತರುವ ಗಟ್ಟಿ ಸಂಕಲ್ಪ ಮಾಡಿದಳು. ನಾವು ಇದ್ದ ಹಳೆಕಾಲದ ಸ್ವಂತ ಮನೆಯನ್ನೇ ಎರಡು ಚಿಕ್ಕ ಭಾಗವಾಗಿ ವಿಂಗಡಿಸಿ ಒಂದನ್ನು ಬಾಡಿಗೆಗೆ ಕೊಟ್ಟಳು. ಹಿಂದೆ ತಾನು ಹರಟೆ ಹೊಡೆಯಲು, ಪಗಡೆಯಾಡಲು ಹೋಗುತ್ತಿದ್ದ ಗೆಳತಿಯರ ಮನೆಯಲ್ಲಿ ಈಗ ಕೈಕೆಲಸ ಮಾಡಿ ಕೊಡಲು ಸಿದ್ಧಳಾದಳು. ಅವಲಕ್ಕಿ ಭತ್ತ ಕುಟ್ಟಿ ಕೊಡುವುದು, ಸಾರಿನ ಪುಡಿ ಮಾಡಿಕೊಡುವುದು, ಅಡಿಗೆ ಕೆಲಸದಲ್ಲಿ ಸಹಾಯ ಮಾಡುವುದು; ಅದಕ್ಕೆ ಸಿಗುವ ಕೊಂಚ ಹಣದಲ್ಲಿ ಹೇಗೋ ಜೀವನ ಸಾಗಿಸುವುದು. ಹೀಗೆ ಕೆಲವು ವರ್ಷ ನಮ್ಮ ಜೀವನ ತೆವಳಿತು. ಕೊಂಚ ದೊಡ್ಡವನಾದ ಕೂಡಲೆ ನಾನು ಮೂರು ಮನೆಯ ಮಕ್ಕಳಿಗೆ ಮನೆಪಾಠ ಹೇಳಲು ಹೋಗುತ್ತಿದ್ದೆ. ಅದಕ್ಕೆ ಸಿಗುತ್ತಿದ್ದದ್ದು ತಿಂಗಳಿಗೆ ನಾಲಕು, ಆರು ರೂಪಾಯಿಗಳು. ವಿಠಲ್ ಉಮಾಜಿ ಎಂಬ ಅನುಕೂಲಸ್ಥ ಅಕ್ಕಸಾಲಿಯ ಮನೆಯದೇ ದೊಡ್ಡ ಫೀಸು - ಎಂಟು ರೂಪಾಯಿ ! ಇದಲ್ಲದೆ ತುಂಗಾನದಿಯ ಆಚೆ ದಂಡೆಯಲ್ಲಿ ಬೆಳೆದ ಮುತ್ತುಗದ ಮರಗಳಿಂದ ಗೋಣಿಚೀಲದ ತುಂಬ ಎಲೆ ಬಿಡಿಸಿ ತರುತ್ತಿದ್ದೆ. ಅಕ್ಕಂದಿರು ಅವುಗಳನ್ನು ಊಟದೆಲೆಯಾಗಿ ಪೋಣಿಸಿ ಇಡುತ್ತಿದ್ದರು. ವಾರಕ್ಕೊಮ್ಮೆ ಒಂದು ಅಂಗಡಿಯವರು ಬಂದು ಅವುಗಳನ್ನು ಕೊಂಡುಹೋಗುತ್ತಿದ್ದರು. ಬಡತನವೆನ್ನುವುದೇ ಒಂದು



ತೀ.ನಂ.ಶ್ರೀ. ಡಿ.ಎಲ್.ಎನ್.

ಅವಮಾನವಲ್ಲ, ಅದನ್ನು ಎದುರಿಸಲಾಗದ ಹೇಡಿತನವೇ ಅವಮಾನಕರ ಎಂಬ ಪಾಠವನ್ನು ಈ ಜೀವನ ನನಗೆ ಕಲಿಸಿತು. ಹ... ಹತ್ತಾರು ವರ್ಷ ನನ್ನ ತಾಯಿಯ ತಾಳ್ಮೆ, ಶ್ರಮ, ದಿಟ್ಟತ... ಫಲವಾಗಿ ಕಡೆಗೂ ನಮ್ಮ ಕುಟುಂಬ ಒಂದು ದಡ ತಲುಪಿ... ಅವಳ ಜೀವನ ಕುರಿತು ಚಿಂತಿಸಿದಾಗೆಲ್ಲ ಅದು ತನ್ನ ಮ... ಸಲುವಾಗಿ ನಡೆಸಿದ ಒಂದು ಆತ್ಮಯಜ್ಞ ಅಂತಲೇ ನನ... ಸುತ್ತದೆ. ಮ್ಯಾಕ್ಸಿಂ ಗಾರ್ಕಿಯ 'ಮದರ್' ಕಾದಂಬರಿ... ನೆನಪಾಗುತ್ತದೆ. ಇಂಥ ಅನುಭವದ ಫಲವಾಗಿಯೇ ಅ... ನೆನಪು ನನ್ನ ಕವಿತೆಗಳಲ್ಲಿ ಮತ್ತೆ ಮತ್ತೆ ನುಗ್ಗಿ ಬಂದಿದೆ.

ನನ್ನ ತಾಯಿ ಅನಕ್ಷರಸ್ಥೆ ಎಂದು ಹೇಳಿದೆನಷ್ಟೆ. ಆ... ವಿದ್ಯೆಯ ಬಗ್ಗೆ ಅವಳು ಬಹಳ ಆದರ ಗೌರವ ಇದ್ದವ... ಮಕ್ಕಳಿಂದ ಕನ್ನಡ ವರ್ಣಮಾಲೆ ಬರೆಯಲು ಕ... ಕೊಂಡಿದ್ದಳು. ಸರಾಗವಾಗಿ ಓದಲು ಸಾಧ್ಯವಾಗದಿದ್ದ... ಅಕ್ಷರ ಅಕ್ಷರ ಕೂಡಿಸಿಕೊಂಡು ಆಗೀಗ ಕೊಂಚ ಓದ... ಯತ್ನಿಸುತ್ತಿದ್ದಳು. ನನ್ನ ಕಡೆಯ ಅಕ್ಕ, ಶಿವಮೊಗ್ಗೆಯಲ್ಲಿ ಹೆಂ... ಫ್ಯಾಕ್ಟರಿ ಮಾಲೀಕರಾದ ಕಾಳಪ್ಪನವರ ಮಗಳ ಸಹಪಾಠಿ, ಸ್ನೇಹಿತೆ. ಕಾ... ಅ. ನ. ಕೃಷ್ಣರಾಯರಿಗೆ ಬಹಳ ಆಪ್ತರು. ಅವರ ಮನೆಯಲ್ಲಿ ಅ.ನ.ಕೃ.ರ... ಕಾದಂಬರಿಗಳೆಲ್ಲ ಇದ್ದುವು. ನನ್ನ ಅಕ್ಕನ ಮೂಲಕ ನನ್ನ ತಾಯಿ ಆ ಕಾದಂಬರಿಗ... ತರಿಸುತ್ತಿದ್ದಳು. ವಾರದಲ್ಲಿ ಮೂರು ನಾಲ್ಕು ದಿನವಾದರೂ ರಾತ್ರಿ ನಮ್ಮ ಮನೆ... ಅದರ ವಾಚನ ನಡೆಯುತ್ತಿತ್ತು. ನನ್ನ ತಾಯಿ, ಇಬ್ಬರು ಅಕ್ಕಂದಿರು ಮತ್ತು ನಾ... ಒಂದು ಡಬ್ಬದ ಮೇಲೆ ಸೀಮೆಎಣ್ಣೆಯ ಬುಡ್ಡಿಯನ್ನಿಟ್ಟುಕೊಂಡು ಸುತ್ತ ಕೂರುವು...

# ಬೆಂಕಿ ಹೂಮರ ಮೊಂಬತ್ತಿ ಮತ್ತು ಮಗ



ಮಹಾನಗರದ ನಮ್ಮ ಮನೆಯ ಎದುರಿಗೆ
ಬೆಂಕಿ ಹೂಮರದ ಕಣ್ಣುಕುಕ್ಕುವ
ಕೆಂಡದುಂಡೆಗಳಂತ ಹೂವುಗಳು
ಇನ್ನೂ ಏಳು ತಿಂಗಳು ತುಂಬದ ನನ್ನ ಮಗನ
ಕೌತುಕದ ಕಂಗಳಿಗೆ ಆಹಾರವಾದಾಗ...
ಆಹಾ ! ಅವನ ಕಂಗಳಲ್ಲೇನು ರಂಗು
ಕಂಗಳೇ ಬ್ರಹ್ಮಾಂಡವಾಗಿ ಅತ್ತಿತ್ತ ತಿರುಗಿದಾಗ
ಬ್ರಹ್ಮ ಸಾಕ್ಷಾತ್ಕಾರವಾಗಿ ಅವನಲ್ಲೆ ಲೀನನಾದೆ.

ಬೆಂಕಿ ಹೂಮರ ಅವನಲ್ಲಿ ಜೀರ್ಣವಾಗಿ
ಕೌತುಕದ ಹಸಿವನ್ನು ಇನ್ನಷ್ಟು ಹೆಚ್ಚಿಸಿದರೆ
ನನ್ನ ಪಚನಕ್ರಿಯೆಗೇ ಸವಾಲಾಗಿದ್ದ ಅದರ
ಹೂಗಳು
ಮಗನ ಕಂಗಳಿಂದ ನನ್ನ ಕಂಗಳೊಳಗೆ
ಉದುರತೊಡಗಿದವು.

ಬೆಂಕಿ ಹೂಮರ ಮಾತ್ರ ಹಾಗೇ ನಿಂತಿದೆ
ಬೆಂಕಿಯುಂಡೆಗಳನ್ನು ಕ್ಷಿಪಣಿಗಳಂತೆ ಆಕಾಶಕ್ಕೆ
ಹಾರಿಬಿಡುವ ಭಂಗಿಯಲ್ಲಿ
ಆಕಾಶವೂ ಹಾಗೇ ಇದೆ
ಮೋಡವನ್ನೆ ಗುರಾಣಿಯಾಗಿಸಿಕೊಂಡು
ಯುದ್ಧಕ್ಕೆ ಸಜ್ಜಾಗಿ ನಿಂತ ಭಂಗಿಯಲ್ಲಿ

* * *

ರಾತ್ರಿ ಹಠಾತ್ ವಿದ್ಯುತ್ ಸ್ಥಗಿತದಿಂದ
ಮನೆಯೆಲ್ಲಾ ಕತ್ತಲ ಗೂಡಾದಾಗ
ಮೊಂಬತ್ತಿ ಹಚ್ಚಿದರೆ
ಮಗ ಮೊಂಬತ್ತಿಯ ಬೆಂಕಿಗೇ
ಬಾಯಿ ಹಾಕಿ ಗುಳುಂ ಮಾಡಲು ಹೊರಟ.
ಅಬ್ಬಾ...!
ಮೊಂಬತ್ತಿಯನ್ನೆ ತಿನ್ನಲು ಹೊರಟ ಅವನ ಹಸಿವು
ಅಥವಾ ತಿನ್ನುವುದೇ ತನ್ನ ಕಾಯಕವೆಂಬಂತಿರುವ ಭಂಗಿ
ಆ ಕ್ಷಣಕ್ಕೆ ಅವನೂ ಹಚ್ಚಿದ ಮೊಂಬತ್ತಿಯಂತೆ ಕಂಡು
ಬೆಳಕಿನ ಸಾಕ್ಷಾತ್ಕಾರವಾಗಿ ಅವನಲ್ಲೆ ಲೀನನಾದೆ

* * *

ಬೆಂಕಿ ಹೂಮರವನ್ನೆ ತನ್ನ ಕಣ್ಣೊಳಗೆ ಸೆಳೆದುಕೊಂಡ ಮಗ
ಬೆಂಕಿಯೆಂಬೋ ಬೆಂಕಿಯನ್ನೆ ತಿನ್ನಲು ಹೊರಟ ಮಗ
ಅಂದು ರಾತ್ರಿ ನನ್ನ ಕನಸಿನಲ್ಲಿ ಬೆಂಕಿಮರವಾಗಿ ನಿಂತಿದ್ದ
ಅಲ್ಲಿ ಹೂಗಳು ಕೆಂಡದಂತೆ ಕಾಣುವ ಬದಲು
ಮೊಂಬತ್ತಿಗಳಂತೆ ಬೆಳಗುತ್ತಿದ್ದವು
ಆ ಅಮಾವಾಸ್ಯೆಯ ರಾತ್ರಿಯಲ್ಲಿ
ಸುತ್ತಲೂ ಪ್ರಶಾಂತ ಬೆಳದಿಂಗಳು ತಣ್ಣಗೆ ಪವಡಿಸಿತ್ತು.

* * *

ಮುಂಜಾನೆ ಎದ್ದಾಗ ಅವನ ಪ್ರಶಾಂತ ಮುಖದಲ್ಲಿ
ಏನೇನೋ ಹುಡುಕ ಹೊರಟು ಏನೇನೋ ದಕ್ಕಿಸಿಕೊಂಡ
ಬೆಂಕಿ ಹೂಮರದ ಕೊಂಬೆಯಲ್ಲಿ ಕಾಗೆ ಗೂಡಾಗಿದ್ದೆ
ಅವನು ಮಾತ್ರ ಪ್ರಶಾಂತವಾಗೇ ಇದ್ದ

**ಚೀಮನಹಳ್ಳಿ ರಮೇಶಬಾಬು**
ನಂ. ೧೦೮, ೪ನೇ ಅಡ್ಡರಸ್ತೆ, ಎಜಿಬಿ ಕಾಲನಿ, ಮಹಾಲಕ್ಷ್ಮಿಪುರ, ಬೆಂಗಳೂರು - ೫೬೦ ೦೮೬

ುಂದಿರು ಮತ್ತು ನಾನು ಸರದಿಯ ಮೇಲೆ ಅ.ನ.ಕೃ. ನಂಬರಿಯನ್ನು ಓದುವುದು. ತಾಯಿಯ ಕರುಳು, ವನ ಯಾತ್ರೆ, ಸಂಧ್ಯಾರಾಗ, ರುಕ್ಮಿಣಿ, ಗೃಹಲಕ್ಷ್ಮಿ ದಲಾದ ಹತ್ತಾರು ಪ್ರಸಿದ್ಧ ಜನಪ್ರಿಯ ಕಾದಂಬರಿ ನ್ನು ನಾವು ಹೀಗೆ ಓದಿದ್ದೆವು. ನಡುನಡುವೆ ಕರುಳು ಡುವ ಭಾವಮಯ ಸನ್ನಿವೇಶಗಳು ಬಂದಾಗ ರ ಕಣ್ಣಲ್ಲಿ ನೀರು. ''ಏನೋ ಇದು, ಗಂಡು ಡುಗನಾಗಿ ಹೀಗೆ ಅಳುತ್ತಾರೇನೋ'' ಅಂತ ನನ್ನ ಯಿ ತಮ್ಮ ಕಣ್ಣೊರೆಸಿಕೊಳ್ಳುತ್ತಲೇ ನನಗೆ ಬುದ್ಧಿ ಳುತ್ತಿದ್ದರು! ಹೀಗೆ ನನ್ನ ತಾಯಿಯ ಚನಾಭಿರುಚಿಯ ಮೂಲಕ ನಮ್ಮ ಮನೆಯಲ್ಲಿ ಹಿತ್ಯದ ಪ್ರಭಾವವೂ ಸ್ವಲ್ಪ ಇತ್ತು.

*   *   *

ಶಿವಮೊಗ್ಗ ಆ ದಿನಗಳಲ್ಲಿ ದಟ್ಟ ಮಲೆನಾಡಿನ ಕೇಂದ್ರ. ಲ್ಲಿ ಖಂಡಾಂತರ ವಾಯುಗುಣ. ಬೇಸಿಗೆಯಲ್ಲಿ ಉರಿ ಲು, ಚಳಿಗಾಲದಲ್ಲಿ ಯಮ ಚಳಿ, ಮಳೆಗಾಲದಲ್ಲಿ ತಿಮಳೆ; ಅಂಗಳದಲ್ಲಿ ಒಣಹಾಕಿದ ಪಂಚೆ ಪೆಗಳನ್ನು ಹಾರಿಸಿಕೊಂಡು ಹೋಗುವ ಹದ್ದುಗಾಳಿ.

ನಮ್ಮ ಮನೆ ಇದ್ದದ್ದು ತುಂಗಾನದಿಯ ದಂಡೆಯ ೀಲಿದ್ದ ದೊಡ್ಡ ಬ್ರಾಹ್ಮಣರ ಬೀದಿಯಲ್ಲಿ. ಮಳೆಗಾಲ ಲ್ಲಿ ತುಂಗೆಗೆ ಪ್ರವಾಹ ಬಂತೆಂದರೆ ಊರಿನೊಳಗೆ ರು ನುಗ್ಗಿಬಿಡುತ್ತಿತ್ತು. ಊರೇ ಮುಳುಗಿಹೋಗುತ್ತದೋ ಬ ಭಯ ಕವಿಸುವ ವಾತಾವರಣ. ನೀರು ಮನೆ ಟ್ಟಿಲುಗಳ ಬಳಿ ಬರುತ್ತಿದೆ ಎನ್ನುವಾಗ ಜನಕ್ಕೆ ಎಚ್ಚರಿಕೆ ಡಲು ಮುನಿಸಿಪಾಲಿಟಿ ಡಂಗುರ ಸಾರಿಸುತ್ತಿತ್ತು – ದಿ ಊರೊಳಗೆ ನುಗ್ಗಿದೆ. ಅಪಾಯದ ಹಂತ ಟ್ಟಿದೆ. ಜನರೆಲ್ಲ ಮನೆ ಬಿಟ್ಟು ಕೋರ ಪಲ್ಲಯ್ಯ ದ ಬಿಡಾರಗಳಿಗೆ ಹೋಗಬೇಕು'' ಅಂತ. ರೂ ಯಾರೂ ಮನೆಬಿಡಲೊಲ್ಲರು. ಕೇರಿಯ ರೆಲ್ಲ ಬಡಬ್ರಾಹ್ಮಣರು. ಮನೆ ಬಿಡಬೇಕೆಂದರೆ ಗಿನ ಹರಕಲು ಚಾಪೆ, ಹಳೆಯ ಸಾಮಾನುಗಳಿಗೆ ಬೀದಿಯಲ್ಲಿ ಮೆರವಣಿಗೆ ಮಾಡಿದಂತೆ. ಯಾರೂ ಕ್ಕೆ ಒಲ್ಲರು. ಇನ್ನೂ ಒಂದು ದಿನ ಕಾದು ೋಡೋಣ ಎಂಬ ಮೊಂಡುತನ, ಭಂಡಧೈರ್ಯ. ಲ್ಲ ನಮ್ಮ ಶಾಲೆಗಳಿಗೆ ರಜ. ಇನ್ನೂ ಚಿಕ್ಕವರಾಗಿದ್ದ ುಗೆ ಮಜವೋ ಮಜ. ಹಿರಿಯರ ಕಣ್ಣು ತಪ್ಪಿಸಿ ದು ಅಡಿಯಷ್ಟು ಎತ್ತರ ನೀರು ಹರಿಯುವ ಬೀದಿಗೆ ಯುತ್ತಿದ್ದೆವು. ಕಾಗದದ ಪುಟ್ಟ ದೋಣಿಗಳನ್ನು ರಮೇಲೆ ತೇಲಿಬಿಟ್ಟು, ನನ್ನದು ಮುಂದೆ, ತನ್ನದು ಂದೆ ಎಂದು ಹುರುಡು ಕಟ್ಟಿ ಕೇಕೆ ಹಾಕುತ್ತಿದ್ದೆವು. ತಾಯಿ, ಮನೆಯ ಪಡಸಾಲೆಯಲ್ಲಿ ಒಂದು ಹಣತೆ ಟ್ಟು ಮೆಟ್ಟಿಲ ಬಳಿ ಹರಿಯುತ್ತಿದ್ದ ನದಿನೀರಿಗೆ ಿನ ಕುಂಕುಮ ಹೂವು ಹಾಕಿ ಕೈಮುಗಿದು ದೀನ ದಲ್ಲಿ ಕೇಳಿಕೊಳ್ಳುವರು : ''ಅಮ್ಮಾ ತುಂಗೆ, ನೀನು ತಾಯಿಯಲ್ಲವೇನಮ್ಮ? ನಿನ್ನಿಂದಲೇ ನಮಗೆ ಪಾನ ಎಲ್ಲ. ನೀನು ನಿನ್ನ ಜಾಗದಲ್ಲೇ ಇದ್ದರೆ ನಾವು ುಕಿಕೊಂಡೇವು. ಅದು ಬಿಟ್ಟು ಕೋಪ ಮಾಡಿಕೊಂಡು ಬಾಗಿಲಿಗೇ ಬಂದುಬಿಟ್ಟರೆ ನಮ್ಮ ಗತಿಯೇನಮ್ಮ? ೋಗು ತಾಯಿ, ಹಿಂದಕ್ಕೆ ಹೋಗು'' ಎಂದು ಹೇಳಿ ಸಾಲೆಯಲ್ಲೇ ಒಂದು ನಮಸ್ಕಾರ ಹಾಕುವರು!

ನಾನು ಪ್ರೈಮರಿ ಶಾಲೆಯ ಒಂದನೆಯ ತರಗತಿಯಲ್ಲಿ ಇದ್ದಾಗ ನನ್ನ ಅಕ್ಕ ವಿಶಾಲಾಕ್ಷಿಯ ಮದುವೆ ನಡೆಯಿತು. ಮದುವೆಯ ದಿನವೇ ನನ್ನ ತರಗತಿಯ ಪರೀಕ್ಷೆ ಇತ್ತು. ಒಂದನೆಯ ಕ್ಲಾಸಿನ ಪರೀಕ್ಷೆ ತಾನೆ, ಏನು ಮಹಾ? ಅಕ್ಕನ ಮದುವೆಯ ದಿನ ಲಾಜಾ ಹೋಮಕ್ಕೆ ತಮ್ಮ ಇರದಿದ್ದರೆ ಹೇಗೆ ಅಂತ ಹೇಳಿ ನಾನು ಪರೀಕ್ಷೆಗೆ ಹೋಗಬೇಕಾಗಿಲ್ಲವೆಂದು ಹಿರಿಯರು ತೀರ್ಮಾನಿಸಿ ಬಿಟ್ಟರು! ಪರೀಕ್ಷೆಗೆ ಹೋಗದಿದ್ದರೆ ಫೇಲು ಮಾಡಿ ಬಿಡುತ್ತಾರೆ ಅಂತ ನಾನು ಎಷ್ಟು ಅತ್ತು ಗೋಗರೆದರೂ ಯಾರೂ ಜಪ್ಪಯ್ಯ ಅನ್ನಲಿಲ್ಲ. ಹಾಗಾಗಿ ನಾನು ಪರೀಕ್ಷೆಗೆ ಹೋಗಲೇ ಇಲ್ಲ. ಅದಾದ ಮೂರನೆಯ ದಿನ ನನ್ನ ಸಹಪಾಠಿ ನಾಗೇಶ ಸ್ಕೂಲಿನಿಂದ ನಮ್ಮ ಮನೆಗೆ ಏದುಸಿರುಬಿಡುತ್ತ ಓಡಿ ಬಂದ. ''ಹೆಡ್‌ಮಾಸ್ಟರ್ ನಿನ್ನನ್ನು ಕರೆದುಕೊಂಡು ಬಾ ಅಂತ ಕಳಿಸಿದ್ದಾರೆ – ನೀನು ಪರೀಕ್ಷೆಗೆ ಬರಲಿಲ್ಲವಲ್ಲ ಅದಕ್ಕೆ'' ಅಂದ. ಅವನಿಗೆ ಖುಷಿಯೋ ಖುಷಿ, ಹೆಡ್‌ಮಾಸ್ಟರ್ ನನಗೆ ತಕ್ಕ ಪೂಜೆ ಮಾಡ್ತಾರೆ ಅಂತ! ನಾನು ಅಂಜುತ್ತಲೇ ಸ್ಕೂಲಿಗೆ ಹೋದೆ. ಹೆಡ್‌ಮಾಸ್ಟರ್ ಶಾಮಣ್ಣನವರು ನನ್ನ ಕಂಕುಳಲ್ಲಿದ್ದ ಪಠ್ಯಪುಸ್ತಕ ತೆಗೆದುಕೊಂಡು ಒಂದು ಪಾಠದ ಹಾಳೆ ತೆಗೆದು ''ಎಲ್ಲಿ, ಇದನ್ನು ಓದು ನೋಡೋಣ'' ಎಂದರು. ನಾನು ಲಕ್ಷಣವಾಗಿ ಆ ಪಾಠ ಓದಿದೆ. ಅವರಿಗೆ ಮೆಚ್ಚಿಕೆಯಾಯಿತು. ''ವೆರಿ ಗುಡ್, ನೀನು ಪಾಸಾಗಿದ್ದೀಯ. ಇನ್ನು ಮುಂದೆ ನೀನು ಎರಡನೆಯ ಕ್ಲಾಸಿಗೆ ಹೋಗಬೇಕು ಗೊತ್ತಾಯಿತೆ?'' ಎಂದರು. ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ. ಇದನ್ನೆಲ್ಲ ನೋಡುತ್ತ ಅಲ್ಲೇ ನಿಂತಿದ್ದ ನಾಗೇಶನ ಮುಖ ಹುಳಿಹುಳಿಯಾಯಿತು. ಪರೀಕ್ಷೆಯ ದಿನ ನನ್ನ ಹೆಸರು ಕರೆದಾಗ ''ಅವನು ಬರಲ್ಲ ಸಾರ್. ಇವತ್ತು ಅವನ ಅಕ್ಕನ ಮದುವೆಯಂತೆ. ಫೇಲಾದರೆ ಪರವಾಗಿಲ್ಲ ಅಂತ ಹೇಳಿಬಿಟ್ಟ ಸಾರ್'' ಎಂದು ಹೆಡ್‌ಮಾಸ್ಟರಿಗೆ ಹೇಳಿದ್ದವನು ಅವನೇ ಅಂತೆ! ನಾನು ಹೇಳದ ಮಾತನ್ನೂ ಸೇರಿಸಿ ಹೇಳಿದ್ದ!

ಶಾಮಣ್ಣನವರ ಮನಸ್ಸು ದೊಡ್ಡದು. ಪರೀಕ್ಷೆಗೇ ಹೋಗದಿದ್ದ ನನ್ನನ್ನು ಅವರು ಸಹಜವಾಗಿಯೇ ಫೇಲ್ ಮಾಡಬಹುದಿತ್ತು. ಹಾಗೆ ಮಾಡಿದ್ದರೆ ನಾನು ಒಂದು ವರ್ಷ ಓದಿನಲ್ಲಿ ಹಿಂದೆ ಬಿದ್ದು ನನ್ನ ಜೀವನದಲ್ಲಿ ಮುಂದೆ ಏನೆಲ್ಲ ಪಲ್ಲಟವಾಗುತ್ತಿತ್ತೋ ಏನೋ. ಆದರೆ ಶಾಮಣ್ಣನವರ ಔದಾರ್ಯದಿಂದ ನಾನು ಪಾರಾದೆ. ಕೈಯಲ್ಲಿ ಸದಾ ಒಂದು ಬೆತ್ತ ಹಿಡಿದಿದ್ದು, ಶಿಸ್ತಿನ - ಶಿಕ್ಷೆಯ ಪ್ರತಿ ಮೂರ್ತಿಯಾಗಿ ಕಾಣುವ ಒಬ್ಬ ಶಿಕ್ಷಕ ಅಂತರಂಗದಲ್ಲಿ ಎಷ್ಟು ಉದಾರಿ, ವಿವೇಕಿ ಆಗಿರಬಹುದೆನ್ನುವುದನ್ನು ನಾನು ಅವರ ನಿದರ್ಶನದಿಂದ ತಿಳಿದೆ.

ನಮ್ಮ ಮನೆಯ ಎದುರಿಗೆ ಲಕ್ಷ್ಮೀನಾರಾಯಣ ಸ್ವಾಮಿಯ ದೊಡ್ಡ ದೇವಸ್ಥಾನ ಇತ್ತು. ಅಲ್ಲಿ ವಾರಕ್ಕೆ ಒಂದೆರಡು ದಿನವಾದರೂ ಹರಿಕಥೆ, ಗಮಕವಾಚನ, ಸಂಗೀತ, ಧಾರ್ಮಿಕ ಪ್ರವಚನ – ಹೀಗೆ ಏನಾದರೊಂದು ಕಾರ್ಯಕ್ರಮ ಇರುತ್ತಿತ್ತು. ಕುಮಾರವ್ಯಾಸ ಭಾರತದ ಗಮಕವಾಚನವಂತೂ ಒಟ್ಟಿಗೆ ಒಂದೆರಡು ವಾರ, ಕೆಲವು ಸಲ ಒಂದೆರಡು ತಿಂಗಳು ಸತತವಾಗಿ ನಡೆಯುತ್ತಿತ್ತು.

ಗಮಕವಾಚನ ನಡೆಸಿಕೊಡುತ್ತಿದ್ದ ಇಬ್ಬರು ವಿದ್ವಾಂಸರು ಪಕ್ಕದ ಗ್ರಾಮವಾದ ಮತ್ತೂರಿನವರು. ಪದ್ಯಗಳ ವಾಚನ ಮಾಡುತ್ತಿದ್ದವರು ವೆಂಕಟೇಶಯ್ಯ. ಅವರದು ಮಧುರವಾದ ಧ್ವನಿ; ಇಂಪಾದ ಭಾವಮಯ ವಾಚನ. ಅವರು ಪದ್ಯ ಓದಿದ ಮೇಲೆ ಅದಕ್ಕೆ ಲಕ್ಷ್ಮೀ ಕೇಶವ ಶಾಸ್ತ್ರಿಗಳ ವ್ಯಾಖ್ಯಾನ. ಅದಂತೂ ಎಂಥವರನ್ನೂ ಮರುಳು ಮಾಡಿಬಿಡುವಷ್ಟು ಆಕರ್ಷಕವಾಗಿರುತ್ತಿತ್ತು. ಕಾರ್ಯಕ್ರಮವಿದ್ದ ದಿನ ಆರಂಭದಲ್ಲೇ ಇಡೀ ಸಭಾಂಗಣ ಶ್ರೋತೃಗಳಿಂದ ತುಂಬಿಹೋಗಿರುತ್ತಿತ್ತು.

ಆಗ ನನಗೆ ಸುಮಾರು ಹನ್ನೆರಡು ವರ್ಷ. ಭಾರತದ ಕಥೆ ಕೇಳುವ ಅದಮ್ಯ ಕುತೂಹಲ. ಸಂಜೆ ಆಟಕ್ಕೂ ಹೋಗದೆ, ಮುಂಚೆಯೇ ಹೋಗಿ ಮುಂದಿನ ಸಾಲಿನಲ್ಲೇ ಕೂತುಬಿಡುತ್ತಿದ್ದೆ. ಬಿಟ್ಟ ಬಾಯಾಗಿ, ನೆಟ್ಟ ಕಣ್ಣಾಗಿ ವಾಚನ, ವ್ಯಾಖ್ಯಾನ ಆಲಿಸುತ್ತಿದ್ದೆ. ವಾಚನದ ಆರಂಭದಲ್ಲಿ ವೆಂಕಟೇಶಯ್ಯ ಕಾವ್ಯದ ಮೊದಲ ಏಳೆಂಟು ಪದ್ಯಗಳನ್ನು ವಾಚಿಸಿ ನಂತರ ಅಂದಿನ ಕಥಾಭಾಗಕ್ಕೆ ಬರುತ್ತಿದ್ದರು. ದಿನವೂ ಕೇಳಿ ಕೇಳಿ ಆ ಪದ್ಯಗಳೆಲ್ಲ ನನಗೆ ಬಾಯಿಪಾಠ



ತ. ಸು. ಶಾಮರಾಯ

ವಾಗಿಬಿಟ್ಟಿದ್ದುವು. ಮನೆಯಲ್ಲಿ ಬೆಳಿಗ್ಗೆ ಸಂಜೆ ದೇವರಿಗೆ ನಮಸ್ಕಾರ ಮಾಡುವಾಗ, ಉಳಿದವರು ಸಂಸ್ಕೃತ ಮಂತ್ರ ಶ್ಲೋಕಗಳನ್ನು ಹೇಳುವಂತೆ ನಾನು ಕುಮಾರವ್ಯಾಸನ 'ಶ್ರೀವನಿತೆಯರಸನೆ' ಮೊದಲಾದ ಪ್ರಾರ್ಥನಾ ಪದ್ಯ ಗಳನ್ನು ಹೇಳಿಕೊಂಡು ದೇವರಿಗೆ ಅಡ್ಡಬೀಳುತ್ತಿದ್ದೆ. ಅವು ಕಲ್ಲು ಹಿತ್ತಾಳೆ ಮೂರ್ತಿಗಳಾದರೆ ತಾನೆ ಏನು? ದೇವರಲ್ಲವೆ? ಅವುಗಳ ಕಲ್ಲೆದೆಯೂ ಕರಗಿರಬೇಕು! ಎಲಾ! ಇಷ್ಟು ಚಿಕ್ಕ ಹುಡುಗ ಕನ್ನಡದ ಮಹಾಕವಿ ಯೊಬ್ಬನ ಕವಿತೆ ಹೇಳಿಕೊಂಡು ನಮಗೆ ನಮಸ್ಕಾರ ಮಾಡುತ್ತಿದೆಯಲ್ಲ, ಪಾಪ! ಇದಕ್ಕೂ ಕೊಂಚ ಕವಿತೆ ಬರೆಯುವ ಶಕ್ತಿ ಕೊಡೋಣ ಅನ್ನಿಸಿ ಅನುಗ್ರಹ ಮಾಡಿರ ಬೇಕು! ಮುಂದೆ ನಾನು ಕನ್ನಡದಲ್ಲಿ ಕವಿತೆ ಬರೆಯಲು ತೊಡಗಿದ್ದಕ್ಕೆ ಇದೇ ಕಾರಣ ಇದ್ದರೂ ಇರಬಹುದು!

ಹೀಗೆ ನನ್ನ ಮೊದಲ ಶ್ರೇಷ್ಠ ಗುರುಗಳು ಶಾಲೆ ಯೊಳಗಿನ ಉಪಾಧ್ಯಾಯರಲ್ಲ, ಹೊರಗಿನ ಹಿರಿಯರು; ಕುಮಾರವ್ಯಾಸ ಭಾರತದಂಥ ಮಹಾಕಾವ್ಯವನ್ನು ಓದಿ, ಅರ್ಥ ಹೇಳಿ ಚಿಕ್ಕವಯಸ್ಸಿನಲ್ಲೇ ನನ್ನ ಬಾಳಿಗೆ ಅಸಾಮಾನ್ಯ ಸಂಸ್ಕಾರ ಕೊಟ್ಟ ಪೂಜ್ಯರು. ಅವರಿಂದಾಗಿ ಆ ಕೃತಿಯ

ಸತ್ವಭರಿತ ಭಾಗಗಳ ಸಾವಿರಾರು ಪದ್ಯಗಳು ನನ್ನ ಮನಸ್ಸಿನ ಮೇಲೆ ನಿರ್ಭರ ಜಲಪಾತದಂತೆ ಸುರಿದುಹೋದುವು. ಅದರ ಲಯ, ಪದಪುಂಜ, ಕಾವ್ಯ ಭಾಷೆಗಳೆಲ್ಲ ನನ್ನ ಬಾಹ್ಯ ಪ್ರಜ್ಞೆಗೆ ಅರಿವಿಲ್ಲದಂತೆ ಆಳ ಮನಸ್ಸಿನ ಮೇಲೆ ಬಹಳ ಸೂಕ್ಷ್ಮ ಪ್ರಭಾವ ಮಾಡಿರಲೇಬೇಕು. ಮುಂದೆ ನಾನು ಕನ್ನಡ ಸಾಹಿತ್ಯವನ್ನೇ ವಿಶೇಷ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡುದಕ್ಕೆ ಈ ಅಜ್ಞಾತ ಸಂಸ್ಕಾರವೇ ಹಿನ್ನೆಲೆಯಾಗಿರಬೇಕು. ಇವನ್ನೆಲ್ಲ ಯೋಚಿಸುತ್ತ ಮನಸ್ಸು ಚಿಕ್ಕಂದಿನ ಆ ಅನುಭವಕ್ಕೆ ಈಗ ಹೊಸ ಅರ್ಥ ತುಂಬಿಕೊಳ್ಳುತ್ತ ಹೋಗುತ್ತದೆ. ಆ ಇಬ್ಬರು ಮಹನೀಯರು ನಾಲ್ಕು ಮೈಲು ದೂರದ ಮತ್ತೂರಿನಿಂದ ನಡೆದು ಶಿವಮೊಗ್ಗಕ್ಕೆ ಬರುತ್ತಿದ್ದುದು ನನಗೆ ಈ ಸಂಸ್ಕಾರ ಕೊಡಲೆಂದೇ ಎಂದು ಭಾವಿಸಿ ನನ್ನ ಮನಸ್ಸು ನೆನೆದಾಗ ಲೆಲ್ಲ ಕೃತಜ್ಞತೆಯಿಂದ ಆ ಹಿರಿಯರ ಪಾದಕ್ಕೆ ಬೀಳುತ್ತದೆ.



* * *

ಕೇಶವ ಘನಪಾಠಿಗಳು ಶಿವಮೊಗ್ಗದ ವೈದಿಕ ವಲಯದಲ್ಲಿ ಬಹಳ ಗಣ್ಯರೆನಿಸಿಕೊಂಡಿದ್ದವರು. ಅವರು ದೊಡ್ಡ ವೇದಪಾರಂಗತರು, ಜೊತೆಗೆ ಹಿರಿಯ ಸಂಸ್ಕೃತ ವಿದ್ವಾಂಸರು. ತಮ್ಮ ಗಂಭೀರ ದನಿಯಲ್ಲಿ ಅವರು ವೇದಮಂತ್ರಗಳನ್ನು ಸ್ವರಬದ್ಧವಾಗಿ ಪಠಣ ಮಾಡುತ್ತಿದ್ದರೆ ಗಂಟೆಗಟ್ಟಲೆ ಅದನ್ನು ಕೇಳಬಹುದಾದಷ್ಟು ಆಕರ್ಷಕವಾಗಿರುತ್ತಿತ್ತು. ನಮ್ಮೂರಿನ ಭೀಮೇಶ್ವರ ದೇವಸ್ಥಾನದಲ್ಲಿ ಪ್ರತಿದಿನ ಬೆಳಗ್ಗೆ ಕೆಲವರಿಗೆ ವೇದಮಂತ್ರ ಹೇಳಿಕೊಡುವುದು ಅವರ ಒಂದು ಪದ್ಧತಿ.

ಆಗ ಇನ್ನೂ ಹುಡುಗನಾಗಿದ್ದ ನಾನು ಬೆಳಗಿನ ಜಾವದಲ್ಲೇ ಎದ್ದು ಭೀಮೇಶ್ವರ ದೇವಸ್ಥಾನದ ಕಾಂಪೌಂಡಿನಲ್ಲಿ ಸಂಪಿಗೆ ಹೂವು ಕೊಯ್ಯುವುದಕ್ಕೆ ಹೋಗುತ್ತಿದ್ದೆ. ನನ್ನ ಜೊತೆಗೆ ರಂಗನಾಥ ಅಡಿಗ ಎಂಬ ಇನ್ನೊಬ್ಬ ಹುಡುಗನೂ ಇರುತ್ತಿದ್ದ. ನಾವು ಹೋಗುತ್ತಿದ್ದುದು ಕದ್ದು ಹೂ ಕೊಯ್ಯುವುದಕ್ಕೆ! ಆ ಹೂವುಗಳನ್ನು ಅಕ್ಕಪಕ್ಕದ ಮನೆಗಳಿಗೆ ದೇವರ ಪೂಜೆಗೆಂದು ಕೊಡುತ್ತಿದ್ದೆವು. ನಮಗೆ ಅದೊಂದು ಸಾಹಸದ ಕೆಲಸವಾಗಿತ್ತು. ನಾವು ಹೂವು ಕೊಡುತ್ತಿದ್ದ ಮನೆಗಳಲ್ಲಿ ನಮಗೆ ಆಗ
ಕಾಫಿ ತಿಂಡಿ ಬೇರೆ ಸಿಗುತ್ತಿತ್ತು!

ಒಂದು ಬೆಳಗಿನ ಜಾವ ನಾವು ದೇವಸ್ಥಾನದ ಮ
ಮೇಲೆ ಇದ್ದೆವು. ಆ ಹೊತ್ತಿಗೆ ಕೇಶವ ಘನಪಾಠಿ
ದೇವಸ್ಥಾನಕ್ಕೆ ಬಂದುಬಿಟ್ಟರು. ಅವರನ್ನು ನೋಡಿ ನಾ
ಗಾಬರಿಯಾದೆವು. ನಾವು ಮರದ ಮೇಲಿರುವುದು ಅವ
ತಿಳಿಯದಿರಲಿ ಅಂತ ಮಾತು ನಿಲ್ಲಿಸಿ ರೆಂಬೆ ಮರೆಗೆ ಹು
ಕೊಂಡೆವು. ಆದರೆ ಯಾರೋ ಮರದ ಮೇಲಿರುವ
ಅವರಿಗೆ ತಿಳಿದುಹೋಗಿತ್ತು. ಮರದ ಕೆಳಗೆ ನಿ
''ಯಾರ್ರೋ ಅದು, ಬೆಳಗಿನ ಜಾವದಲ್ಲೇ ಮ
ಹತ್ತಿರೋರು ?'' ಅಂತ ಕೂಗಿದರು. ಉಪಾಯವಿ
ಕೆಳಗಿಳಿದೆವು. ''ಯಾಕೆ ಮರ ಹತ್ತಿದ್ದಿರಿ'' ಅಂತ ಅವ
ಕೇಳಿದಾಗ ''ಊರು ನೋಡುವುದಕ್ಕೆ'' ಅಂತ ನಾ
ಉತ್ತರ ಕೊಟ್ಟೆ. ಅವರಿಗೆ ನಗು ಬಂದಿರಬೇಕು. ''ಹಿ
ಮಂಜು ಸುರಿಯುತ್ತಿರುವಾಗ ಊರು ನೋಡಲು ಮರ ಹತ್ತಿದ್ದೆಯೊ ? ಬಹಳ ಚಾ
ಯಾಗಿ ಕಾಣ್ತೀಯೆ. ಅದಿರಲಿ ಮೇಲೆ ಎತ್ತಿಕಟ್ಟಿರುವ ನಿಮ್ಮ ಪಂಚೆಯ ಮಡಿಕೆಯಲ್ಲಿ ಇದ
ದೇನು'' ಎಂದರು. ಈಗ ನಾವು ಸಿಕ್ಕಿಬಿದ್ದೆವು. ''ಅದು ಸಂಪಿಗೆ ಹೂವು. ದೇವರ ಪೂ
ಅಂತ ಕೊಯ್ದದ್ದು'' ಎಂದೆ. ಘನಪಾಠಿಗಳು ''ಓಹೋ ದೇವರ ಪೂಜೆಗೆ ಕದ್ದು ಹೂ ಕೊ
ತ್ತಿದ್ದಿರೋ, ಭೇಷ್'' ಅಂತ ನಕ್ಕು, ನಮ್ಮ ತಲೆ ಸವರಿ ''ಇರಲಿ, ಆ ಹೂವು ನೀವೇ ಇ
ಕೊಳ್ಳಿ. ನಿಮಗೆ ದೇವರ ಪೂಜೆಯ ಸರಿಯಾದ ರೀತಿ ಹೇಳಿಕೊಡುತ್ತೀನಿ ಬನ್ನಿ'' ಅಂತ ಹ
ನಮ್ಮನ್ನು ಕರೆದೊಯ್ದು ಅಲ್ಲೇ ಇದ್ದ ಒಳಜಗುಲಿಯ ಮೇಲೆ ಎದುರಿಗೆ ಕೂರಿಸಿಕೊಂಡ
''ಎಲ್ಲಿ ನಾನು ಹೇಳಿಕೊಡುವುದನ್ನು ತಪ್ಪಿಲ್ಲದೆ ಹೇಳಬೇಕು, ತಿಳೀತಾ'' ಎಂದವರೇ

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ

ಎಂಬ ಶ್ಲೋಕವೊಂದನ್ನು ಭಾಗಭಾಗವಾಗಿ ಹೇಳಿಕೊಟ್ಟರು. ''ಇದು ಮಹಾ

ದಾಸನ 'ರಘುವಂಶ' ಎಂಬ ಕಾವ್ಯದ ಮೊದಲ ಶ್ಲೋಕ'' ಎಂದು ಹೇಳಿ ಅದರ ಅರ್ಥ ರಿಸಿದರು. ''ನಾಳೆ ಮತ್ತೆ ಈ ಹೊತ್ತಿಗೇ ಬನ್ನಿ. ಹೂ ಕೊಯ್ಯುವುದಕ್ಕೆ ಅಲ್ಲ, ಸ್ಕೃತ ಕಲಿಯುವುದಕ್ಕೆ'' ಎಂದರು. ಅವರು ನಮ್ಮನ್ನು ಮರದಿಂದ ಕೆಳಗಿಳಿಸಿದಾಗ ನಾಲ್ಕು ಏಟು ಕೊಡುತ್ತಾರೋ ಅಥವಾ ಅರ್ಚಕರಿಗೆ ಹಿಡಿದುಕೊಡುತ್ತಾರೋ ತ ಭಯವಾಗಿತ್ತು. ಆದರೆ ತಪ್ಪು ಮಾಡಿದ್ದ ನಮ್ಮ ತಲೆ ನೇವರಿಸಿ ಪ್ರೀತಿಯಿಂದ ಯ ಶ್ಲೋಕ ಹೇಳಿಕೊಟ್ಟ ಅವರ ಬಗ್ಗೆ ನಮಗೆ ತುಂಬ ಗೌರವವುಂಟಾಯಿತು.

ಅಲ್ಲಿಂದ ಮುಂದೆ ಬಹಳ ಕಾಲ ಅವರ ಬಳಿ ಪಾಠಕ್ಕೆ ಹೋಗುತ್ತಿದ್ದೆ. ಅವರ ೇಧನೆಯ ರೀತಿ ಬಹಳ ಮೇಲು ನೆಲೆಯದಾಗಿತ್ತು. ಮೊದಲು ಶ್ಲೋಕ, ಆಮೇಲೆ ರ ಅರ್ಥ, ಪದಗಳ ಅನ್ವಯ ಕ್ರಮ, ಸಂಧಿ ಸಮಾಸದಂಥ ವ್ಯಾಕರಣಾಂಶಗಳ ರಣೆ, ಆಕಾಂಕ್ಷೆಯ ಪ್ರಕಾರ ಅರ್ಥ ಹೇಳುವುದು. ಇವೆಲ್ಲ ಮುಗಿಯುವ ಹೊತ್ತಿಗೆ ದು ಶ್ಲೋಕಕ್ಕೆ ಅರ್ಧ ಗಂಟೆ ಮೀರುತ್ತಿತ್ತು. ಆದರೆ ಶ್ಲೋಕ ಪ್ರತ್ಯಂಗುಲ ವಶ ಗುತ್ತಿತ್ತು. ಆ ದಿನ ಕಲಿತ ಶ್ಲೋಕವನ್ನು ಬರೆದುಕೊಂಡು, ಕಂಠಪಾಠ ಮಾಡಿ ಮಾರನೆಯ ಒಪ್ಪಿಸಬೇಕಾಗಿತ್ತು. ಅದನ್ನೆಲ್ಲ ನಾನು ಉತ್ಸಾಹದಿಂದಲೇ ಮಾಡುತ್ತಿದ್ದೆ. ಅವರ ಹತ್ತಿರ ಷ್ಟು ಕಾಲ ಪಾಠ ಕಲಿಯಲು ಬೇಕಾದ ಶ್ರದ್ಧೆ ನನ್ನಲ್ಲಿದ್ದುದನ್ನು ನೆನೆದರೆ ಈಗ ನನಗೇ ರ್ಯವಾಗುತ್ತದೆ. ಹೀಗೆ ಚಿಕ್ಕವಯಸ್ಸಿನಲ್ಲೇ ಕುಮಾರವ್ಯಾಸ, ಕಾಳಿದಾಸರಂಥ ವಾಕವಿಗಳ ಕಾವ್ಯ ನನ್ನ ಮೇಲೆ ಕೃಪೆ ಮಾಡಿದ್ದುವು. ಮುಂದೆ ಪಂಪ, ರನ್ನ, ನಾಗವರ್ಮ, ತ್ರಭಟ್ಟರಂಥ ಕನ್ನಡ ಕವಿಗಳ ಸಂಸ್ಕೃತ ಪದಭರಿತ ವ ಕಾವ್ಯವನ್ನು ಅಭ್ಯಾಸ ಮಾಡುವಾಗ ಅವು ಜೊತೆ ್ಯಾರ್ಥಿಗಳಿಗಿಂತ ನನಗೆ ಹೆಚ್ಚು ಹತ್ತಿರವಾದುವು.

ನನ್ನ ವಿದ್ಯಾಭ್ಯಾಸ ನಿಂತೇಹೋಯಿತು ಎಂಬ ಆತಂಕ ನ್ನು ನಡುನಡುವೆ ಎದುರಿಸುತ್ತಲೇ ಇಂಟರ್ ಡಿಯೆಟ್ ಕಾಲೇಜಿನ ಘಟ್ಟ ತಲುಪಿತು. ಅಲ್ಲಿ ಎಸ್. ಶಿವರುದ್ರಪ್ಪನವರು ನಮಗೆ ಕನ್ನಡ ಅಧ್ಯಾಪಕ ಬಂದರು. ಅವರು 'ರುದ್ರವೀಣೆ' ಎಂಬ ಕಥಾ ಲನವನ್ನೂ 'ಗಿರಿಜಾ ಕಲ್ಯಾಣ' ಎಂಬ ಕಾವ್ಯ ಗ್ರಹವನ್ನೂ ನಮಗೆ ಪಾಠ ಹೇಳುತ್ತಿದ್ದರು. ಅವರ ದ ರೀತಿ ವಿದ್ಯಾರ್ಥಿಗಳಿಗೆಲ್ಲ ಬಹಳ ಪ್ರಿಯ ತ್ತು. ಉಳಿದ ಪೀರಿಯಡ್ಡುಗಳಲ್ಲಿ ಅರ್ಧಂಬರ್ಧ ಇರುತ್ತಿದ್ದ ನಮ್ಮ ತರಗತಿ ಅವರ ಪೀರಿಯಡ್ಡಿನಲ್ಲಿ ತುಂಬಿಹೋಗಿರುತ್ತಿತ್ತು. ಮೊದಲ ವರ್ಷದ ಫಸ್ಟ್ ಟರ್ಮ್ ಪರೀಕ್ಷೆ ಆದ ಮೇಲೆ ಜಿ.ಎಸ್.ಎಸ್. ಮೌಲ್ಯ ಪನ ಮಾಡಿದ ನಮ್ಮ ಉತ್ತರ ಪತ್ರಿಕೆಗಳನ್ನು ತರಗತಿಗೆ ತಂದರು. ಉಪಾಧ್ಯಾಯರು ರದ ಪ್ರತಿಯೊಂದು ಸಾಲನ್ನೂ ಓದಿ ಅಂಕ ಹಾಕುತ್ತಿದ್ದ ಕಾಲ ಅದು ! ಜಿ.ಎಸ್.ಎಸ್. ರ ಪತ್ರಿಕೆಗಳ ಕಟ್ಟಿನಿಂದ ಒಂದನ್ನು ಹೊರತೆಗೆದು ಅದರ ಕೆಲವು ಸಾಲುಗಳನ್ನು ತಿಗೆ ಓದಿ ಮೆಚ್ಚಿಕೆ ಸೂಚಿಸಿದರು. ''ಗಿರಿಜಾ ಕಲ್ಯಾಣ ಒಂದು ಪುರಾಣ ಕಥೆ ಮಾತ್ರ . ಶಕ್ತಿಸ್ವರೂಪಳಾದ ಗಿರಿಜೆ ವಿಜ್ಞಾನದ ಸಂಕೇತ; ನೃತ್ಯದ ಗುರುವಾದ ಶಿವ ು ಸಂಕೇತ. ಅವರ ಕಲ್ಯಾಣ ಕೇವಲ ಗಂಡು ಹೆಣ್ಣಿನ ವಿವಾಹವಲ್ಲ, ವಿಜ್ಞಾನ ಳ ಮಹಾಸಂಗಮ. ಅಂಥ ಸಂಗಮದಿಂದಲೇ ಇಂದಿನ ಜಗತ್ತಿಗೆ ಮುಕ್ತಿ'' – ದಿ ಮಾತು ಅಲ್ಲಿತ್ತು. ನಾನು ಓದಿದ್ದ, ಕೇಳಿದ್ದ, ನಂಬಿದ್ದ ಧೋಂಗಿಗಳನ್ನೆಲ್ಲ ಬಹಳ ಕವಾಗಿ ವರ್ಣಿಸಿದ್ದೆ! ಮೇಸ್ಟ್ರು ''ಇದನ್ನು ಬರೆದ ವಿದ್ಯಾರ್ಥಿ ಯಾರು ?'' ಕೇಳಿದರು. ನಾನು ಹೊರಗೆ ಸಂಕೋಚಪಡುತ್ತ, ಒಳಗೆ ಹೆಮ್ಮೆಪಟ್ಟುಕೊಳ್ಳುತ್ತ ಗೆ ಎದ್ದು ನಿಂತೆ. ಅವರು ''ಚೆನ್ನಾಗಿ ಬರೆದಿದ್ದೀರಿ, ತಗೊಳ್ಳಿ. ಹೀಗೇ ಚೆನ್ನಾಗಿ ಅಂತ ಹೇಳಿ ಪತ್ರಿಕೆ ಕೊಟ್ಟರು. ಕೈತುಂಬ ನಂಬರು ಹಾಕಿದ್ದರು. ನಾನೇ ಕ್ಲಾಸಿಗೆ – ಎಲ್ಲರಿಗಿಂತ ಬಹಳ ಮೇಲೆ. ಎರಡನೆಯವನು ಅಲ್ಲೆಲ್ಲೋ ಕೆಳಗೆ ಪಾತಾಳದಲ್ಲಿದ್ದ!

ಗ ಶಿವಮೊಗ್ಗದಲ್ಲಿದ್ದದ್ದು ಇಂಟರ್‌ಮೀಡಿಯೆಟ್ ಕಾಲೇಜು ಮಾತ್ರ. ಡಿಗ್ರಿ ಕಾಲೇಜು ಬಂದಿರಲಿಲ್ಲ. ಅದು ಮುಗಿದ ಮೇಲೆ ನಾನು ಬಿ.ಎ. ಆನರ್ಸ್ ಸೇರಲು ಮೈಸೂರಿಗೆ ಟೆ. ನನ್ನದು ಆಗಲೂ ಕಿತ್ತು ತಿನ್ನುವ ಬಡತನ. ಆದರೂ ಓದಲೇಬೇಕೆಂಬ ಗಟ್ಟಿ . ಟಿಕೆಟ್ ಇಲ್ಲದೆಯೇ ರೈಲು ಹತ್ತಿಬಿಟ್ಟೆ! ಸಿಕ್ಕಿಬೀಳದೆ ಮೈಸೂರು ಸೇರಿದೆ. ಆಗ ೇಬಿನಲ್ಲಿ ಇದ್ದುದೆಲ್ಲ ಒಂದು ರೂಪಾಯಿ ಹದಿಮೂರು ಆಣೆ !

ೈಸೂರಿನಲ್ಲಿ ಸಾಕಷ್ಟು ಅಲೆದು ತ. ಸು. ಶಾಮರಾಯರ ಮನೆ ಪತ್ತೆ ಮಾಡಿದೆ. ರಾಜ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದ ಅವರು ಪರೋಪಕಾರಿಗಳೆಂದೂ ಕಷ್ಟದಲ್ಲಿರುವ ವಿದ್ಯಾರ್ಥಿಗಳಿಗೆ ಸಹಾಯ ಮಾಡುವವರೆಂದೂ ಕೇಳಿದ್ದೆ. ಅವರನ್ನು ಕಂಡು ನನ್ನ ಕಷ್ಟವನ್ನೆಲ್ಲ ಹೇಳಿಕೊಂಡೆ. ''ಏನೇ ಆದರೂ ಓದಲೇಬೇಕೆಂದು ಆಸೆಪಟ್ಟು ಬಂದುಬಿಟ್ಟಿದ್ದೇನೆ ಸಾರ್'' ಅಂದೆ. ಶಾಮರಾಯರು ಹೇಳಿದರು:

''ಎಲಾ ನಿನ್ನ! ಇಷ್ಟು ಕಷ್ಟದಲ್ಲಿದ್ದೀಯ. ಓದಿಸೋರು ಯಾರೂ ಇಲ್ಲ. ಆದರೂ ಓದ್ತೀನಿ ಅಂತಿಯಲ್ಲೋ. ಪರವಾಗಿಲ್ಲ, ಗಟ್ಟಿಪಿಂಡ! ಇರಲಿ, ನಾನೇನು ಮಾಡಬೇಕು ?''

''ನಿಮ್ಮ ಮನೆಗೆ ವಾರದಲ್ಲಿ ಒಂದು ದಿನ ಊಟಕ್ಕೆ ಬರಲಾ ?''

''ಅಯ್ಯೋ ಮುಂಡೇದೇ! ಅದಕ್ಕೆ ಕೇಳಬೇಕೇನೋ ? ಒಂದಲ್ಲದಿದ್ದರೆ ನಾಲ್ಕು ದಿನ ಬಾ. ಬೇರೆ ಮನೇಲೂ ವಾರ ಸಿಕ್ಕರೆ ನೋಡು. ನಮ್ಮ ಮನೇಗೆ ಈಗಾಗಲೇ ನಾಲ್ಕೈದು ಹುಡುಗರು ಬರ್ತಾ ಇರೋದ್ರಿಂದ ಹಾಗೆ ಹೇಳ್ತಿದೀನಿ ಅಷ್ಟೆ.''

''ಆಗಲಿ ಸಾರ್, ಬರ್ತೀನಿ''

''ಸ್ವಲ್ಪ ನಿಲ್ಲು, ನಿನ್ನ ಊಟ ಆಗಿದೆಯಾ ?''

ಆಗ ಮಧ್ಯಾಹ್ನ ಎರಡು ಗಂಟೆ. ನನ್ನ ಊಟ ಆಗಿರಲಿಲ್ಲ. ಆದರೆ ಹೇಳಲು ಹಿಂಜರಿಕೆ. ''ಪರವಾಗಿಲ್ಲ ಸಾರ್'' ಅಂದೆ.

''ಛೀ ನಿನ್ನ ಮುಂಡಾ ಮೋಚ್ತು! ಪರವಾಗಿಲ್ಲವಂತೆ. ಏನು ಪರವಾಗಿಲ್ಲ? ವಾರಾನ್ನಕ್ಕೆ ಬರ್ತೀನಿ ಅಂತೀಯ. ಆದರೂ ಊಟ ಆಗಿಲ್ಲ ಅಂತ ಹೇಳೋಕೆ ನಾಚಿಕೆ. ಹುಚ್ಚು ಮುಂಡೇದೇ! ಈಗೇನೂ ನಿನಗೋಸ್ಕರ ಅಡಿಗೆ ಮಾಡಿಸಲ್ಲ. ಎಲ್ಲರ ಊಟ ಆಗಿದೆ.


ಲಕ್ಷ್ಮೀನಾರಾಯಣ ಭಟ್ಟ

ಏನಾದರೂ ಇದ್ದರೆ ತಿನ್ನುವಿಯಂತೆ'' ಎಂದು ಹೇಳಿ ಶಾಮರಾಯರು ಅಲ್ಲೇ ಕುಳಿತಿದ್ದ ಒಬ್ಬ ಹುಡುಗನಿಗೆ ಹೇಳಿದರು :

''ಏ ಸುಬ್ಬಣ್ಣ, ಒಳಗೆ ಹೋಗಿ ನೋಡು. ತಿನ್ನಲು ಏನಾದರೂ ಇದ್ದರೆ ಸ್ವಲ್ಪ ತೊಗೊಂಡು ಬಾ.''

ಸುಬ್ಬಣ್ಣ (ಅವರ ಅಣ್ಣ ವೆಂಕಣ್ಣಯ್ಯನವರ ಮಗ) ಒಳಗೆ ಹೋದ. ಬರುವಾಗ ಒಂದು ಪ್ಲೇಟಿನಲ್ಲಿ ಎಲೆಕೋಸಿನ ಹುಳಿ ಕಲಸಿದ ಅನ್ನ ತಂದುಕೊಟ್ಟ. ಶಾಮರಾಯರು ಹೇಳಿದರು:

''ಅದನ್ನು ತಗೊ. ಆ ಕುರ್ಚಿ ಮೇಲೆ ಕುಳಿತುಕೊಂಡು ನಿಧಾನವಾಗಿ ತಿನ್ನು.'' ತಿಂದಾದ ಮೇಲೆ ಶಾಮರಾಯರು ಕೇಳಿದರು :

''ಊಟಕ್ಕೆ ಯಾವಾಗಿನಿಂದ ಬರ್ತೀಯ ?'' ನಾನೆಂದೆ ''ನಾಳೆಯಿಂದ.''

''ಇವತ್ತು ರಾತ್ರಿ ಬರೀ ನೀರು ಕುಡಿದು ಮಲಗ್ತೀಯಾ ? ಹುಚ್ಚಪ್ಪ, ರಾತ್ರೀನೂ ಬಂದುಬಿಡು. ಊಟಕ್ಕೆ ನಿನಗಾಗೇ ಕಾಯ್ತಿರ್ತೀನಿ.''

ನನ್ನ ಕಂಠ ಕಟ್ಟಿಬಂತು. ಕಣ್ಣಲ್ಲಿ ನೀರು ತುಂಬಿಕೊಂಡಿತು. ಅವರು ಮಹಾರಾಜ ಕಾಲೇಜಿನಲ್ಲಿ ಪ್ರಸಿದ್ಧ ಅಧ್ಯಾಪಕರು. ನಾನೋ ಊಟಕ್ಕೂ ದಿಕ್ಕಿಲ್ಲದ ಒಬ್ಬ ಬೀದಿ ಹುಡುಗ. ಅವರು ಊಟಕ್ಕೆ ನನಗಾಗಿ ಕಾಯ್ತಾರಂತೆ! ನಾನು ಎಲ್ಲಿ ಊಟವಿಲ್ಲದೆ ಉಪವಾಸ ಬೀಳ್ತೀನೋ ಅಂತ ಇದೆಲ್ಲ!

''ಖಂಡಿತ ಬರ್ತೀನಿ ಸಾರ್'' ಅಂದೆ.

''ಅದು ಸರಿ ಎಲ್ಲಿ ಇಳಕೊಂಡಿದೀಯ ?''

''ನನ್ನ ಸ್ನೇಹಿತರೊಬ್ಬರು ರೂಮು ಮಾಡ್ಕೊಂಡಿದಾರೆ. ಅವರ ವಿಳಾಸ ಇದೆ. ಅಲ್ಲಿಗೆ ಹೋಗ್ತೀನಿ'' ಅಂತ ನಮಸ್ಕಾರ ಹೇಳಿ ಹೊರಬಂದೆ. ನನ್ನ ಮನಸ್ಸು ಆಗಲೇ ಹುರುಪುಗೊಂಡಿತ್ತು. ನಾನು ಮೈಸೂರಿನಲ್ಲಿ ಓದುವುದು ಮನಸ್ಸಿನಲ್ಲಿ ನಿಶ್ಚಿತವಾಗಿತ್ತು.

ಮೈಸೂರಿನಲ್ಲಿ ನನಗೆ ಇನ್ನೂ ಹಲವರು ಹಿರಿಯರ ಸಹಾಯ ದೊರೆಯಿತು. ತೀ. ನಂ. ಶ್ರೀಕಂಠಯ್ಯ, ಎಸ್. ವಿ. ರಂಗಣ್ಣನವರ ಮನೆಗಳಲ್ಲಿ ನನಗೆ ವಾರಾನ್ನದ ಅವಕಾಶ ಸಿಕ್ಕಿತು. ಡಿ. ಎಲ್. ನರಸಿಂಹಾಚಾರ್ಯ ಮತ್ತು ಎಸ್. ವಿ. ಪರಮೇಶ್ವರ ಭಟ್ಟರು ಮಹಾರಾಜ ಕಾಲೇಜಿನ 'ಹೆಲ್ತ್ ಕಿಚನ್' ಎಂಬ ಕ್ಯಾಂಟೀನಿನಲ್ಲಿ ನನಗೆ ವಾರಕ್ಕೆ ಒಂದು ದಿನದಂತೆ ಊಟದ ಅವಕಾಶ ಕಲ್ಪಿಸಿಕೊಟ್ಟರು. ಮಹಾರಾಜ ಕಾಲೇಜಿನಲ್ಲಿ ಪ್ರಸಿದ್ಧರಾದ ಗುರುಗಳ ಪಾಠ ಕೇಳುತ್ತ ಮೂರು ವರ್ಷಗಳ ಬಿ.ಎ. ಆನರ್ಸ್ ತರಗತಿಯನ್ನೂ, ಎಂ.ಎ. ತರಗತಿಯನ್ನೂ ಓದಿ ಮುಗಿಸಿದೆ.

ಡಾ|| ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ
ನಂ. ೨೨೬೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦




# ಗುಗ್ಗುಗಳಿಗೆ ನೀಡುವ ಇಗ್ನೊಬೆಲ್ ಪ್ರಶಸ್ತಿ




ವಿಜಯ ವಾಮನ

**ಮೊ**ನ್ನೆ ಡಿಸೆಂಬರ್ ಹತ್ತನೇ ತಾರೀಕು ಅಮೆರಿಕಾದ ದೊಡ್ಡಣ್ಣ ...ರು ಓಸ್ಲೊ ನಗರದ ಸಿಟಿ ಹಾಲ್‌ನಲ್ಲಿ ಈ ಬಾರಿ ನೊಬೆಲ್ ಶಾಂತಿ ...ಸ್ತಿಯನ್ನು ಸ್ವೀಕರಿಸಿ 'ಅಮೋಘ' ಭಾಷಣ ಮಾಡಿದರು. ಅಮೆರಿಕಾ ...ಲಿಟರಿ ಸೈನಿಕರನ್ನೂ ಮೀರಿಸಿದ ಅವರ, ನಿಟಮ್ಮನೆ ಸೆಟೆದು, ಕಟ್ಟಿಗೆ ...ಡಿನಂತೆ ನೆಟ್ಟಗೆ ನಿಂತಿದ್ದ, ಭಂಗಿ ಹಾಗೂ ಅದೇ ಕಟ್ಟಿಗೆ ತುಂಡಿನಂಥ ...ಖಭಾವ, ಜಿಗಿದ ಮೇಲ್ತುಟಿ, ಮೇಲೆತ್ತಿದ್ದ ಗದ್ದ ಮುಂತಾದ ಭಾವ ...ಗಿಗಳಿಗೂ ಸ್ವೀಕರಿಸುತ್ತಿದ್ದ ''ಶಾಂತಿ'' ಪುರಸ್ಕಾರಕ್ಕೂ ಯಾವುದೇ



ಸಂಬಂಧವಿರಲಿಲ್ಲ. ಒಬಾಮ ತನ್ನ ಮಾತಿನಲ್ಲಿ 'ಶಾಂತಿ'ಗಾಗಿ 'ಯುದ್ಧ' ಎಂಬ ಹೊಸ ಘೋಷಣೆಯೊಂದನ್ನು ಅಮೆರಿಕಾದ ರೋಬಾಟ್ ಸೈನಿಕನ ಹಾಗೆಯೇ ಉಚ್ಚರಿಸಿದರು. ಇದೇನೂ ಹೊಸ ವಿಷಯವಲ್ಲ. ಘೋಷಣೆ ಹೊಸ ರೀತಿಯದಾಗಿ ಕೇಳಿಸುತ್ತಿದೆ ಅಷ್ಟೇ. ಆ ದೇಶದ ಹಲವಾರು ಅಧ್ಯಕ್ಷರುಗಳು ಮಾಡಿಹೋಗಿದ್ದು ಇಂಥಾ ತೆರೆ ಮುಸುಕಿನ ಶಾಂತಿಯ ಪ್ರಸ್ತಾಪವನ್ನೇ! ನ್ಯಾಯಯುತ ಯುದ್ಧಕ್ಕಾಗಿ ತನ್ನ ದೇಶ ಸನ್ನದ್ಧವಾಗ ಬೇಕೆಂದು ಇಂಥಾ ಬಿಗ್ ಬ್ರದರ್‌ಗಳು ಕರೆ ನೀಡುತ್ತಾ ಬಂದಿದ್ದಾರೆ. ವಿಯಟ್ನಾಂ, ಕ್ಯೂಬಾ, ಪನಾಮ, ಈಕ್ವೊಡೋರ್, ಅಂಗೋಲ, ಇರಾಕ್, ಇಂಡೋನೇಷ್ಯಾ, ಇರಾನ್, ಅಫ್ಘಾನಿಸ್ತಾನ್, ಸೋಮಾಲಿಯಾ ಮುಂತಾದ ಕಡೆಗಳಲ್ಲೆಲ್ಲ ಇವರು ''ನ್ಯಾಯಯುತ ಯುದ್ಧವನ್ನೇ'' ಆಡುತ್ತಾ ಬಂದಿದ್ದಾರೆ, ಯುದ್ಧವನ್ನ ಸಮರ್ಥಿಸಿಕೊಳ್ಳುತ್ತಾ ಬಂದಿದ್ದಾರೆ! ಒಬಾಮ ಮಹಾಶಯರಂತೂ ಗಾಂಧಿಇಸಂ ಹಾಗೂ ಅಹಿಂಸೆಗಳಿಂದ ಇಂದಿನ ದಿನಗಳಲ್ಲಿ ಯಾವ ಉಪಯೋಗವಿಲ್ಲವೆಂದು 'ಶಾಂತಿ' ಪ್ರಶಸ್ತಿ ಪಡೆದುಕೊಳ್ಳುವಾಗ ಬಡಬಡಿಸುತ್ತಾರೆ. ತನ್ನ ದೇಶ 'ಯುದ್ಧದ ಮುನ್ನಡೆಯಲ್ಲಿ ಲಾಂಛನಧಾರಿ' ಎನ್ನುವ 'ಉದಾತ್ತ' ಕಲ್ಪನೆಯನ್ನು ಹರಿಯ ಬಿಡುತ್ತಾರೆ. ತನ್ನ ಅಧಿಕಾರದ ಮೊದಲ ವರ್ಷದಲ್ಲೇ ೩೦,೦೦೦ ಸೈನಿಕರನ್ನು ಅಫ್ಘಾನಿಸ್ತಾನದ ಸಮರಾಂಗಣಕ್ಕೆ ನುಗ್ಗಿಸಿದ ಈ ದೊಡ್ಡಣ್ಣನಿಗೆ ಇಂಥಾ 'ಅಮೋಘ' ಕರ್ತವ್ಯ ಪಾಲನೆ ಮಾಡಿದ ಒಂಬತ್ತೇ ದಿನಗಳಲ್ಲಿ ನೊಬೆಲ್ ಮಂಡಳಿ 'ಶಾಂತಿ' ಪುರಸ್ಕಾರ ಸಲ್ಲಿಸಿ ಸನ್ಮಾನ ಮಾಡುತ್ತದೆ! ತನ್ನ ಘನ ಉದ್ದೇಶಕ್ಕಾಗಿ ಅಂತರರಾಷ್ಟ್ರೀಯ ಬೆಂಬಲವನ್ನು ಒಬಾಮ ಇದೇ ವೇದಿಕೆಯಿಂದ ಕಸಿದುಕೊಳ್ಳಲು ಪ್ರಯತ್ನಿಸುತ್ತಾನೆ.

ಈ ಲೇಖನದ ಶೀರ್ಷಿಕೆ ಹಾಸ್ಯ ಲೇಖನವೊಂದಕ್ಕೆ ನೀಡಬಹುದಾಗಿದ್ದರೂ ಅಷ್ಟೇ ಗಂಭೀರವಾದ ಆಲೋಚನೆಯೂ ಹೌದು ಎನ್ನಿಸುತ್ತಿದೆ.

ನೊಬೆಲ್ ಪ್ರಶಸ್ತಿಗಳಿಗೆ ವಿರುದ್ಧವಾಗಿ ನೀಡುವ ಪ್ರಶಸ್ತಿಗಳಿಗೆ ಇಗ್ನೊಬೆಲ್ ಪ್ರಶಸ್ತಿ ಎಂದು ಕರೆಯುತ್ತಾರೆ. ಪ್ರಪಂಚದಲ್ಲಿ ನಾನಾ ಬಗೆಯ ಹುಚ್ಚುಗಳಿವೆ. ಅವುಗಳಲ್ಲಿ ಈ ಇಗ್ನೊಬಲ್ ಪ್ರಶಸ್ತಿ ಪ್ರಹಸನವೂ ಒಂದು. ನೀವು ಅಮೆರಿಕಾದ ಯಾವುದೇ ಟಿವಿ ಚಾನೆಲ್‌ಗಳನ್ನು ಹಾಕಿಕೊಂಡರೂ ಇಂಥ ಒಂದಲ್ಲ ಒಂದು ಹಾಸ್ಯಾಸ್ಪದ ಕಾರ್ಯಕ್ರಮಗಳು ನೋಡಲು ಸಿಗುತ್ತವೆ. ದುರದೃಷ್ಟದ ವಿಷಯವೆಂದರೆ ನಮ್ಮ ಯುವಜನತೆ ಇಂಥವುಗಳಿಗೇ ಮಾರುಹೋಗುತ್ತಿರುವುದು.

ಈ ಸಾಲಿನಲ್ಲಿ ಇಂಗ್ಲೆಂಡಿನವರು ಈ 'ಅಮೋಘ' ಇಗ್ನೊಬಲ್ ಪ್ರಶಸ್ತಿಗಳನ್ನು ಬಾಚಿಕೊಂಡಿದ್ದಾರೆ. ಇಂಥವರಿಗೆ 'ಇಗ್ಸ್' ಎಂದು ಕರೆಯುತ್ತಾರಂತೆ. (ನಮ್ಮಲ್ಲಿ ಗುಗ್ಗುಗಳನ್ನು ಗುಗ್ಸ್ ಎನ್ನುತ್ತಾರಲ್ಲ!) ಈ ಪ್ರಶಸ್ತಿಗಳ ಬಗ್ಗೆ ಇಗ್ಸ್ ಮಹಾಶಯರೆಲ್ಲ ಹೆಮ್ಮೆಯಿಂದ ಬೀಗುತ್ತಾರಂತೆ. ಈ ಪ್ರಶಸ್ತಿಗಳನ್ನು ಯಾರೂ ಮಾಡಲಾಗದ, ಮಾಡಬಾರದ ಹಾಗೂ ಪುನರ್ ಪ್ರಯತ್ನಿಸಬಾರದ ಕಾರಣಗಳಿಗಾಗಿ ನೀಡಲಾಗುತ್ತದೆ. (ದಯವಿಟ್ಟು ಈ ಲೇಖನದ ಪ್ರಾರಂಭದ ಪ್ಯಾರವನ್ನು ಇನ್ನೊಮ್ಮೆ ಓದಿಕೊಳ್ಳಿ!). ಇದರ ಉದ್ದೇಶ ಹಾಸ್ಯಮಾಡುವುದು ಅಥವಾ ಹಾಸ್ಯಾಸ್ಪದವಾಗುವುದು, ನಂತರ 'ಚಿಂತನೆ'ಗೆ ತೊಡಗುವುದು.

ಈ ಸಾಲಿನ ಪ್ರಶಸ್ತಿ ಸಮಾರಂಭ ಕೆಲವು ದಿನಗಳ ಹಿಂದೆ ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ನಡೆಯಿತು. ನೊಬೆಲ್ ಪ್ರಶಸ್ತಿ ವಿಜೇತ ಪ್ರತಿಷ್ಠಿತ ವಿಜ್ಞಾನಿಗಳೇ ಈ ವಿಚಿತ್ರ ಇಗ್ನೊಬೆಲ್ ಪ್ರಶಸ್ತಿಗಳನ್ನು ವಿತರಿಸಿದರು! ಎಂಟು ವರ್ಷದ ಬಾಲೆಯೊಬ್ಬಳು ಪ್ರಶಸ್ತಿ ವಿಜೇತರಿಗೆ ಭಾಷಣ ಮಾಡಲು ಕೇವಲ ೬೦ ಸೆಕೆಂಡುಗಳನ್ನು ನೀಡಿದಳಂತೆ.

ಈ ಮಹತ್ಕಾರ್ಯಕ್ಕೆ, ಇಂಥಾ ವಿಚಿತ್ರ ಅಸಾಧ್ಯಮಯ ಸಂಶೋಧನೆಗಳ ಮಹಾಸಂಪುಟವೊಂದನ್ನು ಹಾರ್ವರ್ಡ್ ವಿಶ್ವವಿದ್ಯಾಲಯ ಪ್ರಕಟಿಸಿ ನಲಿಯುತ್ತದೆ. ನೊಬೆಲ್ ಪ್ರಶಸ್ತಿಗಳನ್ನು ವಿತರಿಸುವ ಸಂದರ್ಭಕ್ಕೆ ಸರಿಯಾಗಿ ಆಯೋಜಿಸಿ ಇಗ್ನೊಬೆಲ್ ಪ್ರಶಸ್ತಿಗಳನ್ನೂ ನೀಡಲಾಗುತ್ತದೆ. ಈ ಬಾರಿಯ ಇಂಥ ಗುಗ್ಗು-ಸಂಶೋಧನೆಗಳ ಪೈಕಿ ಕೆಲವು ಇಲ್ಲಿವೆ.

**ಅತ್ಯುತ್ತಮ ಜಾನುವಾರು ಔಷಧಿ ಸಂಶೋಧನೆ**

ನ್ಯೂಕಾಸಲ್ ಕೃಷಿ ವಿಶ್ವವಿದ್ಯಾಲಯದ ಇಬ್ಬರು ಘನಪಂಡಿತರಾದ ಕ್ಯಾಥರಿನ್ ಡಗ್ಲಾಸ್ ಮತ್ತು

ಪೀಟರ್ ರಾಲಿನ್‌ಸನ್ ಇವರ ಅದ್ವಿತೀಯ ಸಂಶೋಧನೆಗಾಗಿ ಪ್ರಶಸ್ತಿ ಲಭಿಸಿದೆ. ಇವರ ಪ್ರಕಾರ ದನಗಳಿಗೆ ಒಳ್ಳೆಯ ನಾಮಕರಣ ಮಾಡಿದರೆ ಅವು ಕೆಚ್ಚಲು ತುಂಬಿ ಹೆಚ್ಚು ಹಾಲು ನೀಡಲು ಸಮರ್ಥ ವಾಗುತ್ತವೆ. ಉದಾಹರಣೆಗೆ, ದನವೊಂದಕ್ಕೆ ಡೈಸೀ ಎಂದು ಹೆಸರಿಟ್ಟರೆ ಹಾಲು ಹೆಚ್ಚು ಕರೆದುಕೊಳ್ಳ ಬಹುದು! (ನಮ್ಮ ಹಾಲು ಉತ್ಪಾದಕ ಸಂಘದವರು ಈ ದಿಸೆಯಲ್ಲಿ ಕಾರ್ಯೋನ್ಮುಖರಾಗಬೇಕು, ಕೂಡಲೇ. ಪಾಪ, ರೇವಣ್ಣನವರ ಅವಕಾಶ ಮುಗಿದು ಹೋಯಿತಲ್ಲಾ! ಅಮುಲ್ ಸಂಸ್ಥೆಯ ಶ್ರೀ ಕುರಿಯನ್ ಬವಳಿಬಂದು ಬಿದ್ದಿರಲು ಸಾಕು.) ಕ್ಯಾಥರಿನ್ ಅಂಬೋ ಪುಣ್ಯಾತಗಿತ್ತಿ ಹೇಳುತ್ತಾಳೆ: "ಮೊದಮೊದಲು ಸಾರ್ವಜನಿಕರಿಗೆ ಇದು ತಮಾಷೆಯಾಗಿ ಕಂಡರೂ ದನಗಳ ಕೆಚ್ಚಲಿನ ಮೇಲೆ ಹಾಲು ಉತ್ಪಾದನೆಯ ಒತ್ತಡ ಕಡಿಮೆಯಾಗುತ್ತದೆ." (ರಾಮಚಂದ್ರಪುರ ಮಠ ಸ್ವಾಮೀಜಿಯವರ ಅನುಭವ ಹೇಗೋ ?!)

**ಇಗ್ನೊಬೆಲ್ ಶಾಂತಿ ಪ್ರಶಸ್ತಿ**

ಸ್ವಿಟ್ಜರ್‌ಲ್ಯಾಂಡಿನ ಸ್ಟೀಫನ್ ಬಾಲಿಗರ್ ಎಂಬಾತ ನಿಗೆ ಈ ಶಾಂತಿ ಪ್ರಶಸ್ತಿ ಸಂದಿದೆ. ಇವನ ಅಸಾಧಾರಣ ಸಂಶೋಧನೆಯ ವಿಷಯವೇನೆಂದರೆ – ಬಿಯರ್ ತುಂಬಿದ ಬಾಟಲಿಯಿಂದ ಒಬ್ಬನ ತಲೆ ಒಡೆಯುವುದು ಸುಲಭವೋ ಅಥವಾ ಖಾಲಿ ಬಿಯರ್ ಬಾಟಲಿಯಿಂದ ತಲೆ ಒಡೆಯಬೇಕೋ? ಸಂಶೋಧನೆಯ ಫಲಿತಾಂಶ ಏನಪ್ಪಾ ಎಂದರೆ ಖಾಲಿ ಬಾಟಲಿಯೇ ಇಂಥಾ ಘನೋದ್ದೇಶಕ್ಕಾಗಿ ಹೆಚ್ಚು ಪರಿಣಾಮಕಾರಿ. ಇವರ ಮಾತುಗಳು – "ನನ್ನ ಪ್ರಕಾರ ಎರಡೂ ರೀತಿಯ ಬಾಟಲಿಗಳಿಂದಲೂ ತಲೆ ಒಡೆಯಬಹುದು. ಏಕೆಂದರೆ ಮಾನವನ ತಲೆಬುರಡೆಯನ್ನು ಸೀಳಬಲ್ಲ ಶಕ್ತಿ ಎರಡೂ ಬಾಟಲಿಗಳಲ್ಲಿ ಇವೆ." ಏಮೆನ್! (ಮತ್ತೊಮ್ಮೆ ಓದುಗರು ಲೇಖನದ ಪ್ರಾರಂಭದ ಪ್ಯಾರಾ ಗಮನಿಸಿ.)

**ಸಾರ್ವಜನಿಕ ಆರೋಗ್ಯ ರಕ್ಷಣೆಗಾಗಿ ಪ್ರಶಸ್ತಿ**

ಇಲಿನಾಯ್ ವಿಶ್ವವಿದ್ಯಾಲಯಕ್ಕೆ ಸೇರಿದ ಎಲಿನಾ ಬಾಡ್ನಾರ್ ಎನ್ನುವವರಿಗೆ ಈ ಪ್ರಶಸ್ತಿ ದೊರಕಿದೆ. ತುರ್ತುಪರಿಸ್ಥಿತಿಯ ಸಂದರ್ಭಗಳಲ್ಲಿ ಉಪಯೋಗಿಸ ಲೆಂದು ಈ 'ದಿಟ್ಟ' ಹೆಣ್ಣುಮಗಳು ವಿಶೇಷ ಬ್ರಾಗಳನ್ನು ಸಂಶೋಧಿಸಿದ್ದಾಳಂತೆ! ಇದನ್ನು ರಾಸಾಯನಿಕ ಯುದ್ಧ ಸಂದರ್ಭಗಳಲ್ಲಿ ಗ್ಯಾಸ್ ಮಾಸ್ಕ್‌ಗಳನ್ನಾಗಿ ಬಳಸ ಬಹುದಂತೆ. ಒಂದು ತನಗೆ; ಇನ್ನೊಂದು ಅವಶ್ಯಕತೆ ಇರುವ ಇನ್ನೊಬ್ಬರಿಗೆ. (ಬಚ್ಚಿಟ್ಟಿದ್ದು ತನಗೆ; ಬಿಚ್ಚಿಟ್ಟಿದ್ದು ಪರರಿಗೆ!) ಈ ಮಹೋನ್ನತ ಪ್ರತಿಭೆ ಹೇಳುತ್ತದೆ – "ನೋಡಿ, ಎಮರ್ಜೆನ್ಸಿಯಲ್ಲಿ ತತ್‌ಕ್ಷಣದಲ್ಲೇ ಲಭ್ಯ ವಾಗುವ ಅತ್ಯುಪಯೋಗಿ ಮಾಸ್ಕ್ ಇದು." (ಕಾಂಡಲೀಸ ರೈಸ್ ಅವರೇ ಕೇಳಿಸಿಕೊಳ್ಳುತ್ತಿದ್ದೀರಾ? ಮಲ್ಲಿಕಾ ಷೇರಾವತ್‌ಗಳೇ; ಬಸುಗಳೇ ಬನ್ನಿ ಬನ್ನಿ. ತನ್ನಿ ತನ್ನಿ. ಬೇಗ ಬರಲೀ ದೇವಾ ಎಮರ್ಜೆನ್ಸಿ! ಮುಕ್ತ-ಮುಕ್ತದ ಸೀತಾರಾಮ್ ನಿಮ್ಮ ರಣಗೀತೆ ಈಗೆಷ್ಟು ಪ್ರಸ್ತುತವಾಗಿದೆ ಗೊತ್ತೇನ್ರಿ? 'ಇರುಳ




ವಿರುದ್ಧ... ಬೆಳಕಿನ ಯುದ್ಧ... ಕೊನೆಯಿಲ್ಲದ ಕಾದಾ

**ಮಾನವ ಕಲ್ಯಾಣಕ್ಕಾಗಿ ಹೊಸ ಔಷಧೀ ಆವಿಷ್ಕಾರ ಪ್ರಶಸ್ತಿ**

ಕ್ಯಾಲಿಫೋರ್ನಿಯಾದ ಡಾನಲ್ಡ್ ಉಂಗರ್ ಪ್ರಶಸ್ತಿಗೆ ಭಾಜನರಾಗಿದ್ದಾರೆ. ೬೦ ವರ್ಷಗಳ ಸತತ

ತೆಬಿಡದ ಪ್ರಯತ್ನದ ಫಲವಾಗಿ ಕಂಡುಕೊಂಡ ್ಯದ ಪರಿ. ತನ್ನ ಎಡಗೈ ಬೆರಳುಗಳನ್ನು ಮೇಜಿನ ೇಲೆ ಎಡೆಬಿಡದೇ ಕುಕ್ಕೀ... ಕುಕ್ಕೀ... ಕುಕ್ಕೀ... ಗೆ ಸಂಧಿವಾತ ತಗಲುತ್ತದೆಯೋ ಇಲ್ಲವೋ ಎಂದು ೀಕ್ಷೆ ಮಾಡಿಕೊಂಡ ತ್ಯಾಗಜೀವಿ. (ಎಡ್ವರ್ಡ್ ್ನರ್, ಲೂಯಿ ಪಾಶ್ಚರ್ ಮುಂತಾದವರು ಅವರವರ ೀರಿಗಳಲ್ಲೇ ಉರುಳುರುಳೀ ನಗುತ್ತಿರುತ್ತಾರೋ ರವಾ...) ೮೩ ವರ್ಷದ ಈ ವೃದ್ಧ ಪ್ರತಿಭೆ ರ್ಡಿಯನ್ ಪತ್ರಿಕೆಗೆ ಉಸಿರಿದ್ದು ಹೀಗೆ – ೬೦ ವರ್ಷ ಾದರೂ ನನಗೆ ಆರ್ಥ್ರೈಟಿಸ್ ಬರಲೇಇಲ್ಲ! ಸ್ವರ್ಗ ್ಲಿರುವ ನಮ್ಮಮ್ಮನಿಗೆ ಕೂಗಿ ಹೇಳುತ್ತೇನೆ – 'ಅಮ್ಮಾ ು ತಪ್ಪು ಮಾಡಿದೆ, ತಪ್ಪು ಮಾಡಿದೆ; ತಪ್ಪು ಮಾಡಿದೆ.')

**ುಸ್ತ್ರಿ ಸಂಶೋಧನಾ ಪ್ರಶಸ್ತಿ**

ನ್ಯಾಷನಲ್ ಯೂನಿವರ್ಸಿಟಿ, ಮೆಕ್ಸಿಕೋದ ವಿಯರ್ ಮೋರಾಲಿಸ್ ಹಾಗೂ ಅವನ ಇಬ್ಬರು ೋದ್ಯೋಗಿಗಳಿಗೆ ಲಭಿಸಿದೆ. ಮೆಕ್ಸಿಕೊ ದೇಶದ ್ಟ್ರೀಯ ಪೇಯವಾದ ಟಕೀಲ ಎಂಬ ಮದ್ಯವನ್ನು ಸಿ, ಕುದಿಸಿ, ಕುದಿಸಿ ವಜ್ರದ ಹರಳನ್ನಾಗಿ ವರ್ತಿಸುವ ರಸವಿದ್ಯೆಗೆ ಸಂದ ಗೌರವ. (ನಮ್ಮ ್ಣಟಕದ ಹೆಮ್ಮೆಯ ಪುತ್ರರಾದ ಶ್ರೀಮಾನ್ ಮಲ್ಯ ಗೂ ಶ್ರೀ ಖೋಡೆಯವರ್ಯಾಕೆ ಇನ್ನೂ ಇಂಥಾ ಳೀತ ಪ್ರಯತ್ನಕ್ಕೆ ಕೈಹಾಕಿಲ್ಲ?)

**ನಶಾಸ್ತ್ರ ಸಂಶೋಧನೆಗೆ ಸಂದ ಪ್ರಶಸ್ತಿ**

ಜಪಾನ್ ದೇಶದ ಕಿಟಾಸಾಟೋ ವಿಶ್ವವಿದ್ಯಾಲಯದ ಂಯಾಕೀ ತಗುಚಿ, ಸೋಂಗ್‌ಗುಪೋ ಹಾಗೂ ಡಾಂಗ್ ಡಾಂಗ್ಲೇ ಇವರುಗಳಿಗೆ ದೊರಕಿದೆ. ದೈತ್ಯಾಕಾರದ ಡಾಗಳ ಕಕ್ಕಸ್ಸಿನಿಂದ ಅಡುಗೆಮನೆಯಲ್ಲಿರ ಂದಾದ ಶೇಕಡ ೯೦ ವಿಷಾಣು ಬ್ಯಾಕ್ಟೀರಿಯಗಳನ್ನು ಾಸ ಮಾಡಬಹುದಂತೆ. (ಕಾಶಿಯ ಗಂಗಾತಟದ ಪಾಂಡಾಗಳೇ... ಏನಂತೀರಿ?) ದೈತ್ಯ ಡಾಗಳು ಹೇರಳವಾಗಿ ಬೊಂಬು ಬೆಳೆಗಳನ್ನು ವುದರಿಂದ ಸಕಲ ವಿಷಾಣುಜೀವಿ ನಿವಾರಣಾ ್ನು ಹೊರಹಾಕುತ್ತವೆ ಎನ್ನುವುದು ಮಾನ್ಯವರ ಟಿಯವರ ಶ್ರದ್ಧಾಪೂರ್ವಕ ಅಭಿಪ್ರಾಯ.)





**ಗಣಿತ ಲೋಕದ ಅದ್ಭುತ ಸಂಶೋಧನೆಗೆ ಸಂದ ಪ್ರಶಸ್ತಿ**

ಜಿಂಬಾಬ್ವೆ ರಿಸರ್ವ್ ಬ್ಯಾಂಕಿನ ಉದ್ಯೋಗಿಯಾಗಿ ಇದ್ದುಕೊಂಡೂ ಗಣಿತ ಲೋಕದಲ್ಲಿ ವಿಹರಿಸುತ್ತಿರುವ ಗೀಡಿಯನ್ ಗೋನೊ ಇವರಿಗೆ ಸಂದಿದೆ. (ಈ ಯುಗದ ಐನ್‌ಸ್ಟೈನ್‌ನ ಇನ್ನೊಂದು ಅವತಾರ!) ವಿಸ್ತಾರವಾದ ಸಂಖ್ಯಾ ಗಣನಾಕ್ರಮವನ್ನು ಅತ್ಯಂತ ಸರಳಗೊಳಿಸಿದ ಹೆಗ್ಗಳಿಕೆ ಈತನದು. ಶ್ರೀಮಾನ್ ಗೀಡಿಯನ್ ಅವರು ತಮ್ಮ ಬ್ಯಾಂಕಿನವರಿಗೆ, ಒಂದು ಸೆಂಟ್‌ನಿಂದ (ಪೈಸೆ) ಒಂದು ನೂರು ಟ್ರಿಲಿಯನ್ ಡಾಲರ್‌ವರೆಗಿನ ಕರೆನ್ಸಿ ನೋಟುಗಳನ್ನು ಮುದ್ರಿಸಲು ಸಲಹೆ ನೀಡಿ ಕೃತಾರ್ಥರಾದರು.

**ಸಾಹಿತ್ಯಕ್ಕೆ ಸಂದ ಪ್ರಶಸ್ತಿ**

ಈ ಬಾರಿ ಇದು ಯಾವುದೇ ಒಬ್ಬ ವ್ಯಕ್ತಿಗೆ ದೊರಕದೇ ಐರ್ಲೆಂಡಿನ ಇಡೀ ಪೊಲೀಸ್ ಇಲಾಖೆಗೆ ಲಭಿಸಿದೆ. ಶ್ರೀ ಪ್ರಾವೋ ಎಂಬಾತನಿಗೆ, ಆತ ಎಡೆಬಿಡದೆ ಎಸಗಿದ ೫೦ ಕಾರು ಅಪಘಾತಗಳಿಗೆ ಪೊಲೀಸಿನವರು ಎಡೆಬಿಡದೆ ೫೦ ಬಾರಿಯೂ ದಂಡ ವಿಧಿಸಿದರು. ಅಂದ ಹಾಗೆ ಪೋಲಿಷ್ ಭಾಷೆಯಲ್ಲಿ ಪ್ರಾವೋ ಎನ್ನುವ ಪದಕ್ಕೆ ಡ್ರೈವರ್ ಲೈಸೆನ್ಸ್ ಎಂಬರ್ಥವಿದೆಯಂತೆ! ಆ ನಂತರ ನಡೆದ ವಿಚಾರಣೆಯಲ್ಲಿ ಪೊಲೀಸಿನವರು ಡ್ರೈವರನ ಆರ್. ಸಿ. ಪುಸ್ತಕದಿಂದ ೫೦ ಬಾರಿಯೂ ತಪ್ಪು ಮಾಹಿತಿಗಳನ್ನು ಹೆಕ್ಕಿಕೊಂಡಿದ್ದರು ಎನ್ನುವುದು ತಡವಾಗಿ ಬೆಳಕಿಗೆ ಬಂದಿದೆ. (ಕನ್ನಡ ವರ್ಣಮಾಲೆಯಲ್ಲಿ 'ಋ' ಬಿಡಬೇಕೋ, ಅಲ್ಪಪ್ರಾಣ ಸಾಕೋ, ಮಹಾಪ್ರಾಣ ಬೇಡವೋ, ಹೋಗಲಿ ಕನ್ನಡಿಗರಿಗೆ ಯಾವುದಾದರೂ ಒಂದು ಪ್ರಾಣ ಇರಬೇಕೋ ಇರಬಾರದೋ ಲಿಂಗದೇವರಂಥಾ ದೇವರೇ ಹೇಳಬೇಕು.)

**ಅರ್ಥಶಾಸ್ತ್ರಕ್ಕೆ ಸಂದ ಪ್ರಶಸ್ತಿ**

ಐಸ್‌ಲ್ಯಾಂಡಿನ ನಾಲ್ಕು ಪ್ರಮುಖ ಬ್ಯಾಂಕುಗಳಾದ ಕಾಪ್‌ತಿಂಗ್ ಬ್ಯಾಂಕ್, ಲ್ಯಾಂಡ್ಸ್ ಬಂಕೀ, ಗ್ಲಿಟ್ನರ್ ಹಾಗೂ ಸೆಂಟ್ರಲ್ ಐಸ್‌ಲ್ಯಾಂಡ್ ಬ್ಯಾಂಕ್‌ಗಳ ನಿರ್ದೇಶಕರು, ಆಡಿಟರ್‌ಗಳು, ಆಡಳಿತಾಧಿಕಾರಿಗಳಿಗೆ ಒಟ್ಟಾಗಿ ಸಂದ ಗೌರವ. ಇವರ ಸಂಯುಕ್ತ ಸಂಶೋಧನೆಯ ಫಲಶ್ರುತಿ ಏನೆಂದರೆ – ಸಣ್ಣ ಸಣ್ಣ ಬ್ಯಾಂಕುಗಳು ಕಣ್ಮುಚ್ಚಿ ಕಣ್ ತೆಗೆಯುವುದರೊಳಗಾಗಿ ದೊಡ್ಡ ಬ್ಯಾಂಕುಗಳಾಗುವುದು ಹೇಗೆ? ಇದಕ್ಕಿಂತಲೂ ಮುಖ್ಯವಾಗಿ ಈ ಪ್ರಕ್ರಿಯೆಯನ್ನು ತಿರುಗು ಮುರುಗಾಗಿಸುವುದು ಹೇಗೆ? ಇದನ್ನು ರಾಷ್ಟ್ರೀಯ ಆರ್ಥಿಕ ನೀತಿಯನ್ನಾಗಿ ಬಳಸಿಕೊಳ್ಳುವ ಕಲೆ ಹೇಗಿರಬೇಕು? (ನೆಗೆದು ಬಿದ್ದಿರುವ, ಬೀಳುತ್ತಿರುವ ಷೇರುಗಳು, ಮ್ಯೂಚುವಲ್ ಫಂಡುಗಳೂ ಅಂಡುಮುಚ್ಚಿಕೊಂಡು ಇದನ್ನೇ ಆಲಿಸಬೇಕು; ಪಾಲಿಸಬೇಕು.)

**ಉಪಸಂಹಾರ**

ಮೇಲ್ಕಂಡ ಯಾವ ವಿಶ್ವವಿದ್ಯಾಲಯ ನಮ್ಮ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಯಡ್ಯೂರಪ್ಪನವರಿಗೆ ಗೌರವ ಡಾಕ್ಟರೇಟ್ ನೀಡಿದೆ ಎಂಬುದು ಇನ್ನೊಂದು ಪಿಎಚ್.ಡಿ.ಗೆ ವಿಷಯವಾಗಬಹುದು. ಅಲ್ಲದೇ ನಮ್ಮವೇ ವಿಶ್ವವಿದ್ಯಾಲಯಗಳು ಹಂಚುತ್ತಿರುವ ಎಂಫಿಲ್‌ಗಳು, ಡಾಕ್ಟರೇಟುಗಳು ಅಲ್ಲಿನ ವಿಶ್ವವಿದ್ಯಾಲಯದ ಮಟ್ಟದಲ್ಲೇ ಇವೆಯೋ ಅಥವಾ ಅದಕ್ಕಿಂತಲೂ ಮಿಗಿಲಾದುದೋ ಎನ್ನುವುದು ನನ್ನಂಥಾ ಅಲ್ಪಮತಿಯ ಕನ್ನಡದ ಪಾಮರನಿಗೆ ತಿಳಿದಿಲ್ಲ.


ವಿಜಯ [illegible]
ಪ್ರಾಚಾರ್ಯರು, ಶ್ರೀ ಆದಿಚುಂಚನಗಿರಿ [illegible] ಕಾಲೇಜು, [illegible]




# ಹೊಸ ವರ್ಷಕ್ಕೆ ಹೊಸ ನೋಟ

**ಹೊ**ಸವರ್ಷದ ಆರಂಭದಲ್ಲಿಯೇ ಸುದ್ದಿ ಮಾಡಲಿರುವ ಗ್ರಹ ಮಂಗಳ. ಈಗಾಗಲೇ ಅನೇಕರನ್ನು ಆಕರ್ಷಿಸಿರುವ ಈ ಕಿತ್ತಳೆಬಣ್ಣದ ಚುಕ್ಕೆ ಜನವರಿ ೨೯ಕ್ಕೆ ಗರಿಷ್ಠ ಪ್ರಕಾಶ ಪಡೆಯಲಿದೆ. ಅಂದರೆ ಆ ದಿನ ವಿಯುತಿ. ಸೂರ್ಯಾಸ್ತವಾಗುವಾಗ ಮಂಗಳದ ಉದಯ. ರಾತ್ರಿ ಇಡೀ ನೋಡುವ ಸೌಕರ್ಯ. ಚಿಕ್ಕ ದೂರದರ್ಶಕಗಳಿಂದ ಅದರ ಮೇಲ್ಮೈಯ ವಿವರಗಳನ್ನು ಗುರುತಿಸುವ ಪ್ರಯತ್ನ ಮಾಡಬಹುದು. ಹಾಗೆಯೇ ಧ್ರುವ ಪ್ರದೇಶಗಳಲ್ಲಿ ಕಾಣುವ ಹಿಮ ಟೋಪಿಗಳನ್ನೂ ಕಾಣಲು ಪ್ರಯತ್ನಿಸಬಹುದು. ಹವ್ಯಾಸಿಗಳು ಕಳೆದ ವರ್ಷದುದ್ದಕ್ಕೂ ಆಚರಿಸಿದ ನಕ್ಷತ್ರವೀಕ್ಷಣೆ ಕಾರ್ಯಕ್ರಮಕ್ಕೆ ಇದು ಒಳ್ಳೆಯ ಅವಕಾಶ. ಜನವರಿಯ ಮೊದಲ ವಾರದಲ್ಲಿ ರಾತ್ರಿ ಸುಮಾರು ಎಂಟು ಗಂಟೆಗೆ ನೋಡಲು ಸಿಗುತ್ತದೆ. ಕ್ರಮೇಣ ಇನ್ನೂ ಬೇಗ ಬೇಗ ಉದಯಿಸಿ ತಿಂಗಳ ಕೊನೆಗೆ ಸೂರ್ಯಾಸ್ತಕ್ಕೇ ಉದಯಿಸುತ್ತದೆ. ಬರಬರುತ್ತಾ ಕುಂದುತ್ತದೆ; ಸಂಜೆಯುದ್ದಕ್ಕೂ ಕಾಣುತ್ತದೆ.

ಅಂತರರಾಷ್ಟ್ರೀಯ ಖಗೋಳ ವಿಜ್ಞಾನ ವರ್ಷದ ಉತ್ಸವಗಳ ಸಂಭ್ರಮಕ್ಕೆ ಕೊಡುಗೆ ನೀಡಿದ ಗುರುಗ್ರಹ ಜನವರಿ ತಿಂಗಳಲ್ಲಿ ದಿಗಂತದ ಅಂಚಿಗೆ ಇಳಿಯುತ್ತದೆ. ಆದರೆ ವರ್ಷದ ಉತ್ತರಾರ್ಧದಲ್ಲಿ ಪುನಃ ಹಾಜರಾಗುತ್ತದೆ. ಸೆಪ್ಟೆಂಬರ್‌ನಿಂದ ಮುಂದೆ ಅದರ ಪ್ರಕಾಶ ಗರಿಷ್ಠವಾಗುವುದು.

ಕಳೆದ ವರ್ಷ ಉಂಗುರವಿಹೀನನಾಗಿ ಕಂಡ ಶನಿ, ಈ ವರ್ಷ ಉಂಗುರಗಳನ್ನು ಸ್ವಲ್ಪವೇ ಓರೆಯಾಗಿ ತೋರಿಸುತ್ತದೆ. ಮಾರ್ಚ್ ಹೊತ್ತಿಗೆ ಉಂಗುರಗಳನ್ನು ಸಣ್ಣ ದೂರದರ್ಶಕದಿಂದ ಗುರುತಿಸಲು ಸಾಧ್ಯವಾಗುವುದು.

ಅತ್ಯಂತ ಪ್ರಕಾಶಮಾನ ಗ್ರಹವಾದ ಶುಕ್ರ ಈ ತಿಂಗಳು ಕಾಣದೇ ಇರಬಹುದು. ಅದೀಗ ಸೂರ್ಯನನ್ನು ಹಾದು ಸಂಜೆಯ ಆಕಾಶಕ್ಕೆ ಬರುವ ಸನ್ನಾಹದಲ್ಲಿದೆ. ಜನವರಿ ತಿಂಗಳ ಕೊನೆಗೆ ಸಂಜೆ ದಿಗಂತ ಅಂಚಿನಲ್ಲಿ ಕಾಣಿಸಿಕೊಳ್ಳುತ್ತದೆ. ಫೆಬ್ರವರಿಯಲ್ಲಿ ಗುರುಗ್ರಹದ ಒಡಗೂಡಿ ಅದ್ಭುತ ನೋಟ ಒದಗಿಸುತ್ತದೆ. ಮುಂದೆ ಅಕ್ಟೋಬರ್ ವರೆಗೂ ಸಂಜೆಯ ಆಕಾಶದಲ್ಲಿಯೇ ಕಾಣುತ್ತದೆ. ಏಪ್ರಿಲ್‌ನಲ್ಲಿ ಬುಧಗ್ರಹದೊಡನೆ, ಆಗಸ್ಟ್‌ನಲ್ಲಿ ಮಂಗಳದೊಡನೆ ಜೋಡಿಯಾಗುವುದು ಛಾಯಾಗ್ರಾಹಕರಿಗೆ ಅತ್ಯು[...] ಅವಕಾಶವಾಗಲಿದೆ.

ಇನ್ನು ಜನವರಿ ತಿಂಗಳ ವಿಶೇಷ ಘಟನೆಗಳತ್ತ ಗಮನ ಹರಿಸೋಣ. ಶುಭ್ರ[...] ಆಕಾಶದಲ್ಲಿ ನಕ್ಷತ್ರ ಪುಂಜಗಳನ್ನು ಗುರುತಿಸುವ ಕೆಲಸ ಕೈಗೊಳ್ಳಲು ಇದು ಸದವಕಾ[...] ಪೂರ್ವದಂಚಿನಲ್ಲಿ ಮಹಾವ್ಯಾಧ (ಒರೈಯನ್) ಅದರ ಮೇಲೆ ವೃಷಭ, ಮೇಷ[...] ಕಾಣುವವು. ನೆತ್ತಿಯ ಮೇಲೆ ಕಾಣುವ ಚೌಕ ನಕುಲ (ಪೆಗಸಸ್) ಅದರ ಪಶ್ಚಿ[...] ಕಾಣುವ ಗುರುಗ್ರಹದ ಹೊರತಾಗಿ ಕುಂಭರಾಶಿಯ ನಕ್ಷತ್ರಗಳನ್ನು ಗುರುತಿಸುವುದು ಕಷ್ಟ[...] ಉತ್ತರದಲ್ಲಿ ಕುಂತಿ, ಪಾರ್ಥ, ವಿಜಯಸಾರಥಿ ಇವುಗಳನ್ನು ಗುರುತಿಸಬಹು[...] ದಕ್ಷಿಣದಲ್ಲಿ ಅಗಸ್ತ್ಯ ಮತ್ತು ವೈತರಣೀ ಮುಖ ಇವು ಸ್ಫುಟ[...] ಕಾಣುವವು. ಒರೈಯನ್‌ನ ಪಾದದಿಂದ ಹೊರಟು ಡೊ[...] ಡೊಂಕಾಗಿ ಹರಿಯುವ ವೈತರಣೀ ನದಿಯನ್ನು [...] ಮಾಡುವುದಕ್ಕೆ ಒಳ್ಳೆಯ ಅವಕಾಶವಿದೆ. ಹಾಗೆ[...] ಪಾರ್ಥ ಪುಂಜದ ನಕ್ಷತ್ರವೊಂದು ಮ[...] ದಿನಕ್ಕೊಮ್ಮೆ ಮಾಯವಾಗುವುದನ್ನು ಗುರು[...] ಬಹುದು. ಇದಕ್ಕೆ ಆಲ್ಗಾಲ್ ಎಂಬ ಹೆಸರು[...]

೧೫ರ ಗ್ರಹಣವನ್ನು ವೀಕ್ಷಿ[...] ಈಗಾಗಲೇ ನೀವು ಸಿದ್ಧತೆ ಮಾಡಿಕೊಂ[...] ಬಹುದು. ಗ್ರಹಣದ ವೀಕ್ಷಣೆಗೆ [...] ಗಾಗಲ್ಸ್ ಮರೆಯದೇ ತೆಗೆದುಕೊ[...] ಹೋಗಿ. ಛಾಯಾಗ್ರಹಣದ ಪ್ರ[...] ಮಾಡಿ. ಆಗ ಉಂಗುರದ[...] ಸೂರ್ಯನ ಪಕ್ಕ ಒಂದು ಚುಕ್ಕೆ ಮ[...] ಬಹುದಲ್ಲವೇ? ಅದೇ ಶುಕ್ರ[...] ಮುಂಜಾವಿನಿಂದ ಸಂಜೆಗೆ ಬರು[...] ಅದನ್ನು ಹೀಗೆ ಪತ್ತೆ ಮಾಡಬಹುದು.

ಈ ತಿಂಗಳ ೨೫ರಂದು ಚಂದ್ರ ಕೃ[...] ನಕ್ಷತ್ರವನ್ನು ಮುಚ್ಚುವ ಆಚ್ಛಾದನೆ ಇದೆ. [...] ತಿಂಗಳು ಅವಕಾಶ ಕಳೆದುಕೊಂಡವರು ನೋ[...] ಬಹುದು. ೩೦ರಂದು ಹುಣ್ಣಿಮೆಯ ಚಂದ್ರನನ್ನು ಮರೆಯ[...] ನೋಡಿ. ಪಕ್ಕದ ಕಿತ್ತಳೆ ಬಣ್ಣದ ಚುಕ್ಕೆಯೇ ಮಂಗಳ. ಅಂದು [...] - ಭೂಮಿ ನಡುವೆ ಅಂತರ ಕನಿಷ್ಠವಾಗಿರುವುದರಿಂದ ಕಡಲತೀರದವರು [...] ಜೋರು ಎಂಬುದನ್ನು ಗಮನಿಸಬಹುದು.

ಉ

ಧ್ರುವ, ಕುಂತಿ, ವಿಜಯಸಾರಥಿ, ಪಾರ್ಥ, ಮಿಥುನ, ವೃಷಭ, ಮೇಷ, ನಕುಲ, ಮಹಾವ್ಯಾಧ, ಮಂಗಳ, ಮೀನ, ಕುಂಭ, ಗುರು, ಲುಬ್ಧಕ, ವೈತರಣೀ, ತಿಮಿಂಗಿಲ

ಪೂ    ಪ

ದ

### ಖಗೋಳ ದಿನಚರಿ

- ೨ ಭೂಮಿ - ಚಂದ್ರ ನಡುವೆ ಕನಿಷ್ಠ ಅಂತರ
- ೩ ಭೂಮಿ - ಸೂರ್ಯ ನಡುವೆ ಕನಿಷ್ಠ ಅಂತರ
- ೪ ಬುಧ ಗ್ರಹದ ಯುತಿ
- ೭ ಚಾಂದ್ರಮಾನದ ಕೊನೆಯ ಪಾದ
- ೧೧ ಜ್ಯೇಷ್ಠಾ ನಕ್ಷತ್ರ ಚಂದ್ರನೊಡನೆ (ಆಚ್ಛಾದನೆ ಕಾಣುವುದಿಲ್ಲ)*
- ೧೩ ಬುಧ - ಚಂದ್ರ ಜೋಡಿ*
- ೧೪ ಶನಿ ತಟಸ್ಥ (ಹಿನ್ನಡೆ ಆರಂಭ)*
- ೧೫ ಅಮಾವಾಸ್ಯೆ ಕಂಕಣ ಗ್ರಹಣ*
- ೧೬ ಬುಧ ತಟಸ್ಥ (ಹಿನ್ನಡೆ ಮುಕ್ತಾ[...]
- ೧೭ ಚಂದ್ರ - ಭೂಮಿ ನಡುವೆ ಗ[...] ಅಂತರ
- ೧೮ ಗುರು - ಚಂದ್ರ ಜೋಡಿ*
- ೨೩ ಚಾಂದ್ರಮಾಸದ ಮೊದಲ[...]
- ೨೫ ಸಂಜೆ ಕೃತ್ತಿಕಾ ಆಚ್ಛಾದನೆ*
- ೩೦ ಮಂಗಳ ಗ್ರಹದ ವಿ[...] (ಗರಿಷ್ಠ ಪ್ರಕಾಶ)* ಹು[...] ಚಂದ್ರ - ಭೂಮಿ ನಡುವೆ ಕ[...] ಅಂತರ*

(* ಛಾಯಾಗ್ರಹಣಕ್ಕೆ ಉತ್ತಮ ಅವಕಾ[...]

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

**ಜನವರಿ ೧೫ರ ಕಂಕಣ ಗ್ರಹಣದ ವಿವರಗಳು**

| | ಆರಂಭ | ಗರಿಷ್ಠ | ಮುಕ್ತಾಯ | ಪ್ರಮಾಣ |
|---|---|---|---|---|
| ಬೆಂಗಳೂರು | ೧೧:೧೬ | ೧೩:೨೩ | ೧೫:೧೧ | ೦.೮೪೬ |
| ಮುಂಬಯಿ | ೧೧:೧೬ | ೧೩:೨೭ | ೧೫:೦೪ | ೦.೬೪೫ |
| ನವದೆಹಲಿ | ೧೧:೨೩ | ೧೩:೩೦ | ೧೫:೧೫ | ೦.೫೩೨ |
| ಚೆನ್ನೈ | ೧೧:೨೫ | ೧೩:೩೦ | ೧೫:೧೫ | ೦.೯೪೨ |
| ಮಧುರೈ | ೧೧:೧೧ | ೧೩:೧೮ ರಿಂದ ೧೩:೨೫ | ೧೫:೧೦ | ೦.೯೧೮ |
| ತಂಜಾವೂರು | ೧೧:೧೭ | ೧೩:೨೨ ರಿಂದ ೧೩:೨೬ | ೧೫:೧೧ | ೦.೯೧೮ |
| ತಿರುವನಂತಪುರ | ೧೧:೦೪ | ೧೩:೧೦ ರಿಂದ ೧೩:೧೭ | ೧೫:೦೫ | ೦.೯೧೮ |
| ತೂತ್ತುಕುಡಿ | ೧೧:೦೯ | ೧೩:೧೩ ರಿಂದ ೧೩:೨೩ | ೧೫:೦೭ | ೦.೯೧೮ |







# ವಿವಿಧ ಶೈಲಿಯ ಚಿತ್ರಕಲಾವಿದ ಬಿ. ಮಾರುತಿ



ವೃತ್ತಿಯಲ್ಲಿ ವ್ಯಾಪಾರಸ್ಥರೂ ಪ್ರವೃತ್ತಿಯಲ್ಲಿ ಚಿತ್ರಕಲಾವಿದರೂ ಆದ ಧಾರವಾಡದ ಬಿ. ಮಾರುತಿ ಅವರು ಕಲೆಯ ಬಗ್ಗೆ ತಮಗಿದ್ದ ಆಸಕ್ತಿಯಿಂದಾಗಿ ಅದರಲ್ಲೇ ಸಂಪೂರ್ಣವಾಗಿ ತೊಡಗಿದ್ದಾರೆ. ಇವರು ಮೂಲತಃ ಹೊಸಪೇಟೆಯವರು. ಕಲೆಯನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವರಲ್ಲ. ಬಾಲ್ಯದಿಂದಲೇ ಕಲೆಯಲ್ಲಿ ಅಗಾಧವಾದ ಪ್ರತಿಭೆ ಹೊಂದಿದವರು. ರಾಜ್ಯಶಾಸ್ತ್ರದಲ್ಲಿ ಪದವಿ ಪಡೆದು ಸರಕಾರಿ ಮಹಾವಿದ್ಯಾಲಯವೊಂದರಲ್ಲಿ ಉಪನ್ಯಾಸಕರಾಗಿ ಕೆಲವು ವರ್ಷ ಸೇವೆ ಸಲ್ಲಿಸಿ ನಂತರ ಕ್ರೀಡಾ ಸಾಮಗ್ರಿಗಳ ಉದ್ಯಮ ಪ್ರಾರಂಭಿಸಿ, ಆಮೇಲೆ ಕಲಾಕ್ಷೇತ್ರಕ್ಕೆ ಜಿಗಿದರು. ವಿವಿಧ ಶೈಲಿಗಳಲ್ಲಿ ಹಲವು ವಿಷಯಗಳನ್ನು ಕುರಿತ ಚಿತ್ರಗಳನ್ನು ರಚಿಸುವುದರಲ್ಲಿ ಇವರು ನಿಷ್ಣಾತರಾಗಿದ್ದಾರೆ.

ಚಿತ್ರಲೇಖನ– ವಿಜಯಾನಂದ ಬಿ. ಕಾಲವಾಡ
ನಂ. ೧೩, ೧ನೇ ಅಡ್ಡ ರಸ್ತೆ, ಸದಾಶಿವಾನಂದನಗರ
ಭೈರಿದೇವರಕೊಪ್ಪ, ಹುಬ್ಬಳ್ಳಿ - ೨೫





# ದೇಬಿದಾ ಸಾಹಚರ್ಯದ ಸವಿನೆನಪು



ಸುಬೀರ್ ಗಂಗೂಲಿ

ಭಾರತೀಯ ತತ್ತ್ವಶಾಸ್ತ್ರ, ಇತಿಹಾಸ ಮತ್ತು ಪರಂಪರೆಗಳನ್ನು ಕುರಿತಂತೆ ಎಲ್ಲ ಅಧ್ಯಯನಗಳಿಗೂ ಒಂದು ಮಹತ್ತರ ತಿರುವು ನೀಡಿದವರು ದೇವಿಪ್ರಸಾದ್ ಚಟ್ಟೋಪಾಧ್ಯಾಯ. ಪ್ರಾಚೀನ ಭಾರತದ ವಿಜ್ಞಾನ ಮತ್ತು ತಂತ್ರಜ್ಞಾನಗಳ ಇತಿಹಾಸವನ್ನು ವಿಮರ್ಶಾತ್ಮಕ ಖಚಿತತೆಯಿಂದ ನಿರೂಪಿಸಿದ ಕೀರ್ತಿ ಅವರದು. ೧೯೬೦ರ ದಶಕದ ಹಿಂದೆ ನಡೆಯುತ್ತಿದ್ದ ಚರ್ಚೆಗಳ ಸ್ವರೂಪವು ೧೯೫೯ರಲ್ಲಿ 'ದೇವಿದಾ' ಪ್ರಕಟಿಸಿದ **ಲೋಕಾಯತ** ಎಂಬ ಗ್ರಂಥದ ಪರಿಣಾಮವಾಗಿ ಗುಣಾತ್ಮಕ ಬದಲಾವಣೆಯನ್ನು ಕಂಡಿತು. 'ಎಲ್ಲವನ್ನೂ ಅನೈತಿಹಾಸಿಕವಾಗಿ ವೈಭವೀಕರಿಸಿ ನಮ್ಮ ಅನೇಕ ವಿದ್ವಾಂಸರು ಭಾರತದ ಚರಿತ್ರೆಯಲ್ಲಿ ಜೊಳ್ಳನ್ನು ಕಾಳೆಂದು ಭ್ರಮಿಸಿದ್ದರು ಮತ್ತು ಕಾಳನ್ನು ಅನಾದರದಿಂದ ತಿರುಚಿ ಅದರ ಮೌಲ್ಯವನ್ನು ಮರೆಸಿದ್ದರು. ''ಲೋಕಾಯತ ಪುರುಷ'' ದೇವಿಪ್ರಸಾದರನ್ನು ಹತ್ತಿರದಿಂದ ಬಲ್ಲ ಮತ್ತು ಅವರೊಡನೆ ಕೆಲಸ ಮಾಡಿದ್ದ ಕೊಲ್ಕತ್ತದ ಚಿಂತಕ-ಚಲನಚಿತ್ರ ನಿರ್ಮಾಪಕ- ವಿಮರ್ಶಕ ಸುಬೀರ್ ಗಂಗೂಲಿ ತಮ್ಮ ಒಡನಾಟದ ಕೆಲವು ಸಂಗತಿಗಳನ್ನು ಓದುಗರೊಡನೆ ಹಂಚಿಕೊಂಡಿದ್ದಾರೆ.

**ಅ**ನೇಕ ವರ್ಷಗಳ ಹಿಂದೆ ರವೀಂದ್ರನಾಥ ...ಕೂರರು ಅಖಿಲ ಭಾರತ ಪುಸ್ತಕ ಭಂಡಾರ ...ಮ್ಮೇಳನವೊಂದರ ಸ್ವಾಗತ ಸಮಿತಿ ಅಧ್ಯಕ್ಷರಾಗಿ ...ಡಿದ್ದ ಕೆಲವು ಮಾತುಗಳ ಸಾರ ಹೀಗಿದೆ: ...ಡ್ಡಿದ್ದವನು ನಮ್ಮಲ್ಲಿ ದೊಡ್ಡಪ್ಪ ಎನಿಸಿಕೊಳ್ಳುತ್ತಾನೆ. ...ದರೆ, ಅವನ ಅಂತಸ್ಸತ್ವವು ಹಣದಲ್ಲಿದೆ, ಆಂತರಿಕ ...ಣಗಳಲ್ಲಿ ಅಲ್ಲ. ಪುಸ್ತಕ ಭಂಡಾರಗಳಲ್ಲಿ, ಕಲೆ ...ಕಲ್ಪಟ್ಟ ಪುಸ್ತಕಗಳ ಪ್ರಯೋಜನವಿರುವುದು ...ವುಗಳನ್ನು ಬಳಸಿಕೊಂಡಾಗ ಮಾತ್ರ. ಸಾಮಾನ್ಯವಾದ ...ನಸ್ಸಾದರೆ ಅದು ಅಗಾಧ ಸಂಖ್ಯೆಗೆ ಮಾರುಹೋಗಿ ...ಪಯುಕ್ತತೆಯ ಬಗ್ಗೆ ಯೋಚಿಸುವುದಿಲ್ಲ. ಹಾಗಿರು ...ಗ ನಮ್ಮ ಹಾದಿ ಯಾವುದು ?

...ಹೆಚ್ಚು ಪುಸ್ತಕಗಳು ಅನಗತ್ಯವೆಂದು ಕವಿಯ ಆಶಯ ...ಗಿರಲಿಲ್ಲ. ಯಾವುದೇ ಸಾಹಿತ್ಯದಲ್ಲಿ ಅಭಿವ್ಯಕ್ತವಾದ ...ಷಯವು ನಮ್ಮ 'ಅಹಂ' ಪೋಷಿಸಲು ಇರುವುದಲ್ಲ; ...ರುವುದು ನಮ್ಮ ಉಪಯೋಗಕ್ಕೆ. ದೇವಿಪ್ರಸಾದ್ ...ಟ್ಟೋಪಾಧ್ಯಾಯರನ್ನು ನೆನೆದಾಗೆಲ್ಲ ಈ ಭಾವನೆ ...ರುಕಳಿಸುತ್ತದೆ. ಅವರ ಅಗಾಧ ವಿದ್ವತ್ತಿಗಿಂತಲೂ ...ವರ ಸಾಗರೋಪಮವಾದ ಮಾನವಿಕ ಗುಣ ನಮ್ಮ ...ನ ಸೆಳೆಯುತ್ತಿತ್ತು. ಅರ್ಧ ಶತಮಾನಕ್ಕೂ ಮಿಕ್ಕು ...ವರು ಜ್ಞಾನದ ಖನಿಗಳನ್ನು ಬಗೆಯುತ್ತಲೇ ಬಂದರು. ...ಾವ ಪುರುಷಾರ್ಥಕ್ಕೆ? ಅವರೊಡನಿರುತ್ತಿದ್ದಾಗೆಲ್ಲ ... ಪ್ರಶ್ನೆ ತಾನೇತಾನಾಗಿ ಮುಂದೆ ಬರುತ್ತಿತ್ತು. ...ದೆರಡು ದಶಕಗಳಲ್ಲಿ ನಾನು ಹಲವು ವಿದ್ವಾಂಸ ...ಂದಿಗೆ ಬೆರೆತಿದ್ದೇನೆ: ಕೆಲವರು ನಮ್ಮ ದೇಶ ...ದರು, ಇನ್ನು ಕೆಲವರು ಬೇರೆ ಬೇರೆ ದೇಶಗಳವರು. ...ನವತೆಯ ಮಿಂಚನ್ನು ನಾನು ಅತಿಸಾಮಾನ್ಯರ ...ಖಗಳಲ್ಲಿ ಕಂಡು ಸುಖಿಸಿದ್ದೇನೆ; ಅಲ್ಲಿ ಪಾಂಡಿತ್ಯದ ...ಮಾನವಿರದಿರುವುದು ಒಂದು ಕಾರಣ ಇರಬೇಕು.

ದೇವಿಪ್ರಸಾದರು ಅಸಾಮಾನ್ಯರು, ಆದರೆ ಅತಿ ಸಾಮಾನ್ಯರಂತೆ ನಡೆದುಕೊಳ್ಳುವುದು ಅವರ ಸ್ವಭಾವ. ದೈತ್ಯ ಪಾಂಡಿತ್ಯದ ಆಗರವೆಂದು ಕರೆಸಿಕೊಂಡಿದ್ದ ಎಷ್ಟೋ ಮಂದಿಯನ್ನು ಈ ವಾಮನ ನಗ್ನಗೊಳಿಸಿದ್ದ. ಜ್ಞಾನದ ಜಾಡನ್ನು ತಪ್ಪಿಸುವುದರಲ್ಲಿ ಜಾಣರಾಗಿದ್ದವರನ್ನು ಯಾವ ಅಳುಕೂ ಇಲ್ಲದೆ ದೇವಿಪ್ರಸಾದ್ ಸರಿದಾರಿಗೆ ಎಳೆತರುತ್ತಿದ್ದರು. ಅವರ ಮುಕ್ತತೆ, ಸರಳತೆ, ಮೌಲ್ಯಯುತ ನಡತೆ, ಗಾಢ ನಂಬಿಕೆ, ಇವನ್ನೆಲ್ಲಾ ಕಂಡು ಆನಂದಿಸುತ್ತಿದ್ದಾಗ ಇವರೊಡನೆ ಇನ್ನೂ ಮುಂಚೆಯೇ ನಾನೇಕೆ ಸಂಪರ್ಕ ಸಾಧಿಸಲಿಲ್ಲವೆಂದು ನೊಂದುಕೊಂಡಿದ್ದೇನೆ.

ನನಗೆ ಅವರ ಮೊದಲ ಪರಿಚಯವಾದದ್ದು ಬಂಗಾಳಿಯಲ್ಲಿ ಅವರು ಬರೆದಿದ್ದ 'ಭಾವವಾದ ಖಂಡನ' ಎಂಬ ಪುಸ್ತಕದಿಂದ. ಇನ್ನೊಂದು ಪುಸ್ತಕ 'ಪುರೋನೋ ಪ್ರಶ್ನ ನತೂನ್ ಪೃಥಿವೀ' (ಹಳೆಯ ಪ್ರಶ್ನೆಗಳು-ಹೊಸ ಪ್ರಪಂಚ) ಎಂಬುದು. ನನಗಾಗ ಹದಿಮೂರು ವರ್ಷ. ಬೇರಾವ ಪುಸ್ತಕಗಳಂತಿರದೆ ಇವು ಸಾಂಪ್ರದಾಯಿಕ ಹಾದಿಯನ್ನು ಬಿಟ್ಟು ನೇರವಾಗಿ ವಾಸ್ತವ ಸಂಗತಿಗಳನ್ನು ಸರಳವಾಗಿ ಹೇಳ ಹೊರಟದ್ದುವು. ಅವರ ಹೆಸರನ್ನು ಮೊದಲಿಗೆ ಕೇಳಿದ್ದೇ ಆಗ. ಎರಡು-ಮೂರು ವರ್ಷಗಳ ನಂತರ ಅವರ ಹೆಸರಿನ ಬಲದಿಂದಾಗಿ 'ಲೋಕಾಯತ' ನನ್ನನ್ನು ಆಕರ್ಷಿಸಿತು. ಅದು ನನ್ನ ಮೇಲೆ ಬೀರಿದ ಪ್ರಭಾವವನ್ನು ಅದರಲ್ಲೇ ಬರುವ ಒಂದು ಪ್ರಸಂಗವು ಸರಿಯಾಗಿ ಪ್ರತಿಫಲಿಸುತ್ತದೆ: ''ಆ ರಾತ್ರಿ ಅವಿಸ್ಮರಣೀಯ. ನಾನು ಕಣ್ಣುಮುಚ್ಚಿ ಕುಳಿತರೆ ಈಗಲೂ ಆ ಚಿತ್ರ ನನ್ನ ಮುಂದೆ ಬರುತ್ತದೆ. ಗದ್ದಲದ ನಗರ ಬರ್ಮಿಂಗ್‌ಹ್ಯಾಮ್ ಆವಾಗಲೇ ತಣ್ಣಗಾಗಿತ್ತು. ರಾತ್ರಿ ಸರಿಹೊತ್ತು. ಪ್ರೊಫೆಸರ್ ಥಾಮ್ಸನ್ ಮಾತನಾಡುತ್ತಿದ್ದರು.

ಕಾಲುಗಳನ್ನು ಅಗ್ಗಿಷ್ಟಿಕೆಯತ್ತ ಚಾಚಿ ಕುಳಿತಿದ್ದರು. ಮಾತಿನಲ್ಲಿ ಅದೆಷ್ಟು ಮಗ್ನ ಆದೇನೋ ಭಾವನಾತರಂಗಗಳ ಸೃಷ್ಟಿಯಲ್ಲ, ಕಪಿತ್ವವೂ ಅಲ್ಲ; ಕಟ್ಟಾ ವೈಜ್ಞಾ ವಿಶ್ಲೇಷಣೆ. ಎರಡು ಎರಡು ನಾಲ್ಕು ಎಂಬಷ್ಟು ಖಚಿತ, ಆದರೆ ಬಹಳ ಸ್ಪಷ್ಟ ಸು ಮಾತುಗಳು. ಒಂದೊಂದೇ ಬಾಗಿಲು ತೆರೆದುಕೊಳ್ಳುತ್ತಿತ್ತೆಂಬ ಅನುಭವ ನನ್ನ ಎಷ್ಟೋ ಸಂಗತಿಗಳು ಅಷ್ಟೊಂದು ಅರ್ಥವತ್ತಾದುವೇ ಎನಿಸುತ್ತಿತ್ತು; ನಾನ ವಿಶೇಷವಾಗಿ ಎಂದೂ ಮನನ ಮಾಡಿರಲಿಲ್ಲ. ನನಗೆ ಅಂತಹ ಬೌದ್ಧಿಕ ಶಿಸ್ತಿಲ್ಲವೇ ಎಂಬ ಭಾವನೆಯೂ ಬಂದಿತು. 'ಈ ದೃಷ್ಟಿಯಿಂದ ನೋಡಿ, ಆಗ ಅದ ಅಸ್ಪಷ್ಟವಾದುದೇನೂ ಉಳಿಯುವುದಿಲ್ಲ' ಎಂದು ಹೇಳುತ್ತಿದ್ದರು.''

ಆ ಹಿನ್ನೆಲೆಯಿಂದ ಬಂದವರು ದೇವಿಪ್ರಸಾದ್. ಸ್ವತಃ ನಾನು ವಿಜ್ಞಾನದ ವಿದ್ಯಾ ನನ್ನ ತಿಳುವಳಿಕೆಗೆ ಸಂಪ್ರದಾಯ ತಡೆಯೊಡ್ಡುತ್ತಿತ್ತು, ಅಧ್ಯಾತ್ಮವು ವಿಜ್ಞಾನ ಮಸುಕುಗೊಳಿಸಿತ್ತು. ದೇವಿಪ್ರಸಾದರ ಪರಿಚಯವಾದ ಮೇಲೆ ಈ ಮನುಷ್ಯ ಎ ಕಳೆದ ಶತಮಾನದ ಪ್ರಗಲ್ಭಮತಿ ಇರಬೇಕು ಎಂದು ಅನಿಸಿರುವುದೂ ಉಂಟು. ಶತಮಾನವು ಪುನರುಜ್ಜೀವನದ ಕಾಲ, ಸತ್ಯದ ಅರಸುವಿಕೆಯ ಕಾಲ, ಸತ್ಯ ಮರೆಮಾಚದೆ ಮಾತನಾಡುವ ಕಾಲ. ಆದರೆ ಅವರು ನಮ್ಮ ನಡುವೆ ಜೀವಂತವಾ ಸಮಕಾಲೀನರು. ಅವರ ಒಂದು ಬರವಣಿಗೆಯಲ್ಲಿ ಸರ್. ರೊನಾಲ್ಡ್ ರಾ ಸಂದೇಶವಿರುವ ಕಲ್ಲುಕೆತ್ತನೆಯ ಪ್ರಸ್ತಾಪ ಕಂಡು, ಅವರ ಮನೆಯ ಹಾದಿ ಅ ಬಳಿಯೇ ಎಲ್ಲೋ ಇರಬಹುದೆಂದು ಅಂದುಕೊಂಡೆ. ಕೆಲಸಮಯದ ನ ಅವರನ್ನು ಒಂದು ಸಭೆಯಲ್ಲಿ ನೋಡಿದೆ. ಅದಾದ ಎಷ್ಟೋ ಕಾಲದ ನ ನಾನವರನ್ನು ಖುದ್ದಾಗಿ ಭೇಟಿಯಾದ್ದು. ಅವರ ಮನೆಯ ಮಹಡಿಯ ಕೋಣೆ ಕೂತು ಬೇಸರವಿಲ್ಲದೆ ಒಂದೂವರೆ ಗಂಟೆ ಕಾಲ ನನ್ನ ಪ್ರಶ್ನೆಗಳಿಗೆ ಪ್ರತಿಕ್ರಿಯಿಸಿದ ಗಂಭೀರವಾದ ವಿಷಯಗಳನ್ನು ತಿಳಿಹಾಸ್ಯದೊಡನೆ ಬೆರೆಸುವುದು ಅವರ ರೂ ನಾನವರಿಗೆ ಅಪರಿಚಿತನೆಂಬ ಭಾವನೆ ಅವರಲ್ಲಿದ್ದಂತೆ ತೋರಲಿಲ್ಲ; ಅವರ ಕೆಲ ಮಧ್ಯೆ ನಾನು ನುಸುಳಿದ್ದೇನೆಂದು ನನಗೇ ಸಂಕೋಚ, ಅಷ್ಟೆ. ಅವರೊಬ್ಬ ವಿದ್ವಾಂಸರೆಂಬುದನ್ನು ಮರೆತುಬಿಡುವಷ್ಟು ಸಲಿಗೆ ಮೊದಲ ಭೇಟಿಯಲ್ಲೇ ಬಂದಿತು! ಎಷ್ಟಾದರೂ, ತಮ್ಮ ವಿದ್ವತ್ತನ್ನು ಜನಸಾಮಾನ್ಯರ ಏಳಿಗೆ ಮೀಸಲಿರಿಸಿದ್ದ ವ್ಯಕ್ತಿ ಅಲ್ಲವೇ, ಎನಿಸಿತು. ಅವರ ವಾತ್ಸಲ್ಯ ಮತ್ತು ಸ್ನೇಹಪರತೆ ಕ ಕೆಲವು ವರ್ಷಗಳ ಒಡನಾಟದಲ್ಲಿ ನನ್ನ ಮೇಲೆ ಎಷ್ಟು ಪ್ರಕಟವಾಗಿದೆಯೆಂ ನಾನವರನ್ನೇನಾದರೂ ಹೊಗಳಿದರೆ ಅವರು ಸಿಟ್ಟಿಗೇಳುತ್ತಿದ್ದರು ಕೂಡ.

ಪ್ರತಿದಿನವೂ ಅವರೊಡನಿರುವ ಅವಕಾಶ ಅವರ ಕಡೆಯ ಕೆಲವು ವರ್ಷಗ ನನ್ನದಾಗಿತ್ತು. ಅವರ ಬರವಣಿಗೆಯಲ್ಲಿ ಏನೋ ಸಹಾಯ ಬೇಕೆಂದು ಹೇಳಿ ಸಾಕು, ಎಂಥದೋ ಸಬೂಬು ಹುಡುಕಿ ನನ್ನ ಕೆಲಸವನ್ನು ದೂರವಿಟ್ಟು ಓಡು ಮೊದಲಿಗೆ ನಾವು ಕೂತು ಕೆಲಸ ಮಾಡುತ್ತಿದ್ದುದು ಅವರ ಅಭ್ಯಾಸ ಕೋಣೆಯ ಆಮೇಲೆ ಅದು ಅವರ ಮನೆಯ ಪಡಸಾಲೆಗೆ ಸ್ಥಳಾಂತರಗೊಂಡಿತು. ಅ ಕಾರಣ ಅವರ ಆರೋಗ್ಯದ ಸ್ಥಿತಿ. ಕೆಲವೇಳೆ ಅವರ ಮಹಡಿ ಮನೆಯ ಮುಂ ಅಂಗಳದಲ್ಲಿ ಗಂಟೆಗಟ್ಟಲೆ ಅವರ ಮಾತನ್ನು ಕೇಳಿದ್ದುದು ಮನಸ್ಸಿನಲ್ಲಿ ಸ್ಥಿರವಾಗಿ ಮಾತಾಡುವಾಗ ಅದೆಷ್ಟು ರೋಚಕ ಘಟನೆಗಳು, ಕತೆಗಳು ಅವರಿಂದ ಬರು ಎಂಬುದೇ ಮನಸ್ಸನ್ನಾವರಿಸುತ್ತದೆ.

ಬಂಗಾಳಿ ನಿಯತಕಾಲಿಕ 'ಏಕ್‌ಶಾನ್'ನಲ್ಲಿ ಅವರ ಹೆಸರು ಎರಡು ಉಲ್ಲೇಖವಾಗಿತ್ತು ಒಮ್ಮೆ. (ಈಗ ಆ ಪತ್ರಿಕೆ ಉಳಿದಿಲ್ಲ.) ದೇಬಿದಾಗೆ ಅದನ್ನು ಹೇ ''ಬೈಗಳು ಸುರಿಸಿದ್ದಾರೋ'' ಎಂದರು. ''ನಿಮ್ಮನ್ನು ಸಾಂಪ್ರದಾಯಿಕ ಮಾ ವಾದಿಯೆಂದು ಕರೆದಿದ್ದಾರೆ'' ಎಂದೆ. ಗಹಗಹಿಸಿ ನಗುತ್ತಾ ಹೇಳಿದರು: '' ಸರಿಯಾದ ಮಾತೇ; ಏಕೆಂದರೆ ನನ್ನ ತಂದೆ ಭಾರಿ ಸಂಪ್ರದಾಯಸ್ಥ ಹಿ ಆಗಿದ್ದರಲ್ಲ! ಹಿಂದೊಮ್ಮೆ ಅವರು ನಾಗಪುರದಲ್ಲಿ ಕೆಲಸದಲ್ಲಿದ್ದರು. ನ ಧಾರ್ಮಿಕ ನಂಬುಗೆ ಕಡಿಮೆಯೆಂದು ಅರಿತಿದ್ದ ಅವರು ಕತೆಯೊಂದನ್ನು ಹೇಳಿದ ಅವರ ಕಚೇರಿಗೆ ಯಾವನೋ ಬಿಳಿಯ ಬ್ರಿಟಿಷ್ ಅಧಿಕಾರಿ ಬರುವುದಿತ್ತಂತೆ. ಇವರು ತಮ್ಮ ಮೇಜಿನ ಮೇಲಿನ ಕಡತಗಳನ್ನೆಲ್ಲಾ ದೂರವಿರಿಸಿದರು. ಆಮೇ ಒಂದು ಗಡಿಗೆಯಲ್ಲಿ ಗಂಗಾಜಲ ತುಂಬಿಟ್ಟರು. ಒಂದು 'ಗಾಂಛಾ' ದಿಂದ ಮುಚ್ಚಿ (ಗಾಂಛಾ ಎಂದರೆ ಒಂದು ತರಹದ ಮಡಿಬಟ್ಟೆ.) ಸಾಹೇಬ ನೋಡಿದ, ಅದೇನೆಂದು ವಿಚಾರಿಸಿದ. 'ನಿನ್ನ ಕೈ ಕುಲುಕುವುದರಿಂದ ನನ್ನ ಹಾಳಾಗುತ್ತದಲ್ಲಾ. ಅದನ್ನು ಶುದ್ಧೀಕರಿಸಲು ಹಿಂದು ಧರ್ಮಶಾಸ್ತ್ರದ

ಗಾಜಲ ಬೇಕು; ಅದರಿಂದ ಪ್ರಾಯಶ್ಚಿತ್ತವಾಗುತ್ತದೆ', ಎಂದರು ನಮ್ಮ ತಂದೆ. ವನಿಗೆ ತುಂಬ ಸಿಟ್ಟು ಬಂತು. ಹಿಂದಿರುಗಿದ ಕೂಡಲೆ ನಮ್ಮಪ್ಪನನ್ನು ರಂಗೂನಿಗೆ ರ್ಗಾಯಿಸಿಬಿಟ್ಟ. ಅಲ್ಲಿ ಅವರು ಮಾಡಿದ್ದು ಇಷ್ಟೇ: ಯಾವನೋ ಸರ್ಕಾರಿ ಣವನ್ನು ಲಪಟಾಯಿಸುತ್ತಿದ್ದ, ಇವರು ಅವನನ್ನು ಹಿಡಿದುಹಾಕಿದರು. ಕೂಡಲೆ ವರಿಗೆ ಬಡ್ತಿ ನೀಡಿ ಕಲ್ಕತ್ತೆಗೆ ವರ್ಗಾಯಿಸಿದರು. 'ನೋಡಿದಿರಾ, ಧಾರ್ಮಿಕ ನಡತೆ ಗೆ ಯಾವಾಗಲೂ ಲಾಭದಾಯಕವಾಗಿರುತ್ತದೆ' ಎಂದು ನಮಗೆ ಹೇಳುತ್ತಿದ್ದರು. ಥವರ ಮಗನಾಗಿ ನಾನು ಸಂಪ್ರದಾಯ ಬಿಟ್ಟುಕೊಡುವುದುಂಟೆ!''

ಪಶ್ಚಿಮ ಬಂಗಾಳದ ಪುರಾತತ್ತ್ವ ಸಂಗ್ರಹಾಲಯದಲ್ಲಿ ಪ್ರಸಿದ್ಧ ಇತಿಹಾಸಕಾರ ರ್ಡನ್ ಚೈಲ್ಡ್ ಕುರಿತು ದೇವಿಪ್ರಸಾದ್ ಒಂದು ಉಪನ್ಯಾಸ ನೀಡಿದ್ದರು, ನಾನೂ ೋಗಿದ್ದೆ. ಮಾರನೆಯ ದಿನ ದೂರವಾಣಿಯಲ್ಲಿ ಕೇಳಿದರು: ''ನೀವು ದಿದ್ದಿರಾ? ನೂರುಲ್ ಹಸನ್ ನನ್ನನ್ನೆಷ್ಟು ಶ್ಲಾಘಿಸಿದರು, ನೋಡಿದಿರಾ?'' ವಿಪ್ರಸಾದ್ ಮತ್ತು ಡಿ. ಡಿ. ಕೋಸಾಂಬಿ ಉತ್ಕೃಷ್ಟ ಇತಿಹಾಸಕಾರರೆಂದು ನೂರುಲ್ ಸನ್ ಅಭಿಪ್ರಾಯ ಆಗಿತ್ತು. ದೇವಿಪ್ರಸಾದ್‌ಗೆ ಕೋಸಾಂಬಿ ಬಹಳ ಒಳ್ಳೆಯ ಸ್ನೇಹಿತ. ತ್ತೆಯಲ್ಲಿ ಯಾರದೋ ಮನೆಯಲ್ಲಿ ಹಲವು ವಿದ್ವಾಂಸರ ಒಂದು ಅನೌಪಚಾರಿಕ ಟ. ಕೋಸಾಂಬಿ ಮತ್ತು ದೇವಿಪ್ರಸಾದ್ ರೂ ಅಕ್ಕಪಕ್ಕದಲ್ಲಿ ಕೂತಿದ್ದರು. ಮಾತಿನ ಸ್ತೆ ಸುಶೋಭನ್ ಸರ್ಕಾರ್ ಬಗ್ಗೆ ಕೋಸಾಂಬಿ ುವಾಗಿ ಏನೋ ಅಂದರು. ಇದ್ದವರಲ್ಲಿ ವರು ನಿಧಾನವಾಗಿ ಜಾಗ ಖಾಲಿ ಮಾಡಿದರು. ವಿಪ್ರಸಾದ್ ಅಲ್ಲಾಡದೆ ಕುಳಿತಿದ್ದು ಕಡೆಗೆ ೋಸಾಂಬಿಯನ್ನು ತರಾಟೆಗೆ ತೆಗೆದುಕೊಂಡರು: ನಯ್ಯಾ ನೀನು ಹೇಳುವುದು? ಎಷ್ಟು ಮಂದಿ ಲ್ಲಿ ಸುಶೋಭನ್ ಬಾಬುಗಳು ಕಮ್ಯುನಿಸ್ಟ್ ದ್ಧಾಂತದ ಬಗ್ಗೆ ಒಲವು ಮೂಡಿಸಿದ್ದಾರೆ, ನಿನಗೆ ತ್ತೆ? ಭಾರತದ ಇತಿಹಾಸದ ಅಧ್ಯಯನಕ್ಕೆ ರ ಕಾಣಿಕೆ ಎಷ್ಟು ಮಹತ್ವದ್ದೆಂದು ಬಲ್ಲೆಯಾ? ೆ ನೋಡಿದರೆ, ನೀನು ಮಾಡಿರುವುದೇನು? ಚೌರ್ಯ ಎಂದು ಬೇಕಾದರೆ ಹೇಳಿಬಿಡ ುದು. ನಿಜವಾದ ಕಾಣಿಕೆ ಸಲ್ಲಬೇಕಾದ್ದು ರ್ಜ್ ಥಾಮ್ಸನ್‌ಗೆ, ಗೊತ್ತಾಯಿತೆ?''



ಥಾಮ್ಸನ್ ಬಗ್ಗೆ ದೇವಿಪ್ರಸಾದರಿಗೆ ಧಾರಣ ಗೌರವ. ಪ್ರಾಚೀನ ಗ್ರೀಸ್‌ನ ರಿಕತೆ ಮತ್ತು ಸಂಸ್ಕೃತಿಯ ಬಗ್ಗೆ ಅವರು ಮರು. ಕೇಂಬ್ರಿಜ್ ವಿಶ್ವವಿದ್ಯಾನಿಲಯದ ಈ ್ಯಾಪಕ ಕಾಲೇಜಿನ ಮುಂದೆ ನಿಂತು ಬ್ರಿಟನ್ನಿನ ಕಮ್ಯುನಿಸ್ಟ್ ಪಕ್ಷದ ವಾರಪತ್ರಿಕೆಯನ್ನು ರುತ್ತಿದ್ದರು. ಬೇಡವೆಂದರೂ ಕೇಳುತ್ತಿರಲಿಲ್ಲ. ಪಕ್ಷದ ಸಂವಿಧಾನದಲ್ಲಿ ಪ್ರತಿ ಸ್ಯರೂ ತಾವು ಕೆಲಸ ಮಾಡುವೆಡೆ ಪಕ್ಷದ ಪ್ರಕಟಣೆಗಳನ್ನು ಮಾರಬೇಕೆಂದು ೇಖಿಸಲಾಗಿತ್ತು. ಪಕ್ಷದ ಸದಸ್ಯರಾಗಿ ತಾವದನ್ನು ಮಾಡದಿರುವುದು ಸರಿಯಲ್ಲ ು ಥಾಮ್ಸನ್ ಪ್ರತಿಪಾದನೆ. ವಿಶ್ವವಿದ್ಯಾನಿಲಯವು ಅದನ್ನು ಮಾನ್ಯ ಮಾಡಲು ರಲಿಲ್ಲವಾದ್ದರಿಂದ ಪ್ರಾಧ್ಯಾಪಕ ರಾಜಿನಾಮೆ ನೀಡಿ ಹೊರಬಂದಿದ್ದ. ನಂತರ ಬರ್ಮಿಂಗ್‌ಹ್ಯಾಮ್‌ಗೆ ಹೋದರು. ದೇವಿಪ್ರಸಾದ್ ಅವರನ್ನು ಭೇಟಿ ಮಾಡಿದ್ದು . ಸ್ನೇಹಿತರೊಬ್ಬರ ಮನೆಯಲ್ಲಿ ಉಳಿದುಕೊಂಡಿದ್ದ ಈ ಕಲ್ಕತ್ತಾ ಕಮ್ಯುನಿಸ್ಟನಿಗೆ ಚಾರಿಕ ದಿರಿಸನ್ನು ತೊಡಿಸಿ ಕಳಿಸಿಕೊಟ್ಟಿದ್ದರು ಅವರು. ಥಾಮ್ಸನ್ ಬಳಿ ಹೋದಾಗ ಗೆ ತಿಳಿಯಿತು, ಯಾವ ಬಟ್ಟೆಯನ್ನು ಹೇಗೆ ತೊಡುತ್ತಾರೆಂಬುದು ಆತನಿಗೆ ತ ಗೌಣ ವಿಷಯ, ಎಂದು. ಅವರಾಯಿತು ಅವರ ಬೌದ್ಧಿಕ ಮತ್ತು ಸೈದ್ಧಾಂತಿಕ ವಟಿಕೆಗಳಾಯಿತು. ದೇವಿಪ್ರಸಾದ್ ಜೊತೆ ದೀರ್ಘ ಸಂಭಾಷಣೆ ನಡೆಯಿತು. ಯನ್ನು ಹೀಗೆ ಕುಳ್ಳಿರಿಸಿಕೊಂಡು ಮಾತನಾಡುತ್ತಿದ್ದಾಗ ಅವರಿಗೆ ಸಮಯದ ಾಗಲಿಲ್ಲ. ಶ್ರೀಮತಿ ಥಾಮ್ಸನ್ ಬಾಗಿಲ ಬಳಿ ಬಂದು ಇಣುಕಿದರು. ''ಹೀಗೆ ಾಡುತ್ತಲೇ ಇರುತ್ತೀರೋ, ಅತಿಥಿಗೇನಾದರೂ ಸ್ವಲ್ಪ ಊಟ ಮಾಡಿಸುತ್ತೀರೋ'' ಳು ಆಕೆ. ಕುಳಿತಲ್ಲಿಗೇ ಎರಡು ಊಟದ ಬುತ್ತಿಗಳು ಬಂದುವು. ಅಲ್ಲೇ ಊಟ, ಊಟದುದ್ದಕ್ಕೂ ಥಾಮ್ಸನ್ ಮಾತು. ಅಂತಹ ಭೇಟಿಗಳು ಆಗಾಗ್ಗೆ ಜರುಗುತ್ತಿದ್ದುವು. ವಾರವಿಡೀ ಬ್ರಿಟಿಷ್ ಮ್ಯೂಸಿಯಂನಲ್ಲಿ ಓದಿಕೊಳ್ಳುತ್ತಿದ್ದು ಏನಾದರೂ ಸಂಶಯ ಬಂದು ಚರ್ಚಿಸಬೇಕೆನಿಸಿದರೆ ಬರ್ಮಿಂಗ್‌ಹ್ಯಾಮ್‌ಗೆ ದೌಡು. ಒಂದು ದಿನದ ಊಟ ಬಿಟ್ಟು ರೈಲು ಖರ್ಚಿಗೆ ಹಣ ಉಳಿಸಿಕೊಳ್ಳುತ್ತಿದ್ದರಂತೆ!

ದೇವಿಪ್ರಸಾದ್ ಇಂಗ್ಲೆಂಡಿಗೆ ಹೋದದ್ದು ಯಾವ ವಿದ್ಯಾರ್ಥಿವೇತನವನ್ನೂ ಪಡೆದು ಅಲ್ಲ. ಪದವಿಗಳನ್ನು ಪಡೆದಾಗ ಚಿನ್ನದ ಪದಕಗಳು ಬಂದಿದ್ದುವು, ಅವನ್ನು ಮಾರಿ ಈ ಯುವಕ ಸ್ನೇಹಿತರಿಗೆ ಔತಣ ಮಾಡಿಸಿದ್ದರು. ನೆಂಟರು ಯಾರೋ ಬಂದು ಪದಕ ತೋರಿಸೆಂದು ಕೇಳಿದಾಗ ಇವರು ಕೈ ಅಲ್ಲಾಡಿಸಿ ನಕ್ಕುಬಿಟ್ಟಿದ್ದರಂತೆ. ಸಿಂಧೂ ನಾಗರಿಕತೆಯ ಅಧ್ಯಯನಗಳನ್ನು ಪಾಕಿಸ್ತಾನದಲ್ಲಿ ಸಾಕಷ್ಟು ಶ್ರದ್ಧೆಯಿಂದ ಮುಂದುವರಿಸುತ್ತಿರಲಿಲ್ಲವೆಂಬ ಆಕ್ಷೇಪ ಇವರದು. ವಿಶ್ವದ ಎಲ್ಲ ಉತ್ಖನನಗಳ ವರದಿಗಳನ್ನು ಚೆನ್ನಾಗಿ ಜೋಡಿಸಿಟ್ಟಿದ್ದುದನ್ನು ಆಕ್ಸ್‌ಫರ್ಡ್‌ನಲ್ಲಿ ಆಲ್ಚಿನ್ ತಮ್ಮ ಮನೆಯಲ್ಲಿ ಇವರಿಗೆ ತೋರಿಸಿದ್ದರು. ಹರಪ್ಪದ ಒಂದು ಮೊಹರಿನ ಅಣಕು ಪ್ರತಿರೂಪವನ್ನು ಆಲ್ಚಿನ್ ಅಂದೇ ಇವರಿಗೆ ಕೊಡುಗೆಯಾಗಿ ನೀಡಿದ್ದರು. ಹಾಗೆ ಎಲ್ಲೆಲ್ಲಿಂದಲೋ ದೇವಿಪ್ರಸಾದ್ ಪ್ರಾಚೀನ ಭಾರತದ ಅವಶೇಷಗಳನ್ನು ಒಟ್ಟುಗೂಡಿಸಿಕೊಂಡು ಸಂತೋಷಿಸುತ್ತಿದ್ದರು. ತಮ್ಮ ದೇಶದ ಬಗ್ಗೆ ಹೆಮ್ಮೆ ತೋರ್ಪಡಿಸುತ್ತಿದ್ದುದು ಹಾಗೆ. ಪ್ರತಿಯೊಂದನ್ನೂ ವೈಜ್ಞಾನಿಕವಾಗಿ ವಿಶ್ಲೇಷಿಸಿ ತಿಳಿಯಬೇಕೆಂಬ ಕುತೂಹಲ. ಒಮ್ಮೆ ಕೇಳಿದರು: ''ಮನೆಯ ಅಡುಗೆ ಪಾತ್ರೆಗಳನ್ನು ನಾವೇಕೆ ತೈಜಸ್ಪಾತ್ರ ಎಂದು ಕರೆಯುತ್ತೇವೆ? ಅವಕ್ಕೂ ತೇಜಸ್ಸು ಅಥವಾ ಎನರ್ಜಿಗೂ ಏನು ಸಂಬಂಧ?'' ರವೀಂದ್ರರು ಚಲನಚಿತ್ರಗಳ ಬಗ್ಗೆ ತಾಳಿದ್ದ ಅಭಿಪ್ರಾಯ ಕುರಿತು ನಾನೊಂದು ಲೇಖನ ಪ್ರಕಟಿಸಿದ್ದೆ. ''ಅವರ ಬಗ್ಗೆ ನಮ್ಮ ಶ್ರದ್ಧೆ ಸ್ವಲ್ಪ ಅತಿಯಾಯಿತೇನೋ ಎನಿಸುತ್ತದೆ'' ಎಂದರು ದೇವಿದಾ. ನಂತರ ಹೇಳಿದರು: ''ಅವರನ್ನು ಓದಿದಾಗೆಲ್ಲಾ ಆಶ್ಚರ್ಯ ಕಾದಿರುತ್ತದೆ. ಅದೇನು ದಾರ್ಶನಿಕ ದೃಷ್ಟಿ ಅವರದು!'' ನಾನವರನ್ನು ಒಮ್ಮೆ ಕೇಳಿದೆ: ''ಕಲಾವಿದ ಮತ್ತು ವಿಜ್ಞಾನಿ ಇಬ್ಬರೂ ಪ್ರಕೃತಿಯನ್ನು ಅಧ್ಯಯನ ಮಾಡುತ್ತಾರೆ. ಇಬ್ಬರ ದೃಷ್ಟಿಯೂ ಒಂದೇ ಅಲ್ಲವೆ?'' ಅವರೆಂದರು, ''ಇಲ್ಲ, ಇಲ್ಲ, ಅದು ನಿಮ್ಮನ್ನು ಭಾವನಾವಾದದಲ್ಲಿ ಸಿಲುಕಿಸಿಬಿಡುತ್ತದೆ.'' ಮಾಣಿಕ್ ಬಂದೋಪಾಧ್ಯಾಯರು ದೇವಿಪ್ರಸಾದ್‌ಗೆ ಬಹಳ ನೆಚ್ಚಿನ ಹಿರಿಯರು. ''ಅವರು ಎಂಥಾ ವಿಚಿತ್ರ ವ್ಯಕ್ತಿ ಗೊತ್ತೇ? ಕೊಲ್ಕತ್ತಾದಲ್ಲಿ ಕೋಮುಗಲಭೆಗಳನ್ನು ತಡೆಯಲು ಜೀವಭಯವನ್ನು ಲೆಕ್ಕಿಸದೆ ಬೀದಿಬೀದಿಗಳಲ್ಲಿ ಓಡಾಡುತ್ತಿದ್ದರು. ಕೆಲವೇಳೆ ಆಸಾಮಿ ನಾಪತ್ತೆಯಾಗಿಬಿಡುತ್ತಿದ್ದರು. 'ಮಾಸಿಕ್ ಬಸುಮತಿ' ಎಂಬ ನಿಯತಕಾಲಿಕೆಯಲ್ಲಿ ಅವರದೊಂದು ಕಾದಂಬರಿ ಪ್ರಕಟವಾಗುತ್ತಿತ್ತು. ಒಮ್ಮೆ ಹಾಸಿಗೆ ಹಿಡಿದು ಮಲಗಿದ್ದರು. ಪ್ರಕಾಶಕರ ಕಡೆಯಿಂದ ಒಬ್ಬ ಓಡಿಬಂದು ನನ್ನಲ್ಲಿ ದೂರಿದ, 'ನೀವೆಂಥ ಲೇಖಕನನ್ನು ನಮ್ಮ ಮೇಲೆ ಹೊರಿಸಿದ್ದೀರಿ? ತಿಂಗಳಿಂದ ತಿಂಗಳಿಗೆ ಅವರಿಂದ ಕಂತುಗಳನ್ನು ಪಡೆಯುವುದು ತಲೆನೋವಾಗಿಹೋಗಿದೆ. ಬೇರಾವುದೋ ಕಾದಂಬರಿಯ ಭಾಗವನ್ನು ಈ ತಿಂಗಳ ಕಂತನ್ನಾಗಿ ಕೊಟ್ಟಿದ್ದಾರೆ.' ನಾನು ಮಾಣಿಕ್‌ದಾ ಬಳಿ ಹೋಗಿ ಕೇಳಿದೆ. 'ಹಾಗೇನೂ ಆಗಿಲ್ಲವಲ್ಲ. ಹಿಂದಿನ ಭಾಗದ ಮುಂದುವರಿಕೆಯೇ ಇದು,' ಎಂದರು. 'ಕಾದಂಬರಿಯ ಪಾತ್ರಗಳು ಬೇರೆಯಾಗಿವೆಯಲ್ಲಾ' ಎಂದ ಪ್ರಕಾಶಕರ ಪ್ರತಿನಿಧಿ. 'ಅಯ್ಯೋ, ಕಾದಂಬರಿಯಲ್ಲಿ ಪಾತ್ರಗಳ ಹೆಸರುಗಳು ಅಷ್ಟೊಂದು ಮುಖ್ಯವೇ' ಎಂದವರೇ ಹಸ್ತಪ್ರತಿ ತೆಗೆದುಕೊಂಡು ಹೆಸರುಗಳನ್ನು ಅಲ್ಲೇ ಬದಲಾಯಿಸಿಕೊಟ್ಟರು. ನೋಡಿದರೆ, ಕಾದಂಬರಿ ಲಕ್ಷಣವಾಗಿ ಮುಂದುವರಿದಿತ್ತು.'' ಮಾಣಿಕ್‌ದಾ ಅವರ ಕೊನೆಯ ದಿನಗಳಲ್ಲಿ ಅವರ ಖರ್ಚುವೆಚ್ಚಗಳನ್ನು ತೂಗಿಸುವುದು ದೇವಿದಾ ಪಾಲಿನದಾಗಿತ್ತು. ಹಣವನ್ನು ದುಂದುವೆಚ್ಚ ಮಾಡುವುದು ಮಾಣಿಕ್‌ರ ಅಭ್ಯಾಸ. ಇವರು ಅದನ್ನು ತಡೆಹಿಡಿಯುವ ಮಧ್ಯಸ್ಥ. ಸಾಮಾನ್ಯವಾಗಿ ಮಾಣಿಕ್‌ದಾಗೆ ಹಣ

ಬರುತ್ತಿದ್ದುದು ಅತುಲ್ ಗುಪ್ತರಿಂದ. ಮಾಣಿಕ್‌ರ ಮರಣದ ಸಮಯದಲ್ಲಿ ಅವರ ಬಳಿ ಒಂದು ಚಿಕ್ಕಾಸೂ ಇರಲಿಲ್ಲ. ಸಜನೀಕಾಂತ, ತಾರಾಶಂಕರ, ಮುಂತಾದ ಸಾಹಿತ್ಯ ಕ್ಷೇತ್ರದ ಗಣ್ಯರು ಕಕ್ಕಾಬಿಕ್ಕಿಯಾಗಿ ಕುಳಿತಿದ್ದರು. ದೇವಿದಾ ನೇರವಾಗಿ ಅತುಲ್ ಗುಪ್ತರ ಬಳಿ ಹೋಗಿ ಒಂದಷ್ಟು ಹಣ ತಂದು ಅಂತ್ಯಕ್ರಿಯೆಗೆ ನೆರವಾದರು.

ಸತ್ಯಜಿತ್ ರೇ ಅವರ ವೈಜ್ಞಾನಿಕ ದೃಷ್ಟಿಕೋನದ ಬಗ್ಗೆ ನಾನೊಂದು ಲೇಖನ ಬರೆಯುವುದಿತ್ತು. ಅದನ್ನು ಪ್ರಸ್ತಾಪಿಸಿದಾಗ ದೇಬಿದಾ ಕುಲದ್ರಂಜನ್ ರೇ (ಸತ್ಯಜಿತ್‌ರ ತಂದೆ) ಅವರ ಕ್ರಿಕೆಟ್ ಶೈಲಿಯನ್ನು ವರ್ಣಿಸಲಾರಂಭಿಸಿದರು. ''ಆತನ ಬ್ಯಾಟಿಂಗ್‌ನಲ್ಲಿ ಸಂಪ್ರದಾಯಕ್ಕೆ ಸ್ಥಾನವೇ ಇರಲಿಲ್ಲ ನೋಡಿ'' ಎಂದರು. ಹಾಕಿ ಪಟುವೆಂದು ಹೆಸರು ಮಾಡಿದ್ದ ದೇಬಿದಾ ಎಲ್ಲ ಆಟಗಳಲ್ಲೂ ಆಸಕ್ತರು. ಇನ್ನೊಂದು ಪ್ರಸಂಗ : ಕೊಲ್ಕತ್ತಾ ವಿಶ್ವವಿದ್ಯಾನಿಲಯವು ಸತ್ಯಜಿತ್ ರೇಗೆ ಗೌರವ ಡಾಕ್ಟರೇಟ್ ನೀಡಬೇಕೆಂದು ಆಶಿಸಿತ್ತು. ಆಗ್ಗೆ ಉಪಕುಲಪತಿ ಡಾ॥ ರಾಯ್‌ಚೌಧರಿ ಅವರು ವೈದ್ಯರು. ದೇಬಿದಾಗೆ ನೆಚ್ಚಿನ ಸ್ನೇಹಿತರು, ವೈದ್ಯರು. ಅವರು ಸತ್ಯಜಿತ್ ರೇ ಅವರನ್ನು ಒಪ್ಪಿಸುವ ಕೆಲಸವನ್ನು ದೇಬಿದಾಗೆ ವಹಿಸಿದರು. ಬೇರಾರು ಹೋಗಿ ಕೇಳಿದರೂ ಪದವಿಯನ್ನು ಪಡೆಯಲು ರೇ ಒಪ್ಪದಿರಬಹುದೆಂಬ ಶಂಕೆ ಅವರದು. ದೇಬಿದಾ ರೇ ಅವರಲ್ಲಿಗೆ ಹೋದಾಗ ಅವರು ಹೇಳಿದರು : ''ನನ್ನನ್ನು ಬಲೆಗೆ ಬೀಳಿಸಲು ನೀನು ಸಮರ್ಥನೆಂದು ನಿನ್ನನ್ನು ಕಳಿಸಿದ್ದಾರೆ ನೋಡು,'' ಎಂದು. ಇನ್ನೊಂದು ದಿನ ದೇಬಿದಾ ಒಮ್ಮೆಲೇ ಫೋನ್ ಮಾಡಿ ಹೇಳಿದರು : ''ಇಂಗ್ಲಿಷ್‌ನಲ್ಲಿ ಬರೆದಿರುವ ನನ್ನ ಒಂದು ಕಿರುಹೊತ್ತಿಗೆಯನ್ನು ಬಂಗಾಳಿಗೆ ನೀವು ಅನುವಾದಿಸಿಕೊಡಬೇಕಲ್ಲ.'' ನನ್ನ ಸಾಮರ್ಥ್ಯದ ಮಿತಿಯನ್ನು ಅವರಿಗೆ ಹೇಳಿದೆನಾದರೂ ಅವರು ಒತ್ತಾಯಿಸುತ್ತಲೇ ಇದ್ದರು. ಅವರದೋ ಬಹಳ ಶುದ್ಧವಾದ ಭಾಷೆ, ಉತ್ಕೃಷ್ಟ ಶೈಲಿ. ಅವರ ಬಂಗಾಳಿಗೆ ಸಮನಾಗಿರುವಂತೆ ಹೇಗೆ ಮಾಡುವುದು! ಮೊದಲ ಅಧ್ಯಾಯ ಮಾಡಿ ತೋರಿಸಿದೆ. ''ಭೇಷ್, ಭೇಷ್'' ಎಂದರು. ಭಾಷಾಂತರವನ್ನು ಪೂರ್ಣಗೊಳಿಸಲು ಉತ್ತೇಜಿಸಿ ಕಡೆಗೆ ಅವರೇ ಅನುವಾದವನ್ನು ಪರಿಷ್ಕರಿಸಿದರು. ಶಂಖಾ ಘೋಷ್ ನಮ್ಮ ಒಬ್ಬ ದೊಡ್ಡ ಕವಿ. ''ಕವನ ರಚಿಸಲು ನನ್ನನ್ನು ಮೊದಲು ಉತ್ತೇಜಿಸಿದ್ದು ದೇಬಿದಾ'' ಎಂದು ಅನೇಕ ಬಾರಿ ಅವರು ಹೇಳಿದ್ದಾರೆ. ಅಂತೆಯೇ ಅಶೋಕ ಮಿತ್ರ ಒಂದು ಸಭೆಯಲ್ಲಿ ಹೇಳಿ
''ಪಾಶ್ಚಾತ್ಯ ಕಲೆಗಳ ಬಗ್ಗೆ ಬರೆಯಲು ನನಗೆ ಸ್ಫೂರ್ತಿ ತುಂಬಿದವರು ದೇವಿಪ್ರಸಾ
ಎಂದು. ನಾನೊಂದು ಪುಸ್ತಕ ಪ್ರಕಟಿಸಿದ್ದೆ. ''ಹಸಿವಿನ ವಿಶ್ವದಲ್ಲಿ ದೆವ್ವದ ಹಾಡುಗ
ಎಂದು ಅದರ ಹೆಸರು. ಅದರ ಭಾಷೆ, ಶೈಲಿ ಮತ್ತು ವಸ್ತುವನ್ನು ದೇಬಿದಾ ಶ್ಲಾಘಿಸಿದ
ನನಗೆ ಹೆಮ್ಮೆಯ ಸಂಗತಿ. ಪುಸ್ತಕದಲ್ಲಿ ಮಾಣಿಕ್ ಬಂದೋಪಾಧ್ಯಾಯ ಮತ್ತು ಸತಿ
ಭಾದುರಿಯವರಿಬ್ಬರೂ ೧೯೪೩ರ ಮಹಾ ಕ್ಷಾಮದ ಬಗ್ಗೆ ಬರೆದಿದ್ದುದನ್ನು
ಉದ್ಧರಿಸಿದ್ದೆ. ಹಸಿವಿನಿಂದ ಸಾಯುತ್ತಿದ್ದ ಜನ ಯಾರಿಂದಲೂ ಆಹಾರ ದೋಚ
ಲಿಲ್ಲವೆಂದು ಅವರು ದಾಖಲಿಸಿದ್ದಾರೆ. ಅಂದಿನ ದಿನಗಳನ್ನು ನೆನೆಸಿಕೊ
ದೇವಿಪ್ರಸಾದ್ ಹೇಳಿದರು : ''ನಾನೇ ಅಂತಹ ದೃಶ್ಯಗಳನ್ನು ಕಂಡಿದ್ದೇನೆ. ದ
ಸಿಹಿತಿಂಡಿ ಅಂಗಡಿ ಆಗ್ಗೆ ಕಲ್ಕತ್ತೆಯಲ್ಲಿ ಪ್ರಸಿದ್ಧವಾದ್ದು. ಅದರೆದುರು ಒಬ್ಬ
ಸಾಯುತ್ತಾ ಬಿದ್ದಿದ್ದ. ನಾವು ಸ್ವಯಂಸೇವಕರು. ಅಲ್ಲಿ ಹೋಗುತ್ತಿದ್ದಾಗ ಅಂಗ
ನೌಕರನೊಬ್ಬ ನಮಗೇನು ಹೇಳಿದ ಗೊತ್ತೆ? 'ಅಲ್ಲಿ ಬಿದ್ದಿದೆಯಲ್ಲ ಅದನ್ನ
ಸಾಗಿಸುತ್ತೀರಾ?' ಎಂದು. ಗಿರಾಕಿಗಳು ಅಂಗಡಿಯೊಳಕ್ಕೆ ಹೋಗಲು '
ಅಡ್ಡಿಯಾಗಿತ್ತಂತೆ.'' ಇದನ್ನು ಹೇಳುವಾಗ ದೇಬಿದಾ ಗದ್ಗದಿತರಾದರು. ಇಂಥ
ಕಂಡು ಜನ ಏಕೆ ಉಗ್ರವಾಗಿ ಪ್ರತಿಭಟಿಸುವುದಿಲ್ಲವೆಂಬುದು ಅವರ ಪ್ರಶ್ನೆ. ನ
ಅಂತಸ್ಸತ್ವವೇ ಇಲ್ಲವೇ, ಎಂದು ಆಗಾಗ ಅವರು ಕೇಳುತ್ತಿದ್ದುದುಂಟು.

''ಜನಪ್ರಿಯ ಸಿನೆಮಾಕ್ಕೆ ಒಂದು ಮಾನಸಿಕ ಶೋಧ'' ಎಂಬ ಲೇಖನ ಬ
ಬೇಕೆಂದಿದ್ದೆ. ಲೋಕಾಯತ ದರ್ಶನವನ್ನು ಆಧಾರವಾಗಿಟ್ಟುಕೊಂಡು ಬರೆ
ಆಶಯವನ್ನು ದೇಬಿದಾಗೆ ತಿಳಿಸಿದೆ. ಸತ್ಯಜಿತ್ ರೇ ಅವರ ''ಪಥೇರ್ ಪಾಂಚಾ
ಯಲ್ಲಿನ ಒಂದು ಮಾಂತ್ರಿಕತೆಯ ದೃಶ್ಯ, ಇನ್ನೊಂದು ವ್ರತಾಚರಣೆಯ ದೃಶ್ಯಗ
ಪ್ರಸ್ತಾಪಿಸಿದೆ. ''ನನಗೆ ಇದು ಹೊಳೆದೇ ಇರಲಿಲ್ಲವಲ್ಲ, ನಿನ್ನ ಗ್ರಹಿಕೆ ಚೆನ್ನಾ
ನಾನಿನ್ನೂ ಚಿಕ್ಕವನಾಗಿದ್ದಿದ್ದರೆ ಫ್ರಾಯ್ಡ್ ಬಗ್ಗೆ ಲೇಖನ ಬರೆದು ಅವನಿಗೆ
ಬಿಡಿಸುತ್ತಿದ್ದೆ. ನನಗಿಂತ ನೀವು ಫ್ರಾಯ್ಡ್‌ನನ್ನು ಚೆನ್ನಾಗಿ ಓದಿಕೊಂಡಿದ್ದೀರಿ'' ಎಂ
''ಆದರೆ ಪಾವ್ಲೋವನ ಮನಃಶಾಸ್ತ್ರದ ನೆಲೆಯನ್ನು ಹಿಡಿದು ಫ್ರಾಯ್ಡ್‌ನನ್ನು ಲೆ

ಾಡುವುದು ಆಗದ ಕೆಲಸ'' ಎಂದು ಮಾರ್ಗದರ್ಶನ ಮಾಡಿದರು. ಫ್ರಾಯ್ಡ್‌ನ ಭ್ರಮೆಯೊಂದರ ಭವಿಷ್ಯ'' ಎಂಬ ಮತಧರ್ಮ ಕುರಿತಾದ ಗ್ರಂಥವು ದೇಬಿದಾಗೆ ಹಳ ಪ್ರಿಯವಾಗಿತ್ತು. ಚಲನಚಿತ್ರದ ಬಗೆಗಿನ ನನ್ನ ಪುಸ್ತಕದ ಸಂದರ್ಭದಲ್ಲಿ ಒಮ್ಮೆ ೇಳಿದರು: ''ನನ್ನನ್ನು ಇಕ್ಕಟ್ಟಿಗೆ ಸಿಲುಕಿಸಿದ್ದೀರಿ ಇದನ್ನು ಬರೆದು. ಇದನ್ನು ಮರ್ಶಿಸಲು ಬೇಕಾದಷ್ಟು ತಿಳುವಳಿಕೆ ನನ್ನಲ್ಲಿಲ್ಲವಲ್ಲಾ ಎಂದು ಬೇಸರವಾಗುತ್ತಿದೆ.'' ಮೇಲೆ ಅವರ ಜೀವನದ ಮೊದಲ ಘಟ್ಟದ ಒಂದು ಪ್ರಸಂಗ ಹೇಳಿದರು. ನನಗೆ ಶ್ಚರ್ಯವೆನಿಸಿತು: ''ಬೊಂಬಾಯಿಯ 'ಫಿಲ್ಮಿಸ್ತಾನ್ ಸ್ಟುಡಿಯೋ'ದಲ್ಲಿ ಕೆಲಸ ಾಡಲು ಹೋಗಿದ್ದೆ. ಚಿತ್ರಕತೆ-ಸಂಭಾಷಣೆ ಬರೆಯುವುದು ನನ್ನ ಕೆಲಸ. ಅದಕ್ಕೆ ುಂಚೆ ಇಲ್ಲೇ ಕಲ್ಕತ್ತೆಯ ಸಿಟಿ ಕಾಲೇಜಿನಲ್ಲಿ ತತ್ತ್ವಶಾಸ್ತ್ರ ಬೋಧಿಸುತ್ತಿದ್ದೆ. ನೂರು ೂಪಾಯಿ ಸಂಬಳ. ಅಲ್ಲಿ ಸಾವಿರ ರೂಪಾಯಿ ಕೊಡುವ ಭರವಸೆ ನೀಡಿದ್ದರು. ೊದಲಿಗೆ ಇಬ್ಸೆನ್ನಿನ ಒಂದು ನಾಟಕವನ್ನಾಧರಿಸಿ ಬರೆದೆ. 'ಇಂಥದೆಲ್ಲಾ ಸಿನಿಮಾಕ್ಕೆ ಕ್ಕುದಲ್ಲ, ನೀನೊಬ್ಬ ಬುದ್ಧಿಜೀವಿ ಇರಬೇಕು, ಜನಪ್ರಿಯವಾದ್ದೇನು ಎಂಬುದು ನಗೆ ತಿಳಿಯುವುದಿಲ್ಲ' ಎಂದುಬಿಟ್ಟರು. ಬೊಂಬಾಯಿಯಲ್ಲಿ ಒಬ್ಬ ಕಾರ್ಮಿಕ ಾಯಕನ ಪರಿಚಯವಾಗಿತ್ತು. ಅವನೊಬ್ಬ ಮುಸಲ್ಮಾನ. ಬಿರ್ಲಾ ಕಂಪನಿಯೊಂದರಲ್ಲಿ ಲಸಗಾರರನ್ನು ಸಂಘಟಿಸಲು ಹೋಗಿದ್ದ. ಸಂಘ ಕೂಡದೆಂದು ಮಾಲಿಕರು ರ್ಭಟಿಸಿ ಅಡ್ಡಿಯುಂಟುಮಾಡಿದ್ದರು. ಅದನ್ನಾಧರಿಸಿ ಒಂದು ಚಿತ್ರಕಥೆ ಬರೆದೆ. ್ಡಿಯೋದವರಿಗೆ ಖುಷಿಯಾಯಿತು. ''ಮಜ್ದೂರ್'' ಎಂಬ ಸಿನಿಮಾ ಮಾಡಿದರು. ೊಂಬಾಯಿ ಮತ್ತು ಕೊಲ್ಕತ್ತಾದಲ್ಲಿ ಮೊದಲ ದಿನ ಮಾತ್ರ ಚಿತ್ರ ಓಡಿತು. ಮಾರನೆಯ ನದೊಳಗಾಗಿ ಚಿತ್ರದ ಎಲ್ಲ ಕಾಪಿಗಳನ್ನು ಬಿರ್ಲಾ ಕಂಪನಿ ಕೊಂಡುಕೊಂಡು ಟ್ಟುಹಾಕಿತ್ತು.'' ಸ್ಟುಡಿಯೋ ಮಾಲಿಕರಿಗೆ ಒಟ್ಟಿಗೆ ಅಷ್ಟು ಹಣ ಬಂದಿತಲ್ಲ ಎಂದು ಂತೋಷ! ಸಿನಿಮಾ ಹೊರಬರುವ ಮುಂಚೆ ಆರ್.ಪಿ.ಡಿ.ಗೆ (ರಜನಿ ಪಾಮ್ ತ್: ಕಮ್ಯುನಿಸ್ಟ್ ನಾಯಕ) ತೋರಿಸಲಾಗಿತ್ತು. 'ಒಂದು ದಿನದ ದಿನಚರಿ'ಯಲ್ಲಿ ವರು ಈ ಸಿನಿಮಾವನ್ನು ಶ್ಲಾಘಿಸಿ ಬರೆದಿದ್ದರು. ಕಾರ್ಮಿಕ ಚಳುವಳಿಯ ವೃದ್ಧಿಗೆ ದು ಒಳ್ಳೆಯ ಸಾಧನವೆಂದು ಅದನ್ನು ವಿಶ್ಲೇಷಿಸಿದ್ದರು. 'ಮಾನವಮನ' ಎಂಬ ಂಗಾಳಿ ನಿಯತಕಾಲಿಕೆಯ ಸಭೆಯೊಂದರಲ್ಲಿ ದೇವಿಪ್ರಸಾದ್ ಮಾತನಾಡುತ್ತಾ ತಾವು ಟ್ಟು ಸಹಕಾರ ನೀಡಲಾಗದುದಕ್ಕೆ ಬೇಸರಿಸಿ ಕ್ಷಮೆ ಕೇಳಿದರು. ಅಧ್ಯಕ್ಷತೆ ವಹಿಸಿದ್ದ ್ಯೋತಿ ಬಸು ಅವರನ್ನು ಮಧ್ಯದಲ್ಲೇ ತಡೆದು ಹೇಳಿದರು: ''ಅದಕ್ಕೆಲ್ಲಾ ನೀವೇನೂ ೇಸರಿಸುವ ಅಗತ್ಯವಿಲ್ಲ, ಈಗ ಮಾಡುತ್ತಿರುವಷ್ಟು ಕೆಲಸ ಮಾಡುತ್ತಿರಿ, ಸಾಕು.'' ಧ್ಯಕ್ಷರಾಗಿ ಬೇರೆ ಯಾರೂ ಹಾಗೆ ಹೇಳಿದ್ದು ತಮಗೆ ನೆನಪಿಲ್ಲವೆಂದು ದೇಬಿದಾ ೇಳುತ್ತಿದ್ದರು. ದೇಬಿದಾ ಮತ್ತು ಜ್ಯೋತಿ ಬಾಬು ಮೊದಲಿಗೆ ಭವಾನಿಪುರದ ಮ್ಯುನಿಸ್ಟ್ ಪಕ್ಷದ ಘಟಕಕ್ಕೆ ಸೇರಿದ್ದವರು, ಒಟ್ಟಿಗೆ ಕೆಲಸ ಮಾಡಿದ್ದವರು. ದೇಬಿದಾ ವರ ಅಗಾಧ ಬೌದ್ಧಿಕ ಪರಿಶ್ರಮದ ಪರಿಚಯ ಜ್ಯೋತಿ ಬಸು ಅವರಿಗೆ ಚೆನ್ನಾಗಿಯೇ ತ್ತು. 'ಭಾರತದಲ್ಲಿ ಭಾವನಾವಾದಿ ಪ್ರಸಂಗ' ಮತ್ತು 'ಪ್ರಾಚೀನ ಭಾರತದಲ್ಲಿ ವಿಜ್ಞಾನ' ಬೆರಡು ಪುಸ್ತಕಗಳನ್ನು ಬಂಗಾಳಿಯಲ್ಲಿ ಬರೆಯುತ್ತಿದ್ದಾಗ ದೇಬಿದಾ ನನ್ನೊಡನೆ ಾಗ್ಗೆ ಏನನ್ನಾದರೂ ಪ್ರಸ್ತಾಪಿಸುತ್ತಿದ್ದುದುಂಟು. ಬರೆದಿದ್ದನ್ನೇ ಕೆಲವು ಬಾರಿ ಎರಡು ೂರಾವರ್ತಿ ತಿದ್ದಿ ಬರೆಯುವುದು ಅವರ ರೂಢಿ. ಕಡೆಗೆ ಸರಳವಾಗಿ ಅರ್ಥ ವಹನ ಆಗುವಂತೆ ಮೂಡಿಬಂದರೆ ಅವರಿಗೆ ಮಹದಾನಂದ. ''ವೇದದ ಲನಿರ್ಣಯದ ಬಗ್ಗೆ ತಿಲಕ್ ಅವರದು ಎಷ್ಟು ಕ್ಲಿಷ್ಟವಾದ ಬರವಣಿಗೆಯಾಗಿ ೋಯಿತು! ಇಲ್ಲದಿದ್ದರೆ ಅದಕ್ಕೆಷ್ಟು ಮಹತ್ವ ಸಿಗುತ್ತಿತ್ತು'' ಎಂದು ವಿವರಿಸುತ್ತಿದ್ದರು.

ಶ್ರೀ ಜೀವ್ ನಯತೀರ್ಥ ಒಬ್ಬ ವಿದ್ವಾಂಸರು. ಅವರು ಗತಿಸಿದಾಗ ದೇಬಿದಾ ೇಳಿದರು: ''ಆತ ಮಹಾ ಸಂಪ್ರದಾಯವಾದಿ. 'ನೀನು ತರ್ಕಪಟು, ಆದರೆ ನೀನು ೇಳುವುದೆಲ್ಲಾ ತಪ್ಪು' ಎಂದು ನನ್ನನ್ನು ಛೇಡಿಸುತ್ತಿದ್ದರು. 'ಪ್ರಾಚೀನ ಭಾರತದಲ್ಲಿ ಜ್ಞಾ ವಿಜ್ಞಾನ' ಎಂಬ ಅವರ ಪುಸ್ತಕ ಪ್ರಕಟವಾದಾಗ ಒಮ್ಮೆ ಅವರು ನನಗೆ ೇಳಿದರು, 'ನೋಡು, ನನ್ನ ಮನೆಯ ಮೇಲೆ ಹಲ್ಲೆ ನಡೆಯಬಹುದು; ಏಕೆಂದರೆ, ಮ್ಮ ದೇಶದಲ್ಲಿ ಆಯುರ್ವೇದದ ತುಂಬ ದೇವರು ತುಂಬಿಕೊಂಡುಬಿಟ್ಟಿದ್ದಾನೆ, ದರೆ ನಾನವನನ್ನು ಹೊರಗಟ್ಟಿಬಿಟ್ಟಿದ್ದೇನೆ,' ಎಂದು. ಅವರಿಗೆ ಸಮಾಧಾನ ಹೇಳುತ್ತಾ ಂದೆ, 'ಏನೂ ಭಯಪಡಬೇಡಿ, ನಮ್ಮ ದೇಶದಲ್ಲಿ ಗೂಂಡಾಗಳು ಯಾರೂ ಸ್ತಕಗಳನ್ನೋದುವ ಹವ್ಯಾಸ ಇಟ್ಟುಕೊಂಡಿಲ್ಲ,' ಎಂದು. ಅವರು ನಕ್ಕಿದ್ದೇ ನಕ್ಕಿದ್ದು.'' ಒಮ್ಮೆ 'ಜೆನಿಸಿಸ್' ಎಂಬ ಸಿನಿಮಾ ನೋಡಲು ಗೋಲ್‌ಪಾರ್ಕ್‌ನಲ್ಲಿರುವ ಮಕೃಷ್ಣ ಮಿಶನ್‌ಗೆ ಹೋಗಿದ್ದೆವು. ಅಲ್ಲಿಯ ಸ್ವಾಮೀಜಿ ಇವರ ಸ್ನೇಹಿತರು, ಆಹ್ವಾನ

**ಕನಸು**

ಬಣ್ಣಬಣ್ಣದ
ಕನಸುಗಳು
ಕದ ಬಿಚ್ಚಿ
ತೋರಿಸಿತು
ಒಳಗೆಲ್ಲವೂ
ಶೂನ್ಯ.

ನೀಡಿದ್ದರು. ಋತ್ವಿಕ್ ಘಾಟಕ್ ಮುಂತಾದವರೆಲ್ಲಾ ಬಂದಿದ್ದರು. ಲೋಕಾಭಿರಾಮವಾಗಿ ಮಾತನಾಡುತ್ತಾ ಸ್ವಾಮೀಜಿ ತಮ್ಮ ದೇಹಾರೋಗ್ಯ ಅಷ್ಟು ಚೆನ್ನಾಗಿಲ್ಲವೆಂದು ಹೇಳಿದರು. ದೇವಿಪ್ರಸಾದ್ ತಮ್ಮ ವ್ಯಂಗ್ಯದ ಬಾಣ ಬಿಟ್ಟರು: ''ಹೌದೇ, ನಿಮ್ಮ ಗುರುಗಳ ಗುರು ಶರೀರವಿರುವುದೇ ಅಸಂಭವವೆಂದಿದ್ದರಲ್ಲ, ನೀವು ದೇಹವನ್ನು ನಂಬುತ್ತೀರೇನು?'' ಋತ್ವಿಕ್ ಮುಂತಾದವರೆಲ್ಲಾ ದಂಗಾಗಿಬಿಟ್ಟರು, ಸ್ವಾಮೀಜಿಗೂ ಸ್ವಲ್ಪ ಇರಿಸುಮುರಿಸು ಆಯಿತು. 'ಗುರುಗಳ ಗುರು' ಎಂದರೆ ಶಂಕರಾಚಾರ್ಯ ಎಂದು ನನಗೆ ತಕ್ಷಣಕ್ಕೆ ಹೊಳೆಯಲಿಲ್ಲ. ರಾಹುಲ ಸಾಂಕೃತ್ಯಾಯನರ ಶತಮಾನೋತ್ಸವ ಸಂದರ್ಭದಲ್ಲಿ ಒಂದು ಸಭೆಗೆ ಹೋಗುವುದಿತ್ತು. ದೇಬಿದಾ ಹೇಳಿದರು, ''ನಡೆಯಿರಿ ಹೋಗೋಣ. ರಾಹುಲ್ ಬಗ್ಗೆ ಹೇಳುವುದು ಬಹಳಷ್ಟಿದೆ. ಮೊದಲ ಬಾರಿ ಅವರು ಕೊಲ್ಕತ್ತಾಗೆ ಬಂದಾಗ ಒಂದು ಟೀ ಅಂಗಡಿಯಲ್ಲಿ ಕೆಲಸಕ್ಕಿರಬೇಕಾಗಿ ಬಂದಿತ್ತು. ಎಂತಹ ಅದ್ಭುತ ಪಾಂಡಿತ್ಯ ಸಂಪಾದಿಸಿದರು! ವಿನಯಪಿಟಕದಲ್ಲಿ ರಾಜರ ಹೊಗಳಿಕೆ ಅಷ್ಟೊಂದೇಕಿದೆಯೆಂದು ಅವರು ಮುಜುಗರಪಡುತ್ತಿದ್ದರು. ಅದು ರಚನೆಯಾದದ್ದೇ ಶ್ರೀಲಂಕಾದ ರಾಜನ ಆಸ್ಥಾನದಲ್ಲಿ; ಅದ್ದರಿಂದ ಅದು ಸಹಜವಾಗಿದೆಯೆಂದು ನಾನು ವಿವರಿಸಿದೆ. ಹಾಗಾದರೆ ಅದೆಲ್ಲಾ ಪ್ರಕ್ಷಿಪ್ತವಾಗಿರಬೇಕೆಂದೂ, ಅಂತಹ ಹೊಗಳಿಕೆ ಇಲ್ಲದ ಮೂಲಕೃತಿ ಇದ್ದಿರ ಬೇಕೆಂದೂ ನಾನು ವಾದಿಸಿದಾಗ ಅವರಿಗೆ ಒಪ್ಪಿಗೆಯಾಯಿತು.'' ಒಮ್ಮೆ ದೇಬಿದಾ ರನ್ನಾರೋ ಕೇಳಿದರು, ''ನೀವು ಕಂಡಿರುವ ಮೂರು ಮಂದಿ ಮಹದ್ವ್ಯಕ್ತಿಗಳನ್ನು ಹೆಸರಿಸಿ,'' ಎಂದು. ಇಬ್ಬರ ಹೆಸರನ್ನು ಹೇಳಿದರು: ಅತುಲ್ ಚಂದ್ರ ಗುಪ್ತ ಮತ್ತು ಜಾಮಿನಿ ರಾಯ್. ಇನ್ನೊಂದು ತಮಗೆ ತಿಳಿಯದೆಂದುಬಿಟ್ಟರು. ಬಂಗಾಳಿಯಲ್ಲಿ ಈಚೆಗೆ ಪ್ರಕಟವಾಗುತ್ತಿರುವ ಪುಸ್ತಕಗಳಲ್ಲಿ ಅದೆಷ್ಟು ತಪ್ಪುಗಳೆಂದು ಅವರಿಗೆ ಅಸಹನೆ. ''ಅತುಲ್ ಚಂದ್ರ ಗುಪ್ತರಂತಹವರ ಪುಸ್ತಕಗಳು ಈಗೆಲ್ಲಿ, ಈಗ ನಮ್ಮ ಭಾಷೆಯಲ್ಲಿ 'ಆನಂದಲೋಕ'ದಂತಹ ಸಿನಿಮಾ ಪತ್ರಿಕೆಗಳು ಬಂದುಬಿಟ್ಟಿವೆ. ಅದೇನು ಭಾಷೆ, ಎಷ್ಟು ಅಸಹ್ಯವಾದ ತಪ್ಪುಗಳು! ಹರಪ್ರಸಾದ ಶಾಸ್ತ್ರಿಯವರ 'ಬೌದ್ಧ ಧರ್ಮ' ಪುಸ್ತಕ ತೆಗೆದು ನೋಡಿ. ಎಷ್ಟು ಹಿಂದೆ ಅಚ್ಚಾಗಿದ್ದುದು ಅದು, ಅದರಲ್ಲಿ ಒಂದೇ ಒಂದು ತಪ್ಪು ನಿಮಗೆ ಸಿಗುವುದಿಲ್ಲ'' ಸತ್ಯಜಿತ್ ರೇ ಬಹಳ ಪ್ರಸಿದ್ಧರು ಮತ್ತು ದೇಬಿದಾಗೆ ಒಳ್ಳೆಯ ಸ್ನೇಹಿತ. ಆದರೆ ಅವರ ಬಗ್ಗೆ ಇವರದು ಒಂದು ಆಕ್ಷೇಪ: ಸಂಗೀತಾತ್ಮಕ ನಿರ್ಮಿತಿಯಲ್ಲಿ ಅಷ್ಟು ಪಳಗಿದ್ದ ಈತ ಬರಹಕ್ಕೆ ಕೈಹಾಕಿದ್ದೇಕೆ, ರೇ ಬರೆದ 'ಫೆಲುಡಾ'ಕ್ಕಿಂತಲೂ ಪ್ರೇಮೇನ್ ಮಿತ್ರರ 'ಘನಾದ' ಎಷ್ಟೋ ಸೊಗಸಾಗಿದೆ ಎಂದು ಅವರು ಹೇಳುತ್ತಿದ್ದರು. ಒಮ್ಮೆ ಒಬ್ಬ ಪ್ರಸಿದ್ಧ ಬಂಗಾಳಿ ಕವಿ ದೇಬಿದಾಗೆ ಒಂದು ಮನವಿ ಮಾಡಿಕೊಂಡರು: ರಾಜ್ಯದ ಮಂತ್ರಿಯೊಬ್ಬರಿಗೆ ಪತ್ರ ಬರೆಯಿರಿ, ನನಗೆ ರಾಜ್ಯ ಪ್ರಶಸ್ತಿ ಕೊಡಿಸಿ, ಎಂದು. ಇವರು ಬೆಂಕಿಯಾಗಿ ಅವರನ್ನು ದುರುಗುಟ್ಟಿ ನೋಡಿದ್ದೇ ಸಾಕು, ಅವರು ಜಾಗ ಖಾಲಿ ಮಾಡಿದರು. ದೇವಿಪ್ರಸಾದ್ ಬಿಗಿಯಾದ ಮನುಷ್ಯ, ಯಾವ ಭೀತಿಯನ್ನೂ ಅರಿಯ ದವರು, ಸುಮ್ಮನೆ ಜಾಡು ಹಿಡಿದು ಹೋಗುವವರಲ್ಲ. ಅವರ ತಂದೆ ಬಸಂತ ಕುಮಾರ್ ಮಗನ ಬಗ್ಗೆ ಹೇಳುತ್ತಿದ್ದರಂತೆ: ಇವನ ಸಿದ್ಧಾಂತ ವಿಷಪೂರಿತವಾದ್ದು, ಆದರೆ ಅವನ ವ್ಯಕ್ತಿತ್ವ ಬಹಳ ರಮ್ಯವಾದದ್ದು, ಎಂದು. ಯಾರಿಗೆ 'ಸಿದ್ಧಾಂತ' ಕಟುವಾಗಿ ಕಾಣುತ್ತದೆಂಬುದು ಸ್ಪಷ್ಟ. ದುಡಿಯುವ ಜನರಿಗೆ ಅದು ವಿಷವಲ್ಲ, ಅದು ಸಿದ್ಧೌಷಧಿ.

ಮೂಲ ಬಂಗಾಳಿ: ಸುಬೀರ್ ಗಂಗೂಲಿ
ಬಂಗ್ಲಾ ಅಕಾಡೆಮಿ, ಕೊಲ್ಕತ್ತಾ
ಬಂಗಾಳಿಯಿಂದ ಇಂಗ್ಲಿಷ್‌ಗೆ: ವಿನಾಯಕ ಚಕ್ರವರ್ತಿ ಇಂಗ್ಲಿಷಿನಿಂದ ಕನ್ನಡಕ್ಕೆ: ಜಿ. ರಾಮಕೃಷ್ಣ
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಅಡ್ಡರಸ್ತೆ
ಕಾವೇರಿ ನಗರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ನಮ್ಮ ದೇಶದಲ್ಲಿ ಪ್ರಾಮಾಣಿಕತೆಯು ಖೋತಾ ಆಗಿದೆ

## – ನ್ಯಾಯಮೂರ್ತಿ ಸಂತೋಷ ಹೆಗಡೆ

ನಮ್ಮ ರಾಜ್ಯದಲ್ಲಿ ಹೆಚ್ಚು ಕಡಿಮೆ ಪ್ರತಿನಿತ್ಯ ರಾಜ್ಯ ಲೋಕಾಯುಕ್ತರು ಅಥವಾ ಅವರ ಕಚೇರಿ ಪತ್ರಿಕೆಗಳಲ್ಲಿ ಕಾಣಿಸಿ ಕೊಳ್ಳುತ್ತದೆ. ಅದು ಪ್ರಚಾರಪ್ರಿಯತೆಯ ಆಶಯದಿಂದ ಇರಲಿಕ್ಕಿಲ್ಲ. ಅದರ ವ್ಯಾಪ್ತಿ ಮತ್ತು ಕ್ರಿಯಾಶೀಲತೆ ಹೆಚ್ಚುತ್ತಿರುವುದಕ್ಕೆ ಅದೊಂದು ಸೂಚನೆ. ಅದರ ಕೆಲಸ ವರ್ಧಿಸಿದೆ ಎಂದರೆ ಭ್ರಷ್ಟಾಚಾರದ ಪ್ರಮಾಣ ಅಗಾಧವಾಗಿ ಬೆಳೆಯುತ್ತಿದೆ ಎಂದರ್ಥ. ಬಹಳ ದೊಡ್ಡ ಧಣಿಗಳು, ಮಂತ್ರಿಗಳು ಮತ್ತು ರಾಜಕೀಯ ಪುಢಾರಿಗಳು ಲೋಕಾಯುಕ್ತದ ಬಲೆಗೆ ಬಿದ್ದಿದ್ದು ಕಡಿಮೆ. ಅದೊಂದು ವಿಪರ್ಯಾಸ ಕೂಡ. ಏಕೆಂದರೆ, ಎಲ್ಲರೂ ಕಾಣುತ್ತಿರುವಂತೆ ಮಹಾಭ್ರಷ್ಟರಾಗಿರುವವರು, ರಾಜ್ಯದ ಬೊಕ್ಕಸಕ್ಕೆ ಬರಬೇಕಾದ್ದನ್ನು ತಮ್ಮ ಖಜಾನೆಗೆ ತುಂಬಿಕೊಳ್ಳುತ್ತಿರುವವರು, ಕೇವಲ ಸರ್ಕಾರದ ನೌಕರರು–ಅಧಿಕಾರಿಗಳು ಮಾತ್ರವಲ್ಲ. ಮುಖ್ಯಮಂತ್ರಿಗಳು ಹಾಗೂ ಇತರ ಮಂತ್ರಿಗಳು, ಅವರ ಆಶ್ರಯದಲ್ಲಿರುವವರು, ಅವರ ಪಕ್ಷದ "ಸಾಂಸ್ಕೃತಿಕ ನಿಯಂತ್ರಕರು", ಅವರಿಗೆ ಶ್ರೀರಕ್ಷೆಯೊದಗಿಸುವ ಪೀಠಾಧಿಪತಿಗಳು, ಅವರ ಪಕ್ಷಕ್ಕೆ ಮೀನುಗಳನ್ನು ಸೆಳೆಯಲು ಗಾಳ ಹಾಕುವುದಕ್ಕೆ ಹಣ ಭರಿಸುವ ಗಣಿಗಳ ಅಧಿಪತಿಗಳು, ಐ.ಎ.ಎಸ್.–ಐ.ಪಿ.ಎಸ್. ಅಧಿಕಾರಿಗಳು, ಕಡೆಗೆ ನ್ಯಾಯಾಂಗದ ಧುರೀಣರು, ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ರಾಜ್ಯಕ್ಕೆ ಆದಾಯವಾಗಬೇಕಾದ್ದನ್ನು ಖಾಸಗಿಯಾಗಿ ಪರಿವರ್ತಿಸಿಕೊಳ್ಳುತ್ತಿದ್ದಾರೆ. ಸಂಬಳ ಪಡೆಯುವ ಜನರಲ್ಲಿ ಎಷ್ಟೋ ಮಂದಿಗೆ ಸಂಬಳ ಗೌಣವಾಗಿ ಗಿಂಬಳವೋ ಸಿಂಬಳವೋ ಪ್ರಮುಖ ಆದಾಯವಾಗಿದೆ. ಸಾಮಾನ್ಯ ಜನರು ಇಂತಹ ಎಲ್ಲ ಗುಂಪುಗಳ ಭ್ರಷ್ಟರಿಗೆ, ಲಂಚಗುಳಿತನದ ಪ್ರಧಾನ ಲಾಭಕೋರರರಿಗೆ ಛೀ–ಥೂ ಹೇಳುವುದನ್ನು ಎಂದೋ ಬಿಟ್ಟುಬಿಟ್ಟಿದ್ದಾರೆಂಬ ಮಾತೊಂದಿದೆ. ಅದು ಪೂರ್ತಿ ನಿಜವಲ್ಲ; ಆದರೆ ಅಂಥವರ ಪ್ರಭಾವ, ಮಧ್ಯಪ್ರವೇಶ ಕುಸಿಯುತ್ತಿದೆ. ಈ ಹಿನ್ನೆಲೆಯಲ್ಲಿ ಕಾರ್ಯಪ್ರವೃತ್ತರಾಗಿರುವವರು ಲೋಕಾಯುಕ್ತರು ಹಾಗೂ ಅವರ ತಂಡ. ಲೋಕಾಯುಕ್ತ ಕಚೇರಿಯಲ್ಲಿ ಭ್ರಷ್ಟಾಚಾರದ ಸೋಂಕು ಇನ್ನೂ ಹತ್ತಿಲ್ಲದಿರುವುದೇ ಒಂದು ಪವಾಡವೆನ್ನುವ ಮಂದಿ ನಮ್ಮಲ್ಲಿ ಇದ್ದಾರೆ. ಒಟ್ಟಿನಲ್ಲಿ, ಭ್ರಷ್ಟಾಚಾರವನ್ನು "ಒಂದು ಜೀವನಕ್ರಮ" ಎಂಬಂತೆ ಅಂಗೀಕರಿಸಲಾಗುತ್ತಿದೆ. (ಸರ್ವೋಚ್ಚ ನ್ಯಾಯಾಲಯವು ಹಿಂದುತ್ವವು ಒಂದು ಧರ್ಮವಲ್ಲ, ಅದೊಂದು ಜೀವನಕ್ರಮ ಎಂದು ತೀರ್ಪು ನೀಡಿದ್ದುದು ನೆನಪಿಗೆ ಬರುತ್ತದಲ್ಲವೆ?) ಅದನ್ನು ಪ್ರಶ್ನಿಸುವುದು, ನಿವಾರಿಸಲು ಮುಂದಾಗುವುದು, ಪ್ರತಿಭಟಿಸುವುದು, ಕಾನೂನು ಕ್ರಮಗಳಿಂದ ತಡೆಯುವುದು, ಎಲ್ಲಾ ಸ್ವಾಗತಾರ್ಹ. ಅದು ಸಾರ್ಥಕವೂ ಆಗಬೇಕು. ಅದಕ್ಕೆ ಪ್ರಜ್ಞಾಪೂರ್ವಕ ಸಾಮುದಾಯಿಕ ಮಧ್ಯಪ್ರವೇಶವಾಗಬೇಕು, ಅದಕ್ಕೆ ಅಣಿಗೊಳ್ಳಬೇಕು. ಅದಕ್ಕೆ ಪೂರಕವಾಗಬೇಕಾದ ಮಾಧ್ಯಮಗಳು ಭ್ರಷ್ಟಾಚಾರದ ಬೆಟ್ಟವನ್ನು ಬೆಳೆಸುತ್ತಿವೆಯೆಂಬುದು ಇತ್ತೀಚಿನ ಚುನಾವಣೆಗಳಲ್ಲಿ (ಮಹಾರಾಷ್ಟ್ರ, ಹರಿಯಾಣ ಇತ್ಯಾದಿ) ಸಾಬೀತಾಯಿತು. ಪತ್ರಿಕೆಗಳ ಪುಟಗಳನ್ನು ಭ್ರಷ್ಟಾಚಾರದ ಫಲವಾದ ತಥಾಕಥಿತ ಸುದ್ದಿ ಮತ್ತು ವಿಶ್ಲೇಷಣೆಗಳಿಂದ ತುಂಬಿದ್ದು ಎಲ್ಲರಿಗೂ ತಿಳಿದ ವಿಷಯ. ಹೀಗಿರುವಾಗ ಲೋಕಾಯುಕ್ತ ವ್ಯವಸ್ಥೆ ಏನು ಮಾಡಬಹುದು, ಎಷ್ಟು ಯಶಸ್ವಿಯಾಗಬಹುದು ? ಅದನ್ನು ಲೋಕಾಯುಕ್ತರಿಂದಲೇ ತಿಳಿಯುವ ಉದ್ದೇಶದಿಂದ ಶ್ರೀ ನ್ಯಾಯಮೂರ್ತಿ ಸಂತೋಷ ಹೆಗಡೆಯವರನ್ನು 'ಹೊಸತು' ಭೇಟಿಯಾಗಿ ಸಂದರ್ಶಿಸಿತು. ಅದಕ್ಕೆ ಅವಕಾಶ ಕೊಟ್ಟ ಶ್ರೀ ಹೆಗಡೆಯವರಿಗೆ ಮತ್ತು ಅದನ್ನು ಆಯೋಜಿಸಿಕೊಟ್ಟು ಸಂದರ್ಶನದಲ್ಲೂ ಭಾಗಿಗಳಾದ ಶ್ರೀ ಕೋ. ಚೆನ್ನಬಸಪ್ಪ ಅವರಿಗೆ 'ಹೊಸತು' ಋಣಿಯಾಗಿದೆ.

ಸಂದರ್ಶನದಲ್ಲಿ
ಶ್ರೀ ಎಸ್. ಸುರೇಂದ್ರ, ಡಾ|| ಜಿ. ರಾಮಕೃಷ್ಣ
ಮತ್ತು ಶ್ರೀ ಕೆ. ಪಿ. ಸ್ವಾಮಿ ಭಾಗಿಗಳಾಗಿದ್ದರು.

ಸಂದರ್ಶನ ಲೇಖನ ಸಿದ್ಧಪಡಿಸಿದವರು
ಡಾ|| ಜಿ. ರಾಮಕೃಷ್ಣ

ಚಿತ್ರಗಳು
ಶ್ರೀ ಕೆ. ಪಿ. ಸ್ವಾಮಿ

**ಹೊ**ಸತು : ನಮ್ಮ ಪತ್ರಿಕೆಯು ನಿಮ್ಮಂಥವರನ್ನು ಭೇಟಿಯಾಗಿ ಸಂದರ್ಶಿಸಲು ಅವಕಾಶ ಕಲ್ಪಿಸಿಕೊಟ್ಟಿದ್ದು ಸಂತೋಷದ ವಿಷಯ. ವಿಶೇಷ ಪರಿಣತಿ ಇಲ್ಲದವರೂ ಜನಕ್ಕೆ ಸಂಬಂಧಿಸಿದ ವಿಷಯಗಳನ್ನು ಸ್ವತಃ ವಿಶ್ಲೇಷಿಸಿ ಕೊಳ್ಳಲು ಸಮರ್ಥರು ಮತ್ತು ಅದನ್ನವರು ಮಾಡಿಕೊಳ್ಳು ವಂತಾಗಬೇಕೆಂಬುದು ನಮ್ಮ ಉದ್ದೇಶ. ಆ ದೃಷ್ಟಿಯಿಂದ ತಮ್ಮ ಅಭಿಪ್ರಾಯಗಳನ್ನು ಪಡೆಯಲು ಉತ್ಸುಕರಾಗಿದ್ದೇವೆ. ಪೀಠಿಕೆಯ ರೂಪದಲ್ಲಿ ಒಂದು ಪ್ರಶ್ನೆ: ನಮ್ಮ ದೇಶ ಪುರಾತನವಾದುದು. ಉನ್ನತ ದೇಶ, ಉನ್ನತ ಸಂಸ್ಕೃತಿ ಇತ್ಯಾದಿಯಾಗಿ ನಮ್ಮ ಬಗ್ಗೆ ಹೇಳಿಕೊಳ್ಳುವುದುಂಟು. ಸಾವಿರಾರು ವರ್ಷಗಳ ಚರಿತ್ರೆ ಇರುವ ನಮ್ಮ ದೇಶದಲ್ಲಿ ಸಹಜವಾಗಿಯೇ ಸದಾ ಮೌಲ್ಯಪ್ರಜ್ಞೆ, ಮೌಲ್ಯಯುತ ಜೀವನಗಳ ಬಗ್ಗೆ ಚಿಂತನೆ ನಡೆದಿದೆ. ಉಪನ್ಯಾಸಗಳಲ್ಲಿ ಅದನ್ನು ಕುರಿತಂತೆ ಹೆಮ್ಮೆಯೂ ವ್ಯಕ್ತವಾಗುತ್ತದೆ. ನಮ್ಮ ನೈತಿಕತೆಯ ಪರಂಪರೆಯ ಬಗ್ಗೆ ಭಾಷಣ ಮಾಡಿ ಆಮೇಲೆ ಅವರೇ ಸ್ವತಃ ನಿಕೃಷ್ಟವಾಗಿ ನಡೆದು ಕೊಳ್ಳುವುದಕ್ಕೆ ನಿದರ್ಶನಗಳು ಬೇಕಾದಷ್ಟಿವೆ. ನಿಮ್ಮ ಪ್ರಕಾರ ನಮ್ಮಲ್ಲಿ ಭ್ರಷ್ಟಾಚಾರ ಇಷ್ಟೊಂದು ಏಕಿದೆ ?

**ನ್ಯಾಯಮೂರ್ತಿ ಸಂತೋಷ ಹೆಗಡೆ:** ಭಾರತ ದೇಶದಲ್ಲಿ ಪ್ರಾಮಾಣಿಕತೆ ಇಲ್ಲದಿರುವುದು ಕೇವಲ ಇತ್ತೀಚಿನ ವಿಚಾರವಲ್ಲ. ವಿವೇಕಾನಂದರು ಒಮ್ಮೆ ಹೇಳಿದ್ದರು, ''ನಮ್ಮಲ್ಲಿ ದಾನಿಗಳು ಇದ್ದಾರೆ, ಆದರೆ ದಾನ ಪಡೆದುದನ್ನು ಪ್ರಾಮಾಣಿಕವಾಗಿ ಖರ್ಚು ಮಾಡುವವರು ಕಡಿಮೆ'', ಎಂದು. ಅಂದರೆ ಅವರ ಕಾಲದಲ್ಲೂ ಈ ಸಮಸ್ಯೆ ಇದ್ದಿತು. ಸಮಾಜದ ಜೊತೆಯಲ್ಲೇ ಭ್ರಷ್ಟಾಚಾರ ಹುಟ್ಟಿರಬೇಕು. ನಮ್ಮ ವಿವಿಧ ಧಾರ್ಮಿಕತೆಗಳ ಯಾವ ಪ್ರಾಚೀನ ಆಧಾರ ಗ್ರಂಥ ತೆಗೆದು ನೋಡಿದರೂ ಯಾವು ದಾದರೂ ಮಾತಿನಲ್ಲಿ ಭ್ರಷ್ಟಾಚಾರವನ್ನು ಟೀಕಿಸಿವೆ.

**ಹೊ :** ಚಾಣಕ್ಯನಂತೂ ಅದನ್ನು ಕುರಿತು ಒಂದು ಅಧ್ಯಾಯವನ್ನೇ ಬರೆದುಬಿಟ್ಟಿದ್ದಾನೆ.

**ಸಂ :** ಆದರೆ ಇತ್ತೀಚೆಗೆ ನಮ್ಮ ಸಮಾಜವೇ ಅದನ್ನು ಒಪ್ಪಿಕೊಂಡಂತಾಗಿಬಿಟ್ಟಿದೆ. ಐಶ್ವರ್ಯ ಅನ್ನುವುದು ಅಷ್ಟು ಪ್ರಧಾನವಾಗಿಬಿಟ್ಟಿದೆ. ಭ್ರಷ್ಟಾಚಾರ ಮತ್ತು ಪ್ರಾಮಾಣಿಕತೆಯನ್ನು ಒಂದೇ ರೀತಿ ನೋಡುವ ಪ್ರವೃತ್ತಿ ಅನಾರೋಗ್ಯಕರವಾದ್ದು. ಹೇಗೆ ಶ್ರೀಮಂತಿಕೆಯನ್ನು ಗಳಿಸಲಾಗಿದೆಯೆಂಬ ವಿಚಾರವನ್ನೇ ಮಾಡದೆ ಶ್ರೀಮಂತ ರೆಂದ ಕೂಡಲೇ ಗೌರವ ನೀಡುವುದು ಒಂದು ಪದ್ಧತಿ ಯಾಗಿಬಿಟ್ಟಿದೆ. ಶ್ರೀಮಂತಿಕೆಯನ್ನು ನಿಷ್ಠೆ-ಕಷ್ಟಗಳಿಂದ ಪಡೆದಿರಲಿ, ಇಲ್ಲದಿರಲಿ, ಎಲ್ಲಾ ಒಂದೇ ಎಂಬ ಭಾವನೆ ಎದ್ದುಕಾಣುತ್ತಿದೆ. ಈ ಮನೋಭಾವ ಕೂಡದು. ಅಲ್ಲದೆ, ಇದರಲ್ಲಿ ಸ್ಪರ್ಧೆ ಏರ್ಪಟ್ಟಿದೆ; ಮಿತಿಯಿಲ್ಲದಷ್ಟು ಕೂಡಿ ಹಾಕಿಕೊಳ್ಳುವ ಸ್ಪರ್ಧೆ. ಅದೂ ಆದಷ್ಟೂ ಬೇಗ ಮತ್ತು ವಿಪುಲವಾಗಿ ಸಂಪಾದಿಸಿ ಸ್ಪರ್ಧೆಯಲ್ಲಿ ಗೆಲ್ಲಬೇಕು !

**ಹೊ :** ಕೆಲವರು ಹೇಳುತ್ತಾರೆ, ಧಾರ್ಮಿಕ ಭಾವನೆಗಳ ಮುಖೇನ ಇದರಲ್ಲಿ ಬದಲಾವಣೆ ತರಬಹುದು, ಎಂದು.

**ಸಂ :** ಇಲ್ಲ, ಏಕೆಂದರೆ ಧರ್ಮದ ವಿಚಾರ ಮಾಡುವವರೂ ಭ್ರಷ್ಟಾಚಾರದಲ್ಲಿ ಸೇರಿದ್ದಾರೆ.

**ಹೊ :** ಅವರಲ್ಲಿಗೆ ಮೊದಲು ಓಡುವವರಲ್ಲಿ ಭ್ರಷ್ಟಾಚಾರದ ಕೇಡಿನಲ್ಲಿ ತೊಡಗಿರುವವರೇ ಹೆಚ್ಚಿ[...] ಆಮೇಲೆ ಅಲ್ಲಿ ಕೈಂಕರ್ಯ ಸಲ್ಲಿಸಿದರಾಯಿತು.

**ಸಂ:** ಈಚೆಗೆ ಒಂದು ವಿಚಾರಗೋಷ್ಠಿ [...] ಪತ್ರಿಕೋದ್ಯೋಗಿಯೊಬ್ಬರು ಹೇಳಿದರು, ''ರಾಜಕೀ[...] ದಲ್ಲಿರುವವರು ವಿಪರೀತವಾಗಿ ಧರ್ಮದ ಮಾತನ[...] ತ್ತಿದ್ದಾರೆ ಮತ್ತು ಧಾರ್ಮಿಕ ಪಂಥಗಳ ಮುಖಂ[...] ರಾಜಕೀಯ ಮಾಡುತ್ತಿದ್ದಾರೆ'', ಎಂದು.

ನಮ್ಮ ಜಾತಿಗೆ ಇಷ್ಟು ಪ್ರಾತಿನಿಧ್ಯ ಕೊಡಿ, ನಮ್ಮ ವ[...] ಜಮೀನು ಕೊಡಿ, ನಮಗೊಂದು ಮೆಡಿಕಲ್ ಕಾಲೇ[...] ಕೊಡಿ, ಎಂದು ಮಂತ್ರಿಗಳಿಗೆ ಹೇಳಿ ಮಾಡಿಸಿಕೊ[...] ಧಾರ್ಮಿಕ ಮುಖಂಡರು ಯಾರಿಗೂ ಕಡಿಮೆ ಇಲ್ಲ[...]

**ಹೊ :** ಮೆಡಿಕಲ್ ಕಾಲೇಜುಗಳ ಯಜಮಾ[...] ಎಷ್ಟು ದೊಡ್ಡವರಾಗಿದ್ದಾರೆಂದರೆ ಅವರೀಗ [...] ನ್ಯಾಯಾಲಯದ ತೀರ್ಪನ್ನು ಸಹ ವ[...] ಮಾಡುವುದಿಲ್ಲ.

**ಎಸ್. ಸುರೇಂದ್ರ :** ಇನ್ನೊಂದು ವಿಷ[...] ಧಾರ್ಮಿಕತೆಯ ಪ್ರದರ್ಶನ ಈಚೆಗೆ ಜಾಸ್ತಿಯಾಗು[...] ಅಂತೆಯೇ ಹಣಕ್ಕಾಗಿ ತಹತಹಿಸುವುದು ಸಹ.

**ಸಂ :** ಹೌದು, ತಿರುಪತಿ ತಿಮ್ಮಪ್ಪನಿಗೆ ೪೫ ಕೋ[...] ರೂಪಾಯಿನ ಕಿರೀಟ ತೊಡಿಸುವವರು ಬಳ್ಳಾ[...] ಜನರ ಪರಿಸ್ಥಿತಿ ಬಗ್ಗೆ ಕಾಳಜಿ ವಹಿಸುವು[...] ತಿಮ್ಮಪ್ಪನಿಗೆ ಕೊಡುವುದು ಸಹ ಅವನು ಬಡ್ಡಿ ಸ[...] ಹಿಂದಿರುಗಿಸುತ್ತಾನೆಂಬ ಭರವಸೆ ಮೇರೆಗೆ.

**ಹೊ :** ಅದನ್ನು ಗುರುತಿಸದೆ ಜನ ಇವರ ಎ[...]



ಯನ್ನು ಹೊಗಳುತ್ತಾರಲ್ಲ! ಎಲಾ, ಇವರಿಗೆ ಇಷ್ಟು ಎಲ್ಲಿಂದ ಬಂತು ಎಂಬ ಪ್ರಶ್ನೆ ಬೇಡವೆ ?

**ಸಂ :** ತಿಮ್ಮಪ್ಪನಿಗೆ ಈಗಲೇ ಏಕೆ ಕಿರೀಟ ಬೇಕಾಗಿ ತು ? ಬಳ್ಳಾರಿಯ ಜನಕ್ಕೇನಾಗುತ್ತಿದೆ, ಸಂಡೂರಿನ ಮತ್ತು ವಾತಾವರಣದ ಯೋಚನೆ ಎಲ್ಲಿದೆ, ಲ್ಲಿಯ ತೋಟಗಳ ಗತಿ ಏನಾಗಿದೆ, ಯಾವುದರ ವೆಯೂ ಇಲ್ಲ. ಕರಾವಳಿಯವನಾದ ನನಗೆ ಇದು ಸರ ತರಿಸುತ್ತದೆ. ನನ್ನ ವರದಿಯಲ್ಲಿ ಇದೆಲ್ಲಾ ಇದೆ. ರ್ಯದ ಹೆಸರಲ್ಲಿ ಏನೆಲ್ಲಾ ಮಾಡುವುದು ಒಂದು ಡವಾಳದ ಹೂಡಿಕೆಯೇ ಆಗಿದೆ.

**ಹೊ :** ಅದೊಂದು ವಜ್ರಕವಚ ಕೂಡ, ಅವರ ಣೆಗೆ ಬರುತ್ತದೆ. ಜನರ ಮುನಿಸನ್ನು ಎದುರಿಸಲು ದು ಆಯುಧ ಅದು. ಶ್ರದ್ಧೆ ಇರಬೇಕೆಂದೇನೂ ವಲ್ಲ. ಇನ್ನೊಂದು ಪ್ರಶ್ನೆಗೆ ಹೊರಳೋಣ : ೀಕಾಯುಕ್ತರ ಬಲೆಗೆ ಬಿದ್ದವರ ಬಗ್ಗೆ ವರದಿಗಳು ತ್ತಿವೆ. ಅವರ ವಿರುದ್ಧ ಮೊಕದ್ದಮೆ ಹೂಡಲು ಕಾರ ಬೇಕೆಂದು ನೀವು ಹೇಳುತ್ತಿರುತ್ತೀರಿ. ರುವ ನಿಮ್ಮ ಅಧಿಕಾರದ ವ್ಯಾಪ್ತಿ ಏನು ಮತ್ತು ನ್ನು ವಿಸ್ತರಿಸಲು ಏಕೆ ಹಿಂದೇಟು ?

**ಸಂ :** ಇದರಲ್ಲಿ ಎರಡು ಭಾಗಗಳಿವೆ. ನಾನು ಮಾಧಿಕಾರವನ್ನೇನೂ ಬಯಸುವುದಿಲ್ಲ. ನಾನು ವುದಿಷ್ಟೆ: ಉಪಲೋಕಾಯುಕ್ತರಿಗಿರುವ ಅಧಿಕಾರ ೀಕಾಯುಕ್ತರಿಗೂ ಕೊಡಿ, ಎಂದು. ಅಂದರೆ, ಸ್ವಯಂ ರಣೆ ಮಾಡುವ ಅಧಿಕಾರ. ಈಗಿನ ಕಾಯಿದೆ ರ ಪ್ರಥಮ ಶ್ರೇಣಿಯ ಅಧಿಕಾರಿಗಳಿಂದ ಹಿಡಿದು ರನ್ನೂ ತನಿಖೆ ಮಾಡುವ ಅಧಿಕಾರ ಇದೆ. ಭೆಯಲ್ಲಿರುವ ರಾಜಕಾರಣಿಗಳು ನಮ್ಮ ವ್ಯಾಪ್ತಿಗೆ ತ್ತಾರೆ, ಮುಖ್ಯಮಂತ್ರಿಗಳನ್ನುಳಿದು. ಸ್ವಯಂ ರಣೆ ನಡೆಸುವ ಅಧಿಕಾರ ಹಿಂದೆ ಇತ್ತು, ಅದನ್ನು ದುಹಾಕಲಾಗಿದೆ. ಕಾರಣ ಸ್ಪಷ್ಟ: ನಮ್ಮ ಮೇಲೆ ೀ ಏಕೆ ಇಂಥದನ್ನು ತಂದುಕೊಳ್ಳಬೇಕು, ಎಂದು.

**ಹೊ :** ಕಲ್ಲು ಚಪ್ಪಡಿಯನ್ನು ತಲೆಯ ಮೇಲೆ ಎಳೆದುಕೊಳ್ಳಬಾರದಲ್ಲ...

**ಸಂ :** ಈಗಿನ ಅಂಕಿ-ಸಂಖ್ಯೆ ನೋಡಿದರೆ ನಾವು ಕಿರಿಯ ಅಧಿಕಾರಿಗಳ ವಿಚಾರಣೆಯನ್ನು ಮಾಡುತ್ತಿರುವುದು ಹೆಚ್ಚು, ಹಿರಿಯರದು ಇಲ್ಲ. ಅದಾಗ ಬೇಕಾದರೆ ಅವರ ಮೇಲೆ ದೂರು ಕೊಡಬೇಕಾಗುತ್ತದೆ. ದೂರು ಕೊಟ್ಟರೆ ಅವರು ಯಾರೆಂಬುದು ಬಹಿರಂಗ ವಾಗಿಬಿಡುತ್ತದೆ. ಹಣವಂತರು, ಬಲಶಾಲಿಗಳು ಅದನ್ನು ಆಗಗೊಡುವುದಿಲ್ಲ. ಅವರೊಂದಿಗೆ ಕೈಜೋಡಿಸುವ ಜನರೂ ಇದ್ದಾರೆ. ಈ ನಡುವೆ ಕುಮಾರಸ್ವಾಮಿ ಸರ್ಕಾರ ಒಂದು ಬುದ್ಧಿವಂತಿಕೆ ತೋರಿತ್ತು: ಅಧಿಕಾರಿಗಳ ವಿಚಾರಣೆ ನಡೆಸುವ ಹಕ್ಕು ನೀಡಿ ಶಾಸನವನ್ನು ತಂದಿತು, ಅದರಲ್ಲಿ ರಾಜಕಾರಣಿಗಳ ಕೈಬಿಡಲಾಗಿತ್ತು. ರಾಜ್ಯಪಾಲರು ಮಸೂದೆಗೆ ಅಂಗೀಕಾರ ನೀಡಲಿಲ್ಲ. ರಾಜಕಾರಣಿಗಳನ್ನೂ ಸೇರಿಸಬೇಕೆಂದು ಅವರ ಆಗ್ರಹ. ಮೊದಲು ಅಧಿಕಾರಿಗಳದ್ದನ್ನು ಕೊಟ್ಟಿದ್ದರೆ ಕೆಲಸ ಮಾಡಿ ಪ್ರಯೋಜನ ತೋರಿಸಬಹುದಿತ್ತು, ಆದರೆ ಈಗ ಎರಡೂ ಇಲ್ಲ. ನಾನು ಬಂದು ಮೂರು ವರ್ಷ ಎರಡು ತಿಂಗಳಾಯಿತು. ಅಧಿಕಾರವಿಲ್ಲ ಮತ್ತು ಅದನ್ನು ಕೊಡುವ ಸಂಭವವೂ ಇಲ್ಲ. ಬದಲಾಗಿ, ನನ್ನ ಒತ್ತಾಯವು ಅವರಿಗೊಂದು ಅಸ್ತ್ರವಾಗಿದೆ. ಶಾಸನಸಭೆಯಲ್ಲಿ ಮೊದಲ ದಿನ ಲೋಕಾಯುಕ್ತರಿಗೆ ನೀಡಬೇಕಾದ ಅಧಿಕಾರದ ಬಗ್ಗೆ ಚರ್ಚೆ ಬರುತ್ತದೆ! ಏಕೆ ಗೊತ್ತೆ? ಎರಡು ಸೆಷನ್‌ಗಳ ನಡುವೆ ನಡೆದಿರಬಹುದಾದ ಹಗರಣಗಳಿರುತ್ತವೆಯಲ್ಲ, ಅವನ್ನು ಮುಚ್ಚಿಹಾಕಲು ಸುಮ್ಮನೆ ಲೋಕಾಯುಕ್ತರನ್ನು ಎಳೆದುತರುತ್ತಾರೆ.

**ಹೊ :** ರಾಜಕೀಯ ಪಕ್ಷಗಳ ನಿಲುವೇನು ?

**ಸಂ :** ಮೂರು ದೊಡ್ಡ ಪಕ್ಷಗಳಿವೆ : ಕಾಂಗ್ರೆಸ್, ಬಿಜೆಪಿ, ಜೆಡಿಎಸ್. ಮೂರೂ ಚುನಾವಣೆಯ ಪ್ರಣಾಲಿಕೆಗಳಲ್ಲಿ, ಅಧಿಕಾರಕ್ಕೆ ಬಂದರೆ ಲೋಕಾಯುಕ್ತರಿಗೆ ಹೆಚ್ಚಿನ ಅಧಿಕಾರ ನೀಡುವುದಾಗಿ ಹೇಳಿರುತ್ತವೆ. ಆದರೆ ಅಧಿಕಾರಕ್ಕೆ ಬಂದಾಗ ಹಾಗೆ ಮಾಡುವುದಿಲ್ಲ.

**ಹೊ :** ಅಧಿಕಾರಕ್ಕೆ ಬರದ ಬೇರೆರಡು ಪಕ್ಷಗಳು ಅದನ್ನು ಒತ್ತಾಯಿಸಬೇಕಲ್ಲವೆ ?

**ಸಂ :** ಹೊರಗೆ ಅದನ್ನು ಒತ್ತಾಯಿಸುವ ಮಾತಾಡುತ್ತಾರೆ, ಆದರೆ ಒಳಗೊಳಗೆ ಏನು ಮಾತನಾಡಿಕೊಳ್ಳುತ್ತಾರೋ... ಸಭೆಯೊಳಗೆ ಅದನ್ನು ಒತ್ತಾಯಿಸುವುದಿಲ್ಲ. ಇನ್ನು, ಭ್ರಷ್ಟಾಚಾರ ತಡೆಯಲು ಒಂದು ಶಾಸನವಿದೆ. ಅದರ ೧೯ನೆಯ ವಿಭಾಗದಲ್ಲಿ ಸರ್ಕಾರಿ ಅಧಿಕಾರಿಗಳಿಗೆ ಒಂದು ರೀತಿಯ ರಕ್ಷಣೆ ನೀಡಲಾಗಿದೆ. ಅವರ ಮೇಲೇನಾದರೂ ಅಪರಾಧ ಹೊರಿಸಿ ಮೊಕದ್ದಮೆ ನಡೆಸಬೇಕಾದರೆ ಸರ್ಕಾರದ ಪರವಾನಗಿ ಪಡೆಯಬೇಕು, ಎಂಬುದು ಆ ರಕ್ಷಣೆ. ಇದು ಸೂಕ್ತವಾದ್ದು. ಎಲ್ಲೋ ಗಲಭೆ ನಡೆದಾಗ ಪೊಲೀಸರು ಲಾಠಿ ಚಾರ್ಜು ಮಾಡುತ್ತಾರೆ. ಅವರ ಮೇಲೆ ಕ್ರಿಮಿನಲ್ ಚಾರ್ಜ್ ಮಾಡಿಬಿಟ್ಟರೆ ಆದೀತೆ ? ಅದು ಕ್ರಿಮಿನಲ್ ಪ್ರೊಸೀಜರ್ ಕೋಡಿನ ೧೯೭ನೆಯ ವಿಭಾಗದ ವಿಷಯ. ಭ್ರಷ್ಟಾಚಾರ ನಿಗ್ರಹ ಶಾಸನದ ೧೯ನೆಯ ವಿಧಿ ಅಂತಹ ಕಡೆ ಅನ್ವಯವಾಗುವುದಿಲ್ಲ. ಹೀಗಿರುವಾಗ ಅದರಡಿಯಲ್ಲಿ ಕ್ರಮ ಜರುಗಿಸಲು ಸರ್ಕಾರದ ಪರವಾನಗಿ ಏಕೆ ಬೇಕು ? ಅದರಡಿ ಇರುವ ಅಪರಾಧಗಳು ಎರಡೇ : ಒಂದು, ಲಂಚ ಪಡೆಯುವುದು ಮತ್ತು ಎರಡು, ಹೀಗೆ ಬಂದ ಅಕ್ರಮ ಹಣದಿಂದ ಆಸ್ತಿ ಮಾಡಿಕೊಳ್ಳುವುದು. ಸರ್ಕಾರದ ಕೆಲಸ ಮಾಡುತ್ತಿದ್ದಾಗ ಉದ್ಭವಿಸಬಹುದಾದ ಸಂದರ್ಭದಲ್ಲಿ ನಡೆದ ಕ್ರಿಯೆಗಳಲ್ಲ ಇವು; ಆದ್ದರಿಂದ ಸರ್ಕಾರದ ಕೆಲಸಕ್ಕೂ ಈ ಅಪರಾಧಕ್ಕೂ ಸಂಬಂಧವಿಲ್ಲವೆಂದು ಸರ್ವೋಚ್ಚ ನ್ಯಾಯಾಲಯ ಹೇಳಿದೆ. ಹೀಗಿರುವಾಗ, ಲಂಚ ಪಡೆದವರ ಅಪರಾಧ ಸಾಬೀತು ಮಾಡಲು ಅವಕಾಶವಿರಬೇಡವೆ ? ಅದಕ್ಕೆ ಸರ್ಕಾರದ ಪ್ರತ್ಯೇಕ ಅನುಮತಿ ಏಕೆ ಬೇಕು ? ಸದರಿ ಭ್ರಷ್ಟಾಚಾರ ನಿಗ್ರಹ ಶಾಸನ ಮತ್ತು ಸರ್ಕಾರದ ದಿನಂಪ್ರತಿಯ ನಿಗದಿತ ಕೆಲಸ, ಇವುಗಳ ನಡುವೆ ದ್ವಂದ್ವವೇನೂ ಇಲ್ಲ. ನಾನಿಂದು

# ಲೋಕಾಯುಕ್ತ ಆರಂಭವಾದದ್ದು ಹೀಗೆ

ಭ್ರಷ್ಟ ಅಧಿಕಾರಿಗಳು ಹಾಗೂ ರಾಜಕಾರಣಿಗಳನ್ನು ತಮ್ಮ ಬಲೆಗೆ ಹಾಕಿಕೊಳ್ಳುವ ಮಾನ್ಯ ಲೋಕಾಯುಕ್ತರ ಪ್ರಯತ್ನ ಜನಸಾಮಾನ್ಯರ ಮೆಚ್ಚುಗೆಗೆ ಪಾತ್ರವಾಗಿದೆ. ತಮಗಿರುವ ಸೀಮಿತ ಅಧಿಕಾರವನ್ನು ಬಳಸಿಕೊಂಡು ಭ್ರಷ್ಟಾಚಾರವನ್ನು ಹತ್ತಿಕ್ಕಲು ಅವರು ನಡೆಸುತ್ತಿರುವ ಕ್ರಮ ಶ್ಲಾಘನೀಯ. ಕೇಂದ್ರದಲ್ಲಿ ಶೇಷನ್ ಅವರು ಮುಖ್ಯ ಚುನಾವಣಾ ಆಯುಕ್ತರಾಗುವವರೆಗೂ ಈ ರೀತಿ ಒಂದು ಚುನಾವಣಾ ಆಯೋಗ ಇದೆ ಎಂಬ ಅಂಶವೇ ಜನಸಾಮಾನ್ಯರಿಗೆ ತಿಳಿದಿರಲಿಲ್ಲ. ಅದೇರೀತಿ ಹಿಂದಿನ ಲೋಕಾಯುಕ್ತ ನ್ಯಾಯಮೂರ್ತಿ ವೆಂಕಟಾಚಲ ಅವರು ಈ ಹುದ್ದೆ ಅಲಂಕರಿಸುವವರೆಗೂ ಲೋಕಾಯುಕ್ತ ಎಂಬ ಸಂಸ್ಥೆ ಇದೆ ಎಂದೇ ಹೆಚ್ಚು ಜನರಿಗೆ ತಿಳಿದಿರಲಿಲ್ಲ. ಲೋಕಾಯುಕ್ತ ಸಂಸ್ಥೆ ಆರಂಭದಿಂದ ಈ ರೀತಿ ಸಕ್ರಿಯವಾಗಿ ಕಾರ್ಯ ನಿರ್ವಹಿಸಿದ್ದರೆ ಬಹುಶಃ ರಾಜ್ಯದಲ್ಲಿ ಭ್ರಷ್ಟಾಚಾರ ಈ ಮಟ್ಟಕ್ಕೆ ಬೆಳೆಯುತ್ತಿರಲಿಲ್ಲವೇನೋ. ಆದರೆ ಲೋಕಾಯುಕ್ತ ರೂಪಗೊಂಡ ಹಿನ್ನೆಲೆ ಗಮನಿಸಿದಾಗ ಇದರ ಸತ್ಯ ಗೋಚರಿಸುತ್ತದೆ.

ದಿವಂಗತ ರಾಮಕೃಷ್ಣ ಹೆಗಡೆ ಅವರು ಮುಖ್ಯಮಂತ್ರಿಯಾಗಿದ್ದಾಗ ಮೌಲ್ಯಾಧಾರಿತ ರಾಜಕೀಯ ಎಂಬ ಮಾತು ಆರಂಭವಾಯಿತು. ಅದು ಬರೀ ಮಾತು ಎಂಬುದು ಬೇರೆ ವಿಷಯ. ಆಡಳಿತ ಹಾಗೂ ರಾಜಕೀಯ ಸ್ವಚ್ಛವಾಗಿರಬೇಕೆಂಬ ಉದ್ದೇಶದಿಂದ ಅವರು ಲೋಕಾಯುಕ್ತ ಸಂಸ್ಥೆ ಸ್ಥಾಪಿಸಲು ನಿರ್ಧರಿಸಿದರು. ಇದನ್ನು ಯಾರಾದರೂ ಮೆಚ್ಚಲೇಬೇಕು. ಅದಕ್ಕೆ ಸಂಬಂಧಪಟ್ಟಂತೆ ಕಾನೂನು ತಯಾರಿಸಲು ಅಧಿಕಾರಿಗಳಿಗೆ ಸೂಚಿಸಿದರಂತೆ. ಮುಖ್ಯಮಂತ್ರಿಯನ್ನೂ ಒಳಗೊಂಡಂತೆ ಎಲ್ಲ ರಾಜಕಾರಣಿ ಹಾಗೂ ಅಧಿಕಾರಿಗಳಿಗೆ ಅನ್ವಯಿಸುವ ಲೋಕಾಯುಕ್ತ ಮಸೂದೆ ತಯಾರಾಯಿತು. ಇದನ್ನು ಕಂಡ ಅಧಿಕಾರಿಗಳು ಹೌಹಾರಿದರು. ಮುಖ್ಯಮಂತ್ರಿಗಳನ್ನು ಹೆದರಿಸಿದರು. ಲೋಕಾಯುಕ್ತರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡರೆ ಎಂಬ ಅನುಮಾನವನ್ನು ವ್ಯಕ್ತಪಡಿಸಿದರು. ಆದರೆ ಮುಖ್ಯಮಂತ್ರಿಗಳು ಜಗ್ಗಲಿಲ್ಲ. ಎಲ್ಲರಿಗೂ ಆಶ್ಚರ್ಯ. ಹೇಗೆ ಇದಕ್ಕೆ ಇವರು ಒಪ್ಪಿಗೆ ಸೂಚಿಸುತ್ತಿದ್ದಾರೆ ಎಂಬ ಅನುಮಾನ. ಇದಕ್ಕೆಲ್ಲಾ ನನ್ನಲ್ಲಿ ಉತ್ತರವಿದೆ ಎಂದರಂತೆ.

ಲೋಕಾಯುಕ್ತ ಕಾಯ್ದೆ ಜಾರಿಗೊಂಡ ಮೇಲೆ ಲೋಕಾಯುಕ್ತರನ್ನು ನೇಮಕ ಮಾಡುವ ಪ್ರಕ್ರಿಯೆ ಆರಂಭವಾಯಿತು. ಯಥಾಪ್ರಕಾರ ವಿಷಯ ಮುಖ್ಯಮಂತ್ರಿಗಳೆದುರು ಮಂಡನೆ ಆಯಿತು. ಮುಖ್ಯಮಂತ್ರಿಗಳು ಒಂದು ಸೂಚನೆ ನೀಡಿದರಂತೆ. ದೇಶದಲ್ಲಿರುವ ಅತ್ಯಂತ ಅದಕ್ಷ, ಭ್ರಷ್ಟ ನ್ಯಾಯಮೂರ್ತಿಗಳ ಹೆಸರನ್ನು ಪಟ್ಟಿ ಮಾಡಿಕೊಡಿ ಅನಂತರ ನಾನು ನಿರ್ಧರಿಸುತ್ತೇನೆ ಎಂದರಂತೆ ಮುಖ್ಯಮಂತ್ರಿಗಳು. ಇದರ ಫಲವಾಗಿ ಸುಮಾರು ೨೦ ವರ್ಷ ಲೋಕಾಯುಕ್ತ ಎಂಬ ಸಂಸ್ಥೆ ಎಲ್ಲಿದೆ ಎಂಬುದೆ ಜನರಿಗೆ ತಿಳಿದಿರಲಿಲ್ಲ. ಇದಲ್ಲವೆ ಮೌಲ್ಯಾಧಾರಿತ ರಾಜಕೀಯ ?

*(ಆ ಸಂದರ್ಭದಲ್ಲಿ ಸರ್ಕಾರದ ಸೇವೆಯಲ್ಲಿದ್ದ ಉನ್ನತ ಅಧಿಕಾರಿಯೊಬ್ಬರು ಈ ಮಾಹಿತಿಯನ್ನು ಒಂದು ಸಭೆಯಲ್ಲಿ ಬಹಿರಂಗಪಡಿಸಿದುದರ ಆಧಾರ)*



ಲಂಚ ಪಡೆದೆ ಎಂದಿಟ್ಟುಕೊಳ್ಳಿ; ಲೋಕಾಯುಕ್ತನಾಗಿ ಕೆಲಸ ಮಾಡಲು ಏನ ಅಡಚಣೆ ಇದ್ದುದರಿಂದ ಲಂಚ ಪಡೆದೆನೆಂದು ಹೇಳಲಾದೀತೆ ? ಅಂದರೆ, ನನಗ ಬಗ್ಗೆ ಯಾವ ಶಾಸನವೂ ರಕ್ಷಣೆ ನೀಡಬೇಕಾಗಿಲ್ಲ. ಬದಲಾಗಿ, ನನ್ನ ವಿಚಾ ನಡೆಸಲು ಮುಕ್ತ ಅವಕಾಶವಿರಬೇಕು. ಸರ್ಕಾರಿ ಅಧಿಕಾರಿಗಳಿಗೆ ನೀಡಲಾಗುವ ರಕ್ಷಣೆಯು ಲಂಚಕ್ಕೆ ನೀಡಲಾದ ರಕ್ಷಣೆಯಾಗಿಬಿಟ್ಟಿದೆ. ಇಂತಹ ಸನ್ನಿವೇಶ ಕೂಡದ

**ಹೊ :** ಈ ಶಾಸನ ಯಾವಾಗ ಜಾರಿಗೆ ಬಂತು ?

**ಸಂ :** ಅದರ ಮೂಲ ಶಾಸನದೊಂದಿಗೆ ೧೯೪೭ರಿಂದ ಅಸ್ತಿತ್ವದಲ್ಲಿದೆ. ೧೯೮ ಅದನ್ನು ಪರಿಷ್ಕರಿಸಲಾಯಿತು. ಅದರ ಪ್ರಕಾರ ಯಾವ ನಾಗರಿಕನೇ ಆಗಲಿ ಲ ಕೊಟ್ಟರೆ ಲಂಚ ಸ್ವೀಕರಿಸಿದವರಂತೆ ಅವರೂ ಅಪರಾಧಿಗಳೆಂದು ಪರಿಗಣ ಬರುತ್ತಾರೆ. ಅವರನ್ನು ವಿಚಾರಣೆಗೆ ಗುರಿಮಾಡಲು ಯಾವ ಶಾಸನದ ಅಡ್ಡಿಯೂ ಆದರೆ ಸರ್ಕಾರಿ ಅಧಿಕಾರಿಯು ಲಂಚ ಸ್ವೀಕರಿಸಿದ್ದಾನೆಂದು ವಿಚಾರಣೆಗೆ ಗುರಿಮಾ ಬೇಕಾದರೆ ಅದಕ್ಕೆ ಸರ್ಕಾರದ ಪರವಾನಗಿ ಬೇಕು. ಇದು ಸಮಂಜಸವಲ್ಲ. ಅಧಿಕಾರಿ ಬಲಶಾಲಿಯಾದರೆ ಸರ್ಕಾರ ಪರವಾನಗಿ ನೀಡುವುದಿಲ್ಲ, ಆದರೆ ಸಾಮ ನಾಗರಿಕನನ್ನು ಬೇಕಾದರೆ ಜೈಲಿಗೆ ಕಳಿಸಬಹುದು. ಇದು ಸರ್ವಥಾ ಸರಿಯಲ್ಲ. ಇ ಬದಲಿಸಿರೆಂದರೆ ಇನ್ನೂ ಮೀನ-ಮೇಷ ಎಣಿಸುತ್ತಿದ್ದಾರೆ. ಲಂಚ ಪಡೆದವರನ್ನು ಬೇಕೇಕೆ ? ಇಷ್ಟಕ್ಕೂ ನಾವೇ ಶಿಕ್ಷೆಯನ್ನೇನೂ ವಿಧಿಸಲಾರೆವು. ಅದೇನಿದ್ದ ನ್ಯಾಯಾಲಯದಲ್ಲಿ ಬೇರಾವುದೇ ಮೊಕದ್ದಮೆಯಂತೆ ತೀರ್ಮಾನವಾಗು ಸಾಕ್ಷ್ಯಾಧಾರಗಳಿಲ್ಲದಿದ್ದರೆ ವೃಥಾ ಶಿಕ್ಷೆಯನ್ನೇನೂ ನೀಡುವುದಿಲ್ಲ. ಹಾಗಿರುವಾಗ ಲ ಗುಳಿತನಕ್ಕೆ ರಕ್ಷಣೆ ನೀಡುವುದು ಅನರ್ಥಕ. ಪ್ರಜೆಗಳೇ ರಾಜರೆಂದು ಹೇಳಲಾ ನಮ್ಮ ಪ್ರಜಾಪ್ರಭುತ್ವದಲ್ಲಿ ಪ್ರಜೆಗಳಿಗೆ ರಕ್ಷಣೆಯಿಲ್ಲ, ಪ್ರಭುಗಳಿಗೆ ಮಾತ್ರ ಇದೆ.

**ಹೊ :** ಬೇರೆ ರಾಜ್ಯಗಳಲ್ಲಿ ಈ ಬಗ್ಗೆ ಏನು ವ್ಯವಸ್ಥೆ?

**ಸಂ :** ೧೯೬೬ರಲ್ಲಿ ಮೊದಲ ಆಡಳಿತ ಸುಧಾರಣಾ ಮಂಡಲಿಯ ಶಿಫಾ ಪ್ರಕಾರ ಪೊಲೀಸರ ಪರಿಧಿಯಲ್ಲಿ ಒಂದು ಭ್ರಷ್ಟಾಚಾರ ವಿರೋಧಿ ಮಂಡಲಿ ಬಂ ಅದು ಸರಿಯಲ್ಲವೆಂದು ಆಮೇಲೆ ವಿಜಿಲೆನ್ಸ್ ಕಮೀಷನ್ ಒಂದನ್ನು ರಚಿಸಲಾಯಿ ಅಖಿಲ ಭಾರತ ಮಟ್ಟದಲ್ಲಿ ಶ್ರೀ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸ ರಾವ್ ಮೊ ಕಮೀಷನರ್. ನಂತರ ಇವೆರಡನ್ನೂ ಒಟ್ಟುಗೂಡಿಸಿ ರಾಜ್ಯಗಳಲ್ಲಿ ಲೋಕಾಯುಕ್ತ ಪ

ಂದ್ರದಲ್ಲಿ ಲೋಕಪಾಲ ಎಂಬೆರಡನ್ನು ರಚಿಸಲಾಯಿತು. ನನ್ನು ಸ್ವೀಡನ್ನಿನ ಮಾದರಿಯಲ್ಲಿ ರೂಪಿಸಲಾಗಿದೆ. ಡನ್ನಿನಂತಹ ದೇಶದಲ್ಲಿ ೨೦೦ ವರ್ಷಗಳಿಂದ ಬುಡ್ಸ್‌ಮನ್ ಎಂಬ ಒಂದು ಸಂರಚನೆ ಇದೆ. ತರರಾಷ್ಟ್ರೀಯ ಪಾರದರ್ಶಕತಾ ಮಂಡಲಿಯ ಾರ ಸ್ಕ್ಯಾಂಡಿನೇವಿಯ ದೇಶಗಳಲ್ಲಿ ಭ್ರಷ್ಟಾಚಾರ ಲ್ಲ. ಆದರೂ ಆಡಳಿತದಲ್ಲಿ ಬೇರೆ ಅನ್ಯಾಯ ನ್ನು ಸರಿಪಡಿಸಲೆಂದು ಈ ವ್ಯವಸ್ಥೆ ಇದೆ. ಲಂಚದ ಗಟ್ಟುವಿಕೆಯೂ ಅದರಲ್ಲಿ ಸೇರಿದೆ. ನಮ್ಮ ಭ್ರಷ್ಟಾಚಾರ ರೋಧಿ ಶಾಸನದಡಿ ಪೊಲೀಸರು ಆಪಾದಿತರನ್ನು ಚಾರಣೆಗೆ ಗುರಿಮಾಡಿ ನ್ಯಾಯಾಲಯದ ಮುಖಾಂತರ ಸಬಹುದು. ನಾವೂ ಈಗ ಅದನ್ನೇ ಅನುಸರಿಸು ್ತೇವೆ. ಸ್ವತಃ ವಿಚಾರಣೆ ನಡೆಸುವಂತಿದ್ದರೆ ಸನ್ನಿವೇಶ ತ್ತಮವಾಗಿರುತ್ತದೆ. ಸದ್ಯಕ್ಕೆ ನಮ್ಮ ಶೇ. ೯೦ರಷ್ಟು ಸ ಆಡಳಿತಾತ್ಮಕ ನ್ಯೂನತೆಗಳನ್ನು ಕುರಿತಾಗಿದೆ. ,೦೦೦ಕ್ಕೂ ಹೆಚ್ಚು ದೂರುಗಳು ನಮ್ಮಲ್ಲೀಗ ಬಾಕಿ : ಬೆಂಗಳೂರು ಮಹಾನಗರ ಪಾಲಿಕೆ, ಕಂದಾಯ ಾಖೆ, ಆಸ್ಪತ್ರೆಗಳು, ಮೋಟಾರು ವಾಹನಗಳ ಾಖೆ, ಇತ್ಯಾದಿ, ಹಲವು ವಿಭಾಗಗಳ ಮೇಲೆ ರುಗಳ ಪರಿಶೀಲನೆ ನಡೆಯುತ್ತಿದೆ.

**ಹೊ :** ಇದೆಲ್ಲಾ ಆರಂಭವಾದದ್ದು ಯಾವಾಗ ?

**ಸಂ :** ೧೯೮೪ರಲ್ಲಿ ಒಂದು ಶಾಸನ ಮಾಡಲಾಯಿತು. ಮೌಲ್ಯಾಧಾರಿತ ರಾಜಕಾರಣದ ಮಾತು ಕೇಳಿಬರುತ್ತಿದ್ದ ಅದು. ಅದರಂತೆ ೧೯೮೬ರಲ್ಲಿ ಲೋಕಾಯುಕ್ತ ದು ಸಂಸ್ಥೆಯಾಗಿ ಅಸ್ತಿತ್ವಕ್ಕೆ ಬಂತು. ಬೇರೆ ರಾಜ್ಯ ಲ್ಲಿ ಇದನ್ನು ಅನುಕರಿಸುವ ಪ್ರಯತ್ನ ನಡೆದಿದೆ. ಆದರೆ ಕ್ಕೂ ಅಧಿಕಾರ ಅಲ್ಲಿಯೂ ಇಲ್ಲ, ಇಲ್ಲಿಯೂ ಇಲ್ಲ. ೋಕಪಾಲ್ ಪ್ರಶ್ನೆ ನೋಡಿ. ಈವರೆಗೆ ಮೊದಲ ನಕ್ಕೆ ೨೧ ತಿದ್ದುಪಡಿಗಳನ್ನು ತರಲಾಗಿದೆ. ಆದರೆ ರ್ಲಿಮೆಂಟಿನಲ್ಲಿ ಅದಕ್ಕಿನ್ನೂ ಮತ ಚಲಾಯಿಸುವ ಶವನ್ನು ತಲುಪಲಾಗಿಲ್ಲ! ಒಂದೇ ಕಾರಣ : ಅದರ ಸ್ತಿಯೊಳಗೆ ಪ್ರಧಾನ ಮಂತ್ರಿ ಸೇರಬೇಕೇ, ಬೇಡವೇ ಬುದು. ಇರುವುದೊಂದೇ ವಿಷಯ : ಯಾರೆಲ್ಲಾ ರ್ಕಾರದ ಸಂಬಳ ಪಡೆಯುತ್ತಾರೋ ಅವರೆಲ್ಲಾ ಾರಣೆಗೆ ಅರ್ಹರೇ. ಏನೇನೋ ಸಬೂಬು ಳುವುದು ಅರ್ಥವಿಲ್ಲದ್ದು. ಈಗ ನ್ಯಾಯಮೂರ್ತಿ ಹೇಳುತ್ತಿದ್ದಾರೆ, ತಾವು ಇದರ ಪರಿಧಿಗೆ ಬರಲು ವುದಿಲ್ಲವೆಂದು. ಏಕೆ ಬರಕೂಡದು ?

**ಹೊ :** ಪತ್ರಿಕೆಗಳಲ್ಲಿ ಆಗಾಗ್ಗೆ ಲೋಕಾಯುಕ್ತರು ರನ್ನು ಹಿಡಿದ ವರದಿಗಳು ಬರುತ್ತವೆ. ಆದಾಯಕ್ಕೆ ಆಸ್ತಿ ಹೊಂದಿದ್ದಾರೆಂದೂ ಹಲವರ ಬಗ್ಗೆ ವರದಿ ಿ. ಕಡೆಗೆ ಅಂಥವರು ಒಂದು ಬಿಡಿಗಾಸನ್ನೂ ದುಕೊಳ್ಳುವುದಿಲ್ಲ ವೆನ್ನುತ್ತಾರಲ್ಲ, ನಿಜವೆ ?

**ಸಂ :** ಪೂರ್ತಿ ಅಲ್ಲ, ಸ್ವಲ್ಪಮಟ್ಟಿಗೆ ಹೌದು. ಲೂ ಸುಮಾರು ಕಾಲವಾಗುತ್ತದೆ.

**ಹೊ :** ನೀವು ವರದಿ ಕೊಟ್ಟನಂತರ ಏನು ಕ್ರಮ ಗಿಸಲಾಗುತ್ತದೆ ?

**ಸಂ :** ಮೊದಲು ಸರ್ಕಾರದ ಪರವಾನಗಿ ಬೇಕು. ೇಲೆ ಆಪಾದನೆ ದಾಖಲು. ನಂತರ ನ್ಯಾಯಾಲಯ ಮೊಕದ್ದಮೆ. ವಿಶೇಷ ನ್ಯಾಯಾಲಯದಲ್ಲಿ ಕಡಿಮೆ ಯೆಂದರೆ ಆರು ವರ್ಷ. ದೆಹಲಿಯಲ್ಲಿ ಮಾಜಿ ಕೇಂದ್ರ ಮಂತ್ರಿ ಸುಖರಾಂ ಕತೆ ಗೊತ್ತಲ್ಲ? ಹಾಸಿಗೆಗಳಲ್ಲಿ ಆತ ಆರುಕೋಟಿ ರೂಪಾಯಿ ಹುದುಗಿಸಿಟ್ಟಿದ್ದ. ಬೇರಿನ್ನೆಷ್ಟಿರ ಬೇಕು! ವಿಶೇಷ ನ್ಯಾಯಾಲಯದಲ್ಲಿ ೧೩ ವರ್ಷ ವಿಚಾರಣೆ ನಡೆದು ಶಿಕ್ಷೆ ವಿಧಿಸಲಾಯಿತು. ಈಗ ದೆಹಲಿ ಉಚ್ಚ ನ್ಯಾಯಾಲಯದಲ್ಲಿದೆ. ಆಮೇಲೆ ಸರ್ವೋಚ್ಚ ನ್ಯಾಯಾಲಯಕ್ಕೆ ಹೋಗಬಹುದು.

**ಹೊ :** ಹಾಗಾದರೆ ಇದಕ್ಕೆ ಪರ್ಯಾಯವನ್ನೇ ನಾದರೂ...

**ಸಂ :** ಮೂಲತಃ ಇದು ಕೇಂದ್ರದ ಕಾನೂನು. ಆದರೂ ಇದು ಕಾನೂನು ಪರಿಪಾಲನೆಯ ವಿಷಯ ವಾಗಿ ರಾಜ್ಯದ ವ್ಯಾಪ್ತಿಗೂ ಸೇರುತ್ತದೆ. ಆದ್ದರಿಂದ ಕೆಲ ವಿಷಯಗಳಿಗೆ ಸಂಬಂಧಿಸಿದಂತೆ ತಿದ್ದುಪಡಿ ತರಲು ರಾಜ್ಯಕ್ಕೆ ಸಾಧ್ಯ. ಅದಕ್ಕೆ ರಾಷ್ಟ್ರಾಧ್ಯಕ್ಷರ ಸಮ್ಮತಿ ಪಡೆದರೆ ಆಯಿತು. ಒಂದು, ವಿಚಾರಣೆ ನಡೆಸಲು ಲೋಕಾಯುಕ್ತ ರಿಗೆ ಅಧಿಕಾರ ನೀಡುವುದು; ಎರಡು, ನ್ಯಾಯಾಲಯ ದಲ್ಲಿ ಮೊಕದ್ದಮೆ ಜಾರಿಯಲ್ಲಿರು ವಾಗಲೇ ಸರ್ಕಾರವು ಬೇರೊಂದು ತನಿಖೆ ನಡೆಸಿ ಶಿಕ್ಷೆ ವಿಧಿಸುವುದು. ಅದಕ್ಕೆ ಬೇಕಾದರೆ ನಿವೃತ್ತ ನ್ಯಾಯಾಧೀಶರೊಬ್ಬರ ನೇಮಕ ಮಾಡಿಕೊಳ್ಳಬಹುದು. ಇದೆಲ್ಲಾ ಮೂರು ತಿಂಗಳಲ್ಲಿ ಮುಗಿಯಬೇಕು, ಹತ್ತು ವರ್ಷಗಳಲ್ಲಲ್ಲ.

**ಹೊ :** ಇನ್ನೇನಾದರೂ ಕ್ರಮ ಇದೆಯೆ ?

**ಸಂ :** ಇದೆ. ಭ್ರಷ್ಟಾಚಾರ ವಿರೋಧಿ ಶಾಸನವನ್ನು ಕ್ಲುಪ್ತವಾಗಿ ಬಳಸಿಕೊಳ್ಳಬೇಕು, ಅಷ್ಟೆ. ಕೇಂದ್ರ ಕಾನೂನು ಸಚಿವ ಶ್ರೀ ವೀರಪ್ಪ ಮೊಯಿಲಿ ಇತ್ತೀಚೆಗೆ ಹೇಳಿದರು, ಭ್ರಷ್ಟ ಅಧಿಕಾರಿಗಳ ಆಸ್ತಿ ಮುಟ್ಟುಗೋಲು ಹಾಕಿಕೊಳ್ಳಲು ಶಾಸನವೊಂದು ಬೇಕಿದೆ, ಎಂದು. ಹಾಗೇನಿಲ್ಲ, ಅದು ಬೇಕಿಲ್ಲ. ಈಗಲೇ ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆರ್ಡಿನೆನ್ಸ್ ಎಂಬುದೊಂದಿದೆ. ಅದು ೧೯೪೦ರದು. ಅದಕ್ಕೆ ಒಂದು ಶಾಸನದ ಸ್ಥಾನವಿದೆಯೆಂದು ಸರ್ವೋಚ್ಚ ನ್ಯಾಯಾಲಯ ಹೇಳಿದೆ. ಅದರ ಪ್ರಕಾರ ಭ್ರಷ್ಟರು ಗಳಿಸಿದ ಆಸ್ತಿಯ ಮುಟ್ಟುಗೋಲು ಸಾಧ್ಯವಿದೆ.

**ಹೊ :** ಅದನ್ನು ಯಾರು ಮಾಡಬೇಕು ?

**ಸಂ :** ನ್ಯಾಯಾಲಯ.

**ಹೊ :** ಅಂದರೆ, ನೀವು ಕೊಡುವ ವರದಿಯನ್ನಾ ಧರಿಸಿ ಮಾಡಬಹುದೆ ? ನೀವು ಹೂಡುವ ಮೊಕದ್ದಮೆ ಅದಕ್ಕೆ ಸಾಕೆ ?

**ಸಂ :** ಚರಾಸ್ತಿಯನ್ನೆಲ್ಲಾ ನಾವಾಗಲೇ ಹತೋಟಿಗೆ ತೆಗೆದುಕೊಂಡಿರುತ್ತೇವೆ. ಸ್ಥಿರಾಸ್ತಿಯನ್ನು ಬಳಸಿಕೊಳ್ಳ ದಂತೆ ಆಜ್ಞೆ ಪಡೆದಿರುತ್ತೇವೆ. ಅದನ್ನು ಮಾರುವಂತಿಲ್ಲ, ಹಸ್ತಾಂತರಿಸುವಂತಿಲ್ಲ. ಆದರೆ ಅನುಭೋಗಿಸಲಡ್ಡಿಯಿಲ್ಲ. ಸರ್ಕಾರಕ್ಕೆ ಧೈರ್ಯ ಮತ್ತು ಭ್ರಷ್ಟಾಚಾರ ತಡೆಯುವ ಮನೋಭಾವವಿದ್ದರೆ ಕಾನೂನು ತರುವುದು ಕಠಿಣವಲ್ಲ. ಈಚೆಗೆ ಪ್ರಧಾನಿಗಳು ಸಿ.ಬಿ.ಐ. ಅಧಿಕಾರಿಗಳನ್ನುದ್ದೇಶಿಸಿ ಮಾತನಾಡುತ್ತಾ ತನಿಖೆಗಳಲ್ಲಿ ದೊಡ್ಡ ಮೀನು ತಪ್ಪಿಸಿ ಕೊಳ್ಳುತ್ತಿದೆ, ಚಿಕ್ಕದು ಸಿಕ್ಕಿಬೀಳುತ್ತಿದೆ, ದೊಡ್ಡವನ್ನು ಹಿಡಿದು ಶಿಕ್ಷಿಸಬೇಕು, ಎಂದರು. ಇದು ಪ್ರಧಾನಿ ಹೇಳುವ ಮಾತೆ? ಏನು ಮಾಡಬೇಕೆಂದು ಹೇಳಬೇಕಾದ್ದು ಅವರೇ ತಾನೆ ? ಕಾನೂನು ತರಲಿ, ಬರೀ ಮಾತೇಕೆ ?

**ಹೊ :** ಕಾನೂನು ತರಲು ಏನಡ್ಡಿ?



**ಸಂ :** ಒಂದು ವಿಷಯ ಗಮನಿಸಿದ್ದೀರಾ ? ೨೦೦೮ರ ಡಿಸೆಂಬರ್ ೨೩ರಂದು ಲೋಕಸಭೆಯಲ್ಲಿ ಯಾವ ಚರ್ಚೆಯೂ ಇಲ್ಲದೆಯೇ ಕೇವಲ ೧೨ ನಿಮಿಷ ಗಳಲ್ಲಿ ಒಟ್ಟು ೧೭ ಶಾಸನಗಳು ಮಂಜೂರಾದವು. ಅವುಗಳಲ್ಲಿ ಒಂದು ಭ್ರಷ್ಟಾಚಾರ ನಿರೋಧಕ ಶಾಸನಕ್ಕೆ ತಿದ್ದುಪಡಿ. ಅದೇನು ಗೊತ್ತೆ? ನಮ್ಮ ಪೀನಲ್ ಕೋಡಿನಲ್ಲಿ ೨೦೦ ವರ್ಷಗಳಿಂದಲೂ ಲಂಚವು ಅಪರಾಧವೆಂದು ಗುರುತಿಸಲಾಗಿತ್ತು. ೧೯೪೭ರಲ್ಲಿ ಒಂದು ವಿಶೇಷ ಕಾನೂನು ಅಗತ್ಯವೆಂದು ಭ್ರಷ್ಟಾಚಾರ ನಿರೋಧಕ ಕಾನೂನನ್ನು ತರಲಾಯಿತು.

**ಕೋ. ಚಿ. :** ಅಂದರೆ ಭವಿಷ್ಯದಲ್ಲಿ ಏನಾದೀತೆಂಬ ಆತಂಕ ಆಗಲೇ ಇತ್ತು. ಭ್ರಷ್ಟಾಚಾರ ಮುಗಿಲೆತ್ತರಕ್ಕೆ ಬೆಳೆಯಬಹುದೆಂಬ ನಿರೀಕ್ಷೆಗೆ ಕಾರಣಗಳೂ ಇದ್ದವು.

**ಸಂ :** ಹಿಂದಿದ್ದ ಕಾಯಿದೆಯನ್ನು ನಿರ್ಬಲಗೊಳಿಸು ವಂತಹ ತಿದ್ದುಪಡಿಯನ್ನು ಪಾರ್ಲಿಮೆಂಟ್ ಅಂಗೀಕರಿ ಸಿತು. ನಮ್ಮ ಪ್ರಧಾನಿಗಳ ಬಗ್ಗೆ ನನಗೆ ಅತ್ಯಂತ ಗೌರವವಿದೆ, ಆದರೆ ಇಂತಹ ಕಾಯಿದೆ ತಂದರೆ...

**ಕೋ. ಚಿ. :** ಅದು ಅವರ ಗಮನಕ್ಕೆ ಬರದೆ ಹೋಗಿರಬೇಕು.

**ಸಂ :** ಇರಬಹುದು. ಅವರ ವೈಯಕ್ತಿಕ ಪ್ರಾಮಾಣಿಕತೆಯೇ ಬೇರೆ, ಹೊಸ ಕಾಯಿದೆ ತರುವುದೇ ಬೇರೆ. ತಿದ್ದುಪಡಿಯ ಒಂದು ಭಾಗದ ಪರಿಣಾಮ ಏನು ಗೊತ್ತೆ? ಅದರಲ್ಲಿ ಮೂರು ಅಂಶಗಳಿವೆ : (ಅ) ಒಬ್ಬ ಸರ್ಕಾರಿ ಅಧಿಕಾರಿಯು ತನ್ನ ಆಸ್ತಿ ವಿವರ ಗಳನ್ನು ವರ್ಷಂಪ್ರತಿ ಕೊಟ್ಟಾಗ, ನಮೂದಿಸಿದ ಹಿಂದಿನ ಆಸ್ತಿಗಿಂತಲೂ ಈಗಿನದು ಪ್ರಮಾಣದಲ್ಲಿ ವಿಪರೀತ ವಾಗಿದ್ದರೆ ಅದು ಹೇಗಾಯಿತೆಂದು ಅಧಿಕಾರಿಯು ವಿವರಣೆ ನೀಡಬೇಕೆಂದಿತ್ತು. ತಿದ್ದುಪಡಿಯ ಪ್ರಕಾರ ಅವನದನ್ನು ಮಾಡಬೇಕಾಗಿಲ್ಲ, ತನಿಖೆ ಮಾಡುವವರೇ ಅದನ್ನು ಕಂಡುಹಿಡಿಯಬೇಕಂತೆ. ಪ್ರಮಾಣಕ್ಕೆ ಮೀರಿ ಆಸ್ತಿ ಇರುವಾಗ ಭ್ರಷ್ಟಾಚಾರದ ಆಪಾದನೆಗೊಳಗಾದವರು ತಮ್ಮ ಆಸ್ತಿಯ ಹೆಚ್ಚಳದ ಮೂಲವನ್ನು ಸಾಬೀತುಗೊಳಿಸ ಬೇಕೆಂದಿತ್ತು, ಅದು ಹೋಯಿತು. ಅದನ್ನು ತನಿಖೆ ಮಾಡುವವರು ಸಾಬೀತುಗೊಳಿಸಬೇಕಂತೆ. ಅಂದರೆ, ಯಾರಿಂದ ಯಾವತ್ತು ಈ ಅಧಿಕಾರಿ ಎಷ್ಟು ಲಂಚ ಪಡೆದನೆಂದು ತನಿಖಾಧಿಕಾರಿಯೇ ಸಾಬೀತುಮಾಡ ಬೇಕು. ಅದು ಹೇಗೆ ತಾನೆ ಸಾಧ್ಯ ? (ಆ) ನಿವೃತ್ತ ಅಧಿಕಾರಿ ಗಳ ತನಿಖೆ ನಡೆಸಲು ಸರ್ಕಾರದ ಪರವಾನಗಿ ಬೇಕಿಲ್ಲ ವೆಂದಿತ್ತು; ಈಗ ಅದನ್ನು ಬೇಕು ಎಂದು ಬದಲಿಸಲಾಗಿದೆ. ಅದೂ ಅವರ ರಕ್ಷಣೆಗೆ ವಜ್ರಕವಚವೇ. (ಇ) ೧೩(ಡಿ)

# ಭ್ರಷ್ಟಾಚಾರವೆಂಬ ಬ್ರಹ್ಮರಾಕ್ಷಸ

ಭ್ರಷ್ಟಾಚಾರ ನಮ್ಮ ಜೀವನದ ನೈಸರ್ಗಿಕ ನಿಯಮವೊ ಎಂಬಂತಾಗಿದೆ! ಈ ಭ್ರಷ್ಟಾಚಾರದ ಬ್ರಹ್ಮರಾಕ್ಷಸನ ಹಾವಳಿಯಿಂದ ಜನರನ್ನು ಉಳಿಸಬೇಕೆಂದು ಅಪೇಕ್ಷಿಸುತ್ತಾರೆ. ಆದರೂ ಇದು ರಕ್ತ ಬೀಜಾಸುರನಂತೆ ಬೃಹದಾಕಾರವಾಗಿ ಬೆಳೆಯುತ್ತಲೇ ಇದೆ. ಅದರ ವ್ಯಾಪಕ ಬೆಳವಣಿಗೆ ಕ್ಯಾನ್ಸರ್ ರೋಗದಂತೆ ದಿನೇ ದಿನೇ ಹಬ್ಬುತ್ತಲೆ ಇದೆ.

ಈ ಅರ್ಬುದ ರೋಗ ನಿವಾರಣೆಗಾಗಿ ಕಾಲಕಾಲಕ್ಕೆ ಸರ್ಕಾರ, ಸಾರ್ವಜನಿಕರು, ದೇಶ ಹಿತಾಪೇಕ್ಷೆಯುಳ್ಳವರು ಪ್ರಯತ್ನಿಸುತ್ತಲೆ ಇದ್ದಾರೆ. ಸರ್ಕಾರಿ ನೌಕರರು ಭ್ರಷ್ಟಾಚಾರದಲ್ಲಿ ತೊಡಗಿ ಅಭಿವೃದ್ಧಿಗೆ ಕಂಟಕರಾಗಿ ಪ್ರಜಾಪೀಡಕರಾಗಿದ್ದರು ಎಂದು ಶಾಸನವನ್ನು ಜಾರಿಯಲ್ಲಿ ತರಲಾಗಿತ್ತು. ಈಗ ರಾಜಕಾರಣಿಗಳು ಅವರಿಗೆ ಕುಮ್ಮಕ್ಕು, ಬೆಂಬಲ ಕೊಟ್ಟ ಮೇಲೆ, ಖಜಾನೆಗೇ ಕನ್ನ ಹಾಕಲು ದಾರಿಯಾಯಿತು.

ಇತ್ತೀಚೆಗೆ ರಾಜಕಾರಣಿಗಳು ಇಡೀ ಪ್ರಜಾಕೋಟಿಯನ್ನು ಭ್ರಷ್ಟರನ್ನಾಗಿ ಮಾಡಿದ್ದಾರೆ. ರಾಜಕಾರಣಿಗಳೇ ಬೆಳೆಸಿದ ಈ ಭ್ರಷ್ಟಾಚಾರದ ವಿಷವೃಕ್ಷವನ್ನು ಮೂಲೋತ್ಪಾಟನೆ ಮಾಡಲು ಲೋಕಾಯುಕ್ತ ಕಾಯಿದೆಯನ್ನು ಜಾರಿಯಲ್ಲಿ ತರಲಾಯಿತು. ಭ್ರಷ್ಟಾಚಾರ ನಡೆಯುತ್ತಿದ್ದ, ಗಬ್ಬೆದ್ದು ನಾರುತ್ತಿದ್ದ, ರೋಗಗ್ರಸ್ತ ಕೂಪಗಳಿಗೆ ನುಗ್ಗಿದರು. ನೂರಾರು ಕೋಟಿ ರೂಪಾಯಿ ನುಂಗಿ ನೀರು ಕುಡಿಯುತ್ತಿದ್ದ ಭ್ರಷ್ಟರ ಗಂಟಲಿಗೆ ಗಾಳ ಹಾಕಿದರು. ಆದರೆ ಅವರು ಹಿಡಿದುಕೊಟ್ಟ ಭ್ರಷ್ಟರನ್ನು ವಿಧಾನಸೌಧದಲ್ಲಿ ಕುಳಿತ ಭ್ರಷ್ಟಾಚಾರದ ತಂದೆ ತಾಯಿಗಳು ರಕ್ಷಿಸಿದರು.

ಲೋಕಾಯುಕ್ತರು ಯಾರನ್ನು ಭ್ರಷ್ಟರೆಂದು ಹಣೆಪಟ್ಟಿ ಕಟ್ಟಿ ಜಗತ್ತಿಗೆ ಜಾಹೀರು ಮಾಡಿದರೋ ಅವರಿಗೆ ಬಡ್ತಿ ಕೊಟ್ಟು ಉನ್ನತ ಹುದ್ದೆಯಲ್ಲಿ ಕೂರಿಸಿದರು ರಾಜಕಾರಣಿಗಳು !!

ಇತ್ತೀಚೆಗೆ ಲೋಕಾಯುಕ್ತರಾಗಿ ಬಂದ ನ್ಯಾ. ಮೂ. ಸಂತೋಷ ಹೆಗಡೆ ಅವರು ಹಿಂದಿನವರಿಗಿಂತ ಒಂದು ಹೆಜ್ಜೆ ಮುಂದೆ ನುಗ್ಗಿ ಭ್ರಷ್ಟಾಚಾರಿಗಳ ಜನನಿ ಜನಕರಾದ ಜನನಾಯಕರೆಂಬ ಸೂಪರ್ ಭ್ರಷ್ಟಾಚಾರಿಗಳನ್ನು ಬಯಲಿಗೆಳೆಯುತ್ತಿದ್ದಾರೆ. ಒಮ್ಮೊಮ್ಮೆ ದಾಳಿ ಮಾಡಿದಾಗ ಹತ್ತು ಹದಿನೈದು ಇಪ್ಪತ್ತು ಅರವತ್ತು ನೂರು ಕೋಟಿ ರೂಪಾಯಿಗಳನ್ನು ಕಬಳಿಸಿದ ಅಧಿಕಾರಿಗಳನ್ನು ನೋಟುಗಳ ಮೂಟೆಗಳ ಸಹಿತ ಹಿಡಿದು ಬಯಲಿಗಿಟ್ಟಿದ್ದಾರೆ. ಇತ್ತೀಚೆಗೆ ಅವರು ರಾಜ್ಯಪಾಲರಿಗೆ ಒಪ್ಪಿಸಿದ ವರದಿಯಲ್ಲಿ ಗಣಿಗಾರಿಕೆಯಲ್ಲಿ ಗಣಿಧನಿಗಳ ಭ್ರಷ್ಟಾಚಾರದ ಮಕುಟಮಣಿಯಂಥ ಸಂಗತಿಗಳನ್ನು ಬಯಲು ಮಾಡಿದ್ದಾರೆ. ಬಳ್ಳಾರಿ ಜಿಲ್ಲೆಯ ಗಣಿ ಉದ್ಯಮಿಗಳು ಕರ್ನಾಟಕ ರಾಜ್ಯದ ಗಣಿ ಸಂಪದ್ಭರಿತ ವಿಸ್ತಾರವಾದ ಭೂಭಾಗವನ್ನು ಆಂಧ್ರ ಪ್ರದೇಶಕ್ಕೆ ಸೇರಿಸಿ ಆ ರಾಜ್ಯದಿಂದ ಗಣಿ ಉದ್ದಿಮೆ ಪರವಾನಗಿ ಪಡೆದು ಅಂದಾಜು ೪೦ ಸಾವಿರ ಕೋಟಿ ರಾಜಧನ (ರಾಯಲ್ಟಿ)ವನ್ನು ನುಂಗಿದ್ದಾರೆಂದು ವರದಿ ಮಾಡಿದ್ದಾರೆ!! ಅದರ ಬಗ್ಗೆ ಸರ್ಕಾರ ಯಾವ ಕ್ರಮವನ್ನೂ ಕೈಕೊಳ್ಳುವುದಿಲ್ಲವೆಂದು ಜನ ದೃಢವಾಗಿ ನಂಬಿದ್ದಾರೆ!

ಹಾಗಾದರೆ ಈ ಭ್ರಷ್ಟಾಚಾರ ನಿರ್ಮೂಲನ ಹೇಗೆ? ಭ್ರಷ್ಟಾಚಾರಿಗಳನ್ನು ವಿಚಾರಣೆ ಮಾಡಿ ಅವರನ್ನು ಕಠಿಣ ಶಿಕ್ಷೆಗೆ ಗುರಿಪಡಿಸಬೇಕು. ಚೈನಾ ದೇಶದಲ್ಲಿ ಭ್ರಷ್ಟಾಚಾರದಲ್ಲಿ ತೊಡಗಿದ್ದ ಆ ದೇಶದ ಉನ್ನತ ರಾಜಕಾರಣಿಯೊಬ್ಬನನ್ನು ಶಿಕ್ಷಿಸಿ ಗಲ್ಲಿಗೇರಿಸಿದರು! ಹಿಂದೆ ಸೋವಿಯತ್ ಯೂನಿಯನ್, ಯುಗೋಸ್ಲಾವಿಯಾ ದೇಶಗಳಲ್ಲೂ ಭ್ರಷ್ಟ ರಾಜಕಾರಣಿಗಳನ್ನು ಬಹಿರಂಗವಾಗಿ ನೇಣು ಹಾಕಿದರು !! ಆದರೆ ನಮ್ಮ ದೇಶದಲ್ಲಿ ಒಬ್ಬಾನೊಬ್ಬ ಭ್ರಷ್ಟ ರಾಜಕಾರಣಿಗಳನ್ನು ಪದಚ್ಯುತ ಮಾಡುವ ಪ್ರಜೆಗಳು ಇಲ್ಲಿಲ್ಲ.

ತಮ್ಮ ತಾಳಕ್ಕೆ ಕುಣಿಯುವ ಕೈ ಬೊಂಬೆ ಮಾಡಿದ್ದಾರೆ! ಇನ್ನು ನ್ಯಾಯಾಲಯಗಳ ನಿಧಾನ ಧೋರಣೆಯಿಂದ ನ್ಯಾಯಾಂಗದ ಬಗ್ಗೆ ವಿಶ್ವಾಸ ಕುಸಿದುಹೋಗಿದೆ. ಎತ್ತ ತಿರುಗಿದರೂ ಕತ್ತಲೆ! ಕಗ್ಗತ್ತಲೆ!! ಘೋರಾಂಧಕಾರ.

ಈಗ ಉಳಿದಿರುವುದೊಂದೇ ದಾರಿ! ಭ್ರಷ್ಟ ವ್ಯವಸ್ಥೆಯನ್ನು ಬುಡಮೇಲು ಮಾಡುವಂಥ ಕ್ರಾಂತಿ. ಫ್ರೆಂಚ್ ಕ್ರಾಂತಿ, ಸೋವಿಯತ್ ಕ್ರಾಂತಿ, ಚೀನಾದಲ್ಲಿ ಕೆಂಪು ಸೈನ್ಯದ ಕ್ರಾಂತಿ ಆದಂತೆ ಇಲ್ಲಿಯೂ ಆಗದ ಹೊರತು ಈ ಭ್ರಷ್ಟಾಚಾರ ನಿರ್ಮೂಲನೆ ಸಾಧ್ಯವೆ ಇಲ್ಲವೆಂಬಂತೆ ಕಾಣುತ್ತದೆ!! ಬೇಸತ್ತ ಜನ ಆ ದಾರಿ ಹಿಡಿದರೆ ಆಶ್ಚರ್ಯವೇನಿಲ್ಲ. ಅದರ ಲಕ್ಷಣಗಳು ದೇಶದಲ್ಲಿ ಅಲ್ಲಲ್ಲಿ ಕಾಣಿಸುತ್ತಿವೆ. ನಿಂತ ನೀರು ಮಲೆತು ಹೋಗಿರುವಂತೆ ಈಗಿನ ವ್ಯವಸ್ಥೆ ತನಗೆ ತಾನೇ ತನ್ನ ಅವಸಾನವನ್ನು ಆಹ್ವಾನಿಸುತ್ತಿದೆ. ಅದರ ಹೊರತು ಭ್ರಷ್ಟಾಚಾರ ನಿರ್ಮೂಲನೆ ಸಾಧ್ಯವೆ ಇಲ್ಲವೆಂಬಂತೆ ಕಾಣುತ್ತದೆ!

– ಕೋ. ಚೆನ್ನಬಸಪ್ಪ

ಬ ಒಂದು ನಿಬಂಧವಿತ್ತು. ಸರ್ಕಾರದ ಪರವಾಗಿ ವುದಾದರೂ ವ್ಯಾಪಾರಿ ವ್ಯವಹಾರದಲ್ಲಿ ಮಾತುಕತೆ ದು ಆದೇಶ ಹೊರಬಂದಾಗ ಅದರಲ್ಲಿ ಸರ್ಕಾರಕ್ಕೆ ವಶ್ಯಕವಾಗಿ ಅಧಿಕ ನಷ್ಟವಾಗಿದ್ದರೆ ಆದೇಶ ರಡಿಸಿದವರ ತನಿಖೆಗೆ ಅವಕಾಶವಿತ್ತು. ಈಗ ಆ ೀ ನಿಬಂಧವನ್ನು ತೆಗೆದುಹಾಕಲಾಗಿದೆ.

**ಹೊ** : ಟೆಲಿಕಾಂ ಹಗರಣದಂತಹವನ್ನು ಮುಚ್ಚಿ ಕಲು ಅದೊಂದು ಮಾರ್ಗ. ಅದರಲ್ಲಿ ಸಹಸ್ರಾರು ೀಟಿಗಳನ್ನು ಸರ್ಕಾರಿ ಬೊಕ್ಕಸದಿಂದ ಗುಳುಂ ಮಾಡ ಗಿತ್ತು, ಈಗ ಮತ್ತೆ ಮಾಡಲಿದ್ದಾರೆ. ಐವತ್ತು-ಅರವತ್ತು ರ ಕೋಟಿ ರೂಪಾಯಿಗಳ ಅವ್ಯವಹಾರ ಅದು.

**ಸಂ** : ಹಾಗಿದ್ದರೆ ಭ್ರಷ್ಟಾಚಾರದ ನಿಗ್ರಹ ಹೇಗೆ ಸಾಧ್ಯ ?

**ಹೊ** : ಅಪರಿಮಿತ ಆಸ್ತಿಯನ್ನು ಅಕ್ರಮವಾಗಿ ಪಾದಿಸಿಕೊಂಡವರ ಆಸ್ತಿಯ ಮುಟ್ಟುಗೋಲು ಕೊಂಡಿರುವ ಪ್ರಕರಣಗಳೇನಾದರೂ ಇವೆಯೆ ?

**ಸಂ** : ನಾನಾಗಲೇ ಹೇಳಿದ ಭ್ರಷ್ಟಾಚಾರ ನಿಗ್ರಹದ ನದಡಿ ಅದು ನಡೆಯುತ್ತದೆ. ಹಾಗೆ ಸಂಪಾದಿಸಿ ಂಡವರಿಗೆ ದಂಡ ವಿಧಿಸಲು ಅವಕಾಶವಿದೆ. ನಾವು ದುಕೊಳ್ಳುವ ಆಸ್ತಿಯ ಮೌಲ್ಯವು ಸಂಬಂಧಪಟ್ಟ ಖಲೆಗಳಲ್ಲಿ ನಮೂದಿಸಿರುವುದೇ ಆಗಿರುತ್ತದೆ. ರಲ್ಲೇ ಅಕ್ರಮವಿದ್ದರೆ ನಾವೇನೂ ಮಾಡುವಂತಿಲ್ಲ. ಗಳಿಸಲಾದ ದಿನಗಳಂದು ಮಾರುಕಟ್ಟೆಯಲ್ಲಿ ರಬಹುದಾದ ಬೆಲೆಗಳಷ್ಟೇ ನಮಗೆ ಪ್ರಸ್ತುತ. ನಮ್ಮ ಚಾರಗಳೆಲ್ಲ ಅದನ್ನು ಆಧರಿಸಿರುತ್ತವೆ.

**ಹೊ** : ಆದಾಯ ತೆರಿಗೆ ಇಲಾಖೆಯವರೊಡನೆ ೀಕಾಯುಕ್ತರಿಗೆ ಸಂಬಂಧವಿದ್ದರೆ ತನಿಖೆಯು ೂ ಪರಿಪೂರ್ಣವಾಗಬಹುದಲ್ಲವೆ ?

**ಸಂ** : ನಾವು ಪ್ರಯತ್ನಿಸಿದ್ದೇವೆ. ಅದು ಮಾಹಿತಿಯನ್ನು ಸ್ಪರ ವಿನಿಮಯ ಮಾಡಿಕೊಳ್ಳುವ ಮೂಲಕ ಆಗಬೇಕು. ೇನೋ ಚರ್ಚೆ ನಡೆಸಿದ್ದೇವೆ, ಅವರೂ ಒಪ್ಪಿದ್ದಾರೆ. ರೆ ಈವರೆಗೆ ಅಂತಹ ಯಾವ ಮಾಹಿತಿಯ ಮಯವೂ ಆಗಿಲ್ಲ. ಅದನ್ನು ಮುಂದುವರಿಸಬೇಕು. ಕೇಂದ್ರ ಸರ್ಕಾರದ ಅಂಗ, ನಾವು ರಾಜ್ಯಸರ್ಕಾರದ . ಆದ್ದರಿಂದ ಕೆಲವು ತೊಡಕುಗಳೂ ಇರುತ್ತವೆ.

**ಹೊ** : ಒಬ್ಬ ಸರ್ಕಾರಿ ನೌಕರನ ಆಸ್ತಿಯ ತನಿಖೆಗೆ ರ ಯಾವುದು ? ಸಂಬಳವೋ ಅಥವಾ ಆದಾಯ ಗೆ ನೀಡಲಾದ ದಾಖಲೆಗಳೋ ?

**ಸಂ** : ಸಂಬಳವಲ್ಲದೆ ಬೇರಾವುದಾದರೂ ಮೂಲ ದ ಆದಾಯವಿದ್ದರೆ ಅದು ಪ್ರತಿಫಲಿತವಾಗುವುದು ಯ ತೆರಿಗೆಗೆ ಸಲ್ಲಿಸುವ ದಾಖಲೆಯಲ್ಲಿ. ಆದ್ದರಿಂದ ನ್ನು ತೆಗೆದುಕೊಳ್ಳಲೇಬೇಕು. ಒಬ್ಬ ಅಬಕಾರಿ ಅಧಿಕಾರಿ ದುರ್ಗದಲ್ಲಿ ನಿನ್ನೆಯಷ್ಟೇ ತನಿಖೆಗೆ ಒಳಗಾಗಿದ್ದ ಘಟನೆ : ಒಂದು ಲಕ್ಷ ರೂಪಾಯಿ ಲಂಚಕ್ಕಾಗಿ ಒಪ್ಪಂದ . ತನಿಖೆಯಲ್ಲಿ ಆತನದು ಮೂರು ಭಾರಿ ಮನೆ ವುದು ಗೊತ್ತಾಗಿದೆ. ದಾವಣಗೆರೆಯಲ್ಲೂ ಒಂದು ಒಂದು ಕೋಟಿ ನಗದು ಹಣ ಇತ್ತು, ಒಂದೂವರೆ ಟಿ ಚರಾಸ್ತಿ. ಆತನ ಆದಾಯ ಈವರೆಗೆ ಹೆಚ್ಚೆಂದರೆ ಲಕ್ಷ. ಮಿಕ್ಕಿದ್ದು ಎಲ್ಲಿಂದ ಬಂದಿದೆಯೆಂದು ಅವನಿಂದ ಬೇಕೋ ಅಥವಾ ಸ್ವತಂತ್ರವಾಗಿ ನಾವು ಹಿಡಿಯಬೇಕೋ ?

**ಹೊ** : ನಿಮ್ಮ ಬಳಿ ಇರುವುದಕ್ಕಿಂತಲೂ ಹೆಚ್ಚು ಮಾಹಿತಿ ಆದಾಯ ತೆರಿಗೆಯವರಲ್ಲಿ ಇರುತ್ತದೆ. ಅವರೇಕೆ ಧಾಳಿ, ತನಿಖೆ, ಇತ್ಯಾದಿ ಮಾಡಬಾರದು ?

**ಸಂ** : ಮಾಡಬೇಕು. ಅವರು ಸಿ.ಬಿ.ಐ.ಗೆ ತನಿಖೆಗಾಗಿ ಒಪ್ಪಿಸಬೇಕಾಗುತ್ತದೆ. ಕಳೆದ ವರ್ಷದಲ್ಲಿ ನಾವು ೯೩ ಧಾಳಿಗಳನ್ನು ಮಾಡಿದ್ದೇವೆ. ೨೬೨ ಅಧಿಕಾರಿಗಳು ಲಂಚ ಪಡೆದುದನ್ನು ಹಿಡಿದಿದ್ದೇವೆ. ಅದರಲ್ಲಿ ಬಿ.ಡಿ.ಎ. ಅಧಿಕಾರಿಯೊಬ್ಬರು ಪಡೆದ ಲಂಚ ೨೫ ಲಕ್ಷ! ನಮ್ಮ ವ್ಯಾಪ್ತಿ ಕೇವಲ ಒಂದು ರಾಜ್ಯದ್ದು ಮತ್ತು ನಮ್ಮ ಮೂಲ ಸೌಕರ್ಯ ಅಷ್ಟೇನೂ ದೊಡ್ಡದಲ್ಲ. ಅದೇ ಸಿ.ಬಿ.ಐ. ನೋಡಿ, ಇಡೀ ದೇಶದ ವ್ಯಾಪ್ತಿ ಇದೆ. ಆದರೆ ಅವರ ಸಾಧನೆ ಎಷ್ಟು? ಅವರಿಗೆ ಬೇರೆ ಮುಗ್ಗಟ್ಟುಗಳಿವೆ. ಧಾಳಿ ಮಾಡಲು ಎರಡು ಸಂಸ್ಥೆಗಳಿಂದ ಅವರು ಪರವಾನಗಿ ಪಡೆಯಬೇಕು. ಅಷ್ಟರಲ್ಲಿ ಭ್ರಷ್ಟರು ಕೋಟಿ ಕಟ್ಟಿಕೊಳ್ಳಲು ಸಾಕಷ್ಟು ಸಮಯವಿರುತ್ತದೆ.

**ಹೊ** : ಸರ್ಕಾರಿ ಅಧಿಕಾರಿಗಳಿಗಿಂತಲೂ ಹೆಚ್ಚಾಗಿ ಸರ್ಕಾರೇತರ ಉದ್ಯೋಗಗಳವರು ನಮ್ಮಲ್ಲಿದ್ದಾರೆ: ವಕೀಲರು, ವೈದ್ಯರು, ಗುತ್ತಿಗೆದಾರರು, ಸರಕು ತಯಾರಕರು, ವ್ಯಾಪಾರಿಗಳು, ಹೀಗೆ. ಆದಾಯ ತೆರಿಗೆ ವಿಭಾಗವು ಅವರ ತನಿಖೆ ಮಾಡಬೇಕಲ್ಲವೆ ?

**ಸಂ** : ಹೌದು. ನಮ್ಮ ವ್ಯಾಪ್ತಿ ಕೇವಲ ನಮ್ಮ ರಾಜ್ಯಕ್ಕೆ ಸೀಮಿತ. ಸುಮಾರು ಎರಡು ಲಕ್ಷ ಅಧಿಕಾರಿಗಳ ಪೈಕಿ





ನಾವು ಶೇ. ೦.೦೦೧ರಷ್ಟು ಅಧಿಕಾರಿಗಳ ತನಿಖೆ ಮಾಡಿದ್ದರೆ ಹೆಚ್ಚು.

**ಹೊ** : ಬೇರೆಯವರ ನಿಯಂತ್ರಣ ಯಾರು ಮಾಡಬೇಕು ? ಕೇವಲ ಸರ್ಕಾರಿ ಅಧಿಕಾರಿಗಳ ತನಿಖೆಯಿಂದ ಭ್ರಷ್ಟಾಚಾರ ನೀಗುತ್ತದೆಯೆ ? ಉದಾಹರಣೆಗೆ, ಅನಿಲದ ಬಾಬ್ತು ಅವ್ಯವಹಾರ ನೋಡಿ. ಅದು ೨ ಲಕ್ಷ ಕೋಟಿ ರೂ.ಗಳ ಪ್ರಮಾಣದ್ದು. ಅತ್ಯುನ್ನತ ಹಂತದಲ್ಲಿರುವವರ ಭ್ರಷ್ಟಾಚಾರ ಅದು. ಅಂಥವನ್ನೇನು ಮಾಡುವುದು ?

**ಸಂ** : ಒಂದು ಚಿಕ್ಕ ಉದಾಹರಣೆ ನೋಡಿ: ಬೆಂಗಳೂರಿನಲ್ಲಿ ಜೆ.ಎಸ್.ಎಸ್. ಸಂಸ್ಥೆಯು ಐ.ಎ.ಎಸ್. ಪರೀಕ್ಷೆಗೆ ತರಬೇತಿ ನೀಡುತ್ತದೆ. ಈಚೆಗೆ ಅಲ್ಲಿಗೆ ಹೋಗಿದ್ದಾಗ ಒಂದು ವಿಷಯ ತಿಳಿಯಿತು. ಒಬ್ಬ ವಿದ್ಯಾರ್ಥಿ ಎಂ.ಬಿ.ಬಿ.ಎಸ್. ಪದವೀಧರ. ಪ್ರಥಮ ತರಗತಿಯಲ್ಲಿ ಉತ್ತೀರ್ಣನಾಗಿದ್ದಾನೆ. ಅವನು ಐ.ಎ.ಎಸ್.ನಲ್ಲಿ ತೇರ್ಗಡೆಯಾಗಿದ್ದಾನೆ. ಆದರೆ ಅದು ಅವನಿಗೆ ಬೇಡವಂತೆ. ಅವನ ಆಯ್ಕೆ ಐ.ಆರ್.ಎಸ್., ಅಂದರೆ ರೆವಿನ್ಯೂ ವಿಭಾಗ. ಆದಾಯ ತೆರಿಗೆ, ಅಬಕಾರಿ ಅಥವಾ ಸುಂಕ ಅವನಿಗೆ ಮೊದಲ ದಿನದಿಂದಲೇ ಗಿಂಬಳ ಸಂಪಾದನೆಗೆ ಹಾದಿ ಮಾಡಿಕೊಡುತ್ತದೆ! ಅಬಕಾರಿಯಲ್ಲಿ ಯಾವುದೋ ಒಂದು ಸರಕಿದೆಯೆನ್ನಿ. ಅದನ್ನು ಉತ್ಪಾದಕ ಒಂದು ಲಕ್ಷ ಮೌಲ್ಯದ್ದು ಎಂದರೆ ಇವನು ಅದನ್ನು ಒಂದು ಕೋಟಿಯದು ಎನ್ನುತ್ತಾನೆ. ಇವನದೇ ಕೊನೆಯ ಮಾತು. ಅದನ್ನು ಪ್ರಶ್ನಿಸಬೇಕಾದರೆ ಉತ್ಪಾದಕ ೫೦ ಲಕ್ಷ ಡಿಪಾಸಿಟ್ ಇಡಬೇಕು. ಅವನೇನು ಮಾಡುತ್ತಾನೆ ? ಇವನ ಕೈ ಬೆಚ್ಚಗೆ ಮಾಡಿ ಪಾರಾಗುತ್ತಾನೆ. ಇದರ ಸಂದೇಶವೇನು ? ನಮ್ಮ ಯುವಕರು ಆರಂಭದಲ್ಲೇ ಭ್ರಷ್ಟತೆಯ ತೆಕ್ಕೆಗೆ ನುಗ್ಗಲು ತವಕಿಸುತ್ತಿದ್ದಾರೆ, ಎಂದು. ನಮಗಿದು ಹತಾಶೆಯನ್ನುಂಟುಮಾಡುವಂತಿದೆ.

**ಹೊ** : ಸರ್ಕಾರೇತರ ವಿಭಾಗದ ನಿಯಂತ್ರಣ ಹೇಗೆ ? ಗಣಿಗಳು, ಇತ್ಯಾದಿ...

**ಸಂ** : ಆ ಬಗ್ಗೆ ನನ್ನ ವರದಿ ಸಮಗ್ರವಾಗಿದೆ. ಖನಿಜದ ರಫ್ತಿನ ಬಾಬ್ತು ಸರ್ಕಾರಕ್ಕೆ ರಾಯಲ್ಟಿ ನಗಣ್ಯವಾದ್ದು. ಸಂಪತ್ತು ಲೂಟಿಯಾಗುತ್ತಿದೆ. ಖನಿಜವು ನಾಳೆಗೆ ಹುಳಿತು ಹೋಗುವ ಸಾಮಗ್ರಿಯಲ್ಲ. ಮುಂದಿನ ಪೀಳಿಗೆಗಳವರೆಗೆ ಅದು ಉಳಿಯಬೇಕು. ಅದನ್ನು ರಫ್ತು ಮಾಡಲೇ ಕೂಡದು. ಗಣಿಯ ಹತ್ತಿರವೇ ಉಕ್ಕು ತಯಾರಿಸಲು ಕಾರ್ಖಾನೆ ಸ್ಥಾಪಿಸಿ. ಕೋಟಿಗಟ್ಟಲೆ ಲಾಭ ಬರುತ್ತದೆ. ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಉಕ್ಕಿಗೆ ಬೇಡಿಕೆ ಇದ್ದೇ ಇರುತ್ತದೆ. ರಾಜ್ಯಕ್ಕೆ ವ್ಯಾಟ್ ಮೂಲಕ ಆದಾಯ. ಉದ್ಯೋಗ ಜನರಿಗೆ ಖಾತ್ರಿ. ಪರಿಸರವೂ ಹಾಳಾಗದು. ರಸ್ತೆಗಳು ಗುಂಡಿಗಳಾಗುವುದಿಲ್ಲ. ಎಲ್ಲದಕ್ಕೂ ದೇಶದ ಬಗ್ಗೆ ದೂರದರ್ಶಿತ್ವ ಇರಬೇಕು, ಅಷ್ಟೆ. ಅದಕ್ಕೆ ನಮ್ಮಲ್ಲಿ ಕೊರತೆ ಇದೆ.

**ಹೊ** : ಅಕ್ರಮ ಗಣಿಗಾರಿಕೆ ಮಾತ್ರವಲ್ಲ, ಸಕ್ರಮವಾದುದನ್ನೂ ನಿಲ್ಲಿಸಬೇಕು. ಸಂಪನ್ಮೂಲಗಳನ್ನು ನಮ್ಮ ದೇಶವು ವ್ಯರ್ಥಮಾಡುವಂತೆ ಬೇರಾವ ದೇಶವೂ ಮಾಡುವುದಿಲ್ಲ. ಜನರ ಹಿತವನ್ನು ಕಾಪಾಡದೆ ಸಂಸ್ಕೃತಿಯ ಮಾತನ್ನಾಡುವುದು ಮೂರ್ಖತನ ಎನಿಸುತ್ತದೆ. ಕೆಲಸ ಮಾಡುವ ಕೈಗಳಿವೆ, ಚಿಂತನೆ ಮಾಡುವ

ಪ್ರತಿಭಾವಂತ ಮಿದುಳುಗಳಿವೆ; ಅವೆರಡನ್ನೂ ಸಮನ್ವಯಗೊಳಿಸದಿದ್ದರೆ ಅಭಿವೃದ್ಧಿ ಆಗುತ್ತದೆಯೆ ?

**ಸಂ:** ಒಪ್ಪಬೇಕಾದ ಮಾತೇ. ಗಣಿಗಾರಿಕೆಯನ್ನು ಕುರಿತ ನನ್ನ ವರದಿ ೧೬೦೦ ಪುಟಗಳಷ್ಟಿದೆ. ಅದರಲ್ಲಿ ಶಿಫಾರಸ್ಸುಗಳು ೩೦೦ ಪುಟಗಳಷ್ಟಿವೆ. ಅದರ ವಿಶ್ಲೇಷಣೆಯೂ ಇಲ್ಲ, ಅಂಗೀಕಾರವೂ ಇಲ್ಲ. ರಾಜ್ಯಕ್ಕೆ ಅಪಾರ ನಷ್ಟ ಉಂಟಾಗುತ್ತಿದೆ. ನಾಳೆ ನಮ್ಮ ರಾಜ್ಯದ ಗತಿ ಏನಾಗುತ್ತದೆಂಬ ಚಿಂತೆ ಬಾಧಿಸುತ್ತಿದೆ.

**ಹೊ:** ಮುಂದಿನ ದಶಕದಲ್ಲಿ ಏನಾದರೂ ಒಳ್ಳೆಯ ಬದಲಾವಣೆಯನ್ನು ನಿರೀಕ್ಷಿಸಬಹುದೆ ?

**ಸಂ:** ಆ ಬಗ್ಗೆ ನನಗೆ ನಿರಾಶಾಭಾವನೆ ಇದೆ. ಬಹಳ ಗಂಭೀರವಾದ ವಿಷಯವನ್ನು ಕುರಿತಂತೆ ರಾಜ್ಯದಲ್ಲಿ ಇಷ್ಟು ನೀರಸ ಪ್ರತಿಕ್ರಿಯೆ ಖಂಡಿತ ಒಳ್ಳೆಯದಲ್ಲ.

**ಹೊ:** ನಾಯಕರು ಹೋಗಲಿ, ಜನ ಏನು ಮಾಡುತ್ತಿದ್ದಾರೆಂಬ ತವಕ ಇನ್ನೂ ಹೆಚ್ಚಿನದು.

**ಸಂ:** ಸರ್ಕಾರದಲ್ಲಿ ಮಾತ್ರವಲ್ಲ, ಖಾಸಗಿಯಲ್ಲೂ ಭ್ರಷ್ಟಾಚಾರದ ಪಿಡುಗು ಅಗಾಧವಾಗಿದೆ. ಎಲ್ಲ ಉದ್ಯೋಗಗಳಲ್ಲೂ ಇದು ಹರಡಿ ನಿಂತಿದೆ. ಇದಕ್ಕೆ ಕಡಿವಾಣ ಹಾಕಬೇಕು, ಮುಟ್ಟುಗೋಲು ಹಾಕುತ್ತೇವೆ ಎಂಬ ಭಾತಿ ಬೇಕು. ಪ್ರವಾಹಪೀಡಿತರಿಗೆ ನೀಡುವ ಪರಿಹಾರದಲ್ಲಿ ಕೂಡ ಏನೋ ಹಗರಣಗಳು. ಮಾನವತೆಯೇ ಇಲ್ಲವೆ ನಮ್ಮಲ್ಲಿ? ಪರಿಹಾರ ಕಾರ್ಯದಲ್ಲಿ ಲೋಕಾಯುಕ್ತವು ಮೂಗು ತೂರಿಸುವ ಆಶಯ ಹೊಂದಿಲ್ಲ, ಆದರೆ ಪರಿಹಾರದ ವಿಲೇವಾರಿ ಸರಿಯಾಗಿ ಆಗುತ್ತಿದೆಯೇ ಎಂಬುದನ್ನು ಖಂಡಿತ ತನಿಖೆ ಮಾಡಬಯಸುತ್ತೇವೆ.

**ಹೊ:** ನಿಮ್ಮ ಬಗೆಗೇ ಏನಾದರೂ ಹೇಳುತ್ತೀರಾ ?

**ಸಂ:** ನಾನು ೨೦೦೬ರ ಆಗಸ್ಟ್ ೩ರಂದು ಲೋಕಾಯುಕ್ತ ಸ್ಥಾನಕ್ಕೆ ಬಂದೆ. ಬಂದ ಕೂಡಲೇ ನಾನು ಮಾಡಿದ ಕೆಲಸ ನನ್ನ ಆಸ್ತಿಯ ವಿವರಗಳನ್ನೆಲ್ಲಾ ಪ್ರಕಟಿಸುವುದು. ಅದು ವೆಬ್‌ಸೈಟ್‌ನಲ್ಲಿ ಲಭ್ಯ. ಅದು ಪಾರದರ್ಶಕತೆಯ ಮೊದಲ ಹೆಜ್ಜೆ. ಅದನ್ನು (ಪ್ರತಿವರ್ಷ ಆದಾಯ ತೆರಿಗೆ ನೀಡುವಂತೆ) ಕಾಲದಿಂದ ಕಾಲಕ್ಕೆ ಸಮಕಾಲೀನಗೊಳಿಸುತ್ತಿರುತ್ತೇನೆ. ಜನರಿಗೆ ತಿಳಿಯಬೇಕು: ಆತನ ಹತ್ತಿರ ಇಷ್ಟಿತ್ತು, ನಿವೃತ್ತನಾದಾಗ ಇಷ್ಟಿತ್ತು, ಎಂದು. ನ್ಯಾಯಾಧೀಶರೆಲ್ಲ ಪಾರದರ್ಶಕತೆಗೆ ಬದ್ಧರಾಗಬೇಕು. ತೀರ್ಪು ಬರೆಯುವುದರಲ್ಲಿ ಒಬ್ಬೊಬ್ಬರದು ಒಂದೊಂದು ಶೈಲಿ ಇರಬಹುದು, ಆದರೆ ವೈಯಕ್ತಿಕ ಪ್ರಾಮಾಣಿಕತೆ ಎಲ್ಲರಿಗೂ ಒಂದೇ ತೆರನಾದ್ದು. ಜನರಿಗೆ ಈ ಸಂದೇಶ ಮುಟ್ಟಬೇಕು, ಆಗಲೆ ನ್ಯಾಯಾಂಗದ ಬಗೆಗಿನ ಅವರ ಸಂಶಯ ಬಗೆಹರಿಯುವುದು, ನ್ಯಾಯಾಂಗವನ್ನು ಅವರು ಗೌರವಿಸುವುದು. ಈವರೆಗೆ ಜನರು, ರಾಜಕಾರಣಿಗಳು, ಅಧಿಕಾರಿಗಳು ಎಲ್ಲರೂ ನ್ಯಾಯಾಂಗವು ಕಲಂಕರಹಿತ ಎಂದು ತಿಳಿದಿದ್ದರು; ಅದೀಗ ಮುಗಿದುಹೋದ ಪರ್ವ. ಪಂಜಾಬಿನ ಇಬ್ಬರು, ಕಲ್ಕತ್ತಾದ ಒಬ್ಬರು, ಅಲಹಾಬಾದಿನ ಮೂವತ್ನಾಲ್ಕು, ಕರ್ನಾಟಕದ ಒಬ್ಬರು, ಹೀಗೆ ನ್ಯಾಯಮೂರ್ತಿಗಳು ಕೆಟ್ಟ ಸಮಾಚಾರಗಳ ಕೇಂದ್ರದಲ್ಲಿದ್ದಾರೆ. ಮಾಹಿತಿ ಹಕ್ಕು ಕಾಯಿದೆಯು ಸರ್ವೋಚ್ಚ ಹಾಗೂ ಉಚ್ಚ ನ್ಯಾಯಾಲಯಗಳಿಗೆ ಅನ್ವಯಿಸುವುದಿಲ್ಲವೆಂದು ನ್ಯಾಯಾಂಗದ ವಾದವಿದೆ. ಅದು ಸರ್ವಥಾ ಸರಿಯಲ್ಲ.

**ಹೊ:** ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಯೊಬ್ಬರು ತಮ್ಮ ಆಸ್ತಿ ವಿವರಗ[...] ಬಹಿರಂಗವಾಗಿ ಘೋಷಿಸಿಕೊಳ್ಳಲು ನ್ಯಾಯಾಲಯ[...] ವೆಬ್‌ಸೈಟಿನಲ್ಲಿ ಕೂಡದೆಂದು ಆಜ್ಞಾಪಿಸಲಾಯಿತ[...] ಅವರು ಅದನ್ನು ತಮ್ಮ ವೈಯಕ್ತಿಕ ವೆಬ್‌ಸೈಟಿ[...] ಹಾಕಿದ್ದಾರೆನ್ನಲಾಗಿದೆ. ಇದೇಕೆ ಹೀಗೆ ?

**ಸಂ:** ಜನರೇ ದೇಶದ ಪ್ರಭುಗಳು, ನಾವ[...] ಜನತಾ ಸೇವಕರು. ಅದಕ್ಕೆ ನಮಗೆ ಸಂಬಳ ಕೊಡುತ್ತಾ[...] ಚುನಾವಣೆಗೆ ನಿಲ್ಲಿರೆಂದು ಜನ ಒತ್ತಾಯ ಮಾಡಿ ಅಭ್ಯ[...]ಗಳನ್ನು ನಿಲ್ಲಿಸುವುದಿಲ್ಲ. ಜನರು ಆಯ್ಕೆ ಮಾಡಿದ[...] ನಿಜ; ಆದರೆ ಚುನಾವಣೆಗೆ ನಿಲ್ಲುವ ಆಯ್ಕೆ ಅಭ್ಯ[...]ಯದು. ಅವರನ್ನು ಭ್ರಷ್ಟಾಚಾರದಲ್ಲಿ ತೊಡಗ[...] ಚುನಾಯಿಸಿಲ್ಲ. ಹಾಗೆಯೇ ಸರ್ಕಾರದ ಅಧಿಕ[...] ಕೆಲಸಕ್ಕೆ ಅರ್ಜಿ ಹಾಕಿ ಬಂದವರು, ಸಂಬಳ ಪಡೆಯ[...] ಬಂದವರು. ನ್ಯಾಯಾಧೀಶರು ಕೂಡ ಒಪ್ಪಿಗೆ ಕೊ[...] ಬಂದವರು. ಆದ್ದರಿಂದ ಯಾರೂ ಪ್ರಜೆಗಳ[...] ಮೀರಿ ನಡೆಯುವಂತಿಲ್ಲ, ಪಾರದರ್ಶಕತೆಯಿ[...] ನಡೆದುಕೊಳ್ಳಬೇಕು.

*(ಕಡೆಯಲ್ಲಿ ಎಸ್. ಸುರೇಂದ್ರ ಕೇಳಿ ತಿಳಿದುಕೊಂಡರು, ಇಬ್[...] ೧೯೬೫ರಲ್ಲಿ ಕಾನೂನು ತರಗತಿಗಳಲ್ಲಿ ಸಹಪಾಠಿಗಳಾಗಿದ್ದವರು, ಎ[...] ಇಬ್ಬರೂ ತರಗತಿಗಳಿಗೆ ಹೋಗಿದ್ದು ಕಡಿಮೆಯೇ: ಹೆಗಡೆಯ[...] ಹಾಕಿ ಪಟುವಾಗಿ ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸುವಲ್ಲಿ ನಿರ[...] ಸುರೇಂದ್ರ ನಾಟಕಗಳಲ್ಲಿ ಪಾತ್ರಧಾರಿಯಾಗಿರುತ್ತಿದ್ದು ಅದ[...] ಮುಳುಗಿದ್ದವರು. ನ್ಯಾಯಮೂರ್ತಿಗಳಿಗೆ ಸುರೇಂದ್ರ ಹೇಳಿದ[...] "ನೀವು ಕಾನೂನು ಅಧ್ಯಯನ ಮಾಡಿ ಅದೇ ಕ್ಷೇತ್ರದಲ್ಲಿ ಉ[...] ನಾನು ಹಾಗೆ ಮಾಡಲಾಗಲಿಲ್ಲ", ಎಂದು. ಇಬ್[...] ನಗುಮುಖದಿಂದ ಹಿಂದಿನ ದಿನಗಳನ್ನು ನೆನೆದರು.)*

# ಅರಣ್ಯವಾಸಿಗಳ ಕಾಯಿದೆ ಜಾರಿಗೆ ಬರುತ್ತದೆಯೇ ?

• ಕಲ್ಕುಳಿ ವಿಠಲ ಹೆಗ್ಗಡೆ

ಜನವರಿ ೨, ೨೦೦೭ರ ನ್ಯಾಯ ಮತ್ತು ಕಾನೂನು ಇಲಾಖೆ, ಭಾರತ ಸರ್ಕಾರ, ಪ್ರಕಟಿಸಿದ ಗೆಜೆಟ್‌ಅನ್ನು ೦೬ ಡಿಸೆಂಬರ್ ೨೯ರಂದು ರಾಷ್ಟ್ರಾಧ್ಯಕ್ಷರ ಅನುಮತಿಯ ಮೇರೆಗೆ ಸಾರ್ವಜನಿಕರ ಅಭಿಪ್ರಾಯಕ್ಕಾಗಿ ಕಟಿಸಿದಾಗ, ಆದಿವಾಸಿಗಳು ಮತ್ತು ಪರಿಸರದ ಪರವಾಗಿ ಅಭಿಮಾನ ಹೊಂದಿದ್ದ ನನ್ನಂಥ ಅನೇಕರಿಗೆ ಎಷ್ಟು ತೋಷವಾಗಿತ್ತೆಂದರೆ, ಈ ಬಾರಿ ಆದಿವಾಸಿಗಳ ಹೋರಾಟಕ್ಕೆ ಸಂದ ಜಯ ಎಂದು ಭಾವಿಸಿದ್ದೆವು.

ಪರಿಶಿಷ್ಟ ಬುಡಕಟ್ಟುಗಳು ಮತ್ತು ಪರಂಪರಾಗತ ಅರಣ್ಯವಾಸಿಗಳ 'ಅರಣ್ಯದೊಳಗಿನ ಹಕ್ಕು' ಗುರುತಿಸುವ ಹಾಸಿಕ ಕಾಯ್ದೆ ಕಾಡಿನೊಂದಿಗೆ 'ಸಹಬಾಳ್ವೆ' ನಡೆಸುವ ಜನರು ಪರಿಸರ ಸ್ನೇಹಿಗಳಾಗಿ ಬಾಳ್ವೆ ನಡೆಸುವುದಕ್ಕೆ ನೂನಿನ ಬಲ ಬಂದಿದೆ ಎಂದು, ಕಾನೂನಿನ ಜಾರಿಗಾಗಿ ಆಗ್ರಹಿಸಿದ್ದಲ್ಲದೆ, ಅರಣ್ಯವಾಸಿಗಳ ಕೆಲವು ಅವೈಜ್ಞಾನಿಕ ುಗಳು (ಒಣ ಹುಲ್ಲಿಗೆ ಬೆಂಕಿ ಹಾಕುವುದು) ಇತ್ಯಾದಿಗಳ ಬಗ್ಗೆ ಜಾಗೃತಿ ಮೂಡಿಸಲು ಅನೇಕ ಜಾಗೃತಿ ರಗಳನ್ನು ಏರ್ಪಡಿಸಿದ್ದೆವು ಮತ್ತು ಅರಣ್ಯವನ್ನು ತಮ್ಮ ಬದುಕಾಗಿ, ತಮ್ಮ ಮನೆಯಂತೆ ಜೋಪಾನ ಮಾಡಿ ವರೆಂದು, ಸರ್ವಸ್ವವೆಂದು ಪೂಜಿಸಿ, ಪರಿಭಾವಿಸುವ ಆದಿವಾಸಿಗಳಿಗೆ ಅರಣ್ಯ ಒಡೆತನದ 'ಸ್ವಾಯತ್ತತೆ' ಸಿಕ್ಕಿತು ದು ಕಾಯ್ದೆಯಲ್ಲಿನ ಕೆಲವು ದೋಷಗಳನ್ನು ತಿದ್ದುವಂತೆ ಆಕ್ಷೇಪಣೆ ಸಲ್ಲಿಸಿದ್ದೆವು.

ಎರಡು ವರುಷ ಕಳೆದು ೨೦೦೮ ಜನವರಿ ೧ರಂದು ಭಾರತ ಸರ್ಕಾರದ ಬುಡಕಟ್ಟು ವ್ಯವಹಾರಗಳ ಸಚಿವಾಲಯ ೇಷ ಗೆಜೆಟ್ ಪ್ರಕಟಿಸಿ, ಸಂಖ್ಯೆ ಜಿ.ಎಸ್.ಆರ್. ೪೩೭ ಜೂನ್ ೧೯, ೨೦೦೭ರಲ್ಲಿ ಆಕ್ಷೇಪಣೆಗಳ ೪೫ ದಿನಗಳನ್ನು ರೈಸಿ ಜನವರಿ ೧, ೨೦೦೮ರಂದು ಕಾಯಿದೆಯಾಗಿ ಬಂದಾಗ ಕಾಲಾನುಕಾಲದಿಂದ ಕಾಡನ್ನು, ಅರಣ್ಯವಾಸಿಗಳನ್ನು ೇಚುತ್ತಾ ಬಂದ ವರ್ಗಗಳು, ಅಷ್ಟು ಸುಲಭವಾಗಿ ಕಾಯಿದೆ ಅರಣ್ಯವಾಸಿಗಳ ಪರವಾಗಿ ಜಾರಿಯಾಗಲು ಬಿಡುವುದಿಲ್ಲ ಎಂಬುದು ತಿಳಿದುಬಂತು. ಆದಿವಾಸಿಗಳು ಅರಣ್ಯ ಮತ್ತು ಅವರ ಬದುಕಿಗಾಗಿ ಇನ್ನಷ್ಟು ೋರಾಟ ಮಾಡುವುದು ಅನಿವಾರ್ಯ. ಯಾರು ಅಂದು ಈ ಕಾಯಿದೆಯನ್ನು ಜಾರಿ ಗದಂತೆ ತಡೆದಿದ್ದರೊ, ಅದೇ ವ್ಯಕ್ತಿಗಳು ಕಾಯಿದೆ ಕಾನೂನಾಗಿ ಜಾರಿಗೆ ಬರುವಾಗ ೇಕ ತಿದ್ದುಪಡಿಗಳನ್ನು ತಂದು ಆದಿವಾಸಿಗಳ ಹಕ್ಕನ್ನು ಮೊಟಕುಗೊಳಿಸಿ ಕೆಲವು ರ್ಬಂಧಗಳನ್ನು ವಿಧಿಸಿದ್ದರು. ಇಂದು ಈ ಕಾಯಿದೆ ಜಾರಿಯಾಗದಂತೆ ನಿವೃತ್ತ ಣ್ಯಾಧಿಕಾರಗಳ ಸಂಘದ ಹೆಸರಲ್ಲಿ ಏಳು ರಾಜ್ಯಗಳ ಉಚ್ಚ ನ್ಯಾಯಾಲಯ ಲ್ಲಿ ತಡೆಯಾಜ್ಞೆ ತಂದಿದ್ದಾರೆ. ಸರ್ಕಾರ ತಡೆಯಾಜ್ಞೆಯನ್ನು ತೆರವು ಳಿಸಲು ಪ್ರಯತ್ನಿಸದೆ ಅರಣ್ಯವಾಸಿಗಳಿಗೆ ಕಾಯಿದೆ ಜಾರಿಯಲ್ಲಿದೆ ದು ನಂಬಿಸಿ, ಅರಣ್ಯ ಸಮಿತಿಗಳನ್ನು ಮಾಡಿ ಸ್ಥಳೀಯರಿಂದ ಹಕ್ಕು ುತಿಸುವ ಅರ್ಜಿ ಪಡೆಯುವ ನಾಟಕವಾಡುತ್ತಾ ಗಿರಿಜನರ ೋರಾಟಗಳನ್ನು ತಣ್ಣಗಾಗಿಸುವ ಪ್ರಯತ್ನ ಮಾಡುತ್ತಿದೆ.

ಇಂದು ಅಲ್ಪಸ್ವಲ್ಪ ಅರಣ್ಯವೇನಾದರೂ ಉಳಿದಿದ್ದರೆ ಅದು ಅರಣ್ಯ ುಗಳಿಂದ, ತಮ್ಮ ಬದುಕಿನ ಪರಿಸರವನ್ನು ಜೋಪಾನ ಮಾಡುವ ರ ಸಂಸ್ಕೃತಿಯಿಂದ. ಭಾರತದಂತಹ ದೇಶಗಳ ಉಷ್ಣವಲಯ ಕಾಡು, ರಲ್ಲೂ ನಮ್ಮ ಪೂರ್ವ ಮತ್ತು ಪಶ್ಚಿಮ ಘಟ್ಟಗಳಲ್ಲಿರುವ ಮಳೆ ಕಾಡು ೂಲ್ಯವಾದದ್ದು. ಭಾರತದ ಪ್ರತಿ ಇಂಚು ಇಂಚನ್ನು ಅಳೆದು ಅದರಿಂದ



ಅರಣ್ಯ ಅತಿಕ್ರಮಣ ಮಾಡಿದವರ ವಿರುದ್ಧ ಕ್ರಮ ತೆಗೆದುಕೊಳ್ಳುವಂತೆ ನ್ಯಾಯಾಲಯ ಅರಣ್ಯ ಇಲಾಖೆಗೆ ಆದೇಶಿಸಿದೆ. ವರದಿಯನ್ನು ತನಗೆ ಸಲ್ಲಿಸುವಂತೆ ಸೂಚಿಸಿದೆ. ತಪ್ಪಿದಲ್ಲಿ ಹೆಕ್ಟೇರ್ ಒಂದಕ್ಕೆ ಸ್ಥಳೀಯ ಅರಣ್ಯಪಾಲಕ ನೂರು ರೂ. ದಂಡವನ್ನು ತನ್ನ ಸ್ವಂತ ಹಣದಲ್ಲಿ ಕಟ್ಟಬೇಕು. ಅಲ್ಲದೆ ರಾಜ್ಯ ಸರ್ಕಾರ ಈ ತಪ್ಪಿಗೆ ಒಂದು ಹೆಕ್ಟೇರ್‌ಗೆ ಒಂದು ಸಾವಿರ ರೂ. ದಂಡ ಕಟ್ಟಬೇಕಾಗುತ್ತದೆ. ಹೆಚ್ಚು ಕಡಿಮೆ ಕರ್ನಾಟಕ ಸರ್ಕಾರ ನೂರು ಕೋಟಿ ರೂ. ದಂಡ ಕಟ್ಟಬೇಕಾದ ಸ್ಥಿತಿಯಲ್ಲಿದೆ. ಈ ವ್ಯವಹಾರವನ್ನೆಲ್ಲಾ ನೋಡಿಕೊಳ್ಳಲು ವಿದೇಶಿ ಹಣ ಪಡೆದು ಕೆಲಸ ಮಾಡುವ ವಾಲ್ಮೀಕಿ ಥಾಪರ್, ಮಹೇಂದ್ರ ವ್ಯಾಸ್ ಮತ್ತಿತರರನ್ನು ಒಳಗೊಂಡ 'ಉನ್ನತಾಧಿಕಾರ' ಹೊಂದಿದ 'ಸಮಿತಿ'ಯೊಂದನ್ನು ನ್ಯಾಯಾಲಯವೇ ರಚಿಸಿದೆ.

ಲಾಭ ದೋಚುವ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಇಲ್ಲಿನ ವ್ಯವಸಾಯೇತರ ಪ್ರದೇಶದ ಕಾಡನ್ನು ತಮ್ಮ ಪ್ರಮುಖ ಸಂಪನ್ಮೂಲವಾಗಿ ಪರಿಗಣಿಸಿದ್ದರು.

ಪ್ರಥಮ ಬಾರಿಗೆ ಇಲ್ಲಿನ ಕಾಡನ್ನು ಸ್ಥಳೀಯರಿಂದ ಕಿತ್ತುಕೊಂಡು ೭೦೦೦ ಕಿ.ಮೀ. ದೂರದಲ್ಲಿದ್ದ ವಿಕ್ಟೋರಿಯ ರಾಣಿಯ ಅಧೀನಕ್ಕೆ ಸೇರಿದ್ದೆಂದು ಘೋಷಣೆ ಮಾಡಿದರು. ಹಡಗು ನಿರ್ಮಾಣಕ್ಕೆ, ರೈಲ್ವೆ ಸ್ಲಿಪರ್‌ಗಳಿಗೆ, ಚಾರ್‌ಕೋಲ್‌ಗೆ, ಇತರ ಮರಮುಟ್ಟು ಗಳಿಗೆ, ಜೆಲಿಂಗ್ ಫಾರೆಸ್ಟ್‌ಗಳೆಂದು ಕಾಫಿ, ಟೀ, ರಬ್ಬರ್, ಏಲಕ್ಕಿ ಎಸ್ಟೇಟ್‌ಗಳಿಗಾಗಿ, ಪ್ಲಾಂಟೇಶನ್ ಫಾರೆಸ್ಟ್ ಗಳೆಂದು ಶ್ರೀಗಂಧ ತೇಗ ಇತ್ಯಾದಿ ಮರ ಬೆಳೆಸಲು, ಅರಣ್ಯವಾಸಿಗಳ ಬದುಕಿನ ಅರಣ್ಯವನ್ನು ಮೀಸಲು ಅರಣ್ಯ, ರಕ್ಷಿತ ಅರಣ್ಯ, ಅಭಯ ಅರಣ್ಯಗಳೆಂದು ಬಿಳಿ ದೊರೆಗಳ ಶಿಕಾರಿಗಾಗಿ ಬಂದು ಒಟ್ಟಿನಲ್ಲಿ ಎಲ್ಲಾ ಅರಣ್ಯವನ್ನು ಸ್ಥಳೀಯರಿಂದ ಕಬ್ಜ ಮಾಡಿಕೊಂಡರು. ೧೯೧೪ರಿಂದ ಶುರುವಾದ ಈ ಅರಣ್ಯ ಅತಿಕ್ರಮಣ ೧೯೨೬ರವರೆಗೆ ನಡೆದು ೧೯೨೭ರಲ್ಲಿ ಅರಣ್ಯ ಕಾಯಿದೆಯನ್ನು ರೂಪಿಸಿ ಕಾಡು ಕಡಿಯಲು ಅರಣ್ಯ ಇಲಾಖೆಯನ್ನು ಸೃಷ್ಟಿಸಿಕೊಂಡರು. ಯಾವಾಗ ತಮ್ಮ ಕಾಡುಗಳು ಬ್ರಿಟಿಷರ 'ಫಾರೆಸ್ಟ್'ಗಳಾದವೊ, ಆಗ ಅರಣ್ಯ ವಾಸಿಗಳು ತಮ್ಮ ಮನೆಯಲ್ಲಿ ತಾವೇ ಪರಕೀಯರಾಗಿ ಮನೆಯ ಮಕ್ಕಳೇ ಕಳ್ಳರೆಂದು ಪರಿಗಣಿಸಲ್ಪಟ್ಟರು.

ಅರಣ್ಯದ ಲೂಟಿ ನಿರಂತರವಾಗಿ ನಡೆಯಿತು. ಸರ್ಕಾರಕ್ಕೆ ತೆರಿಗೆ ಕಟ್ಟಿದರೆ ಯಾರು ಎಷ್ಟು ಬೇಕಾದರೂ ಮರಮುಟ್ಟು ಬಳಸಬಹುದು ಎಂಬ ಧೋರಣೆಗೆ ಅರಣ್ಯ ಒಳಗಾಯಿತು.

**ಗಿರಿಜನರ ಅರಣ್ಯ ಜೋಪಾನದ ಕಥೆ**

ಸುಮಾರು ೧೯೩೦ರ ದಶಕದಲ್ಲಿ ಬ್ರಿಟಿಷರು ನಮ್ಮ ಮಲೆನಾಡಿನ ಕಾಡನ್ನು ಕಡಿದು ಅದರಲ್ಲಿ ಶ್ರೀಗಂಧ ಬೆಳೆಯಲು ಯೋಜನೆ ಹಾಕಿದರು. ಅದಕ್ಕಾಗಿ ಮೈಸೂರಿನ ಹುಣಸೂರು ಭಾಗದಿಂದ ಮೂಟೆಗಟ್ಟಲೆ ಶ್ರೀಗಂಧದ ಬೀಜಗಳನ್ನು ತಂದು ತಮ್ಮ ಗಿರಿಜನರ ಕೈಯಲ್ಲಿಟ್ಟು ಅದನ್ನು ಕಾಡಿನ ತುಂಬ ಬಿತ್ತಬೇಕು ಅಂತ ಆದೇಶ ಮಾಡಿದರು.

ನಮ್ಮ ಕಾಡಿನಲ್ಲಿ ಶ್ರೀಗಂಧ ಬೆಳೆದರೆ ಅದು ಸರ್ಕಾರಕ್ಕೆ ಸೇರುತ್ತದೆ, ಬಿತ್ತದಿದ್ದರೆ ಬಿಳಿ ದೊರೆಗಳಿಂದ ಶಿಕ್ಷೆ ಆಗುತ್ತದೆ; ಅದಕ್ಕೇನು ಮಾಡುವುದೆಂದು ಸಭೆ ಸೇರಿದ ಗಿರಿಜನರು ಶ್ರೀಗಂಧ ಬೀಜಗಳನ್ನು ಹೆಂಚಿನಲ್ಲಿ ಹುರಿದು ಅವು ಹುಟ್ಟದಂತೆ ಬಿತ್ತಿದರಂತೆ. ಇಂತಹ ಅನೇಕ ತಂತ್ರಗಳನ್ನು ಮಾಡಿ ಜೋಪಾನ ಮಾಡಿದ ಅರಣ್ಯ, ಸ್ವಾತಂತ್ರ್ಯ ಬಂದ ಮೇಲೂ ಲೂಟಿಗೆ ಗುರಿ ಯಾಯಿತು. ಅರಣ್ಯವನ್ನು ಬೃಹತ್ ಕೈಗಾರಿಕೆಗಳಲ್ಲೂ ಬಳಸುವ ಕೆ.ಪಿ.ಎಲ್., ಎಂ.ಪಿ.ಎಂ., ಬೆಂಕಿಪೊಟ್ಟಣದ ಕಾರ್ಖಾನೆ ಇತ್ಯಾದಿ ಮರಮುಟ್ಟುಗಳಿದ್ದ ಕೈಗಾರಿಕೆಗಳು ಆರಂಭಗೊಂಡು, ಇಂತಹ ಪರಿಸರ ವಿರೋಧಿ ಯೋಜನೆಗಳಿಂದ ಅರಣ್ಯನಾಶದೊಂದಿಗೆ ಗಿರಿಜನರ ಬದುಕು ನಾಶವಾಯಿತು. ಅನೇಕ ಯೋಜನೆಗಳಲ್ಲಿ ಲಕ್ಷಾಂತರ ಜನರನ್ನು ಎತ್ತಂಗಡಿ ಮಾಡಲಾಯಿತು.

ಅರಣ್ಯವಾಸಿಗಳು ಸುಮ್ಮನಿರಲಿಲ್ಲ. ನೋಡಿದರೆ ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ವಿ ಸ್ವಾತಂತ್ರ್ಯಕ್ಕಾಗಿ ಪ್ರಥಮವಾಗಿ ಹೋರಾಡಿದ ಗಿರಿಜನರು. ಬಿರ್ಸಾ ಮುಂಡನಿಂದ ಹಿಡಿದು ಹೋರಾಟಗಳು ಸ್ವಾತಂತ್ರ್ಯಪೂರ್ವದಲ್ಲಿ ನಡೆ ಹಾಗಾಗಿಯೇ ಗೊಂಡ ಬುಡಕಟ್ಟು ನಿಗ್ರಹ ಕಾ ಇಂದು ಕೂಡ ಕಾಯ್ದೆಯಾಗಿ ಜಾರಿಯಲ್ಲಿದೆ. ಬ್ರಿಟ ನಿಶ್ಶಸ್ತ್ರೀಕರಣ ಕಾಯಿದೆ ವಿರೋಧಿಸಿದ ಕರ್ನಾಟ ಹೆಮ್ಮೆಯ ಹಲಗಲಿಯ ಬೇಡರು ಸಾಂಪ್ರದಾ ಆಯುಧ ಬಿಲ್ಲನ್ನು ತೊರೆಯದೆ ತಮ್ಮ ಇಡೀ ಜನಾಂ ಬ್ರಿಟಿಷರ ಬಂದೂಕಿನಿಂದ ಹತವಾಗಿದ್ದನ್ನು ಇತಿ ದಲ್ಲಿ ನೋಡುತ್ತೇವೆ.

ಬ್ರಿಟಿಷರ ಕಾಲದಿಂದಲೂ ಪ್ರಭುತ್ವದ ವಿ ಹೋರಾಡಿದ ಪರಿಶಿಷ್ಟ ಬುಡಕಟ್ಟುಗಳ ಪಾಲಿಗೆ ಇ ಅನೇಕ ರಕ್ಷಣಾ ಕಾಯಿದೆಗಳಿದ್ದರೂ ಬ ಸುಧಾರಿಸಲಿಲ್ಲ. ಬದಲಿಗೆ ಇಂದು ಒಂದಿಲ್ಲೊ ಯೋಜನೆಯಿಂದ ಆದಿವಾಸಿಗಳು ಅತಂತ್ರರಾಗು ಇದ್ದಾರೆ. ಇಂದು ಆಧುನಿಕ ಬೃಹತ್ ಕೈಗಾರಿಕೆ ಅ ನಾಶಕ್ಕೆ ಕಾರಣವಾದರೆ ಮನುಷ್ಯರೇ ಕಾ ಶತ್ರುಗಳು. ಕಾಡು ನಾಡು ಒಂದಾಗಿರಲು ಸಾಧ್ಯ ಎಂಬ ಅಮೆರಿಕಾ ಸಂಸ್ಕೃತಿಯನ್ನು ಅರಣ್ಯವಾ ಮೇಲೆ ಜಾರಿ ಮಾಡಿ ರಾಷ್ಟ್ರೀಯ ಉದ ಹುಲಿ-ಇಲಿ ಸಂರಕ್ಷಣೆ ಹೆಸರಲ್ಲಿ ಜನರನ್ನು ಕಾಡಿ ಹೊರದಬ್ಬುವ ಯೋಜನೆಗಳು ಜಾರಿಗೆ ಬರುತ್ತವೆ

ಅಣೆಕಟ್ಟು, ಗಣಿಗಾರಿಕೆ, ರೈಲ್ವೆ ಸ್ಲೀಪರ್, ಹೀಗೆ ಸಿಕ್ಕ ಕಾರಣಕ್ಕೆಲ್ಲಾ ಅರಣ್ಯ ಲೂಟಿಯಾಯಿತು. ಇದರಿಂದ ಣ್ಯನಿವಾಸಿಗಳ ಬದುಕು ದುಸ್ತರವಾದುದನ್ನು ಯಾರೂ ನಿಸಲೇ ಇಲ್ಲ. ಪರಿಸರ ವಿರೋಧಿ ಯೋಜನೆಗಳಿ ಲಕ್ಷಾಂತರ ಜನರನ್ನು ಸ್ಥಳಾಂತರ ಮಾಡಲಾಯಿತು. ಬ್ರಿಟಿಷರ ಹಾಗೂ ಅವರ ಪ್ರೇರಣೆಯಿಂದ ರಗಳು ನಡೆಸಿದ ಅರಣ್ಯ ಲೂಟಿಯಿಂದ ಭಾರಿ ಮಾಣದಲ್ಲಿ ಕಾಡು ನಾಶವಾಯಿತು. ನಮ್ಮ ದೇಶದಲ್ಲಿ ತ್ರವಲ್ಲ, ಪ್ರಪಂಚದೆಲ್ಲೆಡೆ ಇದೇ ಸ್ಥಿತಿ. ಆಗ ಎಚ್ಚೆತ್ತ ೀಶಿ 'ಪಂಡಿತ'ರಿಗೆ ಕಾಡು ಉಳಿಸುವ ಅನಿವಾರ್ಯತೆ ರ್ವಾಗತೊಡಗಿತು. ಆಗ ಅವರ ಕಣ್ಣಿಗೆ ಬಿದ್ದಿದ್ದೇ ರಳ ಪ್ರಮಾಣದಲ್ಲಿ ಮಳೆಕಾಡುಗಳನ್ನು ಹೊಂದಿರುವ ರತ ಮತ್ತು ಇದೇ ರೀತಿಯ ತೃತೀಯ ದೇಶಗಳು.

ನಂತರ 'ಅರಣ್ಯ ಉಳಿಸುವ' ಲಾಬಿ ಆರಂಭ ಯಿತು. ಭಾರತದಲ್ಲಿ ಮರ ಕಡಿಯಲು ಪರವಾನಗಿ ತುವ ಕೆಲಸ ಮಾಡಿಕೊಂಡಿದ್ದ ಅರಣ್ಯ ಇಲಾಖೆ ಕ್ಕಿದ್ದ ಹಾಗೆ 'ಅರಣ್ಯ ಉಳಿಸುವ' ಇಲಾಖೆಯಾಗಿ ರ್ಪಟ್ಟಿತ್ತು. ಅರಣ್ಯ ಕಾಯ್ದೆಗಳು ಜಾರಿಗೆ ಬಂದವು. ಟ್ರೀಯ ಉದ್ಯಾನ, ಮೀಸಲು ಅರಣ್ಯ, ಅಭಯಾರಣ್ಯ, ಕ ಉದ್ಯಾನ ಇತ್ಯಾದಿ ಹೆಸರುಗಳಲ್ಲಿ ಅರಣ್ಯವನ್ನು ರಿಂದ ಕಬ್ಜಮಾಡಿ, ಅರಣ್ಯದೊಂದಿಗೆ ಬದುಕುವ ಸರ ಪ್ರೇಮಿ ಜನರನ್ನು ಪರಿಸರ ವಿನಾಶಕರೆಂದು ದು, ಕಾಡಿನೊಂದಿಗೆ ಜನರು ಬದುಕಲು ಸಾಧ್ಯವೇ ವೆಂದು ಪಾಶ್ಚಿಮಾತ್ಯರ ವಾದವನ್ನು ಜಾರಿಗೆ ಲಾಯಿತು.

ಯಾವಾಗ ಜನರು 'ನಮ್ಮ ಹಾಡ್ಯ' ಎಂದು ಕರೆಯು ಜಾಗಗಳು ಸರ್ಕಾರಿ ಲೆಕ್ಕದ 'ಫಾರೆಸ್ಟ್'ಗಳಾದವೋ ಸಮುದಾಯಕ್ಕೆ ಅವುಗಳ ಮೇಲೆ ಜವಾಬ್ದಾರಿಯೇ ವಾಯಿತು. ನಮ್ಮ ದೇಶದಲ್ಲಿಯೇ ೪೯ ರಾಷ್ಟ್ರೀಯ ್ಯಾನ ಹಾಗೂ ೮೦ಕ್ಕೂ ಹೆಚ್ಚು ಅಭಯಾರಣ್ಯ ಾಗಿ ಲಕ್ಷಾಂತರ ಅರಣ್ಯವಾಸಿಗಳನ್ನು ಬಲಾತ್ಕಾರ ಎತ್ತಂಗಡಿ ಮಾಡಲಾಗಿದೆ. ಇದು ಅನೇಕ ಯ ಸಾಮಾಜಿಕ ಬಿಕ್ಕಟ್ಟುಗಳಿಗೆ ಕಾರಣವಾಗಿದೆ.

ಜೈವಿಕ ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ರುವ, ಅಂದರೆ ಮಳೆಕಾಡು ಪ್ರದೇಶದ, ಜೀವ ಧ್ಯತೆ ಬೇರೆಬೇರೆ ರೀತಿಯಲ್ಲಿ ಅಮೂಲ್ಯವೆಂಬುದು ವರಿಕೆಯಾಗುತ್ತಿದ್ದಂತೆಯೇ ಈ ರಾಷ್ಟ್ರೀಯ ್ಯಾನ, ಅಭಯಾರಣ್ಯಗಳ ಮೇಲಿನ ಸಾಮ್ರಾಜ್ಯ ಗಳ ಪ್ರೀತಿ ಹೆಚ್ಚುತ್ತಲೇ ಹೋಯಿತು. ಅಮೆರಿಕಾ ಇತರೆ ಸಾಮ್ರಾಜ್ಯಶಾಹಿಗಳ ಸಂಚನ್ನು ನಮ್ಮ ದಲ್ಲಿ ಜಾರಿಗೆ ತರಲು ಕೆಲ ವಿದೇಶಿ ಕೃಪಾಪೋಷಿತ ರ ಮತ್ತು ವನ್ಯಜೀವಿ ಸಂಘಟನೆಗಳು .ಜಿ.ಓ.) ಮತ್ತು ವ್ಯಕ್ತಿಗಳು ಹೊರಟರು. ಗೆ ಅಲ್ಲಿಂದ ಹಣದ ಹೊಳೆಯೇ ಹರಿದುಬಂತು. ಎನ್.ಜಿ.ಓ.ಗಳು ಮತ್ತು ವ್ಯಕ್ತಿಗಳು ಸರ್ಕಾರದ ಾಧಿಕಾರಿಗಳ ಹಾಗೂ ನ್ಯಾಯಾಂಗದ ಮೇಲೆ ವ ಬೀರಿ, ಸಾಮ್ರಾಜ್ಯಶಾಹಿಗಳ ಆಣತಿಯಂತೆ ನು ರೂಪಿಸುವಲ್ಲಿ ಯಶಸ್ವಿಯಾಗಿದ್ದಾರೆ. ೧೯೮೦ ಅರಣ್ಯ ಸಂರಕ್ಷಣಾ ಕಾಯ್ದೆ ಜಾರಿಗೆ ಬಂತು. ೬ರಲ್ಲಿ ಅರಣ್ಯ ನೀತಿ ರೂಪಿಸಲಾಯಿತು. ಒಂದು



ಹೆಕ್ಟೇರ್ ಪ್ರದೇಶದಲ್ಲಿ ೨೫ ಮರ ಅಥವಾ ಗಿಡಗಳಿದ್ದರೆ ಅದು 'ಅರಣ್ಯ' ಎಂದು ಬಾಲಿಶವಾಗಿ ವಿಶ್ಲೇಷಿಸಲಾಯಿತು. ೧೯೯೫ರಲ್ಲಿ ಗೋವರ್ಧಮಮ್ ತಿರುಮಲಪಾದ್ ಎಂಬುವವರು ಅರಣ್ಯ ರಕ್ಷಣೆಗೆ ಸುಪ್ರೀಂ ಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿಯ ಅರ್ಜಿಯೊಂದನ್ನು ದಾಖಲಿಸಿದ್ದರು (೧೯೯೫-ನಂ. ೨೦೨). ಈ ಅರ್ಜಿಯ ವಿಚಾರಣೆ ನಡೆಸಿದ ನ್ಯಾಯಾಲಯ ಅರಣ್ಯ ಪ್ರದೇಶ, ಒತ್ತುವರಿ, ಪರಿಗಣಿತ ಅರಣ್ಯ ಇತ್ಯಾದಿ ಶಬ್ದಗಳಿಗೆ ಹೊಸ ವ್ಯಾಖ್ಯಾನ ಬರೆದು, ಅರಣ್ಯದಲ್ಲಿ 'ಅರಣ್ಯೇತರ ಚಟುವಟಿಕೆ' ನಿಷೇಧಿಸಿತು, ಜನರನ್ನು ಸಂಪೂರ್ಣವಾಗಿ ಅರಣ್ಯದಿಂದ ಹೊರಹಾಕುವಂತೆ ಸೂಚಿಸಿತು.

೧೯೭೮ರ ಸೆಪ್ಟೆಂಬರ್ ೨೫ಕ್ಕಿಂತಲೂ ಮೊದಲಿನಿಂದ ವಾಸವಾಗಿರುವುದಕ್ಕೆ ಅಧಿಕೃತ ದಾಖಲೆ ಹೊಂದಿರದವರು ವಾಸವಾಗಿರುವುದು ಅತಿಕ್ರಮಣ ಎನ್ನಲಾಯಿತು. ಹೀಗೆ ದಾಖಲೆ ಇಲ್ಲದ ಕಟ್ಟಡ, ತೋಟ ಏನೇ ಇದ್ದರೂ ಎಲ್ಲವನ್ನೂ ತೆರವುಗೊಳಿಸುವಂತೆ ಸೂಚಿಸಲಾಯಿತು. ಈ ಆದೇಶ ರಾಜ್ಯದ ಮಲೆನಾಡಿಗರ ಮೇಲೆ ಮಾತ್ರವಲ್ಲ, ದೇಶದ ಅರಣ್ಯನಿವಾಸಿಗಳ ಮೇಲೆ ಬರಸಿಡಿಲಿನಂತೆ ಬಂದೆರಗಿತು.

ಕರ್ನಾಟಕದಲ್ಲಿ ೧,೧೨,೫೫೪ ಕುಟುಂಬಗಳು ಸರಿಯಾದ ದಾಖಲೆ ಹೊಂದದೆ ೯,೦೧,೨೪೫ ಹೆಕ್ಟೇರ್ ಅರಣ್ಯ ಪ್ರದೇಶದಲ್ಲಿ ಬದುಕುತ್ತಿವೆ ಎಂದು ಸರ್ಕಾರ ನ್ಯಾಯಾಲಯಕ್ಕೆ ಹೇಳಿಕೆ ನೀಡಿದೆ. ಅಂದರೆ ಇವರೆಲ್ಲ ಅತಿಕ್ರಮಣ ಮಾಡಿದ್ದಾರೆ ಎಂದು ಸರ್ಕಾರ ಪರೋಕ್ಷವಾಗಿ ಹೇಳಿತು. ಇದು ಸರ್ಕಾರದ ಹಳೆಯ ಸಮೀಕ್ಷೆ ಪ್ರಕಾರ ಸಲ್ಲಿಸಲಾದ ವರದಿ. ಈ ರೀತಿ ಅರಣ್ಯ ಭೂಮಿಯನ್ನು 'ಅತಿಕ್ರಮಣ' ಮಾಡಿದವರ ಸಂಖ್ಯೆ ಈಗ ಬಹಳ ಹೆಚ್ಚಿರಬಹುದು. ಇವರನ್ನು ತೆರವುಗೊಳಿಸುವುದಾಗಿ ನ್ಯಾಯಾಲಯಕ್ಕೆ ಸರ್ಕಾರಿ ಅಧಿಕಾರಿಗಳು ಮುಚ್ಚಳಿಕೆಯನ್ನೂ ಬರೆದುಕೊಟ್ಟಿದ್ದಾರೆ. ಹೀಗಾಗಿಯೇ ಚಿಕ್ಕಮಗಳೂರು ಜಿಲ್ಲೆಯ ತತ್ಕೊಳ, ಸಾರಗೋಡು ವಿನಲ್ಲಿ ಬಲಾತ್ಕಾರವಾಗಿ ಜನರನ್ನು ಒಕ್ಕಲೆಬ್ಬಿಸಲಾಯಿತು. ಅವರು ಕಟ್ಟಿಕೊಂಡಿದ್ದ ಮನೆ, ಬೆಳೆದ ಬೆಳೆಗಳನ್ನು ಅವರ ಕಣ್ಣೆದುರೇ ನಾಶ ಮಾಡಿ, ಅವರ ಬದುಕನ್ನು ನಾಶ ಮಾಡಲಾಯಿತು.

ಅರಣ್ಯ ಅತಿಕ್ರಮಣ ಮಾಡಿದವರ ವಿರುದ್ಧ ಕ್ರಮ ತೆಗೆದುಕೊಳ್ಳುವಂತೆ ನ್ಯಾಯಾಲಯ ಅರಣ್ಯ ಇಲಾಖೆಗೆ ಆದೇಶಿಸಿದೆ. ವರದಿಯನ್ನು ತನಗೆ ಸಲ್ಲಿಸುವಂತೆ ಸೂಚಿಸಿದೆ. ತಪ್ಪಿದಲ್ಲಿ ಹೆಕ್ಟೇರ್ ಒಂದಕ್ಕೆ ಸ್ಥಳೀಯ ಅರಣ್ಯಪಾಲಕ ನೂರು ರೂ. ದಂಡವನ್ನು ತನ್ನ ಸ್ವಂತ ಹಣದಲ್ಲಿ ಕಟ್ಟಬೇಕು. ಅಲ್ಲದೆ ರಾಜ್ಯ ಸರ್ಕಾರ ಈ ತಪ್ಪಿಗೆ ಒಂದು ಹೆಕ್ಟೇರ್‌ಗೆ ಒಂದು ಸಾವಿರ ರೂ. ದಂಡ ಕಟ್ಟಬೇಕಾಗುತ್ತದೆ. ಹೆಚ್ಚು ಕಡಿಮೆ ಕರ್ನಾಟಕ ಸರ್ಕಾರ ನೂರು ಕೋಟಿ ರೂ. ದಂಡ ಕಟ್ಟಬೇಕಾದ ಸ್ಥಿತಿಯಲ್ಲಿದೆ. ಈ ವ್ಯವಹಾರವನ್ನೆಲ್ಲಾ ನೋಡಿಕೊಳ್ಳಲು ವಿದೇಶಿ ಹಣ ಪಡೆದು ಕೆಲಸ ಮಾಡುವ ವಾಲ್ಮೀಕಿ ಥಾಪರ್, ಮಹೇಂದ್ರ ವ್ಯಾಸ್ ಮತ್ತಿತರರನ್ನು ಒಳಗೊಂಡ 'ಉನ್ನತಾಧಿಕಾರ' ಹೊಂದಿದ 'ಸಮಿತಿ'ಯೊಂದನ್ನು ನ್ಯಾಯಾಲಯವೇ ರಚಿಸಿದೆ.

ನ್ಯಾಯಾಲಯದ ಆದೇಶವನ್ನು ಜಾರಿಗೆ ತಂದಲ್ಲಿ ಪೂರ್ವ ಮತ್ತು ಪಶ್ಚಿಮ ಘಟ್ಟ ಪ್ರದೇಶದಲ್ಲಿ ಜನತೆಯೇ ವಾಸ ಮಾಡುವಂತಿಲ್ಲ. ರಾಜ್ಯದಲ್ಲಿಯೇ ಅತಿ ಚಿಕ್ಕ ತಾಲ್ಲೂಕುಗಳಲ್ಲಿ ಒಂದಾದ ಶೃಂಗೇರಿ ತಾಲ್ಲೂಕಿನ ಉದಾಹರಣೆ ತೆಗೆದುಕೊಳ್ಳೋಣ. ಈ ತಾಲ್ಲೂಕಿನ ಒಟ್ಟು ವಿಸ್ತೀರ್ಣ ೧,೦೯,೧೨೪ ಎಕರೆ. ಇದರಲ್ಲಿ ೫೨,೭೯ ಎಕರೆ ಪ್ರದೇಶವನ್ನು ರಾಷ್ಟ್ರೀಯ ಉದ್ಯಾನ ಎಂದು ಘೋಷಿಸಲಾಗಿದೆ. ತಾಲ್ಲೂಕಿನಲ್ಲಿ ೩೫ ಸಾವಿರಕ್ಕಿಂತ ಹೆಚ್ಚು ಜನರಿದ್ದು, ಅವರೆಲ್ಲ ಕೊನೆಗುಳಿದ ೨೮,೭೪೬ ಎಕರೆ ಪ್ರದೇಶದಲ್ಲಿಯೇ ಇರಬೇಕಾಗುತ್ತದೆ. ಇಷ್ಟೇ ಜಾಗದಲ್ಲಿ ಜಮೀನು, ಮನೆ, ಸರ್ಕಾರಿ ಕಟ್ಟಡ, ಶಾಲೆ, ರಸ್ತೆಗಳು ನಿರ್ಮಾಣವಾಗಬೇಕು. ಇದು ಸಾಧ್ಯವಾಗುತ್ತದೆಯೆ ?

ಈ ಆದೇಶ ಬಂದ ಮೇಲೆ ಅರಣ್ಯ ಇಲಾಖೆಗೆ ಹೊಸ ಅಸ್ತ್ರ ಸಿಕ್ಕಂತಾಗಿದೆ. ಒಂದು ಹೆಕ್ಟೇರ್ ಅರಣ್ಯದ ಮೌಲ್ಯ ೧೨,೬೭೪ ಲಕ್ಷ ರೂ.ಗಳಾಗಿದ್ದು, ಇದನ್ನು ಆಧಾರವಾಗಿಟ್ಟುಕೊಂಡು ಅರಣ್ಯ ಪ್ರದೇಶದಲ್ಲಿ

ದಾಖಲೆ ಇಲ್ಲದೆ ಕೃಷಿ ಮಾಡುತ್ತಿರುವವರಿಗೆ ಭಾರಿ ದಂಡ ವಿಧಿಸಲಾಗುತ್ತಿತ್ತು.

ಉದಾಹರಣೆಗೆ ಹೇಳಬೇಕಾದರೆ, ೦.೯೭ ಎಕರೆ ಜಮೀನು ಹೊಂದಿದ್ದ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಸಂಸ್ಥೆಯ ಗಿರಿಜನ ಅಣ್ಣು ಬಿನ್ ದೊಂಬಯ್ಯಗೆ ಒಟ್ಟು ೬,೧೫,೩೧೭ ರೂ.ದಂಡ ವಿಧಿಸಲಾಗಿದೆ. ಇದೇ ಊರಿನ ೯ ಎಕರೆ - ೩೭ ಗುಂಟೆ ಜಮೀನು ಹೊಂದಿದ ಇನ್ನೋರ್ವ ರೈತ ಗುರುವ ಬಿನ್ ದೊಂಬಯ್ಯಗೆ ೪೬ ಲಕ್ಷ ದಂಡ ವಿಧಿಸಲಾಗಿದೆ. ಈ ರೀತಿ ಭಾರಿ ದಂಡ ಹಾಕಿ ಅರಣ್ಯವಾಸಿಗಳನ್ನು ಒಕ್ಕಲೆಬ್ಬಿಸಲು ಹೊರಟರೆ ಅವರು ಸುಮ್ಮನಿರುತ್ತಾರೆಯೆ ?

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಆರಂಭಿಸಿದವರು ಅರಣ್ಯ ನಿವಾಸಿಗಳು. ಪ್ರಭುತ್ವದ ಎಲ್ಲ ದೌರ್ಜನ್ಯಗಳನ್ನು ತೀರಾ ಅಗತ್ಯವೆನಿಸಿದಾಗ ಪ್ರಶ್ನಿಸಿಕೊಂಡೇ ಬಂದಿದ್ದಾರೆ. ಮಲೆನಾಡು ಭಾಗದ ಅರಣ್ಯನಿವಾಸಿಗಳ ಈ ರೀತಿಯ ಹೋರಾಟದ ಇತಿಹಾಸವೇ ಇದೆ. ದೇಶಾದ್ಯಂತ ಈ ರೀತಿಯಲ್ಲ ಅರಣ್ಯನಿವಾಸಿಗಳ ಮೇಲೆ ದೌರ್ಜನ್ಯ ನಡೆಯುತ್ತಿರುವುದರಿಂದಲೇ ಅಲ್ಲಲ್ಲಿ ಹೋರಾಟ ಉಗ್ರರೂಪ ಪಡೆದಿದೆ. ೧೩ ರಾಜ್ಯಗಳಲ್ಲಿ ಮಾವೋವಾದಿಗಳು ಆದಿವಾಸಿಗಳ ಹೋರಾಟಕ್ಕೆ ಕೈ ಜೋಡಿಸಿದ್ದಾರೆ.

ಈಗ ಸರ್ಕಾರ ಇದ್ದಕ್ಕಿದ್ದ ಹಾಗೆ ತನ್ನ ನಿಲುವು ಬದಲಾವಣೆ ಮಾಡಿಕೊಂಡು, ಅರಣ್ಯನಿವಾಸಿಗಳಿಗೆ ಅರಣ್ಯದಲ್ಲಿಯೇ ಬದುಕಲು ಅವಕಾಶ ನೀಡಹೊರಟಿರುವುದು ಆಶ್ಚರ್ಯಕರ ಬೆಳವಣಿಗೆ ಎನಿಸಿದರೂ, ಇದು ಅರಣ್ಯವಾಸಿಗಳು ಸತತವಾಗಿ ಹೋರಾಟ ನಡೆಸಿಕೊಂಡು ಬಂದಿರುವುದರ ಫಲ ಎಂದು ಇಲ್ಲಿ ಬಿಡಿಸಿ ಹೇಳಬೇಕಾಗಿಲ್ಲ.

**ಕಾಯ್ದೆಯಲ್ಲಿ ಏನಿದೆ ?**

೨೦೦೬ರ ಪರಿಶಿಷ್ಟ ಬುಡಕಟ್ಟು ಮತ್ತು ಇನ್ನಿತರ ಪರಂಪರಾಗತ ಅರಣ್ಯನಿವಾಸಿಗಳ (ಅರಣ್ಯ ಹಕ್ಕುಗಳ ಮಾನ್ಯತೆ) ಕಾಯ್ದೆಯಲ್ಲಿ ೨೦೦೫ರ ಡಿಸೆಂಬರ್ ೧೩ಕ್ಕಿಂತ ಮುಂಚಿತವಾಗಿ ಅರಣ್ಯದೊಳಗೆ ಬದುಕುತ್ತಿರುವ ಗಿರಿಜನರಿಗೆ ಮತ್ತು ಮೂರು ತಲೆಮಾರಿನಿಂದ ಬದುಕುತ್ತಿರುವ ಸಾಂಪ್ರದಾಯಿಕ ಅರಣ್ಯವಾಸಿಗಳಿಗೆ ಅಲ್ಲಿಯೇ ಬದುಕಲು ಅವಕಾಶ ಕಲ್ಪಿಸಬೇಕು ಎಂದಿದೆ. ಜೊತೆಗೆ ಅವರ ನಾಲ್ಕು ಹೆಕ್ಟೇರಿನಷ್ಟು (ಹತ್ತು ಎಕರೆ) ಜಮೀನನ್ನು ಅಧಿಕೃತಗೊಳಿಸಬಹುದು. ಪರಿಗಣಿತ ಅರಣ್ಯಗಳಾದ ರಾಷ್ಟ್ರೀಯ ಉದ್ಯಾನ, ಅಭಯಾರಣ್ಯ, ರಕ್ಷಿತಾರಣ್ಯ ಮತ್ತು ಎಲ್ಲ ರೀತಿಯ ಅರಣ್ಯಗಳಲ್ಲಿ ಈ ಜನ ವಾಸಿಸಬಹುದು.

ಅರಣ್ಯದಲ್ಲಿ ಬದುಕುವ ಜನರ ಮೂಲಭೂತ ಅವಶ್ಯಕತೆಯಾದ ರಸ್ತೆ, ನೀರು, ಶಾಲೆ, ಕಿರು ನೀರಾವರಿ, ನ್ಯಾಯಬೆಲೆ ಅಂಗಡಿ, ಮಳೆ ನೀರು ಕೊಯ್ಲು, ಚಾನ್
ವಿದ್ಯುತ್, ಆಸ್ಪತ್ರೆ ಇತ್ಯಾದಿಗಳಿಗೆ, ಅಂದರೆ ಸಾರ್ವಜನಿಕ ಉದ್ದೇಶಗಳಿಗೆ, ಎರಡೂ
ಹೆಕ್ಟೇರ್ ಅರಣ್ಯವನ್ನು ಬಳಸಬಹುದು. ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರ
ಬಹುದು. ಆದರೆ, ಅರಣ್ಯನಾಶ, ಹೆಂಡ ಇಳಿಸುವುದು, ಬೇಟೆಯಾಡುವುದು ಮಾ
ವಂತಿಲ್ಲ. ಪರಿಸರದೊಂದಿಗೆ ಸಹಬಾಳ್ವೆ ನಡೆಸಲು ಎಲ್ಲಾ ಹಕ್ಕುಗಳನ್ನು ನೀಡಲಾಗಿ

ಈ ಎಲ್ಲಾ ಹಕ್ಕುಗಳ ಉಸ್ತುವಾರಿ ಜವಾಬ್ದಾರಿಯನ್ನು ಗ್ರಾಮ ಸಮಿತಿ
ಸ್ವಾಯತ್ತತೆಗೆ ನೀಡಲಾಗಿದೆ. ಅಲ್ಲದೆ ತಾಲ್ಲೂಕು, ಜಿಲ್ಲೆ ಮತ್ತು ರಾಜ್ಯಮ
ಸಮಿತಿಗಳಿರುತ್ತವೆ. ಈ ಸಮಿತಿಗಳಲ್ಲಿ ಅರಣ್ಯ ಇಲಾಖೆ, ಕಂದಾಯ ಇಲಾಖೆ, ಗಿರಿ
ಅಭಿವೃದ್ಧಿ ಇಲಾಖೆಯ ಅಧಿಕಾರಿಗಳು, ಜನಪ್ರತಿನಿಧಿಗಳು ಇರುತ್ತಾರೆ.

**ಬಲಗೈಯಲ್ಲಿ ಕೊಟ್ಟು, ಎಡಗೈಯಲ್ಲಿ...**

ಈ ಹಿಂದೆ ಹೇಳಿದಂತೆ ಮೇಲ್ನೋಟಕ್ಕೆ ಈ ಕಾಯ್ದೆ ಜನಪರವಾಗಿದೆ, ಪರಿ
ಪೂರಕವಾಗಿದೆ. ಅರಣ್ಯಗಳಲ್ಲಿ ಜೀವಸಂಕುಲಕ್ಕೆ ಸೇರಿದ ಮನುಷ್ಯ ಜ
ಇರಲೇಬಾರದು ಎಂದು ವಾದಿಸುವ ವಿದೇಶಿ ಪ್ರಣೀತ ಪರಿಸರವಾದಿಗಳ ವಾದ
ಈ ಕಾಯ್ದೆ ಧಿಕ್ಕರಿಸಿದೆಯಾದರೂ ಕೊನೆಗೆ ತನ್ನ ಜುಟ್ಟನ್ನು ಅವರ ಕೈಗೆ ನೀಡಿ
ವಿನಾಶದ ಅಂಚಿನಲ್ಲಿರುವ ಅಪರೂಪದ ಜೀವಿಗಳ ಸಂರಕ್ಷಣೆಗೆ ಸರಿಪಡಿಸಲಾ
ಅನಾಹುತವಾಗುವ ಸಂದರ್ಭದಲ್ಲಿ ಗಿರಿಜನರನ್ನು ಪುನರ್‌ವಸತಿಗೊ
ಬಹುದು ಮತ್ತು ವನ್ಯಜೀವಿಗಳ ಸಂರಕ್ಷಣೆಯ ದೃಷ್ಟಿಯಿಂದ ಈ ಕಾಯ್ದೆ
ಪುನರ್ ವ್ಯಾಖ್ಯಾನಗೊಳಿಸಬಹುದು ಹಾಗೂ ಪುನರ್ ರಚಿಸಬಹುದು ಎ
ಕಾಯಿದೆಯಲ್ಲಿ ಹೇಳಲಾಗಿದೆ.

ಇದನ್ನು ಬಳಸಿಕೊಂಡು ವಿದೇಶಿ ಪರಿಸರವಾದಿಗಳು ಗಿರಿಜನರ ಮೇಲೆ ಗು
ಕೂರಿಸಿ ಅವರನ್ನು ಒಕ್ಕಲೆಬ್ಬಿಸುವ ತಂತ್ರ ರೂಪಿಸದೇ ಇರುತ್ತಾರೆಯೆ ? ಕುದುರೆಮು
ಪರ್ವತ ಶ್ರೇಣಿಗಳಲ್ಲಿ 'ಸಿಂಗಳಿಕ' ಎಂಬ ಒಂದು ಜಾತಿಯ ಮಂಗಗಳಿದ್ದ
ಅವುಗಳನ್ನು ಗಿರಿಜನರು ಎಂದೂ ತಿಂದವರಲ್ಲ. ಆದರೆ ಈ ಮಂಗ ಅಪರೂ
ಜಾತಿಯವು. ಅವುಗಳು ವಿನಾಶದಂಚಿಗೆ ಬಂದಿವೆ. ಆದ್ದರಿಂದ ಕುದುರೆಮು
ರಾಷ್ಟ್ರೀಯ ಉದ್ಯಾನವಾಗಲೇಬೇಕು ಎಂದು ವಿದೇಶಿ ದುಡ್ಡು ತಿನ್ನುವ ಪರಿ
ವಾದಿಗಳು ವಾದಿಸುತ್ತಿದ್ದಾರೆ. ಈ ಜಾತಿಯ ಮಂಗಗಳನ್ನು ಬೇಟೆಯಾಡುವ, ತಿನ್ನ
ಸಂಪ್ರದಾಯವೇ ಈ ಭಾಗದ ಗಿರಿಜನರಲ್ಲಿ ಇಲ್ಲ ಎಂಬ ಸಾಮಾನ್ಯ ಜ್ಞಾನವೂ ಅವರಿ









ಸಾಹಿತ್ಯ ಸಂಪದ ಮಾಲೆಯಲ್ಲಿ ನವಕರ್ನಾಟಕ ಪ್ರಕಟಿಸುತ್ತ ಬಂದಿರುವ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರ ಬದುಕು-ಬರೆಹ ಕುರಿತ ಎಂಟು ಕೃತಿಗಳ ಲೋಕಾರ್ಪಣೆ ಕಾರ್ಯಕ್ರಮ ದಿನಾಂಕ ೧೩-೧೨-೨೦೦೯ರಂದು ಬೆಂಗಳೂರಿನಲ್ಲಿ ನಡೆಯಿತು. ಡಾ॥ ಚಿರಂಜೀವ್ ಸಿಂಗ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು ಮತ್ತು ಪುಸ್ತಕಗಳನ್ನು ಅನಾವರಣಗೊಳಿಸಿದರು. ಮಾಲೆಯ ಸಂಪಾದಕರಾದ ಡಾ॥ ಪ್ರಧಾನ್ ಗುರುದತ್ತ, ಪ್ರಶಸ್ತಿ ಪುರಸ್ಕೃತರಾದ ಪ್ರೊ॥ ಜಿ. ಎಸ್. ಆಮೂರ, ಪುರಸ್ಕೃತರ ಪ್ರತಿನಿಧಿಗಳಾಗಿ ಶ್ರೀಮತಿ ಶಶಿ ದೇಶಪಾಂಡೆ, ಶ್ರೀಮತಿ ಗಿರಿಜಾ ನಾಗರಾಜ ಮತ್ತು ಶ್ರೀ ವಸಂತ ಮೊಕಾಶಿ ಪುಣೇಕರ ಅಲ್ಲದೆ, ಕೃತಿಗಳ ಲೇಖಕರಾದ ಡಾ॥ ಗುರುಲಿಂಗ ಕಾಪಸೆ, ಡಾ॥ ನಾ. ದಾಮೋದರ ಶೆಟ್ಟಿ, ಡಾ॥ ಎನ್. ಗಾಯತ್ರಿ, ಡಾ॥ ಬಿ. ಎನ್
ಸುಮಿತ್ರಾಬಾಯಿ, ಶ್ರೀ ಬಾಲಸುಬ್ರಹ್ಮಣ್ಯ ಕಂಜರ್ಪಣೆ ಮತ್ತು ಡಾ॥ ವಿ. ಚಂದ್ರಶೇಖರ ನಂಗಲಿ ಹಾಗೂ ಸಾಹಿತ್ಯಾಸಕ್ತರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು

ಲ್ಲಾ ಅವರಿಗೆ ಬೇಕಾಗಿಯೂ ಇಲ್ಲ. ಅವರಿಗೆ ಬೇಕಾಗಿರುವುದು ಅರಣ್ಯ ಉಳಿಸುವ ದಲ್ಲಿ ಕೋಟ್ಯಂತರ ರೂ. ವಿದೇಶದಿಂದ ನೆರವು ಪಡೆಯುವುದು, ಅಷ್ಟೆ.

ಈಗ 'ಟೈಗರ್ ಪ್ರಾಜೆಕ್ಟ್'ಅನ್ನು ಈ ಭಾಗದಲ್ಲಿ ಜಾರಿಗೆ ತರುವ ಯತ್ನ ನಡೆದಿದೆ. ೂಂದು ವಿದೇಶಿ ಹಣ ತಿನ್ನುವ ಸಂಸ್ಥೆಗಳ ಮೋಸದ ಜಾಲ. ಹುಲಿಗಳು ಎಲ್ಲಿ ುಕುತ್ತವೆ ? ಹೇಗೆ ಬದುಕುತ್ತವೆ ? ಇದರ ಸರಿಯಾದ ಜ್ಞಾನ ಇಲ್ಲದ ಮಂದಿ ಳವಾಗಿ ಹುಲಿಗಳಿರುವ ಕುದುರೆಮುಖ ಪರ್ವತ ಶ್ರೇಣಿಗಳಲ್ಲಿ ಹುಲಿಗಳನ್ನು ಪ್ರಾಣಿ ಗ್ರಹಾಲಯದಲ್ಲಿ ಸಾಕಿದಂತೆ ಸಾಕ ಹೊರಟಿದ್ದಾರೆ. ಅದಕ್ಕಾಗಿ ಕಾಡಿನ ಮಧ್ಯದಲ್ಲಿ ು ಕಾಯುತ್ತಾ ಬದುಕುತ್ತಿರುವ ನಮ್ಮ ಗಿರಿಜನರನ್ನು ಊರು ಸೇರಿಸಿ, ಅವರ ುಕು ನಾಶ ಮಾಡಹೊರಟಿದ್ದಾರೆ. ಅರಣ್ಯ ಇಲಾಖೆ ಸಮೀಕ್ಷೆಯಂತೆ ುರೆಮುಖ ರಾಷ್ಟ್ರೀಯ ಉದ್ಯಾನದಲ್ಲಿ ಇರುವುದು ನಾಲ್ಕೇ ಹುಲಿ! ಕುದುರೆಮುಖ ರ್ವತ ಶ್ರೇಣಿಗಳಲ್ಲಿರುವ ಗಿರಿಜನರನ್ನು ಈ ಹುಲಿ ಸಾಕುವವರು ಬದುಕಲು ್ಟರೆಯೆ ? ಅವರಿಗೆ ಈ ಕಾಯ್ದೆಯಿಂದ ಯಾವ ಪ್ರಯೋಜನವೂ ಆಗುವಂತೆ ುತ್ತಿಲ್ಲ. ಅವರ ಸಮಸ್ಯೆಗಳಿಗೆ ಈ ಕಾಯ್ದೆ ನಿರುತ್ತರವಾಗಿದೆ. ಈ ಭಾಗದಲ್ಲಿರುವ ೆ ಅಪರೂಪದ್ದೆ? ಅದಕ್ಕೆ ಜನರಿಂದ ಯಾವ ರೀತಿಯಲ್ಲಿ ತೊಂದರೆಯಾಗಿದೆ ? ನ್ನು ಉಳಿಸಲು ಏನು ಮಾಡಬೇಕು ? ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳುವವರು ರು ಎಂಬುದನ್ನು ಕಾಯ್ದೆ ಸ್ಪಷ್ಟಪಡಿಸಿಲ್ಲ. ಈ ನಿರ್ಧಾರ ತೆಗೆದುಕೊಳ್ಳುವ ಹಕ್ಕನ್ನು ು ಸಮಿತಿಗೆ ನೀಡಬೇಕಿತ್ತು. ಆದರೆ ಈ ಬಗ್ಗೆ ಉಲ್ಲೇಖವಿಲ್ಲದೆ, ಅರಣ್ಯ ಇಲಾಖೆಗೆ ಸ ಅಧಿಕಾರ ದೊರೆತಂತಾಗಿದೆ. ವನ್ಯಜೀವಿ ಸಂರಕ್ಷಣಾ ಕಾಯ್ದೆಯನ್ನು ಂದಿಟ್ಟುಕೊಂಡು ಕಿರುಕುಳ ನೀಡಲು ಅವಕಾಶವಿದೆ.

ಅರಣ್ಯ ಪ್ರದೇಶದಲ್ಲಿ ಬದುಕುವ ಗಿರಿಜನರು ಮತ್ತು ಸಾಂಪ್ರದಾಯಿಕ ್ಯನಿವಾಸಿಗಳು ಸಾಮಾನು ಉತ್ಪನ್ನಗಳನ್ನು ಸೈಕಲ್, ಕೈಗಾಡಿ ಮತ್ತು ತಲೆಹೊರೆಯ ಲಕ ಮಾತ್ರ ಸಾಗಿಸಬೇಕೆಂದು ಈ ಕಾಯ್ದೆ ನಿರ್ಬಂಧ ಹೇರಿದೆ. ಅರಣ್ಯ ಖೆಯ ಜೀಪು, ನಕ್ಸಲರ ಬೇಟೆಗೆ ಬರುವ ಪೊಲೀಸರ ವಾಹನಗಳು ಡಬಹುದು. ಗಿರಿಜನರು ಮಾತ್ರ ಮನುಷ್ಯ ಶ್ರಮದಿಂದಲೇ ಸಾಮಾನುಗಳನ್ನು ಸಬೇಕೆಂದರೆ ಯಾವ ನ್ಯಾಯ? ಸೂಕ್ಷ್ಮ ಪ್ರದೇಶದಲ್ಲಿ 'ಇಕೋ ಟೂರಿಸಂ' ನಲ್ಲಿ ಪ್ರವಾಸಿಗರ, ಅದರಲ್ಲೂ ವಿದೇಶಿ ಪ್ರವಾಸಿಗರ, ಮೋಜಿಗೆ ಅವಕಾಶ ಿಕೊಡಲಾಗುತ್ತಿದೆ. ಸಂಶೋಧನೆಯ ಹೆಸರಿನಲ್ಲಿ ಜೀವ ಸಂಪನ್ಮೂಲದ ಲೂಟಿ ತುವವರಿಗೆ ಅರಣ್ಯದಲ್ಲಿಯೇ ಎಲ್ಲಾ ರೀತಿಯ ಸೌಕರ್ಯ ಒದಗಿಸಲಾಗುತ್ತಿದೆ. ೆ ಕಾಡನ್ನು ನಂಬಿಯೇ ಬದುಕುತ್ತಿರುವವರು ಸಾಗಾಣಿಕೆಗೆ ವಾಹನ ಬಳಸಿದರೆ ನಾಶವಾಗುವುದೂ ಇಲ್ಲ, ವನ್ಯಜೀವಿಗಳು ಅಳಿಯುವುದೂ ಇಲ್ಲ ಎಂಬುದು ಯ್ದೆ ರೂಪಿಸಿದವರ ತಲೆಗೆ ಹೋದಂತಿಲ್ಲ.

ನ್ನು ಈ ಕಾಯ್ದೆಯಲ್ಲಿರುವ ಮತ್ತೊಂದು ದೊಡ್ಡ ದೋಷವೆಂದರೆ, ಗಿರಿಜನರು, ರೈತರು ಮೂರು ತಲೆಮಾರುಗಳಿಂದ ಅರಣ್ಯ ಪ್ರದೇಶದಲ್ಲಿ ಬದುಕುತ್ತಿದ್ದರೆ ್ತ ಅವರಿಗೆ ಭೂಮಿ ಅನುಭವಿಸುವ ಹಕ್ಕಿದೆ ಎಂದು ಸ್ಪಷ್ಟವಾಗಿ ಹೇಳಿರುವುದು. ೆ ಜನ ಅರಣ್ಯ ಪ್ರದೇಶದಲ್ಲಿಯೇ ಬದುಕುತ್ತಿದ್ದಾರೆಯಾದರೂ ಒಂದೇ ದಲ್ಲಿ ಬದುಕುತ್ತಿಲ್ಲ. ಉದಾಹರಣೆಗೆ, ಮಹಾಯುದ್ಧದ ಸಂದರ್ಭದಲ್ಲಿ, ದೊಡ್ಡ ್ಡ ಅಣೆಕಟ್ಟುಗಳು ನಿರ್ಮಾಣವಾದಾಗ ಜನತೆ ವಲಸೆ ಹೋಗಿ ಅರಣ್ಯ ಶಗಳಲ್ಲಿಯೇ ನೆಲೆ ನಿಂತಿದ್ದಾರೆ. ಆದರೆ ಅವರಿಗೆ ಈ ಕಾಯ್ದೆಯಡಿ ಜಮೀನು ೂರಾಗಿರುವುದಿಲ್ಲ.

ುದಾಹರಣೆಗೆ, ಲಿಂಗನಮಕ್ಕಿ ಅಣೆಕಟ್ಟು ನಿರ್ಮಾಣವಾದಾಗ ನಿರಾಶ್ರಿತ ವರಿಗೆ ಶಿವಮೊಗ್ಗ ಸಮೀಪದ ಶೆಟ್ಟಿಹಳ್ಳಿ ಅಭಯಾರಣ್ಯಕ್ಕೆ ಸೇರಿದ ಜಾಗದಲ್ಲಿ ನು ನೀಡಲಾಗಿತ್ತು. ಅವರಲ್ಲಿ ಹೆಚ್ಚಿನವರಿಗೆ ಸರಿಯಾದ ದಾಖಲೆ ನೀಡಲಾಗಿಲ್ಲ. ಲ್ಲ ಈಗ ಅರಣ್ಯನಿವಾಸಿಗಳೇ ಆಗಿದ್ದರೂ ಈ ಕಾಯ್ದೆ ಹೇಳುವಂತೆ ಅವರು ರು ತಲೆಮಾರುಗಳಿಂದ ಅಲ್ಲಿ ಬದುಕಿಲ್ಲ. ಹೀಗಾಗಿ ಅವರೀಗ ಅತಂತ್ರರಾಗ ಗುತ್ತದೆ. ಈ ರೀತಿ 'ಕಟ್ ಆಫ್' ಡೇಟ್ ನೀಡಿರುವುದು ಸರಿಯಾದ ಕ್ರಮವಲ್ಲ. ಕ್ಕಿಂತ ಮುಖ್ಯ ವಿಷಯವೇನೆಂದರೆ, ಈ ಪ್ರದೇಶದಲ್ಲಿ ನೀಡುವ ಜಮೀನು ೂರಾತಿಯಲ್ಲ. ಗಿರಿಜನರು ಮತ್ತು ಅರಣ್ಯವಾಸಿಗಳಿಗೆ ನಾಲ್ಕು ಹೆಕ್ಟೇರಿನಷ್ಟು, ರೆ ೧೦ ಎಕರೆ ಭೂಮಿ ಹೊಂದಲು ಅವಕಾಶವಿದೆ. ಅದು ಪರಂಪರಾಗತ ಹಕ್ಕು ಒಡೆತನ ಅಲ್ಲ. ಸದರಿ ಜಮೀನನ್ನು ಮಾರುವುದಾಗಲೀ, ಅಭಿವೃದ್ಧಿಪಡಿಸಲು ಕ ವಗೈರೆಗಳಲ್ಲಿ ಸಾಲ ಮಾಡುವುದಾಗಲೀ ಸಾಧ್ಯವಿಲ್ಲ. ಇದರಿಂದ



ಜಮೀನು-ಮನೆಯನ್ನು ಸುಧಾರಿಸುವುದು ಅಥವಾ ಅಭಿವೃದ್ಧಿಪಡಿಸುವುದು ಸಾಧ್ಯವಿಲ್ಲ. ಇದೊಂದು ದೊಡ್ಡ ದ್ರೋಹ.

ಇನ್ನು ಗ್ರಾಮ ಸಮಿತಿಗಳಿಗಿಂತ ಜಿಲ್ಲಾ ಸಮಿತಿಗೆ ಹೆಚ್ಚಿನ ಅಧಿಕಾರ ನೀಡಲಾಗಿದೆ. ಜಿಲ್ಲಾ ಸಮಿತಿಯ ಅಧ್ಯಕ್ಷರು ಜಿಲ್ಲಾಧಿಕಾರಿಗಳಾಗಿದ್ದಾರೆ. ಅವರಿಗೆ ಗ್ರಾಮ ಸಮಿತಿಗಳ ನಿರ್ಣಯಗಳನ್ನು ವಜಾ ಮಾಡುವ ಅಧಿಕಾರವನ್ನು ನೀಡಲಾಗಿದೆ. ಈ ಮಹತ್ವದ ಸಮಿತಿಯಲ್ಲಿ ಹೆಚ್ಚಿನ ಜನಪ್ರತಿನಿಧಿಗಳಿಗೆ ಅವಕಾಶ ನೀಡಬೇಕಾಗಿತ್ತು. ಸಾರ್ವಜನಿಕರಿಗೆ ಬಹುಮತದಿಂದ ತೀರ್ಮಾನ ತೆಗೆದುಕೊಳ್ಳುವ ಅಧಿಕಾರವಿರ ಬೇಕಿತ್ತು. ಗ್ರಾಮ ಸಮಿತಿ, ತಾಲ್ಲೂಕು ಸಮಿತಿ ಎಂದೆಲ್ಲಾ ಇದ್ದರೂ ಇವುಗಳಿಗೆ ಸ್ವಾಯತ್ತತೆ ಇಲ್ಲ. ಅಧಿಕಾರಿಗಳ ಬಿಗಿ ಹಿಡಿತ ಮುಂದುವರಿದಿದೆ. ಜನರಿಗೆ ಅಧಿಕಾರ ನೀಡದೆ, ಕಾಡು ಉಳಿಸುತ್ತೇವೆ ಎಂದರೆ ಅದು ಸಾಧ್ಯವಾಗದ ಮಾತು. ಅಧಿಕಾರಿಗಳು ತಮ್ಮ ಹಿತಾಸಕ್ತಿಗಳನ್ನು ಮುಂದಿಟ್ಟುಕೊಂಡು ಅರಣ್ಯವಾಸಿಗಳ ಮೇಲೆ ದೌರ್ಜನ್ಯ ನಡೆಸಿದ ಎಷ್ಟೋ ಉದಾಹರಣೆಗಳು ನಮ್ಮ ಕಣ್ಣ ಮುಂದಿವೆ. ಅದೇ ಇನ್ನೂ ಮುಂದುವರಿಯಲಿದೆ. ಗಿರಿಜನರನ್ನು ಮತ್ತು ಅರಣ್ಯನಿವಾಸಿಗಳನ್ನು ಒಕ್ಕಲೆಬ್ಬಿಸು ವಂತಿಲ್ಲ ಎಂದು ಹೇಳಲಾಗಿದ್ದರೂ, ಪುನರ್ವಸತಿಯ ಬಗ್ಗೆ ಹೆಚ್ಚಿನ ವಿವರಣೆ ನೀಡಲಾಗಿಲ್ಲ. ಹೀಗಾಗಿ ಹಳೆಯ ಸಮಸ್ಯೆಗಳಿಗೆ ಈ ಹೊಸ ಕಾಯ್ದೆಯಿಂದಲೂ ಪರಿಹಾರ ದೊರಕಿದಂತಾಗಿಲ್ಲ ಮತ್ತು ಯಾವುದೇ ಪ್ರಾಣಿ ಅಪರೂಪ ಮತ್ತು ವಿನಾಶದ ಅಂಚಿನಲ್ಲಿದೆ ಎಂದು ಘೋಷಿಸಿ ಆ ಪ್ರದೇಶದಲ್ಲಿರುವ ಜನರನ್ನು ಒಕ್ಕಲೆಬ್ಬಿಸಬಹುದು ಎಂಬುದು ಇಡೀ ಕಾಯ್ದೆಯ ಆಶಯವನ್ನು ನೀರಿನಲ್ಲಿ ಹೋಮ ಮಾಡಿದಂತೆ ಆಗಿದೆ.

ಒಟ್ಟಾರೆ ಈ ಕಾಯ್ದೆಯಿಂದ ಅರಣ್ಯವಾಸಿಗಳ ಸಮಸ್ಯೆಗಳನ್ನು ಸರ್ಕಾರ ಸಮಗ್ರವಾಗಿ ನೋಡಿಲ್ಲ ಎಂಬುದನ್ನು ಮತ್ತೆ ಎತ್ತಿ ತೋರಿಸಿದೆ. ವಿದೇಶಿ ಪರಿಸರವಾದಿಗಳ ಮರ್ಜಿಗೆ ಒಳಗಾಗಿ ಮನುಷ್ಯನನ್ನು ಕಾಡಿನ ದ್ರೋಹಿಗಳಂತೆ ನೋಡಿಲ್ಲ ಎಂಬುದೊಂದೇ ಸಮಾಧಾನದ ವಿಷಯ. ಇಂದು ಪ್ರಪಂಚ ಪರಿಸರ ಬಿಕ್ಕಟ್ಟನ್ನು ಎದುರಿಸುತ್ತಿದೆ. ಭೂತಾಪಮಾನ ಹೆಚ್ಚುತ್ತಿರುವುದರಿಂದ ಅರಣ್ಯ ಉಳಿಸಲೇಬೇಕಾದ ಅನಿವಾರ್ಯತೆ ಬಂದೊದಗಿದೆ. ಆದರೆ ಅಮೆರಿಕಾ ಮತ್ತು ಇತರ ಸಾಮ್ರಾಜ್ಯಶಾಹಿ ದೇಶಗಳು ಹೇಳುತ್ತಿರುವಂತೆ ಪಶ್ಚಿಮ ಘಟ್ಟದಲ್ಲಿ, ಮತ್ತೆಲ್ಲೋ, 'ಫ್ರಿಜ್‌ನಲ್ಲಿ' ಇಟ್ಟಂತೆ ಒಂದಿಷ್ಟು ಕಾಡು ಕಾರ್ಬನ್ ಸಿಂಕ್‌ಗಳಾಗಿ ಉಳಿದರೆ ಸಾಲದು. ಭೂಮಿಯ ಉದ್ದಗಲದಲ್ಲೂ ಕಾಡು ಇರಬೇಕು. ಅದರೊಂದಿಗೆ ಬೆರೆತು ಬದುಕುವ ಸಂಸ್ಕೃತಿ ನಮ್ಮದಾಗಬೇಕು. ಆ ನಿಟ್ಟಿನಲ್ಲಿ ಜನಪರವಾದ ಪರಿಸರ ಆಂದೋಲನವನ್ನು ನಾವು ಕಟ್ಟಬೇಕಾಗಿರುವುದು ಈಗಿನ ತುರ್ತು.

**ಕಲ್ಕುಳಿ ವಿಠಲ ಹೆಗ್ಗಡೆ**
ಜನಪರ ಪರಿಸರ ಹೋರಾಟಗಾರ, ಶೃಂಗೇರಿ - ೫೭೭ ೧೩೯, ಚಿಕ್ಕಮಗಳೂರು ಜಿಲ್ಲೆ

# ಕಾಲ

**ಡಾ|| ನಾ. ಡಿಸೋಜ**

**ಊ** ರ ನಡುವೆ ಇರುವ ಮರಿಯಾಣ ಮೇಸ್ತ್ರಿಯುವರ ಹಡಿ ಮನೆ ಆ ಊರಿಗೇನೆ ದೊಡ್ಡದು. ದೊಡ್ಡದು ಅನ್ನುವ ದ್ದು ಎರಡೂ ಅರ್ಥದಲ್ಲಿ ಬಳಕೆಯಾಗುವಂತಹದು. ಆ ಮನೆ ಾರದಲ್ಲೂ ದೊಡ್ಡದು, ಮನೆಯಲ್ಲಿರುವ ಜನಸಂಖ್ಯೆಯ ಷ್ಟಿಯಲ್ಲೂ ದೊಡ್ಡದು. ಮನೆ ತುಂಬ ಜನ. ಸದಾ ಮಕ್ಕಳ ಆಟ, ಮಾತು, ಕೇಕೆ. ಹಾಗೆ ನೋಡಲು ಹೋದರೆ ಇಂತಹಾ ೊಡ್ಡ ಮನೆ ಈ ಪ್ರದೇಶದಲ್ಲಿ ಮತ್ತೊಂದಿಲ್ಲ. ಇದೇ ಈ ನೆಯ ಹಿರಿಮೆ ಕೂಡ. ಜನ ಅಚ್ಚರಿಪಡುವುದು, ಮ್ಮೆಪಡುವುದು ಈ ಮನೆ ಇರಿಸಿಕೊಂಡ ಏಕತೆಗೆ, ಇಲ್ಲಿ ಡುಬರುವ ಒಗ್ಗಟ್ಟಿಗೆ.



ಈ ಮನೆಯ ಬಗ್ಗೆ ಹೆಚ್ಚು ತಿಳಿಯಬೇಕು ಅನ್ನುವುದಾದರೆ ಆ ಮನೆಯ ಹಿರಿಯ ಸೊಸೆ ಮರಿಯಾ ಬಾಯಿಯನ್ನ ಮಾತನಾಡಿಸಬೇಕು. ಆಕೆ.....

''ನಾನು ಈ ಮನೆಗೆ ಬಂದಾಗ ಈ ಮನೆಯಲ್ಲಿ ಇಪ್ಪತ್ತೆರಡು ಜನ ಇದ್ದರು'' ಅನ್ನುವ ಮಾತನ್ನ ಹೇಳುತ್ತಾಳೆ. ಹಿಂದೆಯೇ ಈ ಮಾತಿಗೆ ವಿವರಣೆಯನ್ನೂ ನೀಡುತ್ತಾಳೆ.

''ನನ್ನ ಅತ್ತೆ ಮಾವ ಇದ್ದರಾ ? ಅವರ ಜೊತೇಲಿ ನಮ್ಮ ಅತ್ತೆ ತಾಯಿ, ಮಗನ ಮನೆ ಬಿಟ್ಟುಬಂದು ಇಲ್ಲಿ ಸೇರಿಕೊಂಡಿದ್ದರು. ಇಬ್ಬರು ಮೈದುನರು, ಒಬ್ಬಾಕೆ ನಾದಿನಿ, ನಾವಿಬ್ಬರು, ದೂರದ ನೆಂಟರು ಅನ್ನುವ ಕಾರಣಕ್ಕೆ ಒಬ್ಬರು ಮಾಮು, ಕೆಲಸದಾಕೆ ಅಂತ ಕಲ್ಲಿಬಾಯಿ, ಇನ್ನು ತೋಟ, ಎತ್ತು ಎಮ್ಮೆ ನೋಡಿಕೊಳ್ಳಲಿಕ್ಕೆ ಅಂತ ಮತ್ತೆ ಮೂವರು, ಸಾಲದ್ದಕ್ಕೆ ನಮ್ಮ ಅತ್ತೆಯ ದೂರದ ಸಂಬಂಧಿ ರೀತಾ ಬಾಬಿ, ನಮ್ಮ ಮಾವನವರ ಕಡೆಯ ಇನ್ನಿಬ್ಬರು, ಆಳುಗಳ ಹೆಂಡಿರು ಮಕ್ಕಳು, ಒಟ್ಟು ಎಷ್ಟಾಯಿತು ? ಇಪ್ಪತ್ತೆರಡನ್ನೂ ಮೀರಿತು. ಅಲ್ಲವೆ ?

''ನಾನು ಮದುವೆಯಾಗಿ ಈ ಮನೆಗೆ ಬರುತ್ತಿದ್ದ ಹಾಗೇ ನನ್ನ ಅತ್ತೆ ಮನೆ ಒಳಕೋಣೆಯ ಬೀಗದ ಕೈಯನ್ನ ನನಗೆ ಕೊಟ್ಟು ''ಹುಡುಗಿ ಈವರೆಗೆ ನಾನು ಈ ಮನೇನ ಸಂಭಾಳಿಸಿಕೊಂಡು ಬಂದೆ, ಇನ್ನು ನಿನ್ನ ಜವಾಬ್ದಾರಿ, ತೊಕೋ ಬೀಗದ್ ಕೈ'' ಅಂತ ಹೇಳಿ ಜಪಸರಾನ ಕೈಗೆತ್ತಿಕೊಂಡು ಮನೆ ಜಗಲಿ ಮೇಲೆ ಹೋಗಿ ಕೂತುಬಿಟ್ಟರು.

''ನನಗೆ ಆವಾಗ ಹದಿನೆಂಟು ವರ್ಷ. ನನ್ನ ತೌರು ಇಷ್ಟು ದೊಡ್ಡದಲ್ಲ, ಅಲ್ಲಿ ಹೆಚ್ಚು ಜನ ಕೂಡ ಇರಲಿಲ್ಲ. ಏನು ಎತ್ತ ಅಂತ ತಿಳೀದೆ ಸಂತೇಲಿ ದಾರಿತಪ್ಪಿದ ಹಾಗೆ ಆಯ್ತು. ಆದರೂ ನಾನು ಹೆದರಲಿಲ್ಲ, ಮೇರಿ ಮಾತೆ ನೀನೇ ಕಾಪಾಡಬೇಕು ಅಂತ ದೇವರ ಮುಂದೆ ಮೇಣದ ಬತ್ತಿ ಹಚ್ಚಿ ಸೆರಗನ್ನ ಸೊಂಟಕ್ಕೆ ಬಿಗಿದುಕೊಂಡು ಕೆಲಸಕ್ಕೆ ನಿಂತೆ.

''ಮೇರಿ ಮಾತೆ ನಡೆಸಿಕೊಟ್ಟಳು. ಇಬ್ಬರು ಮೈದುನರ ಮದುವೆ ಮಾಡಿಸಿದೆ, ನಾದಿನಿಯ ಮದುವೆ ಆಯಿತು. ಹಾಗಂತ ಜನ ಕಡಿಮೆ ಆಗಲಿಲ್ಲ. ಮೈದುನರು ಮದುವೆ ಆಗಿ ತಮ್ಮ ತಮ್ಮ ಹೆಂಡಂದಿರನ್ನ ಇಲ್ಲಿಗೇನೆ ಕರಕೊಂಡು ಬಂದರು. ನಾದಿನಿ ಒಬ್ಬಳು ಹೋದಳು ಅನ್ನುವಾಗ ಇಬ್ಬರು ವಾರಗಿತ್ತಿಯರು ಬಂದು ಮನೆ ಸೇರಿಕೊಂಡರು. ಇಪ್ಪತ್ತೆರಡು ಇದ್ದುದು ಇಪ್ಪತ್ಮೂರು ಆಯಿತು. ಮುಂದೆ ಈ ಸಂಖ್ಯೆ ಮತ್ತೂ ಬೆಳೀತು. ಮೈದುನರಿಗೆ ಮಕ್ಕಳಾದ ಮೇಲೆ ಮನೆ ಅನ್ನೋದು ಒಂದು ಜನಜಂಗುಳಿಯ ಜಾತ್ರೆ ಆಯಿತು. ಅಷ್ಟು ಹೊತ್ತಿಗೆ ನನಗೂ ಮಕ್ಕಳಾಗಿದ್ದವು. ಆವಾಗ ಮನೇಲಿ ಎಷ್ಟು ಜನ ಇದ್ದರು... ಅಂದರೆ... ಆಗಲೂ ನನಗೆ ಲೆಕ್ಕ ಸಿಗತಿರಲಿಲ್ಲ, ಈಗಲೂ ಆ ಲೆಕ್ಕ ಸಿಗೋದಿಲ್ಲ. ಲೆಕ್ಕ ಬೇಡ ಅಂತ ನಾನೇ ನಿರ್ಧಾರ ಮಾಡಿದೆ. ಮನೆ ತುಂಬಾ ಜನ ಅಂತು ಇದ್ದರು. ಅದೇ ನನಗೆ ಅತೀ ಸಂತೋಷದ ವಿಷಯ ಆಗಿತ್ತು.

''ಹೊಸ ಜನ ಬರುತ್ತಿದ್ದ ಹಾಗೆ ಹಳಬರು ಕಾಣೆಯಾದರು. ಹಳಬರಿರಲಿ ಹೊಸಬರಿರಲಿ ಎಲ್ಲರನ್ನ ನೋಡಿಕೊಂಡು ನಾನು ಉಳಿದೆ. ಮನೆಯ ಯಜಮಾನಿಯ ಪಟ್ಟವನ್ನ ನನಗೇನೆ ವಹಿಸಿದ್ದರಲ್ಲ, ಅದನ್ನ ಸರಿಯಾಗಿಯೇ ನಿಭಾಯಿಸಿಕೊಂಡು ಹೋದೆ. ಇದರಲ್ಲಿ ನನಗೆ ಒಂದು ಬಗೆಯ ತೃಪ್ತಿ ಕೂಡ ಇತ್ತು.

''ಜಗಲಿ ಮೇಲೆ ಜಪಸರದ ಮಣಿ ಎಣಿಸುತ್ತ ಕೂತಿರುತ್ತಿದ್ದ ಅತ್ತೆ ಒಂದು ದಿನ ಹೇಳಿದ್ರು –

''ಮರಿಯಾ, ನೀನು ಈ ಮನೆಗೆ ದೇವದೂತೆಯ ಹಾಗೆ ಬಂದೆ ತಾಯಿ... ಇಷ್ಟು ದೊಡ್ಡ ಮನೇನ, ಇಷ್ಟೆಲ್ಲ ಜನಾನ ನೀನು ಹ್ಯಾಗೆ ಸಂಭಾಳಿಸಿಕೊಂಡು ಹೋಗತೀಯೋ ಅನ್ನುವ ಅನುಮಾನ ಗಾಬರಿ ನನ್ನಲ್ಲಿ ಇತ್ತು, ಆದರೆ ನೀನು ಗೆದ್ದೆ.''

''ಈ ಮಾತನ್ನ ಹೇಳಿದ ನಾಲ್ಕೇ ದಿನಗಳಲ್ಲಿ ಜಗಲಿ ಮೇಲೆ ಜಪಸರದ ಮಣಿಗಳನ್ನ ಎಣಿಸುತ್ತ ಕುಳಿತ ಆಕೆ ಅಲ್ಲಿಯೇ ಕೊನೆ ಉಸಿರು ಎಳೆದಳು.

''ಆವರೆಗೆ ನನಗೆ ಆ ಮನೇಲಿ ಒಂದು ಧೈರ್ಯದ ವಾತಾವರಣ ಇತ್ತು. ನನಗೆ ಯಾವುದೇ ಸಮಸ್ಯೆ ಬರಲಿ ನಾನು 'ಮಾಯ್' ಎಂದು ಅತ್ತೆಯ ಬಳಿ ಹೋಗುತ್ತಿದ್ದೆ, ಹೀಗೆ ಹೀಗೆ ಆಗಿದೆ ಏನು ಮಾಡಲಿ ಎಂದು ಕೇಳುತ್ತಿದ್ದೆ, ಆಕೆ ನನ್ನ ಕೈಗೆ ಬೀಗದ ಕೈ ಕೊಟ್ಟಿದ್ದರೂ ಸಲಹೆ ನೀಡುತ್ತಿದ್ದರು, ಹೀಗೆ ಮಾಡು ಎಂದು ಹೇಳುತ್ತಿದ್ದರು, ಎಲ್ಲರ ಹಿತ ಮನೆಯ ಹಿತ, ಸದಾ ಗಮನದಲ್ಲಿ ಇರಲಿ ಎಂದು ಹೇಳುತ್ತಿದ್ದರು. ಮನೆಯಲ್ಲಿ ಯಾರ ಯಾರ ಸ್ವಭಾವ ಹೇಗೆ, ಅವರ ಜೊತೆಯಲ್ಲಿ ಹೇಗೆ ವ್ಯವಹರಿಸಬೇಕು ಅನ್ನುವುದನ್ನ

**"ದೊಡ್ಡ ಕುಟುಂಬದಲ್ಲಿ ಬೆಳೆದ ಹುಡುಗಿ ಇನ್ನೊಂದು ದೊಡ್ಡ ಕುಟುಂಬವನ್ನ ಉಳಿಸಬಹುದು ಅಂತ ನಾನು ಅಂದುಕೊಂಡಿದ್ದೆ... ಆದರೆ ನಿಮ್ಮ ಮಗಳು ಮದುವೆಯಾದ ಮೂರು ತಿಂಗಳಿಗೇನೆ ನೂರಾರು ವರ್ಷಗಳಿಂದ ಒಂದಾಗಿದ್ದ ನಮ್ಮ ಮನೇನ ಒಡೆದುಬಿಟ್ಟಳು.''**

ತಿಳಿಸುತ್ತಿದ್ದರು. ನಾನು ಅವರ ಮಾತಿನಂತೆ ಕೇಳುತ್ತಿದ್ದೆ. ಆದರೆ ಅವರು ತೀರಿಕೊಂಡ ನಂತರ ನನಗೆ ಇದೇ ಒಂದು ಸಮಸ್ಯೆಯಾಯಿತು.

''ಹೀಗೆ ಅಂತ ನಾನು ಅಂಜಲಿಲ್ಲ, ಅಳುಕಲಿಲ್ಲ, ಹಿಂದಿನಂತೆಯೇ ಮನೆಯನ್ನ ನೋಡಿಕೊಂಡೆ. ಇವರು ಕೂಡ ನನಗೆ ಬೆಂಬಲವಾಗಿ ನಿಂತರು. ಮನೆಯಲ್ಲಿ ಮೂರು ಸಂಸಾರಗಳು. ವಾರಗಿತ್ತಿಯರಾಗಿ ಇಬ್ಬರು ಹೆಂಗಸರು. ಅವರ ಅಭಿರುಚಿ ಬೇರೆ, ಅವರ ಆಸೆ ಆಕಾಂಕ್ಷೆಗಳು ಬೇರೆ. ಮೈದುನರು ಇವರ ಮಾತಿಗೆ ಬೆಲೆ ಕೊಡುತ್ತಿದ್ದರು. ಆದರೆ ಹೊರಗಿನಿಂದ ಬಂದ ಆ ಹುಡುಗಿಯರು ಏಕೆ ಮಾತು ಕೇಳಿಯಾರು ? ಇದು ಸ್ವಲ್ಪ ಅತಿರೇಕಕ್ಕೆ ಹೋಯಿತು.

''ಒಂದು ಸಂದರ್ಭದಲ್ಲಿ ಮಹಡಿ ಮನೆ ಮರಿಯಾಣ ಮೇಸ್ತ್ರರ ಮನೆ ಹಂಚಿಕೆಯಾಗುವ ಪರಿಸ್ಥಿತಿ ಬಂದಿತು ಅನ್ನುವಾಗ ಮಾವ ಬಲವಾಗಿ ನಿಂತರು. ಮಾವನ ಜೊತೆಗೆ ಇವರೂ ನಿಂತರು. 'ನಾನು ಮನೆ ಜಮೀನನ್ನ ಯಾರಿಗೂ ಹಂಚಿಕೆ ಮಾಡೋದಿಲ್ಲ, ನಾನು ಮಾಡಿದ ಆಸ್ತಿ ಇದು. ಇದನ್ನ ನನಗೆ ಬೇಕಾದ ಹಾಗೆ ವಿಲೇವಾರಿ ಮಾಡುವ ಅಧಿಕಾರ ನನಗಿದೆ. ಯಾರಿಗಾದರೂ ಈ ಮನೇಲಿ ಇರಲಿಕ್ಕೆ ಮನಸ್ಸಿಲ್ಲ ಅನ್ನುವುದಾದರೆ ಅವರು ಮನೆಯಿಂದ ಹೊರಬಿದ್ದು ಹೋಗಬಹುದು. ಅವರು ಅವರ ದಾರೀನ ಕಂಡುಕೊಳ್ಳಬಹುದು' ಎಂದರು ಮಾವ. ಈ ಮಾತಿಗೆ ನನ್ನ ಇಬ್ಬರೂ ಮೈದುನರು ಮನಸ್ಸನ್ನ ಬದಲಾಯಿಸಿದರು. ಮನೆಯ ಹೊಲ ತೋಟಗಳನ್ನ ನೋಡಿಕೊಂಡಿದ್ದ ಅವರಿಗೆ ಬೇರೆ ದಾರಿ ಇರಲಿಲ್ಲ, ಮನೆ ತನ್ನ ಎಂದಿನ ರೂಪವನ್ನ ಮುಂದುವರಿಸಿಕೊಂಡು ಹೋಯಿತು. ಈ ವಿಷಯದಲ್ಲಿ ನಾನು ಕೂಡ ಮೈದುನರಿಗೆ, ವಾರಗಿತ್ತಿಯರಿಗೆ ತಿಳಿಸಿ ಹೇಳಿದೆ. ಈ ಮನೆ ಎರಡು ಮೂರು ಆಗುವುದು ನನಗೆ ಬೇಸರದ ವಿಷಯವಾಗಿತ್ತು.

''ಈ ಮನೆಯ ಅವಿಭಕ್ತ ಕುಟುಂಬದ ಈ ವ್ಯವಸ್ಥೆ ಹಲವರ ಗಮನವನ್ನ ಸೆಳೆದದ್ದು ಸುಳ್ಳಲ್ಲ, ಸುತ್ತಲಿನ ಜನ ಈ ಮನೆಯ ಬಗ್ಗೆ ಆಸಕ್ತಿ ಕುತೂಹಲ ತಾಳುತ್ತಿದ್ದರು. ಹಲವರು ಇದನ್ನ ನೋಡಲು ಬರುತ್ತಿದ್ದರು. ಈ ದೊಡ್ಡ ಮನೆಯನ್ನ ಹೇಗೆ ನಿಭಾಯಿಸಿಕೊಂಡು ಹೋಗುತ್ತೀರಿ ಎಂದು ನನ್ನನ್ನ ಕೇಳುತ್ತಿದ್ದರು.

''ಆದರೆ ಈ ವ್ಯವಸ್ಥೆಯನ್ನ ಕಾಪಾಡಿಕೊಂಡು ಬರುವಲ್ಲಿ ನಾನು, ನನ್ನ ಇವ[ರು] ತುಂಬಾ ಪ್ರಯತ್ನಪಟ್ಟೆವು. ಒಂದು ದೊಡ್ಡ ಮನೆಯನ್ನ ಒಡೆಯಬಾರದು ಅನ್ನೋ[ದು] ನಮ್ಮ ಹಂಬಲವಾಗಿತ್ತು.

''ಮಾವನವರ ಮನಸ್ಸಿನ ಇಂಗಿತ ಕೂಡ ಇದೇ ಆಗಿದ್ದರಿಂದ ನಾವು ಗ[ಂಡ] ಹೆಂಡತಿ ಈ ಇಂಗಿತಕ್ಕೆ ಪೂರಕವಾಗಿ ನಿಂತೆವು.

''ನನ್ನ ಮೈದುನರ ಮಕ್ಕಳನ್ನ ನಮ್ಮ ಮಕ್ಕಳಿಗಿಂತ ಮಿಗಿಲಾಗಿ ನೋಡಿಕೊಂಡೆ[ವು.] ನನ್ನ ವಾರಗಿತ್ತಿಯರ ಮನಸ್ಸಿಗೆ ಬೇಸರವಾಗದಂತೆ ನಾನು ಸದಾ ಎಚ್ಚರವಹಿಸುತ್ತಿ[ದ್ದೆ.] ನನ್ನವರು ನನಗೆ ಸದಾ –

''ಮರಿಯಾ, ಈ ಮನೆಗೆ ಒಂದು ಹೆಸರಿದೆ, ಜನ ಇದನ್ನ ಗೌರವದಿ[ಂದ] ನೋಡುತ್ತಾರೆ. ಇಡೀ ಕುಟುಂಬ ಒಂದಾಗಿ ಬದುಕಿರುವಂತಹಾ ಉದಾಹರಣೆ ನ[ಮ್ಮ] ಮನೆ ಬಿಟ್ಟರೆ ಬೇರೆ ಸಿಗುವುದಿಲ್ಲ, ಈ ಗೌರವವನ್ನ ನಾವು ಉಳಿಸಿಕೊಂ[ಡು] ಹೋಗಬೇಕು. ನಮಗೆ ಏನೇ ತೊಂದರೆ, ತಾಪತ್ರಯವಾಗಲಿ ನಾವು ನಮ್ಮ ಮನೆಯ ಏಕತೆಗೆ ಧಕ್ಕೆ ಬಾರದ ಹಾಗೆ ಇರಬೇಕು'' – ಅನ್ನುತ್ತಿದ್ದರು.

''ನಾನು ಈ ಮಾತುಗಳನ್ನ ಸದಾ ಗಮನದಲ್ಲಿ ಇರಿಸಿಕೊಂಡು ಬದುಕಿದೆ.''

* * *

ಮರಿಯಾ ಬಹಳ ಹೆಮ್ಮೆಯಿಂದ ಈ ಮಾತುಗಳನ್ನ ಹೇಳುತ್ತಾಳೆ. ಆದ[ರೆ] ಹಿಂದೆಯೇ ಒಂದು ನಿಟ್ಟುಸಿರು ಅವಳ ತುಟಿಗಳಿಂದ ಹೊರಹೊಮ್ಮುತ್ತದೆ. ಏಕೆ ನಿಟ್ಟುಸಿರು ಎಂದು ಕೇಳಿದರೆ ಅದೇ ಒಂದು ಕತೆ ಅನ್ನುತ್ತಾಳೆ ಮರಿಯಾ. ಬಹಳ ಕೆ[ದಕಿ] ಕೆದಕಿ ಕೇಳಿದ ಮೇಲೆ ಅವಳು ನಿಧಾನವಾಗಿ ನಡೆದ ವಿಷಯವನ್ನ ಹೇಳುತ್ತಾಳೆ.

* * *

''ಆಯಿತು, ಮಹಡಿ ಮನೆ ಮರಿಯಾಣ ಮೇಸ್ತ್ರಿಗಳ ಮನೆ ತನ್ನ ಏಕತೆಯ[ನ್ನ] ಕಾಪಾಡಿಕೊಂಡು ಬಂದಿತು. ಅದಾವಾಗಲೋ ಹೊರಗಿನಿಂದ ಬಂದ ಹೆಂಗಸರು ಮನೆ ಇರುವುದೇ ಹೀಗೆ ಎಂಬ ನಿರ್ಧಾರಕ್ಕೆ ಬಂದು ಮತ್ತೆ ಮನೆಯನ್ನ ಒಡೆಯು[ವ] ಯತ್ನಕ್ಕೆ ಹೋಗಲಿಲ್ಲ, ಮನೆಯಲ್ಲಿ ಎಂದಿನ ಚಟುವಟಿಕೆಗಳು ಮುಂದುವರಿದ[ವು.]

ನು ಸಾಮೂಹಿಕ ಊಟ ಇರಬಹುದು, ಸಂಜೆಯ ರ್ಥನೆ ಇರಬಹುದು ಎಲ್ಲ ಸಾಂಗೋಪಾಂಗವಾಗಿ ಡೆದುಕೊಂಡು ಬಂದವು. ಇದೆಲ್ಲವನ್ನ ನಾನೇ ಮುಂದೆ ತು ನೋಡಿಕೊಂಡೆ.

''ಆಗಲೇ ಮನೆಯ ಹಿರಿಯ ಮಗಳ ಮದುವೆಯ ದರ್ಭ ಕೂಡ ಒದಗಿಬಂದಿತು.

''ನನ್ನ ಮತ್ತು ಈ ಮನೆಯ ಮುದ್ದುಮಗಳು ವೆರೋನಿಕಾ ವಿದ್ಯಾಭ್ಯಾಸ ಮುಗಿಸಿದ್ದಳು. ಮಗಳ ಮದುವೆ ಮಾಡೋಣ ದರು ಇವರು. ಅಲ್ಲಿ ಇಲ್ಲಿ ನೆಂಟಸ್ತಿಕೆ ನೋಡುವ ಕೆಲಸ ಡ ಪ್ರಾರಂಭವಾಯಿತು. ಮನೆಯ ಹಿರಿಯ ಮಗಳು, ಲ್ಲರ ಅಚ್ಚುಮೆಚ್ಚಿನ ಮಗಳು, ಅವಳಿಗೆ ಒಂದು ಒಳ್ಳೆಯ ನೋಡಿಯೇ ಕೊಡಬೇಕು ಅನ್ನುವ ಆಸೆ ಎಲ್ಲರದ್ದೂ. ಗಾಗಿ ಯಾರೂ ಅವಸರ ಮಾಡಲಿಲ್ಲ.

''ಆದರೆ ಅನಿರೀಕ್ಷಿತವಾಗಿ ಒಂದು ಸಂಬಂಧ ಬಂದಿತು.

''ಕಾರವಾರದ ಕೋಡಿಬಾಗಿನ ಒಂದು ಸಂಬಂಧ. ರ್ಕ ಯಜಮಾನರು ತಮ್ಮ ಕೆಂಪು ರುಮಾಲನ್ನ ಪ್ರಧಾನ ಗಿ ಪ್ರದರ್ಶಿಸುತ್ತ ಮಹಡಿ ಮನೆಯ ದಣಪೆ ದಾಟಿದಾಗ ಲ್ಲರಿಗೂ ಅಚ್ಚರಿ. ಅವರು ತಮ್ಮ ಸದ್ದು ಮಾಡುವ ಪ್ಪಲಿಯನ್ನ ಎಣ್ಣೆ ಗಾಣದ ಬಳಿ ಬಿಟ್ಟುಬಂದು ಜಗಲಿಯನ್ನು ಕುಳಿತಾಗ ಇವರು ಸಹಜವಾಗಿ ಅವರನ್ನ ಸ್ವಾಗತಿಸಿದರು.

''ನಾನು ಕಾರವಾರದ ಕೋಡಿಬಾಗಿನ ಮುನುವೇಲ್ ಸ್ತ. ಕೋಡಿಬಾಗಿನಲ್ಲಿ ನನ್ನದು ಅಂತ ನೂರು ತೆಂಗಿನ ೬, ನಾಲ್ಕು ಎಕರೆ ಗದ್ದೆ, ಒಂದು ಇಂತಹದ್ದೇ ಮನೆ, ಡು ಜೊತೆ ಎತ್ತು, ಒಂದು ಎತ್ತಿನ ಗಾಡಿ, ಇದೆ. ವಾರದ ಸುತ್ತಮುತ್ತ ನೀವು ಯಾರಿಗೆ ಕೇಳಿದರೂ ಂಗೆ ಮುನುವೇಲ ಮೇಸ್ತರ ವಿಷಯ ಗೊತ್ತಾಗುತ್ತದೆ... ಮ್ಮ ಮನೇಲಿ ಕೂಡ ದೊಡ್ಡ ಕುಟುಂಬ ಇದೆ. ಸಂಜೆ ರ್ಥನೆಗೆ ನಮ್ಮ ಮನೆ ಜನ ಮೊಣಕಾಲು ಊರಿದರೆ ಗಿನ ಹಾಲು ತುಂಬಿ ಆ ಸಾಲು ಮನೆಯ ಅಂಗಳ ಟ್ಟುತ್ತೆ. ನಾವು ಮಾಡೋ ಪ್ರಾರ್ಥನೆ ಹತ್ತು ಮೈಲಿಗೆ ಸುತ್ತೆ.''

''ಯಜಮಾನರು ತುಸು ಮುಜುಗರಪಡುತ್ತಲೇ ತಮ್ಮ ಕುಟುಂಬದ ವಿಷಯ ಹೇಳಿದರು.

ಹಾಗೆಯೇ ಮುಂದುವರಿದು –

''ಇಲ್ಲಿ ಒಂದು ತುಂಬಿದ ಕುಟುಂಬ ಇದೆ ಅನ್ನುವ ಯ ನನಗೆ ನಮ್ಮ ಊರಿನ ಪಾದರಿಗಳ ಮೂಲಕ ತಿಳಿದುಬಂತು... ನನಗೆ ವರು ಗಂಡು ಮಕ್ಕಳು, ಅವರೆಲ್ಲ ಒಟ್ಟಿಗೇನ ಇದ್ದಾರೆ. ನನ್ನ ಹಿರಿಯ ಮಗನ ನಿಗೆ ಅಂದರೆ ನನ್ನ ಮೊಮ್ಮಗನಿಗೆ ಈ ವರ್ಷ ನಾವು ಮದುವೆ ಮಾಡಬೇಕು...''

''ಕುತೂಹಲದಿಂದ ಅವರ ಮಾತನ್ನು ಕೇಳುತ್ತ ಕುಳಿತ ಇವರಿಗೆ ವಿಷಯ ಏನು ವುದು ತಿಳಿಯಿತು. ಅವರ ಮಾತಿನ ಬಗ್ಗೆ ಇವರಲ್ಲಿ ಆಸಕ್ತಿ ಮೂಡಿತು. ಅವರೂ ಒತ್ತಾಯ ಮಾಡಲಿಲ್ಲ. ''ನೀವು ಚೌಕಾಶಿ ಮಾಡಿ. ನಾನು ವಿಷಯವನ್ನ ಗಮನಕ್ಕೆ ತಂದಿದ್ದೇನೆ, ಮುಂದಿನ ನಿರ್ಧಾರ ನಿಮ್ಮದು'' ಎಂದರು.

''ಮನೆ ಬಾಗಿಲಿಗೆ ಬಂದವರನ್ನ ಹಾಗೆಯೇ ಕಳುಹಿಸುವುದೇ ? ಆಳಿಗೆ ಎಳನೀರು ಡಲು ಹೇಳಿ ಅವನೇ ಅದನ್ನು ಕೆತ್ತಿ ಅವರ ಕೈಗಿತ್ತ ನಂತರ ಕೆಂಪು ಪೇಟದ ಆ ಮಾನರು ಮತ್ತೆ ಚಪ್ಪಲಿ ಸಿಕ್ಕಿಸಿಕೊಂಡು ಹೊರಟರು.

''ಕಾರವಾರದ ಕೋಡಿಬಾಗಿನಿಂದ ಸಮಾಚಾರ ದೊರಕಿಸಿಕೊಳ್ಳುವುದು ಗಲಿಲ್ಲ, ಸಿಕ್ಕ ಮಾಹಿತಿ ಕೂಡ ತೃಪ್ತಿಕರವಾಗಿತ್ತು.

''ಕೆಂಪು ಪೇಟದವರು ಸುಳ್ಳನ್ನೇನೂ ಹೇಳಿರಲಿಲ್ಲ. ಕೋಡಿಬಾಗಿನ ಮುನುವೇಲ ಸ್ತರು ಆ ಪ್ರದೇಶದ ಪ್ರತಿಷ್ಠಿತ ವ್ಯಕ್ತಿಯಾಗಿದ್ದರು. ಅಲ್ಲಿ ಅವರದ್ದೂ ಒಂದು ದೊಡ್ಡ ಂಬ. ಮನೆ ತುಂಬ ಜನ. ಸದಾ ನಕ್ಕು ನಲಿಯುವ ಮಕ್ಕಳು, ಒಂದೇ ಕುಟುಂಬದಲ್ಲಿ ವಾಸಿಸುವ ಅಣ್ಣ, ತಮ್ಮಂದಿರು. ಅವರ ಹಿರಿಯ ಮಗನ ಮಗ ಕಾರವಾರದ ಪೋರ್ಟಿನಲ್ಲಿ ಕೆಲಸದ ಮೇಲಿದ್ದ.



''ಮುನುವೇಲ ಮೇಸ್ತರ ಮೊಮ್ಮಗನ ಬಗ್ಗೆ ಚೌಕಾಶಿ ಮಾಡಲು ಹೋದಾಗ ಅಲ್ಲಿಯ ಜನ –

''ಮುನುವೇಲ್ ಮೇಸ್ತರ ಮೊಮ್ಮಗನೇ ? ಬಿಡಬೇಡಿ'' ಎಂದರು.

''ಆದರೆ ಈ ಮನೆಯ ಮುದ್ದು ಮಗಳು ವೆರೋನಿಕಾ ತಲೆ ಕೆಳಗೆ ಹಾಕಿದಳು. ಮುನುವೇಲ ಮೇಸ್ತರ ಮನೆಯ ವಿಷಯ ಕೇಳಿ ಉಳಿದವರೆಲ್ಲ ಸಂಭ್ರಮಪಟ್ಟರೂ ಅವಳ ಮುಖದ ಮೇಲೆ ಬೆಳಕು ಮೂಡಲಿಲ್ಲ. ಆಕೆಯ ತಂದೆ ಇದನ್ನು ಕಂಡು ಏನು ಮಗಳೇ, ನಿನ್ನ ಅಭಿಪ್ರಾಯ ಏನು ಎಂದು ಕೇಳಿದಾಗ ಆಕೆ ಮಾತನಾಡಲಿಲ್ಲ. ಆದರೆ ತಾಯಿಯ ಹತ್ತಿರ ತನಗೆ ಈ ಮದುವೆ ಇಷ್ಟವಿಲ್ಲ ಅಂದಳಂತೆ. ಆದರೆ ಅವಳ ಈ ಮಾತಿಗೆ ಮನೆಯಲ್ಲಿ ಯಾರ ಬೆಂಬಲವೂ ಸಿಗಲಿಲ್ಲ. ಅವಳ ತಂದೆ ಅವಳಿಗೆ ಮತ್ತೆ ಮತ್ತೆ ಕಾರಣ ಕೇಳಿ ಅವಳಿಂದ ಸೂಕ್ತ ಉತ್ತರ ಬಾರದೆ ಅವಳ ಮದುವೆಗೆ ಮುಂದಾದ. ಹೆಣ್ಣುಮಕ್ಕಳು ಇಂತಹಾ ಸಂದರ್ಭದಲ್ಲಿ ಒಳಗೊಂದು ಹೊರಗೊಂದು ಹೇಳುವುದು ಹೊಸದಾಗಿ ಇರಲಿಲ್ಲ. ಮಗಳು ವೆರೋನಿಕಾಗೆ ಈ ಸಂಬಂಧ ಒಪ್ಪಿಗೆಯಾಗಿದೆ ಅನ್ನುವುದು ಅವಳ ಹಾವಭಾವದಿಂದ ತಿಳಿದ ಅವಳ ತಂದೆ ಮದುವೆಯ ಸಿದ್ಧತೆಗೆ ತೊಡಗುತ್ತಾರೆ.

''ಅಂತು ಮಹಡಿ ಮನೆ ಮರಿಯಾಣ ಮೇಸ್ತ್ರಿಯವರ ಮೊಮ್ಮಗಳ ಮದುವೆ ಕೋಡಿಬಾಗಿನ ಮುನುವೇಲ ಮೇಸ್ತ್ರಿಯವರ ಮೊಮ್ಮಗನ ಜೊತೆಯಲ್ಲಿ ಅತೀ ದಬಾಜಿನಿಂದ ನಡೆದುಹೋಯಿತು.''

* * *

ತನ್ನ ಕುಟುಂಬದ ಬಗ್ಗೆ ಇಷ್ಟೆಲ್ಲ ಹೇಳಿದ ಮರಿಯಾ ನಂತರ ಮಾತು ಮರೆತವಳಂತೆ ಸುಮ್ಮನೆ ಕುಳಿತು ಬಿಡುತ್ತಾಳೆ. ಅವಳಲ್ಲಿದ್ದ ಉತ್ಸಾಹ, ಹುಮ್ಮಸ್ಸು ಕಾಣೆಯಾಗುತ್ತದೆ. ತೀರಾ ಒತ್ತಾಯ ಮಾಡಿದಾಗ ದೀರ್ಘ ನಿಟ್ಟುಸಿರ ಜೊತೆಗೆ ಅವಳು ಮುಂದಿನದನ್ನ ಹೇಳುತ್ತಾಳೆ.

ವೆರೋನಿಕಾಳ ಮದುವೆಯಾಗಿ ಮೂರು ತಿಂಗಳಾಗಿದೆ. ಮತ್ತೆ ಮುನುವೇಲ ಮೇಸ್ತರ ಕೆಂಪು ಪೇಟ ಮಹಡಿ ಮನೆ ಮರಿಯಾಣ ಮೇಸ್ತರ ಅಂಗಳದಲ್ಲಿ ಕಾಣಿಸಿಕೊಂಡಿದೆ. ಅದೇಕೋ ಮುನವೇಲ ಮೇಸ್ತರು ಎಂದಿನ ಲವಲವಿಕೆಯಲ್ಲಿ ಇರಲಿಲ್ಲ. ಅವರು ತುಂಬಾ ಘಾಸಿಗೊಂಡಂತೆ ಇತ್ತು. ನಿರುತ್ಸಾಹದಿಂದ ನಡೆದುಬಂದ ಅವರು ಒಂದು ಕ್ಷಣ ಅಂಗಳದಲ್ಲಿ ನಿಂತರು.

ವೆರೋನಿಕಾಳ ತಂದೆ ಮನೆ ಬಾಗಿಲಿಗೆ ಬಂದ ಬೀಗರನ್ನ ಸ್ವಾಗತಿಸಿದ್ದಾರೆ. ಗಾಣದ ಬಳಿ ಚಪ್ಪಲಿ ಬಿಟ್ಟು ಜಗಲಿ ಏರಿ ಕುಳಿತ ಮುನವೇಲ ಮೇಸ್ತರು ವೆರೋನಿಕಾಳ ತಂದೆಯ ಮುಖ ನೋಡಿ ಹೇಳುತ್ತಾರೆ –

''ದೊಡ್ಡ ಕುಟುಂಬದಲ್ಲಿ ಬೆಳೆದ ಹುಡುಗಿ ಇನ್ನೊಂದು ದೊಡ್ಡ ಕುಟುಂಬವನ್ನ ಉಳಿಸಬಹುದು ಅಂತ ನಾನು ಅಂದುಕೊಂಡಿದ್ದೆ... ಆದರೆ ನಿಮ್ಮ ಮಗಳು ಮದುವೆಯಾದ ಮೂರು ತಿಂಗಳಿಗೇನೆ ನೂರಾರು ವರ್ಷಗಳಿಂದ ಒಂದಾಗಿದ್ದ ನಮ್ಮ ಮನೇನ ಒಡೆದುಬಿಟ್ಟಳು.''

ಈಗ ನಿಟ್ಟುಸಿರು ಬಿಡುವ ಸರದಿ ವೆರೋನಿಕಾಳ ತಾಯಿ ತಂದೆಯದಾಗುತ್ತದೆ.

ಡಾ|| ನಾ. ಡಿಸೋಜ
ನೆಹರು ನಗರ, ಸಾಗರ - ೫೭೭ ೪೦೧



**ಯಿಲ್ಲದ ಪಯಣ**

ುರುಭೂಮಿಯ ಹಾದಿಯಲ್ಲಿ ಸಾಗುತ್ತಿದ್ದಾಗ
ಮುಹಮ್ಮದ್ ಮುರ್ತಾಶ್ ಎಂಬ ಸೂಫಿಯೊಬ್ಬ
ಂಡ ಒಂಟಿ ಕನ್ಯೆಯನ್ನು ಕೇಳುತ್ತಾನೆ :

ಓ ಹೆಣ್ಣೇ, ನೀನು ಎಲ್ಲಿಯವಳು ?''

ನನ್ನ ಊರಿನವಳು.''

ಎಲ್ಲಿಗೆ ಹೋಗುತ್ತಿರುವೆ ?''

ನನ್ನ ಮನೆಗೆ.''

ನಿನ್ನ ಮನೆ ಸಾಮಾನುಗಳೆಲ್ಲಿ ?''

ನನಗಾಗಿ ಕರೆಯೋಲೆ ಕಳಿಸಿದವನು ಮನೆ
ಾನುಗಳ ವ್ಯವಸ್ಥೆ ಮಾಡುತ್ತಾನೆ. ನನಗೆ ಅವನ
ವಿಶ್ವಾಸವಿದೆ.''

ನಿನ್ನಲ್ಲಿ ಕುಡಿಯಲು ನೀರು ಇದೆಯೇ ?''

ಯಾರು ಬಾಯಾರಿಕೆಗೆ ಭಯಪಡುತ್ತಾರೋ
ನೀರು ಕಟ್ಟಿಕೊಂಡು ಓಡಾಡುತ್ತಾರೆ.''

ನಿನಗೆ ಓಡಾಡಲು ಸವಾರಿ ಕುದುರೆಯ
ಇಲ್ಲವೇ ?''

''ಅದಕ್ಕೆ ಪ್ರತಿಯಾಗಿ, ಒಂದು ಸವಾರಿಯಲ್ಲ, ನನ್ನಲ್ಲಿ ನಾಲ್ಕು ಇವೆ, ನಿನ್ನ ಕಣ್ಣಲ್ಲಿ ಪರದೆ ಇರುವುದರಿಂದ ನಿನಗದು ಅನುಭವವಾಗದು. ನನ್ನ ಮೊದಲನೆಯ ಸವಾರಿಯೆಂದರೆ ಸಂತೃಪ್ತಿ, ನನಗೆ ದೈವಾನುಗ್ರಹ ಯಾವಾಗ ಪ್ರಾಪ್ತಿಯಾಗುತ್ತದೋ ಆಗ ನಾನು ಅದರ ಮೇಲೆ ಸವಾರಿ ಮಾಡುತ್ತೇನೆ. ಎರಡನೆಯದು ವಿಪತ್ತು ಎದುರಾದಾಗಲೆಲ್ಲ, ತಾಳ್ಮೆಯನ್ನು ಉಪಯೋಗಿಸಲಿಕ್ಕಾಗಿ ನಾನು ಸಹನೆಯೆಂಬ ಕುದುರೆಯ ಮೇಲೆ ಸವಾರಿ ಮಾಡುತ್ತೇನೆ. ದೇವರ ಕೃಪೆ ನನ್ನ ಮೇಲಾದಾಗಲೆಲ್ಲ ನನ್ನ ಮೂರನೆಯ ಸವಾರಿ ಕುದುರೆಯಾದ ದೈವ ಪ್ರೇಮದ ಮೇಲೆ ಕೂತು ಅವನ ದಯೆಯನ್ನು ನೆನೆಯುತ್ತ, ಅವನ ಗುಣಗಾನ ಮಾಡುತ್ತಾ ಸಂಚರಿಸುತ್ತೇನೆ. ಕೊನೆಯದಾಗಿ, ನನಗೆ ಅವನ ಪ್ರೇಮದ ಸಾಕಾರವಾದಾಗ ಹಂಬಲದ ಸವಾರಿ ಮಾಡುತ್ತೇನೆ ಅಥವಾ ನನಗೆ ಅವನ ಸೇವೆ ಮಾಡಲು ಮನೆಯ ಬಾಗಿಲು ತೆರೆದಾಗ ನಾನು ಪ್ರಾಮಾಣಿಕತೆಯ ಸವಾರಿ ಮಾಡುತ್ತಿರುತ್ತೇನೆ.''

ಇಷ್ಟು ಹೇಳಿದವಳು ಆಕಾಶದ ಕಡೆ ನೋಡುತ್ತಾ, ''ಓ ದೇವರೇ, ನಿನ್ನ ಮೇಲಿನ ಪ್ರೇಮ ನನ್ನ ಆತ್ಮವನ್ನು ನುಂಗಿಬಿಟ್ಟಿದೆ, ಮನೆಯಿಂದ ನನ್ನನ್ನು ಅಟ್ಟಿ ಹೊರದಬ್ಬಿ ಗುರಿಯಿಲ್ಲದ ಪಯಣಿಗಳನ್ನಾಗಿ ಮಾಡಿದೆ'' ಎಂದಳು. ಮತ್ತೆ ಅವಳು ಅಳತೊಡಗಿದಳು. ''ಯಾಕೆ ಅಳುತ್ತಿರುವೆ ?'' ಎಂದು ಮುರ್ತಾಶ್ ಕೇಳುತ್ತಾನೆ.

''ಅವನ ಮೇಲಿನ ಹಂಬಲ ನನ್ನನ್ನು ಕಿತ್ತು ತಿನ್ನುತ್ತಿದೆ. ಪ್ರಿಯಕರ ಕಾಣುತ್ತಿಲ್ಲ, ನನ್ನ ಹೃದಯ ಅವನ ಸ್ನೇಹಕ್ಕಾಗಿ ಪರಿತಪಿಸುತ್ತಿದೆ, ಅವನು ನನ್ನ ಮೇಲೇಕೋ ಸಿಟ್ಟಾದಂತಿದೆ. ಈ ಪರಿಸ್ಥಿತಿಯಲ್ಲಿ ನನ್ನ ಹೃದಯದಲ್ಲಿ ಸಮಾಧಾನವಾಗಲಿ ತೃಪ್ತಿಯಾಗಲಿ ಮೂಡುವುದು ಹೇಗೆ ಸಾಧ್ಯ ?'' ಎಂದಳವಳು. ''ಅತೀತವನ್ನು ತಲುಪುವುದಕ್ಕೆ ಪ್ರಾಮಾಣಿಕ ಹಾದಿ ಯಾವುದು ?'' ಎಂದು ಮುರ್ತಾಶ್ ಕೇಳುತ್ತಾನೆ.

''ಅಗೋಚರ ಜಗತ್ತಿನ ಮೆಟ್ಟಿಲುಗಳನ್ನು ಏರುತ್ತಾ ಹೃದಯದ ಮೂಲಕ ಪ್ರಿಯಕರನನ್ನು ಹಂಬಲಿಸುವುದು'' ಎಂದಳು ಆ ಅನಾಮಿಕ ಸೂಫಿ ಕನ್ಯೆ. ಇಂತಹ ಅಕ್ಷರದ ಬೆಂಬಲ ಸಿಗದ ಸೂಫಿ ಮಹಿಳೆಯರ ಆಧ್ಯಾತ್ಮಿಕ ಅನುಭವ, ಜ್ಞಾನದ ಭಂಡಾರ ಬೆಳಕಿಗೆ ಬಾರದೆ ವಿಶ್ವದಿಂದ ಅದೆಷ್ಟು ಅಳಿಸಿಹೋಗಿವೆಯೋ ತಿಳಿಯದು.

ಅನೇಕ ಸೂಫಿ ಸಂತ ಶ್ರೇಷ್ಠರು ಮಾರ್ಗದರ್ಶನಕ್ಕಾಗಿ, ಜ್ಞಾನಾರ್ಜನೆಗಾಗಿ ಮತ್ತು ತಮಗೆದುರಾದ ಸಂಕಷ್ಟಗಳ ಪರಿಹಾರಕ್ಕಾಗಿ ಮಹಿಳಾ ಸೂಫಿ ಸಂತರನ್ನು ಅವಲಂಬಿಸಿದ್ದರೆನ್ನುವಾಗ, ಈ ಮಹಿಳಾ ಸಂತರಿಗೆ ಇಂತಹ ಜ್ಞಾನ ಹೇಗೆ ಪ್ರಾಪ್ತವಾಯಿತೆಂಬ ಪ್ರಶ್ನೆ ಮೂಡುವುದು ಸಹಜ. ಹೆಚ್ಚಾಗಿ ಮನೆಯೊಳಗೆ ಇರಬೇಕಾದ ಕಟ್ಟುನಿಟ್ಟಿನ ನಿಯಮವನ್ನು ಪಾಲಿಸುತ್ತಿರುವ ಇವರಿಗೆ ಕೆಲವೊಮ್ಮೆ ಪುರುಷರನ್ನು ಮೀರಿಸುವ ಅಧ್ಯಾತ್ಮ ಜ್ಞಾನ ಲಭಿಸುವುದು ಹೇಗೆ ಸಾಧ್ಯವಾಯಿತು ?

**ಬಿಡುಗಡೆಯ ಹಾದಿಯಲ್ಲಿ**

ಪ್ರವಾದಿಯವರು ಬದುಕಿರುವ ಕಾಲದಲ್ಲೂ ದೇಹಾಂತದ ನಂತರ ಎರಡು-ಮೂರು ಶತಮಾನಗಳ ತನಕವೂ ಮಹಿಳೆಯರನ್ನು ಮನೆಯೊಳಗೆ ಬಂಧಿಸುವ ಕಟ್ಟುನಿಟ್ಟಿನ ನಿಯಮ ಮುಸ್ಲಿಮ್ ಸಮಾಜದಲ್ಲಿ ಇರಲಿಲ್ಲ. ಆ ಕಾಲದಲ್ಲಿ ಮಹಿಳೆಯರು ವ್ಯಾಪಾರದಲ್ಲಿ, ಸಮಾಜಸೇವೆಯಲ್ಲಿ, ಧರ್ಮ ಪ್ರಚಾರದಲ್ಲಿ, ಶೈಕ್ಷಣಿಕ ಕ್ಷೇತ್ರದಲ್ಲಿ, ಜ್ಞಾನಾರ್ಜನೆಯಲ್ಲಿ ಪುರುಷರಿಗೆ ಸಮಾನವಾಗಿ ಪಾಲುಗೊಂಡ ನಿದರ್ಶನಗಳು ಕಂಡುಬರುತ್ತವೆ. ನಂತರದಲ್ಲಿ ಬಂದ ನಿರಂಕುಶ ಪ್ರಭುಗಳ ಬೆಂಬಲದೊಂದಿಗೆ ಮತಾಂಧರು, ಮೂಲಭೂತವಾದಿಗಳು ತಮ್ಮ ಮೂಗಿನ ನೇರಕ್ಕೆ ಪ್ರವಾದಿಯವರ ಸಂದೇಶಗಳು ಮತ್ತು ಕುರಾನ್ ಸಂದೇಶಗಳನ್ನು ಸೀಮಿತ ಉದ್ದೇಶಗಳಿಗೆ ಅರ್ಥೈಸುತ್ತಾ ಮಹಿಳೆಯರನ್ನು ನಿರ್ಬಂಧಿಸಿರುವುದರಿಂದ ಸಮಾಜದಲ್ಲಿ ನಡೆಯುವ ಕೆಡುಕುಗಳನ್ನು ತಡೆಯಬಹುದೆಂಬ ಅಭಿಪ್ರಾಯ ವ್ಯಾಪಕವಾಗುವಂತೆ ಮಾಡಿದರು.

ಸಮಾಜದ ಕಟ್ಟುಪಾಡುಗಳ ಬಗ್ಗೆ ಯಾವರೀತಿಯ ಚಿಂತೆಯನ್ನೂ ಮಾಡಿಕೊಳ್ಳದೆ, ಮೂಲಭೂತವಾದಿಗಳನ್ನು ನೇರವಾಗಿ ಎದುರಿಸುತ್ತಾ ಸೂಫಿ ಉಲೇಮಾಗಳು, ಸೂಫಿ ಮಹಿಳೆಯರು ಸ್ವತಂತ್ರವಾಗಿ ತಮ್ಮ ವಿಚಾರಗಳನ್ನು, ಸಂದೇಶಗಳನ್ನು, ಧಾರ್ಮಿಕ ವ್ಯಾಖ್ಯಾನಗಳನ್ನು ಮಾಡತೊಡಗಿದರು. ಸೂಫಿಗಳು ಅತ್ಯಂತ ಹೆಚ್ಚು ಜನಪ್ರಿಯತೆಯನ್ನು ಪಡೆದುಕೊಂಡಾಗ ಅನೇಕ ಕಡೆಗಳಲ್ಲಿ ಮತಾಂಧರು, ಮೂಲಭೂತವಾದಿಗಳು ಇವರ ಜೊತೆ ತಾರ್ಕಿಕ ಮತ್ತು ದೈಹಿಕ ಸಂಘರ್ಷಕ್ಕೆ ಇಳಿದದ್ದಿದೆ. ಧಾರ್ಮಿಕವಾಗಿ ಸೌಮ್ಯ ತಾತ್ವಿಕ ಅಂಶಗಳಿಗೆ ಮಹತ್ವ ನೀಡುವ ಮೂಲಕ ಮತ್ತು ತಾಳ್ಮೆ, ಸ್ನೇಹ, ಪ್ರೇಮದ ಸಂದೇಶಗಳನ್ನು ಎತ್ತಿಹಿಡಿಯುವ ಮೂಲಕ ಸೂಫಿಗಳು ತೀವ್ರವಾದವನ್ನು ಸಮರ್ಥವಾಗಿ ಎದುರಿಸುವುದು ಸಾಧ್ಯವಾಯಿತು. ಇಂದಿಗೂ ಕೂಡ ಮುಸ್ಲಿಮ್ ಸಮಾಜದಲ್ಲಿ ಸೂಫಿಗಳ ಸೌಮ್ಯವಾದವನ್ನು, ಧರ್ಮ ಸಮನ್ವಯದ ತತ್ವಗಳನ್ನು ವಿರೋಧಿಸುವ ತೀವ್ರವಾದಿಗಳ ಅನೇಕ ಪಂಗಡಗಳು ಕಾರ್ಯಾಚರಣೆಗಳನ್ನು ನಡೆಸುತ್ತಲೇ ಇದ್ದರೂ, ಧರ್ಮದ ಸೌಮ್ಯ ಮುಖವನ್ನು ಪ್ರತಿನಿಧಿಸುವ ಸಾಂಸ್ಕೃತಿಕ ಮುಸ್ಲಿಮ್ ಸಮಾಜ, ಒಂದು ಬಹುಸಂಖ್ಯಾತ ಮುಗ್ಧ ಜನಸಮೂಹ

**ಫಕೀರ್ ಮುಹಮ್ಮದ್ ಕಟ್ಪಾಡಿ**

ಮೌನವಾಗಿ ಸೂಫಿಗಳನ್ನು ಬೆಂಬಲಿಸುತ್ತಿರುವುದನ್ನು ಕಾಣಬಹುದು.

ಇವೆಲ್ಲವುಗಳ ನಡುವೆ ಸಮಾಜದ ಸುಮಾರು ಅರ್ಧದಷ್ಟು ಸಂಖ್ಯೆಯಲ್ಲಿರುವ ಮುಸ್ಲಿಮ್ ಸಮಾಜದ ಮಹಿಳೆಯರನ್ನು ಪ್ರತಿನಿಧಿಸುವ ಸೂಫಿ ಪಂಥದ ಮಹಿಳೆಯರು ನಡೆಸಿದ ಸಾಧನೆ ಅದ್ಭುತವಾದದ್ದು. ಇವರು ಒಂದೆಡೆ ಸೂಫಿ ಪಂಥದ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಮತ್ತು ಮೂಲಭೂತವಾದಿಗಳ ವಿರುದ್ಧ ಸಮಾಜದಲ್ಲಿ ಏಕಕಾಲಕ್ಕೆ ಹೋರಾಡಬೇಕಾಗಿತ್ತು. ಆದರೆ ಸೂಫಿ ಪಂಥ ಇವರ ಯಾವ ಸಾಧನೆಗೂ ಅಡ್ಡಿಮಾಡದೇ ಇದ್ದುದರಿಂದ ಇವರು ಸ್ವತಂತ್ರವಾಗಿ ತಮ್ಮನ್ನು ಅಧ್ಯಾತ್ಮ ಸಾಧನೆಯ ಹಾದಿಯಲ್ಲಿ ತೊಡಗಿಸಿಕೊಂಡರು. ಇವರಿಗೆ ದೈವಪ್ರೇಮವೆನ್ನುವುದು ಬರಿಯ ಅಧ್ಯಾತ್ಮದ ಸಾಧನ ಮಾತ್ರವಾಗಿರಲಿಲ್ಲ. ಸಮಾಜದ ಪುರುಷ ಪ್ರಧಾನ ವ್ಯವಸ್ಥೆಯಲ್ಲಿನ ಮಾನಸಿಕ ಮತ್ತು ದೈಹಿಕ ದೌರ್ಜನ್ಯದ ವಿರುದ್ಧದ ಪ್ರತಿಭಟನೆಯ ಮಾರ್ಗವೂ ಆಗಿತ್ತು. ಎಲ್ಲ ಬಂಧನಗಳನ್ನು ಕಿತ್ತೊಗೆದು ಸ್ವಾತಂತ್ರ್ಯ ಪಡೆಯುವ ಮಾರ್ಗವೂ ಆಗಿತ್ತು.

ಇನ್ನೊಂದು ರೀತಿಯಲ್ಲಿ ನೋಡಿದರೆ ಮಹಿಳಾ ಸೂಫಿಗಳಿಗೆ ಇರುವ ಬದುಕಿನ ಅನುಭವ ವಿಸ್ತಾರವು ಪುರುಷ ಸೂಫಿಗಳಿಗಿಂತ ಹೆಚ್ಚು ಎಂಬುದನ್ನು ನಾವು ಗಮನಿಸಬಹುದು. ಪುರುಷ ಸೂಫಿಗಳು ಕುಟುಂಬವನ್ನು ಮರೆತು ಅಧ್ಯಾತ್ಮ ಸಾಧನೆಯನ್ನು ವಿರಕ್ತಿಯಿಂದ ಸಾಧಿಸಿದ್ದೇ ಹೆಚ್ಚು. ಆದರೆ ಮಹಿಳಾ ಸೂಫಿಗಳು ಹಾಗಲ್ಲ, ತಾಯಂದಿರಾಗಿ, ಸಹೋದರಿಯರಾಗಿ, ಪತ್ನಿಯರಾಗಿ, ಪುರುಷ ಸೂಫಿಗಳಿಗೆ ಬೆಂಗಾವಲಾಗಿ, ಸೇವಕಿಯರಾಗಿ ಬದುಕಿನ ಹಲವು ಮಜಲುಗಳಲ್ಲಿ ಯಶಸ್ವಿಯಾಗಿರುವ ಜೊತೆಗೆ ಅಧ್ಯಾತ್ಮವನ್ನು ಸಾಧಿಸಿದ್ದಾರೆ. ಇವರ ಈ ಅನುಭವ ವಿಸ್ತಾರವೇ ಅವರನ್ನು ಪುರುಷ ಸೂಫಿಗಳ ಮುಂದೆ ಮಾರ್ಗದರ್ಶಿಗಳಾಗಿ, ಜ್ಞಾನದ ಭಂಡಾರವಾಗಿ ಕಾಣಿಸುತ್ತಾರೆ. ಇದರಿಂದಾಗಿ ತಮ್ಮ ಆಧ್ಯಾತ್ಮಿಕ ಬದುಕಿನಲ್ಲಿ ಎದುರಾಗುವ ಸಂಕಷ್ಟಗಳನ್ನು, ಸವಾಲುಗಳನ್ನು ದಿಟ್ಟವಾಗಿ ಎದುರಿಸುತ್ತಾರೆ. ಜೀತದಾಳಾಗಿದ್ದ ರಾಬಿಯಾ ಅಲ್ ಅದವಿಯ, ಪೈಗಂಬರರ ಕುಟುಂಬದಲ್ಲಿ ಹುಟ್ಟಿದ ಬೀಬಿ ನಫೀಸಾ ಅವರ ಬದುಕಿನ ವಿವರಗಳು ಇವನ್ನು ಸಾಬೀತುಪಡಿಸುತ್ತವೆ.

**ಹೃದಯದ ದ್ವಾರಪಾಲಕಿ**

ದೇವರ ಜೊತೆಗಿನ ಪ್ರೇಮ ಸಂಬಂಧವನ್ನು ಸ್ಪಷ್ಟವಾಗಿ ಪ್ರಥಮಬಾ[...] ವ್ಯಕ್ತಪಡಿಸಿದ ಸೂಫಿ ಮಹಿಳೆ ರಾಬಿಯಾ ಅಲ್ ಅದವಿಯ (ಕ್ರಿ. ಶ. ೭೧೭-೮[...] ಸೂಫಿಗಳು ಬಳಸುವ ಭಾಷೆಯಲ್ಲಿ ಸರಳತೆ ಮತ್ತು ಸಾಮಾನ್ಯರು ಅರ್ಥವಾಗುವ[...] ಮಾತಾಡುವ ಕ್ರಮವನ್ನು ಬಳಕೆಗೆ ತಂದರು. ರಾಬಿಯಾ ಅವಲಂಬಿಸಿದ ರೀತಿಯಿಂ[...] ದೇವರ ಮೇಲಿನ ಪ್ರೀತಿ: ''ದೇವರು ಎಂದರೆ ದೇವರು; ಇದಕ್ಕಾಗಿ ನಾನು ದೇವರ[...] ಪ್ರೀತಿಸುತ್ತೇನೆ, ಅವನಿಂದ ಏನಾದರೂ ಪಡೆಯಲಿಕ್ಕಲ್ಲ, ಅವನನ್ನೇ ಪಡೆಯು[...] ದಕ್ಕಾಗಿ'' ಎನ್ನುತ್ತಾರೆ. ಅವರ ಗುರಿಯೆಂದರೆ ದೇವರೊಂದಿಗೆ ಅಂತಿಮವಾಗಿ ಕ[...] ಹೋಗುವುದು. ಪ್ರವಾದಿಯವರು ಹೇಳಿದಂತೆ, ''ತನ್ನನ್ನು ಬಲ್ಲಾತ ದೇವರನ್ನು ಬಲ[...] ಪ್ರೇಮವೇ ನಮ್ಮನ್ನು ಸಲಹುತ್ತದೆ ಮತ್ತು ನಮ್ಮ ಗುರಿಯತ್ತ ತಲುಪಿಸುತ್ತದೆ. ಸ[...] ಪಂಥದ ಬಾಗಿಲು ಕಟ್ಟಕಡೆಗೆ ತೆರೆಯುವುದೇ ಪ್ರೇಮದೊಂದಿಗೆ. ಯಾಕೆಂದರೆ, ಜ್ಞ[...] ನಮಗೆ ದಾರಿ ತೋರಿಸಿ ನಮ್ಮ ಆಯ್ಕೆಯನ್ನು ತೀರ್ಮಾನಿಸಬಹುದು, ನಮ[...] ಕಟ್ಟಕಡೆಯ ಗುರಿಯ ತೆಕ್ಕೆಗೆ ತಲುಪಿಸಬಹುದಾದರೂ, ಅಂತಿಮವಾಗಿ ನಮ[...] ದೇವರೊಂದಿಗೆ ಲೀನವಾಗಿಸುವುದು ಪ್ರೇಮ ಎನ್ನುತ್ತಾರೆ ಸೂಫಿಗಳು.

ಸೂಫಿ ಪಂಥದಲ್ಲಿ ಪರಂಪರಾಗತವಾಗಿ ಬಂದ ಹಲವಾರು ರೀತಿ ರಿವಾ[...] ಗಳನ್ನು, ಸಂಪ್ರದಾಯಗಳನ್ನು ಪ್ರಶ್ನಿಸಿ, ಈ ಹಿರಿಯ ಸೂಫಿ ಮಹಿಳೆ ರಾಬಿಯ ಅ[...] ಅದವಿಯ ನೇರವಾಗಿ ತಿರಸ್ಕರಿಸುತ್ತಾರೆ. ಸ್ವರ್ಗ-ನರಕಗಳನ್ನು ಕೇಂದ್ರೀಕರಿಸಿ ಬದು[...] ಮುಖ್ಯ ಉದ್ದೇಶಗಳನ್ನು ಕಡೆಗಣಿಸುವ ಪುರುಷ ಸೂಫಿಗಳನ್ನು ದಿಟ್ಟವಾಗಿ ವಿರೋ[...] ತರಾಟೆಗೆ ತೆಗೆದುಕೊಂಡು ಒಂದು ಕೈಯಲ್ಲಿ ಉರಿವ ದೊಂದಿಯನ್ನು ಹಿಡಿ[...] ಇನ್ನೊಂದು ಕೈಯಲ್ಲಿ ನೀರಿನ ಕೊಡವ ಹಿಡಿದು, ಸ್ವರ್ಗಕ್ಕೆ ಬೆಂಕಿ ಹಚ್ಚುತ್ತೇನೆ, ನರ[...] ಅಗ್ನಿಗೆ ನೀರು ಸುರಿಯುತ್ತೇನೆನ್ನುತ್ತಾರೆ. ತಮ್ಮ ಪಾಪಗಳಿಗೆ ಸೈತಾನನೇ ಕಾರಣವೆನ್ನುವ[...] 'ನಾನು ದೇವರ ಪ್ರೀತಿಸುವಾಕೆ, ನನಗಿನಿತೂ ಸಮಯವಿಲ್ಲ ಸೈತಾನನ ದ್ವೇಷಿಸು[...] ಎಂದು ಅವರನ್ನು ಹಂಗಿಸುತ್ತಾರೆ. ತನಗೆ ಬಾಹ್ಯ ಮತ್ತು ಅಂತರಂಗದ ವಿರೋಧಿಗ[...] ಎದುರಿಸುವ ತಾಕತ್ತಿದೆ ಎನ್ನುವುದನ್ನು ತನ್ನ ಈ ಪದ್ಯ ಪ್ರವಚನದಲ್ಲಿ ಹೇಳುತ್ತಾರೆ :

ನಾನು ಅರ್ಹಳು ದ್ವಾರಪಾಲಕಿಯಾಗಲು, ಯಾಕೆಂದರೆ,
ನನ್ನೊಳಗೆ ಏನಿವೆಯೋ ಅವನ್ನು ಹೊರಹಾಕಲಾರೆ,
ನನ್ನ ಹೊರಗೆ ಏನಿವೆಯೋ ಅವನ್ನು ಒಳಬರ ಬಿಡಲಾರೆ,
ಯಾರಾದರೂ ಒಳಬಂದರೆ ನೇರ ಹೊರಹೋಗಬೇಕಾಗುತ್ತದೆ
ನನ್ನ ಜೊತೆ ಯಾವ ಸಂಬಂಧವೂ ಇಲ್ಲದೆ.
ನಾನು ಹೃದಯದ ದ್ವಾರಪಾಲಕಿ, ಒಂದು ಹಸಿ ಮಣ್ಣು ಮುದ್ದೆಯಲ್ಲ

ಮಹಿಳೆ ಪುರುಷರಿಗಿಂತ ಕೆಳಮಟ್ಟದವಳು ಎನ್ನುವುದನ್ನು ರಾಬಿಯಾ[...] ಮನದಟ್ಟು ಮಾಡಲು ಕೆಲವು ಹೆಸರಾಂತ ಸೂಫಿ ಸಂತರು ಅವರ ಬಳಿಗೆ ಬಂದಿದ್ದ[...]

''ಎಲ್ಲ ಸದ್ಗುಣಗಳು ಪುರುಷನಿಗೆ ಮಾತ್ರವಾಗಿರುತ್ತವೆ. ಪ್ರವಾದಿತ್ವದ ಕಿರೀ[...] ಪುರುಷರ ತಲೆಯ ಮೇಲೆಯೇ ಇರಿಸಲಾಗಿದೆ. ಉದಾತ್ತತೆಯ ಪಟ್ಟಿಯು ಕ[...] ಪುರುಷನ ಸೊಂಟದಲ್ಲೇ ಕಟ್ಟಿಕೊಂಡಿರುತ್ತದೆ. ಮಹಿಳೆಯು ಯಾವತ್ತೂ ಪ್ರವಾದಿ[...] ಪಡೆಯಲಿಲ್ಲ' ಎಂದರು.

''ನೀವು ಹೇಳುವ ಎಲ್ಲ ಮಾತುಗಳೂ ಸುಳ್ಳಲ್ಲ. ಜೊತೆಗೆ ಇನ್ನಷ್ಟು ಗುಣಗಳ[...] ಸೇರಿಸಿಕೊಳ್ಳಿ. ಅಹಂಕಾರ, ಆತ್ಮಶ್ಲಾಘನೆ, 'ನಾನು ಸರ್ವ ಶ್ರೇಷ್ಠ ಯಜಮ[...] ಎಂಬ ಹಮ್ಮು ಮಹಿಳೆಯರ ಎದೆಯಿಂದ ಹುಟ್ಟಿಕೊಂಡದ್ದಲ್ಲ. ಮಹಿಳೆ ಎಂ[...] ಹಿಜ್‌ಡಾ ಆಗಿಲ್ಲ. ಇವೆಲ್ಲವೂ ವಿಶೇಷವಾಗಿ ಪುರುಷರ ಗುಣವೇ ಆಗಿದೆ'' ಎಂ[...] ರಾಬಿಯಾ.

ಪವಾಡಗಳನ್ನು ಮಾಡಿ ಜನರನ್ನು ತನ್ನೆಡೆ ಸೆಳೆಯುವುದು, ತನ್ನ ಸಾಧನೆಗ[...] ಪೈಪೋಟಿಗೆ ಇಡುವುದನ್ನು ಕೆಲವು ಸೂಫಿ ಅನುಭಾವಿಗಳು ಸಾಧಾರಣ[...] ಮಾಡುತ್ತಿದ್ದರು. ಇದನ್ನು ರಾಬಿಯಾ ವಿರೋಧಿಸಿದ್ದರು. ಖ್ಯಾತ ಸಂತ ಹ[...] ಬಸ್ರಿಯವರು ನೀರಿನ ಮೇಲೆ ನಮಾಜಿನ ಚಾಪೆ ಹಾಕಿ ನಮಾಜಿಗೆ [...] ಎಂದು ಕರೆದಾಗ, ರಾಬಿಯಾ ಗಾಳಿಯಲ್ಲಿ ತಮ್ಮ ಚಾಪೆ ಹಾಸಿ ನಮಾ[...] ಆಹ್ವಾನಿಸಿದರು. ಪೆಚ್ಚಾದ ಹಸನ್ ಬಸ್ರಿಯವರಿಗೆ ಹೀಗೆ ಉಪದೇಶಿಸಿದ್ದರು :

''ಹಸನ್‌ರವರೇ, ನೀವು ಮಾಡಿದ್ದನ್ನು ಒಂದು ಮೀನು ಅಥವಾ ಒಂದು ಮ[...] ಕೊರಡು ಕೂಡ ನೀರಲ್ಲಿ ಸಹಜವಾಗಿ ಮಾಡಿ ತೋರಿಸಬಲ್ಲದು. ನಾನು ಮಾಡಿ[...] ಒಂದು ಪುಟ್ಟ ಸೊಳ್ಳೆ ಕೂಡ ಮಾಡಿ ತೋರಿಸಬಹುದು. ಸತ್ಯ ಸಾಧನೆಯು, ಈ ಕ[...]



ಳಕದ ಬೂಟಾಟಿಕೆಯಿಂದ ಹೊರಗಿರುವಂತಹದ್ದು. ಈ ಟಾಟಿಕೆಯ ಪವಾಡಗಳನ್ನು ಬಿಟ್ಟು ಸತ್ಯ ಸಾಧನೆಯಲ್ಲಿ ನಸ್ಸನ್ನು ತೊಡಗಿಸಿಕೊಳ್ಳುವುದೇ ಉನ್ನತವಾದದ್ದು ಎಂದು ನಾವು ದುಕೊಳ್ಳಬೇಕು.''

ಸೂಫಿಯಾನ್ ಅತ್ತೌರಿ ಎಂಬ ಸೂಫಿ ಉಲೇಮಾ ರಾಬಿಯಾರ ಬಂದು ತನ್ನ ಪಾಂಡಿತ್ಯವನ್ನು ಪ್ರದರ್ಶನ ಮಾಡಲು ಸುತ್ತಾರೆ. ಅವರನ್ನು ಗೌರವದಿಂದ ಕಂಡು ಮಾತಾಡಿಸಿ, ತನ್ನ ಮತ್ತು ನೇರ ಮಾತುಗಳಿಂದ ಪರಂಪರೆಯ ಅತಿಯಾದ ಲಂಬನೆಯನ್ನು ವಿಮರ್ಶಿಸುತ್ತಾರೆ :

''ನೀನು ಒಳ್ಳೆಯ ಮನುಷ್ಯ, ಆದರೆ ನೀನು ಲೌಕಿಕ ಆಸೆಯಲ್ಲಿ ಗ್ನನಾಗಿರುವೆ. ನೀನು ಪರಂಪರೆಯ ಕಂಠಪಾಠವನ್ನು ಸುವುದನ್ನು ಇಷ್ಟಪಡುವವನು.''

ಹೆಣ್ಣಾಗಿರಲಿ ಗಂಡಾಗಿರಲಿ ಹೃದಯದ ಕನ್ನಡಿಯನ್ನು ವಾಗಿಟ್ಟುಕೊಂಡು, ಕ್ಷಣಕ್ಷಣಕ್ಕೂ, ತಮ್ಮ ಪ್ರತೀ ಉಸಿರಲ್ಲೂ ನ ಜೊತೆಗಿರುವ ಬಿಡಿಸಲಾಗದ ವೈವಾಹಿಕ ಸಂಬಂಧವನ್ನು ಲಿಸುತ್ತಾರೆ. ಈ ಪ್ರೇಮ ಸಂಬಂಧ ಅಥವಾ ಪ್ರಿಯೆ-ಪ್ರಿಯಕರ ಸಂಬಂಧ ಕೊನೆಗೊಂಡು ಅಂತಿಮವಾಗಿ ಅವನಲ್ಲಿ ತವಾಗಿ ಲೀನವಾಗುವತನಕ ಗಟ್ಟಿಯಾಗುತ್ತಾ ಹೋಗಬೇಕು. ಮದಲ್ಲಿ ಕರಗಿ ಹೋಗಬೇಕು, ಪ್ರೇಮವೇ ಆಗಿಬಿಡಬೇಕು. ಯಾರ ಕವನವೊಂದು ಹೀಗಿದೆ :

ಪ್ರೇಮದಲ್ಲಿ, ಹೃದಯ ಹೃದಯಗಳ ನಡುವೆ ಇರದು
ಅಂತರ ಏನೇನೂ,
ಮಾತು ಹುಟ್ಟುವುದು ಬಯಕೆಯಿಂದ,
ಪ್ರಾಮಾಣಿಕ ಅನುಭವ ಹುಟ್ಟುವುದು ತಾಜಾ ಸ್ವಾದದಿಂದ,
ಸ್ವಾದಿಸುವವನಿಗೆ ಗೊತ್ತು ಅದೇನೆಂದು,
ವಿವರಣೆ ನೀಡುವವನು ಸುಳ್ಳ.
ಹೇಗೆ ವಿವರಿಸುವೆ ಕೆಲವು ಸಂಗತಿಗಳ ಸತ್ಯ ಅನುಭವವ,
ಯಾರ ಮುಂದೆ ನೀನು ಕಳಂಕದ ಬಿಂದುವಾದೆ ?
ಯಾರೊಳಗಿದ್ದು ನೀನೀಗಲೂ ಜೀವಿಸಿರುವೆ ?
ನಿನ್ನ ಪಯಣದ ಗುರುತಾಗಿ ಜೀವಿಸಿರುವವನು ಯಾರು ?

**ಟುಂಬಿಕ ಸಂಕಷ್ಟಗಳನ್ನು ಎದುರಿಸಿದ ನಫೀಸಾ ಬೀಬಿ**

ರಾಬಿಯಾರಿಗೆ ಹೋಲಿಸಿದರೆ ನಫೀಸಾ ಬೀಬಿಯವರು ತನ್ನ ಕಿನ ಸಂಕಷ್ಟಗಳನ್ನು ಎದುರಿಸಲು ತೋರಿದ ದಿಟ್ಟತನ ಭಿನ್ನರೀತಿಯದ್ದು. ನಫೀಸಾರು ಅಧ್ಯಾತ್ಮದಲ್ಲಿನ ಸಾಧನೆಗಳನ್ನು ಓರ್ವ ಗೃಹಿಣಿಯಾಗಿದ್ದುಕೊಂಡು ಸಾಧಿಸಿದ್ದರು. ತನ್ನ ಗಂಡ, ಇಬ್ಬರು ಮಕ್ಕಳು ಮತ್ತು ತನ್ನ ವೃದ್ಧ ತಂದೆಯನ್ನು ನೋಡಿಕೊಳ್ಳುವುದರ ಜೊತೆಗೆ ಜನರ ಸಂಕಷ್ಟಗಳಿಗೆ ಸ್ಪಂದಿಸಿದ ತ್ಯಾಗಮಯಿ, ಮಹಾಮಾತೆಯೆನಿಸಿದವರು. ಮದೀನಾದಲ್ಲಿ ಅಹ್ಲ್ ಬೈತ್ ಅಥವಾ ಪ್ರವಾದಿ ಕುಟುಂಬಕ್ಕೆ ಸೇರಿದ ನಫೀಸಾ ತನ್ನ ತಂದೆಗೆ ಖಲೀಫಾ ಮಾಡಿದ ಅವಮಾನವನ್ನು ಸಹಿಸಿಕೊಂಡು ಊರುಬಿಟ್ಟು ಈಜಿಪ್ಟಿನ ಕೈರೋ ನಗರಕ್ಕೆ ತೆರಳಿದರು. ಮದೀನಾದ ಖಲೀಫಾ ತನ್ನ ತಪ್ಪನ್ನು ಮರೆಮಾಚಲಿಕ್ಕಾಗಿ ನಫೀಸಾರ ಗಂಡನಿಗೆ ಅಲ್ಲಿನ ಮಂಡಲಾಧಿಪತಿ ಹುದ್ದೆಯನ್ನು ನೀಡುವ ಆಮಿಷವನ್ನೊಡ್ಡುತ್ತಾನೆ. ಗಂಡ ಈ ಆಮಿಷಕ್ಕೆ ಬಲಿಯಾಗಿ ಹೊರಟು ನಿಂತಾಗ, ತನ್ನ ವೃದ್ಧ ತಂದೆಯನ್ನು ಒಂಟಿಯಾಗಿ ಬಿಟ್ಟು ಹೋಗಲಾರದೆ, ಈಜಿಪ್ಟಿನ ಜನರು ತೋರಿದ ಪ್ರೀತಿಯನ್ನು ತೊರೆಯಲಾರದೆ, ತನ್ನ ಗಂಡನನ್ನು ಬೀಳ್ಕೊಟ್ಟರು. ಮದೀನಾದ ಮಂಡಲಾಧಿಪತಿಯಾದ ಗಂಡ ತನ್ನ ಕುಟುಂಬವನ್ನು ಮರೆತುಬಿಡುತ್ತಾನೆ. ಬಹುಕಾಲ ಕಳೆದರೂ ಬಾರದ ತಂದೆಯನ್ನು ನೋಡಲು ಮಕ್ಕಳು ಕಾತರಿಸುತ್ತಿರುತ್ತಾರೆ. ನಫೀಸಾ ಬೀಬಿಯವರ ತಂದೆ ತೀರಿಕೊಂಡಾಗಲೂ ಗಂಡ ಬಂದಿರಲಿಲ್ಲ. ಮಕ್ಕಳಿಬ್ಬರೂ ತಂದೆಯ ನೆನಪಿನಲ್ಲಿ ಹಾಸಿಗೆ ಹಿಡಿಯುತ್ತಾರೆ. ಗಂಡನಿಗೆ ಬರಹೇಳಿ ಸಂದೇಶವನ್ನು ಕಳಿಸಿದರೂ ಬರಲಿಲ್ಲ. ಮಕ್ಕಳಿಬ್ಬರೂ ಒಬ್ಬೊಬ್ಬರಾಗಿ ಸಾಯುತ್ತಾರೆ. ಆಗಲೂ ಗಂಡ ಬಾರದಿದ್ದಾಗ ನಫೀಸಾ ನೊಂದುಕೊಳ್ಳುತ್ತಾರೆ. ಇದರ ಜೊತೆಗೆ ಅವರಿಗೆ ಇನ್ನೊಂದು ಆಘಾತವು ಕಾದಿರುತ್ತದೆ. ತನ್ನ ಗಂಡ ಮದೀನಾದಲ್ಲಿ ಎರಡನೇ ಮದುವೆಯಾಗಿ ಮಕ್ಕಳನ್ನು ಹೊಂದಿದ್ದಾನೆಂಬ ಸುದ್ದಿ ಬರುತ್ತದೆ. ಬದುಕಿನ ಈ ದುಃಖ, ಸಂಕಷ್ಟಗಳನ್ನು ನಫೀಸಾ ಧೈರ್ಯಗುಂದದೆ ದಿಟ್ಟವಾಗಿ, ಸೌಮ್ಯವಾಗಿ, ಸಹನೆ ಸಾಕಾರಮೂರ್ತಿಯಾಗಿ ಎದುರಿಸುತ್ತಾರೆ. ಈ ಮಧ್ಯೆ ಜನರ ಸಂಕಷ್ಟಗಳನ್ನು ನಿವಾರಿಸುವ ಕಾರುಣ್ಯಮಯಿ ತಾಯಿಯಾಗಿ, ಧಾರ್ಮಿಕ ಪಂಡಿತರಿಗೆ ಮಾರ್ಗದರ್ಶಿಯಾದ ಜ್ಞಾನದ ಭಂಡಾರವಾಗಿ, ಜನರಿಗೆ ಪ್ರವಚನ ನೀಡುವ ಧರ್ಮದರ್ಶಿಯಾಗಿ ತನ್ನ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸುತ್ತಿರುತ್ತಾರೆ. ಅವರಿಗೆ ಅತ್ಯದ್ಭುತವಾದ ರೀತಿಯಲ್ಲಿ ಈಜಿಪ್ಟಿನ ಜನರ ಪ್ರೀತಿ ಬೆಂಗಾವಲಾಗಿರುತ್ತದೆ. ನಫೀಸಾ ತನ್ನ ದುಃಖಗಳನ್ನೆಲ್ಲ ಅವನಿಗೊಪ್ಪಿಸಿ ತನ್ನ ಅಂತಿಮ ಯಾತ್ರೆ ಯಾರಿಗೂ ಹೊರೆಯಾಗದಂತೆ ದಿನವೂ ತನ್ನ ಮನೆಯ ಕೋಣೆಯೊಂದರಲ್ಲಿ ಗೋರಿ ತೋಡುತ್ತಾ ಅವನೊಂದಿಗೆ ಲೀನವಾಗುವುದಕ್ಕೆ ಅವಕಾಶ ಮಾಡಿಕೊಡುವ ತನ್ನ ಮುಂದಿರುವ ಸಾವನ್ನು ನಿರೀಕ್ಷಿಸುತ್ತಿರುತ್ತಾರೆ. ಅಂತಿಮ ದಿನದಂದು ತನ್ನ ದೇಹವನ್ನು ಇದೇ ಗೋರಿಯಲ್ಲಿ ಮಣ್ಣು ಮಾಡಬೇಕೆಂಬ ಕೊನೆಯಾಸೆಯನ್ನು ತನ್ನ ಅನುಯಾಯಿಗಳಿಗೆ ಹೇಳುತ್ತಾರೆ.

**ಸಮಾನತೆಯ ಹಾದಿಯಲ್ಲಿ**

ಇಸ್ಲಾಮಿಕ್ ಕಾನೂನಿನಲ್ಲಿ ಮತ್ತು ಸಮಾಜದ ಆಗುಹೋಗುಗಳಲ್ಲಿ ಪುರುಷರದ್ದೇ ಮೇಲುಗೈ ಇರುತ್ತದೆ. ಆದರೆ ಕುರಾನ್‌ನಲ್ಲಿ ಮತ್ತು ಇಸ್ಲಾಮಿಕ್ ಅಧ್ಯಾತ್ಮದಲ್ಲಿ ಪುರುಷರು ಮತ್ತು ಸ್ತ್ರೀಯರು ಇಬ್ಬರಿಗೂ ಸಮಾನತೆ ಇದೆ. ಕುರಾನಿನ ಅಧ್ಯಾಯ ೪ : ೧ರಲ್ಲಿ ಹೆಣ್ಣು ಗಂಡನ್ನು ಒಂದೇ ಜೀವದಲ್ಲಿ ಸೃಷ್ಟಿಸಲಾಗಿದೆ ಎಂದಿದೆ. ಮಹಿಳಾ ಸೂಫಿಗಳಲ್ಲಿ ರಾಬಿಯಾರಂತಹ ಕೆಲವರು, ಅವಿವಾಹಿತರಾಗಿ ಉಳಿದುಕೊಂಡು ಪುರುಷರನ್ನು ಪೋಷಕರಾಗಿ ಒಪ್ಪಿಕೊಳ್ಳಲು ನಿರಾಕರಿಸಿದರು. ಆಹಾರವನ್ನು ವರ್ಜಿಸಿ ಉಪವಾಸವನ್ನು ಕಟ್ಟುನಿಟ್ಟಾಗಿ ತಮ್ಮ ಧ್ಯಾನದ ಭಾಗವನ್ನಾಗಿ ಮಾಡಿಕೊಂಡು ತಮ್ಮ ದೇಹದ ಋತುಚಕ್ರವನ್ನು ನಿಗ್ರಹಿಸಿಕೊಂಡು ತಮ್ಮ ದೈನಂದಿನ ಪ್ರಾರ್ಥನೆ, ಧ್ಯಾನಗಳಿಗೆ ತಡೆಯಾಗದಂತೆ ಮಾಡಿಕೊಂಡರು. ಈ ಮೂಲಕ ಪುರುಷರಂತೆಯೇ ಅಡೆತಡೆಯಿಲ್ಲದೆ ದೇವರ ಜೊತೆಗಿನ ಅಧ್ಯಾತ್ಮ ಸಂಪರ್ಕವನ್ನಿಟ್ಟುಕೊಂಡು ತಮ್ಮ ಬದುಕನ್ನು ಸಮಾನತೆಯ ನೆಲೆಗೆ ತಲುಪುವಂತೆ ನೋಡಿಕೊಂಡರು. ದೇಹ ಪ್ರಕೃತಿಯಲ್ಲಿರುವ ಸಹಜ ಭೇದವನ್ನು ತೋರಿಸಿ ಅಸಮಾನತೆಯನ್ನು ಬೆಂಬಲಿಸುವವರಿಗೆ ಸವಾಲಾದರು. ಹೆಚ್ಚಿನ ಮಹಿಳಾ ಸೂಫಿಗಳನ್ನು ಇಂತಹವರ ಪತ್ನಿಯೆಂದೋ, ಇಂತಹವರ ತಾಯಿಯೆಂದೋ ಇಂತಹವರ ಸಹೋದರಿಯೆಂದೋ, ಮಗಳೆಂದೋ ಕರೆಯಲ್ಪಟ್ಟು ಗುರುತಿಸಲ್ಪಡುವುದು ಹೆಚ್ಚು. ಇದಕ್ಕೆ ಅಪವಾದವಾಗಿ ಫಾತಿಮಾ ನಿಶಾಪುರಿಯವರು ಅಹ್ಮದ್ ಇಬ್ನ್ ಅಲ್ ಖಿದರಿಯ್ಯರ ಪತ್ನಿಯಾಗಿದ್ದರೂ, ತಮ್ಮ ಸ್ವಯಾರ್ಜಿತ ಅಧ್ಯಾತ್ಮಜ್ಞಾನದ ಶ್ರೇಷ್ಠತೆಯಿಂದ ಮತ್ತು ಬಲದಿಂದ ಆ ಕಾಲದ ಧಾರ್ಮಿಕ ಪಂಡಿತರಾದ ಅಹ್ಮದ್ ಇಬ್ನ್ ಹಂಬಲ್, ಸೂಫಿ ಸಂತರಾದ ಝುಲ್ ನೂನ್ ಅಲ್ ಮಿಸ್ರಿ, ಅಬೂ ಯಜೀದ್ ಬಿಸ್ತಾಮಿ ಮುಂತಾದವರಿಗೆ ಧಾರ್ಮಿಕ ಮಾರ್ಗದರ್ಶನ ಮಾಡುತ್ತಿದ್ದರು.

ಕ್ರೂರವಾಗಿ ಹಿಂಸಿಸಲ್ಪಟ್ಟು ದುರಂತವನ್ನಪ್ಪಿದ ಸಂತ ಅಲ್ ಹಲ್ಲಾಜ್, ಅನಲ್ ಹಕ್ ಅಥವಾ ಅದ್ವೈತ ಸಿದ್ಧಾಂತವನ್ನು ತಂದು, ಧರ್ಮದಲ್ಲಿ ಕ್ರಾಂತಿಕಾರಿ ಪರಿವರ್ತನೆಯನ್ನು ಬಯಸಿದ್ದರೂ, ಸೂಫಿ ಮಹಿಳೆಯರ ಪ್ರಶ್ನೆ ಬಂದಾಗ ಇವರನ್ನು ಕ್ರೈಸ್ತ ನನ್ ಸನ್ಯಾಸಿನಿಯರಿಗೆ ಸಮೀಕರಿಸಿ, ಅವರು ಧ್ವನಿಯೇರಿಸಿ ಜಿಕ್ರ್ (ಜಪ) ಉಚ್ಚರಿಸುವುದನ್ನು ವಿರೋಧಿಸಿದ್ದರು ಮತ್ತು ಇತರರಿಗೆ ಕೇಳಿಸದಂತೆ ಈ ಮಹಿಳೆಯರು ಧ್ವನಿ ತಗ್ಗಿಸಿ ಮಾತಾಡಬೇಕೆಂದು ಅಭಿಪ್ರಾಯಪಟ್ಟಿದ್ದರು. ಇವೆಲ್ಲವೂ ಕೂಡ ಪುರುಷರ ಪೂರ್ವಗ್ರಹಗಳಿಂದ ಕೂಡಿದ್ದಾಗಿದೆಯೆಂದು, ಪ್ರತ್ಯೇಕತೆಯ ಪ್ರತಿಪಾದನಾ ಕ್ರಮವೆಂದು ಮಹಿಳಾ ಸೂಫಿಗಳು ತಿರಸ್ಕರಿಸಿದ್ದರು. ನಫೀಸಾ ಬೀಬಿಯವರು ಮಹಿಳೆಯರ ಧರ್ಮಶ್ರದ್ಧೆಗೆ ಶ್ರೇಷ್ಠ ಉದಾಹರಣೆಯಾಗಿ,

ಏಕಾಂಗಿಯಾಗಿ ಅಧ್ಯಾತ್ಮದ ಸಾಧಕಿಯೆಂಬ ಹೆಸರುಗಳಿಸಿ, ಪರೋಕ್ಷವಾಗಿ ಸವಾಲಾಗಿದ್ದರು.

**ಹೆಣ್ಣಿನ ರೂಪದ ಗಂಡು**

ಇಷ್ಟಾಗಿಯೂ ಪರಂಪರಾಗತವಾಗಿ ಸೂಫಿ ಎಂದರೆ ಗಂಡಾಗಿಯೇ ಉಳಿದಿದ್ದಾನೆ. ಸೂಫಿ ನೀತಿ ಶಾಸ್ತ್ರವು ಅನಾಥರಕ್ಷಕ, ಧೀರೋದಾತ್ತ, ನಿಸ್ವಾರ್ಥ, ದಯಾಪರವಾಗಿರುವ ಲಕ್ಷಣಗಳನ್ನೊಳಗೊಂಡ, 'ಫತವ್ವಾ' ಅಥವಾ 'ಯುವ ಪುರುಷತ್ವ' ಎಂದೆನಿಸಲ್ಪಟ್ಟಿದೆ. ಇದಕ್ಕೆ ಪ್ರಾಚೀನ ಅರೇಬಿಕ್ ಸಂಸ್ಕೃತಿಯಲ್ಲಿನ ಧೈರ್ಯ, ವಿಶೇಷವಾದ ದಯಾಪರತೆ, ಬಲಹೀನರ ರಕ್ಷಕ ಗುಣಗಳನ್ನೊಳಗೊಂಡ 'ಮರವ್ವಾ' ಅಥವಾ 'ಪುರುಷತ್ವ'ದ ನಿಯಮಕ್ಕೆ ಸರಿಸಮವಾದ ಮೂಲದ ಬೆಂಬಲವಿದೆ. ಈ ಹಿನ್ನೆಲೆಯಲ್ಲಿ ವಿಶೇಷ ಸಾಧನೆಯನ್ನು ಮಾಡಿದ ಮಹಿಳೆಯನ್ನು ಗಂಡು ಎಂದು ಗುರುತಿಸುವ (ಭಾರತದಲ್ಲಿ ಗಂಡೆದೆಯುಳ್ಳವರು ಎನ್ನುವಂತೆ) ಪರಿಪಾಠವಿದೆ. ಹನ್ನೆರಡನೇ ಶತಮಾನದ ಖ್ಯಾತ ಸೂಫಿ ಮತ್ತು ಚಿಂತಕ ಫರೀದುದ್ದೀನ್ ಅತ್ತಾರ್, ರಾಬಿಯ ಅಲ್ ಅದವಿಯ್ಯರನ್ನು ಮಹಿಳಾ ಸೂಫಿ ಎನ್ನದೆ ಗಂಡು ಸೂಫಿಗಳ ಸಾಲಿನಲ್ಲಿ ಗುರುತಿಸುತ್ತಾರೆ. ''ದೇವರ ಭಕ್ತಿ ಸಾಧನೆಯ ಮಾರ್ಗದಲ್ಲಿ ಓರ್ವ ಮಹಿಳೆ ಗಂಡಿನ ಸಾಧನೆ ಮಾಡಿದಾಗ ಅವಳನ್ನು ಮಹಿಳೆಯೆಂದು ಗುರುತಿಸಲಾಗದು, ಅವಳು ಗಂಡೇ ಆಗಿರುತ್ತಾಳೆ'' ಎನ್ನುತ್ತಾರೆ ಅತ್ತಾರ್. ಪಂಜಾಬಿನ ಖ್ಯಾತ ಸೂಫಿ ಸಂತ ಬಾಬಾ ಷೇಖ್ ಫರೀದ್ ಇಂತಹ ಮಹಿಳಾ ಸಾಧಕಿಯನ್ನು 'ಹೆಣ್ಣಿನ ರೂಪದಲ್ಲಿ ಸೃಷ್ಟಿಸಲಾದ ಗಂಡು' ಎಂದು ಹೊಗಳಿದ್ದಾರೆ. ಆದರೆ ಇಂತಹ ಅರ್ಥೈಸುವಿಕೆಯ ಉದ್ದೇಶವೇನೇ ಇದ್ದರೂ, ಕೊನೆಯಲ್ಲಿ ಇದು ಮಹಿಳೆಯರನ್ನು ಕೀಳರಿಮೆಯ ಪರಿಧಿಯೊಳಗೆ ನೂಕುವ ಹುನ್ನಾರವಾಗಿಯೇ ಕಾಣಿಸುತ್ತದೆ. ಇಂತಹ ವ್ಯಾಖ್ಯಾನದ ಹಿಂದೆ ಪ್ರಾಮಾಣಿಕ

ಅಲೆಗಳು

ವೇದಿಕೆಯ
ಭಯವಿಲ್ಲದೆ
ನಿರಂತರ
ಖುಷಿ, ಸಂತೋಷ, ಉತ್ಸಾಹ
ಲವಲವಿಕೆಯಿಂದ
ತನ್ನ ಪ್ರತಿಭೆಯನ್ನು
ಪ್ರದರ್ಶಿಸುವ
ಕಲಾವಿದರು





ಆಧ್ಯಾತ್ಮಿಕ ಸಾಧನೆ ಪುರುಷರ ಸೊತ್ತಾಗಿದೆ ಎಂಬ ಅರ್ಥ ಎದ್ದು ಕಾಣಿಸುತ್ತದೆ. ಅ
ವಾಸ್ತವದಲ್ಲಿ ಸೂಫಿ ಆಧ್ಯಾತ್ಮಿಕ ಸಾಧನೆಗೆ ಹೆಣ್ಣುಗಂಡೆಂಬ ಭೇದವಿರದೆ ದೈವಸ
ಯ ಸ್ಥಾನ ಒಂದೇ ಆಗಿರುತ್ತದೆ. ಇದಕ್ಕೆ ರಾಬಿಯಾ ಅಲ್ ಅದವಿಯ ಒಂದು ಉ
ನಿದರ್ಶನವಾಗುತ್ತಾರೆ.

ಹೆಚ್ಚಿನ ಪಾಲು ಸೂಫಿ ಸಾಹಿತ್ಯ, ಪುರುಷ ಅನುಯಾಯಿಗಳನ್ನು ಉದ್ದೇಶಿಸಿ
ಬರೆಯಲಾಗಿದೆ ಮತ್ತು ಪ್ರಕೃತಿ ಸಹಜವಾಗಿಯೇ ಪುರುಷ ಸ್ತ್ರೀಯರಿಗಿಂತ ಉತ್ತಮ
ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ನೋಡಲಾಗಿದೆ. ಹೀಗಿದ್ದರೂ ಮಧ್ಯಯುಗ
ಕೆಲವು ಮಹಿಳೆಯರು ಸೂಫಿ ಪಂಥದ ಸಾಮಾನ್ಯ ವ್ಯವಸ್ಥೆಯಲ್ಲಿ ಭಾಗಿಯ
ಉದಾಹರಣೆಗಳಿವೆ. ಮಾಮ್ಲುಕ್ ಮತ್ತು ಒತ್ತಮಾನ್‌ರ ಕಾಲದಲ್ಲಿ ಸೂಫಿ ಪಂ
ಒಟ್ಟು ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಸ್ವಲ್ಪ ಮಟ್ಟಿಗಿನ ಅವಕಾಶ ದೊರೆತಿತ್ತು. ಕೆ
ಸೂಫಿ ಉಲೇಮಾಗಳು ತಮ್ಮ ತಂಡದಲ್ಲಿ ಮಹಿಳಾ ಉಸ್ತಾದ್ ಅಥ
ಉಪಾಧ್ಯಾಯಿನಿಯರನ್ನು ಸೇರಿಸಿಕೊಂಡಿದ್ದರಾದರೂ, ಇವರು ಸೂಫಿ ಪಂಥದ ಜ
(ಜಪ)ನಲ್ಲಿ ಭಾಗವಹಿಸುವುದಕ್ಕೆ ನಿಷೇಧವಿತ್ತು. ಈಜಿಪ್ಟಿನ ಹದಿನಾರನೇ
ಶತಮಾನದ ಸೂಫಿ ಸಂತ ಅಬ್ದುಲ್ ವಹ್ಹಾಬ್ ಅಲ್ ಶರಾನಿ ಹೇಳುವಂತೆ 'ಗಂಡಸ
ತಮ್ಮ ಪತ್ನಿಯರಿಗೆ ಯಾವ ತರಹದ ವಿದ್ಯೆಯನ್ನೂ ನೀಡುತ್ತಿರಲಿಲ್ಲವಾದ್ದರಿಂದ ಸೂ
ಉಲೇಮಾಗಳು ಮಹಿಳೆಯರಿಗೆ ಧಾರ್ಮಿಕ ವಿದ್ಯಾಭ್ಯಾಸ ಮತ್ತು ಸಮಾಜದಲ್ಲಿ ವ
ವೈವಾಹಿಕ ಜೀವನದಲ್ಲಿನ ಕರ್ತವ್ಯಗಳ ಬಗ್ಗೆ ಪಾಠಮಾಡುತ್ತಿದ್ದರು'.

ಸೂಫಿಯೊಬ್ಬ ದೇವರ ಜೊತೆಗಿನ ಅಲೌಕಿಕ ಸಂಬಂಧದಲ್ಲಿ ಹೆಣ್ಣಾಗಿರುತ್ತಾ
ಆದರೆ ಮಹಿಳೆಯರ ಜೊತೆಗಿನ ಸಂಬಂಧದಲ್ಲಿ ಸೂಫಿ ಪುರುಷನಾಗಿರುತ್ತಾ
ಆದುದರಿಂದ ಅಧ್ಯಾತ್ಮದಲ್ಲಿ ಹೆಣ್ಣು ಗಂಡು ಎಂಬ ಭೇದ ಗೌಣವಾಗಿರುತ್ತ
ಪರಸ್ಪರರ ನಡುವೆ ಅಧ್ಯಾತ್ಮ ಪ್ರತಿಕ್ರಿಯೆಯ ಸ್ವಾತಂತ್ರ್ಯವಿರುತ್ತದೆ. ಸಾಮಾ
ಕಟ್ಟುಪಾಡುಗಳ ನಿರ್ಬಂಧ ಇಲ್ಲಿ ಇರುವುದಿಲ್ಲ. ದೈವಸಾನ್ನಿಧ್ಯ ತಲುಪಿದ ಕೂಡಲೇ
ಲಿಂಗಭೇದ, ಕಟ್ಟುಪಾಡುಗಳು, ಯಾವುದಕ್ಕೂ ಬೆಲೆಯಿರುವುದಿಲ್ಲ. ಷೇಖ್ ಇಬ
ಅರಬ್ ಅಲ್ ಹವಾರಿ ಯುವಕನಾಗಿದ್ದಾಗ ಮಹಿಳಾ ಸೂಫಿ ಹಜ್ಜಾ ಜಾಕಿಯ್ಯರ ಅಧ್ಯ
ಪುತ್ರನೆನಿಸಿದ್ದರು. ಇವರು ಹಜ್ಜಾ ಜಾಕಿಯ್ಯರ ತೊಡೆಯ ಮೇಲೆ ತಲೆಯಿಟ್ಟು ಮ
ತ್ತಿದ್ದರು. ಆಗ ಹಜ್ಜಾ ಜಾಕಿಯ್ಯರು ಇವರನ್ನು ಮಗನೆನ್ನುವುದನ್ನು ಬಿಟ್ಟು ಮಗಳೆ
ಸಂಬೋಧಿಸಿ ಕರೆಯುತ್ತಿದ್ದರು. ಅಂದರೆ ಇಂತಹ ಸಂದರ್ಭದಲ್ಲಿ ಯಾವುದೇ ಕಾ
ವಾಸನೆ ಇಲ್ಲಿ ಮೂಡುವುದಕ್ಕೆ ಆಸ್ಪದವಿರುವುದಿಲ್ಲ. ಹೀಗೆಯೇ ಗೃಹಿಣಿಯಾ
ಸೂಫಿ ಮಹಿಳೆ ಫಾತಿಮಾ ನಿಶಾಪುರಿ, ತನ್ನ ಅನುಯಾಯಿಯೆಂದು ಪರಿಗಣಿಸಿಕೊ
ಖ್ಯಾತ ಸಂತ ಅಬೂ ಯಜೀದ್ ಬಿಸ್ತಾಮಿಯ ಜೊತೆಗೆ ಅಧ್ಯಾತ್ಮ ಚಿಂತನೆ ಮಾಡುತ್ತಿರು
ಪರ್ದಾ ಮಾಡುತ್ತಿರಲಿಲ್ಲ. ಆದರೆ ಒಂದು ದಿನ ಅಧ್ಯಾತ್ಮದ ಚರ್ಚೆ ನಡೆಯುತ್ತಿದ್ದ
ಬಿಸ್ತಾಮಿಯವರು ಅವರ ಕೈಗೆ ಹಚ್ಚಿದ ಮೆಹಂದಿಯನ್ನು ನೋಡಿ ತುಂಬ ಚೆನ್ನಾ
ಎಂದು ಹೊಗಳಿದರಂತೆ. ಅಂದಿನಿಂದ ಅಬೂ ಯಜೀದ್ ಬಿಸ್ತಾಮಿಯವರ ಜೊ
ಅಧ್ಯಾತ್ಮದ ಚರ್ಚೆ ನಡೆಸುವಾಗಲೆಲ್ಲ ಫಾತಿಮಾ ನಿಶಾಪುರಿ ಪರ್ದಾ ಮಾಡುತ್ತಿದ್ದರ

ವಿಕ ಮಿಲನ

ಸೂಫಿ ಪಂಥದಲ್ಲಿ ಸೂಫಿಯೊಬ್ಬನ/ಳ ಆಧ್ಯಾತ್ಮಿಕ
ಧನೆಯ ಹಾದಿಯಲ್ಲಿ ವೈಯಕ್ತಿಕ ಬಯಕೆಗಳು ದೈವಿಕ
ಕಲ್ಪದೊಂದಿಗೆ ಮಿಲನವಾಗುತ್ತವೆ. ಸೂಫಿಯ
ತಿನುಡಿಗಳು ದೈವಿಕ ಇಚ್ಛೆಯೊಂದಿಗೆ ಐಕ್ಯವಾಗುವಂತೆ,
ಯುಕ್ತಿಕ ಗುಣಗಳು ಮಾಯವಾಗಿ ದೈವಿಕ ಗುಣಗಳು
ಪನ್ನವಾಗುತ್ತಾ 'ತೌಹೀದ್' ಅಥವಾ ದೈವಿಕ ಶಕ್ತಿ
ಂದಿಗೆ ಲೀನವಾಗುವ ಹಂತಕ್ಕೆ ಮುಟ್ಟುತ್ತಾನೆ. ಈ
ತಿಮ ಘಟ್ಟವನ್ನು ತಲುಪಿದಾಗ ಪರಮಾನಂದವನ್ನು
ಂದುತ್ತಾನೆ. ಸಾವು ಕೂಡ ದೇವರನ್ನು ತಲುಪುವ
ಟ್ಟವಾದುದರಿಂದ ಸೂಫಿಗಳು ಸಾವನ್ನು
ತೋಷದಿಂದ ಸ್ವೀಕರಿಸುತ್ತಾರೆ.

ಯಂದಿರಾಗಿ

ಹೆಚ್ಚಿನ ಸೂಫಿಗಳ ಬೆಳವಣಿಗೆಯಲ್ಲಿ ತಾಯಂದಿರ
ತ್ರ ಹಿರಿದಾಗಿರುತ್ತದೆ. ಇದು ದೆಹಲಿಯ ಹಜ್ರತ್
ಾಮುದ್ದೀನರ ಜೀವನ ಚರಿತ್ರೆಯಲ್ಲಿ ಅವರ
ುಕನ್ನು ರೂಪಿಸಿದ ತಾಯಿ ಮಾಯಿ ಸಾಹೇಬ ಸ್ವತಃ
ಫಿ ಸಂತಳಾಗಿ ಮತ್ತು ಮಗನಿಗಷ್ಟೇ ಅಲ್ಲ ತನ್ನ
ುಯಾಯಿಗಳೆಲ್ಲರ ತಾಯಿಯೆನಿಸಿದ್ದರು. ಹೀಗೆಯೇ
ೊಬ್ಬ ವಿಶ್ವವಿಖ್ಯಾತ ಹನ್ನೊಂದನೇ ಶತಮಾನದ
ತ ಮತ್ತು ಖಾದರಿಯ್ಯ ಪಂಗಡದ ಜನಕ ಹಜ್ರತ್
ಖ್ ಮೊಹಿಯುದ್ದೀನ್ ಅಬ್ದುಲ್ ಖಾದಿರ್ ಜೈಲಾನಿ
ವರ ಮೇಲೆ ತಾಯಿ ಉಮ್ಮು ಅಲ್ ಖೈರ್ ಮತ್ತು
ಮ್ಮ ಉಮ್ಮ್ ಮುಹಮ್ಮದ್‌ರ ಪ್ರಭಾವ ಅತ್ಯಂತ
ತವಾಗಿತ್ತು. ಉಮ್ಮ್ ಖೈರ್ ತನ್ನ ಮಗನಿಗೆ
ಲ್ಯದಲ್ಲಿ ಎಂತಹ ಸಂದರ್ಭ ಬಂದರೂ ಸುಳ್ಳು
ಳಕೂಡದೆಂಬ ಪಾಠವನ್ನು ಕಲಿಸಿಕೊಟ್ಟಿದ್ದರು.
ಲಕ ಮೊಹಿಯುದ್ದೀನ್ ಒಂದು ಸಲ ಬಾಗ್ದಾದಿನಿಂದ
ರಗೆ ಪ್ರಯಾಣ ಮಾಡಬೇಕಾಗಿ ಬಂದಾಗ ತಾಯಿ
ತ್ತು ಚಿನ್ನದ ನಾಣ್ಯಗಳನ್ನು ಸೊಂಟದಲ್ಲಿ ಕಟ್ಟಿ
ರೂಕನಾಗಿರು, ಸುಳ್ಳು ಹೇಳಬೇಡವೆಂದು
ದೇಶಿಸಿ ಕಳುಹಿಸಿದ್ದರು. ಪ್ರಯಾಣದ ಮಧ್ಯೆ
ುಭೂಮಿಯ ಹಾದಿಯಲ್ಲಿ ಇವರಿದ್ದ ಪ್ರಯಾಣಿಕರ
ತವನ್ನು ಕಳ್ಳರು ತಡೆದರು. ಬಾಲಕ
ಹಿಯುದ್ದೀನರನ್ನು ಒಬ್ಬ ಕಳ್ಳ ತಡೆದು, ನಿನ್ನ ಬಳಿ
ಬಾಳುವ ವಸ್ತು ಏನಿದೆಯೆಂದು ಕೇಳಿದ. ಬಾಲಕ
ಹಿಯುದ್ದೀನ್ "ನನ್ನ ಬಳಿ ನಲ್ವತ್ತು ಚಿನ್ನದ
್ಯಗಳಿವೆ" ಎಂದ. ಇವನು ನಮ್ಮನ್ನು ತಮಾಷೆ
ಡುತ್ತಿರಬೇಕೆಂದು ಕಳ್ಳ ಮತ್ತೆ ಕೇಳಿದ. ಮತ್ತೆ ಅದೇ
ರ ಬಂತು. ಮೂರನೇ ಬಾರಿಯೂ ಕೇಳಿದಾಗ
ಕ "ಹೌದು, ನನ್ನ ಸೊಂಟದ ಪಟ್ಟಿಯಲ್ಲಿ ನಲ್ವತ್ತು
ದ ನಾಣ್ಯಗಳಿವೆ" ಎಂದು ತೋರಿಸಿದ. 'ನಾನು
್ನು ಅಪಹರಿಸುತ್ತೇನೆಂದು ತಿಳಿದೂ ನೀನು ಸತ್ಯ
ುತ್ತಿಯಲ್ಲಾ' ಎಂದು ಚಕಿತನಾದ ಕಳ್ಳ ಕೇಳಿದಾಗ
ಕ "ನನ್ನ ಅಮ್ಮ ಹೇಳಿದ್ದರು ಎಂತಹ ಸಂದರ್ಭ
್ಲಿ ಸುಳ್ಳು ಹೇಳಬೇಡ ಅಂತ" ಅಂದಾಗ, ಕಳ್ಳ
ನನ್ನು ಬಿಟ್ಟುಬಿಟ್ಟ. ಮುಂದೆ ಕಳ್ಳನ ಹೃದಯ
ರ್ತನೆ ಹೊಂದಿ ಕಳ್ಳತನವನ್ನು ಬಿಟ್ಟುಕೊಟ್ಟನೆಂದು
ದೆ. ಹೀಗೆ ಅನೇಕ ಸೂಫಿ ಸಂತರ ಜೀವನ ಚರಿತ್ರೆ
ತಮ್ಮ ತಾಯಂದಿರ ಪ್ರಭಾವ ಎದ್ದುಕಾಣುವಂತಿದೆ.

ಖಾದರಿಯ್ಯ ಪಂಗಡದ ಸೂಫಿಗಳ ಇತಿಹಾಸವನ್ನು ನೋಡಿದರೆ ಉದ್ದಕ್ಕೂ ತಾಯಂದಿರಿಗೆ ಅತ್ಯಂತ ಮುಖ್ಯ ಸ್ಥಾನಮಾನ ಕಲ್ಪಿಸಿಕೊಡಲಾಗಿದೆ ಎಂಬುದು ತಿಳಿದುಬರುತ್ತದೆ. ಟರ್ಕಿಯ ವಿಶ್ವವಿಖ್ಯಾತ ಸಂತ ಮತ್ತು ಕವಿ ಮೌಲಾನಾ ಜಲಾಲುದ್ದೀನ್ ರೂಮಿಯವರ ಸಿಲ್‌ಸಿಲಾ ಅಥವಾ ಪರಂಪರೆಯ ಪಂಗಡದವರು ಇಂದಿಗೂ ಕೂಡ ಹೆಣ್ಣು ಗಂಡು ಎಂಬ ಭೇದ ಭಾವವನ್ನು ಮಾಡದೆ, ಅಧ್ಯಾತ್ಮದ ಪರಮೋನ್ನತ ಸಾಧನೆಯಲ್ಲಿ ದೇವರ ಸೃಷ್ಟಿ ಅಥವಾ ಮನುಷ್ಯ ಜೀವಿ ಎಂಬುದು ಮಾತ್ರ ನೆಲೆ ನಿಲ್ಲುತ್ತದೆಯೇ ಹೊರತು ಗಂಡು ಹೆಣ್ಣು ಎಂಬುದು ಇರುವುದಿಲ್ಲ ಎನ್ನುವ ನಿಯಮವನ್ನು ಪಾಲಿಸಲಾಗುತ್ತದೆ. ಈ ಪಂಗಡದ



ಸಮಾ ಅಥವಾ ಅಧ್ಯಾತ್ಮ ಜ್ಞಾನದ ಸಂಗೀತ ಮತ್ತು ಧ್ಯಾನ ಕೂಟದಲ್ಲಿ ಹೆಣ್ಣುಗಂಡು ಸೂಫಿಗಳು ಕೆಲವು ಕಟ್ಟುನಿಟ್ಟಿನ ನಿಯಮಗಳಡಿಯಲ್ಲಿ ಸೇರುತ್ತಾರೆ. ಮೌಲಾನಾ ರೂಮಿಯವರು ತನ್ನ ಪತ್ನಿಯನ್ನೂ ಸೇರಿದಂತೆ ತಮ್ಮ ಕುಟುಂಬದ ಮಹಿಳೆಯರು ಸೂಫಿ ಪಂಥದಲ್ಲಿ ಸಾಧಕಿಯರನ್ನಾಗಿ ಬೆಳೆಯುವುದಕ್ಕೆ ಮುಕ್ತ ಅವಕಾಶ ನೀಡಿದ್ದರು.

**ಸೂಫಿ ಮಹಿಳೆಯರ ಕೊಡುಗೆ**

ಸೂಫಿ ಪಂಥದ ಇಂದಿನ ಬೆಳವಣಿಗೆಯಲ್ಲಿ ಮಹಿಳೆಯರ ಅಪಾರ ಕೊಡುಗೆ ಇದೆ. ಶತಮಾನದುದ್ದಕ್ಕೂ ಪುರುಷರು ಮತ್ತು ಮಹಿಳೆಯರು ಭೇದವಿಲ್ಲದೆ ಜೊತೆಯಾಗಿ ಪ್ರೇಮದ ಬೆಳಕನ್ನು ಹಿಡಿದು ಸೂಫಿ ಪಂಥವನ್ನು ಮುನ್ನಡೆಸಿದ್ದರು. ಹಲವಾರು ಕಾರಣಗಳಿಗಾಗಿ ಸೂಫಿ ಮಹಿಳೆಯರು ಪುರುಷರಿಗಿಂತ ಹೆಚ್ಚು ಬೆಳಕಿಗೆ ಬರುವಂತೆ ಎದ್ದು ಕಾಣುತ್ತಿರಲಿಲ್ಲ. ಯಾಕೆಂದರೆ ಮುಖ್ಯವಾಗಿ ಇವರು ತಮ್ಮ ಬಗ್ಗೆ ಬರೆದು ದಾಖಲಿಸುವ ಹವ್ಯಾಸ ಸುತರಾಂ ಇಟ್ಟುಕೊಂಡಿರಲಿಲ್ಲ. ಎತ್ತರ ಧ್ವನಿಯಲ್ಲಿ ಮಾತಾಡುವುದಕ್ಕೆ, ಸಾರ್ವಜನಿಕವಾಗಿ ಮುಕ್ತವಾಗಿ ಮಹಿಳೆಯರು ಕಾಣಿಸಿಕೊಳ್ಳುವುದಕ್ಕೆ ಸಾಮಾಜಿಕ ನಿರ್ಬಂಧವಿತ್ತು. ಈ ಕಾರಣದಿಂದಾಗಿ ಪುರುಷರಿಂದ ದೂರ, ತಮ್ಮದೇ ಆದ ಪ್ರತ್ಯೇಕ ಗುಂಪು ಕಟ್ಟಿಕೊಂಡು ಧ್ಯಾನಕೂಟ ಮತ್ತು ದೇವರ ಪ್ರಾರ್ಥನಾ ಕೂಟಗಳನ್ನು ಏರ್ಪಡಿಸಿಕೊಳ್ಳುತ್ತಿದ್ದರು. ಈ ಚಟುವಟಿಕೆಗಳಿಂದ ಹೊರಗೆ ನಿಂತು ಕೂಡ ಕೆಲವು ಮಹಿಳಾ ಸೂಫಿಗಳು, ರಾಬಿಯಾ ಅಲ್ ಅದವಿಯರಂತೆ ಸ್ವತಂತ್ರರಾಗಿ ತಮ್ಮ ಸಾಧನೆಗಳನ್ನು ಮಾಡಿದ್ದರೆ, ಹೆಚ್ಚಿನವರು ಬಂಧುಗಳಾಗಿ, ಸಹಾಯಕರಾಗಿ ತಮ್ಮ ಪಾತ್ರವನ್ನು ವಹಿಸಿಕೊಂಡು, ಪ್ರಾರ್ಥನೆ, ಜ್ಞಾನಾರ್ಜನೆ ಮಾಡಿಕೊಂಡಿದ್ದರು. ಪ್ರಖ್ಯಾತ ಸೂಫಿ ಉಲೇಮಾಗಳ ಜೊತೆಗೆ ಉಪಾಧ್ಯಾಯಿನಿಯರಾಗಿ, ವಿದ್ಯಾರ್ಥಿನಿಯರಾಗಿ ಅಧ್ಯಾತ್ಮದ ಸಹಯೋಗಿನಿಯರಾಗಿ ಅವರ ವಿಚಾರಗಳು, ಬೋಧನೆಗಳ ನಿರ್ದಿಷ್ಟ ರೂಪದಲ್ಲಿ ರೂಪುಗೊಳ್ಳುವಂತೆ ಅವರ ಮೇಲೆ ಬಹಳಷ್ಟು ಮಹಿಳೆಯರು ಪ್ರಭಾವ ಬೀರಿದ್ದಾರೆ. ದೇವರೊಂದಿಗಿನ ತಮ್ಮ ಪ್ರೇಮ ಸಂಬಂಧದ ವೈಯಕ್ತಿಕ ಸಾಧನೆಯ ಗುರಿಯೊಂದಿಗೆ, ಮಹಿಳೆಯರು ತಾಯಂದಿರಾಗಿ, ಪತ್ನಿಯರಾಗಿ ಕೂಡ ತಮ್ಮ ಕುಟುಂಬಕ್ಕೆ ನೆರವಾಗುತ್ತಿದ್ದರು.

ಖ್ಯಾತ ಸೂಫಿ ಉಲೇಮಾ ಮತ್ತು ಸೂಫಿ ಚಿಂತಕ ಇಬ್ನ್ ಅಲ್ ಅರಬಿ (೧೧೬೫-೧೨೪೦) ತಾನು ಹಿರಿಯರಾದ ಸೂಫಿ ಅನುಭಾವಿ ಮಹಿಳೆಯರಿಂದ ಪಡೆದ ಜ್ಞಾನ ಮತ್ತು ಪ್ರಭಾವವನ್ನು ಹೇಳಿಕೊಳ್ಳುತ್ತಾರೆ. ಒಬ್ಬರು ನಾಚಿಕೆಯ ಸ್ವಭಾವದ ಮರ್ಸೆನಾದ ಶಮ್ಸ್, ಇನ್ನೊಬ್ಬರು ಕೊರ್ಡೋವಾದ ಫಾತಿಮಾ. ಇವರಿಂದ ತಾವು ಪಡೆದ ಆಧ್ಯಾತ್ಮಿಕ ಅನುಭವಗಳನ್ನು ತನ್ನ ಗ್ರಂಥಗಳಲ್ಲಿ ಅನೇಕ ಕಡೆಗಳಲ್ಲಿ ಉಲ್ಲೇಖಿಸುತ್ತಾರೆ.

ಖ್ಯಾತ ಸೂಫಿ ಸಂತ ಅಬೂ ಯಜೀದ್ ಬಿಸ್ತಾಮಿಯವರನ್ನು ನಿಮ್ಮ ಗುರುಗಳು ಯಾರು ಎಂದು ಕೇಳಿದಾಗ, ನನ್ನ ಗುರುಗಳು ಒಬ್ಬಳು ವಯಸ್ಸಾದ ಮುದುಕಿ. ಅವಳನ್ನು ನಾನು ಮರುಭೂಮಿಯ ಹಾದಿಯಲ್ಲಿ ಭೇಟಿಯಾಗಿದ್ದೆ ಎಂದ ಇವರು, ಒಮ್ಮೆ ತಮ್ಮ ಆಧ್ಯಾತ್ಮಿಕ ಸಾಧನೆಯ ಬಲದಿಂದ ತನ್ನ ಮನೆಸಾಮಾನು ಸರಕುಗಳನ್ನು ಸಿಂಹದ ಬೆನ್ನಮೇಲೆ ಹೇರಿಕೊಂಡು ಹೋಗುತ್ತಿದ್ದರು. ಇದನ್ನು ಕಂಡ ಆ ಮುದುಕಿ ನನ್ನನ್ನು ಕರುಣೆಯಿಲ್ಲದ ನಿರಂಕುಶ ಪ್ರಭುವೆಂದು ಕರೆದು ಜರೆದು ಹಾದಿತೋರಿಸಿದ್ದರೆಂದು ಅಬೂ ಯಜೀದ್ ಬಿಸ್ತಾಮಿ ಹೇಳುತ್ತಾರೆ. 'ನೀನು ಸ್ವತಃ ಶಕ್ತಿಯುಳ್ಳವನಾಗಿ ಏನೊಂದೂ ಹೊರೆಯನ್ನು ಎತ್ತಿಕೊಳ್ಳದೆ, ದೇವರ ಸೃಷ್ಟಿಯ ಪ್ರಾಣಿಗೆ ಹಿಂಸೆ ನೀಡುತ್ತಿರುವ ನಿನಗೆ ನಾಚಿಕೆಯಾಗುವುದಿಲ್ಲವೇ? ಇಂತಹ ಪೊಳ್ಳು ಅಹಮ್ಮಿನ ಪ್ರದರ್ಶನದ ಪವಾಡದಿಂದ ನೀನು ಪಡೆಯುವುದಾದರೂ ಏನನ್ನು?' ಎಂದು ತರಾಟೆಗೆ ತೆಗೆದುಕೊಂಡಿದ್ದರು. ಮುದುಕಿಯ ಮಾತುಗಳು ಅವರಿಗೆ ಎಂದೂ ಬದುಕಲ್ಲಿ ಮರೆಯಲಾರದ ಮಹತ್ವದ ಆಧ್ಯಾತ್ಮಿಕ ಎಚ್ಚರದ ಮಾರ್ಗದರ್ಶನ ನೀಡಿತ್ತು.

**ಅಳು ಮತ್ತು ನಗೆ**

ದೈವಿಕ ಪ್ರೇಮದ ಮತ್ತು ಸತ್ಯ ದರ್ಶನದ ಹಾದಿಯಲ್ಲಿ ಕೆಲವು ಮಹಿಳಾ ಸೂಫಿಗಳು ಆನಂದಪರವಶರಾಗಿ

ಕುಣಿದರೆ ಇನ್ನು ಕೆಲವರು ಭಾವಪರವಶರಾಗಿ ಒಂದೇ ಸವನೆ ಅಳುತ್ತಿದ್ದರು. ರಾಬಿಯಾ ಅಲ್ ಅದವಿಯ ಅಳುವುದನ್ನು ಸೂಫಿಗಳಿಗೆ ತರವಲ್ಲವೆನ್ನುತ್ತಿದ್ದರು. ಸೂಫಿ ಸಂತ ಹಸನ್ ಅಲ್ ಬಸ್ರಿ ಒಮ್ಮೆ ದೇವರನ್ನು ನೆನೆದು ಒಂದೇ ಸವನೆ ಅಳುತ್ತಿದ್ದ ಸಂದರ್ಭದಲ್ಲಿ, ''ಗುರುಗಳೇ, ಅಳು ಎಂಬುದು ಆಧ್ಯಾತ್ಮಿಕ ದೌರ್ಬಲ್ಯವನ್ನು ತೋರಿಸುತ್ತದೆ. ನಿಮ್ಮ ಅಳುವನ್ನು ಹಿಡಿತದಲ್ಲಿಟ್ಟುಕೊಳ್ಳಿ, ಇಲ್ಲವಾದಲ್ಲಿ ನಿಮ್ಮೊಳಗೆ ಒಂದು ದೊಡ್ಡ ಸಮುದ್ರವೇ ಉಂಟಾಗಬಹುದು, ಅದರೊಳಗೆ ನಿಮ್ಮ ಹೃದಯವನ್ನು ಹುಡುಕುವುದು ಕಷ್ಟವಾಗಬಹುದು. ಕಟ್ಟಕಡೆಗೆ ನಿಮಗೆ ಹೃದಯವೇ ಕಳೆದುಹೋದಂತಾಗಲೂಬಹುದು'' ಎಂದಿದ್ದರು.

ಪರ್ಶಿಯನ್ ಮಹಿಳಾ ಸೂಫಿ ಶಾವನಾ ತುಂಬ ಅಳುತ್ತಿದ್ದರು. ಹೆಂಗಸರು, ಗಂಡಸರು ಅವರ ಪದ್ಯಗಳನ್ನು ಮತ್ತು ಮಧುರವಾದ ಪ್ರವಚನಗಳನ್ನು ಆಲಿಸಲು ನೂರಾರು ಸಂಖ್ಯೆಯಲ್ಲಿ ಸೇರುತ್ತಿದ್ದರು. ''ಪ್ರಿಯತಮನನ್ನು ತುಂಬಿಕೊಳ್ಳಲು ಸಾಧ್ಯವಾಗದಂತೆ ಕಣ್ಣುಗಳು ಅಶುದ್ಧವಾಗಿವೆ. ಆದರೂ ಅವನನ್ನು ನೋಡುವುದಕ್ಕೆ ತವಕಿಸುತ್ತವೆ. ಇಂತಹ ಕಣ್ಣುಗಳು ಕಣ್ಣೀರನ್ನು ಸುರಿಸಿ ಶುದ್ಧೀಕರಿಸಿಕೊಳ್ಳದೆ ಅವನನ್ನು ನೋಡಲು ಲಾಯಕ್ಕಾಗಿರುವುದಿಲ್ಲ'' ಎನ್ನುತ್ತಿದ್ದರು ಅವರು. ಮಾತ್ರವಲ್ಲ, 'ಕಣ್ಣೀರಿನಿಂದ ಮಬ್ಬಾಗಿದ್ದರೂ, ಪ್ರಿಯತಮನ ದಿವ್ಯ ತೇಜಸ್ಸಿನ ಪ್ರಖರತೆಯಿಂದ ಬೆಳಗುತ್ತದೆ' ಎಂದು ಹೇಳಿದ್ದರು. ತನ್ನ ಬದುಕಿನಲ್ಲಿ ಶಾವನಾ ತನ್ನ ಗೆಳೆಯ (ದೇವರ) ಸನಿಹದ ಸಾಕ್ಷಾತ್ಕಾರವನ್ನು ಅನುಭವಿಸಿದ್ದರೆನ್ನಲಾಗಿದೆ. ಇದು ಅವರ ಪತಿ ಮತ್ತು ಮಗನ ಮೇಲೆ ಗಾಢ ಪರಿಣಾಮವನ್ನು ಬೀರಿತ್ತು. ಶಾವನಾ ತನ್ನ ಕಾಲದ ಅತ್ಯಂತ ಒಳ್ಳೆಯ ಅಧ್ಯಾಪಕಿಯಾಗಿಯೂ, ಮಾರ್ಗದರ್ಶಿಯಾಗಿಯೂ ಹೆಸರು ಗಳಿಸಿದ್ದರು.

ಸೂಫಿ ಪಂಥದ ಮಹಿಳೆಯರ ಹೆಚ್ಚಿನ ವಿವರಗಳು, ಸಾಧನೆಗಳು, ಅನುಭವಗಳು, ಸಾಹಿತ್ಯವೆಲ್ಲವೂ ಬಾಯ್ದೆರೆಯಲ್ಲೇ ಉಳಿದಿದ್ದು, ಮುಖ್ಯವಾಗಿ ಮಹಿಳೆಯರು ತಮ್ಮ ಆಧ್ಯಾತ್ಮಿಕ ಅನುಭವಗಳನ್ನು ಬರೆದಿಡುವುದಕ್ಕೆ ಆಸಕ್ತಿ ತೋರದಿರುವುದು ಕಂಡುಬರುತ್ತದೆ. ಕೆಲವೇ ಕೆಲವು ಸೂಫಿ ಮಹಿಳೆಯರು ಮಾತ್ರ ತಮ್ಮ ಅನುಭಾವಿ ಜ್ಞಾನವನ್ನು ಪದ್ಯಗಳ ಮೂಲಕ, ಬರಹಗಳ ಮೂಲಕ ಪ್ರಕಟಿಸಿದ್ದಾರೆ. ಪಾಶ್ಚಿಮಾತ್ಯ ಬರಹಗಾರರು ಇವುಗಳ ಮೇಲೆ ಆಸಕ್ತಿಹೊಂದಿ ಅನುವಾದಿಸಿ ಪ್ರಕಟಿಸಿದ್ದರಿಂದ ವಿಶ್ವದ ಗಮನ ಸೆಳೆಯುತ್ತಿದೆ.

**ಸೂಫಿಗಳ ಗುರಿ ಸಾಧನೆ**

ಹಿಂದೂ ವಿರಕ್ತಿ, ಕ್ರೈಸ್ತರ ಸನ್ಯಾಸದಂತೆ ಸೂಫಿ ಪಂಥದಲ್ಲಿ ಕೌಟುಂಬಿಕ ಜೀವನವು ಪಾರಮಾರ್ಥಿಕ ಅಥವಾ ಅಧ್ಯಾತ್ಮ ಸಾಧನೆಗಳಿಗೆ ಅಡ್ಡಿಯಾಗುವುದಿಲ್ಲ. ಪತಿ ಪತ್ನಿಯರ ನಡುವಿನ ಸಂಬಂಧ, ಮಕ್ಕಳು, ಹೆತ್ತವರು, ಕುಟುಂಬದ ಇತರ ಸದಸ್ಯರು ಇವೆಲ್ಲವನ್ನೂ ದೇವರ ಅನುಗ್ರಹವೆಂದು ತಿಳಿಯಲಾಗುತ್ತದೆ. ಈ ಸಂಬಂಧಗಳ ಭಾರದ ಆಳದಲ್ಲಿ ದೈವಿಕ ಪ್ರೇಮದ ಸಾಧನೆಯ ಯಶಸ್ಸು ಅಡಗಿದೆ ಎಂದು ಸೂಫಿಗಳು ನಂಬುತ್ತಾರೆ.

ಅಂತಿಮವಾಗಿ ಪವಿತ್ರ ಬೆಳಕಿನಡಿಯಲ್ಲಿ ಹೆಣ್ಣು ಗಂಡು ಜೊತೆಯಾಗಿಯೇ ನಿಲ್ಲಬೇಕಾಗುತ್ತದೆ. ಆದುದರಿಂದ ಪರಸ್ಪರ ಹೊಂದಾಣಿಕೆಯ ಪಾಲುದಾರಿಕೆ ಬದುಕಿನಲ್ಲಿ ತೆರೆದುಕೊಳ್ಳಬೇಕು. ಪರಸ್ಪರರ ಅನನ್ಯತೆಯನ್ನು ಗುರುತಿಸಿ ಕೊಳ್ಳುವುದು, ಗೌರವಿಸುವುದು ಬಹಳ ಮುಖ್ಯ. ಪುರುಷರ ಗಟ್ಟಿನಿಲುವು, ಶಕ್ತಿ, ಸಾಧನೆಯಲ್ಲಿ ಮಹಿಳೆಯರದ್ದೂ ಸಮಾನ ಪಾಲಿದೆ. ಪರಸ್ಪರರಲ್ಲಿ ದೈವತ್ವವನ್ನು ಕಂಡುಕೊಂಡು, ಒಬ್ಬರಿಗೊಬ್ಬರು ದೈವತ್ವ ಸಾಧನೆಯನ್ನು ಸಾಧಿಸುವುದಕ್ಕೆ ಪೂರಕವಾದ ಹಾದಿಯನ್ನು ಕಂಡುಕೊಳ್ಳುವುದಕ್ಕೆ ನಮ್ಮ ಮಿತಿಗಳೆಲ್ಲವೂ ಕರಗಿಹೋಗಬೇಕು. ಸೂಫಿ ಅನುಭಾವಿಯ ಪರಮೋಚ್ಚ ಗುರಿಯನ್ನು ಹೀಗೆ ತಲುಪುವುದು ಸಾಧ್ಯವಾಗುತ್ತದೆ. ''ಪೂರ್ವ ಪಶ್ಚಿಮ ಗಳೆಲ್ಲವೂ ಅವನದೇ. ಎತ್ತ ನೋಡಿದರೂ ನಿಮಗೆ ದೇವರೇ ಕಾಣಿಸುತ್ತಾನೆ, ಎಲ್ಲವೂ ನಶ್ವರವಾಗುತ್ತದೆ, ಅವನ ದಿವ್ಯ ರೂಪವನ್ನು ಹೊರತುಪಡಿಸಿ.'' (ಕುರಾನ್ : ೨ : ೧೧೫).

ಫಕೀರ್ ಮುಹಮ್ಮದ್ ಕಟ್ಪಾಡಿ
ನಂ. ೫, 'ಜೈನಬ್ ಅಮೀನ್', ೧ನೇ ಮುಖ್ಯರಸ್ತೆ, ಚಿನ್ನಪ್ಪ ಬಡಾವಣೆ
ಕಾವಲ್ ಭೈರಸಂದ್ರ, ಆರ್.ಟಿ. ನಗರ, ಬೆಂಗಳೂರು - ೫೬೦ ೦೩೨

## ಒಂದು ಸುಸೂತ್ರ ಪತ್ರ



ಗುರಿಯಿಟ್ಟು ಕುದುರೆಯೊತ್ತಿದರೆ ಮಾತ್ರ ಶಿಕಾರಿ
ಸಾಧ್ಯ; ಬಿದ್ದ ಮಿಕ ಚೀರಿಕೊಂಡರು ಕೂಡ
'ಸಾವು' ನಗದೇ ಇರದು; ಗುರಿಯಿರುವ ಸಲುವಾಗಿ
ಮಿಕವಿರಬೇಕು; ಪಿಸ್ತೂಲಲ್ಲಿ ಗುಂಡಿರಲೆ ಬೇಕು.

ಗುರಿಯಿದ್ದರೂ ಮಿಕವಿದ್ದರೂ ಗುಂಡಿದ್ದರೂ
ಇರಲೇಬೇಕು ಫಲಕ್ಕಾಗಿ ಕಾದಿರುವಂಥ ಮನಸ್ಸು
ಮನಸ್ಸಿಗೂ ಬೇಕೇ ಬೇಕು 'ನಾನು' ಎಂಬ ಗುರಿಕಾರ
ಮತ್ತು ನೀನು; ಒಂದು ಗುರಿ; ತಪ್ಪು ಮಾಡುವಂತಿಲ್ಲ –

ತಪ್ಪಿಗೆ ಗುರಿಯಿಡುವ ಬುದ್ಧಿಯಿರಬೇಕಲ್ಲ!
ಬುದ್ಧಿ ಬೆಂಬಲದಿಂದ ಸಿದ್ಧವಿರಬೇಕು ಪಿಸ್ತೂಲು.
ಗುಂಡು–ಗುರಿ–ಮತ್ತು ತಿಕ್ಕಾಟಕ್ಕೆ ಬಲ–ದ್ವೇಷ!
ಎರಡಕ್ಕೂ ಬೇಕೆ ಬೇಕು ಇಬ್ಬಗೆಯ ಸ್ವಾರ್ಥ–ವೇಷ.

ಗುರಿಯೆಂಬುದೊಂದು ಸ್ವಂತ ; ಫಲವೆಂಬುದು ಸ್ವಾರ್ಥ.
ಬಾಬರಿ ಮಸೀದಿಗೆ ಬಾಬರಿ ಮಂದಿರವೆಂದಿದ್ದರೆ
ಜಗಳ ತಪ್ಪಿ, ಪಾರ್ಲಿಮೆಂಟಿನ ಮೇಲೆ ನಗುತ್ತಿದ್ದ ಚಂದಿರ!



ಕ. ವೆಂ. ರಾಜಗೋಪಾಲ್
ಬೆಂಗಳೂರು

# ಸಾವಿರ ರೂಪಾಯಿ ನೋಟು



ಶೆಡ್ಡು ಹೋಟ್ಲು ತಿರುಮಲಾಪುರಕ್ಕೆ ಪದ್ಮಾವತಿ ದ್ದಂತೆ. ಊರಿಗೆಲ್ಲ ಒಂದೇಯ ಇರೋದು. ಅದರ ಲೀಕ ದೇವರುಗಳ ತರಹಾನೆ, ದೇವನೊಬ್ಬ ನಾಮ ವು ಅಂತಾರಲ್ಲ ಹಂಗೆ. ಮಾಲೀಕ ಶಂಭುಲಿಂಗಣ್ಣ ದರೂ ಅವನೇಯ, ಹೋಟೆಲ್ ಶಂಭುಲಿಂಗ ದ್ರೂ ಅವನೇಯ. ಅವನೇ ಕುಕ್ಕು, ಸೆಪ್ಲೈಯರ್ರು, ರರ್ ಎಲ್ಲಾನೂವೆ. ಈ ಯಾವ ಹೆಸರಿನಿಂದ ದರೂ ಓಗೊಡೋನು ಸಾಕ್ಷಾತ್ ಶಂಭುಲಿಂಗಣ್ಣನೇ. ಈ ಹೋಟ್ಲುಗೂ ಒಂದು ಹೆಸರು ಅಂತ ಇದೆ. ರಶೈವ ಕಾಫಿ ಹೋಟ್ಲು ಅಂತ ತಗಡು ಬೋರ್ಡಿನಲ್ಲಿ ದು ಹಾಕ್ಸವ್ನೆ ಶಂಭುಲಿಂಗಣ್ಣ. ಗಿರಾಕಿಗಳಿಗ್ಯಾರಿಗೂ ರ ಹೆಸರು ಗೊತ್ತಿಲ್ಲ. ಅವರಿಗೇನಿದ್ರೂ ಅದು ಟ್ಲು! ಹೆಸರಿನಲ್ಲಿ 'ಕಾಫಿ' ಇದ್ದರೂ ಸಿಗುವುದು ಟೀ ತ್ರ ! ಟೀಪಾರ್ಟಿ ಅಂತ ಕರೆದು ಟೀ ಒಂದನ್ನು ಬಿಟ್ಟು ರೆ ಯಾವುಯಾವುದೋ ಪಾನೀಯ ಕೊಡಲ್ವೆ ಗೇನೆ ಇದೂನೂವೆ.

ಶಂಭುಲಿಂಗಣ್ಣನ ದಿನ ಪ್ರಾರಂಭ ಆಗುವುದು ನ್ನೂ ಕತ್ತಲಿದ್ದಾಗೇನೆ. ಕೋಳಿ ಕೂಗುವ ಹೊತ್ತಿಗೇನೆ ಕಿರ್ಭೂತನಾಗುತ್ತಾನೆ. ''ಸಂಬುಲಿಂಗಣ್ಣ ಅಂದ್ರೇನು ದ್ಕಂಡಿದೀಯ... ಕಿಲೀನು ಅಂದ್ರೆ ಕಿಲೀನು. ತ್ಮಂಗಲ್ಲ'' ಅಂತ ಹಳ್ಳಿ ಜನ ತಿಳ್ಕಳ್ಳಿ ಅನ್ನೋ ಸೆಯಿಂದ ತುಂಡು ಪಂಚೆ ಸುತ್ತಿಕೊಂಡು ಹಣೆ, ಕೈ, ಗೆಲ್ಲ ಎದ್ದು ಕಾಣುವಂತೆ ವಿಭೂತಿ ಪಟ್ಟೆ ಬಳಿದು ಳ್ಳುತ್ತಾನೆ. ಗಂಧದ ಕಡ್ಡಿ ಹಚ್ಚಿ ಗಲ್ಲಾಪೆಟ್ಟಿಗೆ (ಹಳೇ ಜಿನ ಡ್ರಾಯರ್ರು), ಸಾಲದ ಪುಸ್ತಕ, ಗೋಡೆ ಲಿರೋ ಓಬೀರಾಯನ ಕಾಲದ ಹೊಗೆ ಹಿಡಿದ ಶ್ವರನ ಫೋಟೊಗಳಿಗೆ ಭಯಭಕ್ತಿಗಳಿಂದ ಬೆಳಗಿ ಜಿನ ಮೇಲಿರುವ ತೂತಿಗೆ ಸಿಕ್ಕಿಸುತ್ತಾನೆ. ಅಲ್ಲಿಗೆ ನ ಹೋಟ್ಲು ಬಾಗಿಲು ತೆಗೆದಂತೆ. ಅವತ್ತು ಯಿತು ಅಂದರೆ...

'ಸಂಬುಲಿಂಗಣ್ಣ ನಾಕು ಟೀ ಆಕು. ಸೂಡಾಗಿರಲಿ. ಕೋ ಸಳಿ ಇಡ್ದಂಗಾಯ್ತದೆ' ಎಂದು ಒಬ್ಬ ಗಿರಾಕಿ ಳಿದ್ದು ಶಂಭುಲಿಂಗಣ್ಣನವರ ಕಿವಿ ಮೇಲೆ ಬಿದ್ದು ಟೀ ದು ಇಡುತ್ತಿರುವಾಗ್ಗ... ಉದರಿ ಗಿರಾಕಿ ನಿಂಗೇಗೌಡ ಕುರಿನಿಂಗ ಅವರ ಪಾದವು ಅಲ್ಲಿಗೆ ದಯಮಾಡಿಸಿ ಂಗೂ ಒಂದು ಟೀ ತತ್ತಾ'' ಎಂದು ಆರ್ಡರ್ ಡಿದರು. ಉದರಿ ಗಿರಾಕಿಯಾದವನು ಕೈ ಸೆಯುತ್ತಾ, ಹಲ್ಲುಗಿಂಜುತ್ತಾ ದೀನ ಭಾವದಿಂದ ಬೇಡುವ ಸಂಪ್ರದಾಯ ಮಾಯವಾಗಿ 'ಆರ್ಡರ್' ಕೃತಿ ಬಂದದ್ದು ಶಂಭುಲಿಂಗಣ್ಣನ ಅಸಮಾಧಾನಕ್ಕೆ ಣೀಭೂತವಾಯಿತು. ಕುರಿನಿಂಗ ಮಹಾಶಯರೇನು ಕೆಂದೇ ಈ ರೀತಿ ವರ್ತಿಸಿರಲಿಲ್ಲ. ಚುನಾವಣೆಯಲ್ಲಿ ದ್ದ ಒಂದು ಸಾವಿರ ರೂಪಾಯಿಯ ನೋಟು ರ ಚೆಡ್ಡಿ ಜೇಬಿನಲ್ಲಿ ಕುಳಿತು ಹೀಗೆ ಮಾಡಿಸಿತ್ತು. ಪಿದ್ದಾಗ ಬಡವರಿಗೆ ಬರುವ ತತ್ಕಾಲೀನ ಧಿಮಾಕಿನ ಇದಾಗಿತ್ತು ಅಷ್ಟೆ. ಈ ಆರ್ಡರ್ ಧಿಮಾಕು ಕುರಿನಿಂಗನ ಜೇಬಿನದ್ದು ಎಂಬುದು ಶಂಭುಲಿಂಗಣ್ಣನವರಿಗೆ ಗೊತ್ತಿರಲಿಲ್ಲವಾಗಿ – ''ಉದರಿ ಕೊಡಾಕಿಲ್ಲ'' ಎಂದು ಖಡಾಖಂಡಿತ ಹೇಳಿದರು.

''ಅಯ್ಯೊ ಮಾರಾಯ್ನ... ಕ್ಯಾಸು ಕ್ಯಾಸೇ ಬಿಸಾಕ್ತೀನಿ ತಗೊಂಬಾ. ನಿನ್ನ ಉದರಿ ಯಾವನಿಗ್ಬೇಕು'' ಎಂದರು ಕುರಿನಿಂಗ ಮಹಾಶಯರು.

ಹಳೆ ಬಾಕಿಯೇ ನೂರ ಹನ್ನೆರಡು ರೂಪಾಯಿ ಇತ್ತು. ಅದನ್ನು ತೀರಿಸಿದರೆ ಮಾತ್ರ ಟೀ ಎಂಬುದು ಶಂಭುಲಿಂಗಣ್ಣನವರ ಮಂತ್ರ ಆಗಿತ್ತು.

''ನಿನ್ ಋಣ ಯಾವನಿಗ್ಬೇಕು... ಅದ್ನೂ ಕೊಡ್ತೀನಿಕನ'' ಎಂದ ಕುರಿನಿಂಗ ಮಹಾಶಯರು, ಸ್ವಲ್ಪ ಹೊತ್ತು ತಡೆದು ''ಅದೆಂಗೆ ನೂರನ್ನೆರಡು ರೂಪಾಯಿಯಾಯ್ತು?'' ಎಂಬುದಾಗಿ ತಕರಾರು ಮಾತು ಎತ್ತುವಂತೆ ಪ್ರೇರೇಪಿಸಿತು ಚೆಡ್ಡಿ ಜೇಬು.

ದೇವರ ತಲೆ ಮೇಲಿನ ಹೂವು ತಪ್ಪಿದರೂ ಕುರಿನಿಂಗ ಮಹಾಶಯರಿಗೆ ಟೀ ನೈವೇದ್ಯ ಇರಲೇ ಬೇಕಾಗಿತ್ತು. ಸದಾ ಖಾಲಿ ಜೇಬಿನ ಸರದಾರರಾದ ಇವರು ಹೇಗೊ ಗಿಲೀಟು ಮಾಡಿ ಶಂಭುಲಿಂಗಣ್ಣನ ದಯದಿಂದ, ಸುಮಾರು ದಿನಗಳಿಂದ, ತಮ್ಮ ಬಾಯಿ ಚಪಲ ಶಮನಗೊಳಿಸಲು ಯಶಸ್ವಿಯಾಗಿದ್ದರಿಂದ ಕಿರ್ದಿ ಲೆಕ್ಕದಲ್ಲಿ ದಿನೇ ದಿನೇ ಏರುತ್ತಿತ್ತು ಎಂಬುದನ್ನು ಕೆಂಪು ನೋಟಿನ ಮಾಯೆ ಮರೆಮಾಡಿತ್ತು.

''ಹಂಗಾರೆ ನಾನು ಸುಳ್ಳು ಹೇಳ್ತಿದೀನಿ ಅನ್ನು'' ಎಂದು ಕೇಳಿದ ಶಂಭುಲಿಂಗಣ್ಣ. ಅದು ಅವನ ನಾಲಿಗೆಯ ಪ್ರಶ್ನೆ ಆಗಿದ್ದರಿಂದ ವ್ಯಗ್ರನಾಗಿಯೂ ಇದ್ದ.

''ಓಹೋಹೋ... ನಿನ್ದ್ ಮಾತ್ರ ನಾಲ್ಗೆ ನಮ್ದೇನು ಯಕ್ಕಡವೇನಯ್ಯ'' ಎಂದು ಎಗರಿಬಿದ್ದರು ಕುರಿನಿಂಗ ಮಹಾಶಯರು.

ಎಲುಬಿಲ್ಲದ ನಾಲಿಗೆಯ ಮಧ್ಯಸ್ಥಿಕೆಗೆ ಕರೆಸಿತು ಚೆಡ್ಡಿ ಜೇಬು.

ಇವರಿಬ್ಬರ ಮಾತಿನ ವೈಖರಿಯಿಂದ ಆನಂದ ತುಂದಿಲರಾಗಿದ್ದ ಗಿರಾಕಿಗಳಲ್ಲಿ ಒಬ್ಬಾತ ''ಕುರಿನಿಂಗನ ಮಾತ್ನೂ ತೆಗೆದು ಆಕೋ ಅಂಗಿಲ್ಲ. ಸಂಬುಲಿಂಗಣ್ಣ ನೀನು ನೂರನ್ನೆರಡಾಗದೆ ಅಂತೀಯೆ. ಅವ್ನು ಅಸ್ಟಾಗಿಲ್ಲ ಅಂತಾನೆ. ಅದೆಂಗೆ ಅಂತ ವಸಿ ಲೆಕ್ಕ ಕೊಡು'' ಎನ್ನುತ್ತಾ ಯಾರ ಆಹ್ವಾನವೂ ಇಲ್ಲದೆ ಯಜಮಾನನ ಸ್ಥಾನದಲ್ಲಿ ರಾರಾಜಿಸಿತು.

**ಎಚ್. ಎಲ್. ಕೇಶವಮೂರ್ತಿ**



''ಲೆಕ್ಕ ಬರ್ದಿವ್ನಿ. ತತ್ತೀನಿ ತಡೀರಿ'' ಎಂದು ಒಳಕ್ಕೆ ಹೋದ ಶಂಭುಲಿಂಗಣ್ಣ ಹರಿದು ಚೂರು ಚೂರಾಗುವ ಸ್ಥಿತಿಯಲ್ಲಿದ್ದ ಕಿರ್ದಿ ಪುಸ್ತಕದೊಂದಿಗೆ ಹೊರಬಂದ. ಅದನ್ನು ತೆಗೆಯುತ್ತಾ ''ನೋಡಣ್ಣ ಇದು ಅವನ ಲೆಕ್ಕ. ಕುರಿನಿಂಗ ಸರಿ ತಾನೆ. ನೋಡಿ'' ಎನ್ನುತ್ತಾ ಯಜಮಾನಿಕೆ ವಹಿಸಿಕೊಂಡವನ ಮುಖದ ಮುಂದೆ ಹಿಡಿದ.

ಲೆಕ್ಕ ಸರಿಯಾಗಿತ್ತು. ಸಮ್ಮತಿಸಲು ಚೆಡ್ಡಿ ಜೇಬು ಅಡ್ಡಿ ಮಾಡಿತು! ''ಅವನು ಬರ್ದುಬುಟ್ಟ ಅಂತಾ ನೂರನ್ನೆರಡು ಆಗೋಯ್ತದ. ಬರ್ಕತ್ತನಪ್ಪ. ಸಾವಿರ ಬರ್ಕತ್ತನೆ. ಪೆನ್ನದೆ ಆಳೆ ಅದೆ ಬರ್ಕಂತನೆ' ಎಂದು ಮೊಂಡು ವಾದಕ್ಕಿಳಿಸಿತು ಚೆಡ್ಡಿ ಜೇಬು. ಅದನ್ನು ಒಪ್ಪದ ತಾತ್ಕಾಲಿಕ ಯಜಮಾನ ''ಲೋ, ಕುರಿನಿಂಗ ಈಗಂಟ್ ನ್ಯಾಯ ಬ್ಯಾಡಕಣ. ಕೊಟ್ಬುಡು'' ಎಂದು ತೀರ್ಮಾನ ಹೇಳಿ ''ಸಂಬುಲಿಂಗಣ್ಣ ಇವುನ್ಗೆ ಟೀ ತಂದ್ಕೊಡು'' ಎಂದನು.

ತಂದಿಟ್ಟ ಟೀಯ ಸ್ವಾದ ಹೀರುತ್ತಾ ಕುರಿನಿಂಗ ಮಹಾಶಯರು ಧಿಮಾಕಿನಿಂದಲೇ ''ಒಟ್ಟು ಎಷ್ಟಾಯ್ತು'' ಎಂದು ಕೇಳಿದರು.

ಮಹಾಶಯರ ಈ ಪ್ರಶ್ನೆ ಶಂಭುಲಿಂಗಣ್ಣನಿಗೆ ಎಲ್ಲಿಗೋ ಮೆಣಸಿನಕಾಯಿ ಗಿಡಿದ ಹಾಗಾಯಿತು.

''ಯಾಕೆ ನಿನಗೆ ಗೊತ್ತಿಲ್ವ ?''

''ಲೆಕ್ಕ ಲೆಕ್ಕ ಅಂದಲ್ಲ... ಹೇಳುಮಂತೆ''

''ಹಳೆ ಬಾಕೀದು ನೂರನ್ನೆರಡು, ಈಗಿನ್ದು ಎರ್ಡು.''

''ಅದು ಗೊತ್ತದೆ ಕನ... ಒಟ್ಟು ಎಸ್ಟಾಯ್ತು ಅಂದೆ''

''ನೂರದ್ನಾಲ್ಕು''

''ಅಷ್ಟೇ ತಾನೇಯ'' ಎಂಬುದಾಗಿ ಉದಾಸೀನದಿ[illegible] ಹೇಳುತ್ತಾ ಬಾಯಿಗೆ ಬೀಡಿ ಇಟ್ಟು ಬೆಂಕಿಕಡ್ಡಿ ಗ[illegible] ಹಚ್ಚಿಕೊಂಡು ಹೊಗೆ ಎಳೆದು ಬಿಡುತ್ತಾ ಬೀಡಿಯನ್ನು ಬ[illegible] ತುದಿಯ ಹಲ್ಲಿನಿಂದ ಕಚ್ಚುತ್ತಾ

''ಎಲ್ಲಾನೂ ಮುರ್ಕೊ'' ಎನ್ನುತ್ತಾ ನೀಳವಾಗಿ ಮಡಿ[illegible] ಕೆಂಪುನೋಟನ್ನು ಎಡಗೈ ತೋರುಬೆರಳು ಹಾಗೂ ಮ[illegible] ಬೆರಳ ಮಧ್ಯೆ ಹಿಡಿದು ತಾತ್ಸಾರವಾಗಿ ಶಂಭುಲಿಂಗ[illegible] ಮುಂದೆ ಹಿಡಿದರು.

ಸಾವಿರ ರೂಪಾಯಿ ನೋಟಿಗೆ ಚಿಲ್ಲರೆ ಎಲ್ಲಿಂದ ತಂದಾ[illegible] ಪ್ರೊಪ್ರೈಟರ್ - ಕಂ - ಸಪ್ಲೈಯರ್ - ಕಂ - ಕ್ಲೀನರ್ ಆಗ[illegible] ಶಂಭುಲಿಂಗಣ್ಣನವರು. ಬೆವತರು. ಬೇರೆ ನೋ[illegible] ನೀಡುವಂತೆ ಒತ್ತಾಯಿಸಿದರು.

''ಯಾಕೆ ನೋಟಿಗೇನಾಗಿದಾತು... ಇಡಿಯಾಕಿಲ್[illegible] ಇಡಿಯಾಕಿಲ್ಲ ಅನ್ನು... ಟೇಸನು ಟೇಸನ್ ಕಾಣಬೇಕಾಯ್ತ[illegible] ಎಂದು ದರ್ಪದ ದನಿಯಲ್ಲಿ ಹೇಳಿದರು ಕುರಿನಿ[illegible] ಮಹಾಶಯರು.

''ಸಾವಿರ ರೂಪಾಯಿ ನೋಟಿಗೆ ಚಿಲ್ರೆ ಎಲ್ಲಿಂದ ತ[illegible] ಶಂಭುಲಿಂಗಣ್ಣ ಗೋಳಾಡಿದ.

''ಮಂತೆ... ಮ್ಯಾಕೇ ಆರಿ ಕೆಳಕ್ಕೆ ಬೀಳ್ತಿದ್ದಲ್ಲಾ... ತಗೊ [illegible] ಕಾಸ... ಚಿಲ್ಲರೆ ಕೊಡು... ಇಲ್ಲ ಇವತ್ತಿನ ಟೀದ್ನೂ ಲೆಕ್ಕಕ್ಕೆ ಬರ್ಕೊ...

ಎಚ್. ಎಲ್. ಕೇಶವಮೂರ್ತಿ
ನಂ. ೧೩, ಹೌಸಿಂಗ್ ಬೋರ್ಡ್ ಅಪಾರ್ಟ್‌ಮೆಂಟ್ಸ್, ಗುತ್ತಲು
ಮಂಡ್ಯ - ೫೭೧ ೪೦೩



ಶ್ರೀ ಸದಾಶಿವ ಯೋಗಿಗಳು
ಸಂಸ್ಥಾಪಕ ಅಧ್ಯಕ್ಷರು

# ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ)

ಶ್ರೀ ಶಿವಾನಂದ ಯೋಗಾಶ್ರಮ, ಹಂಪಿ-583 239, ಹೊಸಪೇಟೆ ತಾ॥, ಬಳ್ಳಾರಿ ಜಿಲ್ಲೆ

ಕಳೆದ ಹಲವು ವರ್ಷಗಳಿಂದ ಆಧ್ಯಾತ್ಮಿಕತೆಯ ವೈಜ್ಞಾನಿಕ ಹಿನ್ನೆಲೆಯನ್ನು ತರ್ಕಬದ್ಧವಾಗಿ ವಿಶ್ಲೇಷಣೆ ಮಾಡುತ್ತ ಬಂದಿರುವ ಶ್ರೀ ಸದಾಶಿವಯೋಗಿಗಳು ಮೂಢ ನಂಬಿಕೆಗಳ ವಿರುದ್ಧ ಅವಿರತ ಹೋರಾಟದಲ್ಲಿ ತೊಡಗಿಕೊಂಡಿದ್ದಾರೆ. ಹಂಪೆಯಲ್ಲಿ ನೆಲೆಸಿರುವ ಇವರು ಹೋಮಿಯೋ ವೈದ್ಯರಾಗಿ ಜನಸಾಮಾನ್ಯರಿಗೆ ನೆರವಾಗುತ್ತಿದ್ದಾರೆ. 'ಸದಾಶಿವ ಸೂತ್ರಗಳು' ಎಂಬ ಹೆಸರಿನಲ್ಲಿ ತಮ್ಮ ವಿಚಾರಗಳನ್ನು ಪ್ರಸ್ತುತ ಪಡಿಸುತ್ತಾರೆ. ಹಲವು ಗ್ರಂಥಗಳನ್ನು ರಚಿಸಿದ್ದಾರೆ.

## ಕೆಲವು ಸದಾಶಿವ ಸೂತ್ರಗಳು ('ಯೋಚಿಸಿನೋಡಿ' ಪುಸ್ತಕದಿಂದ ಆಯ್ದ ಭಾಗಗಳು)

- ಧ್ಯಾನವು ಪರರಿಗಾಗಿ ಅಲ್ಲ, ಪರರನ್ನು ಮೆಚ್ಚಿಸಲೂ ಅಲ್ಲ ಹಾಗೂ ಇದು ಪರರಿಂದ ಪಡೆಯುವುದೂ ಅಲ್ಲ. ಸದಾ ನಾನು-ತನ್ನದು ಎಂಬ ಅಹಂಭಾವದಿಂದ ಕೂಡಿದ ಅಶಾಂತಿಮಯ ಜೀವನದಿಂದ ಬಿಡುಗಡೆ ಹೊಂದಲು; ಮೌನದಿಂದ ಅಂತರ್ಮುಖನಾಗಿ ತನ್ನ ಅಂತರಂಗದ ಶಾಂತಿಧಾಮದತ್ತ ಸಾಗುವ ಇದೊಂದು ಸೂಕ್ಷ್ಮ ಸಾಧನೆ.
- ಲೋಕದಲ್ಲಿ ವಿದ್ಯೆಗಳು ಅನೇಕ, ಅನೇಕಾನೇಕ. ಆದರೆ ಇವುಗಳನ್ನು ಅರ್ಥಮಾಡಿಕೊಳ್ಳಬಲ್ಲ ಬುದ್ಧಿ ಮಾತ್ರ ಎಲ್ಲರಲ್ಲಿ ಒಂದೇ ಆಗಿರುತ್ತದೆ. ವಿದ್ಯೆಯೇ ಬೇರೆ, ಬುದ್ಧಿಯೇ ಬೇರೆ. ಬುದ್ಧಿಯು ಅಖಂಡ, ವಿದ್ಯೆಯು ನಿಖಂಡ (ಸೀಮಿತ); ಅಂದ ಬಳಿಕ ವಿದ್ಯಾವಂತರೆಲ್ಲಾ ಬುದ್ಧಿವಂತರೇ ಅನ್ನಲು ಸಾಧ್ಯವಿಲ್ಲ.
- ಲೋಕದಲ್ಲಿ ಬುದ್ಧನ ಅನುಯಾಯಿಗಳು ತಾವೆಂದು ಹೇಳಿಕೊಳ್ಳುವವರು ಕೋಟ್ಯಾನುಕೋಟಿ. ಆದರೆ ಈ ಬುದ್ಧನ ಶಿಷ್ಯರಲ್ಲಿ ಒಬ್ಬನಾದರೂ ಆ ಬುದ್ಧನಾಗಿ ಈವರೆಗೂ ತೇಲಿ ಬರಲೇ ಇಲ್ಲ. ಇದಕ್ಕೆ ಕಾರಣ, ಇವರೆಲ್ಲಾ ಆ ಬುದ್ಧನನ್ನು ಬರೀ ಕೊಂಡಾಡುವುದರಲ್ಲೇ ನಿರತರಾಗಿದ್ದಾರೆಯೇ ವಿನಾ ಆ ಮಹಾನುಭಾವನ ತತ್ವಪಾಲಕರಾಗಿ ಯಾರೊಬ್ಬರೂ ಬುದ್ಧನಾಗಲೇ ಇಲ್ಲ.
- ಎಲ್ಲಾ ಸ್ವಾಮೀಜಿಯವರುಗಳ ಆಶೀರ್ವಚನಗಳನ್ನು ಕೇಳಲು ಬಹು ಸೊಗಸು, ಬಹು ಇಂಪು. ಆದರೆ ಅವುಗಳನ್ನು ಪಾಲಿಸಲು, ಪಾಮರರೇ ಆದ ನಮ್ಮಿಂದ ಮಾತ್ರವಲ್ಲ ಸ್ವಯಂ ಅವರಿಂದಲೂ ಸಾಧ್ಯವಿಲ್ಲ.
- ಕತ್ತಲೆಯಲ್ಲಿ ಕುಳಿತು, ''ಕರುಣಾಳು ಬಾ ಬೆಳಕೆ ಮುಸುಕಿದೀ ಮಬ್ಬಿನಲ್ಲಿ ಕೈಹಿಡಿದು ನಡೆಸೆನ್ನನು'' ಎಂದು ದಿನವೆಲ್ಲಾ ಪ್ರಾರ್ಥಿಸಿದರೂ ಬೆಳಕು ಬಂದು ಇವನನ್ನು ಕತ್ತಲೆಯಿಂದ ನಿವೃತ್ತಿಗೊಳಿಸಲಾರದು. ಬೆಳಕಿನತ್ತ ತಾನು ಸಾಗುವುದರಿಂದ ಕತ್ತಲು ತಾನು ತಾನೇ ಮಾಯವಾಗುತ್ತದೆ.
- ದೇವಾಲಯ ಮುಂತಾದ ಸ್ಥಳಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟ ವಿಗ್ರಹಗಳು, ಮನುಜನಿಗೆ ಯಾವ ಸಂದೇಶವನ್ನೂ ಕೊಡದೆ, ಸುಮ್ಮನಿರುವುದರಿಂದಲೇ, ಅವುಗಳ ಮೇಲೆ ಅವನಿಗೆ ಅಷ್ಟೊಂದು ಶ್ರದ್ಧಾ-ಭಕ್ತಿ. ಹಾಗೊಂದು ವೇಳೆ ತಮ್ಮಲ್ಲಿಗೆ ಬಂದ ಭಕ್ತನ ತಪ್ಪು-ಒಪ್ಪುಗಳನ್ನು ಅವು ತಿದ್ದಿ ಹೇಳುವ ಹಾಗಿದ್ದಿದ್ದರೆ, ಈಗ ದೊರೆಯುತ್ತಿರುವ ಮರ್ಯಾದೆಯಲ್ಲಿ ಸ್ವಲ್ಪ ಭಾಗವೂ ಅವಕ್ಕೆ ದೊರೆಯುತ್ತಿರಲಿಲ್ಲ.

## ಶ್ರೀ ಸದಾಶಿವ ಯೋಗಿಯವರು ರಚಿಸಿರುವ ಗ್ರಂಥಗಳು



ರೂ. 115




ರೂ. 80





ರೂ. 100



ರೂ. 55



ರೂ. 95



ರೂ. 30

ತೆಲುಗು ಆವೃತ್ತಿ
ರೂ. 25




ರೂ. 70




ರೂ. 120

ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ) ಸಂಸ್ಥೆಗೆ ನೀಡುವ ದೇಣಿಗೆಗೆ 'ಸೆಕ್ಷನ್ 80ಜಿ' ಅನ್ವಯ ಆದಾಯ ತೆರಿಗೆ ವಿನಾಯಿತಿ ಇದೆ.


Canara Bank is celebrating "Savings Utsav"
A Mega Savings Bank Campaign is on
A Bouquet of Savings Schemes on offer
Step in to your nearest Branch & avail the Scheme of your choice
Savings Bank Deposit Account - An account for everyone
Savings Bank Gold Account - An account for High Networth Individuals
Canara Super Savings Salary Account - Exclusively for salaried class
Canara Champ Account - An exclusive account for children
Canara Flexi Account - An account which fetches FD interest
Canara Saral Account - An Account for all
Call our toll free no. 1800 425 0018 or visit us at www.canarabank.com
ಕೆನರಾ ಬ್ಯಾಂಕ್
Canara Bank
Together We Can

# ನಮ್ಮೂರ ಹಳ್ಳ

ಂಡುರಾವ್ ದೇಸಾಯಿ ಮಸ್ಕಿ

ಹಿಂದಿನವರು ದಡ್ಡರು, ಏನೂ ಅರಿಯದ
ಗ್ಧರು ಅಂತ ಒಣ ಅಂಡರ್‌ಎಸ್ಟಿಮೇಟ್
ಡತಿವಿ. ಶ್ಯಾಣೆರು ಆಗಿದ್ದಕ್ಕ ಅವರೆಲ್ಲ ಸುಖವಾಗಿ
ಪಕಿ ಹಾಯಾಗಿ ಮರೆಯಾದ್ರು. ನಾವು ಇಂದು ಎಲ್ಲ
ಂಕೂಲ ಇದ್ರುನೂ ಗೊತ್ತಿಲ್ಲದ ಸಮಸ್ಯೆಯೊಂದಿಗೆ,
ತ್ತಾದರೂ ಬಗೆಹರಿಸಿಕೊಳ್ಳಲಾರದ ಸ್ಥಿತಿಯಲ್ಲಿ
ಡ್ಡಿಡಕತಿವಿ. ಊರಿಗೊಂದು ಕೆರಿ, ವನವಿರಲಿ ಅಂತ
ರು ಸುಮ್ಮನೆ ಮಾಡಲಿಲ್ಲ. ಇವತ್ತು ಅಭಿವೃದ್ಧಿ
ರಲ್ಲಿ ಸುಖಕೊಡೊ ಕೆರೆ, ಹಳ್ಳ, ವನಗಳನ್ನ
ಮಾವಶೇಷ ಮಾಡಕತಿವಿ. 'ಏನಿದು, ಉಪದೇಶ
ಡಕಹತಿದರಾ, ಹ್ಯಾಗೆ ?' ಅಂತ ಅನಕೊಂಡ್ರೆನು ?
ಡಿತ ಇಲ್ಲರಿ. ವಿಷಯಕ್ಕ ಬರ್ತಿನಿ. ನಮ್ಮೂರು
ಯುಗದ ಪಳೆಯುಳಿಕೆಗಳು, ಅಶೋಕನ ಶಾಸನ
ದ, ಬೆಟ್ಟದ ಮಲ್ಲಿಕಾರ್ಜುನನಿಂದ, ಇತ್ತೀಚಿಗೆ
ಶನ ವಿಧಾನಸಭಾ ಕ್ಷೇತ್ರದಿಂದ ಪ್ರಸಿದ್ಧಿ ಹೊಂದಿರುವ
ರು. ಹಿತ್ತಲ ಗಿಡ ಮದ್ದಲ್ಲ ಅಂತಾರಲ್ಲ, ಗ್ರಾಮಕ್ಕೆ
ರ್ ತರುವಲ್ಲಿ ನಮ್ಮೂರ ಹಳ್ಳದ ವಿಶಿಷ್ಟತೆಯನ್ನು
ಕ್ಷಿಸುವಂತಿಲ್ಲ. ಇದೆನಿದು 'ಎತ್ತಣ ಮಾಮರ ಎತ್ತಣ
ಗಿಲೆ ಎತ್ತಣೆತ್ತ ಸಂಬಂಧವಯ್ಯ' ಅಂತ ಮೂಗು
ರಿಯಬೇಡಿ. ಒಂದು ನಾಗರಿಕತೆಗೆ ಬೆಳವಣಿಗೆಗೆ
ಯೊಂದು ಕಾರಣವಿರುವಂತೆ ನಮ್ಮ ಗ್ರಾಮದ
ಸಕ್ಕೆ ನಮ್ಮೂರ ಹಳ್ಳದ ಬಲ ಅನ್ನೋದು ನನ್ನ
ಯಕ್ತಿಕ ಅಭಿಪ್ರಾಯ. ಕೆರೆಗಳೇ ಇಲ್ಲದ ಈ ಊರಲ್ಲಿ
ಹರಿಯದಿದ್ದರೆ ಜನವಸತಿ ಸಾಧ್ಯವಾಗುತ್ತಿತ್ತೆ?
ಹಾಸದ ಪುಟಗಳಲ್ಲಿ ಕಾಣಲು ಸಾಧ್ಯವಾಗುತ್ತಿತ್ತೆ?
ಒಂದು ಕಾಲಕ್ಕೆ ಮಸ್ಕಿಯ ಜನತೆಗೆ ಜೀವನದಿ
ತಿದ್ದ ನಮ್ಮೂರ ಹಿರೆಹಳ್ಳವು ನಮ್ಮವರ ಅಲಕ್ಷ್ಯ
ವಾಗಿ ಗತವೈಭವವನ್ನು ಕಳೆದುಕೊಂಡು ಗಬ್ಬೆದ್ದಿರು
ನ್ನು ನೋಡಿ ಹಿತೈಷಿಗಳೊಬ್ಬರು ನಮ್ಮೂರ ಹಳ್ಳದ
ವಿಡಂಬನೆ ಯಾಕ ನೀವು ಬರಿಬಾರದು ಎಂದು
ಯಿಸುತ್ತಿದ್ದರೂ, ಸಾಧ್ಯವಾಗಿರಲಿಲ್ಲ. ಯಾವುದಕ್ಕೂ
ಬರಬೇಕಂತಾರಲ್ಲ! ಮೊನ್ನೆ ಪರಿಚಿತರೊಬ್ಬರ
ಸಂಸ್ಕಾರಕ್ಕೆಂದು ಹೋಗಿಬರುವಾಗ ಜರೂರ
ವಿದ್ದ ಕಾರಣ ಕಾಲುವೆಗೆ ಹೋಗೋಕೆ ಆಗದೆ
ದಲ್ಲೆ ಸ್ನಾನ ಮಾಡಿ ಬರಬೇಕಾದ ಅನಿವಾರ್ಯತೆ
ು. ಹಾಗೆ ತೆಳುವಾಗಿ ಹರಿಯುತ್ತಿದ್ದ ನೀರಿನಲ್ಲಿ
ಹೊರಳಾಡುವಂತೆ ಹೊರಳಾಡಿ ಮೈ
ಟ್ಸಿಕೊಂಡು ಬಂದು ಮನೆಯಲ್ಲಿ ಸ್ನಾನ ಮಾಡಿದ
ೆ ಎರಡು ದಿನಕ್ಕೆ ಮೈಯೆಲ್ಲ ಏಕದಂ ತುರಿಕೆ
ರ್ ಆಯ್ತು. ಆಸ್ಪತ್ರೆಗೆ ಹೊದಾಗ "ಛಿ, ಎಂತವರು
ನೀವು, ಸ್ನಾನಕ್ಕ ಒಳ್ಳೆ ನೀರು ಉಪಯೋಗಿಸಾಕ
ಸ್ತ್ರಿ. ಎಜುಕೇಟೆಡ್ ಆಗಿ ಸೆನ್ಸ ಇಲ್ಲವೆ ?" ಎಂದು
ಮಾಗಿ ಛೀಮಾರಿ ಹಾಕಿದಾಗಲೇ ನನ್ನ ಸೆನ್ಸು
ತವಾಗಿದ್ದು. ವಿಷಯ ತಿಳಿಸಿ "ಒಂದಿನ ನೀರಗ
ಪಕ ಇಷ್ಟಾತು, ನಿತ್ಯ ಈ ಹಳ್ಳದ ನೀರನ್ನು ಅರ್ಧ
ಕುಡಿಯುತ್ತಿರುವಾಗ ಅವರಿಗೆ ಏನೂ ಆಗು
?" ಎಂದೆ. "ನನ್ನ ಬಿಲ್ಡಿಂಗ್ ಇಷ್ಟೆಲ್ಲ ಮೇಲೇರ
ಬೇಕಾದರೆ ಅವರೆಲ್ಲರ ಕೃಪಾಶೀರ್ವಾದನ" ಎಂದಾಗ ಮರು ಮಾತನಾಡದೆ ಬಿಲ್ಲು ಕೊಟ್ಟು ಹೊರಗೆಬಂದೆ.

ಎಂಥ ಹಳ್ಳ ನಮ್ಮೂರಿಂದು. ಬರಿಯ ಹಳ್ಳವಾಗಿರದೆ ಅದು ಬದುಕಿನ ಸೆಲೆಯಾಗಿತ್ತು. ಗಜೇಂದ್ರಗಡದ ಹತ್ತಿರದ ಕಾಲಕಾಲೇಶ್ವರದಲ್ಲಿ ಹುಟ್ಟಿ ನಮ್ಮೂರಿಗೆ ಬರೊದ್ರೊಳಗೆ ಪುಟ್ಟ ನದಿಯಂತೆ ಕಂಗೊಳಿಸುತ್ತಿತ್ತು. ತಳಕು ಬಳುಕಿನಿಂದ ನರ್ತಿಸುತ್ತಾ ಮುಂದೆ ತುಂಗಭದ್ರಾ ನದಿಯನ್ನು ಸೇರೊ ಈ ಹಿರೆಹಳ್ಳಕ್ಕೆ ನದಿಯೆಂದು ಹೆಸರಿಡಬೇಕಾದ ಲಕ್ಷಣಗಳಿದ್ದರೂ ಏಕೆ ಈ ಭಾಗದ ಪ್ರಾಜ್ಞರಿಗೆ ಹೊಳೆಯಲಿಲ್ಲವೊ ? ಮಸ್ಕಿ ನಾಲಾದಂತಹ ಪುಟ್ಟ ಡ್ಯಾಮ ನಮ್ಮೂರ ಹಳ್ಳದಿಂದ ನಿರ್ಮಾಣವಾಗಿರಬೇಕಾದ್ರೆ, ಆ ಡ್ಯಾಮಿಗೆ ಯಾರದ್ಯಾರದೋ ಹೆಸರು ಇಡೊ ಪ್ರಯತ್ನ ನಡದಿರಬೇಕಾದ್ರೆ ನನ್ನ ವಾದದಲ್ಲಿ ತಪ್ಪಿದೆ ಅನುಸುತ್ತೇನು ತಮಗೆ !

ಕಡಿಮೆ ಜನಸಂಖ್ಯೆ ಇದ್ದ ಆ ದಿನಗಳಲ್ಲಿ ನಮ್ಮೂರಿಗೆ ಹಳ್ಳದ ನೀರೇ ಆಧಾರವಾಗಿತ್ತು. ವರ್ಷದ ಹನ್ನೊಂದು ತಿಂಗಳು ಹರಿಯುತ್ತಿದ್ದ ಹಳ್ಳ ಬೇಸಿಗೆಯಲ್ಲಿ, ತಿಂಗಳು ಬತ್ತಿದರೂ ಉಸುಕಿನೊಳಗಿನ ಜಲ ಬತ್ತುತ್ತಿರಲಿಲ್ಲ. ಒರತೆಗಳು



ಆ ಕೊರತೆಯನ್ನು ನೀಗಿಸುತ್ತಿದ್ದವು. ಇಗಿನಂಗ ಮನೆಮುಂದೆ ಒಗದು ಗಟಾರವನ್ನು ಸೃಷ್ಟಿಸಿ ಹೊಲಸು ಮಾಡುವ ಪರಂಪರೆ ಅಂದು ಇದ್ದಿಲ್ಲ. ಬಟ್ಟೆ ಒಗೆಯಲು, ಇನ್ನಿತರ ಕಾರ್ಯಗಳಿಗೆ ಹಳ್ಳವೆ ಆಶ್ರಯ ಸ್ಥಾನ. ನೀರನ್ನು ಮಲಿನಗೊಳಿಸುವಂತಹ ಮಾರ್ಜಕಗಳ ಉಗಮವು ಆಗ ಆಗಿರಲಿಲ್ಲ. ಕೆಲವರು ವರ್ಷೊರ್ತಿ ಕುಡಿಯುವ ನೀರಿಗಾಗಿ ಒರತೆಗಳನ್ನ ಆಶ್ರಯಿಸಿದ್ದರೆ, ಬೇಸಿಗೆಯಲ್ಲಿ ಎಲ್ಲರೂ ಹಳ್ಳಕ್ಕೆ ಬರಬೇಕಾಗಿತ್ತು. ಬೊರವೆಲ್‌ಗಳ ಜನನ ಆಗದೆ ಇರುವ ಆ ದಿನಗಳಲ್ಲಿ ಹಳ್ಳ ಶ್ರೀಮಂತರನ್ನೂ ಬಗ್ಗಿಸಿತ್ತು. ಹಳ್ಳದಿಂದ ನೀರು ತರೋದು ಯಾರಿಗೂ ಭಾರದ, ತ್ರಾಸದ ಕೆಲಸ ಅನಿಸೇ ಇರಲಿಲ್ಲ. ಇರುವೆ ಸಾಲಿನಂತೆ ಮುಂಜಾವಿನ ಹತ್ತನ್ನಂದರೊಳಗೆ ಕೊಡ ಹೊತ್ತುಕೊಂಡು ಹೋಗುವವರ ಸಾಲೆ ಕಾಣುತಿತ್ತು. ಮಕ್ಕಳಿಗೆ ಆಟವಾಡಲಿಕ್ಕೆ, ಹೆಂಗಸರಿಗೆ ಹರಟೆ ಹೊಡಿಲಿಕ್ಕೆ, ಗುಸುಗುಸು ಮಾತಾಡಿಕೊಳ್ಳಲಿಕ್ಕೆ,ಯುವಕರಿಗೆ ಸೌಂದರ್ಯವನ್ನು ಆಸ್ವಾದಿಸಲಿಕ್ಕೆ, ಕೆಲವರಿಗೆ ಲೈನ್ ಹೊಡಿಲಿಕ್ಕೆ, ವೃದ್ಧರಿಗೆ ವಾಕಿಂಗೂ... ಮೀಟಿಂಗೂ... ಮಾಡಲಿಕ್ಕೆ ಪ್ರಶಸ್ತ ಸ್ಥಳವಾಗಿತ್ತು. ಪಾಳಿಯಲ್ಲಿ ಒರತೆ ನೀರು ತುಂಬಬೇಕಾಗುತ್ತಿದ್ದರಿಂದ ಸಂಜೆ ಬುತ್ತಿ ಕಟ್ಟಿಕೊಂಡು ಹೋಗಿ ಆಟವಾಡಿ, ಉಂಡು ನೀರು ತುಂಬಿಕೊಂಡು ಬರುತ್ತಿದ್ದೆವು. ಒರತೆ ಅನ್ನೋದು ಈಗ ಮರಿಚಿಕೆ ಆಗ್ಯಾವ. ಮಕ್ಕಳಿಗೆ ಅರ್ಥವಾಗದ ಪದ ಆಗ್ಯಾದ. ಉಸುಕನ್ನು ಕೆಲ ಆಳದವರೆಗೆ

ತೋಡಿ, ಅಲ್ಲಿ ಬರುವ ಒಂಡು ನೀರನ್ನು ಬಟ್ಟಲದಿಂದ ತಿಳಿ ನೀರು ಬರುವವರೆ ಉಗ್ಗಿಲುಗ್ಗಿ ಚೆಲ್ಲಿ ಬಟ್ಟಲಿನಿಂದ ಉಸುಕಿಗೆ ತಾಕದಂತೆ ತಿಳಿನೀರನ್ನು ತುಂಬುವುದರಲ್ಲಿ ಖುಷಿ ಇಂದು ಕಂಪ್ಯೂಟರ ಮುಂದೆ ಕುಳಿತು ಆಟವಾಡಿದರೂ ಸಿಗಲಿಕ್ಕಿಲ್ಲ. ಬರೊತನ ಹಸಿ ಉಸುಕಿನಲ್ಲಿ ನಮ್ಮ ಕಲ್ಪನೆಯ ಮನೆಯನ್ನೊ, ಚಿತ್ರವನ್ನೊ ರ ಆಟವಾಡಿದ ಆ ದಿನಗಳು, ಬೆಳದಿಂಗಳ ರಾತ್ರಿಯಲ್ಲಿ ಮನೆ ಮೇಲೆ ಊಟ ಮಾ ಹಾಂಗ ಹಳ್ಳದಲ್ಲಿ ಓಣಿ ಮಕ್ಕಳೆಲ್ಲ ಕೂಡಿ ಪಂಕ್ತಿ ಊಟ ಮಾಡಿದ ಆ ಚಿತ್ರಗಳು ಇ ಮನದಾಗ ಹಸಿರಾಗಿಯೆ ಉಳಿದಾವ.

ನನಗಂತ ಅಲ್ಲ ಗ್ರಾಮದ ಬಹುತೇಕರಿಗೆ ಈಜು ಕಲಿಯಲು ಪ್ರಾಥಮಿಕ ಹಂ ಗುರು ಅಂದ್ರ ಈ ಹಳ್ಳನೆ. ಅಮ್ಮನ ಜೊತಿ ಹಳ್ಳಕ್ಕ ಬಟ್ಟೆ ಗಂಟು ಹೊತ್ತುಕೊಂಡು ಸಹಾ ಮಾಡುವ ನೆಪದಲ್ಲಿ ಹೋಗುತ್ತಿದ್ದುದರ ಉದ್ದೇಶ ಈಜಾಡೊದೇ ಆಗಿರುತ್ತಿ ಬಿರ್ಜ ಕೆಳಗೆ ರಭಸವಾಗಿ ಹರಿಯುವ ನೀರಿನ ಜೊತೆಗೆ ಧುಮುಕಿ, ಒಮ್ಮೊ ಮುಳುಗಿ ನೀರ್ ಕುಡುದು, ಮೂಗು ಕಿವಿಯಲ್ಲಿ ನೀರು ಹೊಕ್ಕೊಂಡ್ರು ವ್ಯ ಪ್ರಯತ್ನ ಬಿಡತಿರಲಿಲ್ಲ. ಒಮ್ಮೊಮ್ಮೆ ಶಾಲೆಗೆ ಚಕ್ಕರ್ ಹಾಕಿ ನೀರಿನಲ್ಲಿ ಬಾರಲು ಬಿ ಕಾಲು ಬಡಿಯುತ್ತಿರುವಾಗ 'ಏನಲೇ ತಮ್ಮಗಳ ಹಳ್ಳದಾಗ ಜೋರ್ ಕೊರೆಕತ್ತಿರೇ ಜ್ವಾಕೆಪ ಪೈಪು ಕಲ್ಲಿಗೆ ಸಿಕ್ಕೊಂಡು ಮಂಡಾದೀತು' ಅಂತ ಹೈಸ್ಕೂಲಿಗೆ ಹೋಗು ಅಣ್ಣಂದಿರು ಚುಡಾಯಿಸುತ್ತಿದ್ದರೂ ನಮಗೆ ಅರ್ಥವಾಗದೆ 'ಹಾಂಗನಣ' ಅ ನಮ್ಮದೆ ಪರಿಭಾಷೆಯಲ್ಲಿ ಅರ್ಥಮಾಡಿಕೊಂಡು 'ಡೈ'ಹೊಡದು ಖುಷಿಪಡುತ್ತಿದ್ದ

ಗ್ರಹಣ ಹಿಡಿದಾಗ ಸಾಂಪ್ರದಾಯಿಕರ ಮನೆಯಲ್ಲಿ ಒಂದು ತೆರೆನಾದ ಗ್ರಹ ಹಿಡಿದಿರುತ್ತೆ. ಈಗ ಬಿಡಿ, ಜನ ಸುಧಾರಿಸಿದ್ದಾರೆ. ಆ ಸಮಯದಲ್ಲಿ ಇಡಿ ಊ ಸಮೂಹ ಸನ್ನಿಗೆ ಒಳಗಾಗಿ ಸ್ನಾನಕ್ಕಾಗಿ ಹಳ್ಳಕ್ಕೆ ಬರುತ್ತಿದ್ದರು. ಸೂರ್ಯಗ್ರಹಣಕ್ಕಿ ಚಂದ್ರಗ್ರಹಣದಾಗ ರಾತ್ರಿಯ ಸ್ನಾನ ನಿಜಕ್ಕೂ ರೋಮಾಂಚನಕಾರಿ. ಮಾಟ ಮ ಮಾಡುವವರಿಗೆ ಗ್ರಹಣಕಾಲ ಮಂತ್ರ ಸಿದ್ಧಿಗೆ ಪ್ರಶಸ್ತ ಅಂತ ನಂಬಿಕೆ ಗೊತ್ತಿರದ ಜನ ಗ್ರಹಣ ಹಿಡಿದಾಗಿನಿಂದ ಬಿಡುವವರೆಗೂ ಅಂತಹ ಚಳಿಯಲ್ಲಿ ನೀರಿನಲ್ಲಿ ಕು ಕೊಂಡು ಏನೇನೋ ಮಂತ್ರ ಪಠಿಸುವುದನ್ನು ನೋಡಿದಾಗ ಚಳಿ ಆಗದೆ ಇರುವು ಯಾವುದೊ ಶಕ್ತಿ ಕಾರಣವಿರಬಹುದೆಂದು ಲೆಕ್ಕಹಾಕುತ್ತಿದ್ದೆವು. ಅಂತಹ ಜನ ನೀರಾಗ ಕುತಗೊಂಡು ಏನೇನು ಮಾಡತಾರ ಹಾಂಗ ಕಾಪಿ ಮಾಡಿ ನಾವು ಅಂಥ ಗಳಿಸಿಕೊಳ್ಳೊಣ ಅನ್ನೊ ಕೆಟ್ಟ ಕುತೂಹಲದಿಂದ ಹತ್ತಿರ ಹೋಗುತ್ತಿದ್ದಾಗ ''ಬರ್‍ರಲೆ ಅ ಕೆಲಸಕ್ಕ ಅಡ್ಡಿಯಾದ್ರ ಕೈ ಕಾಲು ಬಿದ್ದು ಹೋಗ್ತಾವ'' ಅಂತ ಹಿರಿಯರು ಕೂಗುತ್ತಿದ 'ಖರೇವಿರಬೇಕು ಬರ್‍ರಲೇ' ಅಂತ ನಂಬಿ ಎದ್ನೋ ಬಿದ್ನೋ ಅಂತ ಓಡಿ ಬರತಿದ್ದಿವಿ

ಮಳೆಗಾಲದಲ್ಲಿ ತುಂಬಿ ಹರಿದು ಬರುವ ಆ ಹಳ್ಳದ ಸಂಭ್ರಮವ ನೋಡುವುದೆ ಕಣ್ಣಿಗೆ ಹಬ್ಬ. ಕುಂಪಿ ಕುಂಪಿಯಾಗಿ ಬರುವ ನೊರೆ, ಕಾಫಿಯ ಬ ನೀರು, ತೇಲಿಬರುವ ವಿವಿಧ ವಸ್ತುಗಳು, ದಿಮ್ಮಿಗಳು. ಆ ದಿಮ್ಮಿಗಳನ್ನು ಹಿಡಿಯ ಹರಸಾಹಸ ಪಡುವ ಜನ. ನೀರಿನ ಸೆಳೆತಕ್ಕೆ ಕೊಚ್ಚಿಕೊಂಡು ಬಂದ ಪ್ರಾಣಿಯೊ ತನ್ನ ಪ್ರಾಣ ರಕ್ಷಿಸಿಕೊಳ್ಳಲು ಈಜುವ ಪರಿ, ಅದು ದಡ ಮುಟ್ಟುತ್ತೊ ಇಲ್ಲವೊ ಅ ಕುತೂಹಲದಿಂದ ನೋಡುವ ಜನ. ಹೀಗೆ ಆ ವೈಭವ ವರ್ಣಿಸಲಸದಳ. ತೊಂಬ ದಶಕದಲ್ಲಿ ಹೈಸ್ಕೂಲಿನಲ್ಲಿರೊ ಕಾಲಕ್ಕೆ ಸೇತುವೆ ಮೀರಿ ಮನುಷ್ಯ ಮುಳುಗುವ ಮಟ್ಟಿಗೆ ನೀರು ತುಂಬಿ ಬಂದಿತ್ತು. ರಾತ್ರಿ ಮಲಗಿದವರಿಗೆಲ್ಲ ನೀರಿನ ಭೋರ್ಗ ಅನುಭವ ಇರದವರನ್ನು ಬೆಚ್ಚಿಬೀಳಿಸಿ ಭೂಕಂಪ ಸಂಭವಿಸಿತೆಂದು ಹೊರಬರುವ ಮಾಡಿತ್ತು. ''ಅಪರೂಪಕ್ಕ ಊರಾಗ ನೀರು ಸೇತುವೆ ತುಂಬಿ ಬಂದದ, ಇವತ್ತು ನೋಡಿ ಕಣ್ತುಂಬ ಎಂಜಾಯ ಮಾಡಿ'' ಅಂತ ಟ್ಯೂಷನ್ ಮೇಷ್ಟ್ರು ಮನೆ ಪಾಠಕ್ಕೆ ಕೊಟ್ಟಾಗ ಪರ ಊರಿನ ಮೇಷ್ಟ್ರಿಗೂ ''ಎಷ್ಟು ಅಭಿಮಾನ ಹಳ್ಳದ ಮ್ಯಾಗ'' ಅಂತ ತ ಹಾಕುತ್ತಿದ್ದೆವು. ಅವರು ಒಂದಿನ ರೆಷ್ಟು ಸಿಕ್ಕಂಗಾಗುತ್ತಂತ ಸೂಟಿಕೊಟ್ಟಿದ್ದರು ನಮ್ಮೂರ ಪಂಚಾಯಿತಿ ಅರ್ಧ ಡಿಬ್ಬಿತನ ನೀರು ಹರಿಯುತ್ತಿದ್ದ ಆ ಹಳ್ಳದಲ್ಲಿ ನ ಫೋಟೋ ತೆಗೆಸಿಕೊಳ್ಳೊ ಮಂದಿ-ಮುಗಿಬಿದ್ದಿತ್ತು. ದಂಡಿಗಿದ್ದ ಲಾವಣ್ಯ ಸ್ಟುಡಿಯೊ ಅದೃಷ್ಟನ ಅವತ್ತು ಖುಲಾಯಿಸಿತು. ''ಹೇ ಇಂತಹ ಹಳ್ಳ ನಮ್ಮ ಜೀವಮಾನ ನೋಡೇ ಇಲ್ಲಪ, ಯಾವಾಗೋ ಡೊಂಗಿ ಬರ ಬಿದ್ದ ಮರುವರ್ಷ ಬಂದಿತ್ತಪ ಅಂತ ನಮ್ಮಪ್ಪ ಹೇಳತಿದ್ದಪ'' ಅಂತ ವಯೋವೃದ್ಧರೊಬ್ಬರು ಒಳ್ಳೆ ಜೋಶ್‌ನ ಹೇಳುತ್ತಿದ್ದರು. ಅವತ್ತು ಹಳ್ಳ ತುಂಬಿ ಬಂದ ಖುಷಿಯ ಜೊತೆಗೆ ಸಾಲಾಗಿ ನಿ ನಾನಾ ನಮೂನಿ ಬಸ್ಸುಗಳು, ಕಾರು, ಜೀಪುಗಳು, ಲಾರಿಗಳು ಕಿಲೋಮೀಟ ಉದ್ದಕ್ಕೂ ರಾತ್ರಿ ಹೋಗುವ ವಾಹನಗಳೆಲ್ಲ ನಿಂತಿರುವುದನ್ನು ನೋಡಿ ''ನಮ

ಮ್ಯಲೆ ಇಷ್ಟು ಗಾಡಿಗಳು ಹೋಗ್ತಾವಾ ?'' ಅಂತ ಗಾಬರಿಯಾಗಿ ನೋಡುತ್ತಿದ್ದೆವು, ಗೆ ವಾಹನಗಳಲ್ಲಿರುವ ಜನಗಳನ್ನು ಅವರುಗಳೆಲ್ಲ ನಮ್ಮೂರ ಹಳ್ಳದ ವೈಭವವನ್ನು ಣ್ತುಂಬ ತುಂಬಿಕೊಂಡು ''ವಾರೆವ್ಹಾ! ಫೆಂಟಾಸ್ಟಿಕ್, ಮಾರವಲೆಸ್, ವಾಟ್ ಎ ವ್''ಎಂದು ಉದ್ಗಾರ ತೆಗಿತ್ತಿದ್ದರೆ ನಮ್ಮೂರ ಹೆಸರು ಅವರೆಲ್ಲರ ಊರುಗಳಿಗೆಲ್ಲ ಪುತ್ತಲ್ಲ ಎಂದು ಖುಷಿಪಡುತ್ತಿದ್ದೆವು.

ಹೈಸ್ಕೂಲಿಗೆ ಬುತ್ತಿ ಕೊಂಡುಹೋಗುತ್ತಿದ್ದ ಸಂದರ್ಭದಲ್ಲಿ ಮಧ್ಯಾಹ್ನ ಊಟಕ್ಕಾಗಿ ಯಿಸಿದ್ದು ಈ ಹಳ್ಳವನ್ನೇ. ಬಾಲ್ಯದಲ್ಲಿಯ ಮನಸ್ಸುಗಳು ದೊಡ್ಡವರಾಗುತ್ತಿದ್ದಂತೆಯೆ ಲಾಗುತ್ತವೆ ಎಂಬ ಪಾಠವನ್ನು ಕಲಿಸಿದ್ದೆ ಈ ಹೈಸ್ಕೂಲ್. ಕೂಡಿ ಆಡುತ್ತಿದ್ದ ಮಂತ ಗೆಳೆಯರಿಗೆಲ್ಲ ನಮ್ಮ ಸಿಲ್ವರ್ ಡಬ್ಬಿಯಲ್ಲಿದ್ದ ಬುತ್ತಿ ಕಂಡು ಏನಾಯಿತೊ ಸ್ಟೀಲ್ ಡಬ್ಬಿ ಇರುವ ಮಂದಿ ಕೂಡಿಕೊಂಡು ಊಟಮಾಡಲಾರಂಭಿಸಿದರು, ಮ್ಮೆ ಉಂಡರೂ ನಮ್ಮ ಬುತ್ತಿಯಲ್ಲಿಯ ಊಟವನ್ನು ಹಾಕಿಸಿಕೊಳ್ಳಾಕ ಹಿಂದ ಂದ ನೋಡುತ್ತಿದ್ದರೂ ಖೇದವೆನಿಸಿದರೂ ಸುಮ್ಮನಾಗಿಬಿಡುತ್ತಿದ್ದೆವು. ಅದು ಬಿಡಿ, ಟದ ನಂತರ ಮೀನುಗಳನ್ನು ಹಿಡಿಯುವ ಖಯಾಲಿ ಎಲ್ಲರದು. ಕೈಗೆ ಸಿಗುತ್ತಿದ್ದಂತೆ ಯಾವುದೊ ಮಾಯದಿಂದ ಪುಚಿಕೊಂಡುಬಿಡುತ್ತಿದ್ದವು. ಆದರೆ ಗೆಳೆಯ ಶಕೀಲ್ ತ್ರ ಮೀನು ಹಿಡಿಯೋದ್ರಲ್ಲಿ ನಿಸ್ಸೀಮ. ಅವನು ಹಿಡಿದ ಮೀನು, ವಿಜ್ಞಾನ ಷ್ಟ್ರು ಹೇಳಿದ ಅದರ ಭಾಗಗಳನ್ನು ಪ್ರಾಕ್ಟಿಕಲ್ಲಾಗಿ ನೋಡುವ ಅವಕಾಶ ತ್ತಿತ್ತು. ನಾವು ಅದರ ಕಿವಿರು, ಹುರುಪೆ, ಕಣ್ಣುಗಳನ್ನು ಗಮನಿಸುವಾಗ ''ನೋಡ್ರೊ, ಹ್ಯಾಂಗ ನಾನು ಪ್ರಾಕ್ಟಿಕಲ್ ಮಾಡ್ತಿನಿ ಡ್ರೊ'' ಅಂತ ಹೇಳುತ್ತಿದ್ದಂತೆ ಜೀವಂತ ಮೀನನ್ನೆ ನುಂಗಿ ತ್ತಿದ್ದ. ಈ ಹಳ್ಳದಲ್ಲಿ ಅಲ್ಲಿ ಸಿಗುವ ನು, ಏಡಿ, ಮೃದ್ವಂಗಿ ಮೊದಲಾದ ಳ ಮೇಲೆ ನಡೆಸುತ್ತಿದ್ದ ಕಾರ್ಯಾ ಣೆಯೆ ಮುಂದೆ ಪಿಯುಸಿಯಲ್ಲಿ ಜ್ಞಾನ ವಿಷಯವನ್ನು ಆಯ್ಕೆ ಡಿಕೊಳ್ಳಲು ಕಾರಣವಾಯಿತು.



ಹಳ್ಳ ಕೇವಲ ನಿತ್ಯದ ಕೈಂಕರ್ಯ ಷ್ಟೆ ಅಲ್ಲ, ಅನೇಕ ಸಾಂಸ್ಕೃತಿಕ ಬಂಧಗಳ ಬೆಸುಗೆಗೆ ಕೊಂಡಿ ಗಿತ್ತು. ವಿವಿಧ ಗುಡಿಗಳಿಂದ ಪಾಸ್ನಾನಕ್ಕೆಂದು ಹೋಗುತ್ತಿದ್ದುದು ಗೆ. ಊರಲ್ಲಿ ಮದುವೆ ಸಮಯ ನಡೆಯುವ ಗುಗ್ಗಳ, ರಾತ್ರಿಯ ಸಂದರ್ಭದಲ್ಲಿ ದೇವಿ ಯ ಕುಂಭ, ಮಾನಪ್ಪಯ್ಯನ ಸಂದರ್ಭದಲ್ಲಿ ನಡೆಯುವ ಉತ್ಸವ ಆರಂಭವಾಗುತ್ತಿದ್ದುದು ಹಳ್ಳದಿಂದಲೆ. ಊರಿನ ಜನ ಗಂಗಾ ಪೂಜೆಗೆ, ಗೀರಥಿ ನೈವೇದ್ಯಕ್ಕೆ ಅಂತ ಹೋಗುತ್ತಿದ್ದುದು ಇಲ್ಲಿಯೆ.ಆದರೆ ಈಗ ಹಳ್ಳ ಗಬ್ಬೆದ್ದು ಗಿರುವುದರಿಂದ, ಬಾವಿಗಳು ಬತ್ತಿರುವುದರಿಂದ ನಳಗಳೆ ಗಂಗಾ ಸ್ಥಳಗಳಾಗಿವೆ. ಟೇಶ ದೇವರ ಅವಭೃತ ಸ್ನಾನಕ್ಕೆಂದು ಹೋಗುತ್ತಿದ್ದು ಈ ಹಳ್ಳಕ್ಕೆ. ಮೊಹರಂನಲ್ಲಿ ರವಾಗಿ ಸಿಂಗರಿಸಿದ್ದ ಅಲೈ ದೇವರುಗಳು ಮುಂದೆ ಏನಾಗ್ತಾವೆ ಅಂತ ಹಲದಿಂದ ನೋಡೋಕೆ ಹೋದ್ರೆ ಹಳ್ಳದಲ್ಲಿಯೆ ಆ ದೇವರ ಬಟ್ಟೆಗಳನ್ನೆಲ್ಲಾ ರ್ಜಿಸಿ 'ಅಲ್ ಬಿದಾ ಓ ಅಲ್ ಬಿದಾ' ಅಂತ ಹಾಡತಾ ಬರುತ್ತಿದ್ದರು.

ಮಳೆ ಬಾರದೆ, ಬರ ಬೀಳುವಂಥ ಸಂದರ್ಭದಲ್ಲಿ ಮಳೆಗಾಗಿ ವಿಭಿನ್ನ ರೀತಿಯ ಗಳು ನಮ್ಮೂರಲ್ಲಿ ನಡೆಯುತ್ತಿದ್ದವು. ಭಜನೆ, ಸಪ್ತ ಭಜನೆ, ಕಪ್ಪೆಯ ಮೆರವಣಿಗೆ. ಗಳಲ್ಲಿ ಹಳ್ಳದ ಪಕ್ಕ ಇರುವ ಮುದಿಮಲ್ಲಯ್ಯನಿಗೆ ಕುಂಭಾಭಿಷೇಕ ಬಾಲ ಿಂದ ನಡೀಬೇಕು ಅಂತ ಯಾರೋ ಸ್ವಾಮಿಗಳು ಹೇಳಿದರಂತೆ.ನಮ್ಮ ಷ್ಟರುಗಳು ಕಲ್ಯಾಣ ಕಾರ್ಯಕ್ಕೆ ಒಪ್ಪಿಗೆ ಸೂಚಿಸಿ, ನಮಗೆಲ್ಲ ಒಂದೊಂದು ದೊಡ್ಡ ಗಿನ ಹಳ್ಳದ ಹತ್ತಿರ ತರಲು ಹೇಳಿದರು. ಮಳೆ ದೇವರ ವರ ಎಂದು ಭಾವಿಸಿದ್ದ ಸಗಳಲ್ಲಿ ಭಕ್ತಿಯಿಂದ ಹಳ್ಳಕ್ಕೆ ಹೋದೆವು. ಮುದಿಮಲ್ಲಯ್ಯನ ಗುಡ್ಡದಿಂದ ವರೆಗೆ ನಮ್ಮೆಲ್ಲರನ್ನ ಸಾಲಾಗಿ ನಿಲ್ಲಿಸಿ ಛತ್ತಿಗ ಕಾಂಕ್ರೀಟ್ ಹಾಕೊ ಮಾದರಿಯಲ್ಲಿ ನೀರು ಹಳ್ಳ ಮುಟ್ಟುವವರೆಗೂ ಸಾಗಿ ಬರುತ್ತಿದ್ದ ತಂಬಿಗೆಯಿಂದ ಸುರಿಯುತ್ತ ಹೋದ್ವಿ. ಆ ಗದ್ದಲದಲ್ಲಿ ಮನೆಯಲ್ಲಿ ಎಚ್ಚರಿಸಿ ಕೊಟ್ಟಿದ್ದ ತಂಬಿಗೆಯು ಎಲ್ಲಿ ಕಳೆದು ಹೋಗುವುದೊ ? ಎಂಬ ಭೀತಿಯು ಇನ್ನೊಂದೆಡೆ. ಅಭಿಷೇಕ ಮುಗಿದ ಮೇಲೆ ತಂಬಿಗೆ ಸುರಕ್ಷಿತವಾಗಿ ಸಿಕ್ಕಿದ್ದು, ಅಂದೇ ರಾತ್ರಿ ಮಳೆ ಧೋ ಎಂದು ಸುರಿದಿದ್ದು ಮುಗ್ಧರಾಗಿದ್ದ ನಮ್ಮಲ್ಲಿ ದೇವರ ಬಗ್ಗೆ ಅಪಾರ ನಂಬಿಕೆ ಇಡೋಕೆ ಕಾರಣವು ಆಯಿತು. ದೇವರು ನಮ್ಮ ಬೇಡಿಕೆ ಇಡೇರಿಸಿರುವನು ಅಂದ ಮ್ಯಾಲೆ ಪರೀಕ್ಷೆಲಿ ಬರಿಯದಿದ್ದರೂ ಪಾಸು ಮಾಡೆ ಮಾಡ್ತಾನ ಅಂತ ಒಣ ಮೌಢ್ಯದಲಿ ಕೆಲ ಗೆಳೆಯರು ಗುಡಿಗೆ ಹೋಗಿ ಪ್ಯಾಡನ ಭರ್ಜರಿಯಾಗಿ ಪೂಜೆ ಮಾಡಿ, ''ಪಾಸ ಮಾಡಿದ್ರ ಒಂದು ಕಾಯಿ ಕದ್ದಾದರೂ ಒಡಸ್ತಿನಿಪ'' ಅಂತ ದೇವರಲ್ಲಿ ಮೊರೆ ಇಟ್ಟು ಪರಿಕ್ಷೆಲಿ ತೋಚಿದ್ದನ್ನು ಗೀಚಿ ಬಂದರೂ ಪಾಸಾಗಿದ್ದನ್ನು ನೋಡಿದಾಗ ನಮಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ದೇವರು 'ಇಂತಹ ಲಂಚಕ್ಕ ಆಸೆ ಪಡತಾನಾ ?' ಅಂತ ಮೇಷ್ಟ್ರ ಮುಂದೆ ''ನಿಮಗೇನಾದ್ರು ದೇವರು ಇವರನ್ನ ಪಾಸು ಮಾಡ್ರಿ ಅಂತ...'' ಎಂದು ಮುಗ್ಧ ಪ್ರಶ್ನೆ ಹಾಕಿದಾಗ ಅವರು ''ಅಯ್ಯೊ ಅದು ಬೇರೆ ಕಥೆ ಕಣ್ರೊ, ಈ ವರ್ಷ ಫೇಲ್ ಮಾಡಲೇಬಾರದಂತ ಆದೇಶ ಬಂದದ್ದಕ್ಕಾಗಿ ಅವರು ಪಾಸಾದ್ರು, ಇಲ್ಲದಿದ್ರೆ ಆ ಮಕ್ಕಳನ್ನ ಫೇಲ್ ಮಾಡಿ ಒಗದು ಬಿಡತಿದ್ದೆ'' ಎಂದಾಗಲೇ ದೇವರ ಕೈಯಲ್ಲಿ ಏನೂ ಇಲ್ಲ ಪರಿಶ್ರಮದಲ್ಲಿ ಇದೆ ಎಂಬುದನ್ನ ತಿಳಿದುಕೊಂಡ್ವಿ. ಅವರವರ ಭಾವಕ್ಕೆ, ಭಕುತಿಗೆ ಅನ್ನೋ ಹಾಗೆ ಪರಿಸ್ಥಿತಿ ಅರ್ಥಮಾಡಿಕೊಳ್ಳದ ಆ ಗೆಳೆಯರು ನಂಬಿಕೆಯನ್ನು ಫಾಲೋ ಅಪ್ ಮಾಡತಾ ಕೊನಿಗಿ ಮೆಟ್ರಿಕಿಲಿ ತೆಗ್ಗಿಗೆ ಬಿದ್ದಿದ್ದು ಬೇರೆ ಮಾತು.

ಇರಲಿ ವಿಷಯಾಂತರವಾದಕ್ಕೆ ಕ್ಷಮಿಸಿ. ಪೂಜ್ಯಭಾವದಿಂದ ಕಾಣುತ್ತಿದ್ದ ಹಳ್ಳದ ಈಗಿನ ಸ್ಥಿತಿ ಬದಲಾಗಿದೆ. ಮಸ್ಕಿ ಡ್ಯಾಂ ಆಗಿ ಸುತ್ತಲಿನ ರೈತರಿಗೆ ಉಪಕಾರಿಯಾಗಿದ್ದರೂ ಮನೆಗಂತೂ ಮಾರಿಯಾಗಿದೆ. ಡ್ಯಾಮಾದ ಕಾರಣದಿಂದ ವರ್ಷಪೂರ್ತಿ ನೀರು ಹರಿಯುತ್ತಿದ್ದರೂ ಮೊದಲಿನ ಗತ್ತು ಉಳಿಸಿಕೊಂಡಿಲ್ಲ, ಕಳೆಗುಂದಿದೆ. ಡ್ಯಾಮದ ನೆಪಕ್ಕೆ ಹಳ್ಳದ ಮರಳೆಲ್ಲ ಆಕ್ರಮಣರ, ಗುತ್ತೆದಾರರ ಪಾಲಾಗಿದೆ. ಹಳ್ಳದ ತುಂಬೆಲ್ಲ ಹಾಥ ಅನ್ನೋ ಹುಲ್ಲು, ರಾಕ್ಷಸಿ ಜಾಲಿ ಬೆಳೆದು ಮಸಣ ಮೌನ ಆವರಿಸಿದೆ. ವಿಶಾಲ ಹಳ್ಳದ ದಂಡೆಯೆಲ್ಲ ಉಳ್ಳವರ ಅವರಿವರ ಪಾಲಾಗಿದೆ. ಇಟ್ಟಿಗೆ ಭಟ್ಟಿಗಳಂತು ಹಳ್ಳವನ್ನೆ ಭಕ್ಷಿಸಲು ಹೊರಟಂತೆ ಗೋಚರಿಸುತ್ತಿವೆ. ಸೇತುವೆ ಇಕ್ಕೆಲಗಳನ್ನು ನೋಡಿದ್ರೆ ಹಳ್ಳವೋ, ದೊಡ್ಡ ಘಟಾರವೊ, ತಿಪ್ಪೆಯೋ ಎಂಬಂತೆ ಅಲ್ಲಿ ಬಿದ್ದಿರುವ ಒಡೆದ, ಕೊಳೆತ ತತ್ತಿಗಳು, ಪ್ರಾಣಿ, ಪಕ್ಷಿಗಳ ಎಲಬು, ಪುಚ್ಚಗಳು ಕಾಣುತ್ತವೆ. ಊರಲ್ಲಿ ಯಾವುದೇ ಪ್ರಾಣಿ ಸತ್ತರೂ ಬಂದು ಬೀಳುವದು ಇಲ್ಲಿಯೆ. ಅಲ್ಲದೆ ಊರನ್ನು ಶುಚಿಯಾಗಿಡಬೇಕೆಂದು ಬಂದ ಯೋಜನೆಯಿಂದ ಇಡಿ ಊರಿನ ಚರಂಡಿ ನೀರೆಲ್ಲ ಬಂದು ಸೇರುವುದು ಈ ಹಳ್ಳವನ್ನೇ. ಇನ್ನೂ ದಂಡೆಯ ಅಕ್ಕಪಕ್ಕದಲ್ಲಿ ಗೊಬ್ಬರಗುಂಡಿ, ತಿಪ್ಪೆಗಳಿಗೇನು ಕಮ್ಮಿ ಇಲ್ಲ. ಅರ್ಧ ಊರಿಗೆ ನೀರನ್ನು ಒದಗಿಸುವ ಫಿಲ್ಟರ ಗುಂಡಿಯ ಪಕ್ಕದಲ್ಲಿ ಜೊಂಡುಗಟ್ಟಿದ ನೀರು ಎಮ್ಮೆ, ಹಂದಿಗಳ ಆವಾಸಸ್ಥಾನ ಆಗಿದೆ ಎಂದು ತಮಗೆ ವಿವರಿಸಿ ಹೇಳಬೇಕಾಗಿಲ್ಲ. ಹಿಂದೆಲ್ಲ ನವರಾತ್ರಿ ಉತ್ಸವ ಸಂದರ್ಭದಲ್ಲಿ ಏಕಾದಶಿ ದಿನ ಅವಭೃತ ಸ್ನಾನಕ್ಕೆಂದು ಇದೇ ಹಳ್ಳಕ್ಕೆ ಹೋಗುತ್ತಿದ್ದಾಗ ಅರ್ಚಕರು ತಾವು ಸ್ನಾನ ಮಾಡಿ, ಉತ್ಸವ ಮೂರ್ತಿಗೂ ಮಾಡಿಸುತ್ತಿದ್ದರು. ಭರ್ಜರಿ ಭಜನೆ, ಭಾವಾವೇಶದ ಮಂತ್ರಗಳಿಂದ ನಮ್ಮಲ್ಲೂ ಪರಕಾಯ ಶಕ್ತಿ ಪ್ರವೇಶಿಸಿದಂತಾಗಿ ನಡುಗಿಸುವಂತಹ ಛಳಿಯಲ್ಲಿ ನೀರಿಗೆ ಇಳಿದು ಸ್ನಾನ ಮಾಡಿಬಿಡುತ್ತಿದ್ದೆವು. ಆದ್ರೆ ಆ ಪರಿಸ್ಥಿತಿ ಈಗಿಲ್ಲ. 'ಅವಭೃತ ಸ್ನಾನಕ್ಕ

ಲ್ಲರೂ ಬರ್ರಿ' ಅಂತ ಮೈಕನಾಗ ಅನೌನ್ಸ ಮಾಡಿ ಮಾಡಿ ಸಾಕಾಗಿ ಇದ್ದೋರು ನಾಲ್ಕು ಂದಿ ಹೋಗಬೇಕಾದ ಪರಿಸ್ಥಿತಿ ಬಂದಿದೆ. ಕಾರಣ ಇಷ್ಟೇ : ಅಗಸಿ ಮುಂದಿನ ಹಳ್ಳ ಷ್ಟು ವಾಕರಿಗಿಟ್ಟಿಸುವಂಗಾಗಿದೆ. ನಾಯಕವಾಡಿ ಶಾಲೆಯ ಅಕ್ಕಪಕ್ಕದ ಕಿರಿದಾದ ದಿಯ ಮೂಲಕ ಮೂಗುಮುಚ್ಚಿಕೊಂಡು ಹೋದ ನಂತರದಲ್ಲಿ ಘಟಾರದ ರಿನಲ್ಲಿ ನಾಲ್ಕು ಹೆಜ್ಜೆ ಹಾಕಬೇಕು. ಆಮೇಲೆ ಜೊಂಡಿನ ನೀರನ್ನು ದಾಟಿ ಆ ಶುದ್ಧ ರು ಹರಿಯುವ ಜಾಗ ಸಿಗೋದು. ಅಲ್ಲಿ ಪವಿತ್ರವಾಗಿ ಮರಳಿ ಈ ನರಕದ ೂಲಕವೆ ಹೊರಬರಬೇಕಲ್ಲ! ಭರ್ಜರಿ ಹುರುಪಿನಿಂದ ಬರುವ ಭಜನಾ ತಂಡ ಲ್ಲಿಗೆ ಬರುತ್ತಲೆ ಠುಸ್ಸ ಆಗಿಬಿಡುತ್ತಾರೆ. ದಂಡೆಯಿಂದ 'ಗೋವಿಂದ ಗೋವಿಂದ' ತ ವಾಸನೆ ಹೋಗತನ ಓಡಿದ್ದೆ, ಓಡಿದ್ದು. ಸಹೃದಯವಂತಿಕೆ ಇರುವಂತಹ ಾವುದೇ ವ್ಯಕ್ತಿಗೂ ಇಂದಿನ ಹಳ್ಳದ ಪರಿಸ್ಥಿತಿ ನೋಡಿದ್ರೆ ಮನಸ್ಸು ಮಮ್ಮಲ ರುಗಲೇಬೇಕು.

ಎಲ್ಲ ಊರಲ್ಲಿ ಹಳ್ಳಗಳಿರಬಹುದು, ಆದರೆ ನಮ್ಮೂರ ಹಳ್ಳ ಯಾಕೆ ಹಿರಿದು ನನಗೆ ಿಸುತ್ತೆ ಅಂತ ತಮ್ಮ ಗಮನಕ್ಕ ಬಂದಿರಬೇಕಲ್ಲ! ನಾಮಕಾವಸ್ತೆ ಎಂತಿರದೆ ಗ್ರಾಮ ಂದಿಗಿನ ಹಲವಾರು ಸಾಂಸ್ಕೃತಿಕ ಸಂಬಂಧಗಳಿಂದ ಜನರ ಉಸಿರಾಗಿದ್ದರಿಂದಲೇ ಷ್ಟೆಲ್ಲ ಬರಿಬೇಕಾಯಿತು. ಕಳೆದ ವರ್ಷ ಹಳ್ಳ ತುಂಬಿ ಸೇತುವೆ ಕೊಚ್ಚಿಕೊಂಡು ೋದಾಗ ಖುಷಿಯಾಗಿತ್ತು. ಹಳ್ಳದ ಬಗ್ಗೆ ಯಾರು ಕೇರ್ ಮಾಡದಿದ್ದರೂ ಹಳ್ಳವೇ ನ್ನು ಆಕ್ರಮಿಸಿಕೊಂಡವರಿಗೆ ಒಂದು ತರಹದ ಎಚ್ಚರಿಕೆ ಘಂಟೆಯನ್ನು ನೀಡಿತು. ರೂ ಒತ್ತುವರೆ ನಿಂತಿಲ್ವೆ! ಒಂದು ಕಾಲಕ್ಕೆ ಪ್ರಾಣಬಿಂದುವಾಗಿದ್ದ ಹಳ್ಳವನ್ನು ಉಳ್ಳವರು ತಮ್ಮ ಮನೆಯಲ್ಲಿ ಬೋರವೆಲ್‌ಗಳನ್ನು ಹಾಕಿಸಿಕೊಳ್ಳುವುದರ ಮೂಲಕ ಮರೆತಿದ್ದಾರೆ. ಗಾಡಿ ಉಳ್ಳವರು ಸಿಹಿ ನೀರಿರುವ ಬೋರವೆಲ್‌ಗಳಿರುವಲ್ಲಿ ಹೋಗಿ ನೀರು ತರತಾರೆ. ಉಳಿದವರಿಗೆಲ್ಲ ಈ ಹಳ್ಳದ ನೀರೆ ಗತಿ. ಆ ವೈಭವದ ದಿನಗಳನ್ನು ಮತ್ತೆ ಹಳ್ಳ ಕಾಣುವಂತಾಗುವುದೊ ಅಥವಾ ಕಾಲನ ಹೊಡೆತಕ್ಕೆ ಸಿಲುಕಿ, ದುರ್ಜನರ ದುರಾಸೆಗೆ ಬಲಿಯಾಗಿ ಬೆಂಗಳೂರಿನಲ್ಲಿ ಘಟಾರದಂತೆ ಹರಿಯುವ ನದಿಯೊಂದ ರಂತಾಗುವುದೊ ಅಥವಾ ಬೊಳ್ಳೋಳ್ಳೀ ಮಾರೊ ಶಂಕ್ರಜ್ಜ ಚಿಕ್ಕೊರಿರುವಾಗ ''ಐದ್ಮೂಲಿ ಊರು, ಊರಸುತ್ತ ಸುಡುಗಾಡಿ, ಕು... ದೈವ, ಹಿಂಗ ಇದ್ದಾಗ ಹ್ಯಾಂಗ ಉದ್ಧಾರ ಆಗುತ್ತಪ'' ಎಂದು ಒದರಿಕೋತ ಹೋಗತ್ತಿದ್ದ ಮಾತಿನಾಂಗ ಎಲ್ಲಿ ಆತನ ಮಾತುಗಳು ನಿಜವಾಗ ತಾವೋ ? ಎನ್ನುವ ಚಿಂತೆ ನನ್ನದು.



ಗುಂಡುರಾವ್ ದೇಸಾಯಿ ಮಸ್ಕಿ
ರಾಯಚೂರು ಜಿಲ್ಲೆ

# ರಾಜಧಾನಿಯ ಬೀದಿಗಳಲ್ಲಿ...



ಆಧುನಿಕ ಕಾಲದ ಹಣ್ಣುಗಳು ತಿನ್ನಲು ಬರುವುದಿಲ್ಲ
ಗೋಮಾಂಸ ತಿನ್ನುವೆ
ಹಂದಿ ಮಾಂಸವೂ ತಿನ್ನುವೆ
ಮನುಷ್ಯರ ಜೀವ ತಿನ್ನಲಾರೆ

ಗೋಮಾಂಸ ತಿನ್ನುತ್ತಿರುವದಕ್ಕೆ
ನನ್ನನ್ನು ಬತ್ತಲೆ ಮಾಡಿ ಓಡಾಡಿಸಿರಿ
ಹಂದಿ ಮಾಂಸದ ರುಚಿ ನೋಡಿದ್ದಕ್ಕೆ
ಧರ್ಮಭ್ರಷ್ಟಗೊಳಿಸಿ ಫತ್ವಾ ಹೊರಡಿಸಿರಿ

ತಾನೇ ರಚಿಸಿದ ಒಂದು ಪ್ರಾಣಿಯ ಖಂಡದ ತುಂಡಿನಿಂದಾಗಿ
ನನ್ನ ಪ್ರಭು ಮೈಲಿಗೆಯಾಗಿಬಿಡುತ್ತಾನೆಂದರೆ ಏನು ಹೇಳಬೇಕು
ಮೂರ್ಖಾತಿಮೂರ್ಖ ಎಲ್ಲ ಜೀವಿಗಳ ಪೈಕಿ
ಇಲ್ಲಿ ಮನುಷ್ಯ ಮಾತ್ರ ಅನಿಸುತ್ತದೆ

ರಾಜಧಾನಿಯ ಬೀದಿಗಳಲ್ಲಿ ತಲೆತಿರುಕ ನಾಯಿಗಳಂತೆ
ಹೊಸತೇನಲ್ಲ ದೇವರ ದಲ್ಲಾಳಿಗಳು ಜಗಳವಾಡತೊಡಗಿರುವುದು

ಎಲ್ಲರೂ ಕೂಡಿ ಅಮಾಯಕರ ಕುತ್ತಿಗೆ ಕೊಯ್ಯಿರಿ
ಹೆತ್ತ ತಾಯಂದಿರ ಬಸಿರು ಚೆಲ್ಲಿ ಓಕುಳಿಯಾಡಿ
ಅಂಗಡಿ ಮುಂಗಟ್ಟುಗಳ ಸುಟ್ಟು ಅಲಾಯಿ ಕುಣಿಯಿರಿ
ಹೆಸರೇ ಇಲ್ಲ ಎಲ್ಲದಕ್ಕೂ ಮೂಲ ಅನ್ನುವುದಾದರೆ
ಭೂಮಿಯ ಮೇಲೆ ಮನುಷ್ಯರ ಹೆಸರೇ ಇಲ್ಲದಂತೆ ಮಾಡಿ

ನಿಮ್ಮೊಳಗಿನ ಪಿಶಾಚಿಗಳಿಗೆ
ತಮ್ಮ ಪಾಡಿಗೆ ತಾವು ಆರಾಮವಾಗಿರುವ
ಕಲ್ಲು ಆಲಯಗಳು ಭೀತಗೊಳ್ಳುವವು
ಎಷ್ಟಾದರೂ ಸಾವಿನ ವ್ಯಾಪಾರಿಗಳು ನೀವು
ದಾರಿಯಲ್ಲಿ ಬಿದ್ದ ಕಳೇಬರಗಳ ಹೊತ್ತು ನಡೆಯುವವರು ನಾವು

ಕರುಳು ಬಗಿದು ಹಾರ ಮಾಡಿಕೊಂಡವರ ವಿಳಾಸ ಬಲ್ಲವರಿಲ್ಲ
ದೇವರು ಒಂದು ಕನ್ನಡಿಯ ಹಾಗೆ
ಕನ್ನಡಿಯ ನಿಜವಾದ ಮುಖ ನೋಡಿದವರಿಲ್ಲ
ಆಕಸ್ಮಿಕ ತುಟಿ ಸೋಕಿದ ದುಂಬಿಗಳು
ಮೂರ್ಛೆ ತಪ್ಪಿ ಬಿದ್ದಿವೆ ಇಲ್ಲಿ
ರಾಜಧಾನಿಯ ಬೀದಿಗಳಲ್ಲಿ

ಹುಚ್ಚರ ದರ್ಬಾರಿನಲ್ಲಿ ದೂರು ಯಾರಿಗೆ ನೀಡೋಣ
ರಾಜಧಾನಿಯಿಂದ ಬಹಳ ದೂರ ನಾವು

ಆರಿಫ್ ರಾಜಾ
ಪಾ.ಪೋ. ಅರಕೇರಾ
ದೇವದುರ್ಗ ತಾಲ್ಲೂಕು
ರಾಯಚೂರು ಜಿಲ್ಲೆ - ೫೮೪ ೧೧೧

# ಹುಟ್ಟುವ ಮೊದಲೇ ತೆರಿಗೆ ಕಟ್ಟಿದ ಕ್ರಿಸ್ತ





ತೆರಿಗೆ ಕಟ್ಟುವ ಪದ್ಧತಿ ಯೂರೋಪಿನಲ್ಲಿ ಕಾಲಿಟ್ಟಿದ್ದು ವಾಗ? ಇದನ್ನು ಕೆದಕಲು ಹೊರಟ ಇತಿಹಾಸಜ್ಞರಿಗೆ ಚನೆ ಸಿಕ್ಕಿದ್ದು ಹೆರೋಡ್ ಎಂಬ ರಾಜನ ಹೆಸರು. ಈತ ಟ್ಟ ಮೊದಲ ಬಾರಿಗೆ ತೆರಿಗೆ ವಿಧಿಸಿದ. ಅದನ್ನು ಪ್ರತಿಯೊಬ್ಬ ಯೂ ಖುದ್ದಾಗಿ ಕಟ್ಟಬೇಕೆಂದು ಆದೇಶ ಹೊರಡಿಸಿದ್ದ. ಹಳ್ಳಿಗಳಿಂದ, ಪಟ್ಟಣಗಳಿಂದ ಜನರು ಗಾಡಿಗಳಲ್ಲಿ ಅಥವಾ ದುಬಂದು ತೆರಿಗೆ ಕಟ್ಟಬೇಕಾಗಿತ್ತು. ಹೀಗೆ ಆರಂಭವಾದ ಯೆ ಅವಿರತವಾಗಿ ಮುಂದುವರಿಯಿತು. ಜೋಸೆಫ್ ತ್ತು ಮೇರಿ ದಂಪತಿಗಳೂ ತೆರಿಗೆ ಕಟ್ಟಲು ಹೊರಟರು. ರು ಪಾವತಿಸಬೇಕಾಗಿದ್ದ ಸ್ಥಳವೇ ಬೆತ್ಲೆಹೆಮ್. ಗರ್ಭಿಣಿ ಗಿದ್ದ ಮೇರಿ ಅಲ್ಲೇ ಮಗುವಿಗೆ ಜನ್ಮ ನೀಡಿದಳು. (ಇದಕ್ಕೆ ರ ಗಾಸ್ಪೆಲ್ ಲೂಕ್ ೨:೧-೫ ಮತ್ತು ೨:೬-೭)

ಈ ದಿನಾಂಕ ಯಾವುದು ಎಂದು ಪತ್ತೆ ಮಾಡಿದಲ್ಲಿ ಕ್ರಿಸ್ತನ ದಿನ ಕರಾರುವಾಕ್ಕಾಗಿ ತಿಳಿದಂತಾಗುವುದಲ್ಲವೇ? ಈ ುತ್ತ ಬಹಳ ದಿನಗಳಿಂದ ನಡೆಯುತ್ತಲೇ ಇದೆ. ೆಂಡರ್‌ಗಳ ಗೊಂದಲದಿಂದ ಎಷ್ಟೆಲ್ಲಾ ತಪ್ಪುಗಳಾಗಿವೆ ುದನ್ನು ಕುರಿತು ೧೯೯೯ರಲ್ಲಿ ಒಂದು ದೊಡ್ಡ ಪುಸ್ತಕವೇ ಟವಾಗಿತ್ತು. ಮಾಗಿ ಎಂದು ಕರೆಯಲಾಗುವ ಮೂವರು ರು ಕಂಡ ನಕ್ಷತ್ರದ ಹುಡುಕಾಟವೇ ಈ ಪುಸ್ತಕದ ವಸ್ತು. ಪರ್‌ನೋವಾ, ಧೂಮಕೇತು, ನೋವಾ ಹೀಗೆ ಬಗೆಯ ಸಾಧ್ಯತೆಗಳನ್ನು ಚರ್ಚಿಸಿ ಯಾವುದೇ ್ಣಯಕ್ಕೆ ಬರಲಾಗದೇ ಕೈಬಿಟ್ಟಿದ್ದರು ಅದರ ಕರ್ತೃಗಳು.

ತೆರಿಗೆಯ ಹೊಸ ವಿಷಯ ಬೆಳಕಿಗೆ ಬರುವಾಗಲೇ ್ನೊಂದು ಹೊಸ ವಿಷಯವೂ ಬಯಲಾಯಿತು. ಟರ್ಕಿಯ ಾರಾ ನಗರದ ಸಮೀಪ ಉತ್ಖನನ ನಡೆಸಿದಾಗ ಹಳೆಯ ೀಮನ್ ಶಾಸನವೊಂದು ಗೋಚರಿಸಿತು. ಅದರ ಪ್ರಕಾರ ೂ. ೮ರಲ್ಲಿಯೇ ತೆರಿಗೆ ಕಟ್ಟುವ ಆದೇಶ ಜಾರಿಯಲ್ಲಿತ್ತು. ಹೆರಾಡ್ ಜೀವಂತವಿದ್ದ.

ಕ್ರಿಸ್ತಶಕೆಯ ಆರಂಭವನ್ನು ನಿಗದಿಪಡಿಸಿದ ಾನಿಸಿಯಸ್ ಎರಿಗುಸ್ ಅದಕ್ಕೆ ಯಾವ ಕಾರಣವನ್ನು ಕೊಂಡಿದ್ದ ಎಂದು ಇತಿಹಾಸಕಾರರು ಜಿಜ್ಞಾಸೆ ಡುತ್ತಿದ್ದಾರೆ. ತನ್ನ ಲೆಕ್ಕದ ದಿನದ ೫೩೩ ವರ್ಷಗಳ ದೆ ಕ್ರಿಸ್ತನ ಜನನವಾಯಿತು; ಅಲ್ಲಿಂದ ಕ್ರಿಸ್ತಶಕೆ ಆರಂಭ ಾತ ಘೋಷಿಸಿದ. ಇದರ ಪ್ರಕಾರ ಕ್ರಿಸ್ತನ ಜನನ ಕ್ರಿಸ್ತಪೂರ್ವ ೧ ಎಂದಾಗುತ್ತದೆ ಎಂದು ಕೆಲವರು ವಾದಿಸುತ್ತಾರೆ.

ಹೆರಾಡ್ ರಾಜನ ಜೀವಿತಾವಧಿಯಲ್ಲಿಯೇ ಕ್ರಿಸ್ತನ ಜನನವಾಯಿತು ಎಂಬುದಕ್ಕೆ ದಾಖಲೆಗಳಿವೆ. ಹೆರಾಡ್ ಸತ್ತಿದ್ದು ಯಾವಾಗ ಎಂಬುದನ್ನು ಲೆಕ್ಕಹಾಕಲು ಖ್ಯಾತ ವಿಜ್ಞಾನಿ ಯೋಹಾನೆಸ್ ಕೆಪ್ಲರ್ ಚಂದ್ರಗ್ರಹಣವೊಂದನ್ನು ಬಳಸಿದ್ದಾನೆ. ಇದು ಕ್ರಿ.ಪೂ. ೪ನೆಯ ಶತಮಾನದ ಗ್ರಹಣವಾದರೆ ಕ್ರಿಸ್ತ ಹುಟ್ಟಿದ್ದು ಕ್ರಿ.ಪೂ. ೪ಕ್ಕೂ ಮುಂಚೆ ಎಂದಾಗುತ್ತದೆ. ಇನ್ನೊಂದು ಗ್ರಹಣ ಕ್ರಿ.ಪೂ. ೧ರಲ್ಲಿ ನಡೆದದ್ದನ್ನು ಲೆಕ್ಕಕ್ಕೆ ತೆಗೆದುಕೊಂಡರೂ ಕ್ರಿ.ಪೂ. ೩ ಎಂದೇ ಆಗುತ್ತದೆ. ಮ್ಯಾಥ್ಯೂ ಬರೆದಿರುವಂತೆ ಹೆರಾಡ್ ಸತ್ತಾಗ ಕ್ರಿಸ್ತನಿಗೆ ಎರಡು ವರ್ಷ.

ಕ್ರಿ.ಪೂ. ೭ರಿಂದ ಈಚೆಗೆ ನಡೆದಿರಬಹುದಾದ ಎಲ್ಲ ಖಗೋಳೀಯ ಘಟನೆಗಳನ್ನೂ ಈಗ ಕಂಪ್ಯೂಟರ್ ಸಹಾಯದಿಂದ ತಿಳಿದುಕೊಳ್ಳಬಹುದು. ಕ್ರಿ.ಪೂ. ೭ರಲ್ಲಿ ಮೇ ೨೯, ಸೆಪ್ಟೆಂಬರ್ ೩೦ ಮತ್ತು ಡಿಸೆಂಬರ್ ೫ ಈ ಮೂರೂ ತಾರೀಖುಗಳಲ್ಲಿ ಗುರು ಮತ್ತು ಶನಿಗ್ರಹಗಳೆರಡೂ ಬಹಳ ಸಮೀಪದಲ್ಲಿ ಇದ್ದಂತೆ ಕಾಣುತ್ತಿದ್ದವು. ಬಹಳ ಸೂಕ್ಷ್ಮವಾಗಿ ಗಮನಿಸಿದರೆ ಮಾತ್ರ ಎರಡೂ ಬೇರೆ ಬೇರೆ ಚುಕ್ಕೆಗಳು ಎಂದು ತಿಳಿಯುತ್ತಿತ್ತು. ಈ ಮೂವರು ಪೂರ್ವದಿಂದ ಬಂದರು. ಆದ್ದರಿಂದ ಸೆಪ್ಟೆಂಬರ್‌ನಲ್ಲಿ ಈ ಚುಕ್ಕೆಗಳನ್ನು ಕಂಡು ಯಾತ್ರೆ ಆರಂಭಿಸಿರಬಹುದು ಎಂದಿಟ್ಟುಕೊಳ್ಳೋಣ. ಎರಡೂ ಮೀನರಾಶಿಯಲ್ಲಿ ಇದ್ದವು. ಮೇ ತಿಂಗಳಲ್ಲಿ ಹೊರಟರೆಂದುಕೊಳ್ಳುವುದು ಕಷ್ಟ. ಏಕೆಂದರೆ ಮರುಭೂಮಿಯನ್ನು ದಾಟಲು ಯಾರೂ ಬೇಸಿಗೆಯಲ್ಲಿ ಹೊರಡುವುದಿಲ್ಲ. ಬಹುಶಃ ಸೆಪ್ಟೆಂಬರ್‌ನಲ್ಲಿ ಹೊರಟಿರಬಹುದು. ಹಾಗಿದ್ದಲ್ಲಿ ಡಿಸೆಂಬರ್ ಹೊತ್ತಿಗೆ ಜೆರುಸಲೆಂ ತಲುಪಿರಬಹುದು. ಆಗ ಪುನಃ ಶನಿ ಮತ್ತು ಗುರು ಒಟ್ಟಾಗಿ ಜೆರುಸಲೆಂನಿಂದ ಬೆತ್ಲೆಹೆಂ ದಾರಿಯಲ್ಲಿ ಅವರಿಗೆದುರಾಗಿ (ಸಂಜೆ) ಮಾರ್ಗದರ್ಶನ ನೀಡಿರಬಹುದು.

ಆದ್ದರಿಂದ ಅವರಿಗೆ ಕಂಡದ್ದು ಎರಡು ಗ್ರಹಗಳ ಯುತಿ ಮಾತ್ರ ಎನ್ನಬಹುದು.

ಇದೇ ರೀತಿ ಕ್ರಿ.ಪೂ. ೩ರ ಆಗಸ್ಟ್‌ನಲ್ಲಿ ಶುಕ್ರ ಮತ್ತು ಗುರು ಒಟ್ಟುಗೂಡಿದ್ದವು. ಎರಡೂ ಸಿಂಹರಾಶಿಯಲ್ಲಿದ್ದು ಸಂಜೆ ಕಾಣುತ್ತಿದ್ದವು. ಮಘ ನಕ್ಷತ್ರದ ಪಕ್ಕವೇ ಇದ್ದವು. ಅತಿ ಪ್ರಖರವಾದ ಶುಕ್ರಕ್ಕೊಂದು ಸಂಗಾತಿಯಂತೆ ಕಂಡಿದ್ದಿರಬಹುದು. ಇದನ್ನೇ ಹೊಸ ನಕ್ಷತ್ರ ಎಂದು ಭಾವಿಸಿದ್ದಿರಲೂಬಹುದು.

ಪ್ರಯಾಣದ ಅರ್ಧದೂರದವರೆಗೆ ಕಂಡ ಹೊಸ ನಕ್ಷತ್ರ ಮಾಯವಾಯಿತಂತೆ. ಆಮೇಲೆ ಪುನಃ ಕಂಡಿತಂತೆ. ಇದು ಈ ಎರಡು ಸಂದರ್ಭಗಳಿಗೆ ಹೊಂದುತ್ತದೆ. ಇಷ್ಟು ಸಮೀಪವಾಗಿ ಗ್ರಹಗಳು ಆ ಅವಧಿಯಲ್ಲಿ ಕಂಡಿದ್ದು ಇವೆರಡೇ ಬಾರಿ. ಮುಂದೆ ಕ್ರಿ.ಶ. ೧ರಿಂದ ಆಚೆಗೆ ನಾಲ್ಕೈದು ದಶಕಗಳವರೆಗೂ ಈ ಬಗೆಯ ಯುತಿ ಒದಗಲಿಲ್ಲ.

ಹಾಗಾದರೆ ಕ್ರಿಸ್ತ ಹುಟ್ಟಿದ್ದು ಕ್ರಿಸ್ತಪೂರ್ವದಲ್ಲಿ ಎಂದಾಗುತ್ತದೆ. ಇಲ್ಲದಿದ್ದರೆ ಹುಟ್ಟುವ ಮುಂಚೆಯೇ ತೆರಿಗೆ ಕಟ್ಟಿದ ಏಕಮಾತ್ರ ನಾಗರಿಕ ಎಂಬ ಕೀರ್ತಿ ಕ್ರಿಸ್ತನದಾಗುತ್ತದೆ.

೨೦೦೦ದ ಇಸವಿಯನ್ನು ಕ್ರಿಸ್ತನ ೨೦೦೦ನೆಯ ಹುಟ್ಟುಹಬ್ಬ ಎಂದು ಸಂಭ್ರಮದಿಂದ ಆಚರಿಸಿದ ಹಿನ್ನೆಲೆಯಲ್ಲಿ ಈ ಅಂಶ ಬಹಳ ಚರ್ಚೆಗೆ ಒಳಗಾಗಿತ್ತು. ಆದರೆ ೧೯೯೯ ಎಂಬ ಸಂಖ್ಯೆಯಲ್ಲಿ ನಾಲ್ಕೂ ಮುಂದಕ್ಕೆ ಉರುಳಿ ೨೦೦೦ ಎಂದಾಗುವುದನ್ನು ಸಂಭ್ರಮವೆಂದು ಪರಿಗಣಿಸುವವರಿಗೆ ಈ ವಾದ ವಿವಾದಗಳು ಹಿಡಿಸಲಿಲ್ಲ.

ಈಗ ಅದನ್ನು ನೆನಪು ಮಾಡಿಕೊಡುತ್ತಿರುವ ಉದ್ದೇಶ ಬಹಳ ಸರಳ. ಫೆಬ್ರವರಿ ೧೫ರ ಆಸುಪಾಸಿನಲ್ಲಿ ಗುರು ಮತ್ತು ಶುಕ್ರ ಒಂದಾಗುತ್ತವೆ. ಮುಸ್ಸಂಜೆಯ ಮಬ್ಬುಗತ್ತಲಿನಲ್ಲಿ ಇವೆರಡು ಬೇರೆ ಬೇರೆ ಚುಕ್ಕೆಗಳೋ? ಒಂದೇ ಸಿಡಿದು ಎರಡು ತುಂಡಾಗಿದೆಯೋ? ಎಂಬ ಅನುಮಾನ ನಿಮಗೆ ಖಂಡಿತ ಕಾಡುತ್ತದೆ. ೨೦೦೦ ವರ್ಷದ ಹಿಂದೆ ಆದ ಹಾಗೇ!

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧




ಬೆಳೆದುಬಂದಿರುವ ಈ ಕೋಟ್ಯಂತರ ಜೀವಿಗಳು ಇಂದಿಗೂ ಬದುಕುಳಿದಿದ್ದಲ್ಲಿ, ಶ್ರೀ ಪುರಂದರದಾಸರು ಹೇಳುವಂತೆ ''ಆದಿ ಸೃಷ್ಟಿಯಲಾರು ಮೊದಲೆ ಉದಿಸಿದರೇನು ? ಅವರವರೆ ಅಧಿಕರಧಿಕರಯ್ಯ.'' ಅಂದರೆ ಪ್ರತಿಯೊಂದು ಜೀವಿಗೂ ತನ್ನದೇ ಆದ ಆವಾಸ, ಸಹವಾಸ ಮತ್ತು ಹವ್ಯಾಸವಿದ್ದು ಒಂದಕ್ಕೊಂದು ಬೆಸೆದುಕೊಂಡ ಜಾಲ ಏರ್ಪಟ್ಟಿದೆ. ಈ ಜೀವಜಾಲದ ಎಳೆ ಅಲ್ಲಲ್ಲಿ ಕಡಿದರೆ ಇಡೀ ವ್ಯವಸ್ಥೆ ಕುಸಿದು ಮಾನವ ತನ್ನ ನೆಲೆ-ಬೆಲೆ ಕಳೆದುಕೊಳ್ಳಬೇಕಾದೀತು. ಈ ಎಚ್ಚರಿಕೆಯ ಗಂಟೆ ನೀಡುವ ಅಂತಾರಾಷ್ಟ್ರೀಯ ಸಭೆ, ಸಮಾರಂಭ ಮತ್ತು ಆಚರಣೆಗಳು ನೆಲ ಕಚ್ಚುತ್ತಿರುವ ಹಿನ್ನೆಲೆಯಲ್ಲಿ ೨೦೧೦

ಆಧಾರದ ಮೇಲೆ ಭವಿಷ್ಯತ್ತನ್ನು ರೂಪಿಸುವ ಮತ್ತು ಬಲ ಬೆಳೆಸಿಕೊಳ್ಳುವ ನಿಟ್ಟಿನಲ್ಲಿ ಚಿಂ ಮೂಡಿಸುವುದು.

ಇದು ಮಾನವನ ಅಳಿವು-ಉಳಿವಿನ ಪ್ರಶ್ನೆಯಾಗ ವುದರಿಂದ ನಮ್ಮ ಒಳಿತಿಗಾಗಿಯಾದರೂ ಎಲ್ಲ ಜ ಗಳನ್ನು ಗೌರವಿಸಿ, ರಕ್ಷಿಸಿ, ಸಂರಕ್ಷಿಸುವ ನಿಟ್ಟ ಯೋಚಿಸಿ, ಯೋಜಿಸಿ ಕಾರ್ಯಪ್ರವೃತ್ತರಾಗುವ ಕಂ ತೊಡಬೇಕಿದೆ.

ಪರಿಸರ ಸಂರಕ್ಷಣೆಯ ಆಂದೋಲನಗಳ ಸ್ಥಳೀಯ, ರಾಷ್ಟ್ರೀಯ, ಅಂತಾರಾಷ್ಟ್ರೀಯ ಸ ಸಂಸ್ಥೆಗಳು ಹಮ್ಮಿಕೊಂಡು ಜನಸಾಮಾನ್ಯರಿಗೆ ತರಬೇ ಶಿಕ್ಷಣ ನೀಡುವುದರೊಂದಿಗೆ, ನಮ್ಮ ಉಳಿವಿನ ಪ್ರ ಸಂಬಂಧಪಟ್ಟ ಸಂಶೋಧನೆ, ಸರ್ವೇಕ್ಷಣೆ, ನಿರ್ವಹ ಅಧ್ಯಯನಗಳನ್ನು ರೂಪಿಸುವುದು.

ಮತ್ತೊಂದು ವಿಶೇಷವೆಂದರೆ ಫೆಬ್ರವರಿ ೧

# ಅಂತಾರಾಷ್ಟ್ರೀಯ ಜೀವಿವೈವಿಧ್ಯ ವರ್ಷ - ೨೦೧೦

**ಸ**ರ್ವ ಸಸ್ಯಾತ್ಮಿಕಾ ಸರ್ವ ಜೀವನೋಪಾಯ
ರೂಪಿಣೀ ।
ಸರ್ವ ಪ್ರಾಣೇಷು ದ್ರವ್ಯೇಷು ಶೋಭಾರೂಪಾ
ಮನೋಹರಾ ॥
(ಪುರಾಣ ಶ್ಲೋಕ)

(ಎಲ್ಲ ಸಸ್ಯರೂಪಿಗಳೂ ಸರ್ವರ ಜೀವನೋಪಾಯಕ್ಕಾಗಿಯೇ ರೂಪಿತವಾಗಿವೆ. ಎಲ್ಲಾ ಸ್ಥಾವರ ಜಂಗಮಗಳು ಈ ಭೂಮಿಯನ್ನು ಶೋಭಾಯಮಾನವಾಗಿಸಿವೆ.)

ಸೂಕ್ಷ್ಮಾತಿಸೂಕ್ಷ್ಮ ಜೀವಿಗಳಿಂದ ಬೃಹದಾಕಾರದ ನೀಲ ತಿಮಿಂಗಿಲದವರೆಗೂ ಇರುವ ಕೋಟ್ಯಂತರ ಜಾತಿ, ಉಪಜಾತಿ, ಪ್ರಭೇದಗಳೆಲ್ಲದರ ಒಟ್ಟಾರೆ ಮೊತ್ತವೇ ಜೀವಿವೈವಿಧ್ಯ (ಬಯೋಡೈವರ್ಸಿಟಿ). ಈ ಪದ ೧೯೮೦ರಲ್ಲಿ ಲವ್‌ಜಾಯ್ ಎಂಬ ಜೀವವಿಜ್ಞಾನಿ ಬಳಸಿದ. ನಂತರ ನಾರ್ಸ್ ಮತ್ತು ಮಾಕ್‌ಮೇನಸ್ ಬಳಸಿದ್ದರು. ೧೯೮೫ರಲ್ಲಿ ವಾಲ್ಟರ್ ಜಿ. ರೋಸೆನ್ ಇದಕ್ಕೊಂದು ಅಧಿಕೃತ ಸ್ಥಾನ ನೀಡಿ 'ನ್ಯಾಷನಲ್ ಫೋರಮ್ ಆನ್ ಬಯೋಡೈವರ್ಸಿಟಿ' ಎಂಬ ವಿಚಾರ ಸಂಕಿರಣವನ್ನು ವಾಷಿಂಗ್‌ಟನ್‌ನಲ್ಲಿ ನಡೆಸಿದ್ದ. ಈ ವಿಚಾರ ಸಂಕಿರಣದ ಸಾರವನ್ನು ಹಾರ್ವರ್ಡ್ ವಿಶ್ವವಿದ್ಯಾಲಯದ ಪ್ರೊ|| ಎಡ್ವರ್ಡ್ ಒ. ವಿಲ್ಸನ್ ೧೯೮೮ರಲ್ಲಿ 'ಬಯೋಡೈವರ್ಸಿಟಿ' ಎಂಬ ಹೆಸರಿನಲ್ಲಿಯೇ ಪ್ರಕಟಿಸಿದ. ಅಂದಿನಿಂದ ಈ ಹೊಸ ಪದ ಜೀವವಿಜ್ಞಾನದಲ್ಲಿ ಸೇರ್ಪಡೆಯಾಗಿದೆ.

೩.೬ ಬಿಲಿಯನ್ ವರ್ಷಗಳ ಭೂ ಇತಿಹಾಸದಲ್ಲಿ

'ಅಂತಾರಾಷ್ಟ್ರೀಯ ಜೀವಿವೈವಿಧ್ಯ ವರ್ಷ' ಎಂದು ಘೋಷಿಸಲಾಗಿದೆ. ಈ ವರ್ಷ ಸಂಖ್ಯೆಯೇ ಒಂದು ವಿಶಿಷ್ಟ ನಿದರ್ಶನ ನೀಡುವಂತಿದೆ. ಪೂರ್ವಾರ್ಧದ '೨೦' ಮತ್ತು ಉತ್ತರಾರ್ಧದ ಸಂಖ್ಯೆ '೧೦' ಜೀವಿಗಳ ಸಂಖ್ಯೆ ಕ್ಷೀಣಿಸುತ್ತಿರುವುದರ ಸಂಕೇತ ಎಂದು ಪರಿಗಣಿಸಿ ಮುಂಬರುವ ವರ್ಷಗಳಲ್ಲಿ ಅದು ಇಳಿಮುಖವಾಗದೇ ವರ್ಷಗಳು ಉರುಳಿದಂತೆ ಏರಿಕೆಯ ಸಂಕೇತವಾಗುವ ಸಂಕಲ್ಪಕ್ಕೆ ಬದ್ಧರಾಗಬೇಕಿದೆ.

೨೦೦೨ರಲ್ಲಿ ಜಾಗತಿಕ ಜಾಗೃತಿಯ ಕಹಳೆ ಊದಿದ್ದ ಸುಮಾರು ೨೦೦ ರಾಷ್ಟ್ರಗಳು ಸಿಬಿಡಿ (ಕನ್ವೆನ್ಶನ್ ಆಫ್ ಬಯೋಲಾಜಿಕಲ್ ಡೈವರ್ಸಿಟಿ) ಸಭೆಯನ್ನು ಅಕ್ಟೋಬರ್ ೨೦೧೦ರಲ್ಲಿ ಜಪಾನಿನ ನಾಗೋಯಾದಲ್ಲಿ ಹಮ್ಮಿಕೊಂಡಿದೆ. ಕೆನಡಾದ ಮಾಂಟ್ರಿಯಲ್‌ನಲ್ಲಿರುವ ಐವೈಬಿ (ಇಂಟರ್‌ನ್ಯಾಷನಲ್ ಇಯರ್ ಆಫ್ ಬಯೋಡೈವರ್ಸಿಟಿ) ಘಟಕ ಜಾಗತಿಕ ಮಟ್ಟದ ಎಚ್ಚರಿಕೆ ನೀಡುವತ್ತ ಗಮನ ಹರಿಸಿದೆ.

ವಿಶ್ವಸಂಸ್ಥೆ ಘೋಷಿಸಿರುವ ಐವೈಬಿಯ ಮುಖ್ಯಾಂಶಗಳೆಂದರೆ,

೧. ಗುಣಾತ್ಮಕ ಪರಿಸರಕ್ಕೆ ಜೀವಿವೈವಿಧ್ಯದ ಕೊಡುಗೆಯನ್ನು ಜನಸಾಮಾನ್ಯರಿಗೆ ಪರಿಚಯಿಸುವುದು.

೨. ನೈಸರ್ಗಿಕ ಜೀವಿನಾಶಕ್ಕೆ ಹೋಲಿಸಿದರೆ ಮಾನವ ಕೃತ ನಾಶ ೧೦೦ ಪಟ್ಟು ವೇಗವಾಗಿ ನಡೆಯುತ್ತಿರುವುದನ್ನು ಮನದಟ್ಟು ಮಾಡಿಸುವುದು.

೩.. ಒಳ್ಳೆಯ ಫಲಿತಾಂಶ ತೋರಿಸಿರುವ ಯೋಜನೆಗಳ

ಚೀನಾ ದೇಶವು 'ಹುಲಿಯ ವರ್ಷ' (ಇಯರ್ ಟೈಗರ್) ಆಚರಿಸಿದರೆ ೨೦೧೦ನ್ನು ಯುವಜನ ಅಂತಾರಾಷ್ಟ್ರೀಯ ವರ್ಷವಾಗಿಯೂ ಆಚರಿಸಲಾಗು

ಭೂಗ್ರಹದ ನೈಸರ್ಗಿಕ ಆಸ್ತಿಯೆಲ್ಲವೂ ಜೀ ಸಂಪನ್ಮೂಲವೇ ಆಗಿರುವುದರಿಂದ ಯುವಜ ಎಚ್ಚೆತ್ತು ಗುರಿಸಾಧನೆಗಾಗಿ ಕಾರ್ಯಪ್ರವೃತ್ತರಾ ಎಂಬ ಹಾರೈಕೆ 'ಹೊಸತು' ಬಳಗದ್ದು.

ಪ್ರಕೃತಿಯ ವೈವಿಧ್ಯ, ರಹಸ್ಯಗಳಿಂದ ವಿಜ್ಞಾನಕ ತತ್ವಜ್ಞಾನಕ್ಕೂ ಮಿಗಿಲಾದ ಶಕ್ತಿಯೊಂದಿದೆ ಶಿವಶರಣೆಯ ವಚನ ಹೀಗೆನ್ನುತ್ತದೆ :

ಮರುಗ, ಮಲ್ಲಿಗೆ, ಪಚ್ಚೆ ಮುಡಿವಾಳಕ್ಕೆ
ಪರಿಮಳದುದಕವನೆರೆದವರಾರಯ್ಯ ?
ಈಳೆ, ನಿಂಬೆ, ಮಾವು ಮಾದಲಕ್ಕೆ
ಹುಳಿ ನೀರನೆರೆದವರಾರಯ್ಯ ?
ಕಬ್ಬು, ಬಾಳೆ, ಹಲಸು, ನಾರಿವಾಳಕ್ಕೆ,
ಸಿಹಿನೀರನೆರೆದವರಾರಯ್ಯ ?
ಇಂತೀ ಜಲವು ಒಂದೇ, ನೆಲವು ಒಂದೇ,
ಆಕಾಶವೂ ಒ
ಒಂದೇ ಜಲವು ಹಲವು ದ್ರವ್ಯಂಗಳ ಕೂಡಿ
ತನ್ನ ಪರಿ ಬೇರಾಗಿಹ ಹಾಗೆ

ಡಾ|| ಎನ್. ಎಸ್. ಲೀಲಾ
ನಂ. ೧೦೫, ವೆಸ್ಟ್ ಪಾರ್ಕ್ ಅಪಾರ್ಟ್‌ಮೆಂಟ್
೧೪ 'ಎ' ಕ್ರಾಸ್, ಮಲ್ಲೇಶ್ವರ, ಬೆಂಗಳೂರು - ೫೬೦ ೦೦

ನಮ್ಮ ಸರಕಾರವಾಗಲಿ, ಜೀವ ಉಳಿಸಬೇಕಾದ ವೈದ್ಯರಂಗವಾಗಲಿ ನಮ್ಮನ್ನು ಕಾಪಾಡದೆ, ಡ್ರಗ್ ಕಂಪನಿಗಳ ಕೃಪಾಕಟಾಕ್ಷಕ್ಕೆ ನಮ್ಮನ್ನು ಬಲಿ ಬಿಟ್ಟಿರುವುದರಿಂದ, ಜನಸಾಮಾನ್ಯರಾದ ನಾವು ಎಚ್ಚರಿಕೆಯಿಂದಿರಬೇಕಾಗಿದೆ. ವ್ಯಾಕ್ಸಿನ್ ಹಾಕಿಸಿಕೊಳ್ಳಬೇಕೆ, ಬೇಡವೆ ಎಂಬುದು ವ್ಯಾಕ್ಸಿನ್ ಬಗ್ಗೆ ಎಲ್ಲ ಮಾಹಿತಿಯನ್ನು ತಿಳಿದುಕೊಂಡ ನಂತರ ನಾವು ಕೈಗೊಳ್ಳುವ ಪ್ರಜ್ಞಾಪೂರ್ವಕ ನಿರ್ಧಾರವಾಗಬೇಕು. ಆದರೆ, ನೂರು ಟಿವಿ ಚಾನೆಲ್‌ಗಳಿದ್ದು, ಸಾವಿರ ಪತ್ರಿಕೆಗಳಿದ್ದರೂ, ಇಂತಹ ಮಾಹಿತಿ ಸುಲಭವಾಗಿ ಪ್ರಧಾನ ಮಾಧ್ಯಮಗಳಲ್ಲಿ ನಮಗೆ ಸಿಗುವುದಿಲ್ಲ, ಕಾರಣ ಬಹುತೇಕ ಪ್ರಧಾನ ಮಾಧ್ಯಮಗಳು ಈ ಔಷಧಿ ಕಂಪನಿಗಳಿಂದ ಪ್ರವಾಹದಂತೆ ಹರಿದು ಬರುವ ಜಾಹಿರಾತಿನ ಹಣವನ್ನು ಕಳೆದುಕೊಳ್ಳಲು ಸಿದ್ಧವಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ನಮ್ಮ ಆರೋಗ್ಯ ಬಹುತೇಕ ನಮ್ಮ ಕೈಯಲ್ಲಿಯೇ ಇದೆ ಎಂಬುದನ್ನು ನಾವು ಗಟ್ಟಿಯಾಗಿ ನಂಬಬೇಕಿದೆ. ಜಂಕ್ ಫುಡ್, ತಂಪು ಪಾನೀಯ, ಲೈಂಗಿಕ ಸ್ವೇಚ್ಛೆ, ಅಡ್ಡ ಹಾದಿಯನ್ನು ತುಳಿವ ಅಪಾಯಗಳನ್ನು ಎಳೆಯ ಜನಾಂಗಕ್ಕೆ ತಿಳಿಸಿ ಹೇಳಬೇಕಿದೆ.

ನೇಮಿಚಂದ್ರ

# ಔಷಧಿ ಕಂಪನಿಗಳ 'ಭೀತಿಯ ಮಾರುಕಟ್ಟೆ'

ನಮ್ಮ ಕಾರ್ಖಾನೆಯಲ್ಲಿ ಸೀನಿಯರ್ ಮ್ಯಾನೇಜರುಗಳಿಗೆ ಆಗಾಗ್ಗೆ ಪೂರ್ಣ ಪ್ರಮಾಣದ ವೈದ್ಯಕೀಯ ತಪಾಸಣೆ ಮಾಡುತ್ತಾರೆ. ಕೆಲವು ವರ್ಷಗಳ ಹಿಂದೆ ಮ್ಯಾಮೋಗ್ರಾಮ್ ಸೌಕರ್ಯ ನಮ್ಮ ಕಾರ್ಖಾನೆಯ ಆಸ್ಪತ್ರೆಗೆ ಒದಗಿದಾಗ, ನಮ್ಮನ್ನು ಅದಕ್ಕೆ ಒಳಪಡಿಸಿದ್ದರು. ಮೊದಲೆರಡು ಬಾರಿ ಹೆಚ್ಚೇನೂ ಯೋಚಿಸದೆ ಹೇಳಿದ ತಪಾಸಣೆಗಳನ್ನೆಲ್ಲ ಮಾಡಿಸಿಕೊಂಡು ಬಂದವಳು, ಒಂದು ದಿನ ಮ್ಯಾಮೋಗ್ರಾಮ್ ಏನು ಮಾಡುತ್ತದೆ ಎಂದು ತಿಳಿಯುವ ಕುತೂಹಲದಿಂದ ನೋಡಿದಾಗ, ಅದು ಸ್ತನದ ಸೂಕ್ಷ್ಮ ಮಿದು ಮಾಂಸದ ಮೇಲೆ ತೀವ್ರ ರೇಡಿಯೇಷನ್ ಚೆಲ್ಲುತ್ತದೆ ಎಂದು ತಿಳಿದು ಹೌಹಾರಿದೆ. ಎಲೆಕ್ಟ್ರಾನಿಕ್ಸ್ ಇಂಜಿನಿಯರ್ ಆದ ನನಗೆ, ರೇಡಿಯೇಷನ್‌ನ ಅಪಾಯಗಳು ತಿಳಿದಿವೆ. ನಮ್ಮ ಹೆಲಿಕಾಪ್ಟರಿನ ಮೇಲೆ ಯಾವುದೇ 'ರೇಡಿಯೇಟ್' ಮಾಡುವ 'ರಡಾರ್'ನಂತಹ ಸಲಕರಣೆಯನ್ನು 'ಆನ್' ಮಾಡಿದ್ದರೆ, ರಡಾರ್‌ನ ಎದುರು, 'ರೇಡಿಯೇಷನ್ ಬೀಮ್'ನಲ್ಲಿ ಯಾರೂ ಸುಳಿಯದಂತೆ ಎಚ್ಚರಿಕೆ ವಹಿಸುತ್ತೇವೆ. ಹೀಗಿರುವಾಗ ಸಂಪೂರ್ಣ ಸ್ವಸ್ಥವಿರುವ ನಾನು, ಸ್ತನದ ಕ್ಯಾನ್ಸರ್‌ನ 'ರಿಸ್ಕ್ ಗುಂಪಿ'ಗೆ ಸೇರಿಲ್ಲದ ನಾನು, ತೀಕ್ಷ್ಣ ರೇಡಿಯೇಷನ್ ಅನ್ನು ದೇಹದೊಳಕ್ಕೆ ನೇರವಾಗಿ ಬಿಟ್ಟುಕೊಳ್ಳುತ್ತಿದ್ದೇನೆ ಎನ್ನುವುದು, ಯೋಚಿಸುವಂತೆ ಮಾಡಿತು. 'ಮ್ಯಾಮೋಗ್ರಾಮ್ ಸ್ತನದ ಕ್ಯಾನ್ಸರ್ ಅನ್ನು ಆರಂಭದಲ್ಲಿಯೇ ಕಂಡುಹಿಡಿದುಬಿಡುತ್ತದೆ, ನಮ್ಮನ್ನು ಕ್ಯಾನ್ಸರ್‌ನಿಂದ ಬಚಾವು ಮಾಡುತ್ತದೆ' ಎಂದು ಎಲ್ಲಿಲ್ಲದ ಹಾಗೆ ಪ್ರಚಾರ ಮಾಡಿರುವುದರಿಂದ, 'ಇದು ನಮ್ಮ ಒಳ್ಳೆಯದಕ್ಕೆ' ಎಂಬ ಗಟ್ಟಿ ನಂಬುಗೆಯಲ್ಲಿ, ದುಬಾರಿ ಬೆಲೆಯ ಮ್ಯಾಮೋಗ್ರಾಮ್‌ಗೆ ಪದೇ ಪದೇ ಒಳಗಾಗುತ್ತಿರುವ ಮಹಿಳೆಯರು ಸಾವಿರ ಸಾವಿರ ಸಂಖ್ಯೆಯಲ್ಲಿ ಇದ್ದಾರೆ. ರೋಗದ ಅನುಮಾನವಿದ್ದಾಗ, ಮ್ಯಾಮೋಗ್ರಾಮ್ ಅನಿವಾರ್ಯವಿರಬಹುದು. ಆದರೆ ಸರ್ವೇಸಾಮಾನ್ಯವಾಗಿ ಆರೋಗ್ಯವಂತ ಹೆಂಗಸರನ್ನು ವರ್ಷಾ ವರ್ಷಾ ರೇಡಿಯೇಷನ್‌ಗೆ ಒಳಪಡಿಸುವುದರ ಪರಿಣಾಮವೇನು ಎಂದು ತಿಳಿದ ಮೇಲಂತೂ ಮತ್ತಷ್ಟು ಹೌಹಾರಿದೆ. ಮ್ಯಾಮೋಗ್ರಾಮ್ ಕ್ಯಾನ್ಸರ್‌ಗೆ ಕಾರಣವಾಗಬಲ್ಲದು ! 'ಅದು ಸಹಾಯ ಮಾಡುವುದಕ್ಕಿಂತ ಹತ್ತರಷ್ಟು ಹಾನಿ ಮಾಡುತ್ತದೆ' ಎಂಬ ಸತ್ಯ, 'ಹೆಲ್ತ್ ರೇಂಜರ್' ಮೈಕ್ ಆಡಮ್ಸ್ ಅವರ ಲೇಖನ ಓದಿದಾಗ ತಿಳಿಯಿತು. ಮ್ಯಾಮೋಗ್ರಾಮ್ ತೀಕ್ಷ್ಣ ರೇಡಿಯೇಷನ್ ಅನ್ನು ಹೊರಹಾಕಿ, ನೇರವಾಗಿ ಸ್ತನದ ಅಂಗಾಂಶಗಳ ಡಿ.ಎನ್.ಎ. ಅನ್ನು ಹಾನಿಮಾಡುತ್ತದೆ. ಜೊತೆಗೆ ಮ್ಯಾಮೋಗ್ರಾಮ್‌ನ ರಿಪೋರ್ಟ್‌ಗಳಲ್ಲಿ 'ತಪ್ಪು ಪಾಸಿಟಿವ್' ನೀಡುವುದು ಸಾಮಾನ್ಯವಾಗಿದ್ದು, ಸಂಪೂರ್ಣ ಸ್ವಸ್ಥವಿದ್ದ ಮಹಿಳೆಯರನ್ನು ಹಾನಿಕಾರಕ ಕೀಮೋತೆರಪಿ, ರೇಡಿಯೇಷನ್ ಮುಂತಾದ ಕ್ಯಾನ್ಸರ್ ಚಿಕಿತ್ಸೆಗೆ ಒಳಪಡಿಸಲು ಕಾರಣವಾಗುತ್ತದೆ. 'ಮ್ಯಾಮೋಗ್ರಾಮ್ ಮಾಡಿಸಿಕೊಳ್ಳುವುದು ಎಷ್ಟು ಅತ್ಯಗತ್ಯ ಎಂಬ ಅಬ್ಬರದ ಪ್ರಚಾರ, ಎಷ್ಟು ಜಾಣ ಯೋಜನೆಯಾಗಿದೆ ಎಂದರೆ, ಯಾವ ರೋಗವನ್ನು ತಡೆಗಟ್ಟಲು ಮ್ಯಾಮೋಗ್ರಾಮ್ ಮಾಡಿಸಿಕೊಳ್ಳಲು ಹೇಳುತ್ತಾರೋ, ಅನವಶ್ಯಕವಾಗಿ, ಮೇಲಿಂದ ಮೇಲೆ ಮಾಡಿಸಿಕೊಳ್ಳುವ ಮ್ಯಾಮೋಗ್ರಾಮ್ ಅದೇ ರೋಗವನ್ನು ಹುಟ್ಟುಹಾಕುತ್ತದೆ. ಈ ಮೂಲಕ 'ಕ್ಯಾನ್ಸರ್ ಇಂಡಸ್ಟ್ರಿ'ಗೆ ಲಾಭ ಹೆಚ್ಚಿಸುತ್ತದೆ' ಎನ್ನುತ್ತಾರೆ ಮೈಕ್ ಆಡಮ್ಸ್.

ಮುಂದುವರಿಸಿ, ಮೈಕ್ ಆಡಮ್ಸ್ ಹೇಳುತ್ತಾರೆ 'ಇಂದು ಸ್ತನದ ಕ್ಯಾನ್ಸರ್ ಅನ್ನು ಕಂಡು ಹಿಡಿಯುವ, ಅದಕ್ಕೆ ಚಿಕಿತ್ಸೆ ಮಾಡುವ 'ಕನ್ವೆನ್‌ಷನಲ್' ವಿಧಾನಗಳೆಲ್ಲವೂ ದೇಹದ ಒಳಕ್ಕೆ ಅಪಾಯಕಾರಿ ಟಾಕ್ಸಿಕ್‌ಗಳನ್ನು ನುಗ್ಗಿಸಿ ಮಹಿಳೆಯ ಆರೋಗ್ಯವನ್ನು ನಾಶ ಮಾಡುತ್ತಿವೆ. 'ಕ್ಯಾನ್ಸರ್ ಇಂಡಸ್ಟ್ರಿ' ಇಂದು ಕ್ಯಾನ್ಸರ್ ವಾಸಿ ಮಾಡುವುದರಲ್ಲಿ ಆಸಕ್ತವಿಲ್ಲ, ಕ್ಯಾನ್ಸರ್ ಹುಟ್ಟಿಸುವುದರಲ್ಲಿ, ಕ್ಯಾನ್ಸರ್ ಮುಂದುವರಿಸುವುದರಲ್ಲಿ ಲಾಭಕೋರಕ ಆಸಕ್ತಿಯನ್ನು ಹೊಂದಿದೆ. ಚಿಕಿತ್ಸೆಯ ಹೆಸರಿನಲ್ಲಿ, ತಪಾಸಣೆಯ ಹೆಸರಿನಲ್ಲಿ, ರೋಗದ ಮುಂದುವರಿಕೆಯೇ ಅದರ ಮೂಲ ಗುರಿಯಾಗಿದೆ. ಕಾರಣ ಸ್ತನದ ಕ್ಯಾನ್ಸರ್, ಔಷಧಿ ಕಂಪನಿಗಳಿಗೆ ಬಿಲಿಯ ಬಿಲಿಯ ಡಾಲರ್ ಲಾಭದ ಮೂಲವಾಗಿದೆ'. ಆದರೆ ಕ್ಯಾನ್ಸರ್ ಭೀತಿಯನ್ನು ಎಷ್ಟು ಹುಟ್ಟುಹಾಕಲಾಗಿದೆ ಎಂದರೆ, ಅದನ್ನು ತಡೆಯಲು

ರೇಡಿಯೇಷನ್ ಬೇಕಾದರೂ ದೇಹಕ್ಕೆ ನುಗ್ಗಿಸಿಕೊಳ್ಳುತ್ತೇವೆ, ಟಾಕ್ಸಿಕ್‌ಗಳನ್ನು ಸುರಿದುಕೊಳ್ಳುತ್ತೇವೆ, ಸುರಕ್ಷತೆಯನ್ನು ಸಾಬೀತು ಮಾಡಿರದ ವ್ಯಾಕ್ಸಿನ್‌ಗಳನ್ನು ನಮ್ಮ ಎಳೆಯ ಮಕ್ಕಳ ದೇಹಕ್ಕೆ ಚುಚ್ಚಿಸುತ್ತೇವೆ.

ಕೆಲವೇ ದಿನಗಳ ಹಿಂದೆ, ಏಕಾಏಕಿ, ಪ್ರಧಾನ ಪತ್ರಿಕೆಗಳ ಮುಖಪುಟವನ್ನು ಪೂರ್ಣವಾಗಿ ಆವರಿಸಿದ ದೊಡ್ಡ ದೊಡ್ಡ ಜಾಹಿರಾತುಗಳು ಹೊರಬಿದ್ದವು. ತಾಯಿ-ಮಗಳ ಚಿತ್ರದೊಡನೆಯ ಈ ಜಾಹಿರಾತು, 'ಸರ್ವಿಕಲ್ ಕ್ಯಾನ್ಸರ್ ಎಷ್ಟು ಭಯಂಕರ ರೋಗ, ಅದು ನಿಮ್ಮ ಮಗಳಿಗೆ ತಗುಲುವ ಸಂಭವ ಎಷ್ಟು ದೊಡ್ಡದಿದೆ, ಕೂಡಲೆ ಅವಳಿಗೆ ಸರ್ವಿಕಲ್ ಕ್ಯಾನ್ಸರ್ ತಡೆಗಟ್ಟುವ ವ್ಯಾಕ್ಸಿನ್ ಹಾಕಿಸುವುದು ಎಷ್ಟು ಮುಖ್ಯ' ಎಂದು ಸಾರಿದವು.

ಗರ್ಭಗೊರಳ ಕ್ಯಾನ್ಸರ್ (ಸರ್ವಿಕಲ್ ಕ್ಯಾನ್ಸರ್) ಬಹಳಷ್ಟು ಬಾರಿ ಎಚ್.ಪಿ.ವಿ. ಎಂಬ ವೈರಸ್ ಮೂಲದಿಂದ ಬರುವುದೆಂದು ಹೇಳುತ್ತದೆ ವೈದ್ಯಕೀಯ ರಂಗ. ಈ ವೈರಸ್ ಲೈಂಗಿಕ ಕ್ರಿಯೆಯ ಮೂಲಕ ಸೋಂಕುತ್ತದೆ.

ಇದಾಗಲೆ ಅಮೆರಿಕಾ, ಬ್ರಿಟನ್‌ನಂತಹ ಮುಂದುವರಿದ ದೇಶಗಳಲ್ಲಿ, ಶಾಲೆ ಶಾಲೆಗಳಲ್ಲಿ, ಹನ್ನೆರಡು ವರ್ಷದ ಮೇಲ್ಪಟ್ಟ ಕಿಶೋರಿಯರಿಗೆಲ್ಲ ಸರ್ವಿಕಲ್ ಕ್ಯಾನ್ಸರ್‌ನ ವ್ಯಾಕ್ಸಿನ್ ಹಾಕುವುದು 'ನ್ಯಾಷನಲ್ ಹೆಲ್ತ್ ಪ್ರೋಗ್ರಾಮ್'ನ ಭಾಗವಾಗಿದೆ. ಅಷ್ಟು ವಯಸ್ಸಿಗೆ ಲೈಂಗಿಕವಾಗಿ ಅವರು ಚಟುವಟಿಕೆಗೆ ತೊಡಗುವರು ಎಂಬ ಕಾರಣ ಒಡ್ಡಿ, 'ಎಳೆಯ ವಯಸ್ಸಿಗೇ ವ್ಯಾಕ್ಸಿನ್ ಹಾಕುವುದು ಅಗತ್ಯ' ಎಂದು ಅಬ್ಬರದ ಪ್ರಚಾರ ನಡೆದಿದೆ.


ಸರ್ವಿಕಲ್ ಕ್ಯಾನ್ಸರ್ ಪೀಡಿತ ಮಹಿಳೆ

'ವಿವಾಹದವರೆಗೆ ಬ್ರಹ್ಮಚರ್ಯವನ್ನು ಪಾಲಿಸಿ, ವಿವಾಹದ ನಂತರ ವಿವಾಹೇತರ ಸಂಬಂಧಗಳಲ್ಲಿ ತೊಡಗದೆ ಲೈಂಗಿಕ ಸ್ವಚ್ಛತೆಯನ್ನು ಉಳಿಸಿಕೊಳ್ಳಿ' ಎಂದು ಕರೆನೀಡುವ ಬದಲು, 'ಉತ್ತಮ ಜೀವನ ಮೌಲ್ಯಗಳನ್ನು ತಂದೆ ತಾಯಿಯರು ತಿಳಿಯ ಹೇಳಬೇಕು' ಎನ್ನುವ ಬದಲು, 'ಒಂದು ವ್ಯಾಕ್ಸಿನ್ ಹಾಕಿಸಿ ತಮ್ಮ ಹೆಣ್ಣುಮಕ್ಕಳನ್ನು ಸುರಕ್ಷಿತಗೊಳಿಸಬಹುದು' ಎಂಬ ಭ್ರಮೆಯನ್ನು ಹುಟ್ಟು ಹಾಕುತ್ತಿದ್ದಾರೆ.

ಇಂದು ವಿಜ್ಞಾನದ ಹೆಸರಿನ ಅಜ್ಞಾನ ಬಲು ಜಾಣತನದಿಂದ ಪ್ರಚಾರವಾಗುತ್ತಿದೆ.

ಸರ್ವಿಕಲ್ ಕ್ಯಾನ್ಸರ್‌ಗೆ ವ್ಯಾಕ್ಸಿನ್ ತಯಾರಿಸುವುದರಲ್ಲಿ ಭಾಗಿಯಾಗಿದ್ದ ಸಂಶೋಧಕರಲ್ಲಿ ಒಬ್ಬರಾದ ಡ... ಡಯಾನ್ ಹಾರ್ಪರ್, ಈ ವ್ಯಾಕ್ಸಿನ್‌ನ ಅಪಾಯಗಳ... ಎಚ್ಚರಿಕೆ ನೀಡಿದ್ದಾರೆ. ಈಕೆ 'ಈ ವ್ಯಾಕ್ಸಿನ್ ಸರ್ವಿಕ... ಕ್ಯಾನ್ಸರ್ ತಡೆಯುವುದಿಲ್ಲ. ವ್ಯಾಕ್ಸಿನ್ ಅನ್ನು 'ಓ... ಮಾರ್ಕೆಟ್' ಮಾಡಲಾಗುತ್ತಿದೆ. ತಂದೆತಾಯಂ... ಎಚ್ಚರಿಕೆಯಿಂದಿರಬೇಕು' ಎಂದಿದ್ದಾರೆ. ಇಲ್ಲಿಯವರೆ... ಮುಂದುವರಿದ ದೇಶಗಳಲ್ಲಿ ಕಂಡ 'ಓವರ್ ಮಾರ್ಕೆಟ... ಪಿಡುಗು ಈಗ ಭಾರತಕ್ಕೆ ಪ್ರವೇಶಿಸಿದೆ. 'ವ್ಯಾಕ್ಸಿನ್ ಮ... ರೋಗಕ್ಕಿಂತ ಹೆಚ್ಚು ಅಪಾಯಕಾರಿ' ಎಂದು ಈ... ಎಚ್ಚರಿಸಿದ್ದಾರೆ. ಔಷಧಿ ಕಂಪನಿಗಳು ಏಕಾಏಕಿ ಒ... ರೋಗದ ಬಗ್ಗೆ ವಿಪರೀತ ಭೀತಿ ಹುಟ್ಟಿಸಿ, ಈ 'ಫಿಯ... ಫ್ಯಾಕ್ಟರ್' ಬಳಸಿಕೊಂಡು ವ್ಯಾಕ್ಸಿನ್ ಮಾರುತ್ತವೆ. ಇದ... ಈಕೆ 'ಡಿಸೀಸ್ ಮಾಂಗರಿಂಗ್' ಎನ್ನುತ್ತಾರೆ.

ಮೂರು ತಿಂಗಳ ಹಿಂದೆ ಬ್ರಿಟನ್‌ನಲ್ಲಿ ಹದಿನ... ವರ್ಷದ ಬಾಲೆ ನಟಾಲಿ ಮಾರ್ಟನ್ ವ್ಯಾ... ಹಾಕಿಸಿಕೊಂಡ ಕೊಂಚ ಸಮಯಕ್ಕೆ ಮ... ಹೊಂದಿದಾಗ, ತನಿಖೆ ಆರಂಭಿಸಿದರೂ, ವ್ಯಾಕ್ಸಿ... ಅಡ್ಡ ಪರಿಣಾಮಗಳ ಬಗ್ಗೆ ಪ್ರಧಾನ ಮಾಧ್ಯಮಗ... ವಿಶೇಷವಾಗಿ ಚರ್ಚೆಯಾಗಲಿಲ್ಲ. ಕಳೆದ ವರ್ಷ... ಬ್ರಿಟನ್‌ನಲ್ಲಿ ೧೨ ವರ್ಷದ ಮೇಲ್ಪಟ್ಟ ಎಲ್ಲ ಹ... ಮಕ್ಕಳಿಗೆ ೨೦೧೧ರ ಒಳಗೆ ಚುಚ್ಚುಮದ್ದು ಹಾ... ಯೋಜನೆ ಜಾರಿಗೆ ಬಂದಿತು. ವ್ಯಾಕ್ಸಿನ್‌ನ ದಿಟವ... ಪರಿಣಾಮಗಳೇನು, ಅಡ್ಡಪರಿಣಾಮಗಳೇನು ... ಎಲ್ಲವೂ ಈಚೆಗೆ ಬರುವಷ್ಟರಲ್ಲಿ ದೇಶದ ಎಲ್ಲ ಹ...

# ಸಾದರ ಸ್ವೀಕಾರ

**ನ್ನೊಡಲ ಏಕದಾರಿ** (ಕವನ ಸಂಕಲನ)
ಡಾ|| ವಿರೇಶ ಬಡಿಗೇರ
ಟ : ೧೦೪ ಬೆಲೆ : ರೂ. ೭೦
**ೕಮತಿ ಅನಿತಾ ಬಡಿಗೇರ್, ಮಯ ಪ್ರಕಾಶನ,**
ಮಲಾಪುರ - ೫೮೩ ೨೨೧

**ಚನ ಸಂಸ್ಕೃತಿ** (ಲೇ. ಸಂಗ್ರಹ) ಡಾ|| ಟಿ. ಎಂ. ಭಾಸ್ಕರ್
ಟ : ೧೧೨ ಬೆಲೆ : ರೂ. ೫೦

**ಾರಕೂಡ ಶ್ರೀ ಚನ್ನಬಸವೇಶ್ವರ ಮಹಾತ್ಮೆ** (ರಂಗ ನಾಟಕ)
ಎಲ್. ಬಿ. ಕೆ. ಅಲ್ದಾಳ
ಟ : ೧೦೮ ಬೆಲೆ : ರೂ. ೫೦
ೕಲಿನ ಎರಡು ಪುಸ್ತಕಗಳ ಪ್ರಕಾಶಕರು
**ೕ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ**, ಸುಕ್ಷೇತ್ರ
ಾರಕೂಡ - ೫೮೫ ೪೩೭, ಬಸವಕಲ್ಯಾಣ ತಾಲ್ಲೂಕು
ೕದರ ಜಿಲ್ಲೆ

**ಂಗಮ ಫಕೀರನ ಜೋಳಿಗೆ** (ಕವಿತೆಗಳು) ಆರಿಫ್ ರಾಜಾ
ಟ : ೧೦೪ ಬೆಲೆ : ರೂ. ೪೦
**ಡಾಯಿ ಪ್ರಕಾಶನ**, ನಂ. ೨೧, ಪ್ರಸಾದ್ ಹಾಸ್ಟೆಲ್,
ದಗ - ೫೮೨ ೧೦೧

**ಟೋಗ್ರಾಫಿ** ವಿಜಯ ಸಿಂಧೂರ
ಟ : ೧೫೭ ಬೆಲೆ : ರೂ. ೧೦೫
**ೕಮತಿ ಮಹಾನಂದ ವಿಜಯ ಸಿಂಧೂರ**, ಕೋಸ್ಗಿಗಲ್ಲಿ,
ಮಖಂಡಿ - ೫೮೭ ೩೦೧, ಬಾಗಲಕೋಟೆ ಜಿಲ್ಲಾ

**ೕಪವಂಶ** (ಕವನ ಸಂಕಲನ) ಎ. ಕೆ. ಹಂಪಣ್ಣ
ಟ : ೯೨ ಬೆಲೆ : ರೂ. ೬೦
**ಂತಮ್ಮ ಪ್ರಕಾಶನ**, ಮಾಡನಾಯಕನ ಹಳ್ಳಿ, ಚಿತ್ರದುರ್ಗ
ಲ್ಲೂಕು ಮತ್ತು ಜಿಲ್ಲೆ

**ಈ ಪರಿಯ ನಿತ್ಯೋತ್ಸವ** (ಕೊಂಕು ಕವನಗಳು)
ಅನಂತ ಕಲ್ಲೋಳ
**ಪುಟ : ೫೨** **ಬೆಲೆ : ರೂ. ೩೦**
**ಅಮೋಘ ವಾಙ್ಮಯ ಪ್ರಸಾರ**, ಬೆಳಗಾವಿ - ೫೯೦ ೦೦೬

**ಕಾಟಮಲ್ಲ** (ನಾಟಕ) ಬಿ. ಟಿ. ಮುನಿರಾಜಯ್ಯ
**ಪುಟ : ೮೫** **ಬೆಲೆ : ರೂ. ೧೦೦**
**ಸೌಂದರ್ಯ ಪ್ರಕಾಶನ**, ನಂ. ೫೭, ೩ನೇ ಮುಖ್ಯರಸ್ತೆ,
೨ನೇ ಅಡ್ಡರಸ್ತೆ, ಕೆಂಗೇರಿ ಉಪನಗರ,
ಬೆಂಗಳೂರು - ೫೬೦ ೦೬೦

**ಶತಮಾನದ ಕವಿ ರಿಲ್ಕೆ** ಯು. ಆರ್. ಅನಂತಮೂರ್ತಿ
**ಪುಟ : ೭೨** **ಬೆಲೆ : ರೂ. ೫೦**
**ಅಭಿನವ**, ೧೭/೧೮-೨, ಮೊದಲನೇ ಮುಖ್ಯ ರಸ್ತೆ,
ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೪೦

**ಕಾವ್ಯ ಮಂಥನ** (ಅರವಿಂದ ಮಾಲಗತ್ತಿಯವರ ಕಾವ್ಯದ ವಿಮರ್ಶೆ)
ಸಂ. ಡಾ|| ಅರ್ಜುನ ಗೊಳಸಂಗಿ
**ಪುಟ : ೩೪೮** **ಬೆಲೆ : ರೂ. ೨೦೦**

**ದಲಿತ ಲೋಕದ ಶೋಧ** (ಜಾನಪದೀಯ ಅಧ್ಯಯನ)
ಡಾ|| ಅರ್ಜುನ ಗೊಳಸಂಗಿ
**ಪುಟ : ೧೦೪** **ಬೆಲೆ : ರೂ. ೧೦೦**

**ನೆರಳಿಗೂ ಮೈಲಿಗೆ** (ಕವನ ಸಂಕಲನ) ಸದಾಶಿವ ದೊಡಮನಿ
**ಪುಟ : ೭೨** **ಬೆಲೆ : ರೂ. ೫೦**

**ಅವ್ವ** (ಕವನ ಸಂಕಲನ) ಎನ್. ಸಿ. ವೆಂಕಟರಾಜು
**ಪುಟ : ೬೪** **ಬೆಲೆ : ರೂ. ೫೦**

**ಕೆಂಪು ನೀರು** (ಕವನ ಸಂಕಲನ) ಡಾ|| ವೈ. ಎಂ. ಭಜಂತ್ರಿ
**ಪುಟ : ೭೨** **ಬೆಲೆ : ರೂ. ೫೦**
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ದಲಿತ ಸಾಹಿತ್ಯ ಪರಿಷತ್ತು ರಾಜ್ಯಘಟಕ**, ಹುಡ್ಕೊ ಕಾಲನಿ,
ಹುಲಕೋಟಿ - ೫೮೨ ೨೦೫, ಗದಗ ಜಿಲ್ಲೆ

**HOD ಅಂದ್ರೆ ಹುಚ್ಚೋಡಿ ?** (ನಗೆಬರಹ)
ಡಾ|| ವಸಂತ ಅ. ಕುಲಕರ್ಣಿ
**ಪುಟ : ೧೦೮** **ಬೆಲೆ : ರೂ. ೪೦**
**ವಿಕ್ರಂ ಪ್ರಕಾಶನ**, ಕೆಂಪಾಪುರ, ಹೆಬ್ಬಾಳ, ಬೆಂಗಳೂರು - ೨೪

**ವಚನ ಸ್ಪಂದನ** (ಆಧುನಿಕ ವಚನಗಳು)
ಸಂ.: ರಂಗನಾಥ ಅಕ್ಕಲಕೋಟ, ಬಸವರಾಜ ಕುಂಬಾರ
**ಪುಟ : ೧೦೪** **ಬೆಲೆ : ರೂ. ೫೦**
**ಸ್ಪಂದನ ಸಾಹಿತ್ಯಾಸಕ್ತರ ಬಳಗ**, ವಿಜಾಪುರ - ೫೮೬ ೧೦೧

**ಜೀವನದಿ** (ಲೇಖನ ಸಂಗ್ರಹ) ಡಾ|| ಗೀತಾ ಪ್ರಸಾದ್
**ಪುಟ : ೧೨೮** **ಬೆಲೆ : ರೂ. ೬೫**
**ಧಾತ್ರಿ ಪುಸ್ತಕ**, ನಂ. ೧೭೦, ೩ನೇ 'ಸಿ' ಕ್ರಾಸ್
ವಿನಾಯಕ ಲೇಔಟ್, ನಾಗರಬಾವಿ ೨ನೇ ಹಂತ
ಬೆಂಗಳೂರು - ೫೬೦ ೦೭೨

**ಮಹಾಬೆಳಕು** (ಶ್ರೀ ಸಿದ್ದೇಶ್ವರ ಸ್ವಾಮಿಗಳ ಆಧ್ಯಾತ್ಮಿಕ ಪ್ರವಚನ)
ಸಂ. ಡಾ|| ಜಿ. ಎಂ. ಗಣೇಶ್
**ಪುಟ : ೧೫೨** **ಬೆಲೆ : ರೂ. ೧೦೦**
**ನಿರಂತರ**, ೯೯/೨ ಮತ್ತು ೩, ಮೊದಲನೆಯ ಮಹಡಿ,
ರೆಮ್ಕೋ ಲೇಔಟ್, ವಿಜಯನಗರ, ಬೆಂಗಳೂರು - ೪೦

**ಸ್ವಗತ** (ಕವನ ಸಂಕಲನ) ಡಾ|| ಎಸ್. ಪ್ರಸಾದಸ್ವಾಮಿ
**ಪುಟ : ೧೩೨** **ಬೆಲೆ : ರೂ. ೭೦**
**ಅವಿರತ ಪುಸ್ತಕ**, ನಂ. ೭೦, ೯ನೇ ಕ್ರಾಸ್, ೧ನೇ
ಮುಖ್ಯರಸ್ತೆ, ಬಿಡಿಎ ಲೇಔಟ್, ಅವಲಹಳ್ಳಿ,
ಬೆಂಗಳೂರು - ೫೬೦ ೦೮೫

**'ಅಮರ ರಂಗ-ರಾಜಾ'** (ಡಾ|| ರಾಜಾರಾಮಣ್ಣ ಮತ್ತು
ಡಾ|| ಎಚ್. ಕೆ. ರಂಗನಾಥ್ ಸಂಸ್ಮರಣ ಸಂಚಿಕೆ)
**ಪುಟ : ೨೦೪** **ಬೆಲೆ : ನಮೂದಿಸಿಲ್ಲ**
**ಭಾರತೀಯ ವಿದ್ಯಾ ಭವನದ ವಿಜ್ಞಾನ ಮತ್ತು ಮಾನವೀಯ
ಮೌಲ್ಯಗಳ ಗಾಂಧೀ ಕೇಂದ್ರ**, ನಂ. ೪೩/೧,
ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

ಕ್ಕಳಿಗೂ ಚುಚ್ಚಿ ಆಗಿರುತ್ತದೆ, ಬಿಲಿಯ ಬಿಲಿಯ
ಲರ್ ಲಾಭವನ್ನು ಔಷಧಿ ಕಂಪನಿಗಳು ಗಳಿಸಿರುತ್ತವೆ.
ಡ್ಡಪರಿಣಾಮಗಳು ಹೊರಬಂದರೆ, 'ಇನ್ನಷ್ಟು ಹೆಚ್ಚು
ಣಾಮಕಾರಿ' ಎಂದು ಇನ್ನೊಂದು ವ್ಯಾಕ್ಸಿನ್ ಅನ್ನು
ಾರುಕಟ್ಟೆಗೆ ಬಿಡುತ್ತಾರೆ. ನಟಾಲಿ ವ್ಯಾಕ್ಸಿನ್ ಹಾಕಿಸಿ
ಂಡು ಸತ್ತದ್ದು ೨೯ ಸೆಪ್ಟೆಂಬರ್. ಅಕ್ಟೋಬರ್
ಹಗಲೆ 'ನಟಾಲಿಯ ಸಾವು ಆಕೆಯ ಎದೆಯಲ್ಲಿ
ಸಕೋಶ ಮತ್ತು ಹೃದಯದಲ್ಲಿದ್ದ ಕ್ಯಾನ್ಸರ್ ಗಡ್ಡೆ
ಂದಾಗಿದ್ದು. ಆ ಗಡ್ಡೆಗಳು ಎಷ್ಟು ಭಯಂಕರವಿದ್ದವು
ದರೆ, ಈಕೆ ಯಾವ ಕ್ಷಣದಲ್ಲಿ ಕೂಡ ಸಾಯ
ುದಿತ್ತು. ಚುಚ್ಚುಮದ್ದು ಹಾಕಿಸಿ ಕೊಂಡಾಗ ಸತ್ತಿದ್ದು
ವಲ ಕಾಕತಾಳೀಯ' ಎಂಬ ತೀರ್ಪು ಕೊಟ್ಟರು.
ಾಲಿಯ ಸಾವಿಗೂ ವ್ಯಾಕ್ಸಿನ್‌ಗೂ ಸಂಬಂಧವಿಲ್ಲ'
ದು ಕೂಗಿ ಹೇಳುತ್ತಲೇ, ಸರಕಾರ, ಅಲ್ಲಿಯ
ಗೂ ನೀಡುತ್ತಿದ್ದ 'ಸರ್ವಾರಿಕ್ಸ್' ವ್ಯಾಕ್ಸಿನ್ ಅನ್ನು
ಕ್ಲೋಸ್ಮಿತ್‌ಕ್ಲೈನ್'ಗೆ ಬದಲಿಸಿತು. ಆಕೆಯ ಸಾವಿಗೆ
ರಣ ಕ್ಯಾನ್ಸರ್ ಗಡ್ಡೆಯಾಗಿದ್ದರೆ, ವ್ಯಾಕ್ಸಿನ್
ಲಿಸುವ ಅಗತ್ಯವೇನಿತ್ತು ಎಂಬ ಪ್ರಶ್ನೆ ಸಹಜವಾಗಿಯೇ
ಮೂಡುತ್ತದೆ. 'ಈ ಮಗು ದೊಡ್ಡ ಕ್ಯಾನ್ಸರ್ ಗಡ್ಡೆಯನ್ನು ಎದೆಯಲ್ಲಿಟ್ಟುಕೊಂಡು ಯಾವೊಂದೂ ತೊಂದರೆ ಇಲ್ಲದೆ ಬದುಕಿದ್ದಳು, ತಟ್ಟನೆ ಸತ್ತಳು ಎಂದರೆ ನಂಬಲಾಗುವುದೆ ? ಕ್ಯಾನ್ಸರ್ ಎಳೆದೆಳೆದು ಕೊಲ್ಲುವ ರೋಗ. ಎದೆಯಲ್ಲಿ ಅಷ್ಟು ಭಯಂಕರ ಕ್ಯಾನ್ಸರ್ ಗಡ್ಡೆಯಿದ್ದರೆ, ಉಸಿರಾಟದ ತೊಂದರೆ ಇರುತ್ತಿರಲಿಲ್ಲವೆ ? ಮಗುವಿನ ತೂಕ ಇಳಿಯುತ್ತಿರಲಿಲ್ಲವೆ, ತೀವ್ರ ನಿಶ್ಶಕ್ತಿ ಕಾಡುತ್ತಿರಲಿಲ್ಲವೆ ?' ಎನ್ನುತ್ತಾರೆ ಡಾ|| ಎಫ್. ಜಿ. ಬರ್ಗ್. ಔಷಧಿ ಕಂಪನಿಗಳ ದೈತ್ಯ ಹಣ ಬಲದ ಎದುರು ಈ ಎಳೆಯ ಬಾಲೆಯ ಸಾವಿನ ಸತ್ಯ ನಿಜಕ್ಕೂ ಹೊರಬರುವುದೆ ಎಂಬುದು ಜನಸಾಮಾನ್ಯರನ್ನು ಕಾಡುವ ಪ್ರಶ್ನೆ.

ಕಳೆದ ವರ್ಷ 'ಏವಿಯಾನ್ ಫ್ಲು', ಅದಕ್ಕೆ ವ್ಯಾಕ್ಸಿನ್. ಈ ವರ್ಷ 'ಸ್ವೈನ್ ಫ್ಲು' ಅದಕ್ಕೆ ವ್ಯಾಕ್ಸಿನ್. ಈಗ 'ಸರ್ವಿಕಲ್ ಕ್ಯಾನ್ಸರ್', ಅದಕ್ಕೆ ವ್ಯಾಕ್ಸಿನ್ – ನಾವು ಏನು ನೋಡುತ್ತಿದ್ದೇವೆ ? ಏಕಾಏಕಿ ರೋಗದ ಭೀತಿ, ಸಮೂಹ ಸನ್ನಿಯಂತೆ ಸಾಂಕ್ರಾಮಿಕವಾಗುವುದನ್ನು ಕಾಣುತ್ತಿದ್ದೇವೆ. ಇವೆಲ್ಲದರ ಹಿಂದೆ ಮಾರುಕಟ್ಟೆಯ ಲಾಭಕೋರ ತಂತ್ರ ಸ್ಪಷ್ಟವಾಗಿದೆ.

ಮೊದಲು ರೋಗವೊಂದನ್ನು ಅತ್ಯಂತ ಭಯಾನಕ ಎಂದು ಸಾರಿ ಭೀತಿ ಹುಟ್ಟಿಸಿ, ಇರುವ ರೋಗಗಳು ಲಾಭದಾಯಕವಿಲ್ಲದಿದ್ದರೆ, ಇಲ್ಲದ ರೋಗಗಳನ್ನು ಹುಟ್ಟು ಹಾಕಿ, ಪ್ರಯೋಗಾಲಯದಲ್ಲಿ ಹೊಸ ವೈರಸ್‌ಗಳನ್ನು ಸೃಷ್ಟಿಸಿ, ಆಕಸ್ಮಿಕವೆಂಬಂತೆ ಹೊರ ಬಿಡಿ.

ಆ ರೋಗಗಳಿಗೆ ಔಷಧಿ ಕಂಡುಹಿಡಿಯಿರಿ. ಭೀತಿ ಎಷ್ಟಿರುತ್ತದೆ ಎಂದರೆ, 'ಆ ಔಷಧಿಯ ಪ್ರಭಾವವೇನು, ಅದು ನಿಜಕ್ಕೂ ಕೆಲಸ ಮಾಡುತ್ತದೆಯೆ, ಅಡ್ಡ ಪರಿಣಾಮಗಳೇನು' ಎಂದೆಲ್ಲ ಯಾರೂ ತಲೆಕೆಡಿಸಿಕೊಳ್ಳಲು ಹೋಗುವುದಿಲ್ಲ, ಬೆದರಿದ ರೋಗಿಗಳು ಮುಗಿಬಿದ್ದು ಔಷಧಿಯನ್ನು ಕೊಳ್ಳುತ್ತಾರೆ.

ಆದರೆ ರೋಗ ಬಂದವರು ಮಾತ್ರ ಔಷಧಿ ಕೊಂಡರೆ ಹೆಚ್ಚು ಲಾಭವಿಲ್ಲ. ಆರೋಗ್ಯವಂತರೂ ಔಷಧಿ ಕೊಳ್ಳುವಂತೆ ಮಾಡುವುದು ಹೇಗೆ ? ಈಗ ತರಾತುರಿಯಲ್ಲಿ ಒಂದು ವ್ಯಾಕ್ಸಿನ್ ಕಂಡುಹಿಡಿಯಿರಿ. ಅದರ ಪ್ರಭಾವದ ಬಗ್ಗೆ ಎಲ್ಲಿಲ್ಲದ ಪ್ರಚಾರ ಕೊಡಿ. ಅಡ್ಡ ಪರಿಣಾಮಗಳನ್ನು ಮುಚ್ಚಿ ಹಾಕಿ.

ಸಮೂಹ ಮಾಧ್ಯಮಗಳನ್ನು ಯಥೇಚ್ಛವಾಗಿ ಹಣ

ಸುರಿದು ಬಳಸಿಕೊಳ್ಳಿ. ವೈದ್ಯರನ್ನು ಧನಬಲದಿಂದ ಗೆಲ್ಲಿ, ವಿರೋಧಿಸುವ ವೈದ್ಯರನ್ನು ಮಟ್ಟ ಹಾಕಿ, ಅವರ ವೃತ್ತಿಯನ್ನೇ 'ಮುಗಿಸಿಬಿಡಿ'.

ಈಗ ಸೃಷ್ಟಿಯಾಗಿದೆ ನೋಡಿ, 'ಭೀತಿಯ ಮಾರುಕಟ್ಟೆ'.

ಒಂದು ಕಾಲಕ್ಕೆ ಔಷಧಿ ತಯಾರಿಕೆ ಅತ್ಯಂತ ಉದಾತ್ತ ಉದ್ದೇಶದಿಂದ ಕೂಡಿತ್ತು. ರೋಗ ನಿವಾರಣೆಯ ಪಣ ತೊಟ್ಟ ಮಾನವೀಯ ಸಂಕಲ್ಪವಾಗಿತ್ತು. ಇಂದು ಎಲ್ಲವೂ ವ್ಯಾಪಾರವಾಗಿ, ಅಧಿಕ ಲಾಭವೇ ಮುಖ್ಯ ಧ್ಯೇಯವಾಗಿ, ತಮ್ಮ ಮಾರಾಟವನ್ನು ಏರಿಸಿಕೊಳ್ಳುವುದೇ ಪರಮಗುರಿಯಾಗಿ, ನಮ್ಮ ಬದುಕು ಉಳಿಸುವ ದಾವಾ ಮಾಡುವ ಔಷಧಿಗಳೇ ನಮ್ಮ ಬದುಕನ್ನು ಮುಗಿಸಬಲ್ಲವು.

ಇಂದು ಅಮೆರಿಕಾದಲ್ಲಿ 'ನಂಬರ್ ತ್ರೀ ಕಿಲ್ಲರ್' ಏಡ್ಸ್ ಅಲ್ಲ, ವೇಗದ ಬದುಕಿನ ಅಪಘಾತಗಳಲ್ಲ, ಬದಲು ವೈದ್ಯರು ಬರೆದುಕೊಟ್ಟ ಔಷಧಿಗಳ ಅಡ್ಡ ಪರಿಣಾಮಗಳು ಜನರನ್ನು ಅತ್ಯಧಿಕ ಸಂಖ್ಯೆಯಲ್ಲಿ ಕೊಲ್ಲುತ್ತಿವೆ. ಇದರ ಬಗ್ಗೆ ನಮ್ಮ ಕಣ್ಣು ತೆರೆಸುವಂತಹ ಪುಸ್ತಕ ಡಾ|| ರೇ. ಡಿ. ಸ್ಟ್ರಾಂಡ್ ಅವರ 'ಡೆತ್ ಬೈ ಪ್ರಿಸ್ಕ್ರಿಪ್ಷನ್'. 'ಡ್ರಗ್ ಲಾಬಿ' ಹೇಗೆ ಕೆಲಸ ಮಾಡುತ್ತದೆ ಎಂದು ವಿವರಿಸುವ ಅವರ ಈ ಸಂಶೋಧನಾ ಪುಸ್ತಕ 'ಡ್ರಗ್ ಲಾಬಿ'ಗೆ ಬಲಿಯಾದ, ನಿಜವಾದ ಜನರ ದಿಟವಾದ ಕತೆಗಳನ್ನು ಹೇಳುತ್ತದೆ. ಲಾಭವೊಂದೇ ಗುರಿಯಾದ ಔಷಧಿ ಕಂಪನಿಗಳನ್ನು ಅನಾವರಣ ಮಾಡಿದೆ.

ದೊಡ್ಡ ದೊಡ್ಡ ಡ್ರಗ್ ಕಂಪನಿಗಳು ಕೆಲಸ ಮಾಡುವ ವೈಖರಿಯನ್ನು ಮೈಕ್ ಆಡಮ್ಸ್ ತಮ್ಮ 'ಹಿಟ್ ಲಿಸ್ಟ್' ಎಂಬ ಲೇಖನದಲ್ಲಿ ವಿವರಿಸುತ್ತಾರೆ.

'ದೊಡ್ಡ ಔಷಧಿ ಕಂಪನಿಗಳು, ಸಣ್ಣ ಕಂಪನಿಗಳನ್ನು ಹೊಸಕಿ ಹಾಕುತ್ತವೆ, ಸ್ಪರ್ಧೆ ಇಲ್ಲದಂತೆ ಮಾಡುತ್ತವೆ. ಅಷ್ಟೇ ಅಲ್ಲ ತಮ್ಮ ದುಬಾರಿ ಔಷಧಿಗಳ ಬಗ್ಗೆ ಯಾರಾದರೂ ಮಾತನಾಡಿದರೆ ಅವರನ್ನು 'ಮುಗಿಸುವಂತಹ' ಮಾಫಿಯಾ ಕೆಲಸವನ್ನೂ ಇವು ಮಾಡುತ್ತವೆ. ತಮ್ಮ ಔಷಧಿಗಳ ಪ್ರಾಣಾಂತಿಕ ಅಡ್ಡ ಪರಿಣಾಮಗಳ ಬಗ್ಗೆ ಕೇಳಲು ಅವು ಇಚ್ಛಿಸುವುದಿಲ್ಲ. ಉದಾಹರಣೆಗೆ, ಪ್ರಸಿದ್ಧ ಔಷಧಿ ಕಂಪನಿ ತನ್ನ ಕೊಲೆಸ್ಟ್ರಾಲ್ ನಿಯಂತ್ರಿಸುವ ಔಷಧಿಗಳು ಪಿತ್ತಜನಕಾಂಗವನ್ನು ಹಾನಿ ಮಾಡುತ್ತವೆ ಎಂಬ ವಿಷಯವನ್ನು ಮುಚ್ಚಿಟ್ಟಿತು. ಇಂತಹ ಕಂಪನಿಗಳು ವೈಜ್ಞಾನಿಕ ವಂಚನೆಯಲ್ಲಿ ತೊಡಗಿವೆ. ತಾನು ಹಣಕೊಟ್ಟು ತನ್ನದೇ ಲೇಖಕರಿಂದ ಬರೆಸಿದ ಲೇಖನಗಳನ್ನು 'ಸ್ವತಂತ್ರ ಅಧ್ಯಯನ' ಎಂದು ಪ್ರಸಿದ್ಧ ಮೆಡಿಕಲ್ ಪತ್ರಿಕೆಗಳಲ್ಲಿ ಪ್ರಕಟಿಸುತ್ತವೆ. ಇಂತಹ ಹಿನ್ನೆಲೆಯಿರುವ ಕಂಪನಿಯೊಂದು ಹಂದಿಜ್ವರದ ವ್ಯಾಕ್ಸಿನ್ ತಯಾರಿಕೆಯಲ್ಲಿ ತೊಡಗಿದ್ದು, ಇದರ ವಿರುದ್ಧ ಯಾರೊಬ್ಬರೂ ಸೊಲ್ಲೆತ್ತದೆ ಇರಲು ಅನೇಕ ಕಾರಣಗಳಿವೆ. ಅಂತಹ ವೈದ್ಯರಿಗೆ ಬೆದರಿಕೆ ಹಾಕುವುದು ಸಾಮಾನ್ಯವಾಗಿದೆ' ಎನ್ನುವ ಮೈಕ್ ಇದನ್ನು 'ಕಲ್ಚರ್ ಆಫ್ ಕ್ರಿಮಿನಾಲಿಟಿ' ಎಂದು ಕರೆಯುತ್ತಾರೆ.

ನೆನಪಿರಬಹುದು, ತೊಂಬತ್ತರ ದಶಕದಲ್ಲಿ ಏಕಾಏಕಿ ಹೆಪಟೈಟಿಸ್ 'ಬಿ' ವ್ಯಾಕ್ಸಿನ್‌ಅನ್ನು ಎಲ್ಲ ಮಕ್ಕಳಿಗೂ ಹಾಕಿಸಲೇ ಬೇಕು ಎಂದು ಎಲ್ಲೆಲ್ಲಿದ ಪ್ರಚಾರ ಆರ
ವಾಯಿತು. ಯಾವ ವೈದ್ಯರ ಬಳಿಗೆ ಹೋದರೂ ಮಕ್ಕ
ಹೆಪಟೈಟಿಸ್ ವ್ಯಾಕ್ಸಿನ್ ಅತ್ಯಗತ್ಯ ಎಂದು ಹಾಕುತ್ತಿದ್ದ
ತಂದೆತಾಯಿಗಳು ದೊಡ್ಡ ಮಕ್ಕಳಿಗಲ್ಲದೆ, ಎಳೆ
ಮಕ್ಕಳಿಗೂ ದುಬಾರಿಯ ಈ ವ್ಯಾಕ್ಸಿನ್ ಚುಚ್ಚಿಸಿದ
ಸಂಪೂರ್ಣ ನಿರುಪಯೋಗದ, ಅತಿ ಅಪಾಯಕಾ
ವ್ಯಾಕ್ಸಿನಾಗಿದೆ ಎಂದು ನಂತರದ ವರ್ಷಗಳಲ್ಲಿ ಹೊ
ಬಿದ್ದಿತು. ಆದರೆ ಹೆಪಟೈಟಿಸ್ 'ಬಿ' ಭೀತಿಯನ್ನು ಡ್ರ
ಕಂಪನಿಗಳು ಎಷ್ಟರ ಮಟ್ಟಿಗೆ ಹುಟ್ಟು ಹಾಕಿದ್ದ
ಎಂದರೆ, 'ತಮ್ಮ ಮಗುವನ್ನು ರಕ್ಷಿಸಿಕೊಳ್ಳಲು ಅದೊಂ
ದಾರಿ' ಎಂದು ತಾಯ್ತಂದೆಯರು ವ್ಯಾಕ್ಸಿನ್ ಹಾಕಿಸಿದ್ದರು

ಅಸುರಕ್ಷಿತ ಲೈಂಗಿಕ ಸಂಪರ್ಕ, ಇನ್ನಾ ವೇಸ
ಆಗಿ ಮಾದಕ ವಸ್ತುಗಳನ್ನು ತೆಗೆದುಕೊಳ್ಳುವವರು
ರೋಗಕ್ಕೆ ಬಲಿಯಾಗುವ 'ರಿಸ್ಕ್ ಗುಂಪಿ'ನಲ್ಲಿರುತ್ತಾ
ಹೀಗಿರುವಾಗ ಎಳೆಯ ಮಕ್ಕಳಿಗೆ ಈ ವ್ಯಾಕ್ಸಿನ್ ಹಾಕಿಸ
ಮುಂದುವರಿದ ದೇಶಗಳು ಏಕೆ ನಿರ್ಧರಿಸಿದವು
ಸಂಪೂರ್ಣ ವ್ಯರ್ಥವಾದ ಅನಗತ್ಯವಾದ, ಅನೇಕ ಅ
ಪರಿಣಾಮಗಳಿರುವ ಈ ವ್ಯಾಕ್ಸಿನ್ ಅನ್ನು, ಭಾ
ದಂತಹ ತೃತೀಯ ಜಗತ್ತಿನ ದೇಶಗಳೂ ಹಾಕಿಸಿದ
ಮತ್ತೆ ಈ ಎಲ್ಲ ಗಲಾಟೆಯಲ್ಲಿ ಲಾಭ ಮಾಡಿದ್ದು ವ್ಯಾಕ್ಸಿ
ತಯಾರಿಸಿ ಮಾರುಕಟ್ಟೆಗೆ ಬಿಟ್ಟ ಡ್ರಗ್ ಕಂಪನಿಗಳು.

ಅನೇಕ ಮಕ್ಕಳಲ್ಲಿ ಇದು ಪ್ರಾಣಾಂತಿಕ ಕೂ
ಆಗಿದ್ದು, ಯಾವುದೇ ರೀತಿಯಲ್ಲಿ 'ರಿಸ್ಕ್ ಗುಂ
ನಲ್ಲಿಲ್ಲದ ಮಕ್ಕಳಿಗೆ ಅನಗತ್ಯವಾಗಿ ಚುಚ್ಚಿ, ಅವ

ರ್ಘಾವಧಿಯ ತೀವ್ರ ರೋಗಗಳಿಗೆ ತೆರೆದ ವ್ಯಾಕ್ಸಿನ್ ು. ಅಮೆರಿಕಾ ಒಂದರಲ್ಲೆ ೮ ಕೋಟಿ ಎಳೆಯ ಕ್ಕಳಿಗೆ, ಕಿಶೋರ ವಯಸ್ಸಿನವರಿಗೆ ಹೆಪಟೈಟಿಸ್ 'ಬಿ' ಕ್ಸಿನ್ ಹಾಕಿಸಿದ್ದರು. ಡಾ|| ಲಿಯಾನಾರ್ಡ್ ಡಿ. ೕರೋವಿಟ್ಸ್ ಅವರು ೧೯೯೦ರಲ್ಲಿ 'ವ್ಯಾಕ್ಸಿನ್ ದಾಗಿ ಮುಂದಿನ ಹತ್ತು ವರ್ಷಗಳಲ್ಲಿ ಸುಮಾರು ಲಕ್ಷ ಮಕ್ಕಳು ತೀವ್ರ ರೋಗಕ್ಕೆ ಬಲಿಯಾಗುತ್ತಾರೆ, ುಳಿನ ಹಾನಿ ಅಷ್ಟೆ ಅಲ್ಲ, ಸಾವು ಕೂಡಾ ಭವಿಸಬಲ್ಲದು' ಎಂದು ಊಹಿಸಿದ್ದರು. 'ದುರದೃಷ್ಟಕ್ಕೆ ೯೮ರಲ್ಲಿಯೇ ನನ್ನ ಊಹೆ ದಿಟವಾಯಿತು. ಕ್ಸಿನ್ ನರ ಸಂಬಂಧೀ ಹಾನಿಗೆ ಮತ್ತು ನರಜಡ್ಡು ಯುವ 'ಮಲ್ಟಿಪಲ್ ಸ್ಕ್ಲೆರೋಸಿಸ್'ಗೆ ಕಾರಣ ಗಬಲ್ಲ ಅಪಾಯ ಮತ್ತು ಭೀತಿಯಿಂದ, ಅದೇ ್ ಫ್ರಾನ್ಸ್ ಹೆಪಟೈಟಿಸ್ ಪ್ರೋಗ್ರಾಮ್‌ಅನ್ನು ಸಿತು. ೧೯೯೯ರ ವರ್ಷ ವ್ಯಾಕ್ಸಿನ್‌ನಿಂದ ತೀವ್ರ ುಗೊಂಡವರ ಸಂಖ್ಯೆಯನ್ನು ಸಂಗ್ರಸಿದಾಗ ಅದು ೦೦೦ವನ್ನು ಮೀರಿತ್ತು. ಅದರಲ್ಲಿ ೪೪೦ ಮಕ್ಕಳು ನ್ದವು. ಇಷ್ಟೆಲ್ಲ ಆದರೂ ವ್ಯಾಕ್ಸಿನ್ ಇವತ್ತಿಗೂ ಾರಾಗುತ್ತಿದೆ, ವೈದ್ಯರು ಅದರ ಅಡ್ಡ ಣಾಮಗಳೊಂದನ್ನೂ ತಾಯ್ತಂದೆಯರಿಗೆ ತಿಳಿಸದೆ ರಸ್ಸು ಮಾಡುತ್ತಿದ್ದಾರೆ. ಅಜ್ಞಾನದಲ್ಲಿ ಅಪಾಯದ ವಿಲ್ಲದ ಇವತ್ತಿಗೂ ಮಕ್ಕಳಿಗೆ ಈ ವ್ಯಾಕ್ಸಿನ್ ಸುವುದನ್ನು ಮುಂದುವರಿಸಿದ್ದಾರೆ' ಎನ್ನುತ್ತಾರೆ. ರತದಲ್ಲಿ ಈ ವ್ಯಾಕ್ಸಿನ್ ಯಾವ ಅಡೆತಡೆಯಿಲ್ಲದೆ ತ್ತಿಗೂ ಮುಂದುವರಿದಿದೆ. ಅದನ್ನು ಹಾಕುವ ರು, ಅದರ ಅಡ್ಡಪರಿಣಾಮಗಳೊಂದನ್ನೂ ಯ್ತಂದೆಯರಿಗೆ ವಿವರಿಸುವುದಿಲ್ಲ.

ಇನ್ನು ಈ ವರ್ಷದ ಸ್ವೈನ್ ಫ್ಲು- ಹಂದಿ ಜ್ವರದ ಬಗ್ಗೆ ದೆ, ಕತೆ ಮುಗಿಯುವುದಿಲ್ಲ.

ನ್ಯೂಯಾರ್ಕ್ ರಾಜ್ಯ ಸ್ವೈನ್ ಫ್ಲು ವ್ಯಾಕ್ಸಿನ್ ಸಿಕೊಳ್ಳುವುದನ್ನು ಕಡ್ಡಾಯ ಮಾಡಿತ್ತು. ಜನ ೋರ್ಟು ಕಛೇರಿ ಹತ್ತಿ ಸರಕಾರದ ಆದೇಶವನ್ನು ಸಿದಾಗ, ಹಿಂತೆಗೆದುಕೊಂಡಿತು. ಈ ಮುಂದುವರಿದ ಗಳಲ್ಲಿ ಜನತೆ ಇಂತಹ ದೊಡ್ಡ ದೊಡ್ಡ ಔಷಧಿ ನಿಗಳ ಪ್ರಭಾವದಲ್ಲಿ ಅಳವಡಿಸಿದ ಕಾಯಿದೆ ದ ತತ್ತರಿಸುತ್ತಾರೆ. ಆರೋಗ್ಯದ ವಿಷಯದಲ್ಲಿ ೂರ್ಣ ಅತಂತ್ರರಾದ ಜನಸಾಮಾನ್ಯರು, ಔಷಧಿ ನಿಗಳ ಬಲಿಪಶುಗಳಾಗಿದ್ದಾರೆ.

ಹಕ್ಕಿ ಜ್ವರ ಇರಬಹುದು, ಹಂದಿ ಜ್ವರ ಹುದು, ಅವುಗಳಿಂದ ಸತ್ತ ಜನರ ಸಂಖ್ಯೆ ಲೂ ಹೆಚ್ಚು ಸಂಖ್ಯೆಯಲ್ಲಿ ಪ್ರತಿ ವರ್ಷ - ರಲ್ಲೂ ಚಳಿಗಾಲದಲ್ಲಿ - ಜನ ಸಾಮಾನ್ಯರು, ಾನ್ಯ ಜ್ವರದಿಂದ ಸಾಯುತ್ತಾರೆ.

ಹಕ್ಕಿ ಜ್ವರಕ್ಕೆ ವ್ಯಾಕ್ಸಿನ್ ಬಂದ ಮೇಲೆ, ಹಕ್ಕಿ ಜ್ವರದಿಂದ ರ ಸಂಖ್ಯೆಗಿಂತ, ಈ ಜ್ವರದ ವ್ಯಾಕ್ಸಿನ್ ಹಾಕಿಸಿ ಡ ಅಡ್ಡ ಪರಿಣಾಮಗಳಿಂದ ಸತ್ತವರ ಸಂಖ್ಯೆ ್ತು ಎಂದು ಅನೇಕರು ಅಂದಾಜು ಮಾಡಿದ್ದಾರೆ. ಆದರೆ, ಈ ಬಾರಿ ಹಂದಿ ಜ್ವರ ಎಂತಹ ಭೀತಿಯನ್ನು ಸಿತು ಎಂದರೆ ಹಂದಿ ಜ್ವರ ಪತ್ರಿಕೆಗಳ ಪುಟದಲ್ಲಿ ತಿಂಗಳಾನುಗಟ್ಟಲೆ ವರದಿಯಾಯಿತು.




ಪ್ರತಿ ದಿನ ಮುಖಪುಟಗಳಲ್ಲಿ 'ಇಂದು ಪೂನಾದಲ್ಲಿ ಒಂದು ಸಾವು, ಇಂದು ಬೆಂಗಳೂರಿನಲ್ಲಿ ಎರಡು ಸಾವು' ಎಂದು ಅಂಕಿ ಸಂಖ್ಯೆಗಳನ್ನು ದೊಡ್ಡ ಅಕ್ಷರಗಳಲ್ಲಿ ನೀಡುತ್ತಾ, ಎಂತಹ ಭೀತಿಯನ್ನು ಹುಟ್ಟಿಸಿದರೆಂದರೆ, ಇಡೀ ಭಾರತವೇ ತತ್ತರಿಸಿತು. ಟ್ಯಾಮಿಫ್ಲು ಔಷಧಿಗಾಗಿ ಪರದಾಡಿತು. 'ಬ್ರಿಟಿಷ್ ಮೆಡಿಕಲ್ ಜರ್ನಲ್', ಟ್ಯಾಮಿಫ್ಲು ಕಂಪನಿ ಸರಕಾರವನ್ನು, ಜನಸಾಮಾನ್ಯರನ್ನು ಹಾದಿ ತಪ್ಪಿಸುತ್ತಿದೆ ಎಂದು ಆರೋಪಿಸಿದೆ. ಕಂಪನಿ 'ಟ್ಯಾಮಿಫ್ಲು ಬಗ್ಗೆ ಹತ್ತು ಅಧ್ಯಯನಗಳು ನಡೆದಿವೆ' ಎಂದು ಪ್ರಚಾರ ಮಾಡಿತ್ತು. ಆದರೆ ನಡೆದದ್ದು ಎರಡೇ ಅಧ್ಯಯನಗಳು, ಅವುಗಳ ಮೂಲ ಮಾಹಿತಿ ಕೂಡ ನಾಪತ್ತೆಯಾಗಿದೆ. ಕಡೆಗೆ ದೊರೆತದ್ದು ಸುಮಾರು ೧೪೪೦ ಜನರ ಮೇಲೆ ನಡೆಸಿದ ಪ್ರಯೋಗದ ಒಂದೇ ಒಂದು ಡಾಟಾ. ಅದನ್ನು ಪ್ರಕಟಿಸಿರಲಿಲ್ಲ. ಕಾರಣ ಈ ಅಧ್ಯಯನ, ಟ್ಯಾಮಿಫ್ಲುಗೂ 'ಪ್ಲಾಸಿಬೋ'ಗೂ ಏನೂ ವ್ಯತ್ಯಾಸವಿಲ್ಲ ಎಂದು ತಿಳಿಸಿತ್ತು. ಇಂದು ಟ್ಯಾಮಿಫ್ಲು ಕೆಲಸ ಮಾಡುವುದಿಲ್ಲ ಎಂಬುದನ್ನು ಕೂಗಿ ಹೇಳಿದರೂ, ಕಂಪನಿಗೇನೂ ನಷ್ಟವಿಲ್ಲ. ಅಮೆರಿಕಾ ಈಗಾಗಲೇ ೧.೫ ಬಿಲಿಯನ್ ಡಾಲರ್ ಟ್ಯಾಮಿಫ್ಲುಅನ್ನು ಕೊಂಡು ಒಟ್ಟಿಕೊಂಡಿದೆ. ಭಾರತ ಸರಕಾರವೂ ಟ್ಯಾಮಿಫ್ಲುಗಾಗಿ ಹಣವನ್ನು ನೀರಿನಂತೆ ಸುರಿಯಿತು. ಕೊನೆಗೆ ಎಫ್.ಡಿ.ಎ. ಕೂಡ 'ಟ್ಯಾಮಿಫ್ಲು ಗುಣಕಾರಿ ಎಂದು ಸಾಬೀತಾಗಿಲ್ಲ' ಎಂಬ 'ಡಿಸ್‌ಕ್ಲೇಮರ್' ಹಾಕಿ ಕೈ ತೊಳೆದುಕೊಂಡಿತು.

ನಮ್ಮ ದೇಶದಲ್ಲಿ ರೋಗ ಬಂದವರಲ್ಲಿ ಶೇಕಡ ೩೫ರಷ್ಟು ಜನರಿಗೆ ಮಾತ್ರ ಆಸ್ಪತ್ರೆಯ ಅನುಕೂಲವಿದೆ. ಉಳಿದಂತೆ ಹಳ್ಳಿಗಾಡುಗಳಲ್ಲಿ ಒಬ್ಬ ಕಾಂಪೌಂಡರ್ ಕೂಡಾ ದಕ್ಕುವುದಿಲ್ಲ. ಇಂತಹ ಸ್ಥಿತಿಯಲ್ಲಿ ಬೆದರಿದ ಜನ ಏನು ಮಾಡಬೇಕು ? ಎಲ್ಲಿ ಹೋಗಬೇಕು ?

ಗಿಡಮೂಲಿಕೆಗಳಿಂದಲೂ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸಿಕೊಳ್ಳಬಹುದೆಂದು ಬಲ್ಲ ಮೂಲಗಳಿಂದ ತಿಳಿದುಬಂದಿದೆ.

ಇಂದು ವೈದ್ಯಕೀಯದ ಹೆಸರಲ್ಲಿ, ವಿಜ್ಞಾನದ ಹೆಸರಲ್ಲಿ ಅಜ್ಞಾನ ಮತ್ತು ಆತಂಕವಾದ ಹೆಚ್ಚಿದೆ.

'ಯಾವ ಯಾವ ರೋಗಗಳಿಗೆ ಎಷ್ಟು ಅಂತ ವ್ಯಾಕ್ಸಿನ್ ಹಾಕಿಸಿಕೊಳ್ಳಲು ಸಾಧ್ಯ ? ನಿಮ್ಮ ದೇಹವನ್ನು ಒಳ್ಳೆಯ ಆಹಾರ, ಒಳ್ಳೆಯ ಚಿಂತನೆ, ಒಳ್ಳೆಯ ವ್ಯವಹಾರ, ಯೋಗ, ಪ್ರಾಣಾಯಾಮ ದಿಂದ ಸ್ವಸ್ಥವಾಗಿಟ್ಟುಕೊಳ್ಳಿ, ದೇಹದ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸಿಕೊಳ್ಳಿ, ಯಾವ ರೋಗವೂ ಬಳಿಗೆ ಬಾರದು' ಎಂದು ಯೋಗದ ಗುರುಗಳೋ, ಜನ ಸಾಮಾನ್ಯರ ಹಿತಾಸಕ್ತಿಯ ಸಮಾಜ ಚಿಂತಕರೋ, ತಮ್ಮ ಪ್ರಾಮಾಣಿಕತೆಯನ್ನು ಮಾರಿಲ್ಲದ ವೈದ್ಯರೋ, ಸಾಮಾನ್ಯ ಜ್ಞಾನವಿರುವ ವಿಚಾರವಂತರೋ - ಹೇಳಿದರೆ, ಅವರ ಮೇಲೆ ಮುಸುಕಿನ ಆಕ್ರಮಣ ನಡೆಯುತ್ತದೆ.

ನಮ್ಮ ಸರಕಾರವಾಗಲಿ, ಜೀವ ಉಳಿಸಬೇಕಾದ ವೈದ್ಯರಂಗವಾಗಲಿ ನಮ್ಮನ್ನು ಕಾಪಾಡದೆ, ಡ್ರಗ್ ಕಂಪನಿಗಳ ಕೃಪಾಕಟಾಕ್ಷಕ್ಕೆ ನಮ್ಮನ್ನು ಬಲಿ ಬಿಟ್ಟಿರುವುದರಿಂದ, ಜನಸಾಮಾನ್ಯರಾದ ನಾವು ಎಚ್ಚರಿಕೆಯಿಂದಿರಬೇಕಾಗಿದೆ. ವ್ಯಾಕ್ಸಿನ್ ಹಾಕಿಸಿ ಕೊಳ್ಳಬೇಕೆ, ಬೇಡವೆ ಎಂಬುದು ವ್ಯಾಕ್ಸಿನ್ ಬಗ್ಗೆ ಎಲ್ಲ ಮಾಹಿತಿಯನ್ನು ತಿಳಿದುಕೊಂಡ ನಂತರ ನಾವು ಕೈಗೊಳ್ಳುವ ಪ್ರಜ್ಞಾಪೂರ್ವಕ ನಿರ್ಧಾರವಾಗಬೇಕು. ಆದರೆ, ನೂರು ಟಿವಿ ಚಾನೆಲ್‌ಗಳಿದ್ದು, ಸಾವಿರ ಪತ್ರಿಕೆಗಳಿದ್ದರೂ, ಇಂತಹ ಮಾಹಿತಿ ಸುಲಭವಾಗಿ ಪ್ರಧಾನ ಮಾಧ್ಯಮಗಳಲ್ಲಿ ನಮಗೆ ಸಿಗುವುದಿಲ್ಲ, ಕಾರಣ ಬಹುತೇಕ ಪ್ರಧಾನ ಮಾಧ್ಯಮಗಳು ಈ ಔಷಧಿ ಕಂಪನಿಗಳಿಂದ ಪ್ರವಾಹದಂತೆ ಹರಿದು ಬರುವ ಜಾಹಿರಾತಿನ ಹಣವನ್ನು ಕಳೆದುಕೊಳ್ಳಲು ಸಿದ್ಧವಿಲ್ಲ.

ಹಾಗೆಂದೇ, ಭೀತಿಯ ಮಾರುಕಟ್ಟೆಯ 'ಸಾವಿನ ಸೌದಾಘರ'ರೊಡನೆ ಸೆಣೆಸಾಡಬೇಕಾದ ಈ ಹೊತ್ತು, ನಮ್ಮ ಗಮನಕ್ಕೆ ಬಂದ ವಿಷಯವನ್ನು ನಾಲ್ಕು ಜನರಿಗಾದರೂ ಹೇಳುವುದು ನಮ್ಮ ಕರ್ತವ್ಯವಾಗಿದೆ. ಪ್ರಾಣಾಯಾಮ, ಸೂಕ್ಷ್ಮ ವ್ಯಾಯಾಮದಿಂದ ಹೈಪೋಥೈರಾಯಾಡ್‌ಅನ್ನು ನಿಯಂತ್ರಣಕ್ಕೆ ತಂದು, ಉತ್ತಮ ಆಹಾರದಿಂದಲೇ ೬.೬ಕ್ಕೆ ಇಳಿದ ಹಿಮೋಗ್ಲೋಬಿನ್‌ಅನ್ನು ೧೨ಕ್ಕೆ ಏರಿಸಿರುವ ಸ್ವಯಂ ಅನುಭವ ಇಂದು ನನಗೆ ನಮ್ಮ ದೇಹದ 'ಗುಣವಾಗಬಲ್ಲ' ಶಕ್ತಿಯ ಬಗ್ಗೆ ವಿಶ್ವಾಸವನ್ನು ನೀಡಿದೆ.

ಎಲ್ಲಕ್ಕಿಂತ ಮುಖ್ಯವಾಗಿ ನಮ್ಮ ಆರೋಗ್ಯ ಬಹುತೇಕ ನಮ್ಮ ಕೈಯಲ್ಲಿಯೇ ಇದೆ ಎಂಬುದನ್ನು ನಾವು ಗಟ್ಟಿಯಾಗಿ ನಂಬಬೇಕಿದೆ. ಜಂಕ್ ಫುಡ್, ತಂಪು ಪಾನೀಯ, ಲೈಂಗಿಕ ಸ್ವೇಚ್ಛೆ, ಅಡ್ಡ ಹಾದಿಯನ್ನು ತುಳಿವ ಅಪಾಯಗಳನ್ನು ಎಳೆಯ ಜನಾಂಗಕ್ಕೆ ತಿಳಿಸಿ ಹೇಳಬೇಕಿದೆ. ಒಳ್ಳೆಯ ಆಹಾರ, ಒಳ್ಳೆಯ ವಿಚಾರ, ನಿಯಮಿತ ವ್ಯಾಯಾಮ, ದೈಹಿಕ ಶ್ರಮ ಜೀವನ, ಮಾನಸಿಕ ಒತ್ತಡದಿಂದ ಮುಕ್ತಿ, ಯೋಗ, ಪ್ರಾಣಾಯಾಮ, ಲೈಂಗಿಕ ಸ್ವಚ್ಛತೆ - ಒಂದು ಕಾಲಕ್ಕೆ ಭಾರತೀಯರ ಬದುಕಿನಲ್ಲಿ ಹಾಸುಹೊಕ್ಕಾದ ಆರೋಗ್ಯಕರ ಜೀವನ ವಿಧಾನಕ್ಕೆ ಹಿಂತಿರುಗುವುದು ಎಂದಿಗಿಂತಲೂ ಇಂದು ಅಗತ್ಯವಾಗಿದೆ.

ನೇಮಿಚಂದ್ರ
[illegible]



# ಅಶ್ವಘೋಷನ ವಜ್ರಸೂಚಿ
## –ವರ್ಣವಿರೋಧಿಗಳಿಗೊಂದು ದಿಕ್ಸೂಚಿ




ದಾವಣಗೆರೆಯ ವಿಖ್ಯಾತ ವಿಚಾರವಾದಿ
ಖಕರಾದ ಪ್ರೊ॥ ಬಿ. ವಿ. ವೀರಭದ್ರಪ್ಪನವರು
ಸಿರುವ ಒಂದು ಧಾರ್ಮಿಕ v/s ವೈಚಾರಿಕ ಸಮೀಕ್ಷೆ
ದು ಕರೆಯಲಾಗಿರುವ 'ಅಶ್ವಘೋಷನ ವಜ್ರಸೂಚಿ'
ಬ ಅನುವಾದಿತ ಕೃತಿಯನ್ನು ಹಂಪಿ ಕನ್ನಡ
ವಿದ್ಯಾಲಯದ ಪ್ರಸಾರಾಂಗ ವಿಭಾಗದವರು ಇತ್ತೀಚೆಗೆ
ಟಿಸಿದ್ದಾರೆ. ಬುದ್ಧನ ತರುವಾಯದಲ್ಲಿ ಹನ್ನೆರಡನೇ
ೀಧಿಸತ್ವನೆಂದು ಕರೆಯಲ್ಪಡುವ ಅಶ್ವಘೋಷನು ಒಬ್ಬ
ಚಾರಿಕನೂ ಕವಿ-ಕಲಾವಿದ ಮತ್ತು ಧಾರ್ಮಿಕ
ುಷನೂ ಆಗಿದ್ದನೆಂದು ತಿಳಿದುಬರುತ್ತದೆ. ಅಶ್ವಘೋಷನ
ು ಸರಿ ಸುಮಾರು ಕ್ರಿ.ಶ. ಒಂದು ಅಥವಾ ಎರಡನೇ
ಮಾನ ಇರಬಹುದೆಂದು ವಿದ್ವಾಂಸರ ಅಭಿಮತ. ಇವನ
ಸ್ಥಳ ವಾರಣಾಸಿಯ ಸಮೀಪದ ಸಾಕೇತಪುರ ಎಂದೂ,
ನ ತಾಯಿಯ ಹೆಸರು ಸುವರ್ಣಾಕ್ಷಿ ಎಂದೂ, ಜನ್ಮತಃ
ಹ್ಮಣನಾಗಿದ್ದ ಇವನು ನಂತರ ಬೌದ್ಧ ಧರ್ಮಕ್ಕೆ
ಂತರಗೊಂಡನೆಂದೂ ಅನೇಕ ವಿದ್ವಾಂಸರು ಅಭಿಪ್ರಾಯ
ುತ್ತಾರೆ. ಪ್ರತಿಭಾವಂತನಾಗಿದ್ದ ಇವನು ಕಾವ್ಯ ನಾಟಕ
ನ್ನಲ್ಲದೆ ಶಾಸ್ತ್ರಗ್ರಂಥ ಮತ್ತು ದಾರ್ಶನಿಕ ಗ್ರಂಥಗಳನ್ನು
ಸಿದ್ದನೆಂದು ಸಂಶೋಧಕರು ಗುರುತಿಸಿದ್ದಾರೆ.
ನ 'ಬುದ್ಧ ಚರಿತ' ಮತ್ತು 'ಸೌಂದರ ನಂದ'
ಬೆರಡು ಕೃತಿಗಳು ಬಹುಜನಪ್ರಿಯತೆ ಪಡೆದಿವೆ. ಅವನ
ರ್ಶನಿಕ ಕೃತಿಯಾದ 'ವಜ್ರಸೂಚಿ'ಯಂತೂ ಅತ್ಯಂತ
ಪ್ರಿಯವಾಗಿದೆ.

ನೇಪಾಲದ ರಾಜಾಸ್ಥಾನದಲ್ಲಿ ಬ್ರಿಟನ್ನಿನ ರೆಸಿಡೆಂಟ್
ದ್ದ ಬ್ರೈನ್ ಹಡ್ಸನ್ ಎಂಬ ಸಂಶೋಧಕನಿಗೆ ೧೮೨೯ರಲ್ಲಿ
ಪಾಲದ ಓರ್ವ ವೃದ್ಧ ಬೌದ್ಧ ವಿದ್ವಾಂಸನಿಂದ
ಜ್ರಸೂಚಿ'ಯ ಮೂಲ ಸಂಸ್ಕೃತ ಪಠ್ಯದ ಪ್ರತಿಯು
ಡಸನ್‌ನಿಗೆ) ದೊರೆಯಿತೆನ್ನಲಾಗಿದೆ. ಹಡಸನ್ ಇದನ್ನು
ಗ್ಲಭಾಷೆಗೆ ಅನುವಾದ ಮಾಡಿ ರಾಯಲ್ ಏಷಿಯಾಟಿಕ್
ಸೈಟ ಮೂಲಕ ಪ್ರಕಟಪಡಿಸಿದನು. ೧೯೮೫-೮೬ರ
ಂತರದಲ್ಲಿ ಭಾರತೀಯ ಲೇಖಕರಾದ ಎಸ್. ಕೆ.
ಖರ್ಜಿ, ಆರ್. ಪಿ. ದ್ವಿವೇದಿ ಮುಂತಾದವರು
ಕೃತಿಯ ಹಿಂದಿ ಅನುವಾದಗಳನ್ನು ಪ್ರಕಟಿಸಿದ್ದಾರೆ.
ರೆ ಅದರ ಕನ್ನಡಾನುವಾದ ಮಾತ್ರ ಈವರೆಗೂ
ಟವಾದುದು ಕಂಡುಬಂದಿಲ್ಲವೆಂದು ಪ್ರೊ॥ ಬಿ. ವಿ.
ಅವರು ಅಭಿಪ್ರಾಯಪಡುತ್ತಾರೆ. ಇದೀಗ ಅವರೇ
ೂಲ ಸಂಸ್ಕೃತ ಹಾಗೂ ಹಿಂದಿ
ತ್ತು ಇಂಗ್ಲಿಷ್ ಅನುವಾದಗಳ
ಾಯದಿಂದ 'ವಜ್ರಸೂಚಿ'ಯ

**ಎ. ಜಿ. ವಿರೂಪಾಕ್ಷಪ್ಪ**

ಕನ್ನಡ ಅವತರಣಿಕೆಯನ್ನು ಬಹು ಶ್ರಮವಹಿಸಿ ಸಿದ್ಧಪಡಿಸಿದ್ದಾರೆ.

ಅಶ್ವಘೋಷನ 'ವಜ್ರಸೂಚಿ' ಒಂದು ವಾಸ್ತವವಾದ ರಚನೆ ಎಂದು ಪ್ರಸ್ತಾವನೆಯಲ್ಲಿ ಹೇಳಿರುವ ಬಿ. ವಿ. ವೀರಭದ್ರಪ್ಪನವರು ಪ್ರಾಚೀನ ಕಾಲದ ಭಾರತೀಯ ಸಮಾಜದಲ್ಲಿದ್ದ ವರ್ಣಭೇದ ಮತ್ತು ಶ್ರೇಣೀಕೃತ ಜಾತಿ ವ್ಯವಸ್ಥೆ ವಿರುದ್ಧದ ಚಿಂತನೆ ಇದರಲ್ಲಿ ಕಣ್ಣಿಗೆ ಕಟ್ಟುವಂತೆ ಅಭಿವ್ಯಕ್ತವಾಗಿದೆ ಎನ್ನುತ್ತಾರೆ. ಚಾತುರ್ವರ್ಣಗಳಲ್ಲಿ ಬ್ರಾಹ್ಮಣ ವರ್ಣವೇ ಅತ್ಯಂತ ಶ್ರೇಷ್ಠ 'ಸರ್ವವರ್ಣ ಪ್ರಧಾನಂ ಬ್ರಾಹ್ಮಣವರ್ಣಂ' ಎಂಬ ವಾದವನ್ನೇ ಪ್ರಶ್ನಿಸಿದ ಅಶ್ವಘೋಷನು ಬ್ರಾಹ್ಮಣನೆಂದರೆ ಯಾರು ಎಂಬ ಪ್ರಶ್ನೆಯನ್ನು ಕೇಳುವ ಮೂಲಕ ಇಡೀ ಶ್ರೇಣೀಕೃತ ವ್ಯವಸ್ಥೆಯ ಆಧಾರಗಳನ್ನೇ ಚರ್ಚೆಗೆ ಒಳಪಡಿಸುತ್ತಾನೆ. ತನ್ಮೂಲಕ ಜಾತಿ, ಜನ್ಮ, ಜ್ಞಾನ, ಆಚಾರ (ನಡೆ) ಮತ್ತು ಕರ್ಮ (ವೃತ್ತಿ)ಗಳ ಆಧಾರ ಮಾತ್ರದಿಂದಲೇ ಬ್ರಾಹ್ಮಣನನ್ನು ಗುರುತಿಸಲು ಸಾಧ್ಯವಿಲ್ಲ. ಬ್ರಾಹ್ಮಣತ್ವವು ವ್ಯಕ್ತಿಯ ಆಧ್ಯಾತ್ಮಿಕ ಬೆಳವಣಿಗೆಯ ಒಂದು ಹಂತವೇ ವಿನಾ ಸ್ಥಾಯೀ ಅವಸ್ಥೆ ಅಲ್ಲ ಎಂಬ ತನ್ನ ವಾದದ ಮೂಲಕ ಬ್ರಾಹ್ಮಣ ಶ್ರೇಷ್ಠತೆಯ ವಿರುದ್ಧ ಒಂದು ವೈಚಾರಿಕ ದಾಳಿಯನ್ನೇ ನಡೆಸುತ್ತಾನೆ. ಸ್ವಾರ್ಥ, ಅಹಂಕಾರ, ಮಮಕಾರಗಳನ್ನು ದೂರೀಕರಿಸಿ ಯಾವ ವ್ಯಕ್ತಿ ಸತ್ಸಂಕಲ್ಪ ಮತ್ತು ಸಂಯಮಗಳಿಂದ ಉನ್ನತಿ ಸಾಧಿಸುತ್ತಾನೊ ಅವನೇ ಬ್ರಾಹ್ಮಣ. ಈ ಗುಣಗಳನ್ನು ಹೊಂದಿಲ್ಲದವನು ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ್ದರೂ ಚಾಂಡಾಲ ಎಂಬುದು ಅಶ್ವಘೋಷನ ಅಭಿಮತ. ಪುರುಷಸೂಕ್ತವನ್ನು ಗೇಲಿ ಮಾಡುತ್ತಾ ಅಶ್ವಘೋಷನು ಎರಡು ಪ್ರಶ್ನೆಗಳನ್ನು ಒಡ್ಡುತ್ತಾನೆ. ಒಬ್ಬನೇ ತಂದೆಯಿಂದ ಹುಟ್ಟಿದ ಮಕ್ಕಳು ಒಂದೇ ಜಾತಿಗೆ ಸೇರಿದವರಾಗುತ್ತಾರೆ, ಅಲ್ಲವೇ ? ಪುರುಷ, ಅಂದರೆ ಬ್ರಹ್ಮನಿಂದ ಜನಿಸಿದ ಮಕ್ಕಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಣದವರಾಗಲು ಹೇಗೆ ಸಾಧ್ಯ ? ಎಲ್ಲ ಮಕ್ಕಳೂ ತಾಯಿಯ ಯೋನಿಯಿಂದಲೇ ಜನಿಸುತ್ತಾರೆ. ಹೀಗಿರಲು ಪುರುಷನ ಬಾಯಿ, ಭುಜ, ತೊಡೆ ಮತ್ತು ಪಾದಗಳಿಂದ ಭಿನ್ನ ವರ್ಣಗಳು ಜನಿಸಲು ಹೇಗೆ ಸಾಧ್ಯ ? ಇದುವರೆವಿಗೂ ಈ ಪ್ರಶ್ನೆಗಳಿಗೆ ಯಾವ ವೈದಿಕ ತಜ್ಞರೂ ಉತ್ತರ ನೀಡುವ ಸಾಹಸ ಮಾಡಿಲ್ಲ.

ಭಾರತದಲ್ಲಿ ಸಮಾಜದ ಜನರನ್ನು ವರ್ಣಭೇದ ಮತ್ತು ಶ್ರೇಣೀಕೃತ ಜಾತಿ ವ್ಯವಸ್ಥೆಯ ಆಧಾರದ ಮೇಲೆ ಗುರುತಿಸುವ ಕ್ರಮವು ಬಹು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಚಾತುರ್ವರ್ಣ ವ್ಯವಸ್ಥೆಯು ಸಮಾಜವನ್ನು ನಾಲ್ಕು ಮುಖ್ಯವಾದ ವಿಭಾಗಗಳಾಗಿ ವಿಂಗಡಿಸುತ್ತದೆ. ಇದು

ಅಶ್ವಘೋಷನ 'ವಜ್ರಸೂಚಿ' ಒಂದು ವಾಸ್ತವವಾದ ರಚನೆ ಎಂದು ಪ್ರಸ್ತಾವನೆಯಲ್ಲಿ ಹೇಳಿರುವ ಬಿ. ವಿ. ವೀರಭದ್ರಪ್ಪನವರು ಪ್ರಾಚೀನ ಕಾಲದ ಭಾರತೀಯ ಸಮಾಜದಲ್ಲಿದ್ದ ವರ್ಣಭೇದ ಮತ್ತು ಶ್ರೇಣೀಕೃತ ಜಾತಿ ವ್ಯವಸ್ಥೆ ವಿರುದ್ಧದ ಚಿಂತನೆ ಇದರಲ್ಲಿ ಕಣ್ಣಿಗೆ ಕಟ್ಟುವಂತೆ ಅಭಿವ್ಯಕ್ತವಾಗಿದೆ ಎನ್ನುತ್ತಾರೆ. ಚಾತುರ್ವರ್ಣಗಳಲ್ಲಿ ಬ್ರಾಹ್ಮಣ ವರ್ಣವೇ ಅತ್ಯಂತ ಶ್ರೇಷ್ಠ 'ಸರ್ವವರ್ಣ ಪ್ರಧಾನಂ ಬ್ರಾಹ್ಮಣವರ್ಣಂ' ಎಂಬ ವಾದವನ್ನೇ ಪ್ರಶ್ನಿಸಿದ ಅಶ್ವಘೋಷನು ಬ್ರಾಹ್ಮಣನೆಂದರೆ ಯಾರು ಎಂಬ ಪ್ರಶ್ನೆಯನ್ನು ಕೇಳುವ ಮೂಲಕ ಇಡೀ ಶ್ರೇಣೀಕೃತ ವ್ಯವಸ್ಥೆಯ ಆಧಾರಗಳನ್ನೇ ಚರ್ಚೆಗೆ ಒಳಪಡಿಸುತ್ತಾನೆ.

ಶ್ರೇಣೀಕೃತ ವ್ಯವಸ್ಥೆಯಾಗಿರುವುದರಿಂದ ಸಹಜವಾಗಿಯೇ ಮೇಲು - ಕೀಳು, ಶ್ರೇಷ್ಠ-ಕನಿಷ್ಠಗಳೆಂಬ ತಾರತಮ್ಯವನ್ನು ಪ್ರತಿಪಾದಿಸುತ್ತದೆ. ವರ್ಣ ವ್ಯವಸ್ಥೆಯು ಸಮಾಜದ ವಿಶಾಲ ವಿಂಗಡಣೆಯಾದರೆ, ಈ ವಿಂಗಡಣೆಯ ಉಪಉತ್ಪನ್ನವಾದ ಜಾತಿ ವ್ಯವಸ್ಥೆಯು ಸಮಾಜದ ಮರು ವಿಂಗಡಣೆಯನ್ನು ಪ್ರತಿಪಾದಿಸುತ್ತದೆ.

ವರ್ಣಾಧಾರಿತ ವಿಂಗಡಣೆಗೆ ಋಗ್ವೇದದ ಒಂದು ಭಾಗವಾದ ಪುರುಷ ಸೂಕ್ತದ ಮಂತ್ರವೊಂದನ್ನು ವರ್ಣವಾದಿಗಳು ಆಧಾರವಾಗಿ ಕೊಡುತ್ತಾ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ನಾಲ್ಕು ವರ್ಣಗಳು ಸಾಕ್ಷಾತ್ ಬ್ರಹ್ಮನಿಂದಲೇ ಉಂಟಾದುವೆಂದು ಹೇಳುತ್ತಾರೆ. ಅವರ ಪ್ರಕಾರ ಪುರುಷನ, ಅಂದರೆ ಪರಬ್ರಹ್ಮನ ಬಾಯಿಂದ ಬ್ರಾಹ್ಮಣರೂ, ಭುಜಗಳಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಜನಿಸಿದರು, ಮತ್ತು ಬಾಯಿಂದ ಉದಿಸಿದ ಬ್ರಾಹ್ಮಣರು ಸರ್ವಶ್ರೇಷ್ಠರೆಂದೂ, ತದನಂತರದ ಕ್ಷತ್ರಿಯರು, ವೈಶ್ಯರು ಉತ್ತಮರೆಂದೂ, ನಾಲ್ಕನೆಯ ಮತ್ತು ಕಡೆಯವರಾದ ಶೂದ್ರರು ಅತಿ ಕನಿಷ್ಠರೆಂದೂ ಪ್ರತಿಪಾದಿಸುತ್ತ ಬಂದಿದ್ದಾರೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಈ ಶ್ರೇಷ್ಠತೆ-ಕನಿಷ್ಠತೆಗಳಿಗೆ ಆಯಾ ಜನವರ್ಗದ ಜನನ ಅಂದರೆ ಹುಟ್ಟನ್ನೇ ಆಧಾರವಾಗಿ ಪರಿಗಣಿಸಬೇಕೆನ್ನುತ್ತಾರೆ. ಜಾತಿಯಿಂದ ಬ್ರಾಹ್ಮಣರಾದ ತಂದೆ-ತಾಯಿಗಳಿಗೆ ಹುಟ್ಟಿದವನು, ನೀತಿಯಿಂದ ಏನೇ ಆಗಿದ್ದರೂ ಅವರನ್ನು ಬ್ರಾಹ್ಮಣ (ಶ್ರೇಷ್ಠ)ರೆಂದು ಪರಿಗಣಿಸಬೇಕೆಂದು ಮನುಧರ್ಮಸಾರವೇ ಮುಂತಾದ ಶ್ರುತಿ-ಸ್ಮೃತಿಗಳನ್ನು ಆಧಾರ ನೀಡುತ್ತಾರೆ. ವೇದಕಾಲದ ಭಾರತೀಯ ಸಮಾಜ ಈ ಚಾತುರ್ವರ್ಣ ವ್ಯವಸ್ಥೆ ಮತ್ತು ಶ್ರೇಣೀಕೃತ ಜಾತಿ ವ್ಯವಸ್ಥೆಗಳನ್ನು ಸಾಕ್ಷಾತ್ ಪರಮಾತ್ಮನಿಂದಲೇ ಸೃಜಿಸಲ್ಪಟ್ಟಿದುವೆಂದು ನೆರೆ ನಂಬಿ, ಇದನ್ನು ವಿರೋಧಿಸುವುದಿರಲಿ, ಪ್ರಶ್ನಿಸುವುದೂ ಪಾಪ ಕಾರ್ಯವೆಂದು ಭಾವಿಸಿ ಚಾಚೂ ತಪ್ಪದೆ ಪರಿಪಾಲಿಸಿಕೊಂಡೇ ಬಂದಿರುವುದನ್ನು ಶಾಸ್ತ್ರ, ಪುರಾಣ ಮತ್ತು ವೈದಿಕ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಈ ಕಟ್ಟುಪಾಡನ್ನು ಸಡಿಲಿಸದಂತೆ ಕಾಪಾಡಲೋಸುಗವೇ ಬುದ್ಧಿವಂತರಾದ 'ವಿ' ಅಂದರೆ ವಿಶೇಷವಾದ 'ಪ್ರ' ಎಂದರೆ ಪ್ರಜ್ಞೆಯುಳ್ಳವರೆಂದು ತಮ್ಮನ್ನು ತಾವೇ ಕರೆದುಕೊಂಡ 'ವಿಪ್ರ' ವರ್ಗ, ಅರ್ಥಾ[illegible] ಬ್ರಾಹ್ಮಣರು ಅನೇಕಾನೇಕ ವಿಧಿ-ನಿಷೇಧಗಳನ್ನೊಳಗೊಂಡ ಶಾಸ್ತ್ರಸಾಹಿತ್ಯವನ್ನು [illegible] ಮೇಲ್ವರ್ಗದ ಕ್ಷತ್ರಿಯ-ವೈಶ್ಯವರ್ಗದವರ ಬೆಂಬಲದಿಂದ ಶೂದ್ರವರ್ಗದವ[illegible] ಹತ್ತಿಕ್ಕುತ್ತಾ ಬಂದಿರುವುದನ್ನು ಇತಿಹಾಸದಲ್ಲಿ ಕಾಣಬಹುದಾಗಿದೆ.

ವರ್ಣ ವ್ಯವಸ್ಥೆಯನ್ನು ಶ್ರಮವಿಭಜನೆ ಆಧಾರಿತವಾದ ಒಂದು ಸಾಮಾ[illegible] ಸಂಘಟನೆಯೆಂದೂ ಅದು ಸಮಾಜದ ಸ್ವಾಸ್ಥ್ಯಕ್ಕೆ ಪೂರಕವಾಗಿದೆ ಇತ್ಯಾದಿ[illegible] ಎಷ್ಟೇ ಪ್ರಶಂಸೆ ಮಾಡುತ್ತಾ ಬಂದಿದ್ದರೂ, ಭಗವದ್ಗೀತೆಯಲ್ಲಿ ಸಾಕ್ಷಾತ್ ಶ್ರೀ[illegible] ಪರಮಾತ್ಮನಿಂದಲೇ 'ಚಾತುರ್ವರ್ಣ್ಯಂ ಮಯಾ ಸೃಷ್ಟ್ಯಂ ಗುಣ ಕರ್ಮವಿಭಾಗ[illegible] ಎಂದು ಹೇಳಿಸಲಾಗಿತ್ತಾದರೂ ವರ್ಗೀಕರಣಕ್ಕೆ ಆಧಾರ – ವ್ಯಕ್ತಿಯ ಹುಟ್ಟೋ ಅಥ[illegible] ಅವನ ಗುಣ (ಸ್ವಭಾವ) ಮತ್ತು ಅವನ ವೃತ್ತಿ (ಕರ್ಮ)ಯೋ ಎಂಬ ವಿವಾ[illegible] ಆಗಿನಿಂದಲೂ ಇದ್ದೇ ಇತ್ತು. ಆದರೆ ಯಾರೂ ಅದರ ವಿರುದ್ಧ ದನಿ ಎತ್ತುವ ಸಾ[illegible] ಮಾಡಿರಲಿಲ್ಲ. ಹುಟ್ಟಿನಿಂದಾದ ಬ್ರಾಹ್ಮಣನನ್ನು ಶ್ರೇಷ್ಠ ಎಂದೇಕೆ ಪರಿಗಣಿಸಬೇ[illegible] ಮತ್ತು ಅವನ ತಂದೆಯ/ತಂದೆಯ ತಂದೆಯ ಹೆಸರನ್ನೇಕೆ ಕೇಳಬೇಕು, ಎಂ[illegible] ಪ್ರಶ್ನಿಸುವ ಮೂಲಕ 'ಕಾಠಕ ಸಂಹಿತೆ'ಯಲ್ಲಿ ಮೊಟ್ಟಮೊದಲ ಬಾ[illegible] ವರ್ಣ ವ್ಯವಸ್ಥೆಯ ಮೂಲವನ್ನೇ ಕೆಣಕಲಾಯಿತು ಹಾಗೂ ಭಗವಾನ್ ಬುದ್ಧ[illegible] (ಮಧ್ಯಮ ನಿಕಾಯ ೧೧. ೧೨೮) ಕ್ಷತ್ರಿಯನು ಬ್ರಾಹ್ಮಣನಿಗಿಂತ ಶ್ರೇಷ್ಠ ಎಂ[illegible] ಹೇಳಿದ್ದಾನಾದರೂ ಈ ವ್ಯವಸ್ಥೆಯ ಸಮಗ್ರ ಸುಧಾರಣೆಗೆ ಪ್ರಯತ್ನವನ್ನೇ[illegible] ಮಾಡಲಿಲ್ಲ.

ಈ ಚಾತುರ್ವರ್ಣ ವ್ಯವಸ್ಥೆಯನ್ನು ಮತ್ತು ಜನನ ಮೂಲವಾದ ಜಾತಿ[illegible] ಶ್ರೇಷ್ಠ-ಕನಿಷ್ಠತೆಗಳ ನಿಗದಿಯನ್ನು ಅತಿ ನಿಷ್ಠುರವಾಗಿ ಖಂಡಿಸಿ ಮನುಷ್ಯ ಮಾತ್ರರೆಲ್ಲ[illegible] ಸಮಾನರು ಎಂದು ಸಾರಿದ ಬಸವಾದಿ ಶರಣರ ವಚನ ಸಾಹಿತ್ಯವನ್ನು ನಾವು ಕ್ರಿ.[illegible] ಹನ್ನೆರಡನೇ ಶತಮಾನದಲ್ಲಿ ಕಾಣಬಹುದು. 'ಜನ್ಮನಾಜಾಯತೇ ಶೂದ್ರಃ ಸಂಸ್ಕಾರ[illegible] ದ್ವಿಜ ಉಚ್ಚತೇ' ಎಂಬ ಸೂತ್ರವಿಡಿದು ಹುಟ್ಟಿನಿಂದ ಶೂದ್ರನಾಗಿದ್ದರೂ ಅರಿವು ಮ[illegible] ಆಚಾರಗಳಿಂದ ಬ್ರಾಹ್ಮಣ, ಅಂದರೆ ಉಚ್ಚ ಗುಣದ ಶ್ರೇಷ್ಠ ಪುರುಷನಾಗಬಹು[illegible] ಎಂದೂ ಅವರು ಸಾರಿದರು. ಅಂತೆಯೇ 'ಹೊಲೆಗಂಡಲ್ಲದೆ ಪಿಂಡ[illegible] ನಲೆಗಾಶ್ರಯವಿಲ್ಲ' ಎಂದ ಬಸವಣ್ಣನವರು 'ವರ್ಣಾನಾಂ ಕಿಂ ಪ್ರಯೋಜನ[illegible] ಎಂದು ಪ್ರಶ್ನಿಸುತ್ತಾರೆ, ಎಲ್ಲರೂ ಹುಟ್ಟುವುದು ತಮ್ಮ ತಾಯಂದಿರ ಯೋನಿಯಿಂದ[illegible] ವಿನಾ ಪುರುಷಸೂಕ್ತ ಅಥವಾ ಇತರೆಡೆ ಹೇಳುವಂತೆ ಯಾರದೋ ಬಾಯಲ್ಲಾಗಲೀ[illegible] ಪಾದದಲ್ಲಾಗಲೀ ಅಲ್ಲ. ಇಂತಹ ವಾದದ ವಿರುದ್ಧವಾಗಿ ಅಣ್ಣನವರು 'ಕರ್ಣದ[illegible] ಹುಟ್ಟಿದವರುಂಟೆ' ಎಂಬ ಪ್ರಶ್ನೆಯನ್ನು ಮುಂದೊಡ್ಡುತ್ತಾರೆ. ಅಲ್ಲದೆ ಕೀಳು ಕುಲದ[illegible] ಹುಟ್ಟಿದ್ದರೂ ತಮ್ಮ ಅರಿವು ಆಚಾರಗಳಿಂದ ಮಹಾಮಹಿಮರಾಗಬಹುದು ಎಂಬು[illegible] ವ್ಯಾಸ, ಕೌಂಡಿನ್ಯ ಮುಂತಾದ ಋಷಿ-ಮುನಿಗಳ ಉದಾಹರಣೆಯನ್ನು ನೀಡಿದ್ದಾ[illegible] ಜನ್ಮದಿಂದ ಬ್ರಾಹ್ಮಣರಾದ ತಾವೇ ಇತರರೆಲ್ಲರಿಗಿಂತ ಶ್ರೇಷ್ಠರೆಂದು ಮೆರೆದಾ[illegible] ವವರನ್ನು, ಹೊಲೆಯಲ್ಲಿ ಹುಟ್ಟಿದ, ಎಲವೋ! ಮಾತಂಗಿಯ ಮಗ ನೀನು! ಎಂ[illegible] ಮೂದಲಿಸಿ ನುಡಿದಿದ್ದಾರೆ.

ಅಶ್ವಘೋಷನ ವಿಚಾರಗಳೂ ಇದಕ್ಕನುಗುಣವಾಗಿಯೇ ಇವೆ. ಅವನೂ 'ಜಾ[illegible] ರೂಪಿ ಬ್ರಾಹ್ಮಣೋ ನಭವತಿ', ಅಂದರೆ ಮನು ಘೋಷಿತ ಧರ್ಮದ ಪ್ರಕಾರ[illegible] ಜಾತಿಯಿಂದ ಯಾರೂ ಬ್ರಾಹ್ಮಣನಾಗುವುದಿಲ್ಲ ಎಂದು ಹೇಳುತ್ತಾ ಅಚಲನೆ[illegible] ದೇವರ್ಷಿ ಆನೆಯಿಂದಲೂ, ಕಪಿಲನೆಂಬ ಋಷಿ ಕಂದುಬಣ್ಣದ ಹಸುವಿನಿಂದಲ[illegible] ಗೌತಮನೆಂಬ ಮುನಿ ಸೋನೆ ಹುಲ್ಲಿನಿಂದಲೂ, ಅಗಸ್ತ್ಯನು ಅಗಸ್ತಿ ಎ[illegible] ಪುಷ್ಪದಿಂದಲೂ, ಆಚಾರ್ಯ ದ್ರೋಣನು ನೀರಿನ ಗಡಿಗೆಯಿಂದಲೂ ಹುಟ್ಟಿದ[illegible] ರಾಗಿದ್ದಾರೆ, ಕೇವರ್ತಿನಿ ಮತ್ತು ಶೂದ್ರಕೆಯರೆಂಬ ಅಸ್ಪೃಶ್ಯ ಮಹಿಳೆಯರಿ[illegible] ಕ್ರಮವಾಗಿ ವ್ಯಾಸ ಮಹರ್ಷಿ ಮತ್ತು ಕೌಶಿಕರು ಹುಟ್ಟಿದವರೆಂಬುದನ್ನು ಅಶ್ವಘೋಷ[illegible] ಆಧಾರಸಹಿತ ವಿವರಿಸಿದ್ದಾನೆ. ವಿಶ್ವಾಮಿತ್ರ, ವಸಿಷ್ಠಾದಿ ಮಹಾಮುನಿ[illegible] ತಾಯಂದಿರಾರೂ ಬ್ರಾಹ್ಮಣ ವರ್ಗದವರಲ್ಲ. ಆದರೂ ಅವರ ಸದ್ಗುಣಗಳಿ[illegible] ಅವರನ್ನು ಬ್ರಾಹ್ಮಣಶ್ರೇಷ್ಠರೆಂದು ಒಪ್ಪಲಾಗಿದೆ. ಆದ್ದರಿಂದ ಬ್ರಾಹ್ಮಣ ಪರಿಗಣ[illegible] ಜಾತಿ-ಜನನ ಮೂಲ ಕಾರಣವಾಗಲಾರದು.

ಪ್ರೊ॥ ಬಿ. ವಿ. ವೀ.ಯವರು ಅಶ್ವಘೋಷನ 'ವಜ್ರಸೂಚಿ' ಎಂಬ ಕೃತಿಯ ಸಮೀಕ್ಷೆಯನ್ನು ಕೇವಲ ೪ ಪುಟಗಳಲ್ಲಿ ಅಡಕಗೊಳಿಸಿದ್ದಾರೆ. ಪ್ರಸ್ತಾವನೆ ಎ[illegible] ಲೇಖಕರ ನುಡಿಗಳಾದ ನಂತರ ಎರಡನೇ ಅಧ್ಯಾಯದಲ್ಲಿ 'ವಜ್ರಸೂಚಿ' [illegible]



**ವಾಸ್ತವ**

ಅವಳು
ಮೊದಲು
ಕಲ್ಪನಾ
ಗೆಳತನದ ನಂತರ
ಕಲ್ಪನೆ
ಮದುವೆಯವರೆಗೂ
ಕಲ್ಪನಾ ಚಿತ್ರಗಳು
ನಂತರ
ಕಲ್ಪನೆಗಳೆಲ್ಲವೂ
ವಾಸ್ತವ ರೂಪ ತಳೆದ
ನೈಜ ಚಿತ್ರಗಳು
'ಸಂಬಂಧ'ದ ಚೌಕಟ್ಟಿನಲ್ಲಿ
ಕಲಾಕೃತಿಗಳಾಗಿ
ಮನದ ಗೋಡೆಯ ಮೇಲೆ
ಜಾಗವಿಲ್ಲದಂತೆ
ತುಂಬಿ ಜಿಡುತ್ತವೆ.

ಾನುವಾದವನ್ನು ಸಮರ್ಪಕವಾಗಿ ಕೊಟ್ಟು ಘೋಷನ ಮೂಲ ಪಾಠವನ್ನು (ಸಂಸ್ಕೃತದಲ್ಲಿ) ರನೇ ಅಧ್ಯಾಯದಲ್ಲಿ ಸಮಗ್ರವಾಗಿ ನೀಡಿದ್ದಾರೆ. ನೆಯದಾದ 'ಅನುಬಂಧ' ಎಂಬ ಅಧ್ಯಾಯದಲ್ಲಿ ಕೋಪನಿಷತ್ತು, ಭವಿಷ್ಯ ಪುರಾಣ, ದಿವ್ಯ ದಾನಗಳನ್ನು ಕೊಟ್ಟಿದ್ದಾರೆ.

ತನ್ನ ಗುರು ಮಂಜುಘೋಷನ ಸ್ಮರಣೆಯೊಂದಿಗೆ ್ಯರಂಭ ಮಾಡುವ ಅಶ್ವಘೋಷನು ಯಾವುದೇ ್ಗ, ಆಕರ ಅಥವಾ ಸ್ಮೃತಿ ಪ್ರಮಾಣಗಳ ಾಣವನ್ನು ಆಧರಿಸದೇ ತನ್ನದೇ ಆದ ಸ್ವಂತ, ತ್ರ ವಿಚಾರಗಳಿಗೆ ಅನುಗುಣವಾಗಿ 'ವಜ್ರಸೂಚಿ' ಈ ಕೃತಿಯನ್ನು ರಚಿಸಿರುವುದಾಗಿ ಹೇಳಿ ಡಿದ್ದಾನೆ ಹಾಗೂ ತನ್ನ ವಿಚಾರಗಳನ್ನು ಮಂಡಿಸಲು ವೈಚಾರಿಕ ಮಾರ್ಗವನ್ನು ಅನುಸರಿಸಿರುವು ಯೂ ಈ ಗ್ರಂಥವು ತರ್ಕಬದ್ಧವಾಗಿದ್ದರೆ ಮಾತ್ರ ಗರು ಇದನ್ನು ಅಂಗೀಕರಿಸಬಹುದು, ಾದರೆ ತಿರಸ್ಕರಿಸಬಹುದೆಂದು ಅಶ್ವಘೋಷನು ಕ ಮಾಡುತ್ತಾನೆ.

ಬ್ರಾಹ್ಮಣ ಎಂದರೆ ಏನು, ಎಂಬ ಪ್ರಶ್ನೆಯನ್ನು ಕೊಂಡು, ಹಾಗೆಂದರೆ: ಜೀವವೇ, ಜಾತಿ ಇಲ್ಲ ರವೇ, ಮತ್ತು ಜ್ಞಾನವೇ ವೇದಪಾಂಡಿತ್ಯವೇ ಾ ಓರ್ವನ ಆಚಾರ ಮತ್ತು ವೃತ್ತಿಯೇ, ಎಂಬ ರಗಳನ್ನು ವರ್ಣಗಳಲ್ಲೆಲ್ಲಾ ಬ್ರಾಹ್ಮಣ ವರ್ಣವೇ ವೆಂದು ವಾದಿಸುವ ಗಣ್ಯರ ಮುಂದೆ ಇಡುತ್ತಾನೆ. ದೆ, ತಾನೇ ಇವೆಲ್ಲವಕ್ಕೂ ಉತ್ತರಿಸುತ್ತಾನೆ.

. ದೇವತೆಗಳಾದ ಸೂರ್ಯ, ಚಂದ್ರ, ಾದಿಗಳು ಹುಟ್ಟಿ ಸಾಯುವ ಜೀವಿಗಳೇ. ಅಂತೆಯೇ ಚಾಂಡಾಲನೂ ಜೀವಿಯೇ. ಆದರೆ, ಜೀವಿಯಾದ ಮಾತ್ರಕ್ಕೆ ಬ್ರಾಹ್ಮಣನಾಗಬಲ್ಲ ಎಂಬ ವಾದವನ್ನು ವೇದಗಳು ಬೆಂಬಲಿಸುವುದಿಲ್ಲ. ಅಲ್ಲದೆ ಯಾವುದೇ ಜೀವಂತ ಪ್ರಾಣಿಯು ಬ್ರಾಹ್ಮಣನಾಗಬಲ್ಲದು ಎಂಬುದಕ್ಕೆ ದಶಾರಣ್ಯದ ಸಪ್ತವ್ಯಾಧರು, ಶರದ್ವೀಪದ ಚಕ್ರವಾಕ ಪಕ್ಷಿಗಳು ಇತ್ಯಾದಿಗಳು ಕುರುಕ್ಷೇತ್ರದಲ್ಲಿ ಬ್ರಾಹ್ಮಣರಾಗಿ ಜನಿಸಿದರೆಂಬುದಕ್ಕೆ ಮಹಾಭಾರತದಲ್ಲಿ ಆಧಾರವಿದೆ.

೨. ನಾಲ್ಕು ವೇದಗಳನ್ನು ಸಾಂಗೋಪಾಂಗವಾಗಿ ಅಧ್ಯಯನ ಮಾಡಿ, ಅವುಗಳ ತತ್ವಾರ್ಥಗಳನ್ನು ತಿಳಿದುಕೊಂಡು ಬ್ರಾಹ್ಮಣನೆನಿಸಿಕೊಂಡವನೂ ಸಹ ಶೂದ್ರನೋರ್ವನಿಂದ ದಾನ ಸ್ವೀಕರಿಸಿದರೆ ಅವನು ಕತ್ತೆಯಾಗಿ ಜನಿಸುತ್ತಾನೆ ಎಂದು ಮನುಧರ್ಮ ಶಾಸ್ತ್ರವೇ ವಿಧಿಸುತ್ತದೆ. 'ಜಾತಿ ರೂಪಿ ಬ್ರಾಹ್ಮಣೋ ನಭವತಿ' ಎಂದಿರುವುದರಿಂದ ಜೀವ-ಜಾತಿ ಮೂಲದಿಂದ ಯಾರೂ ಬ್ರಾಹ್ಮಣರಾಗುವುದಿಲ್ಲ. ತಾಯಿ ಬ್ರಾಹ್ಮಣೇತರಳಾಗಿದ್ದರೂ ತಂದೆ ಬ್ರಾಹ್ಮಣನಿದ್ದಾಗ ಪುತ್ರರು ಬ್ರಾಹ್ಮಣರಾಗುತ್ತಾರೆ ಎನ್ನುವುದಾದರೆ ಬ್ರಾಹ್ಮಣರಿಂದ ಜನಿಸಿದ ಪುತ್ರರೆಲ್ಲಾ ಬ್ರಾಹ್ಮಣರೆಂದು ನೀವು ಏಕೆ ಮಾನಿಸುವುದಿಲ್ಲ, ಎಂಬ ಪ್ರಶ್ನೆಯನ್ನು ಅಶ್ವಘೋಷನು ದ್ವಿಜೋತ್ತಮರಿಗೆ ಒಡ್ಡುತ್ತಾನೆ.

೩. ದೇಹದಿಂದಲೇ ಬ್ರಾಹ್ಮಣತ್ವ ಪ್ರಾಪ್ತಿಯಾಗುವುದಾದರೆ ಬ್ರಾಹ್ಮಣರ ಸಂಪರ್ಕಕ್ಕೆ ಬಂದ ಕ್ಷತ್ರಿಯ, ವೈಶ್ಯ, ಶೂದ್ರರೆಲ್ಲರೂ ಬ್ರಾಹ್ಮಣರೇ ಆಗಬೇಕಾಗುತ್ತದೆ. ಆದರೆ ಸನಾತನಿಗಳು ಇದನ್ನು ಒಪ್ಪುವುದಿಲ್ಲ, ಹಾಗೆ ಎಂದೂ ಆಗಿಯೂ ಇಲ್ಲ.

೪. ಇನ್ನು ಜ್ಞಾನದ ಬಲದಿಂದಲೂ ಬ್ರಾಹ್ಮಣನಾಗುವುದಕ್ಕೆ ಬರುವುದಿಲ್ಲ. ಏಕೆಂದರೆ ಎಷ್ಟೇ ಜ್ಞಾನವಿದ್ದರೂ, ವೇದ, ವ್ಯಾಕರಣಾದಿ ಶಾಸ್ತ್ರಗಳ ಮೇಲೆ ಎಷ್ಟೇ ಪಾಂಡಿತ್ಯ ಸಾಧಿಸಿದ್ದರೂ ಶೂದ್ರರನ್ನು ಬ್ರಾಹ್ಮಣರೆಂದು ವೈದಿಕ ಸಮಾಜ ಅಂಗೀಕರಿಸುವುದಿಲ್ಲ.

೫. ಹಾಗೆಯೇ ವೃತ್ತಿ (ಕರ್ಮ), ಆಚಾರ-ವಿಚಾರ, ನಡೆನುಡಿಗಳಲ್ಲಿ ಎಷ್ಟೇ ಪ್ರಾಮಾಣಿಕರಾಗಿದ್ದರೂ ಹುಟ್ಟು ಈ ಬ್ರಾಹ್ಮಣೇತರರನ್ನು ಮನುವಾದಿಗಳು ಮಾನ್ಯ ಮಾಡುವುದಿಲ್ಲ. ರಾಕ್ಷಸ ಕುಲ ಸಂಭೂತನಾದ ರಾವಣನು ಋಗ್, ಯಜುರ್, ಸಾಮ, ಅಥರ್ವ ಎಂಬ ನಾಲ್ಕು ವೇದಗಳಲ್ಲಿ ಪಾರಂಗತನಾಗಿದ್ದರೂ, ರಾಕ್ಷಸರ ಮನೆಮನೆಗಳಲ್ಲೂ ವೇದಾನುಷ್ಠಾನ ಸಾಂಗವಾಗಿ ನಡೆದಿತ್ತಾದರೂ ಅವರನ್ನು ಬ್ರಾಹ್ಮಣರೆಂದು ಎಂದೂ ಅಂಗೀಕರಿಸಿರಲಿಲ್ಲ. ಹೀಗೆ ಮನುವಾದಿಗಳ ಬ್ರಾಹ್ಮಣ ಪಾರಮ್ಯದ ಎಲ್ಲಾ ವಾದಗಳನ್ನು ನಿರಾಕರಿಸಿರುವ ಅಶ್ವಘೋಷನು ಬ್ರಾಹ್ಮಣತ್ವದ ಅಪರ ಪರಿಕಲ್ಪನೆಯೇ ಸ್ಪಷ್ಟವಾಗಿಲ್ಲ ಎಂದು ಸಾಕ್ಷಿ ಸಮೇತ ಸಾಬೀತು ಮಾಡುತ್ತಾನೆ.

ಮುಂದುವರಿದು, ಅಶ್ವಘೋಷನು ಹಾಗಾದರೆ ಬ್ರಾಹ್ಮಣತ್ವವನ್ನು ಗಳಿಸುವುದು ಹೇಗೆ, ಎಂಬ ಪ್ರಶ್ನೆಯನ್ನು ಮುಂದಿಟ್ಟು ಉತ್ತರಿಸುವ ಪ್ರಯತ್ನ ಮಾಡುತ್ತಾನೆ. ಶಾಸ್ತ್ರಾಧ್ಯಯನ, ವೇದ ಪಠನಗಳಿಂದ ಬ್ರಾಹ್ಮಣತ್ವ ಪ್ರಾಪ್ತಿಯಾಗುವುದಿಲ್ಲ ಎಂದು ಸ್ಪಷ್ಟವಾಗಿ ಹೇಳುವ ಅಶ್ವಘೋಷನು, ವ್ರತ, ತಪಸ್ಸು, ಯಮ, ನಿಯಮ, ಶಮೆ-ದಮೆಗಳ ಪಾಲನೆಯಿಂದ ಬ್ರಾಹ್ಮಣತ್ವ ಪ್ರಾಪ್ತಿ ಸಾಧ್ಯವೆಂದು ಹೇಳುತ್ತಾ ಬ್ರಾಹ್ಮಣತ್ವ ಎಂಬುದು ಆಧ್ಯಾತ್ಮಿಕ ಬೆಳವಣಿಗೆಯಲ್ಲಿ ಒಂದು ಹಂತವಷ್ಟೇ ಎಂದು ಒತ್ತಿ ಹೇಳುತ್ತಾನೆ. ದೇವತೆಗಳು, ಮಾನವರು ಹಾಗೂ ತಿರ್ಯಗ್ಯೋನಿಯಿಂದ ಜನಿಸಿದ ಪಶು-ಪಕ್ಷಿಗಳೂ ಸಹ ಮೈಥುನಾದಿ ಸಾಂಸಾರಿಕ ಸುಖಗಳಿಂದ ವಿರಕ್ತರಾದಾಗ ಅವರೆಲ್ಲರೂ ವಿಪ್ರರೂ, ಬ್ರಾಹ್ಮಣರೂ ಆಗಬಲ್ಲರೆಂಬುದು ಅಶ್ವಘೋಷನ ವಾದ.

ತರುವಾಯ ಅಶ್ವಘೋಷನು ಬಹು ಚರ್ಚಿತವಾದ ಶೂದ್ರತ್ವದ ಹಾಗೂ ಸಮಾಜದಲ್ಲಿ ಶೂದ್ರರ ಸ್ಥಾನಮಾನದ ಪ್ರಶ್ನೆಯನ್ನು ಎತ್ತಿಕೊಳ್ಳುತ್ತಾನೆ. ಶೂದ್ರರು ಚಾತುರ್ವರ್ಣಗಳಲ್ಲಿ ಕಟ್ಟಕಡೆಯವರಾದ್ದರಿಂದ ಅವರು ಬ್ರಾಹ್ಮಣರ ಸೇವೆ ಮಾಡಬೇಕು ಎನ್ನುತ್ತದೆ ಶಾಸ್ತ್ರ ಪಾಣಿನಿಯ ಸೂತ್ರದ ಪ್ರಕಾರ ದೇವತೆಗಳ ಒಡೆಯನಾದ ಇಂದ್ರನ ಹೆಸರೂ ಕಟ್ಟಕಡೆಯಲ್ಲಿ ಬರುತ್ತದೆ. ಸಂಸ್ಕೃತ ಪದ ಸಂಯೋಜನೆ ಪ್ರಕಾರ ಉಮೆ (ಅಂದರೆ ಪಾರ್ವತಿಯು) ಮಹೇಶ್ವರನಿಗಿಂತಲೂ ಮೊದಲು ಜನಿಸಿದವಳು ಎಂದಾಗುತ್ತದೆ. ಆದರೆ ದೇವೇಂದ್ರ ಮತ್ತು ಪರಮೇಶ್ವರರನ್ನು ಕೆಳಗಿರಿಸಿ ಗಣನೆ ಮಾಡುವುದಿಲ್ಲ. ಆದ್ದರಿಂದ ವಾಕ್‌ಸರಣಿಯಲ್ಲಿ ಶೂದ್ರರನ್ನು ಕಟ್ಟಕಡೆಯಲ್ಲಿ ಹೇಳಿದ ಮಾತ್ರಕ್ಕೆ ಅವರು ಇತರರ ಸೇವೆ ಮಾಡಿಕೊಂಡೇ ಇರಬೇಕು ಎಂಬ ವಾದವು ಸರಿಯಲ್ಲವೆನ್ನುತ್ತಾನೆ ಅಶ್ವಘೋಷ. ಈ ಸಂದರ್ಭದಲ್ಲಿ 'ಹೊತ್ತುತಂದು ತಿನ್ನುವರಿ; ಸತ್ತುದನು ಹೊತ್ತು ಒಯ್ಯುವ ನೆತ್ತಲಿಂದಲಿ ಹೊಲೆಯ' ಎಂಬ ಬಸವೇಶ್ವರರ ವಚನ ಜ್ಞಾಪಕಕ್ಕೆ ಬರುತ್ತದೆ. ಹಾಗೆಯೇ ಸರ್ವಜ್ಞ ಮೂರ್ತಿಯ 'ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ?' ಎಂಬ ಮಾರ್ಮಿಕ ಮಾತು ನೆನಪಾಗುತ್ತದೆ.

ಜಾತಿ ಎಂಬುದು ಬ್ರಾಹ್ಮಣತ್ವಕ್ಕೆ ಕಾರಣ ವಾಗುವುದಿಲ್ಲ ಎಂದು ಮತ್ತೆ ಮತ್ತೆ ಹೇಳುವ ಅಶ್ವಘೋಷನು ಅರಣಿ ಎಂಬ ಅಸ್ಪೃಶ್ಯ ಸ್ತ್ರೀಯ ಗರ್ಭದಿಂದ ಜನಿಸಿದ ಕಠ ಎಂಬ ಮಹಾಮುನಿ ತನ್ನ ತಪೋಬಲದಿಂದ ಮಹಾ ಬ್ರಾಹ್ಮಣನಾದುದು, ಒಬ್ಬ ಬೆಸ್ತರವಳಿಂದ ಜನಿಸಿದ ವ್ಯಾಸನು ತನ್ನ ತಪೋ ಸಾಮರ್ಥ್ಯದಿಂದ ವೇದ ವಾಙ್ಮಯಕ್ಕೆ ಮೂಲಸ್ಥನಾಗಿ ವೇದವ್ಯಾಸನೆನಿಸಿದ್ದು, ಜಿಂಕೆಯಿದ ಜನಿಸಿದವ ಋಷ್ಯಶೃಂಗನಾದದ್ದು, ಒಬ್ಬ ಚಾಂಡಾಲಿನಿಯಿಂದ ಜನಿಸಿದ ವಿಶ್ವಾಮಿತ್ರನು ರಾಜರ್ಷಿಯಾಗಿದ್ದು ಮುಂತಾದ ನಿದರ್ಶನಗಳ ಮೂಲಕ ಜಾತಿಯು ಬ್ರಾಹ್ಮಣತ್ವಕ್ಕೆ ಕಾರಣ ಅಲ್ಲ ಎನ್ನುತ್ತಾನೆ. ಹಾಗೆಯೇ ಮುಂದುವರಿದು ಜಗತ್ತಿನಲ್ಲಿ ಇರುವುದು ಒಂದು ವರ್ಣವೇ ವಿನಾ ನಾಲ್ಕಲ್ಲ ಎಂದು ಸಾರಿ ಹೇಳುತ್ತಾನೆ. ಒಬ್ಬನೇ ಸೃಷ್ಟಿಕರ್ತನಿಂದ ಉತ್ಪನ್ನವಾದ ಅವನದೇ ಸಂತಾನವಾದ ಮಾನವರಲ್ಲಿ ನಾಲ್ಕು ವರ್ಣಗಳ ವಿಭಜನೆ ಏಕೆ ಮತ್ತು ಹೇಗೆ ಉಂಟಾಯಿತು ಎಂಬ ಮೂಲಭೂತ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯತ್ನವೇ ಅಶ್ವಘೋಷನ 'ವಜ್ರಸೂಚಿ'ಯ ತಿರುಳು. ಯುಧಿಷ್ಠಿರ-ವೈಶಂಪಾಯನರ ಸಂವಾದ ತ್ರಿಶಂಕು-ಪುಷ್ಕರಸಲಿ ಎಂಬ ಬ್ರಾಹ್ಮಣನ ನಡುವಿನ ವಾಗ್ವಾದ ದೃಷ್ಟಾಂತಗಳಿಂದ ಅಶ್ವಘೋಷನು ಈ ಪ್ರಶ್ನೆಗೆ ಪರಿಹಾರ ಒದಗಿಸಲು ಪ್ರಯತ್ನಿಸಿದ್ದಾನೆ.

ಜಾತಿ-ಕುಲ, ವರ್ಣ-ವರ್ಗ, ಮೇಲು-ಕೀಳು, ಅಂತ್ಯಜ-ಅಗ್ರಜ ಎಂಬ ವಿವಿಧ ರೀತಿಯ ಸಮಾಜ ಭಿನ್ನತೆಗಳ ನಿವಾರಣೆಯ ಬಗ್ಗೆ ಚಿಂತನೆ ನಡೆಸಿರುವ ಇಂದಿನ ವಿಚಾರವಾದಿಗಳಿಗೆ ಅಶ್ವಘೋಷನ 'ವಜ್ರಸೂಚಿ'ಯು ಒಂದು ದಿಟ್ಟ ದಿಕ್ಸೂಚಿಯಂತಿದೆ ಎಂದು ಹೇಳಬಹುದು.


ಎ. ಜಿ. ವಿರೂಪಾಕ್ಷಪ್ಪ
ನಂ. ೯೧, 'ಎ' ಬ್ಲಾಕ್, ೭ನೇ ಕ್ರಾಸ್
ದೇವರಾಜ ಅರಸ್ ಲೇ ಔಟ್, ದಾವಣಗೆರೆ - ೫೭೭ ೦೦೬




# ಇನ್ನಿಲ್ಲವಾದ ಸಾಹಿತ್ಯ ದಿಗ್ಗಜ



ಮೃತ್ಯುವನ್ನೇ ಅಲ್ಪವಾಗಿಸುವಷ್ಟು ಕೆಲಸ ಮಾಡಿದವರು, ನವಕರ್ನಾಟಕದ ಹಿತಚಿಂತಕರು ಡಿ.ವಿ.ಕೆ. ಮೂರ್ತಿಯವರು. ಸಾಮಾಜಿಕ ಬದ್ಧತೆ, ಉತ್ತಮ ಗುಣಮಟ್ಟದ ಸಾಹಿತ್ಯ ಜನರಿಗೆ ಒದಗಿಸಬೇಕು ಎನ್ನುವ ಗುರಿಯೊಂದಿಗೆ, ಧ್ಯೇಯದೊಂದಿಗೆ ಕೆಲಸ ಮಾಡಿದವರು ಅವರು. ಅವರ ವಿದ್ವತ್ತಿಗೆ ಅಧ್ಯಾಪಕ ವೃತ್ತಿ ಅರಸಿಬಂದಿತ್ತು. ರಿಸರ್ವ್ ಬ್ಯಾಂಕ್‌ನವರು ಅವರನ್ನು ಕೈಬೀಸಿ ಕರೆದರು. ಆಗಿನ ಕಾಲದಲ್ಲಿ ಎರಡೂ ಕೆಲಸಗಳನ್ನೂ ಒಲ್ಲೆ ಎಂದು ತಿರಸ್ಕರಿಸಿ, ಸ್ವಇಚ್ಛೆಯಿಂದ ಪ್ರಕಾಶನ ಕ್ಷೇತ್ರವನ್ನು ಆರಿಸಿಕೊಂಡರು, ಎಲ್ಲ ಪ್ರಕಾಶನ ಸಂಸ್ಥೆಗಳಿಗೆ ಮಾದರಿಯಾದರು. ಪ್ರಕಾಶನ ಸಂಸ್ಥೆ ಎಂಬುದು ಉದ್ಯಮವಲ್ಲ, ಅದೊಂದು ಸೇವೆ ಎಂದು ನಂಬಿದವರು, ಅಂತೆಯೇ ನಡೆದುಕೊಂಡವರು ಮಾನ್ಯ ಡಿ.ವಿ.ಕೆ. ಅವರ ಪ್ರಕಾಶನದ ಮೂಲಕ ಸಾವಿರಾರು ಪುಸ್ತಕಗಳನ್ನು ಪ್ರಕಟಿಸಿದರು, ಹಲವಾರು ಲೇಖಕರನ್ನು, ಲೇಖಕಿಯರನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸಿದರು, ವಿವಿಧ ವಿಷಯಗಳ ಪುಸ್ತಕಗಳನ್ನು ಪ್ರಕಟಿಸಿ, 'ಸಾಹಿತ್ಯ ಕ್ರಾಂತಿ' ಮಾಡಿದರು. ಅವರು ಸ್ವತಃ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ್ದರು. ಬಾಲ್ಜಾಕ್ ಮುಂತಾದವರನ್ನು ಕುರಿತು ಅವರಷ್ಟು ಅಧಿಕಾರಯುತವಾಗಿ ಮಾತನಾಡಬಲ್ಲವರು ನಮ್ಮಲ್ಲಿ ಬಹಳಷ್ಟಿಲ್ಲ. ಹಲವು ಭಾಷೆಗಳ ಸಾಹಿತ್ಯ ಅವರಿಗೆ ಸುಪರಿಚಿತವಾಗಿತ್ತು. ತುಲನಾತ್ಮಕವಾಗಿ ಮೌಲ್ಯಗಳನ್ನು ಚರ್ಚೆ ಮಾಡುವಷ್ಟು ಪಾಂಡಿತ್ಯ ಅವರಿಗಿತ್ತು. ನವಕರ್ನಾಟಕದ ಜೊತೆ ಆತ್ಮೀಯ ಬಾಂಧವ್ಯ ಹೊಂದಿದ್ದ ಈ ಹಿರಿಯಣ್ಣನನ್ನು ಸ್ಮರಿಸಿ, ನಾವು ಕಂಬನಿ ಮಿಡಿಯುತ್ತೇವೆ, ಗೌರವಪೂರ್ವಕ ನಮನ ಸಲ್ಲಿಸುತ್ತೇವೆ.

– ನವಕರ್ನಾಟಕ ಪ್ರಕಾಶನ ಬಳಗ

# ವಿಜ್ಞಾನ ಬೆಳೆಯುತ್ತಿರುವ ಕ್ರಮವಿಧಾನಗಳು: ಮತ್ತೆ ಮುಂದೇನು?

ಡಾ॥ ಎಮ್. ಎನ್. ಕೇಶವ ರಾವ್

ಂದಿನ ತಂತ್ರಜ್ಞಾನದ ಪ್ರಗತಿಯಿಂದ ಪ್ರತಿಷ್ಠೆ ಳಿಸಿದ 'ಎಂಜನಿಯರಿಂಗ್', ತನ್ನದೇ ೇತ್ರಸಂಬದ್ಧ ವಿಜ್ಞಾನವನ್ನು, ಇತರ ಜ್ಞಾನಗಳ ಸಹಾಯದಿಂದ ಬೆಳೆಸಿ ುಹತ್ಸಾಧನೆಗಳನ್ನು ಮಾಡಿ, ಮುಂಬರುವ ಲ್ಲ ತರಹೆಯ ವಿಜ್ಞಾನಗಳಿಗೆ ಸನ್ನೆಕೋಲಾಗಿ ಹಾಯ ಮಾಡಲು ಸಿದ್ಧವಾಯಿತು. ಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ವೈದ್ಯಶಾಸ್ತ್ರ ುಂತಾದವು ತಮ್ಮಲ್ಲಿಯೆ ಹಿಂದಿನಿಂದ ೇಖರವಾಗುತ್ತಿದ್ದ ಅಪಾರ ಾಹಿತಿರಾಶಿಗಳಿಗೆ ಹೊಸ ವಿಧಾನಗಳನ್ನು ನ್ವಯಿಸಿ, ತಮ್ಮದೇ 'ಜೀವವಿಜ್ಞಾನ' ಎನ್ನುವ ರಡು ಶತಮಾನಗಳಿಗೂ ವಿಸ್ತರಿಸಬಲ್ಲ ೂಸ ವಿಜ್ಞಾನವನ್ನು ಕಟ್ಟಿಕೊಂಡವು. ಆ ಜ್ಞಾನವೂ, ಹಳೆಯ ಮಾನವಶಾಸ್ತ್ರಗಳನ್ನೆಲ್ಲ ಜ್ಞಾನದ ವ್ಯಾಪ್ತಿಗೊಳಪಡಿಸಿಟ್ಟು, ಹಿಂದೆ ಸರಿಲ್ಲದಿದ್ದ ಅನೇಕ ಹೊಸ ವಿಶಿಷ್ಟ ಜ್ಞಾನಗಳಿಗೆ ಅನುವು ಾಡಿಕೊಟ್ಟಿತು.

**ಕ**ಳೆದ ಎರಡು ಮೂರು ದಶಕಗಳಲ್ಲಿ, ಸ್ಫೋಟಕವೇಗದಲ್ಲಿ ಅಪಾರವಾಗಿ ರಾಶಿಯಾಗುತ್ತಿರುವ ಮಾಹಿತಿಯೇ, (– ವೈಜ್ಞಾನಿಕ ಮಾಹಿತಿಯಷ್ಟಕ್ಕೆ ಸೀಮಿತಗೊಳಿಸಿದಾಗ ಸಹ), ವಿಜ್ಞಾನದ ಪ್ರಗತಿಗೆ ಮುಖ್ಯ ಕಾರಣ ಎಂದುಕೊಳ್ಳುವ ಅಪೂರ್ಣ ಕಲ್ಪನೆಯೊಂದು ಸಾರ್ವಜನಿಕರಲ್ಲಿ ಬೆಳೆಯುತ್ತಿದೆ. ವಿಜ್ಞಾನದಲ್ಲಿ ಸತ್ಯ ಹುಟ್ಟುವುದು, – ಹಿಂದಿನ ಮಾಹಿತಿಯ ರಾಶಿಯಿಂದಷ್ಟೇ ಅಲ್ಲ, ವಿಜ್ಞಾನದ ಕೇಂದ್ರಚಾಲಕವಾದ ಅದರದೇ ಕ್ರಮವಿಧಾನ(ಮೆಥಡಾಲಜಿ)ಗಳಿಂದ : ಅವಕ್ಕೂ ಮುಖ್ಯವಾಗಿ, ಆ ವಿಧಾನಗಳನ್ನೂ ಸಹ ಉತ್ತಮಗೊಳಿಸುತ್ತ ಹೋಗುವ ಮಾರ್ಗದರ್ಶಿ ಪ್ರಕ್ರಿಯೆಗಳಿಂದ: ಆ ಪ್ರಕ್ರಿಯೆಗಳೂ ಹೊಸ ಸವಾಲುಗಳಿಗೆ ಅಳವಡುತ್ತ ವಿಕಸಿಸುತ್ತಿರುವುದರಿಂದ. ವಿಜ್ಞಾನ ಪ್ರಗತಿಗೊಳ್ಳುತ್ತಾ ಹೋಗುವುದು ಹೀಗೆ ಅನೇಕ ಪರಿವೃತ್ತ ವಲಯಗಳಲ್ಲಿ. ಹಿಂದಿನ ಮಾಹಿತಿಜ್ಞಾನ ರಾಶಿಯಿಂದ ಮುಂದಿನ ವಿಜ್ಞಾನದ ರಾಶಿಮಟ್ಟ ಹೆಚ್ಚುತ್ತದೆಯೆ ಹೊರತು, ಅದರ ಗುಣಮಟ್ಟ ಅಲ್ಲ. ಹೀಗೆ ತೆರೆಮರೆಯಿಂದ ಮಹತ್ಸಾಧನೆ ಮಾಡುತ್ತಿರುವ ವಿಜ್ಞಾನದ ಅನೇಕ ಮುಖ್ಯ ವಿಧಾನಗಳ ಒಂದು ಅತಿಸರಳ ಪರಿಚಯವನ್ನಾದರೂ ಮಾಡಿಕೊಳ್ಳುವುದು ಅತ್ಯವಶ್ಯಕ. ಹಾಗೆಯೆ, ಅದೇ ವಿಧಾನಗಳು ಕಾಲಕ್ರಮದಲ್ಲಿ ಉತ್ತಮತೆಯ ಮೆಟ್ಟಿಲುಗಳನ್ನೇರುತ್ತಿರುವ ಹಾದಿಯನ್ನೂ ಗುರುತಿಸಬೇಕು. ಆಗ ಮಾತ್ರ, 'ವಿಜ್ಞಾನದಲ್ಲಿ ಮುಂದೇನು ?' ಎನ್ನುವ ಕುತೂಹಲದ ಮತ್ತು ಆತಂಕದ ಅತ್ಯಗತ್ಯ ಪ್ರಶ್ನೆಗಳಿಗೆ ಉತ್ತರ ಸಿಕ್ಕುವುದು ಸಾಧ್ಯ.

ವಿಜ್ಞಾನದ ಪರಿಚಯ ನಮಗೆ ಯಾವಾಗಲೂ ಆಗುವುದು ತಂತ್ರಜ್ಞಾನದ ಮುಖಾಂತರವೆ. ಇಂದಿಗೂ ಅಷ್ಟೆ! ಏಕೆಂದರೆ ಮಾನವ ಸ್ವಭಾವತಃ, ಚಿಂತನೆಗಿಂತ ತತ್ಕಾಲದ ಉಪಯೋಗದ ವಿಷಯಗಳಲ್ಲೇ ಹೆಚ್ಚು ಆಸಕ್ತ. ಹೊಟ್ಟೆಯ ಚಿಂತೆ ನೀಗಿದ ನಂತರ ತಾನೇ ಚಿಂತನೆಗೆ ಪ್ರಾರಂಭ ? ವಿಜ್ಞಾನ ಮತ್ತು ತಂತ್ರಜ್ಞಾನದ ಪರಸ್ಪರ ಅವಲಂಬನೆಯ ಚರಿತ್ರೆ, ಎಲ್ಲರಿಗೂ ಈಗ ತಿಳಿದಿರುವ ವಿಷಯ. ಮೊಟ್ಟಮೊದಲು ಬಂದದ್ದು ವಿಜ್ಞಾನದ ಮೊಟ್ಟೆಯೋ ? ತಂತ್ರಜ್ಞಾನದ ಕೋಳಿಯೋ ? ಈ ಪ್ರಶ್ನೆಗೂ ಸಂಪೂರ್ಣ ಉತ್ತರ ಸಿಕ್ಕುತ್ತದೆ, ಆಧುನಿಕ ಜೀವವಿಜ್ಞಾನದಲ್ಲಿನ, ಆದಿಜೀವಿಗಳ ವಿಕಸನದ ಅಧ್ಯಯನಗಳಿಂದ. ತಂತ್ರಜ್ಞಾನದ ಅಥವಾ ಅದರ ಧಾತುರೂಪವಾದ ತಂತ್ರದ, ಕೋಳಿಯೇ ಮೊದಲಿನದು ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ವಿಜ್ಞಾನವನ್ನು ಜ್ಞಾನವೆಂದು, ತಂತ್ರಜ್ಞಾನ ಅದರ ಬಳಕೆಯೆಂದು ತಿಳಿದವರಿಗೆ ಇದು ದೊಡ್ಡ ಸಮಸ್ಯೆಯೇ! (ಇಂತಹವರು, ''ಯಾವನೋ ಅವ್ಯಕ್ತ ಮಹಾಜ್ಞಾನಿ, ಬುದ್ಧಿಯನ್ನು ಕೊಟ್ಟ ಮೇಲೆ ತಾನೆ, ಪ್ರಾಣಿಗಳೊ ಮನುಷ್ಯರೊ ಪರಿಸರದ ವಸ್ತುಗಳನ್ನು ಬಳಸಿಕೊಳ್ಳಲು ಪ್ರಾರಂಭಿಸಿದುದು ?'', ಎನ್ನುವ ಪ್ರಶ್ನೆಯಲ್ಲಿಯೇ ತಪ್ಪು ಉತ್ತರವನ್ನೂ ಹೇಳಿಯೆ ಬಿಟ್ಟಿರುತ್ತಾರೆ. ''ಇಂತಹ ಪ್ರಾಣಿಗಳಲ್ಲಿಯೂ, ಮಾನವನೇ ಮೊದಲು'' ಎನ್ನುವ ಮಹಾ ಗೊಂದಲವೂ ಇವರಲ್ಲಿ ಹಲವರಿಗೆ ಇರುತ್ತದೆ.) ಇಂತಹ ಸರಳ ಪ್ರಶ್ನೆಗಳಿಗೆ ಇನ್ನೂ ಸುಲಭದ ಸುಳಿವು ಇದೆ, ಗಾದೆಯ ಮಾತುಗಳಲ್ಲೆ; ಯಾವುದೇ ಪದಾರ್ಥವನ್ನು ತಿಂದರೆ ಜೀರ್ಣವಾಗುತ್ತದೆಯೆ ಇಲ್ಲವೆ ಎನ್ನುವ ಜ್ಞಾನ, ತಿಂದು ನೋಡುವ ಕಾರ್ಯಮಾತ್ರದಿಂದ ಲಭಿಸುತ್ತದೆ. ಎಲ್ಲ ಜೀವಿಗಳು, ಜೀವನಿರ್ವಹಣೆ, ಸಂತತಿವರ್ಧನೆಗಳ ಜೊತೆಗೆ ತಮ್ಮ ಇತರ ನೂರಾರು ತಾಂತ್ರಿಕ ಯುಕ್ತಿ ಸಾಮರ್ಥ್ಯಗಳನ್ನು ಬೆಳೆಸಿಕೊಳ್ಳುತ್ತಿದ್ದರೂ, ಆ ಕ್ರಿಯಾಕ್ರಮಗಳಿಗಿಂತ



# ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ

ಸರಸ್ವತಿ ಗೋದಾಮು, ಶಾಖೆ : ಜಗತ್ ವೃತ್ತ, ಗುಲಬರ್ಗಾ - ೫೮೫೧೦೧

ದೂ : ೦೮೪೭೨ - ೨೨೬೩೦೩ - ೨೨೨೪೩೧ ಮೊ : ೯೪೪೮೧ ೨೪೪೩೧, ೯೮೮೦೦ ೨೦೮೦೮, ೯೪೪೯೮ ೨೫೪೩೧



## ಇತ್ತೀಚಿನ ಪ್ರಕಟಣೆಗಳು

### ವಚನ ಸಾಹಿತ್ಯ

೧. ವಚನ ಸಾಹಿತ್ಯ ಸಮೀಕ್ಷೆ - ಡಾ. ವ್ಹಿ.ಜಿ.ಪೂಜಾರ
೨. ಶ್ರೀ ಷಣ್ಮುಖ ಶಿವಯೋಗಿಗಳು ವಚನ ನಿರ್ವಚನ - ಒಂದು - ಡಾ. ಎಸ್. ಎಂ. ಹಿರೇಮಠ
೩. ಶರಣ ಹಡಪದ ಅಪ್ಪಣ್ಣ ಮತ್ತು ಮಡದಿ ಲಿಂಗಮ್ಮ - ಡಾ. ಚೆನ್ನಕ್ಕ ಪಾವಟೆ
೪. ವಚನ ಸಂವಾದ - ಡಾ. ರಘುಶಂಖ ಭಾತಂಬ್ರಾ

### ಜನಪದ ಸಾಹಿತ್ಯ

೫. ಜನ-ಜಾನಪದ - ಡಾ.ಗವಿಸಿದ್ಧಪ್ಪ ಎಚ್. ಪಾಟೀಲ
೬. ಧರಿನಾಡಿನ ಜಾನಪದ ಒಗಟುಗಳು - ದೇಶಾಂಶ ಹುಡಗಿ

### ಕತೆಗಳು

೭. ಮದನಿಕೆ ಮತ್ತಷ್ಟು ಕಥೆಗಳು - ಸುಬ್ರಾವ್ ಕುಲಕರ್ಣಿ
೮. ಪ್ರಪಾತ - ಜಿ. ಎನ್. ಮಲ್ಲಪ್ಪ
೯. ಕಲ್ಲಣ್ಣನ ಕಾಂಪ್ಲೇಂಟ್ ಪ್ರಕರಣ ಮತ್ತು ಇತರ ಕಥೆಗಳು - ಗುರುನಾಥ ಅಕ್ಕಣ್ಣ
೧೦. ಲಾಟರಿ - ಮಚ್ಚೇಂದ್ರ ಅನಕಲ್
೧೧. ಬೆಳೆ - ೨ - ಡಾ. ಎಂ.ಜಿ.ಬಿರಾದಾರ
೧೨. ಬೆಳದಿಂಗುಳ ಬೇಗುದಿ - ಮಹಿಪಾಲರೆಡ್ಡಿ ಮುನ್ನೂರು

### ಕಾದಂಬರಿ

೧೩. ಬಯಕೆಗೊಂದು ಆಸರೆ - ಎ.ಜಿ.ರತ್ನ ಕಾಳೇಗೌಡ
೧೪. ಭಾವ ಸಂವಾದ - ಗುಡಿಬಂಡೆ ಪೂರ್ಣಿಮಾ

### ಪ್ರಬಂಧ

೧೫. ಸೀನಪ್ಪನ ಸೀನು - ಶಂ. ಗು. ಬಿರಾದಾರ
೧೬. ಸಿಟಿಯೊಳಗೊಂದು ಮನೆಯ ಮಾಡಿ - ಗುಂಡುರಾವ್ ದೇಸಾಯಿ
೧೭. ಕುಂಭಕರ್ಣನ ಒಕ್ಕಲು - ಸವಿತಾ ಸಿರಗೋಜಿ

### ಮೀಮಾಂಸೆ

೧೮. ಭಾರತೀಯ ಕವಿಕಾವ್ಯ : ಒಂದ ಅಧ್ಯಯನ - ಡಾ. ಪಂಚಾಕ್ಷರಿ ಹಿರೇಮಠ
೧೯. ಶಬ್ದವಾಣಿ ದರ್ಪಣ ದೀಪಿಕೆ - ಪ್ರೊ. ಕಲ್ಯಾಣರಾವ್ ಪಾಟೀಲ

### ಚಿಂತನ

೨೦. ವಿಚಾರ ವೀಚಿ - ಬಿ. ಎಸ್. ಖೂಬಾ
೨೧. ಚಿಂತನಗಳ ಚಿತ್ತಾರ - ರಾಜೇಂದ್ರ ಬಡಿಗೇರ

### ವೈದ್ಯ ಸಾಹಿತ್ಯ

೨೨. ಸೌಭಾಗ್ಯವತಿಯ ಆರೋಗ್ಯ - ಡಾ. ಪಿ. ಎಸ್. ಶಂಕರ್

### ಲೇಖನ ವಿಮರ್ಶೆ

೨೩. ಸಾಹಿತ್ಯ ಸುರಭಿ - ಎಚ್. ಕಾಶೀನಾಥರೆಡ್ಡಿ
೨೪. ಸಾಹಿತ್ಯ ಸೃಷ್ಟಿ ಮತ್ತು ದೃಷ್ಟಿ - ಎ. ಕೆ. ರಾಮೇಶ್ವರ
೨೫. ಅನುಭಾವ ಪಥ - ಪ್ರೊ. ಶಿವರಾಜ ಪಾಟೀಲ
೨೬. ಪರಿಶೀಲನ - ಪ್ರೊ. ಶಿವರಾಜ ಪಾಟೀಲ
೨೭. ನುಡಿಗಟ್ಟು - ಡಾ. ಈಶ್ವರಯ್ಯ ಮಠ

### ತಾಲೂಕಾ ದರ್ಶನ

೨೮. ಕೊಪ್ಪಳ ತಾಲೂಕಾ ದರ್ಶನ - ಎಚ್. ಎಸ್. ಪಾಟೀಲ

### ಪರಿಚಯ ಮಾಲಿಕೆ

೨೯. ಶಾಂತರಸ - ಸಿದ್ಧರಾಮ ಹೊನ್ಕಲ್
೩೦. ಲಿಂಗಣ್ಣ ಸತ್ಯಂಪೇಟೆ - ಚಂದ್ರಕಾಂತ ಕರದಳ್ಳಿ
೩೧. ಎ.ಕೆ.ರಾಮೇಶ್ವರ - ಪ್ರೊ. ಶಿವರಾಜ ಪಾಟೀಲ
೩೨. ಶಾಶ್ವತಸ್ವಾಮಿ ಮುಕ್ಕುಂದಿ ಮಠ - ಹುಲುಗಪ್ಪ ಬುದ್ದಿನ್ನಿ
೩೩. ಕಪಟರಾಳ ಕೃಷ್ಣರಾವ್ - ಡಾ. ಸ್ವಾಮಿರಾವ್ ಕುಲಕರ್ಣಿ
೩೪. ಗವಿಸಿದ್ಧ ಎನ್. ಬಳ್ಳಾರಿ - ಎಚ್. ಎಸ್.ಪಾಟೀಲ
೩೫. ಚಂದ್ರಕಾಂತ ಕುಸನೂರು - ಡಾ. ಕಾವ್ಯಶ್ರೀ
೩೬. ಗವಿಸಿದ್ಧ ಬಳ್ಳಾರಿ - ಎಚ್. ಎಸ್. ಪಾಟೀಲ

### ಅಭಿನಂದನ ಗ್ರಂಥ

೩೭. ಡಾ. ಬಿ. ಎಂ. ಶಿರಹಟ್ಟಿ - ಸಂ. ಗವೀಶ್ ಹಿರೇಮಠ

### ಸಂಪಾದನೆ

೩೮. ಒಡನಾಟ (ಬಿ. ಮಹಾದೇವಪ್ಪ ಸಂಸ್ಮರಣ ಗ್ರಂಥ) - ಸಂ : ಚಂದ್ರಕಾಂತ ಕರದಳ್ಳಿ
- ಡಾ. ಗವಿಸಿದ್ಧಪ್ಪ ಪಾಟೀಲ

### ಕಾವ್ಯ

೩೯. ತಾಜಮಹಲ್ - ಡಾ. ಬಿ.ಎ.ಸನದಿ
೪೦. ಗುಲಗುಂಜಿ - ಅಲ್ಲಮಪ್ರಭು ಬೆಟ್ಟದೂರು

### ಜನಪ್ರಿಯ ಮಾಲಿಕೆ - ಜೀವನ ಚರಿತ್ರೆ

೪೧. ಹಳೆಂಬರ ವೀರಭದ್ರಪ್ಪ - ಎಂ. ಜಿ. ಗಂಗನಪಳ್ಳಿ
೪೨. ಸ್ವಾಮಿ ಲಿಂಗಾನಂದರು - ಪ್ರೊ. ಶಿವರಾಜ ಪಾಟೀಲ
೪೩. ಮಾತಾಜಿಯವರು - ಪ್ರೊ. ಶಿವರಾಜ ಪಾಟೀಲ
೪೪. ನ್ಯಾ. ಶಿವರಾಜ ಪಾಟೀಲ - ಪ್ರೊ. ಶಿವರಾಜ ಪಾಟೀಲ

### ನಾಟಕ

೪೫. ಐದು ಬೀದಿ ನಾಟಕಗಳು - ಪ್ರೊ. ಸೂಗಯ್ಯ ಹಿರೇಮಠ

### ಸಮೂಹ ಮಾಧ್ಯಮ

೪೬. ಎಲೆಕ್ಟ್ರಾನಿಕ್ ಮಾಧ್ಯಮ - ಪ್ರೊ. ಶಿವರಾಜ ಪಾಟೀಲ

### ವಿಜ್ಞಾನ

೪೭. ಹತ್ತೊಂಬತ್ತನೆಯ ಶತಮಾನದ ಇಪ್ಪತ್ತು ಖ್ಯಾತ ವಿಜ್ಞಾನಿಗಳು - ರತ್ನಾ ಮಣೂರ್
೪೮. ಚಂದ್ರಯಾನ - ಶ್ರೀನಿವಾಸ ಕುಷ್ಟಗಿ

## ಪಠ್ಯಪುಸ್ತಕಗಳು

೧. ರಾಜ್ಯಶಾಸ್ತ್ರ ಮತ್ತು ಸರ್ಕಾರದ ಮೂಲಭೂತ ತತ್ವಗಳು
- ಅಂಬಾರಾಯ ಎಸ್. ಹಾಗರ
೨. ರಾಜಕೀಯ ಚಿಂತಕರು, ವಿದ್ಯಮಾನಗಳು ಮತ್ತು ಪ್ರಕ್ರಿಯೆಗಳು
- ಅಂಬಾರಾಯ ಎಸ್. ಹಾಗರ
೩. ಇತಿಹಾಸ - ಜಿ. ಬಿ. ಹೂಗಾ
೪. ರಾಜಕೀಯ ಸಿದ್ಧಾಂತ - ಡಾ. ಐ. ಎಸ್. ವಿದ್ಯಾಸಾಗ
೫. ಆಧುನಿಕ ಭಾರತದ ಇತಿಹಾಸ - ಪ್ರೊ. ಬಿ. ಪಿ. ಹೂಗಾ
೬. ಆಧುನಿಕ ಯೂರೋಪಿನ ಇತಿಹಾಸ - ಪ್ರೊ. ಬಿ. ಪಿ. ಹೂಗಾ
೭. ಕರ್ನಾಟಕ ಇತಿಹಾಸ - ಪ್ರೊ. ಬಿ. ಪಿ. ಹೂಗಾ
೮. ಸಾಮಾಜಿಕ ಸಮಸ್ಯೆಗಳು - ಪ್ರೊ. ಕೆ. ಬೈದ
೯. ನಗರ ಸಮಾಜಶಾಸ್ತ್ರ - ಪ್ರೊ. ಕೆ. ಬೈದ
೧೦. ಸಾಮಾಜಿಕ ಸಮಸ್ಯೆಗಳು - ರಾಮಚಂದ್ರ ಜೋ
೧೧. ನಗರ ಸಮಾಜಶಾಸ್ತ್ರ - ರಾಮಚಂದ್ರ ಜೋ
೧೨. ಭಾರತದಲ್ಲಿ ಮಹಿಳಾ ಅಧ್ಯಯನ - ರಾಮಚಂದ್ರ ಜೋ
೧೩. ಗ್ರಾಮೀಣ ಅಭಿವೃದ್ಧಿ ಆಡಳಿತ - ಪ್ರೊ. ಬಿ. ಕಿಷ್ಟ
೧೪. ಭಾರತದ ಆರ್ಥಿಕಾಭಿವೃದ್ಧಿ - ಡಾ. ಬಸವರಾಜ ಕುಮ್ನೂ
೧೫. ಭಾರತದ ಆರ್ಥಿಕ ಚಿಂತಕರು - ಡಾ. ಬಸವರಾಜ ಕುಮ್ನೂ
೧೬. ಅಭಿವೃದ್ಧಿ ಅರ್ಥಶಾಸ್ತ್ರ - ಡಾ. ಬಸವರಾಜ ಕುಮ್ನೂ
೧೭. ಅಂತರಾಷ್ಟ್ರೀಯ ಸಂಬಂಧಗಳು - ಪ್ರೊ. ಪೂಜಾರ ಬಸವರಾ
೧೮. ಆಧುನಿಕ ಸರಕಾರಗಳು - ಡಾ. ಕವಂಟೆ ಎಸ್. ಎ
೧೯. ಆಧುನಿಕ ಸರಕಾರಗಳು - ಡಾ. ಜೆ. ಎಸ್. ಪಾಟೀ
೨೦. ಆಧುನಿಕ ಸರಕಾರಗಳು - ಡಾ. ಐ. ಎಸ್. ವಿದ್ಯಾಸಾಗ
೨೧. ನಿರ್ವಹಣೆಯ ಕೌಶಲ್ಯಗಳು - ಡಾ. ಸದಾಶಿವ ಹಲ
೨೨. ಸಮಕಾಲೀನ ಲೆಕ್ಕಪರಿಶೋಧನಾ ಶಾಸ್ತ್ರ - ಡಾ. ಎಸ್. ಬಿ. ಹಾಗರ
೨೩. ಹೂಡಿಕೆಯ ನಿರ್ವಹಣಾ ಶಾಸ್ತ್ರ - ಡಾ. ಸದಾಶಿವ ಹಲಸ
೨೪. ವ್ಯವಸ್ಥಾಪನೆಯ ತಂತ್ರಗಳು - ಪ್ರೊ. ಮಹಾಂತಗೋಳ ಸುಭಾ
೨೫. Business Law II - Dr. S.O.Halasa
೨೬. Management Techniques - Dr. S.O.Halasa
೨೭. Management Accounting - Dr. B.B.Kalatip
೨೮. Contemporary Auditing - Dr. S.O.Halasa
೨೯. Income Tax V & VI Combined - Dr. Pandit C. Bilama
೩೦. Contemporary Auditing - Dr. Kallinath S. Pa
೩೧. Fundamentals of Accounting - Dr. S.S. Hanchin
೩೨. Organisation Behaviour - Dr. Siddappa O. Halasa
೩೩. Fundamentals of Computer - Suresh Palarima
೩೪. Corporate Accounting - Dr. C.S. Salima
೩೫. Human Resource Management - Dr. Sadashiva Halasa
೩೬. Entrepreneurship Development - Dr. Siddappa Halasa
೩೭. Advertising & Media Management - Dr. S. B. Hagan
೩೮. Modern Government - Dr. J. S. Pa
೩೯. ಶಿಕ್ಷಣದಲ್ಲಿ ಕ್ರಿಯಾ ಸಂಶೋಧನೆ - ವೀಣಾ ಎಸ್. ಜಾಲ
೪೦. Content cum Methodology of Teaching English
೪೧. ಮುನ್ನಡೆದ ಶೈಕ್ಷಣಿಕ ಮನೋವಿಜ್ಞಾನ - ಪ್ರೊ. ಶಂಕರಲಿಂಗ ಜಿ. ಹೆಂಬಾ
೪೨. ಶಿಕ್ಷಣದಲ್ಲಿ ಸಂಶೋಧನೆ ಹಾಗೂ ಸಂಖ್ಯಾಶಾಸ್ತ್ರ
- ಶ್ರೀ ಶಾಂತಕುಮಾರ ಎಸ್. ಬಿರಾದಾ
೪೩. ಶಿಕ್ಷಣದಲ್ಲಿ ತತ್ವಶಾಸ್ತ್ರ ಮತ್ತು ಸಾಮಾಜಿಕ ಆಧಾರಗಳು - ವಿಜಯಕುಮಾರ ಗೋ
೪೪. ವಾಣಿಜ್ಯ ಕಾನೂನು - ಡಾ. ಸದಾಶಿವ ಹಲ

ನ ಯಾವ ಜ್ಞಾನಗಳ ಅರಿವೂ ಇಲ್ಲದಾಗಲೆ. ಒಂದು ಕೆಲಸವನ್ನು ಮಾಡಿದ್ದಾದ ಲೆ, ಅಥವಾ ಅದು ಆಗಿಬಿಟ್ಟ ನಂತರ, ಅದನ್ನು 'ಸತ್ಯ' ಎಂದು ಒಪ್ಪಿಕೊಳ್ಳಲೇ ಕು ತಾನೆ? ತರ್ಕಕ್ಕೂ ಮೂಲವಾದ ಸತ್ಯದ ತತ್ವ ಇದು. ''ಬರಿದೆ ಮಾತು ವೇನು? ಮಾಡದೆಯೆ, ಆಗದೆಯೆ ಹೋದುದೆಂಥ ಸತ್ಯವು?'' ಎಂದು ಕೇಳಲೇ ಕು ('ಜೀವೋಪನಿಷತ್', ೨೦೦೯). ಪ್ರಕೃತಿಯ ಪ್ರತ್ಯಕ್ಷಗಳಲ್ಲಿನ ವಿಶ್ವಾಸಗಳ ಗಿನ ವಿಕಸನಮಟ್ಟಕ್ಕೆ ವಿಶ್ವಾಸವಷ್ಟೇ ಪ್ರಮಾಣ.) ಜೊತೆಜೊತೆಗೆ ತನ್ನದೇ ಯೋಗಗಳ ವಿಶ್ವಾಸ(ಪ್ರಮಾಣ)ಗಳನ್ನೂ ಪ್ರಾಣಿಗಳಿಗಿಂತ ಬಹು ಹೆಚ್ಚಾಗಿ ಸಿಕೊಂಡದ್ದು ಮಾನವನ ವಿಕಾಸದ ಮೊದಲುಮೊದಲ ಹೆಜ್ಜೆ. ಇಂತಹ ಯೋಗಶೀಲ ತಂತ್ರಜ್ಞಾನದ ಸಂಪಾದನೆಯ ಜಾಡಿನಲ್ಲೆ ಮೂಡಿಬಂದದ್ದು ಇಂದಿನ ಾನ. ತರ್ಕಬದ್ಧ ಗಣಿತ ಮತ್ತು ಹಳೆಯ ವಿಜ್ಞಾನಗಳು ಹೊಸ ಯೋಗಗಳಲ್ಲೊ ಹೊಸ ವೀಕ್ಷಣೆಗಳಲ್ಲೊ ಲವಾದಾಗ. ಹೊಸ ಗಣಿತ, ಹೊಸ ವಿಜ್ಞಾನಗಳು, ರ್ಣಗೊಂಡು ಬಂದದ್ದು, – ಇನ್ನೂ ತ್ತಿರುವುದು, ಈ ವಿಧಾನದಲ್ಲೇ! ಮೂರು ಕೋಟಿ (ಬಿಲಿಯನ್) ವರ್ಷಗಳಿಂದ ವಿಗೆ ಬಾರದೆಯೂ ಬೆಳೆದುಬಂದ ತ್ರಜ್ಞಾನ- ವಿಜ್ಞಾನದ ಅತಿವಿಸ್ಮಯಗಳನ್ನು ಗಿಟ್ಟು, ಇತ್ತೀಚಿನ ವಿಜ್ಞಾನವಷ್ಟಕ್ಕೆ ಸೀಮಿತ ಳ್ಳೋಣ. ('ಹೊಸತು' ಪತ್ರಿಕೆ, ಜನವರಿ, ೯ರ 'ಜಗತ್ತೇ ಒಂದು ಪ್ರಯೋಗಶಾಲೆ; ಎಲ್ಲ ವಿಜ್ಞಾನಿಗಳೆ' ಎಂಬ ಲೇಖನದಲ್ಲಿ, ದಿನ ಅತಿವಿಸ್ಮಯಗಳ ಸ್ಥೂಲ ಪರಿಚಯವಿದೆ.) ತಹ ಅತಿ ದೊಡ್ಡ ಕಾಲಪ್ರಮಾಣದ ಅಂತರ ೇನೂ ಅಸಮಂಜಸವಲ್ಲ. ಏಕೆಂದರೆ, ಈಗ ಯುತ್ತಿರುವ ವಿಜ್ಞಾನ, ಮುಂದಿನ ಹೊಸ ಹೊಸ ಗಳಿಗೆ ಉತ್ತರ ಕೊಡುವುದರ ಜೊತೆಗೆ ಬಹಳ ದಿನಿಂದ ಬಗೆಹರಿಯದಿದ್ದ ಅತಿಪುರಾತನ ಪ್ರಶ್ನೆಗಳತ್ತಲೂ ಕು ಹರಿಸುವ ಅಚ್ಚರಿಯ ಸಾಮರ್ಥ್ಯವನ್ನೂ ಅನೇಕ ಿ ಪ್ರದರ್ಶಿಸಿದೆ!

**ದಿನವರೆಗಿನ ವಿಧಾನಗಳು**

ಇಂದಿನ ವಿಜ್ಞಾನಪ್ರೇರಿತ ತಂತ್ರಜ್ಞಾನ, ವಿಜ್ಞಾನದ ವಿಧಿವಿಧಾನಕ್ರಮ ಥಡಾಲಜಿ)ಗಳ ಸಾಮರ್ಥ್ಯವನ್ನೂ ಹೆಚ್ಚಿಸುವ ಶಕ್ತಿಯನ್ನು ಪಡೆದಿರುವುದೇ ದಿನ ವಿಜ್ಞಾನದ ಅತಿ ಪ್ರಗತಿಶೀಲತೆಗೆ ಮುಖ್ಯ ಕಾರಣ. (ಸೈಬರ್‌ನೆಟಿಕ್ಸ್ ಂತಗಳ ಪ್ರಕಾರ, 'ಪಾಸಿಟಿವ್ ಫೀಡ್‌ಬ್ಯಾಕ್' ('ವೃದ್ಧಿಕ್ರಿಯೆಯಿಂದ ವೃದ್ಧಿಕಾರಕನಿಗೂ ುವೃದ್ಧಿ') ಇರುವ ಯಾವುದೇ ವ್ಯವಸ್ಥೆ (ಸಿಸ್ಟಂ), ಹೀಗೆ ಬೆಳೆಯಲೇ ಬೇಕು). ಗೆ, ಒಂದನ್ನೊಂದು ಸ್ಪರ್ಧೆಯಲ್ಲಿ ಅಟ್ಟಿಸಿಕೊಂಡು ಹೋಗುತ್ತಿರುವಾಗ, ಎರಡರ ಗಗಳೂ ಸ್ಫೋಟಗೊಳ್ಳುವುದು ಸಹಜವೆ! ಈಗ ಆಗುತ್ತಿರುವುದು ಹಾಗೆ ತಾನೆ? ಗೆಯೆ, ವಿಜ್ಞಾನದ ಅನೇಕ ಮಹಿಮೆಗಳು ವಿಜ್ಞಾನದ ಪ್ರಗತಿಶೀಲತೆಯನ್ನು ಬೆಳೆಸುತ್ತಿವೆ. ಗಳಲ್ಲಿ ವಿಜ್ಞಾನದ ಕೆಲವು ಮುಖ್ಯ ಲಕ್ಷಣಗಳನ್ನು ಈಗ ಪರಿಶೀಲಿಸೋಣ.

೧. ವಿಳಂಬರಹಿತ ಸಾಮೂಹಿಕ ವಿನಿಮಯ

೨. ಮುಂದಿನ ಪೀಳಿಗೆಗಳಿಗೆ ಸಾಮಾಜಿಕ ಚಿರಾಸ್ತಿಯಾಗಿ ಸಂಸ್ಕೃತಿಯ ರೂಪದ ಲೆಯಾಗಿ ಉಳಿಯುವ ಗುಣ

೩. ಏನನ್ನೂ ಸುಲಭವಾಗಿ ಒಪ್ಪದೆ, ಎಲ್ಲವನ್ನೂ ಪ್ರಶ್ನಿಸುತ್ತಿರುವ ಸಾಹಸ: ವನ್ನು ಪ್ರಮಾಣಿಸುವ ತೀಕ್ಷ್ಣತೆ

೪. ಅತಿಸೂಕ್ಷ್ಮದಿಂದ ಅತಿಸ್ಥೂಲವನ್ನೊಳಗೊಳ್ಳುವ ಮಹಾನ್ ಕುತೂಹಲದ ವಿಸ್ತಾರ

೫. ಬಹುಮುಖೀ ವೈವಿಧ್ಯಮಯತೆ

**ಮೂಹಿಕವಾಗಿ ವಿತರಿಸುವ, ಬಳಸುವ, ಮತ್ತು ದಾಖಲಿಸುವ ವರ್ತನೆ**

ಇಂದಿನ ವಿಜ್ಞಾನದ ಎಲ್ಲ ಕಾರ್ಯಕಲಾಪಗಳು ವಿಳಂಬರಹಿತವಾಗಿ, ರ್ತ್ರಿಕವಾಗಿ, ಎಲ್ಲ ಅಂತರ್ದೇಶೀಯ ವೈಷಮ್ಯಗಳ ಸೀಮೆಗಳನ್ನೂ ದಾಟಿ ಗತಿಕವಾಗಿ, ವಿನಿಮಯಗೊಳ್ಳುವ ಪರಿಪಾಠ ಬೆಳೆಸಿಕೊಂಡಿವೆ; ಹಾಗೂ ಈ ವಿಶಾಲ ವಿನಿಮಯದ ವ್ಯಾಪ್ತಿಗೆ ತಕ್ಕ ಸಂವಹನ ಮಾಧ್ಯಮಗಳನ್ನು ಬೆಳೆಸಿಕೊಳ್ಳುತ್ತ ಬಂದಿವೆ. ಈ ಸಾಮೂಹಿಕ ವಿನಿಮಯವೆಂಬ ಸದ್ವರ್ತನೆ, ಎಲ್ಲ ಪುರಾತನ ಸಂಸ್ಕೃತಿಗಳಲ್ಲೂ ಇತ್ತು. ಭಾಷೆ, ಲಿಪಿ, ಮತ್ತು ಇತರ ಮಾಧ್ಯಮ ವೃದ್ಧಿಯ ಸಾಧನೆಗಳು, ಮತ್ತು ದಾಖಲೆಯಾಗಿ ಇಡುವ ಅನೇಕ ತಂತ್ರಗಳು, ಆಗಿನಿಂದಲೂ ಕಾಲಕ್ರಮದಲ್ಲಿ ಉತ್ತಮಗೊಳ್ಳುತ್ತಲೇ ಇವೆ. ಬಹು ಹಿಂದಿನ ಕಾಲದಲ್ಲೂ, ಪ್ರತಿ ನಾಗರಿಕತೆಯಲ್ಲಿಯೂ ಸ್ವತಂತ್ರವಾಗಿ ಉದಯಿಸುತ್ತಲಿದ್ದ ವಿಜ್ಞಾನದ ಮೂಲ ಕರಡು ರೂಪವೆ ಸರಳ ಜ್ಞಾನ; ಅದರ ಮೊದಲ ಮುಖ್ಯ ಲಕ್ಷಣ ಇಷ್ಟೆ: ಸಣ್ಣಪುಟ್ಟ ವ್ಯಕ್ತಿಗತ ಕಲ್ಪನೆ/ಯೋಚನೆ/ಉಕ್ತಿ/ಸೂತ್ರ/ಐಡಿಯಾಗಳಿಂದ ಕೊಂಚ ಮುಂದುವರಿದು ಸಾಮೂಹಿಕ ಕೋಶವಾಗಿ, (ತಂಡದ ಕುಲನೀತಿಯಾಗಿ) ಕ್ರಮಬದ್ಧ ವಿಂಗಡಣೆಯಲ್ಲಿ ವ್ಯವಸ್ಥಿತವಾಗಿ ಮುಂದಿನ ಪೀಳಿಗೆಗಳಿಗೆ ಜ್ಞಾನವೃದ್ಧಿಯ ಸಲಕರಣೆಯಾಗಿ ಚಿರಕಾಲ ಉಳಿಯತೊಡಗಿದವು.



ಇಂತಹ ಸರಳ ತಂತ್ರಗಳೆ ವಿಜ್ಞಾನದ ಸಂಶ್ಲೇಷಣೆಯನ್ನು ಸಾಧ್ಯಗೊಳಿಸಿದವು. ಈ ಅರ್ಥದಲ್ಲಿ, ಭಾರತದ ಋಗ್ವೇದ ಒಂದು ಬಹುಪುರಾತನ ಉತ್ತಮ ಉದಾಹರಣೆಯಾಗುತ್ತದೆ. ('ಜ್ಞಾನ' ಅನ್ನುವುದಕ್ಕೆ ಕುಲನೀತಿಯಾಗಿ ಸಿಕ್ಕ ಮಾನ್ಯತೆ ಅತಿಯಾದಾಗಲೆ ಪವಿತ್ರತೆಯ ಸೋಂಕು ಅಂಟಿಕೊಂಡದ್ದು!) ಆದರೆ ವೇದಕ್ಕೆ ಲಿಪಿ ಇರದಿದ್ದರಿಂದ, ಅದು ದಾಖಲೆಗೊಳ್ಳದೆಯೆ, ಸಾಮಾಜಿಕ ಕಾರಣಗಳಿಂದಲೂ ಅತಿಸೀಮಿತಗೊಂಡು ಸಾಮೂಹಿಕ ಸಂವಹನಕ್ಕೆ ಸಲಕರಣೆಯಾಗದೆಯೆ, ಆದ್ದರಿಂದ ವಿಸ್ತಾರಗೊಳ್ಳದೆಯೆ, ಒಟ್ಟಿನಲ್ಲಿ ವಿಕಸನ ಸಂಸ್ಕಾರದಿಂದ ವಂಚಿತವಾಗಿ, ಕಡೆಗೆ ವಿಜ್ಞಾನವಾಗದೆಯೆ ಕುಂಠಿತವಾಗಿ ಹೋಯಿತು. ಸುಮಾರು ಅದೇ ಕಾಲದ ಈಜಿಪ್ಟ್, ಬೇಬಿಲಾನ್, ಸುಮೇರಿಯನ್ ಸಂಸ್ಕೃತಿಯ ಅನೇಕ ಬರಹಗಳು, ಇಂದಿಗೂ ದಾಖಲೆಯ ರೂಪದಲ್ಲಿ ಉಪಲಬ್ಧವಿವೆ; ಅವರ ಚಿಂತನೆ (ಐಡಿಯಾ)ಗಳೂ ಋಗ್ವೇದ ಕಾಲದವುಗಳಿಗೆ ಹೊಂದುವ ಮಟ್ಟದಲ್ಲಿದ್ದವೆಂದು ತಿಳಿದು ಬರುತ್ತಿದೆ. ವೇದಕಾಲದವರಂತೆಯೆ ಆ ಜನರೂ ತಮ್ಮ ನಾಗರಿಕ ಸೌಕರ್ಯ, ಸುಖಸಂತೋಷಗಳ ಜೊತೆಜೊತೆಗೆ, ದೈವಿಕ ಉಪಾಸನೆಗಳಿಗೂ, ಜ್ಯೋತಿಷ್ಯಶಾಸ್ತ್ರ, ಗಣಿತ, ತರ್ಕ, ಭಾಷಾಭಿವೃದ್ಧಿ, ಹಲವು ಕುಶಲ ತಂತ್ರಗಳು, ಇತ್ಯಾದಿಗಳನ್ನು ಬೆಳೆಸಿಕೊಂಡರು. ಮುಂದೆ ಪುಸ್ತಕರೂಪದಲ್ಲಿ ಜ್ಞಾನಸಂಗ್ರಹ ಮಾಡುವ ಅಭ್ಯಾಸ ಬೆಳೆಸಿಕೊಂಡ ಆ ಸಂಸ್ಕೃತಿಗಳು ಪುರಾತನ ಭಾರತ ಸಂಸ್ಕೃತಿಗೂ ಕೊಟ್ಟು-ತರುವ ಮಧ್ಯವರ್ತಿಗಳಾಗಿದ್ದು, ಜ್ಞಾನದ ಲಾಭ ಪಡೆಯುತ್ತಿದ್ದವು. ಕ್ರಿಸ್ತಪೂರ್ವ ೨೦೦ರಲ್ಲಿ ಅಲೆಕ್ಸಾಂಡ್ರಿಯ ನಗರದಲ್ಲಿ, ಒಂದು ಬಹು ದೊಡ್ಡ ಗ್ರಂಥಾಲಯ ಇದ್ದುದಕ್ಕೆ ದಾಖಲೆ ಇದೆ. ಈ ವಿಧಾನ ಹೀಗೆಯೆ ಮುಂದುವರಿದು, ಕ್ರಿಸ್ತಶಕ ೧೦೦೦ದ ಸರ್ವಜನಾಕರ್ಷಣೆಯ ಜ್ಞಾನಸಂಕಲನರೂಪದಲ್ಲಿ ವಿಶ್ವಕೋಶ ಮಾದರಿಗಳು ಸಾಮಾನ್ಯವಾಗತೊಡಗಿದವು. ಈಗ, ಈ ಪರಂಪರೆಯಲ್ಲಿ ಜ್ಞಾನ ವಿನಿಮಯದ ಮತ್ತು ಅತಿಶೀಘ್ರ ವಿತರಣೆಯ ಪರಾಕಾಷ್ಠವಾಗಿ, ಸಾವಿರಾರು ಪುಸ್ತಕಭಂಡಾರಗಳನ್ನೂ ಮೀರಿಸಬಲ್ಲ 'ಇಂಟರ್‌ನೆಟ್' ವ್ಯವಸ್ಥೆಯ ಮಟ್ಟವನ್ನು ತಲಪಿದ್ದೇವೆ.

**ಸ್ಕೆಪ್ಟಿಸಿಸಂ: ಸತ್ಯವನ್ನು ಪ್ರಮಾಣಿಸುವ ತೀಕ್ಷ್ಣತೆಯ ವೃದ್ಧೀಕರಣ**

ವಿಶ್ವಾಸಾರ್ಹವೆನಿಸದ, ಏನನ್ನೂ ಒಪ್ಪದಿರುವ ವರ್ತನೆ ಬಹು ಹಿಂದಿನದು. ಆಗಲೆ ಹೇಳಿದಂತೆ, ಪ್ರಕೃತಿಯ ವೀಕ್ಷಣೆ, ತಾಂತ್ರಿಕ ಪ್ರಯೋಗ ಮುಂತಾದ ವಿಶ್ವಾಸಾರ್ಹಗೊಳಿಸುವ/ಪ್ರಮಾಣಿಸುವ ಸಾಧನೆಗಳ ತೀಕ್ಷ್ಣತೆ ಕ್ರಮಕ್ರಮವಾಗಿ ಹಂತಹಂತವಾಗಿ ಮೇಲಕ್ಕೇರುತ್ತ ಬಂದಿದೆ. ಇದು ನಿರೋಧಕ ಪ್ರವೃತ್ತಿಯಾದರೂ, ವಿಜ್ಞಾನಪ್ರಗತಿಯನ್ನು ಕಡಿಮೆ ಮಾಡುವ ಬದಲು ಅದನ್ನು ಹೆಚ್ಚಿಸುತ್ತಿರುವುದು ಸೂಕ್ಷ್ಮವಾಗಿ ಗಮನಿಸಬೇಕಾದ ವಿಷಯ. ಕಾರಣ ಇಷ್ಟೆ; ಕಂಡ ಅಲ್ಪವನ್ನು ಅತಿಶಯಿಸಿ ಹೇಳುವ

ದುರಭ್ಯಾಸಗಳು ಅನೇಕ ಬಾರಿ ಪೆಟ್ಟು ತಿಂದ ಮೇಲೆ ಇಲ್ಲವಾಗಿ, ಹಿಂದಿನ ಸಿದ್ಧಾಂತಗಳಲ್ಲಿ ವಿಶ್ವಾಸ ಹೆಚ್ಚು ದೃಢವಾಗಿ ಹೊಸ ಶೋಧನೆಗಳಿಗೆ ದಾರಿ ಸುಗಮವಾಗುತ್ತದೆ. (ಹಿಂದಿನ ಜ್ಞಾನರಾಶಿಗಿಂತ ಹೆಚ್ಚಾಗಿ, ಅದರ ಉತ್ಪನ್ನದ ವಿಧಾನ ಮುಂದಿನ ಪ್ರಗತಿಗೆ ಕಾರಣ ಎನ್ನುವ ವಾದ ಇಲ್ಲಿ ಮತ್ತೆ ಪುಷ್ಟಿಗೊಳ್ಳುತ್ತದೆ.) ಪ್ರಮೇಯಗಳ ವಿಸ್ತಾರ ಹೆಚ್ಚುತ್ತಿದ್ದಂತೆ, ಹಿಂದೆಂದೂ ಕಂಡು ಕೇಳಿಲ್ಲದ ಪ್ರಶ್ನೆಗಳು ಉದ್ಭವಿಸುತ್ತಿದ್ದವು; ಆದ್ದರಿಂದ ಪ್ರಮಾಣೀಕರಣದ ಯುಕ್ತಿ, ವಿಧಾನಗಳು ಬಹಳ ಪರಿವರ್ತನೆಗಳನ್ನು ಹುಡುಕಿ, ಪಳಗಿಸಿಕೊಂಡು ಬೆಳೆದವು. ಈ ಯುಕ್ತಿ-ವಿಧಾನಗಳನ್ನು ಸ್ವಲ್ಪ ವಿವರವಾಗಿಯೆ ಜ್ಞಾನದ ಚರಿತ್ರೆಯಲ್ಲಿ ಗುರುತಿಸೋಣ.

೧. ಕ್ರಿಸ್ತಪೂರ್ವ ೩೨೦ರಲ್ಲಿ ಅರಿಸ್ಟಾಟಲ್, ಜ್ಞಾನರಾಶಿಯನ್ನು ವಿಂಗಡಿಸಿ ಭೌತಶಾಸ್ತ್ರ, ತರ್ಕಶಾಸ್ತ್ರ, ಕಾವ್ಯ, ಪ್ರಾಣಿಶಾಸ್ತ್ರ, ರೆಟ್ಟೋರಿಕ್ಸ್ (ಅಲಂಕಾರಶಾಸ್ತ್ರ), ರಾಜ್ಯಶಾಸ್ತ್ರ ಇತ್ಯಾದಿ ಶಾಖೆಗಳನ್ನು ಗುರುತಿಸಿದ. ಇತರ ಗ್ರೀಕ್ ವಿದ್ವಾಂಸರಂತೆ, ಸ್ವಯಂಸಿದ್ಧವೆಂದು ಒಪ್ಪಿಕೊಂಡಿರುವ ಮೂಲಸತ್ಯಗಳಿಂದ ಪ್ರಾರಂಭಿಸಿ, ತರ್ಕಸರಣಿಯಲ್ಲಿ ಹೊಸ ಹೊಸ ಸಿದ್ಧಾಂತಗಳನ್ನು ಪ್ರಮಾಣಿಸಿ ಪಡೆಯುತ್ತ ಹೋಗುವ (ಅಂದರೆ ಯುಕ್ಲಿಡ್ ರೇಖಾಗಣಿತದಲ್ಲಿ ನಮಗೆಲ್ಲ ಪರಿಚಿತವಾದ) ವಿಧಾನವನ್ನೆ ಎತ್ತಿಹಿಡಿದರೂ, ಅನುಭವಸಿದ್ಧ ಪ್ರತ್ಯಕ್ಷ ಘಟನೆಗಳನ್ನೂ ಪ್ರಮಾಣವೆನ್ನುವ (ಎಂಪಿರಿಸಿಸಂ) ವಿಧಾನದತ್ತಲೂ ಒಲವು ತೋರಿದ.

೨. ಮುಂದೆ, ಸುಮಾರು ಕ್ರಿಸ್ತಶಕ ೧೦೦೦-೧೦೫೦ರಲ್ಲಿ, ಈಗಿನ ಇರಾಕ್, ಇರಾನ್, ಅರೆಬಿಯಾ ಪ್ರದೇಶಗಳ ಅರಬ್ ವಿಜ್ಞಾನಿಗಳು ತಮ್ಮತಮ್ಮ ವೈಜ್ಞಾನಿಕ ವಿಷಯಗಳ ಜೊತೆಗೆ, ವಿಜ್ಞಾನದ ವಿಧಾನಗಳನ್ನು ಉತ್ತಮಗೊಳಿಸುವ ರೀತಿಗಳನ್ನೂ ತೋರಿಸಿಕೊಟ್ಟು ಪ್ರಸಿದ್ಧರಾದರು. ಇರಾಕ್‌ನ ಅಲ್ ಹೈಥಾಂ (ಅಥವಾ ಅಲ್ಹಾಜೆನ್), ಪರ್ಷಿಯಾದ ಅಲ್ ಬೆರೂನಿ ಮತ್ತು ಅವಿಸೆನ್ನಾ ಇವರುಗಳು, ಇಂದಿರುವಂತಹ 'ಪ್ರಯೋಗಮೂಲ + ತರ್ಕಸರಣಿ'ಯ ವಿಧಾನಗಳನ್ನು ಬಳಸಿ, ಬೆಳೆಸಿ, ಪ್ರೋತ್ಸಾಹಿಸಿದರು. ಅವರ ಬರಹಗಳು ಇಂದಿನ ವಿಜ್ಞಾನದ ಬರಹಗಳನ್ನು ಸಾಕಷ್ಟು ಹೋಲುತ್ತವೆ. ಅಲ್ ಬೆರೂನಿ ಭಾರತಕ್ಕೆ ('ಹಿಂದ್' ದೇಶ) ಬಂದು ಹದಿನೇಳು ವರ್ಷಗಳ ಕಾಲ ಅಧ್ಯಯನ ಮಾಡಿ, ಇಲ್ಲಿಯ ರೇಖಾಗಣಿತ, ಜ್ಯೋ (ಖಗೋಳಶಾಸ್ತ್ರ), ಮತಧರ್ಮ, ವಿಜ್ಞಾನಗಳನ್ನು ಆಳವಾಗಿ ವಿಮರ್ಶೆ ಮಾಡಿದ್ದಾ ಹೊರಗಿನವರದೇನನ್ನೂ ಎಂದೂ ಪರಿಗಣಿಸದ ಹಿಂದ್ ದೇಶೀಯರ ಗರ್ವ, ಮ ಮೂರ್ಖತನಗಳನ್ನು ಹಂಗಿಸಿದ್ದಾನೆ; ತಮ್ಮದೇ ಮತದ 'ಕೆಳಜಾತಿ'ಯವರೊಡನೆ ಸಹ ಜ್ಞಾನವನ್ನು ಹಂಚಿಕೊಳ್ಳದಿರುವ ಮಾತನ್ನೂ ಹೇಳಿದ್ದಾನೆ. ಅವಿಸೆನ್ನಾ ವೈದ್ಯಕೀ ಜ್ಞಾನದ ವಿಷಯದಲ್ಲಿ ಬರೆಯುತ್ತ, "ಎರಡು ವಸ್ತು/ವಿಷಯಗಳು, ಮೂರನೆಯದೊ ರೊಡನೆಯ ಕಾರ್ಯ-ಕಾರಣ ಸಂಬಂಧದಿಂದಾಗಿ, ಪರಸ್ಪರ ಸಂಬದ್ಧವಿದ್ದ ತೋರಿಬಂದರೂ, ಆ ತೋರಿಕೆ ತಪ್ಪು ಪುರಾವೆ ಆಗಬಹುದು", (-ಬಹಳ ಓದಿ ವೃದ್ಧ ವಿದ್ವಾಂಸ, ಹೆಚ್ಚು ಓದಿನಿಂದ ಜ್ಞಾಪಕಶಕ್ತಿ ಕಡಿಮೆಯಾಯಿತೆಂದುಕೊಂಡ ಹಾಗೆ ಎನ್ನುವಂತಹ ಸೂಕ್ಷ್ಮಗಳನ್ನು ಸಹ ಗಮನಿಸುವ ಸಲಹೆ ನೀಡಿದ.

೩. ಮುಂದೆ, ೧೨೦೦ರ ಕಾಲಕ್ಕೆ, ಅರಬ್ ವಿಜ್ಞಾನಿಗಳ ಬರಹಗಳ ಲ್ಯಾಟಿ ಅನುವಾದಗಳ ಮೂಲಕವಾಗಿ, ವಿಜ್ಞಾನ ವಿಧಾನಗಳನ್ನು ಉತ್ತಮಗೊಳಿಸುವ ಕಾಯ ಕೇಂದ್ರ, ಇಂಗ್ಲೆಂಡ್, ಯೂರೋಪ್‌ಗಳನ್ನು ತಲಪಿತು. ೧೨೨೦ರಲ್ಲಿ, ಇಂಗ್ಲೆಂಡ್‌ನ ಬಿಷಪ್ ಆಗಿರಲು ಲ್ಯಾಟಿನ್ ಕಲಿತಿದ್ದ ರಾಬರ್ಟ್ ಗ್ರಾಸ್‌ಟೆಸ್ಟ್, ವೈಜ್ಞಾ ಪ್ರಯೋಗಗಳನ್ನು ನಡೆಸುವುದರಲ್ಲಿ ಪ್ರತಿಯೊಂದು ಹಂತದ ವಿವರವನ್ನು ಅಧ್ಯಯ ಮಾಡಿದ. ೧೨೬೫ರಲ್ಲಿ, ರೋಜರ್ ಬೇಕನ್, ಇದನ್ನು ಮುಂದುವರಿಸಿ ಹೀ ವಿವರಿಸಿದ: ಪ್ರಯೋಗದಲ್ಲಿ ಸಾಧಿಸಲಿರುವ ಕ್ಲುಪ್ತ ಉದ್ದೇಶ ಮತ್ತು ಕ್ಲು ಸಿದ್ಧಾಂತಗಳನ್ನು ಪರಿಭಾಷಿಸುವುದು; ತಕ್ಕ ಪ್ರಯೋಗ ನಡೆಸಿ, ಪಡೆದ ಫಲಿತಾಂಶ ಮಾಹಿತಿಗಳಿಗೆ ತಾಳೆಹಾಕುವುದು; ಮತ್ತೆ ಉದ್ದೇಶ ಮತ್ತು ಸಿದ್ಧಾಂತಗಳ ಬದಲಾಯಿಸಿಕೊಳ್ಳುವುದು; ಈ ಕಾರ್ಯಚಕ್ರದಲ್ಲಿ ಮತ್ತು ಮತ್ತೆ ಸುತ್ತಿ, ಉತ್ತ ಗೊಳಿಸುತ್ತಿರುವುದು. ಹೀಗೆ ಸಿದ್ಧಾಂತ ಮತ್ತು ಫಲಿತಾಂಶಗಳನ್ನು ಋಜುವಾತುಗೊಳಿಸು ಅವಶ್ಯಕತೆಯನ್ನು ತೋರಿಸಿಕೊಟ್ಟ.

೪. ವಿಲಿಯಂ ಓಕ್‌ಹ್ಯಾಂ, ೧೩೨೭ರಲ್ಲಿ, ತತ್ವದರ್ಶನದ ಮತ್ತು ವಿಜ್ಞಾನ ಕ್ಷೇತ್ರಗಳಲ್ಲಿ ತನ್ನ ಹೆಸರಿನಿಂದಲೇ ಪ್ರಸಿದ್ಧ 'ಓಕ್‌ಹ್ಯಾಂ (ಅಥವಾ ಒಕ್ಕಾಂ) ಕತ್ತ

ರಯೋಗ'ದಿಂದ ಸತ್ಯಾನ್ವೇಷಣೆಯಲ್ಲಿ ಸುಲಭ ಸಾರ್ಥಕತೆ ಒದಗುವುದೆಂಬುದನ್ನು ೇರಿಸಿಕೊಟ್ಟ. ಅವನ ಪ್ರಕಾರ, 'ಯಾವುದೇ ಸತ್ಯಪ್ರತಿಪಾದನೆಯಲ್ಲಿ, ಯಾವುದೇ ಅಸಂಬದ್ಧ ವಾ ಅನವಶ್ಯಕ ವಿಷಯ/ವಸ್ತು ಇರಬಾರದು; ಸಂಬಂಧ ಸಾಬೀತಾಗದ ಯಾವುದೇ ರಗಿನ ವಿಷಯ, ವಸ್ತುಗಳನ್ನು ತರಬಾರದು; ಆಗಲೆ ಸೇರಿಹೋಗಿದೆಯೆಂದು ಕಂಡುಬಂದಲ್ಲಿ ಸಿ ತೆಗೆದುಹಾಕಬೇಕು.' ಇವನು ಒಬ್ಬ ಫ್ರಾನ್ಸಿಸ್ಕನ್ ಭಿಕ್ಷು; 'ಏಸುಕ್ರಿಸ್ತನಂತೆ ದಾರಿದ್ರ್ಯದ ಜೀವನ ನಡೆಸುವುದು ಕ್ರೈಸ್ತಗುರುಗಳಿಗೆಲ್ಲ ಒಂದು ಅವಶ್ಯಕ ನಿಯಮ' ಎಂದು ಹೇಳಿ ಪೋಪರುಗಳ ಕೋಪಕ್ಕೆ ತುತ್ತಾಗಿ ಹಿಂಸೆ ಅನುಭವಿಸಿದವನು. ಅವನ ಈ ತೆಯ ನಿಲುವನ್ನು ಮೆಚ್ಚಿಕೊಂಡು, ಅವನ ಈ ತತ್ವವನ್ನು, ಆ ಕಾಲದಿಂದ ಇಂದಿನವರೆಗೂ ೇಕ ತತ್ವದಾರ್ಶನಿಕರು, ಮತೀಯರು, ವಿಚಾರವಾದಿಗಳು, ಗಣಿತಜ್ಞರು, ತಾರ್ಕಿಕರು, ಎಲ್ಲ ೆಗಳ ವಿಜ್ಞಾನಿಗಳು, ಬಹು ವಿಧಗಳಲ್ಲಿ ಉಪಯೋಗಿಸಿಕೊಂಡಿದ್ದಾರೆ; ಕಡೆಗೆ ಜನಪ್ರಿಯ ೇದಾರಿ ಕಾದಂಬರಿಕಾರರು ಸಹ ತಮ್ಮ ತಮ್ಮ ಚರ್ಚೆಗಳಲ್ಲಿ ಆಳವಾಗಿ ಬಳಸಿದ್ದಾರೆ. ಅವನ ರ ಮನ್ನಿಸಿ ಸಂತೋಷಪಟ್ಟವರಲ್ಲಿ ಬರ್ಟ್ರಂಡ್ ರಸಲ್, ಐನ್‌ಸ್ಟೈನ್ ಸಹ ಇದ್ದಾರೆ. ರವಾಗಿ ಆದರೆ ಅತಿ ಸುಲಭವಾಗಿ ಮಾಹಿತಿರಾಶಿ ಲಭ್ಯವಿರುವ ಈ ಕಾಲದಲ್ಲಿ, ಎಲ್ಲ ಿಕರೂ ಒಕ್ಕಾಂ ಕತ್ತರಿಯ ಉಪಯೋಗವನ್ನು ಕಲಿತುಕೊಳ್ಳುವ ಅವಶ್ಯಕತೆ ಇನ್ನೂ ಹೆಚ್ಚುತ್ತಿದೆ.

ೀ. ಹಾಲೆಂಡಿನಲ್ಲಿ ಹಲವು ದಶಕಗಳಿಂದ ಬಳಕೆಯಲ್ಲಿದ್ದ ಕನ್ನಡಕಗಳ ತಂತ್ರಜ್ಞಾನದಿಂದ ದ ಸ್ಫೂರ್ತಿಯ ಫಲವಾಗಿ, ೧೬೦೦ರಿಂದ ಈಚೆಗೆ ರಚಿಸಲ್ಪಟ್ಟ ಲೀಹಾವ್‌ನ ಸೂಕ್ಷ್ಮದರ್ಶಕ ತ್ತು ಗೆಲಿಲಿಯೋನ ದೂರದರ್ಶಕ ಯಂತ್ರಗಳು, ಬಹು ಮುಖ್ಯವಾಗಿ ವಿಜ್ಞಾನದ ವಾರು ಪ್ರಕ್ರಿಯೆಗಳನ್ನು ಘಟ್ಟ ಘಟ್ಟಗಳಲ್ಲಿ ವೀಕ್ಷಿಸಿಯೇ ಕಲಿಯುವ ಹೊಸದೊಂದು ತ್ರಿಕ ವಿಧಾನವನ್ನೆ ಒದಗಿಸಿದವು; ಹಾಗೆಯೆ, ಹಿಂದೆಂದೂ ಕಂಡುಕೇಳಿ ಅರಿಯದಿದ್ದ ಹೊಸ ಸ ವಿಜ್ಞಾನ ಶಾಖೆಗಳಿಗೆ ನೆರವು ಮಾಡಿಕೊಟ್ಟವು. ೧೬೦೦ರಲ್ಲಿಯೆ, ಹಿಂದೆಲ್ಲ ಮನೆಯ ಲಿನಲ್ಲಿಯೊ, ಅಡುಗೆಮನೆಗಳಲ್ಲಿಯೊ ನಡೆಯುತ್ತಿದ್ದ ವಿಜ್ಞಾನ ಪ್ರಯೋಗಗಳು, ತಮಗಾಗಿ ಸಲಾದ ಪ್ರಯೋಗಶಾಲೆಗಳನ್ನು ಪಡೆಯುವಷ್ಟು ಮಾನ್ಯವಾದವು. ಹಾಗೆಯೆ, ಲಿಯೋನ, 'ಪೀಸಾ ಟವರ್‌ನ ತುದಿಯಿಂದ ಹಗುರದ, ತೂಕದ ಕಲ್ಲುಗಳನ್ನು ಕೆಳಕ್ಕೆ ಹಾಕಿ ಡುವ', ಚಿಂತನಾಪ್ರಯೋಗ ಹೊಸದೊಂದು ವಿಧಾನವನ್ನೇ ಪ್ರಾರಂಭಿಸಿತು. ಮುಂದೆ, ಸ್ಟೈನ್‌ನ ಬೆಳಕಿನ ವೇಗ, ಮತ್ತು ಅದರ ಬಾಗುವಿಕೆಯ ಪ್ರಯೋಗಗಳು ಇಂತಹ ನಾಪ್ರಯೋಗಗಳೇ. (ಗೆಲಿಲಿಯೊ ತಾನಾಗಿ ಅವನ ಹೆಸರಿನಲ್ಲಿ ಪ್ರಸಿದ್ಧವಾದ ಈ ೋಗವನ್ನು ನಡೆಸಲೇ ಇಲ್ಲ; ಅರಿಸ್ಟಾಟಲ್‌ನ ಪ್ರಕಾರ ಭಾರದ ವಸ್ತು ಭೂಮಿಗೆ ಬೇಗ ವುದೆಂದು ಹಟಮಾಡಿದವರಿಗೆ, ಈ ಒಂದು ಸರಳ ಪ್ರಯೋಗದಿಂದ ಸತ್ಯಪರೀಕ್ಷೆ ಡಬಹುದೆಂದು ಹೇಳಿದ, ಅಷ್ಟೇ; ಕೋಪಗೊಂಡ ಆ ಸನಾತನಿಗಳು, ಅವನನ್ನು ಹಾಗೆ ಡುವುದರಿಂದ ತಡೆದಿದ್ದರು.)

೧೬೨೦ರಲ್ಲಿ ಫ್ರಾನ್ಸಿಸ್ ಬೇಕನ್, ಪ್ರಯೋಗಗಳಲ್ಲಿ ಬೇಡದ ಪ್ರಭಾವಗಳನ್ನು ಂತ್ರಿಸುವುದರತ್ತ ಗಮನ ಸೆಳೆದ. ೧೬೩೭ರಲ್ಲಿ, ಫ್ರಾನ್ಸ್‌ನ ಬಹು ಪ್ರಸಿದ್ಧ ಗಣಿತಜ್ಞ ಮತ್ತು ನಿಕ ರೆನೆ ಡಿಕಾರ್ಟ್, ಮೊದಲ ಬಾರಿಗೆ ವೈಚಾರಿಕತೆ (ರ‍್ಯಾಶನಲಿಸಂ)ಯ ಪರಿಭಾಷೆ , ಎಲ್ಲ ವೈಜ್ಞಾನಿಕ ವಿಷಯಗಳಲ್ಲು ವೈಚಾರಿಕತೆಯ ನಿಯಮಗಳನ್ನು ಪಾಲಿಸುವ ್ಯಕತೆಯನ್ನು ಸಮರ್ಥಿಸಿದ. 'ವಿಜ್ಞಾನದ ಎಲ್ಲ ವಿಷಯಗಳೂ, ಆಗಬಲ್ಲವುಗಳು ೆಬಲ್ಲವುಗಳು, ತಿಳಿಯಬಲ್ಲವುಗಳು', ಎಂದು ಹೇಳುತ್ತ ಪ್ರಕೃತಿಯಲ್ಲಿ ಎಲ್ಲವೂ ಕಾರ್ಯ-ಸಂಬದ್ಧಗಳು, ಹಾಗೆಂದು ಅರ್ಥೈಸಬಲ್ಲವು ('ಡಿಟರ್‌ಮಿನಿಸ್ಟಿಕ್')ಗಳು ಎಂದು ಾದಿಸಿದ. ೧೬೫೦ರಲ್ಲಿ ಮೊದಲ ಬಾರಿಗೆ, ಪ್ರಯೋಗದ ಫಲಿತಾಂಶಗಳನ್ನು ವಿಮರ್ಶಿಸಿ ಅಥವಾ ತಪ್ಪು ನಿರ್ಧರಿಸುವ ಒಂದು ಪರಿಣತರ ಸಂಘವಾಗಿ ರಾಯಲ್ ಸೊಸೈಟಿ ಕೊಂಡಿತು. ೧೬೬೫ರಲ್ಲಿ ರಾಬರ್ಟ್ ಬಾಯಲ್ ಹಲವಾರು ಮರುಪ್ರಯೋಗಗಳನ್ನು ಿಯೆ ಒಂದು ಸಿದ್ಧಾಂತವನ್ನು ನಿರ್ಣಯಿಸುವ ಅವಶ್ಯಕತೆಯನ್ನು ತೋರಿಸಿದ. ಅದೇ ಯದಲ್ಲಿ, ವಿಜ್ಞಾನಕ್ಕೆ ಮೀಸಲಾದ ನಿಶ್ಚಿತ ಕಾಲಾವಧಿಯ ಶೋಧನಾಪತ್ರಿಕೆ (ರಿಸರ್ಚ್ ಲ್)ಗಳು ಪ್ರಾರಂಭವಾದವು. ಕ್ರಮೇಣ, ಎಲ್ಲ ವಿಜ್ಞಾನ ಪತ್ರಿಕೆಗಳು, ಆಯ್ದ ಪರಿಣತರ ರ್ಣಯ ಅಂಗೀಕಾರ ದೊರಕಿದ ಮೇಲಷ್ಟೇ ಪ್ರಕಟಿಸುವ ನಿಯಮವನ್ನು ಹೇರಿದವು.

೮ ಮತ್ತು ೧೯ನೆಯ ಶತಮಾನಗಳಲ್ಲಿ ಡಾರ್ವಿನ್ ಇತ್ಯಾದಿ ವಿಜ್ಞಾನಿಗಳು ಮತೀಯ ನಂಬಿಕೆಗಳಿಗೆ ಒಡ್ಡಿದ ಸವಾಲಿನ ಪ್ರಭಾವಗಳಿಂದಾಗಿ, ಸ್ವಾವಲಂಬನೆಯ ತ್ವವನ್ನರಿತ ಜನತೆ, ಸಮಾಜ ಮತ್ತು ಸರ್ಕಾರಗಳು, ವಿಜ್ಞಾನವನ್ನು ಬಳಸಿ ಜನರ ಸೌಖ್ಯ, ರ್ಯಗಳನ್ನು ಕಟ್ಟಿ ಬೆಳೆಸುವುದರತ್ತ ಪ್ರಯತ್ನಶೀಲವಾದವು. ವಿಜ್ಞಾನದ ಪ್ರತಿಷ್ಠೆ ಮತ್ತೂ ಯಿತು. ಯೂರೋಪ್ ದೇಶಗಳ ವಿಜ್ಞಾನಿಗಳ ಗುಂಪುಗಳಲ್ಲಿ ಒಂದು ಆರೋಗ್ಯಕರ ೋಟಿ ತೀಕ್ಷ್ಣವಾಯಿತು. ಹಳೆಪಳೆಯ ವೈದ್ಯ, ಬಡಗಿ, ಕಮ್ಮಾರ, ಶಿಲ್ಪಿಗಳು,




ಲಘುವೆ ನಗು ? ನಗಬಲ್ಲುವೇ ಪ್ರಾಣಿ ಪಶು ಪಕ್ಷಿ ?
ಮಾತಾಡಬಲ್ಲುವೇ ? ಮಾತಿನೊಲು ನಗು ಕೂಡ
ಹುಟ್ಟಿತ್ತು ವಿಕಾಸಪಥದೊಂದು ಪರಿಣತ ಘಟ್ಟ -
ದಲಿ; ಮುಂದೆ ಪರಮಾರ್ಥ. ಮಾತು ಜ್ಯೋತಿರ್ಲಿಂಗ ;
ಅದರೊಂದು ಅಂಗ ನಗು ! ಇರಬಹುದು ನಗುವಿನೊಳು
ನಲಿವಿನೊಲು ನೋವು, ಕಂಬನಿ; ಅಂತೆ ಕಣ್ಣೀರಿ -
ನಲ್ಲಿ ಇರಬಹುದು ನಗುಮಿನುಗು ! ಸರಳವೆ ಬದುಕು ?
ವಕ್ರ ಚಕ್ರವ್ಯೂಹ ! ಭೂಮಿ ಆಗಸಗಳಿಗೆ
ಕಮಾನು ಕಾಮನಬಿಲ್ಲು ಹಾಸ ! ಜಗ ಹೊಮ್ಮಿದ್ದು
ನವನೀತವಾಗಿ ನಗೆಯಿಂದ ! ನಗದವರು ಮೃಗ -
ವಾದಾರು ! ಮತ್ತೆ , ಬಾಯ್ದೆರೆಯದೆಯೆ ಒಳಗೊಳಗೆ
ನಗುವ ಬಗೆಯುಂಟು ! ಸಾವನು ಗೆಲುವ ಕಲೆಯೆ ನಗೆ ?

ಸಿ.ಪಿ.ಕೆ.
ಮೈಸೂರು



ಂತ್ರಜ್ಞಾನದಿಂದ ವಿಜ್ಞಾನದ ಮಟ್ಟಕ್ಕೇರಿ, ಸ್ವಪ್ರತಿಷ್ಠೆಯ ಡಾಕ್ಟರ್, ಇಂಜಿನಿಯರು ಶಾದರು. ೧೮ ಮತ್ತು ೧೯ನೆಯ ಶತಮಾನಗಳ (ಜಾನ್ ಲಾಕ್, ಡೇವಿಡ್ ಹ್ಯೂಮ್, ಮ್ಯಾನುಯಲ್ ಕ್ಯಾಂಟ್, ಸ್ಟೂವರ್ಟ್ ಮಿಲ್ ಮುಂತಾದವರಿಂದ ಪ್ರಾರಂಭಿಸಿ, ರ್ಲ್ ಮಾರ್ಕ್ಸ್, ಬರ್ಟ್ರಂಡ್ ರಸೆಲ್‌ವರೆಗೂ) ಅನೇಕ ಸೆಕ್ಯುಲಾರ್ ಡೆಮೊಕ್ರಾಟಿಕ್ ರುತಧರ್ಮಾತೀತ ಲೌಕಿಕವಾದಿ ಮತ್ತು ಪ್ರಜಾಪ್ರಭುತ್ವವಾದಿ) ಒಲವಿನ ದ್ಧಿಜೀವಿಗಳು, ಸಮಾಜದಲ್ಲಿ ಮುಕ್ತ ಚಿಂತನೆಯನ್ನು ಬೆಳಸುವುದರಲ್ಲಿ ವಿಜ್ಞಾನದ ತ್ರವನ್ನು ಕಂಡುಕೊಂಡರು; ತಮ್ಮತಮ್ಮ ಇತಿಮಿತಿಗಳಲ್ಲಿ ಡಿಕಾರ್ಟ್ ಮತ್ತಿತರರ ಚಾರಿಕ ವಾಸ್ತವವಾದವನ್ನು ಸಮರ್ಥಿಸುತ್ತ, ವಿಜ್ಞಾನದಲ್ಲಿ ಊಹಾಪೋಹಗಳನ್ನು ೂರವಿಡುವ ಮತ್ತು ಸ್ಪಷ್ಟ ನಿರ್ದಿಷ್ಟ ಸಿದ್ಧಾಂತಗಳಿಗೆ ಸೀಮಿತಗೊಳ್ಳುವ ನಿಷ್ಠೆಯನ್ನು ಪಾಡಲು ಪ್ರೋತ್ಸಾಹಿಸಿದರು. ಇಂತಹ ವಿಜ್ಞಾನದ ಸಂಸ್ಕೃತಿಯು, ಇಂಗ್ಲೆಂಡ್‌ನ ಹಿತ್ಯ, ರಾಜಕೀಯ, ಸಂಸ್ಕೃತಿಗಳೊಡನೆ, ಆ ಸಾಮ್ರಾಜ್ಯದ ಉನ್ನತಿಯ ಭಾವಕ್ಕೊಳಗಾಗಿದ್ದ ಅನೇಕ ಜಾಗತಿಕ ಪ್ರದೇಶಗಳಲ್ಲಿಯೂ ಪಸರಿಸಿತು.

**ಜ್ಞಾನದ ವಿಸ್ತಾರ ಮತ್ತು ವೈವಿಧ್ಯಮಯತೆ**

ಹತ್ತೊಂಬತ್ತನೆಯ ಶತಮಾನದಲ್ಲಿ ವಿಜ್ಞಾನದ ವ್ಯಾಪ್ತಿಯು ಭೌತಶಾಸ್ತ್ರ ಮತ್ತು ಾಯನಶಾಸ್ತ್ರಗಳನ್ನು ದಾಟಿ ಬಹು ಹೊಸ ದಾರಿಗಳಲ್ಲಿ ವಿಸ್ತರಿಸಿತು. ಹಿಂದಿನ ತ್ರಜ್ಞಾನದ ಪ್ರಗತಿಯಿಂದ ಪ್ರತಿಷ್ಠೆ ಗಳಿಸಿದ 'ಎಂಜನಿಯರಿಂಗ್', ತನ್ನದೇ ತ್ರಸಂಬದ್ಧ ವಿಜ್ಞಾನವನ್ನು, ಇತರ ವಿಜ್ಞಾನಗಳ ಸಹಾಯದಿಂದ ಬೆಳೆಸಿ ಮಹತ್ಸಾಧನೆ ಳನ್ನು ಮಾಡಿ, ಮುಂಬರುವ ಎಲ್ಲ ತರಹೆಯ ವಿಜ್ಞಾನಗಳಿಗೆ ಸನ್ನೆಕೋಲಾಗಿ ಸಹಾಯ ಾಡಲು ಸಿದ್ಧವಾಯಿತು. ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ವೈದ್ಯಶಾಸ್ತ್ರ ಮುಂತಾದವು ುಲ್ಲಿಯೆ ಹಿಂದಿನಿಂದ ಶೇಖರವಾಗುತ್ತಿದ್ದ ಅಪಾರ ಮಾಹಿತಿರಾಶಿಗಳಿಗೆ ಹೊಸ ಧಾನಗಳನ್ನು ಅನ್ವಯಿಸಿ, ತಮ್ಮದೇ 'ಜೀವವಿಜ್ಞಾನ' ಎನ್ನುವ ಎರಡು ಶತಮಾನ ಗೂ ವಿಸ್ತರಿಸಬಲ್ಲ ಹೊಸ ವಿಜ್ಞಾನವನ್ನು ಕಟ್ಟಿಕೊಂಡವು. ಆ ವಿಜ್ಞಾನವೂ, ಹಳೆಯ ಾನವಶಾಸ್ತ್ರಗಳನ್ನೆಲ್ಲ ವಿಜ್ಞಾನದ ವ್ಯಾಪ್ತಿಗೊಳಪಡಿಸಿಟ್ಟು, ಹಿಂದೆ ಹೆಸರಿಲ್ಲದಿದ್ದ ಅನೇಕ ೂಸ ವಿಶಿಷ್ಟ ವಿಜ್ಞಾನಗಳಿಗೆ ಅನುವು ಮಾಡಿಕೊಟ್ಟಿತು. ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ನಶ್ಶಾಸ್ತ್ರ, ಭಾಷಾಶಾಸ್ತ್ರ, ಇತ್ಯಾದಿಗಳೆಲ್ಲ ವೈಜ್ಞಾನಿಕ ಪುನರ್ಜೀವ ಪಡೆದು ಳೆಯತೊಡಗಿದವು. ವಿಜ್ಞಾನವನ್ನು ಅಳವಡಿಸಿ ಬೆಳೆದ ಸಣ್ಣಪುಟ್ಟ ಅಧ್ಯಯನಗಳೂ ಜ್ಞಾನದ ಹೆಸರನ್ನು ಅಂಟಿಸಿಕೊಂಡು ಲಾಭ ಪಡೆದವು. ಲೈಬ್ರರಿ ಸೈನ್ಸ್ (ಪುಸ್ತಕಾಲಯ ಜ್ಞಾನ) ಎನ್ನುವ ಹೆಸರನ್ನಾದರೂ ಹಿಂದೆ ಯಾರು ಕೇಳಿದ್ದರು ?

ಹೀಗೆ ವಿಸ್ತಾರಗೊಂಡ ಹೊಸ ವಲಯಗಳಲ್ಲಿ, ಭೌತಶಾಸ್ತ್ರದಲ್ಲಿ ಸಾಮಾನ್ಯವಾಗಿದ್ದ ಿರತೆಯನ್ನು ಸಾಧಿಸುವುದು ಬಹು ಕಷ್ಟವಾದಾಗ, ಹಿಂದಿನ ತರ್ಕ ಮತ್ತು ಿತಗಳನ್ನು ಮಾರ್ಪಡಿಸಿಕೊಳ್ಳಬೇಕಾಯಿತು. ಭೌತಶಾಸ್ತ್ರದಲ್ಲೂ ಸಹ, ಲಭ್ಯವಿದ್ದ ಮಾಹಿತಿಯ ಕರಾರುಬದ್ಧತೆ, ಮತ್ತು ಹಿಂದಿನ ಪ್ರಯೋಗಗಳ ಫಲಿತಾಂಶಗಳ ನಿಖರತೆ ಸಾಲದೇ ಬಂದಾಗ, ಆ ದೋಷಗಳ ಪ್ರಭಾವ ಹೊಸ ಪ್ರಯೋಗದ ಫಲಿತಾಂಶದಲ್ಲಿ ಎಷ್ಟರಮಟ್ಟಿನದು ಎನ್ನುವುದನ್ನು ತಾಳೆ ಮಾಡಿ ದಾಖಲಿಸುವ ಅವಶ್ಯಕತೆಯ ಅರಿವಾಯಿತು. ಆ ಸಂದರ್ಭದಲ್ಲಿ ಅಳವಡಣೆಯಾದ ಹೊಸ ಗಣಿತ ಪದ್ಧತಿಗಳು, 'ಪ್ರಾಬಬಿಲಿಸ್ಟಿಕ್-ಸ್ಟಾಟಿಸ್ಟಿಕ್ಸ್' (ಸಂಭಾವ್ಯತಾ ಗಣನೆ/ಸಂಖ್ಯಾಕಲನಶಾಸ್ತ್ರ) ಎಂಬ ಹೊಸ ಹೆಸರಿನಲ್ಲಿ, ಎಲ್ಲ ವಿಜ್ಞಾನದ ವಿಧಾನಗಳ ಅವಶ್ಯಕ ಅಂಶಗಳಾದವು. ಯುಗಯುಗದ ಎಲ್ಲ ಮನುಷ್ಯರ ತೊಡಕಾಗಿದ್ದ ವ್ಯಕ್ತಿಗತ ಇಷ್ಟಗಳ ದೋಷ ಮತ್ತು ಪೂರ್ವಗ್ರಹಗಳ ನಿಯಂತ್ರಣಕ್ಕೂ, ಕಷ್ಟಸಾಧ್ಯ ಮಟ್ಟದವರೆಗೆ ಅವುಗಳ ನಿವಾರಣೆಗೂ, ಇದೇ ಯುಕ್ತಿ ಅನುವು ಮಾಡಿಕೊಟ್ಟಿತು. ಈಗಿನ ಪ್ರತಿಯೊಬ್ಬ ವಿಜ್ಞಾನಿಯು, ತನ್ನಲ್ಲಿ ಮತ್ತು ತನ್ನ ಸೀಮಿತ ಪರಿಸರದಲ್ಲಿ ಈ ದೋಷವಿರುವುದು ಸಹಜವೆಂದು ಒಪ್ಪಿಕೊಂಡು, ಪ್ರಯೋಗಗಳ ಕ್ರಮ ಮತ್ತು ವಿನ್ಯಾಸಗಳನ್ನು ನಿಶ್ಚಯಿಸುವಾಗಲೆ ದೋಷದ ಪ್ರಭಾವವನ್ನು ಆದಷ್ಟು ಕಡಿಮೆ ಮಾಡಲು ಪ್ರಯತ್ನಿಸುತ್ತಾನೆ; ಹಾಗೆಯೆ, ತನ್ನ ವರದಿಯಲ್ಲಿ ಇವುಗಳನ್ನೂ ಪ್ರಸ್ತಾಪಿಸಿ, ತನ್ನ ಸಿದ್ಧಾಂತಗಳ ಫಲಿತಾಂಶಗಳಲ್ಲಿ ಸಂಭಾವ್ಯ ದೋಷದ ಮಿತಿಯನ್ನು ಲೆಕ್ಕಹಾಕಿ ಹೇಳಿ, ವಿಮರ್ಶಕರಿಗೆ ಒಪ್ಪಿಸುತ್ತಾನೆ. ೧೮೯೦ರಲ್ಲಿ ಸಿ. ಎಸ್. ಪಿಯರ್ಸ್ ಮತ್ತು ೧೯೨೬ರಲ್ಲಿ ರೊನಾಲ್ಡ್ ಫಿಶರ್ ಈ ವಿಧಾನಗಳ ಮೊದಲುಮೊದಲ ಮುಖ್ಯ ಪ್ರತಿಪಾದಕರಾದರು. ಜೀವವಿಜ್ಞಾನದ ಎಲ್ಲ ಪ್ರಯೋಗಗಳಲ್ಲು ಈ ವಿಧಾನಗಳ ನಿಯಂತ್ರಣ ಅಧಿಕಾರ, ಅನಿವಾರ್ಯವಾಗಿಹೋಯಿತು. ವ್ಯಕ್ತಿಶಃ ಇಷ್ಟಾನಿಷ್ಟಗಳ ದೋಷ ಅತಿಯಾಗಿರಬಲ್ಲ ಮನಶ್ಶಾಸ್ತ್ರದಲ್ಲಿ ಸಹ ಈ ವಿಧಾನಗಳ ಬಳಕೆಯಿಂದ ವಿಶ್ವಾಸಾರ್ಹ ಪ್ರಯೋಗಗಳು ನಡೆಯಲಾರಂಭವಾದವು.

ಇಪ್ಪತ್ತನೆಯ ಶತಮಾನದಲ್ಲಿ ವಿಜ್ಞಾನದ ಪ್ರತಿಷ್ಠೆ ಹೆಚ್ಚಿದ್ದರಿಂದ ವಿಜ್ಞಾನಿಗಳ ಹಾಗೂ ಪ್ರಯೋಗಗಳ ಮೇಲಿನ ಒತ್ತಡಗಳು ಹೆಚ್ಚಾಗಿ, ಎಲ್ಲರಿಗೂ ಎಲ್ಲದರಲ್ಲಿಯೂ ಸಾಫಲ್ಯ ಸಿಕ್ಕುತ್ತಿಲ್ಲ. ನೂರಾರು ಪ್ರಯತ್ನಗಳ ನಂತರ ಉತ್ತಮ ವಿದ್ಯುದ್ದೀಪವನ್ನು ಕಂಡುಹಿಡಿದ ಎಡಿಸನ್, ''ಸಾವಿರದೊಂದು ಹಂತಗಳ ಈ ಪ್ರಯೋಗದಲ್ಲಿ, ಮೊದಲ ಸಾವಿರ ಯತ್ನಗಳು ನಿರರ್ಥಕವೇ ?'' ಎಂದು ಕೇಳಿದ. ಮುಂದೆ ಅಂತಹುದೇ ನಿಷ್ಫಲ ಪ್ರಯತ್ನಗಳನ್ನು ಮಿಕ್ಕವರು ಮಾಡದಿದ್ದರೆ, ವಿಜ್ಞಾನಕ್ಕೆ ಲಾಭವೇ ತಾನೇ ? ಇದಕ್ಕಾಗಿ, ಈಚೆಗೆ ಶೋಧನಾ ಪತ್ರಿಕೆಗಳಲ್ಲಿ ವಿಫಲ ಪ್ರಯತ್ನಗಳನ್ನೂ ವರದಿ ಮಾಡುವ ಪದ್ಧತಿಗೂ ಬೆಂಬಲ ಸಿಕ್ಕುತ್ತಿದೆ. ಉತ್ತಮ ಪ್ರಯೋಗಶಾಲೆಗಳಂತೂ, ಎಲ್ಲ ಸಫಲ ವಿಫಲ ಪ್ರಯೋಗಗಳ ದಾಖಲೆ ಇಡುವ ಪರಿಪಾಠ ಹಾಕಿಕೊಂಡಿವೆ; ಹಾಗೆಯೆ, ಸಫಲ ಪ್ರಯೋಗವನ್ನು, ಭಿನ್ನ ಭಿನ್ನ ಆದರೆ ವಿಷಮವಲ್ಲದ ಸನ್ನಿವೇಶಗಳಲ್ಲಿ, ಮತ್ತೆ ಮತ್ತೆ ನಡೆಸಿ ದೃಢಗೊಳಿಸುವ ಅಭ್ಯಾಸವನ್ನೂ ಪ್ರೇರಿಸುತ್ತವೆ.

**ಇತ್ತೀಚಿನ ಮತ್ತು ಮುಂದಿನ ವಿಜ್ಞಾನ ವಿಧಾನಗಳು**

೧೯೪೮ರಲ್ಲಿ, ಆಗಲೇ ಪ್ರಸಿದ್ಧನಾಗಿದ್ದ ಮೇಧಾವಿ ಗಣಿತಜ್ಞ ನಾರ್ಬರ್ಟ್ ವೀನರ್, '' 'ಪ್ರಾಣಿ ಅಥವಾ ಯಂತ್ರದ ಒಳವ್ಯವಸ್ಥೆಯ ಘಟಕವೊಂದರಲ್ಲಿ ನಡೆಯುವ ಮಾಹಿತಿ/ವಿಷಯಗಳ ಸಂವಹನ/ವಿನಿಮಯ ಮತ್ತು ನಿಯಂತ್ರಣ',



ಇವೆಲ್ಲದರ ಅಧ್ಯಯನ'' ಎನ್ನುವ ವಿವರಣೆಯ ಒಂದು ಹೊಸ ವೈಜ್ಞಾನಿಕ ವಿಧಾನಕ್ಕೆ ಅಡಿಪಾಯವನ್ನು ಹಾಕಿದ; 'ಸೈಬರ್‌ನೆಟಿಕ್ಸ್' ಎನ್ನುವ, ತಾನೆ ಟಂಕಿಸಿದ ಹೊಸ ಪದದ ಹೆಸರನ್ನಿಟ್ಟ. ಮಹಾಯುದ್ಧದಲ್ಲಿ ಬಳಕೆಯಾಗತೊಡಗಿದ್ದ ಸ್ವನಿಯಂತ್ರಿತ ಯಂತ್ರಗಳ ವ್ಯವಸ್ಥೆಯ ಪರಿಚಯವಿದ್ದರೂ ಅವನು ಎಂಜಿನಿಯರ್ ಆಗಿರಲಿಲ್ಲ; ಹಾಗೆಯೆ, ಪ್ರಾಣಿಶಾಸ್ತ್ರ ಪಂಡಿತನೂ ಅಲ್ಲ. ಅವನ ಅಧ್ಯಯನಕ್ಕೆ ಆ ವಿದ್ಯೆಗಳ ಪಾಂಡಿತ್ಯವೂ ಬೇಕಿರಲಿಲ್ಲ. ಪ್ರಾಣಿ ಅಥವಾ ಯಂತ್ರದಂತಹ ಕ್ರಿಯಾಶೀಲ, ಆದರೆ ಕೆಲವೇ ಅನುಕೂಲಗಳಿದ್ದಾಗಲೂ ಅನೇಕ (ಪರಿಸರ/ಸಮಾಜ ಇಂತಹವುಗಳನ್ನು ಎದುರಿಸಿ ಉಳಿಯುವ) ದುರ್ಗಮ ಕಾರ್ಯಗಳನ್ನು ನಿರ್ವಹಿಸಲು ಮತ್ತೆ ಮತ್ತೆ ಪ್ರಯತ್ನಿಸುವ, ಸ್ವನಿಯಂತ್ರಿತ ಆದರ್ಶ ವ್ಯವಸ್ಥೆಯೊಂದರಲ್ಲಿ ಬೇಕಾಗುವ/ನಡೆಯುವ ವರ್ತನೆಗಳ/ಚಟುವಟಿಕೆಗಳ ಒಂದು ಕಾರ್ಯಕ್ರಮ (ಪ್ರೋಗ್ರಾಂ). ಮತ್ತು ಆ ವ್ಯವಸ್ಥೆಯ ಮೇಲೆ ಆ ಕಾರ್ಯಕ್ರಮದಿಂದಾಗುವ (ವ್ಯವಸ್ಥೆಯ ಅಳಿವು, ಉಳಿವು, ಅಥವಾ ವೃದ್ಧಿ ಇಂತಹ) ಪರಿಣಾಮಗಳು, ಇವು ಆ ಅಧ್ಯಯನದ ಮುಖ್ಯ ಉದ್ದೇಶಗಳು. ಯಾವುದೇ ಘಟಕದ ಅನೇಕ ಅವಸ್ಥೆಗಳ ಕರಡು ರಾಶಿ, ಒಂದು ವ್ಯವಸ್ಥೆ ಆಗುವುದು ಅದರ ಜೀವಾಳವಾದ 'ಸ್ವನಿಯಂತ್ರಣ'ದಿಂದ; ಒಂದು ಅತಿಸರಳ ವ್ಯವಸ್ಥೆಯ ಸಂಸ್ಥೆಗೆ ಒಂದು ಸಾಮಾನ್ಯ ಉದಾಹರಣೆ, ಒಂದು 'ಟ್ರಾನ್ಸಿಸ್ಟರ್'; ಸ್ವನಿಯಂತ್ರಣಕ್ಕೆ 'ಫೀಡ್-ಬ್ಯಾಕ್' ಯುಕ್ತಿಯನ್ನು ಬಳಸುವ ಒಂದು ಹಳೆಯ ಕಾಲದ 'ಎಲೆಕ್ಟ್ರಾನಿಕ್ ಟ್ಯೂಬ್'ನಂತಹದು. (ಇದೇ ಕೆಲಸವನ್ನು ಮಾಡುವ ಇಂದಿನ ಟ್ರಾನ್ಸಿಸ್ಟರ್‌ಗಳು, ಸೆಮಿಕಂಡಕ್ಟರ್‌ಗಳಿಂದ ಆಗುವುದರಿಂದ ಅತಿಸೂಕ್ಷ್ಮವಾಗಿದ್ದು ಅಂಗೈ ಅಗಲದ 'ಚಿಪ್'ನಲ್ಲಿ ಲಕ್ಷಗಟ್ಟಲೆ ಅಡಕಗೊಳ್ಳುತ್ತವೆ.) ತಾನು ಪಡೆವ ಪ್ರಚೋದನೆಗೆ ತನ್ನದೇ ಪ್ರತಿಕ್ರಿಯೆ ಕೊಡುವ ಯಾವುದೇ ಸಂಸ್ಥೆ, ತಕ್ಷಣವೆ ಆ ಪ್ರತಿಕ್ರಿಯೆಯ ಭಾಗಾಂಶವನ್ನು ಸ್ವೀಕರಿಸಿ, ಮುಂದುವರಿದ ಪ್ರಚೋದನೆಯೊಡನೆ ಬೆರೆಸಿ, ಮುಂದೆ ಆ ಸಂಕಲನಕ್ಕೆ ಪ್ರತಿಕ್ರಿಯೆ ಕೊಡುತ್ತ ಹೋಗುವ ಗುಣ ಹೊಂದಿದ್ದರೆ, ಅದು ಒಂದು ವ್ಯವಸ್ಥಿತ ಸಂಸ್ಥೆಯಾಗುತ್ತದೆ. (ವಿಳಂಬಿತ ಬಡ್ಡಿ, ಸಾಲದೊಡನೆ 'ಫೀಡ್‌ಬ್ಯಾಕ್' ಕೂಡಿಕೊಳ್ಳುವ ಚಕ್ರಬಡ್ಡಿಯ ವ್ಯವಹಾರದ ವ್ಯವಸ್ಥೆಯೂ ಒಂದು ಕಠೋರ ಉದಾಹರಣೆ.) ಅನೇಕ ಸೈಬರ್ನೆಟಿಕ್



ವ್ಯವಸ್ಥೆಗಳಲ್ಲಿ ಹೀಗೆ 'ಫೀಡ್‌ಬ್ಯಾಕ್' ಆಗಿರುವ ಅಂಶ ಮತ್ತು ಅದರ ವಿನ್ಯಾಸಗಳನ್ನು ಸುಲಭದಲ್ಲಿ ಗುರುತಿಸಿಕೊಳ್ಳಬಹುದು.

ಅಂದಿನ ಅನೇಕ ಕಾರ್ಯೋನ್ಮುಖ ಬುದ್ಧಿಜೀವಿಗಳು, ತಮ್ಮ ತಮ್ಮದೇ ಆಸಕ್ತಿಯ ಕ್ಷೇತ್ರಗಳಲ್ಲೂ ಇಂತಹ ವ್ಯವಸ್ಥೆ ಮಾದರಿಯ ಅಧ್ಯಯನದ ಅವಶ್ಯಕತೆಯನ್ನು ಕಂಡುಕೊಂಡು, ಸೈಬರ್‌ನೆಟಿಕ್ಸ್‌ಅನ್ನು ಒಂದು ಜನರಲ್ ಸಿಸ್ಟಂ ಥಿಯರಿಯಾಗಿ (ಸರ್ವಾನ್ವಯಸಿದ್ಧ ವ್ಯವಸ್ಥಾ ಶಾಸ್ತ್ರವಾಗಿ) ಬೆಳೆಸುವುದಕ್ಕೆ ವೀನರ್‌ನೊಡನೆ ಸೇರಿಕೊಂಡರು. ಅವರಲ್ಲಿ ಜಾನ್ ವಾನ್ ನಾಯ್‌ಮನ್ ಇಂದಿನ ಕಂಪ್ಯೂಟರ್ ವ್ಯವಸ್ಥೆಗಳ (ಕಂಪ್ಯೂಟರ್ ಸಿಸ್ಟಂ ಥಿಯರಿಯ) ಮೂಲಾಧಾರಗಳನ್ನು ಸೃಜಿಸಿಕೊಟ್ಟು ಪ್ರಸಿದ್ಧನಾದ. ಕಂಪ್ಯೂಟರ್ ವ್ಯವಸ್ಥೆ ಅನೇಕ ದಿಶೆಗಳಲ್ಲಿ ಬಹುಮುಖಿಯಾಗಿ ಬೆಳೆಯುತ್ತಿದ್ದರೂ, ಅವನು ಹಾಕಿಟ್ಟ ಮೂಲನೀತಿಗಳಲ್ಲಿ ಎಂತಹ ದೊಡ್ಡ ಬದಲಾವಣೆಗಳೂ ಇಂದಿನವರೆಗೆ ಬೇಕಾಗಲಿಲ್ಲ. ಕ್ಲಾಡ್ ಶಾನನ್ ಗಣಿತ ಮತ್ತು ಇಲೆಕ್ಟ್ರಾನಿಕ್ಸ್ ಪರಿಣತನಾಗಿದ್ದವನು ವೀನರ್‌ನೊಡನೆ ಕೂಡಿಕೊಂಡು ಮಹತ್ಸಾಧನೆ ಮಾಡಿದ. ಇವನೇ ಇಂದಿನ ಇನ್‌ಫರ್ಮೇಶನ್ ಸಿಸ್ಟಂ ಥಿಯರಿ (ಮಾಹಿತಿಜ್ಞಾನ ವ್ಯವಸ್ಥಾ ಶಾಸ್ತ್ರ)ಯ ಜನ್ಮದಾತ ಎಂದು ಪ್ರಸಿದ್ಧನಾಗಿದ್ದಾನೆ. ಬುಡಕಟ್ಟು ಜನಾಂಗಗಳ ಸಮಾಜಗಳ ವ್ಯವಸ್ಥೆಯ ಅಧ್ಯಯನಗಳನ್ನು ನಡೆಸುತ್ತಿದ್ದ ಆಂಥ್ರೋಪಾಲಜಿಸ್ಟ್ (ಮಾನವಮೂಲ ಶೋಧಕ) ಮಾರ್ಗರೆಟ್ ಮೀಡ್, ಈ ಗುಂಪಿಗೆ ಸೇರಿದ ಮೇಲೆ ಮೊದಲುಮೊದಲ ಪ್ರಸಿದ್ಧ 'ಸಾಮಾಜಿಕ ಜ್ಞಾನಿ'ಯಾದಳು. ಮೆದುಳಿನ ತಜ್ಞ, ವಾರೆನ್ ಮೆಕೆಲ್ಲೊಕ್ ನರಗಳಲ್ಲಿ ನಡೆಯುವ ವಿಷಯ ಸಂವಹನ ವ್ಯವಸ್ಥೆಯ ಮಾದರಿಯನ್ನು ಅನುಸರಿಸಿ, 'ಕೃತಕ ನರ ಜಾಲ (ಆರ್ಟಿಫಿಯಲ್ ನ್ಯೂರಲ್ ನೆಟ್ವರ್ಕ್) ವ್ಯವಸ್ಥೆಯನ್ನು ಸೃಜಿಸಿ ಪ್ರಸಿದ್ಧನಾದ. ಮನಶ್ಶಾಸ್ತ್ರಜ್ಞ ಗ್ರೆಗರಿ ಬೇಟ್ಸನ್, 'ನ್ಯೂರೊ-ಲಿಂಗ್ವಿಸ್ಟಿಕ್-ಪ್ರೋಗ್ರಾಮಿಂಗ್' ಎಂದು ಮುಂದೆ ಪ್ರಸಿದ್ಧವಾದ ವಿಜ್ಞಾನದ ಅಂಗವಾಗಿ ಆದಿಮಾನವ ನಲ್ಲಾದ ಭಾಷೆಯ ವಿಕಸನದ ಹಂತಹಂತಗಳ ಅಧ್ಯಯನ ನಡೆಸಿದ. ಈಗ ಬೃಹತ್ತಾಗಿ ಬೆಳೆದು ನಿಲ್ಲುತ್ತಿರುವ ಕಂಪ್ಯೂಟರ್ ವಿಜ್ಞಾನ, ಆರ್ಟಿಫಿಷಿಯಲ್ ಇಂಟೆಲಿಜೆನ್ಸ್, ಕಂಪ್ಯೂಟರ್ ಮಾಡೆಲ್ಲಿಂಗ್ ಅಂಡ್ ಸಿಮುಲೇಶನ್, ರೋಬೊಟಿಕ್ಸ್, ಇವೆಲ್ಲವೂ ಈ ಗುಂಪಿನವರ ಅಧ್ಯಯನಗಳಿಂದಲೆ ಪ್ರಚೋದನೆಗೊಂಡವು. ಮಾನವಕುಲದ ಜೀನೋಮ್, ಎಂದೂ ಯಾರೂ ಭವಿಷ್ಯ ನುಡಿಯದಿದ್ದಷ್ಟು ಶೀಘ್ರವಾಗಿ ಸಂತೋಷಜನಕವಾಗಿ, ಸಂಪನ್ನಗೊಂಡದ್ದು ಇಂತಹವೇ ವಿಜ್ಞಾನ ವಿಧಾನಗಳ ಫಲವಾಗಿಯೆ. ಇವುಗಳೆಲ್ಲದರ ಒಂದು ಮುಖ್ಯ ಯುಕ್ತಿ ಇಷ್ಟೆ: ಯಾವುದೇ ಅತಿಕ್ಲಿಷ್ಟ ಸಾವಿರಾರು ತುಣುಕುಗಳ ಪಜ಼ಲ್‌ನಲ್ಲಿ (ಚಿಂದಿಚಿಂದಿಯಾದ ಚಿತ್ರಭಿತ್ತಿಯಲ್ಲಿ) ಒಂದು ವಿನ್ಯಾಸಾಕೃತಿ (ಪ್ಯಾಟರ್ನ್)ಯನ್ನು ಆರೋಪಿಸಿ, ಸಾಧ್ಯತೆ ಕಂಡುಕೊಂಡಾಗ ಕಗ್ಗಂಟಾಗಿ ಉಳಿದಿದ್ದ ನೂರಾರು ತುಣುಕುಗಳು ಗುರಿಮುಟ್ಟಿಬಿಡುತ್ತವೆ; ಹೀಗೆಯೆ ಒಂದು ಸುವ್ಯವಸ್ಥೆಯ ವಿನ್ಯಾಸ ಅರ್ಥವಾದಾಗ, ಅದರೊಳಗಣ ಅನೇಕ ವಿಚಿತ್ರ ಗುಣಗಳು, ವರ್ತನೆಗಳು, ತಾವಾಗಿ ಅರ್ಥಪಡೆಯುತ್ತವೆ. ಹಿಂದೆ, ವಿಜ್ಞಾನ ಸಮಸ್ಯೆಗಳಲ್ಲಿ ಗಣಿತ, (ಅದರಲ್ಲೂ ಕ್ಯಾಲ್‌ಕ್ಯುಲಸ್ ಶಾಖೆ), ಇಂತಹ ಅನೇಕ

ವಾದಗಳನ್ನು ನಡೆಸಿತು. ಹಳೆಯ ಗಣಿತದ ಹಿಡಿತಕ್ಕೆ ಸಿಕ್ಕದಿರುವ ಅನೇಕ ವಿವಿಧ ಹಾಗೂ ಣನಾತೀತ ಸುಳಿವುಗಳನ್ನು ಸರಳವಾಗಿ ವಿಶ್ಲೇಷಿಸಬಲ್ಲ ಕಂಪ್ಯೂಟರ್, ಇಂತಹ ನವಶೋಧನ ಯುಕ್ತಿಗಳನ್ನು ಸಾರ್ಥಕಗೊಳಿಸಿದೆ.

ಇಂತಹುದೆ ಇನ್ನೊಂದು ಯುಕ್ತಿ, ವಿಜ್ಞಾನ ಸಮಸ್ಯೆಯನ್ನು ಒಂದು ಆಟದ ಮಾದರಿಯಲ್ಲಿ ರೂಪಿಸಿ, ಆಟದ ಫಲಿತಾಂಶಗಳ ಮೂಲಕ ಸಮಸ್ಯೆಯ ಪರಿಣಾಮಗಳನ್ನು ಕಂಡು ಳ್ಳುವುದು. ನಾಲ್ಕಾರು ಹೆಚ್ಚುಕಡಿಮೆ ಶಕ್ತಿಬಣಗಳ, ಸ್ನೇಹವಿರೋಧಗಳ ಆಟದಂತಹ ಮುಮುಖೀ ಸಮಸ್ಯೆಗಳು ಸಮಾಜವಿಜ್ಞಾನಗಳಲ್ಲಂತು ಹೇರಳವಾಗಿವೆ. ಈ 'ಗೇಮ್ ಥಿಯರಿ ಟಗಳ ಶಾಸ್ತ್ರ)'ಯ ವಿಧಾನಗಳ ಬಳಕೆಯನ್ನು ವಾನ್ ನಾಯ್ಮನ್ ಮತ್ತು ರ್ಗೆನ್‌ಸ್ಟರ್ನ್, ೧೯೪೪ರಲ್ಲಿಯೇ ಪ್ರಕಟಿಸಿದರೂ, ಅದರ ಉಪಯೋಗ ಈಚೀಚೆಗೆ ಚ್ಚುತ್ತಿದೆ. ಜೀವಿಯ ಸೃಷ್ಟಿ/ಸ್ಥಿತಿ/ಲಯಗಳು, ಬದುಕಿಗಾಗಿ ಮತ್ತು ಸಂತತಿವೃದ್ಧಿಗಾಗಿ ಡೆಯುವ ಸೆಣಸಾಟಗಳಲ್ಲಿನ ಸೋಲು/ಗೆಲುವುಗಳು ಇವೆಲ್ಲವೂ, ಸೈಬರ್‌ನೆಟಿಕ್ಸ್ ವ್ಯವಸ್ಥೆಯ ತ್ತು ಆಟಗಳ ಮಾದರಿಗಳಿಗೆ ಚೆನ್ನಾಗಿ ಅಳವಡುತ್ತವೆ. ಮೇನಾರ್ಡ್ ಸ್ಮಿತ್ ೧೯೭೦ರಲ್ಲಿ ವವಿಜ್ಞಾನದಲ್ಲಿ ಇವನ್ನು ಬಳಸಲು ಪ್ರಾರಂಭಿಸಿ, ಪ್ರಸಿದ್ಧನಾದ. ಹಲವಾರು ವಿವಿಧ ಭಾವಗಳನ್ನು, ಅನೇಕ ವಿವಿಧ ವರ್ತನೆಗಳನ್ನು, ಮತ್ತು ನೂರಾರು ಅಂಕಿಅಂಶಗಳನ್ನು ಳಗೊಂಡಿರುವ ಪ್ರಾದೇಶಿಕ/ಜಾಗತಿಕ ಅರ್ಥವ್ಯವಸ್ಥೆಗಳ ಸಮಸ್ಯೆಗಳೂ ಇಂತಹ ಮಾದರಿಯವೇ. ಹೀಗಾಗಿ, ಹಿಂದೆ ಯಾರೂ ಪ್ರಯತ್ನ ಸಹ ಮಾಡದೆ ಬಿಟ್ಟಿದ್ದ ಅತಿವಿಶಾಲ ಕ್ಲಿಷ್ಟ ಅರ್ಥವಿಜ್ಞಾನ ಸಮಸ್ಯೆಗಳ ಮೇಲೆ ಹಲವಾರು ವಿಜ್ಞಾನಿಗಳು ದಾಳಿ ನಡೆಸಿದರು. ಚೀಚೆಗೆ ಅರ್ಥಶಾಸ್ತ್ರದಲ್ಲಿ ನೊಬೆಲ್ ಪ್ರಶಸ್ತಿ ಪಡೆದ ಹಲವರು ಈ ಗೇಮ್ ಥಿಯರಿಯನ್ನು ಳಸಿಯೇ ಶೋಧೆಗಳನ್ನು ನಡೆಸಿದವರು.

೧೯೫೦ರಲ್ಲಿ ಪ್ರಾರಂಭವಾಯಿತೆನ್ನಬಹುದಾದ ಶತಮಾನದ ಕೇಂದ್ರ, ಜೀವವಿಜ್ಞಾನವೆ! ವಿಜ್ಞಾನ ಈಗ ಬಲಿತು, ಮತ್ತೂ ಹೊಸ ಹೊಸ ಉಪಯೋಗಗಳಿಗೆ ಸಿದ್ಧವಾಗಿದೆ. ಕಳೆದ ಲ್ಕು ಶತಕೋಟಿ ವರ್ಷಗಳಲ್ಲಿ ಜೀವಿಗಳು ಬಳಸುತ್ತಿರುವ ಸಾವಿರಾರು ತಂತ್ರಗಳು, ಈಗ ಧುನಿಕ ಭೌತಶಾಸ್ತ್ರದ ಮೂಲಕ ನಮಗೆ ಜ್ಞಾನಾರ್ಥವಾಗಲಷ್ಟೆಯೆ ಅಲ್ಲದೆ, ುಕರಣೆ (ಬಯೊಮಿಮಿಕ್ರಿ/ಅಣುಕುಕ್ರಿಯೆ)ಗಳಿಗೂ ಸಿಕ್ಕಿವೆ. ಇವುಗಳಲ್ಲಿ, ನ್ಯಾನೊ ಲಜಿ, ನ್ಯಾನೊ ವಸ್ತುಗಳು ಅತಿವಿಸ್ಮಯಕಾರಿಗಳಷ್ಟೆಯೆ ಅಲ್ಲ, ಅತ್ಯಂತ ಉಪಯೋಗದವೂ ದು. ಸಣ್ಣಪುಟ್ಟ, ಮೃದುದೇಹಿ ಪ್ರಾಣಿಗಳು ಹಲ್ಲು, ಉಗುರುಗಳಿಗಾಗಿ ಕಠಿಣ ುವಿಶೇಷಗಳನ್ನು ತಯಾರು ಮಾಡಿಕೊಂಡಿದ್ದಾದರೂ ಹೇಗೆ? 'ಬದುಕಿರಲೆಂದು ವರಂತಹವರು ಯಾರೋ ಕೊಟ್ಟದ್ದಿರಬೇಕು' ಎನ್ನುವ ಡಾರ್ವಿನ್ ವಿರೋಧಿ ಮೂರ್ಖ ಶ್ನೆಗಳನ್ನು ಎತ್ತೊಗೆದಾಗ ಅರಿವಾಗುತ್ತದೆ; ಆ ಶಕ್ತಿದರಿದ್ರ ಮತ್ತು ವಸ್ತುದರಿದ್ರ ಜೀವಿಗಳು, ಯ್ಯವಿರುವ ಸಾಮಾನ್ಯ ವಸ್ತುಗಳ ಮಾಲಿಕ್ಯೂಲ್‌ಗಳ ಬಿಡಿಭಾಗಗಳನ್ನು, ನ್ಯಾನೊ ಯಲ್ಲಿ, ಆ ವಸ್ತುಗಳ ಸ್ವಾಭಾವಿಕ ಆಕಾರಗಳಿಗೆ ಕೊಂಚ ಭಿನ್ನವಾಗಿಯೇ ಅವನ್ನು ೋಡಿಸಿಕೊಂಡಿರಬೇಕೆಂದು. ಇಂತಹ ಯುಕ್ತಿ, ತಂತ್ರಗಳಿಂದ ಪಾಠ ಕಲಿತು, ಹಾಗೆಯೆ ೋಡಿಸುವ ಯಂತ್ರಗಳನ್ನು ಕಟ್ಟಿಕೊಂಡಿರುವ ಪ್ರಯೋಗಶಾಲೆಗಳು, ತಮಗೆ ಬೇಕಾದ ರದಲ್ಲಿ, ತಮಗೆ ಬೇಕಾದ ಪ್ರಚಂಡ ಸಾಮರ್ಥ್ಯಗಳ ವಸ್ತುಗಳನ್ನು ತಯಾರಿಸಬಹುದು. ್ಲೂ ಹಲವು ಹೊಸ ಉದ್ಯಮಗಳಿಗೂ ಅವಕಾಶವಿದೆ. ಮತ್ತೂ ನೂರಾರು ಜೈವಿಕ ತ್ರಗಳು ಅನುಕರಣೆಗೆ ಅಣಿಯಾಗಿವೆ.

**ಕ್ಕೂ ಮುಂದೇನು ?**

ಎಲ್ಲರು ತಮ್ಮ ತಮ್ಮ ಬದುಕಿನ ಮತ್ತೂ ಅನೇಕ ಸೌಖ್ಯ ಸೌಕರ್ಯಗಳನ್ನು ತಂತ್ರಜ್ಞಾನದ (ಬಯೊಟೆಕ್ನಾಲಜಿಯ) ಮೂಲಕ, ಹಿಂದೆ ವಿಜ್ಞಾನ ಒದಗಿಸುತ್ತಿದ್ದುದ ಲೂ ಹೆಚ್ಚಾಗಿ ಪಡೆಯುತ್ತಿರಬಹುದಾದ ಕಾಲ, ೨೧ನೆಯ ಶತಮಾನ. ಸುಲಭದಲ್ಲಿ ುಕಾಲ ಹಸನಾಗಿ ಉಳಿಯುವ ಬೆಳೆಗಳನ್ನು ಬೆಳೆಸಬಹುದು. ಜಾಗತಿಕ ಕ್ಷಾಮಗಳನ್ನು ಲಗಿಸಿ, ಹಸಿವು ಹಿಂಗಿಸಬಹುದು. ಸವಿರುಚಿಯ ಆರೋಗ್ಯಕರ ಮತ್ತು ಪುಷ್ಟಿಕರ ಾರಗಳು ಎಲ್ಲರಿಗೂ ಲಭ್ಯವಾಗುವಂತೆ ಮಾಡಬಹುದು. ಹೀಗೆ, ಬಹುಜನರ ವರೋಗಗಳು ನಿಯಂತ್ರಣಕ್ಕೆ ಬಂದ ನಂತರ, ಔಷಧಿ ಚಿಕಿತ್ಸೆಗಳನ್ನು ಪ್ರತಿ ವ್ಯಕ್ತಿಯ ಗುಣಕ್ಕಣಿಯಾಗಿ ಕೊಡಬಹುದು. ಈ ಫೀಡ್‌ಬ್ಯಾಕ್ ಚಕ್ರದ ಸಾಫಲ್ಯದ ನಂತರ ಎಲ್ಲರ ರೋಗಗಳನ್ನೂ ಹತೋಟಿಗೆ ತರಬಹುದು. ದೇಹಾಂಗಗಳ ಬದಲಾವಣೆ ಸುಲಭವಾಗಿ, ಾಂಗರು ಅತಿವಿರಳರಾಗಬಹುದು. ಎಲ್ಲರಿಗೂ ಸುದೀರ್ಘ ಆಯುಸ್ಸು ಸಾಮಾನ್ಯ ುವಂತೆ ಮಾಡಬಹುದು. ಈ ಉದ್ದೇಶಗಳು ಸಫಲವಾಗದಿದ್ದರೆ, ವಿಜ್ಞಾನಿಗಳಲ್ಲದೆ ಬೇರೆ ರೋ ದೋಷಿಗಳು ಈ ಅನಾಹುತಗಳಿಗೆ ಕಾರಣರಾಗಿರುತ್ತಾರೆ; ಹಕ್ಕುಬಾಧ್ಯತೆಗಳನ್ನರಿತು ಗರೂಕರಾಗದ ಜನ ಮಾತ್ರ ವಂಚಿತರಾಗುತ್ತಾರೆ.

## ಬೇರೆ ಕವಿತೆ ಬೇಕೆ ?

ಪ್ರತಿ ಪತ್ರಿಕೆಯಲಿ

ಸಿಕ್ಕೇ ಸಿಗುವರು ಸಿ.ಪಿ.ಕೆ.

ಕಾಯದೆ ನೀರದನವತರಣಕ್ಕೆ

ಸುರಿದೇ ಸುರಿವುದು ಅವರ ಲೇಖನಿ

ಹನಿ ಹನಿ ಹನಿ ಮಳೆ

ಬೇರೆ ಕವಿತೆ ಬೇಕೆ ?

**ಡಾ|| ಬಿ. ಎ. ಸನದಿ**
'ಮಿಲನ', ವಿನಾಯಕ ಸಾ ಮಿಲ್ ಎದುರು
ಹೆರವಟ್ಟಾ
ಕುಮಟಾ (ಉ. ಕ.) - ೫೮೧ ೩೩೨

**ಕಂಪ್ಯೂಟರ್‌ಗಳು** : ಮುಂದಿನವು ಪುಟ್ಟದಾಗಿ ನಮ್ಮ ಜೇಬು/ಚೀಲಗಳಲ್ಲಿದ್ದು ಈಗಿನ ಮೊಬೈಲ್/ಮಾನಿಟರ್‌ಗಳ ಹಾಗಿದ್ದು, ಕೀಬೋರ್ಡ್, ಮೌಸ್‌ಗಳಿಲ್ಲದೆ ಬೆರಳಿನಿಂದ ಮುಟ್ಟಿ ನಡೆಸುವಂತಿರುತ್ತವೆ. ಪುಸ್ತಕ, ಪತ್ರಿಕೆ, ನೋಡುವ/ತೋರಿಸುವ ಟೀವಿ, ಫೋನ್, ಹಣಕಾಸು ವ್ಯವಹಾರ, ಕಲಿಯುವ / ಕಲಿಸುವ ಪಾಠ, ಇತ್ಯಾದಿಗಳೆಲ್ಲ ಒಂದೇ ಯಂತ್ರದಲ್ಲಿ ಸಾಧ್ಯವಿರುತ್ತದೆ. ಹೀಗೆ ಸೈಬರ್‌ನೆಟಿಕ್ಸ್‌ನ ವಿಶಾಲ ವ್ಯಾಪ್ತಿಯ ಯೋಜನೆಗಳೊಡನೆ, ಕಂಪ್ಯೂಟರ್ ಇಂಟರ್‌ನೆಟ್ ಮುಂತಾದ ಶಕ್ತಿಸಾಮರ್ಥ್ಯಗಳೂ ಒಟ್ಟುಗೂಡಿ ಸಾರ್ವತ್ರಿಕವಾಗುತ್ತಿರುವಂತೆಯೆ, ಬಹಳಷ್ಟು ಸಾಮಗ್ರಿ ಸವಲತ್ತುಗಳ ಉತ್ಪಾದನೆಗಳು ಮತ್ತು ಅವುಗಳ ನಿಯಂತ್ರಣ, ಹೆಚ್ಚು ಹೆಚ್ಚು ಸಾರ್ವತ್ರಿಕವಾಗುವ ಸಾಧ್ಯತೆಗಳಿವೆ. ಆಗ ಹಿಂದೆ ಎಲ್ಲರೂ ಹಾತೊರೆದು ಆಶಿಸುತ್ತಿದ್ದ ಹಲವು ಅಗಾಧ ಕಾರ್ಯಗಳು ಸಾಧ್ಯವಾಗಲಿವೆ; ಕೆಲವನ್ನು ಗುರುತಿಸಿಕೊಳ್ಳೋಣ :

೧. ಇಲೆಕ್ಟ್ರಾನಿಕ್ಸ್, ಅಂತರಿಕ್ಷ, ಯಾಂತ್ರಿಕ, ಬಯೋಫಿಸಿಕ್ಸ್, ಚಿರಸ್ಥಾಯಿ ಸ್ವಾವಲಂಬಿ ಶಕ್ತಿ ಉತ್ಪಾದಕಗಳು, ವಸ್ತು ಮತ್ತು ಜೀವಗಳ ಸೃಷ್ಟಿಮೂಲ ರಹಸ್ಯ, ಮುಂತಾದ ಹಳೆಯ ವಿಜ್ಞಾನ ಮತ್ತು ಎಂಜನಿಯರಿಂಗ್ ಕ್ಷೇತ್ರಗಳಲ್ಲಿ ಜಾಗತಿಕ ಸಹಕಾರದ ಅನೇಕ ಬೃಹದಾಕಾರದ ಪ್ರಯೋಗಗಳು.

೨. ಪರಿಸರ ವಿಜ್ಞಾನದ ಅತಿವಿಶಾಲ ಸಮಸ್ಯೆಗಳ ಜಾಗತಿಕ ಪರಿಹಾರ.

೩. ಜಾಗತಿಕ ಹವಾಮಾನ/ಭೂಕಂಪ ಮಾದರಿಗಳ ಮತ್ತು ಪ್ರಳಯಕಾರಕ ಮುನ್ಸೂಚನೆಗಳ ಹಾಗೂ ಪರಿಹಾರ ಸಂಚಾಲನೆಯ ಅಧ್ಯಯನ.

೪. ಮಾನವಕುಲಗಳ ಸಂಖ್ಯಾವೃದ್ಧಿ, ವಲಸೆಗಳು, ದಾರಿದ್ರ್ಯ ನಿವಾರಣೆ ರೋಗನಿರೋಧ ಮತ್ತು ವಿಭಿನ್ನ ಅಭಿವೃದ್ಧಿಯ ಸಮಸ್ಯೆಗಳ ಜಾಗತಿಕ ಅಧ್ಯಯನ ಮತ್ತು ಪರಿಹಾರ ಯೋಜನೆಗಳು.

೫. ಅಂತರ್ದೇಶೀಯ ಆರ್ಥಿಕ ತಿಕ್ಕಾಟಗಳ ಮತ್ತು ಹಣಕಾಸು ಮುಗ್ಗಟ್ಟುಗಳ ಪರಿಹಾರಕ್ಕೆ ಜಾಗತಿಕ ಸಹಕಾರ ಯೋಜನೆಗಳು ಮತ್ತು ಸರ್ವಾನ್ವಯಸಾಧ್ಯ ಉತ್ತಮ ಜೀವನಶೈಲಿ.

೬. ಆಧುನಿಕ ವಿಜ್ಞಾನಪ್ರೇರಿತ ಸಮಾಜಕ್ಕನುಗುಣವಾಗಲು ವಿದ್ಯಾಶಿಕ್ಷಣ ಕ್ರಮಗಳ ಆದ್ಯಂತ ಪರಿಷ್ಕಾರ. ಇತ್ಯಾದಿ, ಇತ್ಯಾದಿ.

ಡಾ|| ಎಮ್. ಎನ್. ಕೇಶವ ರಾವ್
ನಂ. ೩೮೮, ವೆಂಕಟೇಶ ದಾಸ್ ರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

ಪ್ರಜಾಪ್ರಭುತ್ವದ ಬಗೆಗೆ ಪೆರಿಕ್ಲಿಸ್, ಅಬ್ರಹಾಂ ಲಿಂಕನ್, ಜಾನ್ ಸ್ಟೂಯರ್ಟ್ ಜಾನ್ ಶೀಲಿ ಮುಂತಾದವರು ವ್ಯಾಖ್ಯಾನಿಸಿದ್ದಾರೆ. ಬಹು ಪಕ್ಷಗಳ ರಾಜಕೀಯ ಯಿರುವ ಭಾರತ ಪ್ರಪಂಚದಲ್ಲೇ ಅತಿ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವೆಂದು ರು ಕೊಂಡಾಡಿದ್ದಾರೆ. ಅಮೆರಿಕಾದ ನಂತರ ನಮ್ಮ ರಾಷ್ಟ್ರವು ಅತಿ ದೊಡ್ಡ ಪ್ರಭುತ್ವ ವ್ಯವಸ್ಥೆ ಹೊಂದಿದೆಯೆಂದು ಇನ್ನು ಕೆಲವರು ಸಾರಿದ್ದಾರೆ. ಚುನಾವಣಾ ಣೆಗಳ ಮೂಲಕ ಪ್ರತಿನಿಧಿಗಳನ್ನು ಆಯ್ಕೆ ಮಾಡಿ, ಕಳೆದ ಅರವತ್ತು ವರ್ಷ ದ ನಮ್ಮ ರಾಷ್ಟ್ರದಲ್ಲಿ ಸರ್ಕಾರಗಳನ್ನು ಬದಲಿಸುತ್ತ ಬಂದಿರುವ ಜನತಾ ರ್ದನಸ ಸಾಧನೆಯೇ ಇಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಊರ್ಜಿತ ಡಿರುವುದರ ದ್ಯೋತಕ ಎಂಬುದು ಅನೇಕರ ಅಭಿಮತ. ಇದಕ್ಕೆ ಇಂಬು ವಂತೆ ಈ ವರ್ಷದ ಮಧ್ಯಭಾಗದಲ್ಲಿ ಜರುಗಿದ ಮಹಾಚುನಾವಣೆ ರು ೪೧೫ ಮಿಲಿಯ ಮತದಾರರನ್ನು ೮,೩೪,೯೪೪ ಮತ ಕೇಂದ್ರಗಳಲ್ಲಿನ ಮಿಲಿಯ ಮತ ಘಟಕಗಳತ್ತ ಸೆಳೆಯಿತು. ಹೆಚ್ಚಾಗಿ ಶಾಂತಿಯುತವಾಗಿ ದ ಈ ಮಹಾನ್ ಪ್ರಜಾಪ್ರಭುತ್ವ ಕ್ರಿಯೆ ಜಗತ್ತಿನ ಅದ್ಭುತಗಳಲ್ಲೇ ಒಂದು ಬಣ್ಣಿಸುವವರು ಇದ್ದಾರೆ. ಇವೆಲ್ಲಾ ನಿಜ, ಆದರೆ ಈ ಚುನಾವಣೆಯಲ್ಲಿ ಂದೂ ಕಾಣದಂತಹ ಹಣಬಲದ ಪ್ರದರ್ಶನವಾಯಿತು. ಚುನಾವಣಾ ಲ್ಲಿದ್ದ ಮತ್ತು ಚುನಾಯಿತರಾದ ಜನಪ್ರತಿನಿಧಿಗಳಲ್ಲಿ ಕೋಟ್ಯಧೀಶರ ಯಲ್ಲಿ ಹೆಚ್ಚಳ ಕಂಡುಬಂದದ್ದು ಗಮನಾರ್ಹ ಅಂಶವಾಗಿತ್ತು. ಕಪ್ಪು ಹಣ ಮತ್ತು



# ಪ್ರಭುತ್ವ ಪ್ರಜಾಪ್ರಭುತ್ವ ಮತ್ತು ಆದಿವಾಸಿಗಳು

"ಪ್ರಜಾಪ್ರಭುತ್ವವೆಂಬುದು ಒಂದು ಸರಳ ಪರಿಕಲ್ಪನೆಯಲ್ಲಿ ಸರಳವಾಗಿ ಹೇಳುವುದಾದರೆ, ಜನರು ತಮಗೆ ಸಂಬಂಧಿಸಿದ ವಿಷಯಗಳ ಬಗೆಗೆ ಅರ್ಥಪೂರ್ಣವಾದ ನಿರ್ಧಾರಗಳನ್ನು ತೆಗೆದುಕೊಳ್ಳುವ ಸ್ಥಿತಿಯಲ್ಲಿದ್ದರೆ, ಅಂತಹ ಸಮಾಜವನ್ನು ಪ್ರಜಾಪ್ರಭುತ್ವವಾದಿ ಎಂದು ಕರೆಯಬಹುದು."

ಮ. ಶ್ರೀ. ಮುರಳಿಕೃಷ್ಣ



ಕೊಳ್ಳೆಹೊಡೆದ ಧನದ ಅಸಹ್ಯಕಾರಿ ಪ್ರದರ್ಶನದ ಹಿಂದೆ ಶಾಸಕಾಂಗ ಮತ್ತು ಕಾರ್ಯಾಂಗಗಳಲ್ಲಿ ಹೆಚ್ಚುತ್ತಿರುವ ಭ್ರಷ್ಟಾಚಾರದ ಕರಾಳ ನೆರಳಿದೆ ಎಂಬುದು ನೈಜ ಪ್ರಜ್ಞಾವಂತರ ಕಳವಳ.

ಅಮೆರಿಕಾ ಮೂಲದವರಾದ ಡಾ॥ ನೋಮ್ ಚೋಮ್‌ಸ್ಕಿ ತಮ್ಮ ಸರ್ಕಾರದ ದೊಡ್ಡ ಕಟು ವಿಮರ್ಶಕರಲ್ಲಿ ಒಬ್ಬರು. "ಪ್ರಜಾಪ್ರಭುತ್ವವೆಂಬುದು ಒಂದು ಸರಳ ಪರಿಕಲ್ಪನೆಯಲ್ಲಿ ಸರಳವಾಗಿ ಹೇಳುವುದಾದರೆ, ಜನರು ತಮಗೆ ಸಂಬಂಧಿಸಿದ ವಿಷಯಗಳ ಬಗೆಗೆ ಅರ್ಥಪೂರ್ಣವಾದ ನಿರ್ಧಾರಗಳನ್ನು ತೆಗೆದುಕೊಳ್ಳುವ ಸ್ಥಿತಿಯಲ್ಲಿದ್ದರೆ, ಅಂತಹ ಸಮಾಜವನ್ನು ಪ್ರಜಾಪ್ರಭುತ್ವವಾದಿ ಎಂದು ಕರೆಯಬಹುದು" ಎಂಬುದು ಪ್ರಜಾಪ್ರಭುತ್ವದ ಕುರಿತ ಅವರ ವಿವರಣೆ. ನಾವು ಸ್ವಾತಂತ್ರ್ಯವನ್ನು ಗಳಿಸಿ ಅರವತ್ತು ವರ್ಷಗಳಾಗಿವೆ. ಈ ಅವಧಿಯಲ್ಲಿ, ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯ ಬೆಳವಣಿಗೆ, ವಿಸ್ತರಣೆ, ಒಂದೆಡೆ ಸಂತಸ, ಸಮಾಧಾನವನ್ನು ಉಂಟುಮಾಡಿದರೆ, ಮತ್ತೊಂದೆಡೆ ಆತಂಕ ಮತ್ತು ಭಯವನ್ನು ಸೃಷ್ಟಿಸಿದೆ ಎಂದರೆ ತಪ್ಪಾಗುವುದಿಲ್ಲ. ಜನರು ಪ್ರಜಾಪ್ರಭುತ್ವವನ್ನು ಕುರಿತು ಸದಭಿಪ್ರಾಯಗಳು ಮತ್ತು ಸದಾಶಯಗಳನ್ನು ಹೊಂದಿದ್ದಾರೆ. ಆದರೆ ಅದರಲ್ಲಿ ಕ್ರಮೇಣ ನಂಬಿಕೆಯನ್ನು ಕಳೆದುಕೊಳ್ಳುತ್ತಿದ್ದಾರೆ ಎಂಬುದೂ ಅಷ್ಟೇ ವಾಸ್ತವ ಸಂಗತಿ. ಕೆಲವು ವರ್ಷಗಳ ಹಿಂದೆ, ಅರ್ಜೆಂಟೈನಾದ ರಾಜಕೀಯ ವಿಶ್ಲೇಷಕ

ಅಟಿಲಿಸ್ ಬೋರೋನ್ ಪ್ರಜಾಪ್ರಭುತ್ವೀಕರಣ ಮತ್ತು ನವ-ಉದಾರತೆ ನಡುವಿನ ಸಂಬಂಧದ ಬಗೆಗೆ ಚಿಂತೆಯನ್ನು ವ್ಯಕ್ತಪಡಿಸಿದ್ದರು. ನವ-ಉದಾರತೆ ಪ್ರಜಾಪ್ರಭುತ್ವವನ್ನು ದುರ್ಬಲಗೊಳಿಸುತ್ತದೆಯೆಂದು ಅವರ ನಿಲುವಾಗಿತ್ತು. ಭಾರತವೂ ಸೇರಿದಂತೆ, ಬಡ ಮತ್ತು ಅಭಿವೃದ್ಧಿಶೀಲ ದೇಶಗಳಲ್ಲಿ ಸರ್ಕಾರಗಳು ಜಾರಿಗೊಳಿಸುತ್ತ ಬಂದಿರುವ ನವ-ಉದಾರ ನೀತಿಗಳು ಜನರನ್ನು ತೀವ್ರವಾಗಿ ಬಾಧಿಸಿವೆ, ಆದುದರಿಂದ ಅವರು ವ್ಯಕ್ತಪಡಿಸಿದ ನಿಲುಮೆಯಲ್ಲಿ ಹುರುಳಿತ್ತು ಎನ್ನಬಹುದು.

ಸ್ವಾತಂತ್ರ್ಯಾನಂತರದ ಭಾರತದ ಪ್ರಗತಿಯ ಬಗೆಗೆ ಮಹಾತ್ಮ ಗಾಂಧೀಜಿ ಮತ್ತು ಜವಹರ್‌ಲಾಲ್ ನೆಹರುರವರ ನಡುವೆ ಭಿನ್ನಾಭಿಪ್ರಾಯಗಳಿದ್ದವು. ನೆಹರು ಕೈಗಾರಿಕೀಕರಣದ ಬಗೆಗೆ ಒಲವನ್ನು ಹೊಂದಿದ್ದರು. ಗಾಂಧೀಜಿಯವರದ್ದು ಅದರ ವಿರುದ್ಧದ ನಿಲುವಾಗಿತ್ತು. ನೆಹರು ನಮ್ಮ ರಾಷ್ಟ್ರದ ಸಾರಥ್ಯವನ್ನು ವಹಿಸಿದ ಕಾಲದಲ್ಲಿ ಅನೇಕ ದೊಡ್ಡ ಕೈಗಾರಿಕಾ ಘಟಕಗಳು ಸ್ಥಾಪನೆಗೊಂಡವು. ಬೃಹತ್ ಯೋಜನೆಗಳು ಜಾರಿಯಾದವು. ಭಾರಿ ಅಣೆಕಟ್ಟುಗಳು ನಿರ್ಮಾಣಗೊಂಡವು. ಕಾನನಗಳು ಬರಿದಾಗತೊಡಗಿದವು. ಆದರೆ ಈ ತರಹದ ನೀತಿಗಳಿಗೆ ಮತ್ತು ಅವುಗಳ ಕಾರ್ಯಾಚರಣೆಗಳಿಗೆ ಬ್ರಿಟಿಷರು ೧೮೬೦ರಲ್ಲೆ ಶಂಕುಸ್ಥಾಪನೆ ನೆರವೇರಿಸಿದ್ದರು. ಎಲ್ಲ ಅಡವಿಗಳು ತಮ್ಮ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿರುತ್ತವೆಯೆಂದು ಘೋಷಿಸಿದ್ದರು. ಅಂದೇ ಅರಣ್ಯಗಳ ಮೂಲ ನಿವಾಸಿಗಳಾದ ಆದಿವಾಸಿಗಳ ಕರಾಳ ನಾಳೆಗಳಿಗೆ ಷರಾ ಬರೆಯಲಾಯಿತು. ಅಂಚೆ, ಟೆಲಿಗ್ರಾಫ್, ರೈಲು ಮುಂತಾದ ನವೀನ ಸವಲತ್ತುಗಳಿಗಾಗಿ ಕಾಡುಗಳನ್ನು ಸವರಲಾಯಿತು. ಆದಿವಾಸಿಗಳು ತಮ್ಮ ನೆಲೆವೀಡುಗಳಿಂದ ಕ್ರಮೇಣ ಉಚ್ಚಾಟಿಸಲ್ಪಟ್ಟರು. ೧೯೫೦- ೧೯೯೦ರ ಅವಧಿಯಲ್ಲಿ ಭಾರಿ ಅಣೆಕಟ್ಟುಗಳು, ಬೃಹತ್ ಕೈಗಾರಿಕೆಗಳು ಪ್ರಭುತ್ವ ನಿರ್ದೇಶಿತ ಆರ್ಥಿಕ ನೀತಿಗಳಡಿಯಲ್ಲಿ ನೆಲೆಗೊಂಡವು. ಇವುಗಳನ್ನು ನಮ್ಮ ರಾಷ್ಟ್ರದ 'ನವೀನ ದೇಗುಲ' ಗಳೆಂದು ನೆಹರು ಕರೆದರು. ಈ ಯೋಜನೆಗಳಿಂದ ವನ್ಯ ಸಂಪತ್ತಿಗೆ ಧಕ್ಕೆಯಾಯಿತು. ಆದಿವಾಸಿಗಳ ದುರ್ದಿನಗಳು ಮುಂದುವರಿದವು. ೧೯೯೦ರ ನಂತರದ ಅವಧಿಯಲ್ಲಿ ಈ ಕಾಲಘಟ್ಟದ ಜಾಗತೀಕರಣ ಪ್ರೇರಿತ ನವ-ಉದಾರ ನೀತಿಗಳು ಜಾರಿಯಾದವು. ''ಲಾಭಕ್ಕಾಗಿ ಎಲ್ಲವೂ'' ಎಂಬುದು ಇವುಗಳ ಧ್ಯೇಯವಾಗಿತ್ತು. ''ವರ್ತಮಾ... ಸರ್ವಸ್ವ, ಭವಿಷ್ಯವೇ ಇಲ್ಲ'' ಎಂಬ ಮನೋಧರ್ಮಕ್ಕೆ ಅನುಗುಣವಾಗಿ ನೆಲ-... ವನಗಳನ್ನು ಅವುಗಳಲ್ಲಿರುವ ನೈಸರ್ಗಿಕ ಸಂಪತ್ತಿಗಾಗಿ ಇನ್ನೂ ಹೆಚ್ಚು ಲೂಟಿಮಾ... ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಇವುಗಳೆಲ್ಲದರ ಫಲವಾಗಿ ಆದಿವಾ... ತೀವ್ರ ಶೋಷಣೆಗೆ ಒಳಗಾದರು.

ಭಾರತದ ಅಭಿವೃದ್ಧಿ ಪಥವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಕಂಡುಬ... ಕಾಣ್ಕೆಗಳು ಮಿಶ್ರ ಪ್ರತಿಕ್ರಿಯೆಗಳನ್ನು ಹುಟ್ಟಿಸುತ್ತವೆ. ಆದರೆ ಒಂದು ವಿಚಾರವ... 'ನಗ್ನಸತ್ಯ'ವೆಂದು ಖಡಾಖಂಡಿತವಾಗಿ ಪರಿಗಣಿಸಬಹುದು. ಅದೆಂದರೆ, ಆದಿವಾ... ಬದುಕಿನ ಅತಂತ್ರತೆ. ನಮ್ಮನ್ನಾಳುವ ಸರ್ಕಾರಗಳು ಸತತವಾಗಿ ಜಾರಿ ಮಾ... ಬಂದಿರುವ ಅಭಿವೃದ್ಧಿ ಯೋಜನೆಗಳಿಗೆ ಈ ವರ್ಗದ ಮಂದಿ ಬಲಿಪಶುಗಳಾಗಿರು... ಬೇರಾವ ವರ್ಗದ ಜನ ಆಗಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ಇತ್ತೀ... ನಿಧನರಾದ ಫ್ರೆಂಚ್ ಮೂಲದ, ನವೀನ ಮಾನವಶಾಸ್ತ್ರದ ಪಿತಾಮಹ ಎ... ಗುರುತಿಸಲ್ಪಡುವ ಕ್ಲಾಡ್ ಲೀವಿ ಸ್ಟ್ರಾಸ್ ತಮ್ಮ 'ರೇಸ್ ಅಂಡ್ ಹಿಸ್ಟರಿ' ಎಂಬ ಕೃತಿ... ಪ್ರಗತಿಯ ಬಗೆಗೆ ವ್ಯಾಖ್ಯಾನಿಸಿದ್ದಾರೆ. ಈ ಪ್ರಗತಿಯ ತರ್ಕವೇ ಹಾಗೆ, ಮಾನವಕು... ಎಲ್ಲ ಧಾರೆಗಳು ಒಂದೇ ಮೂಲದಿಂದ ಹೊರಟಿವೆ, ಒಂದೇ ಗುರಿಯ ಕಡೆಗೆ ನಡೆ... ಎಂಬ ತಾತ್ವಿಕತೆ ಇದರ ಮೂಲ. ಮೇಲುನೋಟಕ್ಕೆ 'ಇದು ಸ್ವಾಗತಾರ್ಹ', '... ಮಾನವ' ಧೋರಣೆ ಎಂಬಂತೆ ಕಂಡುಬಂದರೂ, ವಾಸ್ತವವಾಗಿ ಇದು ಒ... ಅಪಾಯಕಾರಿ. ತನ್ನದು ಮಾತ್ರ ಸರಿ, ಅನ್ಯಮಾರ್ಗ ಹಿಂದುಳಿದದ್ದೂ, ಅಸ... ವಾದದ್ದೂ ಎಂಬ ಅಸಹನೆ ಅಂತಿಮವಾಗಿ ದಬ್ಬಾಳಿಕೆಯ ರೂಪಕ್ಕೆ ತಿರುಗಿಬಿಡು... ತಮ್ಮ ಮಾದರಿಗಳನ್ನೇ ಅನ್ಯರ ಮೇಲೆ ಬಲಾತ್ಕಾರವಾಗಿ ಹೇರುವ ಪ್ರವೃತ್ತಿ ಒ... ಸುಸಂಗತವಾದ ಜಾಗತಿಕ ನೀತಿಯ ರೂಪಕ್ಕೆ ತಿರುಗಿಬಿಡುತ್ತದೆ. ಈ ದೃಷ್ಟಿಕೋನ... ಜಗತ್ತಿನಾದ್ಯಂತ ಬುಡಕಟ್ಟುಗಳನ್ನು 'ಹಿಂದುಳಿದ' ಹಾಗೂ 'ಅನಾಗರಿಕ' ಎಂಬ ಹಣೆ... ಅಂಟಿಸಿ ನೋಡುತ್ತದೆ. ಅವರ ಜೀವನಕ್ರಮದ ಆಂತರಿಕ ಸ್ವಯಂಪೂರ್ಣತೆ...

ರಿಸಿ, ರಾಷ್ಟ್ರವೊಂದರ 'ಮುಖ್ಯಧಾರೆ'ಗೆ ಅವರನ್ನು ತಂದು ಬೆಸೆಯುವುದೇ ರಾಷ್ಟ್ರೀಯ ದ್ಧಿ ಯೋಜನೆಗಳ ಪ್ರಮುಖ ಗುಣ – ಜಗತ್ತಿನ ಎಲ್ಲ ಭಾಗಗಳಲ್ಲಿ ಎಂಬಿತ್ಯಾದಿ ವಿಷಯಗಳತ್ತ ಗಮನ ಸೆಳೆಯುವ ಲೀವಿ ಸ್ಟ್ರಾಸ್‌ರ ಅಭಿಮತಗಳು ಮನನಯೋಗ್ಯ. ಾಗೆಯೇ, ''ಆರ್ಥಿಕ ವಿಚಾರವೇ ಶ್ರೇಷ್ಠ ಹಾಗೂ ಅಂತಿಮವಾಗಿ ಅಪೇಕ್ಷಣೀಯ ಭಾವಿಸುವ ಸಮಾಜ ನಿರ್ಮಿತಿಯ ಕ್ರಮದ ಅಪೂರ್ಣತೆ ಹಾಗೂ ಮುಖಗಳು ಇಲ್ಲಿ ಎದ್ದು ಕಾಣತೊಡಗುತ್ತವೆ. ಹೊಸ ಪ್ರಗತಿಯ ಅಭ್ಯಾಸಗಳಿಗೆ ದಿಕೊಳ್ಳಲಾಗದ ಗಿರಿಜನರು ಸಾಮಾನ್ಯವಾಗಿ ತೀರಾ ನಿರ್ಗತಿಕರಾಗಿ ರ್ಶಿತರಾಗುತ್ತಾರೆ. ತಮ್ಮ ಸಂಸ್ಕೃತಿಯ ಸುಭದ್ರ ಹಾಗೂ ಸ್ವಯಂಪೂರ್ಣ ಟ್ಟಿನೊಳಗೆ ಘನತೆ ಹಾಗೂ ಅಧಿಕೃತತೆಯ ಜೀವನ ನಡೆಸುತ್ತಿದ್ದ ಮಂದಿ ಈಗ ಯರೂ ಹಾಗೂ ಅವಮಾನಿತರೂ ಆಗಿಬಿಡುತ್ತಾರೆ. ಕಾಡಿನ ಮಧ್ಯೆ ಸಹಜವಾಗಿ ುತ್ತಿದ್ದ ಮಂದಿ ತಮ್ಮ ಶತಶತಮಾನಗಳ ನಿವಾಸದಲ್ಲೇ ಕಳ್ಳರು ಎಂಬ ಹಣೆಪಟ್ಟಿಗೆ ಗುತ್ತಾರೆ; ಕಾಡಿನ ಬಗೆಗಿನ ತಮ್ಮ ಸಹಜ, ಜೈವಿಕ ಹಕ್ಕುಗಳನ್ನು ಕೊಳ್ಳುತ್ತಾರೆ'' ಎಂದು ಭಾರತೀಯ ಅಭಿವೃದ್ಧಿ ಪಥದ ಪರಿಣಾಮವನ್ನು ಕುರಿತ ಯ ವಿಸ್ತಾರ ನೋಡಯ್ಯಾ' ಎಂಬ ತಮ್ಮ ಲೇಖನದಲ್ಲಿ (೧೯೮೯) ಡಿ. ಆರ್. ಾಜ ಅವರು ಆದಿವಾಸಿಗಳ ಸ್ಥಿತಿಗತಿಗಳ ಬಗೆಗೆ ಬೆಳಕನ್ನು ಚೆಲ್ಲಿದ್ದಾರೆ. ಈ ಇಪ್ಪತ್ತು ಗಳಲ್ಲಿ ಎಲ್ಲ ಬಗೆಯ ಬರ್ಬರ ಆಕ್ರಮಣಗಳಿಗೆ ತುತ್ತಾಗಿರುವ ಆದಿವಾಸಿಗಳ ಇನ್ನಷ್ಟು ಶೋಚನೀಯವಾಗಿದೆ.

ಂದು ಅಂದಾಜಿನ ಪ್ರಕಾರ, ನಮ್ಮ ರಾಷ್ಟ್ರದಲ್ಲಿ ಸ್ವಾತಂತ್ರ್ಯ ಗಳಿಸಿದ ನಂತರ ಸುಮಾರು ೋಟಿ ಜನ ದೊಡ್ಡ ಯೋಜನೆಗಳಿಂದ ನಿರ್ವಸಿತರಾಗಿದ್ದಾರೆ. ಅಂತಹವರಲ್ಲಿ ಸಿಗಳ ಪಾಲು ಶೇಕಡ ೪೦. ಅಂದರೆ ಪ್ರತಿ ಮೂರು ಆದಿವಾಸಿಗಳಲ್ಲಿ ಒಬ್ಬರು ರಕ್ಕೆ ಈಡಾಗಿದ್ದಾರೆ. ಇತಿಹಾಸಜ್ಞ ರಾಮಚಂದ್ರ ಗುಹಾರ ಪ್ರಕಾರ ಪ್ರಸ್ತುತ ಸಿಗಳು ಜನಸಂಖ್ಯೆಯ ಶೇಕಡ ೭-೮ರಷ್ಟಿದ್ದಾರೆ. ಅವರಲ್ಲಿ ಶೇಕಡ ೬೦ರಷ್ಟು ಮಂದಿ ತರಾಗಿದ್ದಾರೆ. ಅದೇನೇ ಇರಲಿ, ಒಂದು ವಿಷಯವಂತೂ ದಿಟ. ಅದು ನಮ್ಮ ದ್ಯಂತ ಆದಿವಾಸಿಗಳು ಎದುರಿಸುತ್ತಿರುವ ದಾರುಣ ಪರಿಸ್ಥಿತಿ.

ಮ್ಮ ರಾಷ್ಟ್ರದ ಪೂರ್ವಾಂಚಲ ಪ್ರದೇಶದ ಅಸ್ಸಾಂ, ಮಣಿಪುರ, ಮಿಜೋರಾಂ, ್ಯಾಂಡ್ ಮತ್ತಿತರ ರಾಜ್ಯಗಳು, ಜಾರ್ಖಂಡ್, ಛತ್ತೀಸ್‌ಗಢ, ಅರುಣಾಚಲ , ಒರಿಸ್ಸಾ, ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು ಮತ್ತು ಇತರ ಗಳಲ್ಲಿ ವಾಸಿಸುತ್ತಿರುವ ಆದಿವಾಸಿಗಳ ಸಂಕಷ್ಟಗಳು ವರ್ಷದಿಂದ ವರ್ಷಕ್ಕೆ ತ್ತಿವೆ. ಒರಿಸ್ಸಾದ ಕಳಿಂಗ ನಗರ, ಕೊಯಲ್ ಕರೋ, ಮಧ್ಯಪ್ರದೇಶದ ಮೆಹಂದಿ ಗುಜರಾತಿನ ನಗರ್‌ನಾರ್, ಛತ್ತೀಸ್‌ಗಢದ ದಂತೇವಾಡ ಮತ್ತು ಇನ್ನೂ ಅನೇಕ ಲ್ಲಿ ತಮ್ಮ ಹಕ್ಕುಗಳಿಗಾಗಿ ಸಂಘಟಿತರಾಗಿ, ಹೋರಾಡುತ್ತಿದ್ದ ಆದಿವಾಸಿಗಳ ಮೇಲೆ ದಮನಕಾರಿ ಪ್ರಹಾರಗಳನ್ನು ಪ್ರಯೋಗಿಸಿದೆ.

ೊಡ್ಡ ಯೋಜನೆಗಳು ಜಾರಿಯಾಗುವಾಗ, ಸ್ಥಳೀಯ ಆಡಳಿತ ಘಟಕಗಳ ನಗಿಯನ್ನು ಪಡೆದುಕೊಳ್ಳಬೇಕು. ಹಾಗೆಯೇ, ಸ್ಥಳೀಯ ಮಂದಿಯ ವಿಶ್ವಾಸವನ್ನು ತರುವಾಯ ಯೋಜನೆಗಳ ಅನುಷ್ಠಾನಕ್ಕೆ ಮುಂದಾಗಬೇಕು. ಆದರೆ ಜನಿಕ ವಿಚಾರಣೆಗಳಂಥ ವೇದಿಕೆಗಳನ್ನು ಏರ್ಪಡಿಸದೆ, ಏಕಾಏಕಿ ಯೋಜನೆ ಜಾರಿ ಮಾಡಿರುವುದಕ್ಕೆ ಅನೇಕ ಉದಾಹರಣೆಗಳಿವೆ. ಅಂತೆಯೆ, ಗ್ರಾಮ ಮಿತಿಯಂಥ ಸಂಸ್ಥೆಗಳು ಯೋಜನೆಗಳ ವಿರುದ್ಧ ಪಾಸು ಮಾಡಿದ ಠರಾವುಗಳ ೀಜುಗಳನ್ನು ನಾಶಪಡಿಸಿ, ತಮಗೆ ಸರಿಹೊಂದುವಂಥ ದಾಖಲೆಗಳನ್ನು ುವ ಪ್ರಕರಣಗಳೂ ಇವೆ. ಕೆಲವು ಸ್ಥಳಗಳಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ುವ ಮಂದಿಯೇ ಸ್ವತಃ ತಮ್ಮ ವಾಹನಗಳಿಗೆ ಬೆಂಕಿಯಿಕ್ಕಿ, ಆರೋಪವನ್ನು ಸಿಗಳ ಮೇಲೆ ಹೊರೆಸಿ, ಅವರಿಗೆ ಮಸಿಬಳಿಯುವಂಥ ಕೃತ್ಯಗಳೂ ಜರುಗಿವೆ. ಸಿಗಳ ಮೇಲಾಗುವ ಧಾಳಿಗಳು, ಅವರ ಹೆಣ್ಣುಮಕ್ಕಳ ಮೇಲಾಗುವ ರಗಳು ಇತ್ಯಾದಿಗಳ ಬಗೆಗೆ ಎಫ್‌ಐಆರ್‌ಗಳನ್ನು ದಾಖಲಿಸಲು ನಿರಾಕರಿಸಿರುವ ಗಳೂ ನಡೆದಿವೆ. ನಕಲಿ ಎನ್‌ಕೌಂಟರ್‌ಗಳಲ್ಲಿ ಆದಿವಾಸಿಗಳು ತಮ್ಮ ಪ್ರಾಣವನ್ನು ೂಂಡಿದ್ದಾರೆ. ಛತ್ತೀಸ್‌ಗಢದ ಸಂತೋಷ್‌ಪುರ ಎಂಬಲ್ಲಿ ಪೊಲೀಸರು ರು ಆದಿವಾಸಿಗಳನ್ನು ನಕಲಿ ಎನ್‌ಕೌಂಟರ್‌ನಲ್ಲಿ ಕೊಂದುಹಾಕಿದರು. ಈ ಕುರಿತು ಡಾ|| ಬಿನಾಯಕ್ ಸೇನ್ ಇತರ ಮಾನವಹಕ್ಕು ಸಂಘಟನೆ ಗಳೊಡನೆ ತ್ಯಶೋಧನೆ ನಡೆಸಿ, ಒಂದು ವರದಿಯನ್ನು ನೀಡಿದ್ದರು. ರಾಜ್ಯ ಮಾನವಹಕ್ಕುಗಳ ಗ ಈ ವರದಿಯನ್ನು ಪರಿಗಣಿಸಿ, ಆದಿವಾಸಿಗಳ ಸಾಮೂಹಿಕ ಸಮಾಧಿಯನ್ನು ುಗೆಸಿ, ಮರಣೋತ್ತರ ಪರೀಕ್ಷೆಗೆ ಆದೇಶ ನೀಡಿತು. ಆಗ ಅದು ಎನ್‌ಕೌಂಟರ್



ಅಲ್ಲ, ಬದಲಿಗೆ ಅವರನ್ನು ನಿರ್ದಯವಾಗಿ ಕೊಲ್ಲಲಾಗಿದೆ ಎಂಬ ಸತ್ಯ ಬೆಳಕಿಗೆ ಬಂದಿತು. ಇದು ಒಂದು ನಿದರ್ಶನ ಅಷ್ಟೇ.

ಆದಿವಾಸಿಗಳ ಮೇಲಿನ ಪ್ರಭುತ್ವದ ಅನೈತಿಕ ಕ್ರಮಗಳನ್ನು ಪ್ರಶ್ನೆ ಮಾಡುತ್ತ ಬಂದಿರುವ ಮಾನವ ಹಕ್ಕು ಸಂಘಟನೆಗಳು, ಜನಪರ ಚಳುವಳಿಗಳು ಮತ್ತವುಗಳ ಕಾರ್ಯಕರ್ತರ ಮೇಲೆ ವಿವಿಧ ರೀತಿಯ ಆಕ್ರಮಣಗಳಾಗಿವೆ. ಅವರನ್ನು ಹತ್ತಿಕ್ಕುವ ಕುಟಿಲ ಪ್ರಯತ್ನಗಳಾಗಿವೆ. ಛತ್ತೀಸ್‌ಗಢ ರಾಜ್ಯದಲ್ಲಿ ೨೦೦೫ರಲ್ಲಿ 'ಸಾಲ್ವಾ ಜುಡುಂ' ಅಸ್ತಿತ್ವಕ್ಕೆ ಬಂದಿತು (ಇದು ಗೊಂಡೀ ಭಾಷೆಯ ಪದ - 'ಶಾಂತಿ ಪ್ರಚಾರ' ಎಂಬುದು ಇದರ ಅರ್ಥ). ಇದೊಂದು ಪೌರ ಸೈನಿಕದಳ. ಜನರಿಗೆ ಅದರಲ್ಲೂ ಮುಖ್ಯವಾಗಿ ಆದಿವಾಸಿಗಳಿಗೆ ಶಸ್ತ್ರಾಸ್ತ್ರಗಳನ್ನು ನೀಡಿ, ಅವರನ್ನು ನಕ್ಸಲ್‌ವಾದಿಗಳ ವಿರುದ್ಧದ ಹೋರಾಟಗಳಲ್ಲಿ ಬಳಸಿಕೊಳ್ಳುವುದು ಈ ಪಡೆಯ ಪ್ರಮುಖ ಧ್ಯೇಯ. ಇದನ್ನು ಮಾನವ ಹಕ್ಕುಗಳ ಸಂಘಟನೆಗಳು, ಎಡಪಕ್ಷಗಳು ಮತ್ತು ಇತರ ಜನಪರ ಚಳುವಳಿಗಳು ಪ್ರಬಲವಾಗಿ ವಿರೋಧಿಸಿದವು. ಈ ವಿಷಯ ಸುಪ್ರೀಂ ಕೋರ್ಟ್‌ಗೆ ಹೋಯಿತು. ಅದು ಛತ್ತೀಸ್‌ಗಢ ಸರ್ಕಾರದ ಈ ಕ್ರಮದ ಬಗೆಗೆ ಕ್ಯಾತೆ ತೆಗೆಯಿತು. ಆದರೂ ಅದು ಇಂದಿಗೂ ಜಾರಿಯಲ್ಲಿದೆ. ಇದರ ವಿರುದ್ಧ ಹೋರಾಡಿದ ಡಾ|| ಬಿನಾಯಕ್ ಸೇನ್ ಅವರನ್ನು ಆಧಾರರಹಿತ ಆಪಾದನೆಗಳಡಿಯಲ್ಲಿ ರಾಯ್‌ಪುರದ ಕಾರಾಗೃಹದಲ್ಲಿ ಎರಡು ವರ್ಷಗಳ ಕಾಲ ಬಂಧನದಲ್ಲಿ ಇಡಲಾಯಿತು. ಆದಿವಾಸಿಗಳ ಹಕ್ಕುಗಳಿಗಾಗಿ ಶ್ರಮಿಸುತ್ತಿರುವ ದಂತೇವಾಡದ ಗಾಂಧೀವಾದಿ ಹಿಮಾಂಶು ಕುಮಾರ್ ಅವರ ವನವಾಸಿ ಚೇತನ್ ಆಶ್ರಮವನ್ನು ಧ್ವಂಸ ಮಾಡಲಾಯಿತು. ಮಧ್ಯಪ್ರದೇಶದ ಹರ್ದಾ ಪ್ರದೇಶದ ಗೋಂಡರು ಮತ್ತು ಕೊರ್ಕು ಬುಡಕಟ್ಟು ಜನರ ಭೂಮಿ ಹಕ್ಕುಗಳು ಮತ್ತು ಅರಣ್ಯ ಇಲಾಖೆಯ ಅಧಿಕಾರಿಗಳ ಶೋಷಣೆಯ ವಿರುದ್ಧ ಶ್ರಮಿಕ ಆದಿವಾಸಿಗಳ ಸಂಘಟನೆಯ ಶಮೀಮ್ ಮೋಡಿ ಅವರ ಮೇಲೆ ಸುಮಾರು ೪೫ ಕ್ರಿಮಿನಲ್ ಮೊಕದ್ದಮೆಗಳಿವೆ. ಅವರು ನಕ್ಸಲ್‌ವಾದಿ ಚಟುವಟಿಕೆಗಳಿಗೆ ಭೂಮಿಕೆಯನ್ನು ಒದಗಿಸುತ್ತಿದ್ದಾರೆ ಎಂಬುದು ಸರ್ಕಾರದ ಆರೋಪ. ಮೇಲೆ ಪ್ರಸ್ತಾಪಿಸಿರುವ ಜನಪರ ಹೋರಾಟಗಾರರು ನಕ್ಸಲ್‌ವಾದದ ಸಹಾನುಭೂತಿಯುಳ್ಳವರೆಂದು ಆಡಳಿತ ವ್ಯವಸ್ಥೆಯ ಆಪಾದನೆ. ಆದರೆ ಅವರೆಲ್ಲರೂ ನಕ್ಸಲೀಯರ ಹಿಂಸೆಯನ್ನು ಖಂಡಿಸಿದ್ದಾರೆ ಎಂಬುದು ಗಮನಾರ್ಹ ಸಂಗತಿ.

ಛತ್ತೀಸ್‌ಗಢ ಮತ್ತು ಜಾರ್ಖಂಡ್ ರಾಜ್ಯಗಳಲ್ಲಿ ಮಿಲಿಯಗಟ್ಟಲೆ ಟನ್‌ಗಳಷ್ಟು

ಉತ್ತಮ ಗುಣಮಟ್ಟದ ಕಬ್ಬಿಣದ ಅದಿರಿದೆ. ಜೊತೆಯಲ್ಲಿ ಯುರೇನಿಯಮ್, ಡೊಲೋಮೈಟ್, ಟಿನ್, ಗ್ರಾನೈಟ್, ಕ್ವಾರ್ಟ್‌ಜೈಟ್, ಗಾರ್ಸೆಡ್, ಡೈಮಂಡ್, ಗೋಲ್ಡ್ ಮುಂತಾದ ೨೮ ಅತ್ಯಮೂಲ್ಯ ಖನಿಜಗಳ ಭಂಡಾರಗಳೂ ಇಲ್ಲಿವೆ. ಒರಿಸ್ಸಾ ರಾಜ್ಯದ ಬಾಕ್ಸೈಟ್ ಖನಿಜದ ಒಟ್ಟು ಆರ್ಥಿಕ ಮೌಲ್ಯ (೨೦೦೪ರಲ್ಲಿ) ಸುಮಾರು ೨.೨೭ ಟ್ರಿಲಿಯನ್ ಡಾಲರುಗಳು (ಅಂದರೆ ಭಾರತದ ಜಿಡಿಪಿಯ ಎರಡರಷ್ಟು). ಇಂದಿನ ದರದಲ್ಲಿ ಅದರ ಬೆಲೆ ಸುಮಾರು ೪ ಟ್ರಿಲಿಯನ್ ಡಾಲರುಗಳು (ಒಂದು ಟ್ರಿಲಿಯನ್‌ಗೆ ೧೨ ಸೊನ್ನೆಗಳಿವೆ. ಅಂದರೆ, ಎರಡು ಕೋಟಿ ಕೋಟಿ ರೂಪಾಯಿಗಳು). ನಮ್ಮ ರಾಷ್ಟ್ರದ ಆದಿವಾಸಿಗಳ ವಾಸಸ್ಥಾನಗಳಲ್ಲಿರುವ ಅಪೂರ್ವ ಮತ್ತು ಅಪರೂಪದ ಖನಿಜ ಸಂಪತ್ತಿನ ಮೇಲೆ ವಿಶ್ವದ ದೊಡ್ಡ ಗಣಿ ಮತ್ತು ಉಕ್ಕಿನ ಕಾರ್ಖಾನೆಗಳು ಲಗ್ಗೆ ಹಾಕಿವೆ. ಅವುಗಳ ಜೊತೆಯಲ್ಲಿ ದೇಶೀಯ ಕಂಪನಿಗಳು ಸಾಥ್ ನೀಡುತ್ತಿವೆ. ಮಿತ್ತಲ್, ಜಿಂದಾಲ್, ಟಾಟಾ, ಎಸ್ಸಾರ್, ಪೋಸ್ಕೊ, ರಿಯೋ ಟಿಂಟೊ, ವೇದಾಂತ, ಬಿಲ್‌ಟನ್‌ರಂಥ ಬಂಡವಾಳಶಾಹಿ ದಿಗ್ಗಜಗಳು ಕಣದಲ್ಲಿವೆ.

ಪ್ರಸ್ತುತ ಕೇಂದ್ರ ಸರ್ಕಾರದಲ್ಲಿ ಗೃಹಮಂತ್ರಿಯಾಗಿರುವ ಪಿ. ಚಿದಂಬರಂ ನಕ್ಸಲೀಯರ ದಮನಕ್ಕಾಗಿ 'ಆಪರೇಷನ್ ಗ್ರೀನ್ ಹಂಟ್' ಎಂಬ ಕಾರ್ಯಾಚರಣೆಯನ್ನು ಶುರುಮಾಡುವ ತರಾತುರಿಯಲ್ಲಿದ್ದಾರೆ. ಇವರು ತಮ್ಮ ಕಾರ್ಪೊರೇಟ್ ವಕೀಲ ವೃತ್ತಿಯಲ್ಲಿ ಅನೇಕ ಗಣಿ ಉದ್ಯಮಗಳನ್ನು ಪ್ರತಿನಿಧಿಸಿದ್ದಾರೆ. 'ವೇದಾಂತ' ಎಂಬುದು ಗಣಿ ಉದ್ಯಮದಲ್ಲಿ ತೊಡಗಿರುವ, ಪ್ರಪಂಚದ ದೊಡ್ಡ ನಿಗಮಗಳಲ್ಲಿ ಒಂದು. ಲಂಡನ್‌ನ ನಿವಾಸಿ ಮತ್ತು ಬಿಲಿಯನೇರ್ ಅನಿಲ್ ಅಗರ್‌ವಾಲ್ ಇದರ ಮಾಲೀಕ. ಪಿ. ಚಿದಂಬರಂ ಈ ನಿಗಮದ ನಾನ್-ಎಕ್ಸಿಕ್ಯೂಟಿವ್ ಡೈರೆಕ್ಟರ್ ಸ್ಥಾನವನ್ನು ೨೦೦೪ರವರೆಗೆ ಅಲಂಕರಿಸಿದ್ದರು. ವಿತ್ತ ಸಚಿವರಾದ ನಂತರ ಆ ಪದವಿಗೆ ರಾಜೀನಾಮೆಯಿತ್ತರು. ಆದರೆ ಹಣಕಾಸು ಮಂತ್ರಿಯಾದ ತಕ್ಷಣ ನೇರ ವಿದೇಶಿ ಬಂಡವಾಳದ ವಿಷಯಕ್ಕೆ ಸಂಬಂಧಿಸಿದಂತೆ ಪ್ರಥಮ ತೀರುವಳಿ ನೀಡಿದ್ದು ಮಾರಿಷಿಯಸ್ ಮೂಲದ ಟ್ವಿನ್‌ಸ್ಟಾರ್ ಹೋಲ್ಡಿಂಗ್ಸ್ ಎಂಬ ಕಂಪನಿಗೆ. 'ವೇದಾಂತ' ಗುಂಪಿನ ಸ್ಟೆರ್‌ಲೈಟ್ ಕಂಪನಿಯ ಷೇರುಗಳನ್ನು ಖರೀದಿಸಲು ಈ ನಿರ್ಣಯವನ್ನು ತೆಗೆದುಕೊಳ್ಳಲಾಯಿತು. ಹೇಗಿದೆ ನೋಡಿ ಅಧಿಕಾರಾರೂಢರ ಸಂಬಂಧಗಳು ಮತ್ತು ಕರಾಮತ್ತುಗಳು !!



ದಿನ ಕಳೆದಂತೆ, ಜನರು ಪ್ರಜಾಪ್ರಭುತ್ವದ ವ್ಯವಸ್ಥೆಯ ಬಗೆಗೆ ನಂಬಿಕೆ ಕಳೆದುಕೊಳ್ಳುತ್ತಿದ್ದಾರೆ. ಅವರಿಗೆ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂ ಕಾರ್ಯವೈಖರಿಯ ಬಗೆಗೆ ಹೇವವಿದೆ. ಆದಿವಾಸಿಗಳ ಬದುಕು ದುಸ್ತರವಾಗ ತಮ್ಮ ಹಕ್ಕುಗಳಿಗಾಗಿ, ಬದುಕನ್ನು ಹಸನುಗೊಳಿಸುವುದಕ್ಕಾಗಿ ಅವರು ಹ ಬಂದಿರುವ ಶಾಂತಿಯುತ ಹೋರಾಟಗಳು ನಿರೀಕ್ಷಿತ ಫಲಗಳನ್ನು ನೀ ಆದುದರಿಂದ, ಅವರು ತಮ್ಮ ಅಸ್ತ್ರಗಳಿಗೆ ಮೊರೆಹೋಗಿದ್ದಾರೆ. ಅವರ ಬಾಣಗಳು ಪ್ರಭುತ್ವ ಹೊಂದಿರುವ ಆಧುನಿಕ ಶಸ್ತ್ರಾಸ್ತ್ರಗಳಿಗೆ ಸಮವಲ್ಲ, ಇದರ ಅ ಅವರಿಗಿದೆ. ಅವರಿಗೆ ನಕ್ಸಲೀಯರು ತಮ್ಮ ಹಿತವನ್ನು ಕಾಪಿಡುವ ರಕ್ಷ ತೋರಿದ್ದಾರೆ. ಪೀಪಲ್ಸ್ ಯೂನಿಯನ್ ಫಾರ್ ಡೆಮೋಕ್ರ್ಯಾಟಿಕ್ ರೈಟ್ಸ್‌ನ ಗೌ ನವ್‌ಲಾಖರ ಪ್ರಕಾರ ಮಾವೋವಾದಿಗಳ ಸಂಘಟನೆಗೆ ಸೇರ್ಪಡೆಯಾಗುತ್ತಿ ಆದಿವಾಸಿಗಳು ಒಂದು ಹೊಸ ಪಲ್ಲಟಕ್ಕೆ ನಾಂದಿ ಹಾಡಿದ್ದಾರೆ. ಇನ್ನೂ ಕೆಲವರ ಅ ಆದಿವಾಸಿಗಳು ತಮ್ಮ ಅಂತಿಮ ಹೋರಾಟಕ್ಕೆ ಸಜ್ಜಾಗುತ್ತಿದ್ದಾರೆ. ಹಿಂಸೆ-ಪ್ರತಿಹಿಂಸೆಯಲ್ಲಿ ಅಪಾರ ನಷ್ಟಗಳಿಗೆ ಈಡಾಗುವುದು ಆದಿವಾಸಿ ತಲೆತಲಾಂತರಗಳಿಂದ ಆದಿವಾಸಿಗಳು ಮೀಸಲು ಅಥವಾ ಸಂರಕ್ಷಿತ ಅರಣ್ಯಗಳ ಘೋಷಿಸಲ್ಪಟ್ಟಿರುವ ಪ್ರದೇಶಗಳಲ್ಲಿ ವಾಸಿಸುತ್ತ ಬಂದಿದ್ದಾರೆ. ಅವರ ಹಕ್ಕುಗ ಮಾನ್ಯತೆ ಮಾಡುವ ನಿಟ್ಟಿನಲ್ಲಿ ಸರ್ಕಾರಗಳು ಸಮರ್ಪಕವಾದ ಕ್ರಮಗ ಜಾರಿಗೊಳಿಸಿಲ್ಲ ಎಂದರೆ ತಪ್ಪಾಗುವುದಿಲ್ಲ. ಕೆಲವು ತಿಂಗಳುಗಳ ಹಿಂದೆ, ನಮ್ಮ ಸ ಅರಣ್ಯ ಹಕ್ಕುಗಳ ಕಾಯಿದೆಗೆ ಅಂಗೀಕಾರ ನೀಡಿತು. ಅದರಂತೆ, ಅರಣ್ಯ ನಿವಾಸಿ ಕೆಲವು ವರ್ಷಗಳ ಕಾಲ (ಅವಧಿಯನ್ನು ಕಾಯಿದೆಯಲ್ಲಿ ಸೂಚಿಸಲಾ ವನ್ಯಭೂಮಿಯಲ್ಲಿ ಜೀವನ ಸಾಗಿಸುತ್ತಿದ್ದರೆ, ಆ ಭೂಮಿಯ ಮೇಲಿನ ಹಕ್ಕು ಅವರಿಗೆ ಲಭ್ಯವಾಗುತ್ತವೆ. ಆದರೆ ಈ ಕಾಯಿದೆಯ ಬಗೆಗೆ ಹಲವು ರಾಜ್ಯಗಳ ನ್ಯಾಯಾಲಯಗಳು ತಡೆಯಾಜ್ಞೆ ನೀಡಿವೆ. ಇಂಥಾ ಕಾನೂನುಗಳಿಂದ ಅರಣ್ಯ ಸಂಭವಿಸುತ್ತದೆಯೆಂದು ಅವುಗಳ ತಕರಾರು. ಆದರೆ ಆದಿವಾಸಿಗಳ ಪರಿವಾ ಅರಣ್ಯ ಪ್ರದೇಶಗಳ ಪರ್ಯಾವರಣವನ್ನು ಜತನ ಮಾಡುತ್ತ ಬಂದಿರುವುದು ಹ ಅಧ್ಯಯನ/ಸರ್ವೇಕ್ಷಣಗಳಿಂದ ಸಾಬೀತಾಗಿರುವ ವಿಷಯ. ಗಣಿಗಾರಿಕೆಯ ಸಾವಿರಾರು ಆದಿವಾಸಿ ಕುಟುಂಬಗಳು ತಮ್ಮ ನೆಲೆಯನ್ನು ಕ ಕೊಳ್ಳುತ್ತವೆಯೆಂಬುದು ಸಾಮಾನ್ಯ ಜ್ಞಾನ. ಹೀಗಿದ್ದರೂ, ಸರ್ವೋಚ್ಚ ನ್ಯಾಯಾ ಪೋಸ್ಕೊ ಮತ್ತು ವೇದಾಂತದಂಥ ದೊಡ್ಡ ಕಾರ್ಪೊರೇಟ್ ಸಂಸ್ಥೆಗಳಿಗೆ ಅ ಪ್ರದೇಶಗಳಲ್ಲಿ ಭಾರಿ ಪ್ರಮಾಣದ ಗಣಿಗಾರಿಕೆ ನಡೆಸಲು ಪರವಾನಗಿ ನೀಡಿದೆ. ತಜ್ಞರ ಸಮಿತಿಯೇ ಅರಣ್ಯ ಪ್ರದೇಶಗಳಲ್ಲಿ ಗಣಿಗಾರಿಕೆಗೆ ಆಸ್ಪದ ನೀ ಪರ್ಯಾವರಣಕ್ಕೆ ಕುತ್ತು ಒದಗುತ್ತದೆಯೆಂಬ ವರದಿಗೆ ಕವಡೆ ಕಾಸಿನ ಕಿಮ್ಮ ನೀಡದೆ, ಈ ನ್ಯಾಯಾಲಯ ಇಂಥಾ ನಿಲುವನ್ನು ತೆಗೆದುಕೊ ಏನನ್ನಬೇಕು ? ಈ ಹಿನ್ನೆಲೆಯಲ್ಲಿ, ಆದಿವಾಸಿಗಳು, ಅವರ ಹಕ್ಕುಗಳಿಗಾಗಿ ಶ್ರ ತ್ತಿರುವ ಸಂಘಟನೆಗಳು ನಮ್ಮ ರಾಷ್ಟ್ರದ ಶಾಸಕಾಂಗ, ನ್ಯಾಯಾಂಗ ಮತ್ತು ಕಾರ್ಯಾ ಗಳೇ ತಮ್ಮ ವಿರುದ್ಧ ಇವೆಯೆಂದು ಪರಿಭಾವಿಸಿದರೆ, ಅದು ತಪ್ಪಾಗುತ್ತದೆಯೆ ?

ಆದುದರಿಂದ, ಸರ್ಕಾರ ಆದಿವಾಸಿಗಳಿಗೆ ನ್ಯಾಯ ಒದಗಿಸಬೇಕು. ಜೀ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಬೇಕು. ಇಲ್ಲದಿದ್ದರೆ, ನಮ್ಮ ನಾಡು ಆತಂಕದ ನಾಳೆಗಳನ್ನು ಎದುರಿಸಬೇಕಾ ನಮ್ಮ ಸಂವಿಧಾನದ ೫ನೇ ಅನುಸೂಚಿಯಲ್ಲಿ ಆದಿವಾಸಿಗಳಿಗೆ ರಕ್ಷಣೆ ನೀಡಬೇಕು ಹಾಗೂ ಅವರ ಭೂಮಿಯನ್ನು ಪರಭಾರೆ ಮಾಡಬಾರದ ಉಲ್ಲೇಖಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರ ಸೂಕ್ತ ನ್ಯಾಯಯುತ ದೂರದರ್ಶಿತ್ವದ ಕ್ರಮಗಳನ್ನು ಜಾರಿಗೊಳಿಸಬೇಕು. ಇವು ಅತ್ಯಂತ ಪಾರದರ್ಶಕ ಬೇಕು. ಹೀಗಾಗದಿದ್ದರೆ, ನಾವು ಭೀಕರ ಪರಿಣಾಮಗಳನ್ನು ಎದುರಿಸಬೇಕಾ ರಾಜಕೀಯ ಪಕ್ಷಗಳು, ವಿವಿಧ ಸಂಘಟನೆಗಳು ಮತ್ತು ನಮ್ಮ, ಅಂದರೆ ನಾಗ ಮೇಲೂ ಜವಾಬ್ದಾರಿಗಳಿವೆ ಎಂಬುದನ್ನು ಮರೆಯಬಾರದು, ಅಲ್ಲವೇ ?

ಆಧಾರ : ಹಲವು ಮೂಲಗಳು. ಈ ಲೇಖನವನ್ನು ಸಿದ್ಧಪಡಿಸುವಾಗ ಮಾಹಿತಿಗಳನ್ನು ಅರುಂಧತಿ ರಾಯ್ ಬರೆದಿರುವ 'ಮಿ. ಚಿದಂಬರಂಸ್ (ಔಟ್‌ಲುಕ್, ೯-೧೧-೨೦೦೯) ಎಂಬ ಲೇಖನದಿಂದ ತೆಗೆದುಕೊಳ್ಳಲಾಗಿದೆ.


ಮ. ಶ್ರೀ. ಮುರಳಿಕೃಷ್ಣ
ನಂ. ૩೮, ૩ನೇ ಕ್ರಾಸ್, ರಾಜ ಗಾರ್ಡನಿಯಾ ಲೇಔಟ್, ತುರಹಳ್ಳಿ,
ಸುಬ್ರಹ್ಮಣ್ಯಪುರ ಅಂಚೆ, ಉತ್ತರಹಳ್ಳಿ, ಬೆಂಗಳೂರು - ೫೬೦ ೦೬೧

# National Referral Centre for Lead Poisoning (NRCLPI)

St. John's Medical College, Dept. of Biochemistry, Bangalore- 560034.
Ph. : 080-22065058. Telefax : 080-25502341

*In order to create awareness about LEAD poisoning among Students and General Public regularly conducts Nationwide Programmes.*

## (1) LEADer(ES) -LEAD Educator (Educational sector)

This awareness programme is designed for creating Lead educators in educational sector throughout the country apart from training NGO's by the competent faculty at NRCLPI. Under this program NRCLPI in collaboration with Quality Council of India (QCI) & other organizations will conduct one day awareness workshop to School, College, University Teachers/Lecturers, NGOs, who in turn disseminate knowledge to their students and staff members.

## (2) SMILE (Seminar on Methods & Implementation of Lead Education)

This awareness programme is designed for creating Pre-School Educators with a focus - Don't let the lead to rob the smile of your child throughout the country apart from training NGO's by the competent faculty at NRCLPI. Under this program NRCLPI in collaboration with other organizations will conduct half-a-day day awareness programmes to Montessori School teachers, Employees in day care centers, Children's park management personnel, NGO's, who in turn disseminate knowledge to mothers of children and other staff members.

## (3) STEP (Student Talent Exploration Projects) –

NRCLPI with Quality Council of India (QCI) is also sponsoring small short term research projects from the city colleges of different states. Initially it was started in Bangalore where 15 Colleges had come up with lead analysis in different samples.




## (4) LEAD wise clubs- LEAD ('Y's) clubs

Objective: In order to create an awareness about lead among students, societal groups, eco-clubs, institutions, it is proposed to establish LEAD ('Y's) CLUBS in various sectors. These clubs conduct programmes and activities related to Environment and more focused in the area related to lead.

**Dr. Thuppil Venkatesh - Executive Director**

Dr. Thuppil Venkatesh is the Executive Director of the National Referral Centre for Lead Poisoning in India. In this capacity, he directed the "Project Lead Free," with support from the George Foundation to provide the first comprehensive characterization of the extent of lead poisoning in India.

e-mail : venkatesh.thuppil@gmail.com

*working towards leadsafe society in India*

For more details visit : elinksonlead.blogspot.com Contact : leadinf@gmail.com

# ಕೆಳವರ್ಗಗಳ ಅರಿವೇದನೆ ಮತ್ತು ಪ್ರತಿಭಟನೆ : ಭಾರತದಲ್ಲಿ ಸಬಾಲ್ಟರ್ನ್ ಅಧ್ಯಯನದ ವಿವಿಧ ಆಯಾಮಗಳು

ವಿಜಯ್ ಪೂಣಚ್ಚ ತಂಬಂಡ

**ಪ್ರ**ಸ್ತುತ ಭಾರತದ ಚರಿತ್ರೆ ಬರವಣಿಗೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತಿರುವ ಸಾಮ್ರಾಜ್ಯವಾದಿ, ರಾಷ್ಟ್ರೀಯವಾದಿ, ಮಾರ್ಕ್ಸಿಸ್ಟ್, ಕೇಂಬ್ರಿಜ್ ವಿದ್ವಾಂಸರ ಸೈದ್ಧಾಂತಿಕತೆಯನ್ನು ಒರೆಹಚ್ಚುವ ಕೆಲಸವನ್ನು ಸಬಾಲ್ಟರ್ನ್ ಅಧ್ಯಯನವು ಕಳೆದ ಎರಡೂವರೆ ದಶಕಗಳಿಂದೀಚೆಗೆ ಮಾಡುತ್ತಿದೆ. ಕಳೆದ ಒಂದು ದಶಕದಲ್ಲಿ ಸಬಾಲ್ಟರ್ನ್ ಅಧ್ಯಯನದ ಬಗ್ಗೆ ಕನ್ನಡದಲ್ಲಿ ಅಲ್ಲಲ್ಲಿ ಪ್ರಸ್ತಾಪವಾಗಿದ್ದರೂ ಅದರ ಸೈದ್ಧಾಂತಿಕತೆ, ಹುಟ್ಟು, ಬೆಳವಣಿಗೆ ಮತ್ತು ಪರಿಣಾಮಗಳನ್ನು ಕುರಿತಂತೆ ಚರ್ಚೆಯ ಅಗತ್ಯವಿದೆ. ಇತ್ತೀಚೆಗೆ ಬಹುಬಗೆಯಲ್ಲಿ ಚರ್ಚೆಗೆ ಒಳಗಾಗುತ್ತಿರುವ ಬಹುಸಂಸ್ಕೃತಿ ನೆಲೆಗಳು, ಜಾನಪದ/ಮೌಖಿಕ ಚರಿತ್ರೆಯ ನೆಲೆಗಳು, ಕೆಳಸ್ತರದ ಜನರ/ಸಮುದಾಯಗಳ ಧ್ವನಿಗಳು, ಸಬಾಲ್ಟರ್ನ್ ಅಧ್ಯಯನಕ್ರಮದ ವ್ಯಾಪ್ತಿಯಲ್ಲಿ ಪ್ರತಿಧ್ವನಿಗಳಾಗುತ್ತಿರುವುದನ್ನು ನಾವು ಗಮನಿಸಬಹುದು. ನವಸಾಮಾಜಿಕ ಚಳವಳಿಗಳು, ಅದರಲ್ಲಿಯೂ ದಲಿತ, ಕಾರ್ಮಿಕ, ರೈತ, ಮಹಿಳೆ, ಐಡೆಂಟಿಟಿ ಇತ್ಯಾದಿ ಚಳವಳಿಗಳ ಸೈದ್ಧಾಂತಿಕತೆಗಳು ಸಬಾಲ್ಟರ್ನ್ ಅಧ್ಯಯನ ಕ್ರಮದ ಪ್ರಭಾವಕ್ಕೆ ಒಳಗಾಗಿದ್ದನ್ನು ಕಾಣಬಹುದಾಗಿದೆ. ೧೯೨೦ರ ದಶಕದಲ್ಲಿ ಇಟಾಲಿಯನ್ ಮಾರ್ಕ್ಸಿಸ್ಟರ ಭಿನ್ನಮತೀಯ ಧ್ವನಿಯಾಗಿ ಹೊರಬಂದ ಸಬಾಲ್ಟರ್ನ್ ಅಧ್ಯಯನವು ಒಂದು ಅಧ್ಯಯನ ಶಿಸ್ತಾಗಿ ಬೃಹತ್ ಪ್ರಮಾಣದಲ್ಲಿ ಬೆಳೆದದ್ದು ಭಾರತದ ವಸಾಹತು ಕಾಲವನ್ನು ಮರುವಿಮರ್ಶಿಸಿದ ಸಂದರ್ಭದಲ್ಲಿ. ಇಟಲಿಯಲ್ಲಿ ಆ್ಯಂಟೋನಿಯೊ ಗ್ರಾಂಶಿಯು ವ್ಯಕ್ತಪಡಿಸಿದ ಸೈದ್ಧಾಂತಿಕತೆಗೆ ದಕ್ಷಿಣ ಏಷಿಯಾದ ಸಂದರ್ಭದಲ್ಲಿ ಆ ಸೈದ್ಧಾಂತಿಕತೆಗೆ ಪ್ರಖರತೆಯನ್ನು ಕೊಟ್ಟವರು ಖ್ಯಾತ ಚರಿತ್ರೆಕಾರ ರಣಜಿತ್ ಗುಹಾ ಮತ್ತು ಅವರ ಸಂಗಡಿಗರು. 'ಒಪ್ಪಿತವಾದ ಚರಿತ್ರೆಯಲ್ಲಿ' ದಾಖಲಾಗದೆ ಉಳಿದ ಕೆಳಜಾತಿ/ವರ್ಗ/ಸಮುದಾಯಗಳ ಚರಿತ್ರೆಯನ್ನು, ಈ ಗುಂಪುಗಳು ವಸಾಹತುಶಾಹಿಗೆ ಮತ್ತು ಸ್ಥಳೀಯ ಬಲಾಢ್ಯ ವರ್ಗಗಳಿಗೆ ಒಡ್ಡಿದ ಪ್ರತಿಭಟನೆ/ಪ್ರತಿರೋಧಗಳನ್ನು ಆಧರಿಸಿ, ಮೂಲೆಗೊತ್ತಲ್ಪಟ್ಟ ವ್ಯಕ್ತಿಗಳ/ಸಮುದಾಯಗಳ ಧ್ವನಿಗಳನ್ನು ಸಬಾಲ್ಟರ್ನ್ ಅಧ್ಯಯನ ಸಂಪುಟಗಳಲ್ಲಿ ಗುಹಾ ಮತ್ತು ಅವರ ಸಂಗಡಿಗರು ಅಸಾಂಪ್ರದಾಯಿಕ ರೀತಿಯಲ್ಲಿ ದಾಖಲು ಮಾಡಿದರು. ವಸಾಹತುಶಾಹಿ ಶಕ್ತಿಗಳು ಮತ್ತು ಅವಕ್ಕೆ ಪ್ರತಿಸ್ಪರ್ಧಿ ಎಂದು ಬಿಂಬಿಸಿಕೊಂಡ ಕಾಂಗ್ರೆಸ್‌ನ ಮಧ್ಯಮ ವರ್ಗದ ಹಿತಾಸಕ್ತಿಗಳು ತುಳಿತಕ್ಕೊಳಗಾದ ಸಮುದಾಯಗಳನ್ನು/ಬುಡಕಟ್ಟುಗಳನ್ನು ರಾಜಕೀಯ, ಸಾಂಸ್ಕೃತಿಕ ಕೇಂದ್ರಗಳಿಂದ ದೂರ ಇಟ್ಟ ಬಗೆಗಳನ್ನು ಅಧ್ಯಯನ ಮಾಡಲು ಸಬಾಲ್ಟರ್ನ್ ಅಧ್ಯಯನಕಾರರು ಅಧ್ಯಯನ ಕ್ರಮವೊಂದನ್ನು ರೂಪಿಸಿದರು.

### ಪ್ರಸ್ತಾವನೆ

'ಸಬಾಲ್ಟರ್ನ್' ಎನ್ನುವ ಪದವು ಯೂರೋಪ್‌ನ ಮಧ್ಯಕಾಲೀನೋತ್ತರ ಸಂದರ್ಭದಲ್ಲಿ ರೈತರನ್ನು ಗುರುತಿಸುತ್ತಿದ್ದವು. ೧೭೦೦ರ ಸಂದರ್ಭದಲ್ಲಿ ರೈತ ಮೂಲವನ್ನು ಹೊಂದಿದ್ದ ಕೆಳವರ್ಗದ ಸೈನಿಕರನ್ನು 'ಸಬಾಲ್ಟರ್ನ್' ಎಂದು ಕರೆಯಲಾಗುತ್ತಿತ್ತು. ಆ್ಯಂಟೋನಿಯೊ ಗ್ರಾಂಶಿಯು (೧೮೯೧-೧೯೩೭) ವರ್ಗ ಸಂಘರ್ಷದ ಹಿನ್ನೆಲೆಯಲ್ಲಿ ಸಬಾಲ್ಟರ್ನ್ ಐಡೆಂಟಿಟಿಯನ್ನು ಪ್ರಚಾರಪಡಿಸಿದನು. ೧೯೩೦ರ ದಶಕದಲ್ಲಿ ಕಾರಾಗೃಹದಲ್ಲಿದ್ದ ಈತ ಮಾರ್ಕ್ಸ್‌ನ ಪರಿಭಾಷೆಯಾದ 'ಪ್ರೊಲಟೇರಿಯನ್' (ಕಾರ್ಮಿಕ) ಎನ್ನುವ ಪದದ ಬದಲಿಗೆ 'ಸಬಾಲ್ಟರ್ನ್' ಎಂದು ಅಧಿಕಾರಾರೂಢ ಫ್ಯಾಸಿಸ್ಟ್ ಸರಕಾರದ ಹದ್ದಿನ ಕಣ್ಣಿನಿಂದ ಪಾರಾಗಲು ಬಳಸುತ್ತಿದ್ದನು. ಚಾರಿತ್ರಿಕ ಅಧ್ಯಯನದ ಸಂದರ್ಭದಲ್ಲಿ ಗ್ರಾಂಶಿ ಸಿದ್ಧಾಂತಗಳನ್ನು ಸಬಾಲ್ಟರ್ನ್



ಅಧ್ಯಯನಕಾರರು ಬಹಳ ವಿಮರ್ಶಾತ್ಮಕವಾಗಿ ಉಪಯೋಗಿಸಿದರು.

ಬ್ರಿಟನ್ನಿನ ಕೆಲವು ಯುವ ಇತಿಹಾಸಕಾರರ ಜೊತೆಗೂಡಿ ೧೯೭೦ರ ದಶಕದಲ್ಲಿ ಸಬಾಲ್ಟರ್ನ್ ಸ್ಟಡೀಸ್ ಸಂಪುಟಗಳ ಸ್ಥಾಪಕ ಸಂಪಾದಕ ರಣಜಿತ್ ಗುಹಾ ದಕ್ಷಿಣ ಏಷಿಯಾದ ಚರಿತ್ರೆರಚನಾಶಾಸ್ತ್ರದ ಕುರಿತು ಅನೇಕ ಹಂತಗಳಲ್ಲಿ ಚರ್ಚೆಗಳನ್ನೆತ್ತಿ ಕೊಂಡು ಒಂದು ಹೊಸಬಗೆಯ ಅಕಾಡೆಮಿಕ್ ಬೌದ್ಧಿಕತೆಗೆ ಚಾಲನೆಯನ್ನು ನೀಡಿದರು. ಮೊಹಾಹಿದ್ ಅಮಿನ್, ಡೇವಿಡ್ ಆರ್ನಾಲ್ಡ್, ಪಾರ್ಥ ಚಟರ್ಜಿ, ಡೇವಿಡ್ ಹರ್ಡಿಮನ್, ಜ್ಞಾನೇಂದ್ರ ಪಾಂಡೆ ಇವರನ್ನೊಳಗೊಂಡ ವಿದ್ವಾಂಸರ ಗುಂಪು ರಣಜಿತ್ ಗುಹಾ ಅವರ ನೇತೃತ್ವದಲ್ಲಿ ಭಾರತದ ''ಸ್ವಾತಂತ್ರ್ಯ ಹೋರಾಟದಲ್ಲಿ'' ಕೇವಲ ''ಗಣ್ಯವ್ಯಕ್ತಿಗಳ'' (ಎಲೀತ್) ಕಾಣಿಕೆಗಳನ್ನು ಮಾತ್ರ ವೈಭವೀಕರಿಸುತ್ತ ಭಾರತದ ರಾಷ್ಟ್ರೀಯ ಚರಿತ್ರೆಯನ್ನು ನಿರ್ವಚಿಸುವ ಪ್ರಯತ್ನಗಳಿಗೆ ತೀವ್ರವಾದ ಆಕ್ಷೇಪಗಳನ್ನೆತ್ತಿದರು. ಇದರಲ್ಲಿ ''ಸಾಮಾನ್ಯ ಜನರ ರಾಜಕಾರಣ''ವನ್ನು ಉಪೇಕ್ಷೆ ಮಾಡಿದ್ದರ ಬಗ್ಗೆ ಅವರು ಕ್ರೋಧವನ್ನು ವ್ಯಕ್ತಪಡಿಸಿದರು. ಒಂದರ್ಥದಲ್ಲಿ ''ಸಾಂಪ್ರದಾಯಿಕ ಮಾರ್ಕ್ಸಿಸಂ'' ಅನ್ನು ವಿಮರ್ಶಿಸುತ್ತ ಮತ್ತು ಕೇಂಬ್ರಿಡ್ಜ್ ಪಂಥದ ನಿಲುವನ್ನು ನಿರಾಕರಿಸುತ್ತಲೇ ಬೆಳೆದ ಹೊಸ ಪಂಥವನ್ನು ''ಸಬಾಲ್ಟರ್ನ್ ಸ್ಟಡೀಸ್'' ಎನ್ನಬಹುದು.

* * *

ಕೇಂಬ್ರಿಜ್ ವಿಶ್ವವಿದ್ಯಾಲಯದ ಇತಿಹಾಸಕಾರ ವಿನಾಯಕ ಚತುರ್ವೇದಿ ಅವರು ಸಬಾಲ್ಟರ್ನ್ ಸ್ಟಡೀಸ್‌ನ ಬೌದ್ಧಿಕತೆಯ ಆರಂಭಿಕ ಹಂತಗಳನ್ನು ತಮ್ಮ 'ಮ್ಯಾಪಿಂಗ್ ಸಬಾಲ್ಟರ್ನ್ ಸ್ಟಡೀಸ್ ಎಂಡ್ ದಿ ಪೋಸ್ಟ್ ಕಲೋನಿಯಲ್' ಎನ್ನುವ ಕೃತಿಯಲ್ಲಿ (೨೦೦೦) ಗುರುತಿಸಿದ್ದಾರೆ. ರಣಜಿತ್ ಗುಹಾ ಅವರಿಗೆ ಗುರುಗಳು ಮತ್ತು ಮಾರ್ಗದರ್ಶಕರಾಗಿದ್ದ ಸುಶೋಭನ್ ಸರ್ಕಾರ್ ಕೋಲ್ಕತ್ತಾದ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದವರು. ಭಾರತದ ಮಟ್ಟಿಗೆ ಸಬಾಲ್ಟರ್ನ್ ಚಿಂತನೆಗಳನ್ನು ಪರಾಮರ್ಶಿಸಲು ಪ್ರಯತ್ನಿಸಿದ ಮೊದಲನೆಯ ವಿದ್ವಾಂಸರು ಸುಶೋಭನ್ ಸರ್ಕಾರ್. 'ಎ ರೂಲ್ ಆಫ್ ಪ್ರಾಪರ್ಟಿ ಫಾರ್ ಬೆಂಗಾಲ್' (೧೯೬೩) ಎನ್ನುವ ಪುಸ್ತಕವನ್ನು ರಣಜಿತ್ ಗುಹಾ ಅವರು ಸುಶೋಭನ್ ಸರ್ಕಾರ್ ಅವರಿಗೆ ಅರ್ಪಿಸಿದ್ದು ಎಷ್ಟು ಗಮನಾರ್ಹವೋ ಅಷ್ಟೇ ಗಮನಾರ್ಹವಾದ ಸಂಗತಿ ಎಂದರೆ ಆ ಪುಸ್ತಕ[illegible] ಗ್ರಾಂಶಿಯ ಬರವಣಿಗೆಗಳನ್ನು ಪ್ರಸ್ತಾಪಿಸಿರುವ ವಿಚಾರವಾಗಿದೆ. ೧೯೫೦ರ ದಶಕ[illegible] ಪಾಶ್ಚಾತ್ಯ ಬೌದ್ಧಿಕ ಜಗತ್ತಿಗೆ ಗ್ರಾಂಶಿಯ ಪರಿಚಯ ಆಗುವುದಕ್ಕಿಂತ ಮೊದ[illegible] ಸುಶೋಭನ್ ಸರ್ಕಾರ್ ಗ್ರಾಂಶಿಯ ಕೃತಿಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿ[illegible] ವಿಚಾರ ನಮಗೆ ತಿಳಿದುಬರುತ್ತದೆ. ೧೯೫೮-೫೯ರಲ್ಲಿ ಜಾಧವಪುರ ವಿಶ್ವವಿದ್ಯಾಲಯ[illegible] ಸರ್ಕಾರ್ ಅವರ ಸಹೋದ್ಯೋಗಿಯಾದ ಗುಹಾ ಅವರು ಸರ್ಕಾರ್ ಅವರೊಂ[illegible] ಈ ಕುರಿತಂತೆ ನಿರಂತರ ಬೌದ್ಧಿಕ ಚರ್ಚೆಯಲ್ಲಿದ್ದರು. ಈ ಹಿನ್ನೆಲೆಯಲ್ಲಿ ಗು[illegible] ೧೯೬೮ರಲ್ಲಿ 'ದಿ ಥಾಟ್ ಆಫ್ ಗ್ರಾಂಶಿ' ಎನ್ನುವ ಪ್ರಕಟಣೆಯನ್ನು ಹೊರತಂದಿರುವು[illegible] ಆಶ್ಚರ್ಯವೆಂದೇನೂ ಅನ್ನಿಸು ವುದಿಲ್ಲ. ಗ್ರಾಂಶಿಯ 'ದಿ ಮಾಡರ್ನ್ ಪ್ರಿನ್ಸ್ ಅ[illegible] ಅದರ್ ಎಸ್ಸೇಸ್' (೧೯೫೭) ಎನ್ನುವ ಸಣ್ಣ ಪುಸ್ತಿಕೆಯ ಭಾಷಾಂತರವನ್ನು ಮಾಡಿ[illegible] ಸುಶೋಭನ್ ಸರ್ಕಾರ್ ಬಂಗಾಳದ ಚರಿತ್ರೆಕಾರರ ಗಮನ ಸೆಳೆದರು.

ಭಾರತದಲ್ಲಿ ನಡೆದ ಈ ಬೆಳವಣಿಗೆಗಳ ನಡುವೆಯೂ ೧೯೬೦ರ ದಶಕದ[illegible] ಇಂಗ್ಲಿಷ್ ಮಾರ್ಕ್ಸಿಸ್ಟರಿಂದ ಸಬಾಲ್ಟರ್ನ್ ಅಧ್ಯಯನವು ಬೌದ್ಧಿಕ ವಲಯಗಳ ಗಮ[illegible] ಸೆಳೆಯಿತು. ೧೯೬೦ರ ಸುಮಾರಿಗೆ ಎರಿಕ್ ಹಾಬ್ಸ್‌ಬಾಮ್ ಪ್ರಕಟಿಸಿದ ''ಪ್ರಿಮಿಟಿ[illegible] ರೆಬೆಲ್ಸ್'' (೧೯೭೧) ಎನ್ನುವ ಕೃತಿ ಹಾಗೂ ''ಸೊಸೈಟಿ'' ಎನ್ನುವ ಇಟಾಲಿಯ[illegible] ನಿಯತಕಾಲಿಕೆಯಲ್ಲಿ (೧೬, ೧೯೬೦) ಅವರು ಪ್ರಕಟಿಸಿದ ''ಹಿಸ್ಟರಿ ಆಫ್ ಸಬಾ[illegible] ಕ್ಲಾಸಸ್'' ಎನ್ನುವ ಲೇಖನಗಳು ಚರಿತ್ರೆಯಲ್ಲಿ ರೈತ ಸಮಾಜಗಳ ಅಧ್ಯಯನವ[illegible] ಕೈಗೊಳ್ಳಲು ಸ್ಫೂರ್ತಿಯಾದವು. ರಣಜಿತ್ ಗುಹಾ ೧೯೮೩ರಲ್ಲಿ ಪ್ರಕಟಿ[illegible] 'ಎಲಿಮೆಂಟರಿ ಆಸ್‌ಪೆಕ್ಟ್ಸ್ ಆಫ್ ಪೆಸೆಂಟ್ ಇನ್‌ಸರ್ಜೆನ್ಸಿ ಇನ್ ಕಲೋನಿಯ[illegible] ಇಂಡಿಯಾ' ಎನ್ನುವ ಕೃತಿ ನೇರವಾಗಿ ಹಾಬ್ಸ್‌ಬಾಮ್ ಅವರಿಂದ ಪ್ರಭಾವಿತವಾಗಿ[illegible] ೧೯೬೦ರ ದಶಕದಿಂದ ತೀರಾ ಇತ್ತೀಚಿನವರೆಗೂ ಗ್ರಾಂಶಿಯ ಸಿದ್ಧಾಂತಗಳನ್ನು ವಿಮ[illegible] ಗೊಳಪಡಿಸಿ ಇಟಲಿಯಿಂದ ಹೊರಗೆ ಈ ಚರ್ಚೆಗಳು ವ್ಯಾಪಕವಾಗಲು ಪ[illegible] ಆ್ಯಂಡರ್ಸನ್ ಮತ್ತು ಟಾಮ್ ನೇರನ್ ಮುಂತಾದವರು 'ನ್ಯೂ ಲೆಫ್ಟ್ ರಿವ್ಯೂ'ನ[illegible] ಬರೆದ ಲೇಖನಗಳು ಕಾರಣವಾದವು. ರೇಮಂಡ್ ವಿಲಿಯಮ್ಸ್ ಮತ್ತು ಸ್ಟೂವರ್ಟ್[illegible]



ರ್‌ಗಳಂತಹ ಬ್ರಿಟಿಶ್ ವಿದ್ವಾಂಸರ ಮೂಲಕ ೧೯೭೦ರ ದಶಕದಲ್ಲಿ ಗ್ರಾಂಶಿಯ ಗಳು ಚರಿತ್ರೆ ಬರವಣಿಗೆಯ ಹೊಸ ಆಯಾಮಗಳಿಗೆ ಗ್ರಾಸವನ್ನು ಒದಗಿಸಿತು. ಐರೋಪಿನ ರಾಜ್ಯವ್ಯವಸ್ಥೆಗಳ ಅಭಿವೃದ್ಧಿಯ ಸ್ವರೂಪವು ಅಸಮಾನವಾಗಿರುವ ಶಗಳನ್ನು, ವಸಾಹತುಶಾಹಿ ಭಾರತದ ಜೊತೆಗಿನ ಅವುಗಳ ಸಂಬಂಧಗಳನ್ನು, ರ್ಚಿಸುವ ಆ್ಯಂಡರ್‌ಸನ್ ಮತ್ತು ನೇರನ್ ಸಬಾಲ್ಟರ್ನ್ ಅಧ್ಯಯನಕ್ಕೆ ಹೊಸ ಪರೇಷೆಯನ್ನು ನೀಡಿದರು. ಕಾರ್ಮಿಕರ, ರೈತರ ಮತ್ತು ಸಾಮಾನ್ಯ ಜನರ ಹಾಸಿಕ ಅನುಭವಗಳನ್ನು 'ಮರು'ಕಟ್ಟುವುದರೊಂದಿಗೆ ಬ್ರಿಟಿಶ್ ಚರಿತ್ರೆಕಾರರಾದ ಇ. ಥಾಮ್ಸನ್, ಕ್ರಿಸ್ಟೋಫರ್ ಹಿಲ್ ಮತ್ತು ರೋಡ್ನಿ ಹಿಲ್ಟನ್ ಜಾಗತಿಕ ಮಟ್ಟದಲ್ಲಿ ಈ ಯ ಕ್ರಾಂತಿಕಾರಿ ಒಳನೋಟಗಳನ್ನು ಖ್ಯಾತಿಗೊಳಿಸಿದರು. ಗಣ್ಯ (ಎಲೀತ್) ದ್ವಾಂಸರು/ಚರಿತ್ರೆಕಾರರು ಕಟ್ಟಿದ ಚರಿತ್ರೆಗಿಂತ ಭಿನ್ನವಾಗಿ 'ಕೆಳಗಿನವರ ಚರಿತ್ರೆ'ಗಳನ್ನು ರತದ ವಸಾಹತುಕಾಲದ ವಿದ್ಯಮಾನಗಳನ್ನು ಗಮನದಲ್ಲಿಟ್ಟುಕೊಂಡು ಭಾರತದ ಬಾಲ್ಟರ್ನ್ ಚರಿತ್ರೆಕಾರರು ಹೊರತಂದಿದ್ದಾರೆ.

ರಣಜಿತ್ ಗುಹಾ ಅವರಿಗಿಂತ ಭಿನ್ನವಾಗಿ ಸಬಾಲ್ಟರ್ನ್ ಅಥವಾ ಕೆಳಗಿನವರ ತ್ರೆಯನ್ನು ನಿರ್ವಚಿಸಲು ಪ್ರಯತ್ನಿಸಿದವರು ರಾಬರ್ಟ್ ಬ್ರೆನರ್. ಇವರು ಪಾಳೆಗಮಾನ್ಯ ವ್ಯವಸ್ಥೆಯಿಂದ ಬಂಡವಾಳ ವ್ಯವಸ್ಥೆಗೆ ಸ್ಥಿತ್ಯಂತರ'' ಹೊಂದಿದ್ದ ದ್ಯಮಾನಗಳನ್ನು ಕುರಿತು ನಿರ್ವಚಿಸಿದ ಪ್ರಮುಖ ವಿದ್ವಾಂಸರು. ಮಾರ್ಕ್ಸಿಸ್ಟ್ ತ್ರೆಯನ್ನು ರೂಪಿಸುವಲ್ಲಿ ಸಾಂಪ್ರದಾಯಿಕವಾಗಿ ಪ್ರಭಾವಿ ಪಾತ್ರ ವಹಿಸುವ ರ್ಥಿಕ ನಿರ್ಧಾರಕತೆ'' ಬದಲು ''ಪ್ರತಿಭಟನೆ ಮತ್ತು ಹೋರಾಟಗಳ'' ಮೂಲಕ ತ್ರೆಯ ಪ್ರಕ್ರಿಯೆಗಳನ್ನು ನಿರ್ವಚಿಸಬಹುದು ಎಂದು ವ್ಯಾಖ್ಯಾನಿಸಿದವರು ಬ್ರೆನರ್. ರತದಲ್ಲಿ ಪ್ರಮುಖವಾಗಿ ಪಾರ್ಥ ಚಟರ್ಜಿಯವರು ಬ್ರೆನರ್ ಅವರ ಮಾದರಿಯನ್ನು ಸಿಸಿದ್ದು ಮಾತ್ರವಲ್ಲ, ಬ್ರೆನರ್ ಅವರ ಮಾರ್ಕ್ಸಿಸ್ಟ್ ಸೋಶಿಯಲ್ ಥಿಯರಿಯನ್ನು ಕೋ ಕೇಂದ್ರಿತ 'ಅಧಿಕಾರ'ದ ಅಂಶಗಳ ಮೂಲಕ ೧೯ ಮತ್ತು ೨೦ನೇ ಶತಮಾನದ ರತದ ಚರಿತ್ರೆಯನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದರು. ಇದು ಸಬಾಲ್ಟರ್ನ್ ಕೀಯದ ಮೂಲಭೂತ ಅಂಶವಾದ 'ಸಮುದಾಯ'ದ ಬಗ್ಗೆ ಬರೆಯಲು ಥಮಿಕವಾದ ಮಾದರಿಯಾಯಿತು.

* * *

೧೯೭೦ರ ದಶಕದ ಭಾರತದ ರಾಜಕೀಯ ಬೆಳವಣಿಗೆಗಳ ಭ್ರಮನಿರಸನವನ್ನು ಫಲಿಸುವಂತೆ ಸಬಾಲ್ಟರ್ನ್ ಅಧ್ಯಯನದ ಯೋಜನೆ ರೂಪಿತವಾಯಿತು. ಆ ಲಕ ಕ್ರಾಂತಿಕಾರಿ ಸಿದ್ಧಾಂತಗಳ ಹಾಗೂ ಜನಹೋರಾಟದ ನಡುವಿನ ಸಂಬಂಧಗಳನ್ನು ಧಿಸುವ ಸಂಶೋಧನೆಗಳು ಆರಂಭವಾದವು. ೧೯೭೦ರ ದಶಕದ ಕೊನೆಯಲ್ಲಿ ರತದ ಹೊಸ ತಲೆಮಾರಿನ ಕೆಲವು ಬುದ್ಧಿಜೀವಿಗಳು ಚೀನಾ ಹೋರಾಟದ ಪಂಥೀಯ ಧೋರಣೆಗಳಿಂದ ಪ್ರಭಾವಿತರಾದರು. ಅದು ಒಂದು ಬಗೆಯಲ್ಲಿ ಲ್ಲಿಯವರೆಗೂ ಭಾರತದ ರಾಜಕಾರಣದಲ್ಲಿ ಯಜಮಾನಿಕೆಯನ್ನು ನಡೆಸುತ್ತಿದ್ದ ಭಾರತೀಯ ಕಾಂಗ್ರೆಸ್‌ನ ಹಿತಾಸಕ್ತಿಗಳಿಗೆ ಸವಾಲಾಯಿತು. ನಕ್ಸಲ್‌ಬಾರಿಯಲ್ಲಿ ವೋವಾದಿಗಳು ನಡೆಸಿದ ಹೋರಾಟದ ನಂತರ, ಅದರಲ್ಲಿಯೂ ಪ್ರಮುಖವಾಗಿ ೧೯೭೫-೭೭ರ ಅವಧಿಯಲ್ಲಿ ಇಂದಿರಾ ಗಾಂಧಿ ಅವರ ಸರ್ವಾಧಿಕಾರಿ ಧೋರಣೆಯ ಅಭಿವ್ಯಕ್ತಿಯಾಗಿದ್ದ ತುರ್ತುಪರಿಸ್ಥಿತಿಯ ನಂತರ, ಸಬಾಲ್ಟರ್ನ್ ಅಧ್ಯಯನಗಳು ಪ್ರಭಾವಶಾಲಿಯಾಗಿ ಆರಂಭವಾದವು.

ಸ್ವಾತಂತ್ರ್ಯದ ನಂತರ ಭಾರತೀಯ ಯುವಚರಿತ್ರೆಕಾರರು ಕೇಂಬ್ರಿಜ್ ಸ್ಕೂಲಿನ ಸಿದ್ಧಾಂತಗಳ, ಮುಖ್ಯವಾಗಿ ಫ್ಯಾಕ್ಷನ್ ಥಿಯರಿ ಅಥವಾ ಜಾತಿಕೇಂದ್ರಿತ ವಾದಗಳ ಅಥವಾ ಅಮೆರಿಕನ್ ಓರಿಯಂಟಲಿಸ್ಟ್ 'ಸಮುದಾಯ' ಮತ್ತು ದಕ್ಷಿಣ ಏಷ್ಯಾದ ಚಿಂತನೆಯ ಹುಡುಕಾಟದ ಸಂಶೋಧನೆಗಳ ಭರಾಟೆಗಳಿಂದ ಬೇಸತ್ತುಹೋಗಿದ್ದರು. ಇವೆರಡು ಸೈದ್ಧಾಂತಿಕ ನೆಲೆಗಳು ಇನ್ನೂ ವಿಸ್ತಾರಗೊಳ್ಳಬೇಕೆಂದು ಈ ಯುವ ಚರಿತ್ರೆಕಾರರು ಆಶಿಸತೊಡಗಿದರು.

ತನ್ನ ವಿದ್ಯಾರ್ಥಿ ದೆಸೆಯಲ್ಲಿ ಮಾವೋಯಿಸ್ಟ್ ವಿದ್ಯಾರ್ಥಿ ಸಂಘಟನೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದ ರಣಜಿತ್ ಗುಹಾ ರಾಜಕೀಯ ವಿದ್ಯಮಾನಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಹಿಂಸಾತ್ಮಕ ಸ್ವರೂಪದ ಸಬಾಲ್ಟರ್ನ್ ಸಂವೇದನೆಗಳನ್ನು ಸಿದ್ಧಾಂತೀಕರಿಸಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ೧೯೮೨ರಲ್ಲಿ ಸಬಾಲ್ಟರ್ನ್ ಅಧ್ಯಯನ ಸಂಪುಟಗಳ ಯೋಜನೆ ಆರಂಭವಾಯಿತು. ನವದೆಹಲಿಯ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ ಸಬಾಲ್ಟರ್ನ್ ಸ್ಟಡೀಸ್‌ನ ಮೊದಲ ನಾಲ್ಕು ಸಂಪುಟಗಳನ್ನು (೧೯೮೩, ೧೯೮೪, ೧೯೮೫) ಪ್ರಕಟಿಸಿತು. ಈ ನಾಲ್ಕು ಸಂಪುಟಗಳ ಸಂಪಾದಕರು ರಣಜಿತ್ ಗುಹಾ. ೧೯ ಮತ್ತು ೨೦ನೇ ಶತಮಾನದ ಭಾರತದ 'ಕೆಳಸ್ತರದ' ಚರಿತ್ರೆಯನ್ನು ಕಟ್ಟಲು ಗುಹಾ ಅವರು ಶ್ರಮಿಸಿದರು. ಈ ಸಂಪುಟಗಳಲ್ಲಿ ಐದನೆಯದನ್ನು (೧೯೮೭) ಮತ್ತು ಆರನೆಯದನ್ನು (೧೯೮೯) ಕೂಡ ರಣಜಿತ್ ಗುಹಾ ಅವರೇ ಸಂಪಾದಿಸಿದರು. ಈ ಕೃತಿಗಳಲ್ಲಿರುವ ಲೇಖನಗಳು ಕೇವಲ ಕೆಳಸ್ತರದ ಅಧ್ಯಯನ ಮಾಡುವುದಕ್ಕೆ ಮಾತ್ರ ಮೀಸಲಾಗದೆ ಯೂರೋಪ್ ಕೇಂದ್ರಿತ ಬರವಣಿಗೆಗಳನ್ನು ಸವಾಲಿಗೊಡ್ಡಿದವು. ಇದರೊಂದಿಗೆ ಮೆಟ್ರೋಪಾಲಿಟನ್ ಮತ್ತು ಅಧಿಕಾರಿಶಾಹಿಗಳು ರೂಪಿಸಿದ ''ಜ್ಞಾನಪರಂಪರೆಗೂ'' ಸಬಾಲ್ಟರ್ನ್ ಅಧ್ಯಯನಗಳು ಸವಾಲನ್ನೊಡ್ಡಿದವು.

**ಸಬಾಲ್ಟರ್ನ್ ಅಧ್ಯಯನದ ಸ್ವರೂಪ**

ರಣಜಿತ್ ಗುಹಾ ತಮ್ಮ ೧೬ ಅಂಶಗಳ ಮೂಲಕ ಸಬಾಲ್ಟರ್ನ್ ಅಧ್ಯಯನದ ಆಶಯ ಗಳನ್ನು ವ್ಯಕ್ತಪಡಿಸಿದ್ದನ್ನು ಇಲ್ಲಿ ಗಮನಿಸಬಹುದಾಗಿದೆ. ಅವುಗಳ ವಿವರಗಳು ಹೀಗಿವೆ :

೧. ವಸಾಹತುಶಾಹಿ 'ಎಲಿಟಿಸಂ' (ಗಣ್ಯ ಉನ್ನತವರ್ಗದಿಂದ ನಿರ್ವಚಿಸಲ್ಪಟ್ಟ ಬೌದ್ಧಿಕ ತಿಳುವಳಿಕೆಯನ್ನು 'ಎಲಿಟಿಸಂ' ಎನ್ನಬಹುದು) ಮತ್ತು ಬೂರ್ಜ್ವಾ ರಾಷ್ಟ್ರೀಯ ವಾದಿ 'ಎಲಿಟಿಸಂ'ಗಳು ಭಾರತದ ರಾಷ್ಟ್ರೀಯವಾದಿ ಚರಿತ್ರೆ ಲೇಖನ ಪರಂಪರೆಯಲ್ಲಿ ಬಹಳ ಪ್ರಧಾನವಾಗಿರುವ ಮತ್ತು ಪ್ರಭಾವಶಾಲಿಯಾಗಿರುವ 'ಎಲಿಟಿಸಂ'ಗಳು.

'ಎಲೀತ್' ಎನ್ನುವ ಪದವು ಪ್ರಾಬಲ್ಯದಲ್ಲಿದ್ದ ಗುಂಪುಗಳನ್ನು ಸಂಕೇತಿಸುತ್ತದೆ. ವಿದೇಶಿ ಹಾಗೂ ದೇಸಿ ಗುಂಪುಗಳು ಇವುಗಳಲ್ಲಿ ಮುಖ್ಯವಾದವು. ಬ್ರಿಟಿಶ್ ವಸಾಹತು ಕಾಲದ ಎಲ್ಲ ಭಾರತೀಯೇತರ ಬ್ರಿಟಿಶ್ ಅಧಿಕಾರಿಗಳು, ವಿದೇಶಿ ಕೈಗಾರಿಕೋದ್ಯಮಿ ಗಳು, ವಾಣಿಜ್ಯೋದ್ಯಮಿಗಳು, ಪ್ಲಾಂಟರ್‌ಗಳು, ಭೂ ಒಡೆಯರು ಮತ್ತು ಮಿಶನರಿಗಳು ವಿದೇಶಿ ಪ್ರಾಬಲ್ಯದ ಗುಂಪಿನ ಒಳಗೆ ಬರುತ್ತಾರೆ. ದೇಸಿ ಪ್ರಾಬಲ್ಯದ ಗುಂಪುಗಳಲ್ಲಿ ಅಖಿಲ ಭಾರತದ ಮಟ್ಟದಲ್ಲಿ ಕಂಡುಬರುವ ಮೊದಲ ಗುಂಪು ಬಹುದೊಡ್ಡ ಫ್ಯೂಡಲ್‌ಗಳನ್ನು, ಕೈಗಾರಿಕಾ ಹಾಗೂ ವಾಣಿಜ್ಯೋದ್ಯಮದ ಬೂರ್ಜ್ವಾಗಳನ್ನು ಮತ್ತು ಬ್ರಿಟಿಶ್ ಅಧಿಕಾರಶಾಹಿಯ ಉನ್ನತ ಮಟ್ಟದಲ್ಲಿ ಕೆಲಸ ನಿರ್ವಹಿಸುತ್ತಿದ್ದ ಸ್ಥಳೀಯರನ್ನು ಒಳಗೊಂಡಿದೆ. ಈ ಗುಂಪುಗಳು ತಮ್ಮ ಹಿತಕ್ಕಿಂತ ಅಖಿಲ ಭಾರತೀಯ ಮಟ್ಟದಲ್ಲಿ ಪ್ರಭಾವಿಯಾಗಿದ್ದ ಸಾಮಾಜಿಕವಾಗಿ ಪ್ರತಿಷ್ಠಿತ ರಾಗಿರುವವರ ಹಿತಾಸಕ್ತಿಗಳನ್ನು ಕಾಯುವ ಕಾಯಕವನ್ನು ಮಾಡುತ್ತಿದ್ದವು. ದೇಸಿ ಎಲೀತ್ ಗುಂಪಿಗೆ ಈ ಬಗೆಯ ಗುಂಪುಗಳೂ ಸೇರ್ಪಡೆ ಹೊಂದಿವೆ.

ದೇಸಿ ಎಲೀತ್ ವರ್ಗಗಳು ಬಹುರೂಪಿಗಳಾಗಿವೆ. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಪ್ರಾದೇಶಿಕ, ಆರ್ಥಿಕ ಹಾಗೂ ಅಭಿವೃದ್ಧಿ ಹಿನ್ನೆಲೆಯಲ್ಲಿ ವ್ಯತ್ಯಾಸಗಳಿರುವುದ ರಿಂದ ಈ ವರ್ಗಗಳ ಸ್ವರೂಪ ಕೂಡ ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಿರುತ್ತದೆ. ಒಂದು ಸ್ಥಳದಲ್ಲಿ ದೇಸಿ ಎಲೀತ್‌ಗಳ ಕೆಲವು ಗುಂಪುಗಳು ಶೋಷಣೆಗೆ ಒಳಪಟ್ಟರೆ, ಇನ್ನೊಂದು ಸ್ಥಳದಲ್ಲಿ ದೇಸಿ ಎಲೀತ್‌ಗಳೇ ಶೋಷಕರಾಗಿರುವುದು ಕಂಡುಬರುತ್ತದೆ. ಈ ಎರಡೂ ಬಗೆಯ ಎಲಿಟಿಸಂಗಳು ಭಾರತದ ವಸಾಹತುಕಾಲದ ಬಹಳ ಮುಖ್ಯವಾದ ಸೈದ್ಧಾಂತಿಕ ಉತ್ಪನ್ನವಾಗಿದೆ. ವಸಾಹತೋತ್ತರ ಕಾಲದಲ್ಲಿ ಬ್ರಿಟನ್

ಮತ್ತು ಭಾರತದಲ್ಲಿ ಕೂಡ ಇವು 'ನವವಸಾಹತುಶಾಹಿ' ಮತ್ತು 'ನವರಾಷ್ಟ್ರೀಯ... ವಾಙ್ಮಯಗಳಾಗಿ ಮುಂದುವರಿದವು.

೨. ಭಾರತ ದೇಶವನ್ನು ಕಟ್ಟುವಲ್ಲಿ ಮತ್ತು ಭಾರತೀಯ ರಾಷ್ಟ್ರೀಯ ಸಂವೇದನೆ... ಬೆಳವಣಿಗೆಯಲ್ಲಿ ವಸಾಹತುಶಾಹಿ ಹಾಗೂ ಬೂರ್ಜ್ವಾ ಎಲಿಟಿಸಂಗಳಿಂದ ರೂಪಿಸ... ಪೂರ್ವಗ್ರಹಗಳ ಪಾತ್ರ ಮಹತ್ವದ್ದಾಗಿದೆ. ಒಂದು ರೀತಿಯಲ್ಲಿ ಈ ಬಗೆ... ರಾಷ್ಟ್ರೀಯತೆಯ ಪ್ರಕ್ರಿಯೆಯು ಮೂಲಭೂತವಾಗಿ ಎಲೀತ್‌ಗಳ ಸಾಧನೆಗಳು ... ಬಿಂಬಿಸಲ್ಪಟ್ಟವು. ವಸಾಹತುಶಾಹಿ ಮತ್ತು ನವವಸಾಹತುಶಾಹಿ ಚರಿತ್ರೆ ಬರವಣಿಗೆಗ... ಬ್ರಿಟಿಶ್ ಆಳರಸರ, ಆಡಳಿತಗಾರರ, ಬ್ರಿಟಿಶ್ ನಿಯಮಗಳ, ಸಂಸ್ಥೆಗಳ ಮ... ಸಂಸ್ಕೃತಿಗಳ ಸಾಧನೆಗಳನ್ನು ಈ ಮೂಲಕ ಬಿಂಬಿಸಿದವು. ಅದೇ ರೀತಿ... ರಾಷ್ಟ್ರೀಯವಾದಿ ಮತ್ತು ನವರಾಷ್ಟ್ರೀಯವಾದಿ ಬರವಣಿಗೆಗಳು ಭಾರತದ ಉಚ್ಚವರ್ಗ... ವ್ಯಕ್ತಿಗಳನ್ನು, ಸಂಸ್ಥೆಗಳನ್ನು, ಕಾರ್ಯ ಚಟುವಟಿಕೆಗಳನ್ನು ಮತ್ತು ಬೌದ್ಧಿಕತೆಯ... ಭಾರತದ ಚರಿತ್ರೆಯೆಂದು ಮತ್ತು ಅದನ್ನೇ ಭಾರತದ ರಾಷ್ಟ್ರೀಯತೆ ಎಂದು ಬಿಂಬಿಸಿದ...

೩. ವಸಾಹತುಶಾಹಿ ಮತ್ತು ಬೂರ್ಜ್ವಾ ರಾಷ್ಟ್ರೀಯವಾದಿ ಎಲಿಟಿಸಂಗ... ಭಾರತೀಯ ರಾಷ್ಟ್ರೀಯತೆಯನ್ನು ಮುಖ್ಯವಾಗಿ ಉತ್ತೇಜಿಸುವ ಮತ್ತು ಪ್ರತಿಕ್ರಿಯಿಸ... ಪ್ರಕ್ರಿಯೆಗಳಿಗೆ ಮೀಸಲಿರಿಸಿವೆ. ವಸಾಹತುಶಾಹಿತ್ವವು ಕಟ್ಟಿಕೊಟ್ಟ ಸಂಸ್ಥೆಗ... ಅವಕಾಶಗಳು, ಸಂಪನ್ಮೂಲಗಳು ಇತ್ಯಾದಿಗಳಿಗೆ ಸ್ಪಂದಿಸಿದ ಭಾರತೀಯ 'ಎಲೀತ್'... ಚಟುವಟಿಕೆಗಳನ್ನು ರಾಷ್ಟ್ರೀಯತೆ ಎಂದು ಬಿಂಬಿಸಲಾಯಿತು. ಭಾರತೀ... ರಾಷ್ಟ್ರೀಯತೆಯನ್ನು ಕಲಿಯುವ ಪ್ರಕ್ರಿಯೆಯನ್ನಾಗಿ ಮಾಡಿಕೊಂಡ ಸ್ಥಳೀ... ಎಲೀತ್‌ಗಳು ವಸಾಹತುಶಾಹಿಗಳು, ಭಾರತವನ್ನು ಆಳಲು ಹುಟ್ಟುಹಾಕಿದ ಆಡ... ಕ್ರಮಗಳಿಗೆ ಪ್ರತಿಸ್ಪಂದಿಸುತ್ತ ಅಥವಾ ಪ್ರತಿಕ್ರಿಯಿಸುತ್ತ ಇದ್ದ ಪ್ರಕ್ರಿಯೆಯ... ಗಮನಿಸಬಹುದು. ಅಂತಿಮವಾಗಿ, ಆಡಳಿತಾರೂಢ ಶಕ್ತಿಗಳ ಮತ್ತು ಸ್ಥಳೀ... ಎಲೀತ್‌ಗಳ ನಡುವೆ ನಡೆದ ಸಹಭಾಗಿತ್ವ ಹಾಗೂ ಸ್ಪರ್ಧೆಗಳು ಭಾರತೀ... ರಾಷ್ಟ್ರೀಯತ್ವವನ್ನು ಹುಟ್ಟುಹಾಕಿದವು ಎಂದು ಬಿಂಬಿಸಿರುವುದನ್ನು ಗಮನಿಸಬಹುದು...

೪. ಆದರ್ಶಮಯ ಕಾರ್ಯ ಚಟುವಟಿಕೆಯ ಭಾಗವೆಂದು ಭಾರತೀ... ರಾಷ್ಟ್ರೀಯತೆಯನ್ನು ನಿರ್ವಚಿಸಿದ ಎಲಿಟಿಸ್ಟ್ ಇತಿಹಾಸ ಬರವಣಿಗೆ ಕ್ರಮವು ಸ್ಥಳೀ... ಎಲೀತ್‌ಗಳು ಜನರನ್ನು ದಾಸ್ಯದಿಂದ ಸ್ವಾತಂತ್ರ್ಯದೆಡೆಗೆ ಕೊಂಡೊಯ್ಯು... ಸಾಧನವೆಂದು ಅದನ್ನು ಬಿಂಬಿಸಿರುವ ಪ್ರಯತ್ನಗಳನ್ನು ನೋಡಬಹುದು. ಅನ... ನಾಯಕರು ಅಥವಾ ಉಚ್ಚ ವರ್ಗದ ಸಂಸ್ಥೆಗಳು ಅಥವಾ ಸಂಘಟನೆಗಳು ... ದಿಸೆಯಲ್ಲಿ ಪ್ರಧಾನ ಪಾತ್ರಗಳನ್ನು ವಹಿಸಿದವು. ವಸಾಹತು ವಿರೋಧಿ ನೆಲೆ... ಸ್ವರೂಪದ ಹಿನ್ನೆಲೆಯಲ್ಲಿ ಸ್ಥಳೀಯ ಎಲೀತ್‌ಗಳು/ಉಚ್ಚ ವರ್ಗಗಳು ಭಾರತೀ... ರಾಷ್ಟ್ರೀಯ ಹೋರಾಟಗಳ ವಕ್ತಾರರಾದರು. ಈ ಸಂದರ್ಭಗಳಲ್ಲೆಲ್ಲ ಸ್ಥಳೀ... ಎಲೀತ್‌ಗಳು ಬ್ರಿಟಿಶ್ ಆಡಳಿತಶಾಹಿಯೊಂದಿಗೆ ಇಟ್ಟುಕೊಂಡಿದ್ದ ಸಹಭಾಗಿತ್ವ... ಅಂಶಗಳನ್ನು ಮರೆಮಾಚಲಾಯಿತು. ಸ್ಥಳೀಯ ಉಚ್ಚವರ್ಗಗಳ ಶೋಷಕರ ಮ... ದಮನಕರ ಪರವಾದ ವಿಚಾರಧಾರೆಗಳನ್ನು ಇವು ಜನವರ್ಗದ ಹಿತಾಸಕ್ತಿಗಾ... ಹೋರಾಟ ಮಾಡುತ್ತವೆ ಎಂಬ ರೀತಿಯಲ್ಲಿ ಭಾರತೀಯ ರಾಷ್ಟ್ರೀಯ ಹೋರಾಟ... ಬಿಂಬಿಸಿವೆ. ಈ ರೀತಿಯಲ್ಲಿ ಭಾರತೀಯ ಎಲೀತ್‌ಗಳಿಂದ ರೂಪಿತವಾದ ಈ ಬಗೆ... ಚಟುವಟಿಕೆಗಳನ್ನೇ ಭಾರತ ರಾಷ್ಟ್ರೀಯತೆಯ ಚರಿತ್ರೆ ಎಂದು ಕರೆಯಲಾಯಿತು.

೫. ಎಲಿಟಿಸ್ಟ್ ಚರಿತ್ರೆ ಬರವಣಿಗೆ ಕ್ರಮಗಳಿಂದ ಕೂಡ ಅನೇಕ ಉಪಯೋ... ಗಳಾಗಿವೆ. ವಸಾಹತು ರಾಜ್ಯದ ಬುನಾದಿಯ ಬಗ್ಗೆ, ಕೆಲವು ನಿರ್ದಿಷ್ಟ ಐತಿಹಾ... ಸನ್ನಿವೇಶಗಳಲ್ಲಿ ಅದು ಹೇಗೆ ತನ್ನ ವಿವಿಧ ಘಟಕಗಳ ಮೂಲಕ ಕೆ... ಮಾಡುತ್ತಿತ್ತೆಂಬುದರ ವಿವರಗಳ ಬಗ್ಗೆ, ಉಚ್ಚವರ್ಗಗಳ ಸಂಸ್ಥೆಗಳಲ್ಲಿದ್ದ ಬ್ರಿಟಿ... ಮತ್ತು ಭಾರತೀಯ ವ್ಯಕ್ತಿತ್ವಗಳ ಬಗ್ಗೆ ಮತ್ತು ಎಲೀತ್ ಸಂಘಟನೆಗಳ ಬಗ್ಗೆ ಎಲಿಟಿ... ಚರಿತ್ರೆ ಬರವಣಿಗೆಯಲ್ಲಿ ಸಾಕಷ್ಟು ವಿವರಗಳು ದೊರಕುತ್ತಿವೆ.

೬. ಇಷ್ಟೆಲ್ಲ ಆದರೂ ಈ ಬಗೆಯ ಚರಿತ್ರೆ ಬರವಣಿಗೆಗಳು ಭಾರತದ ರಾಷ್ಟ್ರೀಯ... ಯನ್ನು ವಿವರಿಸಲು ಶಕ್ಯವಾಗುವುದಿಲ್ಲ. ಈ ಬಗೆಯ ಚರಿತ್ರೆ ಬರವಣಿಗೆಗಳು ... ಹೋರಾಟಗಳ ಅಭಿವ್ಯಕ್ತತೆಯನ್ನು ದಾಖಲಿಸಲು ವಿಫಲವಾಗಿವೆ. ಈ ಬಗೆ... ಜನರ-ಜನಸಾಮಾನ್ಯರ ಅಭಿವ್ಯಕ್ತಿಯನ್ನು ಎಲಿಟಿಸ್ಟ್ ಚರಿತ್ರೆ ಬರವಣಿಗೆಗ... ''ಕಾನೂನು ಮತ್ತು ಸುವ್ಯವಸ್ಥೆಯ'' ಭಾಗವಾಗಿ ನೋಡಿ ನೆಗೆಟಿವ್ ಅಪ್ರೋ... ಮಾಡಿದ್ದೇ ಹೆಚ್ಚು. ಕೆಲವೊಮ್ಮೆ ಇವುಗಳನ್ನು ಸಕಾರಾತ್ಮಕವಾಗಿ ವಿಮರ್ಶಿಸಿದ... ಇವುಗಳನ್ನು ಉಚ್ಚವರ್ಗಗಳ ನಾಯಕರ ಕರಿಷ್ಮಾ ಪ್ರಭಾವಕ್ಕೊಳಗಾದ ಅಥ...



# ಇರುವೆ ದಾಸಯ್ಯ

ನಮ್ಮೂರಿನೊಳಗೊಬ್ಬ ದಾಸಯ್ಯನಿದ್ದ
ಸಕ್ಕರೆಯ ಭಿಕ್ಷೆಯನು ಬೇಡುತಿದ್ದ
ಒಂದು ಹರಳೂ ಬಾಯಿಗ್ಹಾಕದಂತೆ
ಇರಿವಿಗಾ ಸಕ್ಕರೆಯ ಹರವುತಿದ್ದ

ಅವ ಹೊರಟ ದಾರಿಯಲಿ ಇರುವೆಯಾ ಮೆರವಣಿಗೆ
ನಿಂತ ನೆಲವೆಲ್ಲಾ ಇರಬಸ್ಥಾನ
ಒರಗಿದರೆ ಹರಿಹರಿದು ಎರಗುವವು ಮೈತುಂಬ
ಇರುವೆಯಾ ಅರಿವೆಯಾ ಧರಿಸಿದಂತೆ

ಇರುವೆ ಸಕ್ಕರೆ ಮೇವ ಸದ್ದ ಕೇಳಿಸಿಕೊಂಡು
ಹೊಟ್ಟೆತುಂಬಿದ ಹಾಗೆ ತೇಗುತಿದ್ದ
ಇರುವೆಯಾ ಹೆಜ್ಜೆಯಾ ಸಪ್ಪಳದ ಲಯದಲ್ಲಿ
ಉಸಿರ ಹಾಕುತ್ತ ಲಯವಾಗುತಿದ್ದ

ಹಾರವರ ಕೇರಿಯಲಿ ಒಕ್ಕಲಿಗರೋಣಿಯಲಿ
ಹೊಲಗೇರಿ ಮತ್ತೆ ಮುಸಲರೋಣಿಯಲಿ
ಹದಿನೆಂಟು ದೇವರ ಪರುಸೆಯಲಿ ಉರುಸಿನಲಿ
ಸಕ್ಕರೆಯ ಚೆಲ್ಲುತ್ತ ಕುಣಿಯುತಿದ್ದ

ಇರುವೆಯೊಂದರ ಕಾಲು ಮುರಿದರೆ ದಾಸಯ್ಯ
ಅಂಗೈಲಿ ಆಡಿಸುತ ಕಟ್ಟುತ್ತಿದ್ದ
ಸತ್ತ ಇರುವೆಗಳ ಕಣ್ಣೀರಿನಲಿ ಮೀಯಿಸುತ
ಎದೆಯಲ್ಲಿ ಗೋರಿಗಳ ಕಟ್ಟುತ್ತಿದ್ದ

ಎಲ್ಲಾ ಸಕ್ಕರೆಯು ತನಗೇ ಬೇಕೆಂಬ
ಆಸೆಬುರುಕಿರುವಿಗಳ ಕಿವಿ ಹಿಂಡುತಿದ್ದ
ಕಂಡಕಂಡವರ ಮೇಲೇರೇರಿ ಹೋಗುವ
ಪುಂಡ ಇರುವೆಗಳ ಬಾಲ ಕತ್ತರಿಸುತಿದ್ದ

ಇರುವೆಗಳ ಸಾಲಿನಲಿ ಅರಿವು ಮೂಡಿದ ಹಾಗೆ
ದಾಸಯ್ಯನ ಮೊಗದಲ್ಲಿ ಬುದ್ಧನಗೆಯು

ಇರುವೆಗಳ ನಡುವೆಯೇ ಅರುಹಂತನಾದಂತೆ
ಪ್ರವಾದಿ ನಡೆಯಲ್ಲಿ ಅಲ್ಲಮನ ಬಗೆಯು

ಇರುವೆ ದಾಸಯ್ಯ ಸಕ್ಕರೆಯ ದಾಸಯ್ಯ
ಮರುಳ ದಾಸಯ್ಯ ಮೌನಿ ದಾಸಯ್ಯ
ಮನೆಮನೆಯ ಅಂಗಳದಿ ಸಕ್ಕರೆಯ ಹರಳಾಗಿ
ಉರುಳುತ್ತ ಇರುವೆಗಳ ಹಂತಿ ಹೂಡಿದ್ದ

ಇತ್ತೀಚೆಗೊಂದು ದಿನ ಸಕ್ಕರೆಯ ಬೇಡುತ್ತ
ದಾಸಯ್ಯ ಊರೆಲ್ಲ ಸುತ್ತುವಾಗ
ಜನಮನವ ಹರಗುತ್ತ ಎದೆಗದ್ದೆಯಲ್ಲಿ
ಬಯಲಗಬ್ಬಿನ ಬೀಜ ಬಿತ್ತುವಾಗ

ಮುಸಲರೋಣಿಗೆ ಯಾಕೆ ಹೋಗುವೀ ದಾಸಯ್ಯ
ಅಂತ ಯಾರೋ ಅವನ ಕೇಳಬೇಕೇ ?
ಮಾರನೆಯ ದಿವಸ ಮುಸಲಗೇರಿಯಲ್ಲಿ
ದಾಸಯ್ಯ ನಮ್ಮವನಲ್ಲವೆನ್ನಬೇಕೇ ?

ಲಿಂಗಾಯತರೋಣಿಯಲಿ 'ಇವನಾರವ ?' ಎಂಬ
ಪ್ರಶ್ನೆ ಅಡ್ಡಡ್ಡ ಬೆಳೆಯಬೇಕೇ ?
ಹಾರವರ ಕೇರಿಯಲಿ ಹೊಲೆಯನಿರಬೇಕೆಂಬ
ಸಂಶಯದ ಬೀಜವು ಮೊಳೆಯಬೇಕೇ ?

ಊರ ಹೊರಗೆ ಮೂರು ದಾರಿ ಸೇರುವಲ್ಲಿ
ಇರುವೆಗಳ ಹೆಣದ ರಾಶಿ ಬಿದ್ದಿತ್ತು
ಸರಿಸಿ ನೋಡಿದರಾ ರಾಶಿಯೊಳಗಡೆಗೆ
ಇರುವೆ ದಾಸಯ್ಯನ ಹೆಣವು ಬಿದ್ದಿತ್ತು

ಕೇರಿಕೇರಿಗಳಿಂದ ಇರುವೆ ಹಿಂಡುಗಳಾಗಿ
ಹರಿಹರಿದು ಬಂದಿತು, ಊರ ಜನಾ
ಏರೇರಿ ಮುತ್ತಿಮುತ್ತಿ ಹರಿಹರಿದು ಒಂದಗಳು
ಬಿಡದಂತೆ ತಿಂದಿತ್ತು ಸಿದ್ಧನ ಹೆಣಾ.

**ಎಂ. ಡಿ. ಒಕ್ಕುಂದ**
'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ - ೫೮೦ ೦೦೩

ಕ್ರಿಯೆ ನೀಡಿದ ಗುಂಪುಗಳು ಎಂದು ವಿವರಿಸಲು ಮಾತ್ರ ಬಳಸಿಕೊಳ್ಳಲಾಯಿತು. ಗಾಗಿ ಸಹಸ್ರಾರು, ಲಕ್ಷಾಂತರ ಜನರು ಅನೇಕ ಬಾರಿ ಬೇರೆ ಬೇರೆ ಕಾರಣಗಳಿಗಾಗಿ ಘಟನೆ ಮಾಡಿದ ಅಂಶಗಳನ್ನು ಜನರ ದೃಷ್ಟಿಕೋನದಲ್ಲಿ ವ್ಯಾಖ್ಯಾನಿಸದೆ ಷ್ಟವರ್ಗದ ಎಲೀತ್ ಹಿತಾಸಕ್ತಿಯ ಹಿನ್ನೆಲೆಯಲ್ಲಿ ನಿರ್ವಚಿಸಲಾಯಿತು. ೧೯೧೯ರಲ್ಲಿ ಲಟ್ ಕಾಯಿದೆ ವಿರೋಧಿ ಹೋರಾಟದಲ್ಲಿ ಮತ್ತು ೧೯೪೨ರಲ್ಲಿ ನಡೆದ ಕ್ವಿಟ್ ತಿಯಾ ಚಳವಳಿಯಲ್ಲಿ ಲಕ್ಷಾಂತರ ಜನರು ಭಾಗವಹಿಸಿದ ಹೋರಾಟವು ಟೇನಿಯಸ್ ಆಗಿ, ಯಾವುದೇ ಎಲೀತ್ ನಾಯಕರಿಲ್ಲದೆ ಹೊರಹೊಮ್ಮಿದ ರಗಳನ್ನು ಎಲಿಟಿಸ್ಟ್ ಚರಿತ್ರೆ ಬರವಣಿಗೆಗಳು ದಾಖಲು ಮಾಡಲು ಸೋತಿವೆ. ಈ ಯ ಏಕಪಕ್ಷೀಯ ಚರಿತ್ರೆ ಬರವಣಿಗೆಗಳು ಎಲಿಟಿಸ್ಟ್ ರಾಜಕೀಯದ ಕೆಳಗೇ ದ ಚೌರಿಚೌರಾ ಘಟನೆಗಳ ಅಥವಾ ರಾಯಲ್ ಇಂಡಿಯನ್ ನೇವಿಯು ಸಿದ ದಂಗೆಗಳನ್ನು ಅಥವಾ ಆ ಬಗೆಯ ಪ್ರತಿರೋಧಕ್ಕೆ ಸಂಬಂಧಿಸಿದ ನೆಗಳನ್ನು ವಿವರಿಸಲು ವಿಫಲವಾಗಿವೆ.

೭. ಎಲಿಟಿಸ್ಟ್ ಚರಿತ್ರೆ ಬರವಣಿಗೆ ಕ್ರಮವು ಬಹಳ ಮಟ್ಟಿಗೆ ನೆಚ್ಚಿಕೊಂಡಿರುವ ವರ್ಗಾಧಾರಿತ ನೋಟವೇ ಅದರ ಆ ಕ್ರಮದ ವಿಫಲತೆಗೆ ಕಾರಣವಾಯಿತು. ಬ್ರಿಟಿಶರು ಭಾರತದ ಆಡಳಿತ ವ್ಯವಸ್ಥೆಗೆ ಅನುಕೂಲವಾಗಲೆಂದು ರೂಪಿಸಿದ ಕಾನೂನುಗಳು, ನಿಯಮಗಳು ಮತ್ತು ಸಂಸ್ಥೆಗಳು ಹಾಗೂ ಅದಕ್ಕೆ ಸ್ಪಂದಿಸಿದ ಸ್ಥಳೀಯವಾದ ಪ್ರಬಲ ಸಮಾಜಗಳ ಚಟುವಟಿಕೆಗಳನ್ನೇ ಭಾರತದ ರಾಜಕೀಯ ಸ್ಥಿತ್ಯಂತರಗಳನ್ನು ಅಳೆಯುವ ಮಾಪನವನ್ನಾಗಿ ಎಲಿಟಿಸ್ಟ್ ಚರಿತ್ರೆ ಬರವಣಿಗೆ ರೂಪಿಸಿರುವುದು ಚರಿತ್ರೆ ಬರವಣಿಗೆ ಕ್ರಮದ ಮುಖ್ಯ ದೋಷವಾಗಿದೆ. ಬ್ರಿಟಿಶ್ ಆಡಳಿತಗಾರರಿಗೆ ಮತ್ತು ಅವರು ರೂಪಿಸಿರುವ ವ್ಯವಸ್ಥೆಗೆ ಪ್ರತಿಕ್ರಿಯಿಸಿದ ಸ್ಥಳೀಯ ಎಲೀತ್‌ಗಳ ಪರಸ್ಪರ ವ್ಯವಹಾರಗಳನ್ನು ಮತ್ತು ಸಂಬಂಧಗಳನ್ನು ಭಾರತದ ರಾಷ್ಟ್ರೀಯತೆಯ ಮಜಲೆಂದು ಬಿಂಬಿಸಿರುವುದನ್ನು ಗಮನಿಸಬಹುದು.

೮. 'ಜನತೆಯ ರಾಜಕೀಯ' ಎನ್ನುವ ವಿಚಾರದ ಮೇಲೆ ಎಲಿಟಿಸ್ಟ್ ಚರಿತ್ರೆ ಬರವಣಿಗೆ ಕ್ರಮವು ರೂಪಿಸಿದ ಅಚಾರಿತ್ರಿಕ ಇತಿಹಾಸ ಬರವಣಿಗೆ ಕ್ರಮವನ್ನು ಇಲ್ಲಿ ಗಮನಿಸ ಬಹುದಾಗಿದೆ. ಭಾರತದ ಎಲೀತ್ ಅಥವಾ ಸ್ಥಳೀಯ ಪ್ರಬಲ ಉಚ್ಚ ಸಮುದಾಯಗಳು ರೂಪಿಸಿದ ಅಥವಾ ವಸಾಹತುಶಾಹಿಗಳು ರೂಪಿಸಿದ ವ್ಯವಸ್ಥೆಯ ರಾಜಕಾರಣಕ್ಕೆ

ಸಮಾನಾಂತರವಾದ ರಾಜಕೀಯವನ್ನು ಪಟ್ಟಣ ಮತ್ತು ಗ್ರಾಮಗಳಲ್ಲಿನ ಸಬಾಲ್ಟರ್ನ್ ವರ್ಗಗಳು, ಮೂಲೆಗೊತ್ತಲ್ಪಟ್ಟ ವರ್ಗಗಳ ಜನಸಾಮಾನ್ಯರು ವಸಾಹತು ಕಾಲದುದ್ದಕ್ಕೂ ಮಾಡಿರುವುದನ್ನು ನಾವು ಗಮನಿಸಬಹುದು. ಈ ಬಗೆಯ ಸಮಾನಾಂತರ ರಾಜಕೀಯದ ಕೇಂದ್ರಬಿಂದುವೇ ಜನರು. 'ಜನರೇ' ಕೇಂದ್ರಬಿಂದುವಾಗಿರುವ ಈ ಸ್ವಾಯತ್ತ ವಲಯ ಎಲೀತ್ ರಾಜಕೀಯದ ಉತ್ಪನ್ನವೂ ಅಲ್ಲ ಅಥವಾ ಆ ರಾಜಕೀಯದ ಪರಾವಲಂಬಿಯೂ ಆಗಿಲ್ಲ. ಸಾಂಪ್ರದಾಯಿಕ ಮೂಲಗಳನ್ನು ಹೊಂದಿದ ಸಬಾಲ್ಟರ್ನ್ ವರ್ಗಗಳ ಚಲನಶೀಲತೆಯನ್ನು ವಸಾಹತುಪೂರ್ವ ಕಾಲ ಘಟ್ಟದಿಂದ ಗುರುತಿಸಬಹುದು. ಹಾಗೆಂದ ಮಾತ್ರಕ್ಕೆ ಇದು ಯಾವುದೋ ಬಗೆಯ ಅರಾಜಕತೆಯ ಅಭಿವ್ಯಕ್ತಿಯೂ ಅಲ್ಲ. ವಸಾಹತುಶಾಹಿಯ ಆಳ್ವಿಕೆಯ ನಂತರ ಅಸ್ತಿತ್ವ ಕಳೆದುಕೊಂಡ ಸಾಂಪ್ರದಾಯಿಕ ಎಲೀತ್‌ಗಳಿಗಿಂತ ತಮ್ಮ ಚಹರೆಯನ್ನು ವಸಾಹತು ಕಾಲದಲ್ಲಿಯೂ ಭದ್ರವಾಗಿಟ್ಟುಕೊಂಡ ಜನವರ್ಗ ಇದು. ಸಾಂಪ್ರದಾಯಿಕ ಎಲಿಟಿಸ್ಟರು ವಸಾಹತು ಕಾಲದ ವ್ಯವಸ್ಥೆಯೊಂದಿಗೆ ಮಾಡಿಕೊಂಡ ಹೊಂದಾಣಿಕೆಯನ್ನು ಭಾರತದ ಈ ಜನವರ್ಗವು ಮಾಡಿಕೊಳ್ಳದೆ ನಿರಂತರವಾಗಿ ತನ್ನ ಅಸ್ತಿತ್ವವನ್ನು ಈ ವರ್ಗವು ಕಾಯ್ದುಕೊಂಡಿತು.

೯. 'ಜನವರ್ಗದ' ಮುಖ್ಯ ಗುಣಲಕ್ಷಣವೆಂದರೆ ಜನ ಸಮೂಹದ ಸಂಘಟನೆ. ಎಲಿಟಿಸ್ಟ್ ಚರಿತ್ರೆ ಬರವಣಿಗೆಗಳು ಇದರ ಬಗ್ಗೆ ಹೇಳಿದ್ದು ಕಡಿಮೆ. ಎಲೀತ್ ರಾಜಕೀಯದ ಭಾಗವಾಗಿ ಕೂಡ ಜನವರ್ಗದ ಭಾಗವಹಿಸುವಿಕೆ ಇದ್ದರೂ ಅದು ಬಹುತೇಕವಾಗಿ ವಸಾಹತುಶಾಹಿ ಕಟ್ಟಿಕೊಟ್ಟ ಭೂಮಿಕೆಯಡಿಯಲ್ಲಿ ಎನ್ನುವುದನ್ನು ಇಲ್ಲಿ ಗಮನಿಸಬೇಕು. ಬ್ರಿಟಿಶ್ ಪಾರ್ಲಿಮೆಂಟರಿ ವ್ಯವಸ್ಥೆಯು ರೂಪಿಸಿದ ಅಂಶಗಳಲ್ಲಿ ಕಂಡುಕೊಂಡ ಜನಸಮೂಹದ ಅಂಶವಿದು. ಸಬಾಲ್ಟರ್ನ್ ಅಥವಾ ಕೆಳವರ್ಗದ ಸಮುದಾಯದ ಜನಸಮೂಹವು ಬಹುತೇಕವಾಗಿ ರಕ್ತಸಂಬಂಧಿ ಮೂಲದವು. ಕೆಲವೊಮ್ಮೆ ಅದು ನಿರ್ದಿಷ್ಟ ಪ್ರದೇಶದ ಅಥವಾ ವರ್ಗ ಸಂಬಂಧಿ ಸಂಘಟನೆಗಳ ಮೂಲವನ್ನೂ ಹೊಂದಿರುತ್ತಿದ್ದವು. ಕಾನೂನಿನ ಪರಿಧಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಮತ್ತು ಸಂವಿಧಾನದ ಮಿತಿಯಲ್ಲಿರುವ ಎಲೀತ್ ರಾಜಕೀಯದ ಜನಹೋರಾಟದ ರಾಜಕೀಯವನ್ನು ನೋಡಬಹುದಾಗಿದೆ. ಅಲ್ಲಿಯೇ ಅದರ ರಾಜಕೀಯ ಮಿತಿಯನ್ನೂ ಗಮನಿಸಬಹುದಾಗಿದೆ. ಆದರೆ ಸಬಾಲ್ಟರ್ನ್ ಜನಸಮುದಾಯದ ಅಭಿವ್ಯಕ್ತಿ ಬಹುತೇಕವಾಗಿ ಹಿಂಸೆಯೇ ಆಗಿರುತ್ತದೆ. ಎಲೀತ್ ರಾಜಕಾರಣವು ಬ... ಬುದ್ಧಿಪೂರ್ವಕವಾಗಿದ್ದು ಒಂದು ರೀತಿಯಲ್ಲಿ ನಿಯಂತ್ರಣದಲ್ಲಿದ್ದರೆ ಸಬಾ... ರಾಜಕಾರಣವು ಸ್ಪಾಂಟೇನಿಯಸ್ ಆಗಿರುವುದು. ವಸಾಹತು ಕಾಲದಲ್ಲಿ ನಾವು ಕ... ರೈತರ ದಂಗೆಗಳನ್ನು ಈ ನಿಟ್ಟಿನಲ್ಲಿ ಹೆಸರಿಸಬಹುದಾಗಿದೆ. ನಗರ ಪ್ರದೇಶ... ದುಡಿಯುವ ಜನ ಸಮುದಾಯಗಳನ್ನು ಮತ್ತು ಸಣ್ಣಸಣ್ಣ ವೃತ್ತಿಪರರನ್ನು (... ಬೂರ್ಜ್ವಾಸಿ) ಕೂಡ ಈ ಸಂದರ್ಭದಲ್ಲಿ ಹೆಸರಿಸಬಹುದು.

೧೦. ಸಬಾಲ್ಟರ್ನ್ ವರ್ಗಗಳು ಎಲೀತ್‌ಗಳಿಗೆ ಪ್ರತಿರೋಧವನ್ನು ನೀಡಿರುವು... ಸಬಾಲ್ಟರ್ನ್‌ಗಳ ಲಕ್ಷಣವಾಗಿದೆ.

೧೧. ಉತ್ಪಾದನೆಯ ಸಂದರ್ಭದಲ್ಲಿ ಶೋಷಣೆಗೆ ಒಳಪಟ್ಟಿದ್ದಾಗೆಲ್ಲಾ ಸಬಾ... ವರ್ಗಗಳು ಸಿಡಿದಿದ್ದನ್ನು ನಾವು ಗಮನಿಸಬಹುದು. ಕಾರ್ಮಿಕರು ಮತ್ತು ರೈತರಿಂ... ಆರಂಭಗೊಂಡು ಅಸಂಘಟಿತ ಕಾರ್ಮಿಕರು, ಬಡವರು, ಕೆಳವರ್ಗಗಳ ಜನ... ಅನುಭವಿಸಿದ ಶೋಷಣೆಯ ಸಂದರ್ಭದಲ್ಲಿ ಕೂಡ ಸಬಾಲ್ಟರ್ನ್ ಪ್ರತಿಭಟನೆಗ... ಹುಟ್ಟಿಕೊಳ್ಳುತ್ತವೆ. ಪೆಟಿ ಬೂರ್ಜ್ವಾಸಿಯ ಕೆಳವರ್ಗಗಳ ಪ್ರತಿಭಟನೆ... ಮೂಲಗಳನ್ನೂ ಇಲ್ಲಿ ನೋಡಬಹುದು.

೧೨. ಸಬಾಲ್ಟರ್ನ್ ವರ್ಗಗಳ ಮತ್ತು ಎಲೀತ್ ವರ್ಗಗಳ ನಡುವಿರು... ರಾಜಕೀಯದ ಎಲ್ಲೆಗಳ ನಡುವೆ ಆಗಾಗ್ಗೆ ವ್ಯತ್ಯಾಸಗಳಾಗುವುದುಂಟು. ಕೆಲವು ಸಂದರ್ಭಗಳಲ್ಲಿ ಈ ಎರಡು ಭಿನ್ನ ವರ್ಗಗಳು ಒಟ್ಟಾಗಿರುವ ಸಂದರ್ಭಗಳನ್ನೂ ಗುರು... ಬಹುದು. ಈ ವರ್ಗಗಳ ನಡುವೆ ವೈರುಧ್ಯಗಳಿರುವುದನ್ನೂ ನಾವು ಕಾಣಬಹುದು.

೧೩. ಹೋರಾಟಗಳಲ್ಲಿ ವೈರುಧ್ಯಗಳಿದ್ದರೂ ಅನೇಕ ಸಂದರ್ಭಗಳಲ್ಲಿ ಈ ಎರ... ವರ್ಗಗಳು ಒಟ್ಟಾಗಿದ್ದು ಒಗ್ಗಟ್ಟಾಗಿ ಹೋರಾಡಿದ್ದೂ ಉಂಟು. ಸ್ಥಳೀಯ ಉಚ್ಚ ವರ್ಗಗಳ... ಎಲೀತ್‌ಗಳು, ಬಹಳ ಮುಖ್ಯವಾಗಿ ಬೂರ್ಜ್ವಾಸಿಗಳು, ಇಂತಹ ಮೈತ್ರಿಗಳ ಉಗಮ... ಕಾರಣಕರ್ತರಾಗಿದ್ದಾರೆ. ಸಾಮ್ರಾಜ್ಯಶಾಹಿ ವಿರೋಧಿ ಹೋರಾಟಗಳ ಸಂದರ್ಭದಲ್ಲಿ ಈ ಬಗೆಯ ಮೈತ್ರಿಗಳು ಹೋರಾಟದ ಕಾರ್ಯಚಟುವಟಿಕೆಗಳಿಗೆ ಸಹಾಯಕವಾದ...

ರೆ, ಬಹುತೇಕ ಸಂದರ್ಭಗಳಲ್ಲಿ ಈ ಎರಡೂ
ಗಳು ಒಟ್ಟಿಗೆ ರೂಪಿಸಿದ ಹೋರಾಟಗಳು ಸಾಮ್ರಾಜ್ಯ
ರೋಧಿ ಆಶಯವನ್ನು ಬಿಟ್ಟುಕೊಟ್ಟಿರುವುದನ್ನು ಗಮನಿಸ
ಬದು. ಈ ಕಾರಣಕ್ಕಾಗಿಯೇ ಮೈತ್ರಿ ಹೋರಾಟಗಳು
ಲವಾಗಿರುವುದು. ಈ ಮೈತ್ರಿ ಹೋರಾಟಗಳು
ಯ ಉಚ್ಚ ವರ್ಗ/ಎಲೀತ್‌ಗಳ ನಿರ್ದೇಶನದಂತೆ
ದದ್ದರಿಂದ ಸಹಜವಾಗಿಯೇ ಅವು ''ಸಂವಿಧಾನಾತ್ಮಕ
, ನ್ಯಾಯಯುತವಾಗಿ'' ವಸಾಹತುಶಾಹಿ ಹಿತಾಸಕ್ತಿಗೆ
ಯಾಗದ ರೀತಿಯಲ್ಲಿ ಹೋರಾಟಗಳನ್ನು ಹಮ್ಮಿ
ಡವು. ಪರಿಣಾಮವಾಗಿ ಈ ಹೋರಾಟಗಳು
ಕಚ್ಚಿದವು. ಇಲ್ಲವೇ ವಸಾಹತುಶಾಹಿ ಶಕ್ತಿಗಳಿಂದ
ನಕ್ಕೊಳಗಾಗಿ ಅವಮಾನವನ್ನು ಅನುಭವಿಸಿದವು.
ತಿಮವಾಗಿ ಇವು ಉಚ್ಚ ವರ್ಗಗಳ ಎಲೀತ್‌ಗಳ
ಯವನ್ನು ಕಾಪಾಡುವ ನಿಟ್ಟಿನಲ್ಲೇ ಬಳಸಲ್ಪಟ್ಟವು.

> **ಅಧಿಕಾರ**
>
> ಸದುಪಯೋಗವು ತಂಪನ್ನೆರೆಯುವ
> ಪೂರ್ಣ ಚಂದಿರನಂತಾದರೆ
> ದುರುಪಯೋಗ ಬಿಸಿಲಿನ
> ಬೇಗೆಯಿಂದ ಒಡಲನ್ನು
> ಸುಡುವ ರವಿಯಂತೆ
>
> **ಎನ್. ಶ್ರೀನಿವಾಸ್**
> ಪ್ರ.ದ.ಸ.ಜಿಲ್ಲಾ ಕೃಷಿ, ತರಬೇತಿ ಕೇಂದ್ರ
> ವಿ.ಸಿ. ಫಾರಂ, ಮಂಡ್ಯ

೧೪. ಇಷ್ಟೆಲ್ಲ ಬೆಳವಣಿಗೆಗಳ ನಡುವೆಯೂ ಸಬಾಲ್ಟರ್ನ್ ರಾಜಕೀಯಕ್ಕೆ ರಾಷ್ಟ್ರ
ಮುಕ್ತಿಗಾಗಿ ಒಂದು ಪ್ರಬಲವಾದ ಪೂರ್ಣ ಪ್ರಮಾಣದ ರಾಷ್ಟ್ರೀಯ ಚಳವಳಿಯನ್ನು
ಪಿಸಲು ಸಾಧ್ಯವಾಗಲಿಲ್ಲ. ದುಡಿಯುವ ವರ್ಗಗಳು ಈ ಹಿನ್ನೆಲೆಯಲ್ಲಿ ಸಾಕಷ್ಟು
ತೆಯನ್ನು ಹೊಂದಿಲ್ಲದಿರುವುದು ಮತ್ತು ಬಹಳ ಮುಖ್ಯವಾಗಿ ರೈತಾಪಿ ವರ್ಗಗಳ
ತೆಗೆ ಸಾಕಷ್ಟು ಹೊಂದಾಣಿಕೆ ಮಾಡಿಕೊಳ್ಳದಿರುವುದು ಸಬಾಲ್ಟರ್ನ್ ರಾಜಕೀಯದ
ತೆಗೆ ಕಾರಣಗಳಾಗಿವೆ. ಬೂರ್ಜ್ವಾಗಳು ಕಂಡ ವೈಫಲ್ಯತೆಯ ಲಾಭವನ್ನು ಈ
ಣಗಳಿಂದಾಗಿಯೇ ಸಬಾಲ್ಟರ್ನ್ ವರ್ಗಗಳು ಬಳಸಿಕೊಳ್ಳಲಾಗಲಿಲ್ಲ. ಪ್ರಬಲವಾದ
ತ್ತು ವ್ಯಾಪ್ತಿಯುಳ್ಳ ವಸಾಹತುವಿರೋಧಿ ಸಂವೇದನೆಗೆ ಸಂಬಂಧಿಸಿದಂತೆ ಬಹಳ
ಯಂತ ಹಿನ್ನೆಲೆಯ ಇಂತಹ ರೈತ ಪ್ರತಿಭಟನೆಗಳು ಸೂಕ್ತ ನಾಯಕತ್ವ ಇಲ್ಲದೆ ನೇಪಥ್ಯಕ್ಕೆ
ದವು. ಸ್ಥಳೀಯ ಹೋರಾಟಗಳಾಗಿಯೇ ಉಳಿದ ಈ ಪ್ರತಿಭಟನೆಗಳು ಸಮರ್ಥ
ಹತುವಿರೋಧಿ ಹೋರಾಟವಾಗಿ ಸರ್ವವ್ಯಾಪಿಯಾಗಲಿಲ್ಲ. ದುಡಿಯುವ
ಗಳ, ರೈತರ ಮತ್ತು ನಗರ ಕೇಂದ್ರಗಳ ಪೆಟಿ ಬೂರ್ಜ್ವಾಗಳ ಹೋರಾಟಗಳು ರಾಷ್ಟ್ರ
ೋಚನೆ ಹೋರಾಟದ ಪಾಡಿಗೆ ಹೋಗದೆ ಕ್ರಾಂತಿಕಾರಿ ನಾಯಕತ್ವವನ್ನು ಹೊಂದದೆ
ಭಿನ್ನವಾದ ಮಾರ್ಗಗಳನ್ನು ತುಳಿದು ಬಹುತೇಕ ಸ್ಥಳೀಯವಾಗಿ ಉಳಿದುಬಿಟ್ಟವು.

೧೫. ಉದ್ದೇಶಿಸಲಾದ ಸಬಾಲ್ಟರ್ನ್ ಅಧ್ಯಯನವು ತನ್ನದೇ ಆದ ಕ್ಷೇತ್ರವನ್ನು
ಂದಲು ಸಾಧ್ಯವಾಗದ ಚಾರಿತ್ರಿಕ ವೈಫಲ್ಯದ ಬಗ್ಗೆ ಸಂಶೋಧನೆಯನ್ನು ಮಾಡುವ
ದೆಯನ್ನು ಹೊಂದಿದೆ. ಬೂರ್ಜ್ವಾ ಮತ್ತು ದುಡಿಯುವ ವರ್ಗಗಳು ನಿರಂತರತೆ
ತ್ತು ಸ್ಪಷ್ಟತೆಯನ್ನು ಕಾಯ್ದುಕೊಳ್ಳದಿರುವುದರಿಂದ ವಸಾಹತುವಿರೋಧಿ
ರಾಟದಲ್ಲಿ ವಿಜಯ ಸಾಧಿಸಲಾಗಲಿಲ್ಲ. ಹಾಗೆಯೇ ೧೯ನೇ ಶತಮಾನದ ಕ್ಲಾಸಿಕ್
ಪದ ಬೂರ್ಜ್ವಾ ಹೆಜಿಮನಿ/ನಾಯಕತ್ವದ ಬೂರ್ಜ್ವಾ ಪ್ರಜಾಪ್ರಭುತ್ವೀಯ
ತಿಗಳಾಗಲಿ ಅಥವಾ ದುಡಿಯುವ ವರ್ಗಗಳು ಮತ್ತು ರೈತರಿಂದ ರೂಪಿತವಾಗ
ಬೇಕಾಗಿದ್ದ ''ಹೊಸ ಪ್ರಜಾಪ್ರಭುತ್ವದ'' ಸ್ಥಾಪನೆಯಾಗಲಿ ಸಾಧ್ಯವಾಗಲಿಲ್ಲ.

೧೬. ಭಾರತದ ಚರಿತ್ರೆ ಬರವಣಿಗೆಯ ಎಲೀತ್ ಮಾದರಿಗಳನ್ನು ಈಗಾಗಲೆ
' ವಿಮರ್ಶೆ'ಗೆ ಒಳಪಡಿಸಿರುವ ವಿದ್ಯಾರ್ಥಿಗಳು, ಅಧ್ಯಾಪಕರು ಮತ್ತು ಸಬಾಲ್ಟರ್ನ್
ರದ ಲೇಖಕರು ಒಂದೆಡೆ ನಿಂತು ಭಾರತದ ಚರಿತ್ರೆ ಬರವಣಿಗೆ ಕ್ರಮಕ್ಕೆ ಹೊಸ
ಮವನ್ನು ನೀಡಬೇಕಾಗಿದೆ.

**ಬಾಲ್ಟರ್ನ್ ಅಧ್ಯಯನ ಕ್ರಮದ ವಿಕಾಸ**

ಸ್ವಾಯತ್ತವಾಗಿರುವ ಸಬಾಲ್ಟರ್ನ್‌ಗಳ ರಾಜಕಾರಣದ ವಲಯಗಳು (ಡೊಮೈನ್‌ಗಳು)
ಬಾಲ್ಟರ್ನ್ ಅಧ್ಯಯನಗಳ ವಸ್ತು ವಿಷಯವಾಗಿತ್ತು. ೧೯೧೯-೨೨ರ ಸಂದರ್ಭದ
ನಲ್ಲಿ ರೈತವರ್ಗವು ಕೈಗೊಂಡ ಚಳವಳಿಯು ಸ್ವಾಯತ್ತವಾಗಿ, ಸ್ವತಂತ್ರವಾಗಿ, ತನ್ನ
ಷಣೆಗೆ ಪ್ರತ್ಯುತ್ತರವಾಗಿ ಭೂಮಾಲೀಕರ ಮತ್ತು ಬ್ರಿಟೀಶರ ವಿರುದ್ಧ ದಂಗೆ
ತು ಎಂದು ಜ್ಞಾನೇಂದ್ರ ಪಾಂಡೆ ವಿವರಿಸಿದ್ದಾರೆ. ಈ ಹೋರಾಟವನ್ನು ಆರಂಭಿಸುವ
ಹಾ ಭಾಗವಹಿಸುವ ಯಾವುದೇ ಜವಾಬ್ದಾರಿಯನ್ನು ಹೊರದೆ, ದಂಗೆಯ
ರದ ದಿನಗಳಲ್ಲಿ ಗಾಂಧಿ ಮತ್ತು ನೆಹರೂ ಅವರ ಮಧ್ಯಮವರ್ಗದ
ೀಯವಾದಿ ಹಿಂಬಾಲಕರು ಪ್ರಸ್ತುತ ದಂಗೆಯು ರಾಷ್ಟ್ರೀಯ ಐಕ್ಯತೆಯನ್ನು ಮತ್ತು
ಧೀಜಿಯವರ ''ಅಹಿಂಸಾತ್ಮಕ ನಿಲುವನ್ನು'' ಸಮರ್ಥಿಸದೆ ಭೂಮಾಲೀಕರ
ವಿರುದ್ಧದ ಹಿಂಸಾತ್ಮಕ ದಂಗೆಯಲ್ಲಿ ರೈತರು ಪಾಲ್ಗೊಂಡರೆಂದು ಟೀಕಿಸಿದರು. ೧೯೨೨-೨೩ರ ಸುಮಾರಿಗೆ ದಕ್ಷಿಣ ಗುಜರಾತಿನಲ್ಲಿ ನಡೆದ 'ದೇವಿ ಚಳವಳಿ'ಯನ್ನು ವಿಶ್ಲೇಷಿಸಿದ ಡೇವಿಡ್ ಹರ್ಡಿಮನ್ ಬರಹ ಈ ನಿಟ್ಟಿನಲ್ಲಿ ಮುಖ್ಯವಾದುದು. ಪಾರ್ಸಿ ಭೂಮಾಲೀಕರ ಆರ್ಥಿಕ ದಬ್ಬಾಳಿಕೆಯನ್ನು ಮತ್ತು ಮದ್ಯ ದೊರೆಗಳ ಪ್ರಭಾವವನ್ನು ಕಿತ್ತೊಗೆಯಲು ಅಲ್ಲಿನ ಆದಿ ವಾಸಿಗಳು ನಡೆಸಿದ ಹೋರಾಟ ಸ್ವಾಯತ್ತ ಹೋರಾಟ ವಾಗಿತ್ತು, ಸ್ವತಂತ್ರ ಹೋರಾಟವಾಗಿತ್ತು. ಸಮುದಾಯ ಸುಧಾರಣೆಗಾಗಿ ಆದಿವಾಸಿಗಳು ನಡೆಸಿದ ಹೋರಾಟವಿದು. ಹೋರಾಟದ ಆರಂಭದಲ್ಲಿ ಕಾಂಗ್ರೆಸ್ಸಿನ ಪ್ರಭಾವವೇನೂ ಇರಲಿಲ್ಲ. ಹೋರಾಟ ಒಂದು ಹಂತಕ್ಕೆ ತಲುಪಿದ ಮೇಲೆ ಮಧ್ಯಮ ವರ್ಗದ ಕಾಂಗ್ರೆಸ್ ನಾಯಕರು ಆದಿವಾಸಿಗಳು ನಡೆಸಿದ ಈ ಚಳವಳಿಗೆ ಧುಮುಕಿ ಮಾರ್ಗದರ್ಶನ ನೀಡಲು ಆರಂಭಿಸಿದರು. ಇವರು ಆದಿವಾಸಿಗಳಿಗೆ ಗಾಂಧೀಜಿಯ ಕಾರ್ಯಕ್ರಮಗಳನ್ನು ಅನುಸರಿಸಲು ಕರೆ ನೀಡಿದರು. ಈ ಮೂಲಕ ಪಾರ್ಸಿ ಭೂಮಾಲೀಕರ ವಿರುದ್ಧ ಆರ್ಥಿಕ ಬೇಡಿಕೆಗಳನ್ನು ಮುಂದಿಟ್ಟು ಸಮರ ಸಾರಿದ ಆದಿವಾಸಿಗಳ ಹೋರಾಟದ ಅಲೆಯನ್ನು ತಣ್ಣಗೆ ಮಾಡಿದರು. ತುಳಿತಕ್ಕೊಳಗಾದ ಮತ್ತು ಶೋಷಣೆಗೆ ಒಳಗಾದ ಸಬಾಲ್ಟರ್ನ್ ಗುಂಪುಗಳು ಯಾವ ರೀತಿಯಲ್ಲಿ ತಮ್ಮ ಹಕ್ಕಿಗಾಗಿ ಸ್ವಯಂ ಒತ್ತಾಯವನ್ನು ಮಾಡಿದರು ಎಂಬ ವಿವರಗಳನ್ನು ಡೇವಿಡ್ ಹರ್ಡಿಮನ್ ಚರ್ಚಿಸಿರುವುದು ಗಮನಾರ್ಹವಾಗಿವೆ. ಸಬಾಲ್ಟರ್ನ್ ವರ್ಗಗಳಿಗೆ ಪ್ರತ್ಯೇಕ ಐಡೆಂಟಿಟಿ ಇರುವುದೆಂದು ವಾದಿಸಿದ ರಣಜಿತ್ ಗುಹಾ ಅವರ ಥಿಯರಿಗೆ ಡೇವಿಡ್ ಹರ್ಡಿಮನ್ ನೀಡಿರುವ ಘಟನೆಗಳು ಇನ್ನೂ ಹೆಚ್ಚು ಪುಷ್ಟಿಯನ್ನು ನೀಡಿವೆ. ೧೯೨೧-೨೨ರ ಸಂದರ್ಭಗಳಲ್ಲಿ ಯುನೈಟೆಡ್ ಪ್ರಾಂತ್ಯದ ಗೋರಖ್‌ಪುರದ ರೈತರು ಗಾಂಧಿಯ ಬಗ್ಗೆ ಇಟ್ಟುಕೊಂಡ ಪ್ರತೀಕಗಳಿಗೆ ಮೂಲವು ಗಾಳಿಮಾತೆಂದು ಶಾಹಿದ್ ಅಮೀನ್ ಅವರ ಬರಹದಿಂದ ತಿಳಿಯುತ್ತದೆ. ಆ ಭಾಗದ ರೈತರ ಭಾವನೆ, ನಂಬುಗೆ ಮತ್ತು ಅಪೇಕ್ಷೆಗೆ ಅನುಗುಣವಾಗಿ ಅವರು ರೂಪಿಸಿ ಕೊಂಡ ಗಾಂಧಿಗೂ, ನಿಜವಾದ ಗಾಂಧಿಯ ರಾಜಕೀಯ ಕಾರ್ಯಕ್ರಮಕ್ಕೂ ಅಥವಾ ಅವರ ಅನುಯಾಯಿಗಳು ಕಟ್ಟಿಕೊಡುವ ಗಾಂಧಿಯ ಚಿತ್ರಕ್ಕೂ ಯಾವುದೇ ಸಂಬಂಧಗಳಿರುವುದಿಲ್ಲ. ಗೋರಖ್‌ಪುರದ ರೈತರು ಕಟ್ಟಿಕೊಟ್ಟ 'ಮಹಾತ್ಮನ' ಪ್ರತೀಕವನ್ನು ಶಾಹಿದ್ ಅಮೀನ್ ಅನಾವರಣ ಮಾಡಿರುವುದು ಕುತೂಹಲಕಾರಿಯಾಗಿದೆ.

ಸಬಾಲ್ಟರ್ನ್‌ಗಳು ತಮ್ಮ ಧ್ಯೇಯವನ್ನು ಪೂರ್ಣಗೊಳಿಸಲು ಎಲೀತ್‌ಗಳ ಸಹಾಯ ಪಡೆದಿದ್ದನ್ನು ಮತ್ತು ಅಂತಹ ಸಂದರ್ಭಗಳಲ್ಲಿ ಎಲೀತ್‌ಗಳ ಹಿತಾಸಕ್ತಿಯನ್ನು ಸಬಾಲ್ಟರ್ನ್‌ಗಳು ಸಾಕಷ್ಟು ಬದಿಗೆ ಸರಿಸಿದ್ದನ್ನು ಸುಮಿತ್ ಸರ್ಕಾರ್ ದಾಖಲಿಸಿದ್ದಾರೆ. ಬಂಗಾಳದ ಉದಾಹರಣೆಯನ್ನು ನೀಡುತ್ತ, ಸ್ವದೇಶಿ ಹಾಗೂ ಅಸಹಕಾರ ಚಳವಳಿಯ ಸಂದರ್ಭದಲ್ಲಿ ಗಣನೀಯ ಪ್ರಮಾಣದ ಸ್ವಾಯತ್ತತೆಯನ್ನು ಪಡೆದಿದ್ದರು ಎನ್ನಲಾದ ಸಬಾಲ್ಟರ್ನ್ ವರ್ಗಗಳು ಎಲೀತ್ ರಾಜಕಾರಣದಲ್ಲಿನ ಭಿನ್ನವರ್ಗಗಳನ್ನು ಗ್ರಹಿಸಿ, ಅವುಗಳ ಮೂಲಕ ತಮ್ಮ ಶೋಷಣೆಗೆ ಮುಕ್ತಿ ಹೇಳಲು, ತಮಗೆ ನ್ಯಾಯ ದೊರಕಿಸಿಕೊಳ್ಳಲು ಮತ್ತು ಸ್ವತಂತ್ರರಾಗಲು ಹವಣಿಸಿದ್ದನ್ನು ನಾವು ಈ ಸಂದರ್ಭದಲ್ಲಿ ಗುರುತಿಸ ಬಹುದಾಗಿದೆ. ಈ ಮೂಲಕ ಸಬಾಲ್ಟರ್ನ್‌ಗಳು ಎಲೀತ್‌ಗಳ ''ಸೂಕ್ತ ಮಾರ್ಗದರ್ಶನದ'' ಹೊರತಾಗಿ (ಇದ್ದರೂ ಅಲ್ಪ ಪ್ರಮಾಣದಲ್ಲಿ) ವಸಾಹತುಶಾಹಿ ಸರಕಾರದ ವಿರುದ್ಧ ಸುದೀರ್ಘ ಕಾಲಘಟ್ಟದವರೆಗೆ ಸಮರ ಸಾರಲು ಸಾಧ್ಯವಾದ ಬಗೆಗಳನ್ನು ನಾವು ಕಾಣಬಹುದಾಗಿದೆ.

ದಂಗೆಗಳಾಗುವುದು ಕೇವಲ ರಾಜಕೀಯ ಮತ್ತು ಆರ್ಥಿಕ ಒತ್ತಡಗಳಿಗಾಗಿ ಮಾತ್ರವಲ್ಲ; ರೈತರ ದಂಗೆಯೆನ್ನುವುದು ಸಮಷ್ಟಿ ಸಂವೇದನೆಯ ಅಭಿವ್ಯಕ್ತಿ ಯಾಗಿದೆ. ತಾವು ಆಳುವ ವರ್ಗಕ್ಕೆ ಅಧೀನರಾಗದಿರಲು ಮಾಡಿದ ಹೋರಾಟಗಳು ಫಲಕಾರಿಯಾಗ ದಿರುವುದನ್ನು ಚಿತ್ರಿಸುವುದಷ್ಟೆ ಸಬಾಲ್ಟರ್ನ್ ಅಧ್ಯಯನದ ಉದ್ದೇಶವಲ್ಲ. ಬದಲಿಗೆ ರೈತ ಸಂವೇದನೆಯ ಭಾಗವಾಗಿರುವ ಹೋರಾಟವು ಒಂದು ಸ್ವಾಯತ್ತ ವಲಯ ವಾಗಿದ್ದನ್ನೂ ಅಭ್ಯಸಿಸುವುದು ಕೂಡ ಈ ಬಗೆಯ ಅಧ್ಯಯನದ ಉದ್ದೇಶವಾಗಿದೆ. ವಸಾಹತುಪೂರ್ವ ಭಾರತದಲ್ಲಿ ಪ್ರವರ್ಧಮಾನದಲ್ಲಿದ್ದ ಊಳಿಗಮಾನ್ಯ ರಾಜಕೀಯ

ಮತ್ತು ಆರ್ಥಿಕ ವ್ಯವಸ್ಥೆಯು ಬಿಟ್ಟುಕೊಟ್ಟ ಅಧಿಕಾರ ಸೂತ್ರಗಳು ಸ್ಥಳೀಯ ಅರಸರ ಮತ್ತು ದೊಡ್ಡ ಭೂಮಾಲೀಕರ ಕೈಗಳನ್ನು ಬಲಪಡಿಸಿದವು. ಹೊರಜಗತ್ತಿಗೆ ಅವರ ಸಂಬಂಧಗಳು ಅಷ್ಟಕ್ಕಷ್ಟೇ ಇದ್ದರೂ ಅವರಿದ್ದ ವ್ಯವಸ್ಥೆ ಒಂದು ಬಗೆಯಲ್ಲಿ ಹೊರ ಜಗತ್ತಿನ ವಿದ್ಯಮಾನಗಳಿಂದ ದೂರ ಉಳಿದವು. ಪರಿಣಾಮವಾಗಿ ರೈತರು ಪ್ರಧಾನವಾಗಿದ್ದ ಸ್ಥಳೀಯ ಸಮಾಜವು ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ರಂಗಗಳಲ್ಲಿ ಬಹಳಷ್ಟು ಸ್ವಾಯತ್ತತೆಯನ್ನು ಹೊಂದಿತ್ತು. ೧೯ನೆಯ ಶತಮಾನದ ಅಂತ್ಯ ಭಾಗದವರೆಗೂ ಹೆಚ್ಚು ಕಡಿಮೆ ಇದೇ ವ್ಯವಸ್ಥೆಯು ಭಾರತದ ಸಂದರ್ಭದಲ್ಲಿ ಕಂಡುಬಂದಿತು. ಯಾವ ಗಳಿಗೆಯಿಂದ ಭಾರತವು ಅಂತರರಾಷ್ಟ್ರೀಯ ಮಾರುಕಟ್ಟೆಯ ಅರ್ಥವ್ಯವಸ್ಥೆಯ ಭಾಗವಾಗಿ ಕಾರ್ಯಚಟುವಟಿಕೆಯನ್ನು ನಿರ್ವಹಿಸಲು ಮುಂದಾಯಿತೋ ಆ ಹೊತ್ತಿನಿಂದ ರಾಜ್ಯ ವ್ಯವಸ್ಥೆಯ ಸ್ವರೂಪ, ನಿರ್ವಹಣಾ ವಿಧಾನ ಮತ್ತು ಮೂಗು ತೂರಿಸುವ ವಿಧಾನ ಇವೆಲ್ಲದರಲ್ಲೂ ಬದಲಾವಣೆ ಕಂಡುಬಂದವು. ಸಹಜವಾಗಿ ಸರಕು ಸಾಗಾಟ ಕ್ರಮಗಳಲ್ಲಿ ಮತ್ತು ಸಂವಹನ ಕ್ರಮಗಳಲ್ಲಿಯೂ ಭಾರಿ ಬದಲಾವಣೆಗಳನ್ನು ನಾವು ಈ ಸಂದರ್ಭದಲ್ಲಿ ಗಮನಿಸಬಹುದು. ಚರಿತ್ರೆಯ ಈ ಕಾಲಘಟ್ಟದಲ್ಲಿ ನಡೆದ ಮಹತ್ವದ ಸ್ಥಿತ್ಯಂತರದ ವ್ಯಾಪ್ತಿ ಭಾರತದ ಎಲ್ಲ ಕಡೆ ಒಂದೇ ತರಹದ್ದಾಗಿರಲಿಲ್ಲ. ಸಂಪರ್ಕವೇ ದುಸ್ತರವಾಗಿದ್ದ ಭಾರತದ ಪೂರ್ವಭಾಗಗಳ ಗುಡ್ಡಗಾಡು ಪ್ರದೇಶಗಳಲ್ಲಿ ಬದಲಾವಣೆ ತೀವ್ರಗತಿಯಲ್ಲಿ ಆಯಿತು. ಗತಕಾಲದಿಂದ ಸಾಂಪ್ರದಾಯಿಕವಾಗಿ ಅಧಿಕಾರವನ್ನು ಹೊಂದಿದ್ದ ಸ್ವಾಯತ್ತ ವಲಯಗಳ ಮುಖ್ಯಸ್ಥರು ಸಾರ್ವಜನಿಕವಾಗಿ ತಮ್ಮ ಆಕ್ರೋಶವನ್ನು ವ್ಯಕ್ತ ಪಡಿಸಿದರೂ ಹತ್ತೊಂಬತ್ತನೇ ಶತಮಾನದಲ್ಲಿ ಕಂಡು ಬಂದ ಈ ಬದಲಾವಣೆಯನ್ನು ತಡೆಯಲು ಅವರಿಗೆ ಸಾಧ್ಯವಾಗಲಿಲ್ಲ. ಉಳಿದ ಬಹುತೇಕ ಪ್ರದೇಶಗಳಲ್ಲಿ ಈ ಬದಲಾವಣೆಗಳನ್ನು ಜನರು ಭಿನ್ನಭಿನ್ನ ರೀತಿಯಲ್ಲಿ ಸ್ವೀಕರಿಸಿದರು. ಕೆಲವೆಡೆ ಇದೊಂದು ಸಹಜ ಪ್ರಕ್ರಿಯೆ ಎಂಬಂತೆ ಸ್ವೀಕರಿಸಿದರೂ, ಉಳಿದೆಡೆ ಮಿಶ್ರ ಪ್ರತಿಕ್ರಿಯೆಗಳು ಕಂಡುಬಂದವು. ಆರ್ಥಿಕ ಮತ್ತು ಆಡಳಿತಾತ್ಮಕ ಬದಲಾವಣೆಗಳು ಮತ್ತು ಗ್ರಾಮೀಣ ಬಂಡವಾಳವು ವ್ಯವಸ್ಥೆಯ ಕೇಂದ್ರಸ್ಥಾನವನ್ನು ಅಲಂಕರಿಸಿದ ಪರಿಣಾಮವಾಗಿ ಸ್ಥಳೀಯ ಮಟ್ಟದಲ್ಲಿಯೂ ಸಂಬಂಧಗಳು ಏರುಪೇರಾದುವು. ಇಂತಹ ಸಂದರ್ಭದಲ್ಲಿ ಹೊರಜಗತ್ತಿನ ಶಕ್ತಿಗಳೊಡನೆ ವ್ಯವಹರಿಸಲು ಅಥವಾ ಅ... ಆಕ್ರಮಣಗಳಿಂದ ರೈತ ವರ್ಗಗಳನ್ನು ರಕ್ಷಿಸಲು ಸ್ಥಳೀಯ ಎಲೀತ್‌ಗಳು ಹೊರಜಗ... ಶಕ್ತಿಗಳ ದಲ್ಲಾಳಿಗಳಾದರು ಅಥವಾ ಅವರ ಮಿತ್ರರಾದರು. ಈ ವಿಷಮ ಪರಿಸ್ಥಿತಿ... ರೈತರು ಸ್ಥಳೀಯ ಎಲೀತ್‌ಗಳನ್ನು ನಂಬಿ ಅವರ ಮೂಲಕ ಸ್ಥಳೀಯವ... ಶಕ್ತಿಗಳೊಂದಿಗೆ ವ್ಯವಹಾರ ನಡೆಸುವಂತಹ ಸಂದರ್ಭದ ನಿರ್ಮಾಣವಾಯಿ... ಹೊಸ ವ್ಯವಸ್ಥೆಯ ಆರ್ಥಿಕ ವೈರುಧ್ಯಗಳಿಂದ ರೈತವರ್ಗಗಳ ಒಳಗೇ ಒಂದು ಬಗೆ... ಸಂಘರ್ಷ ಉಂಟಾಯಿತು. ಬಂಗಾಳದ ಸಂದರ್ಭದಲ್ಲಿ ಪಾರ್ಥ ಚಟರ್ಜಿಯವ... ಅಧ್ಯಯನ ಮಾಡಿರುವಂತೆ ೧೯೨೦ ಮತ್ತು ೧೯೩೦ರ ದಶಕಗಳಲ್ಲಿ ಕೆ... ರೈತವರ್ಗಗಳು ಪ್ರಖರವಾದ ತಮ್ಮ 'ಸಮುದಾಯ'ದ ಐಡೆಂಟಿಟಿಯನ್ನು ಹೊ... ಜಗತ್ತಿನ ಪ್ರಭಾವದಿಂದಾಗಿಯೋ ಅಥವಾ ಆಂತರಿಕ ಜಗತ್ತಿನ ವಿಪ್ಲವಗಳಿಂದಾಗಿಯೋ ಬಿಟ್ಟುಕೊಡಲು ತಯಾರಾಗಲಿಲ್ಲ. ಈ ಬಗೆಯ ಸಾಮುದಾಯಿಕ ಪ್ರಜ್ಞೆ ಅನೇಕ ಬಾ... ಧಾರ್ಮಿಕ ಚೌಕಟ್ಟಿನಲ್ಲಿ ವ್ಯಕ್ತವಾಯಿತು. ಪರಿಣಾಮವಾಗಿ ಮುಸ್ಲಿಂ ರೈತರು ಹಿಂದೂ... ವ್ಯಾಪಾರಿಗಳ ಮತ್ತು ಲೇವಾದೇವಿಗಾರರ ವಿರುದ್ಧ ಬಂಡೆದ್ದರು. ಹಿಂದೂ ಧಾರ್ಮಿ... ಕೇಂದ್ರಗಳ ಮೇಲೆ ಆಕ್ರಮಣ ಮಾಡಿದರು. ಹೀಗಾಗಿ, ಇದು ರೈತರ ಮತ್ತು ಭೂಮಾಲೀಕರ ನಡುವಿನ ಹೋರಾಟ ಎಂದು ಬಿಂಬಿತವಾಗಿದೆ. ಆದರೆ, ಭಾರತೀಯ... ಪರಿಭಾಷೆಯಲ್ಲಿ ಈ ಹೋರಾಟಗಳು ಕೋಮುಗಲಭೆಗಳೆಂದೇ ಬಿಂಬಿತವಾದವು... ಇಲ್ಲಿ 'ಧರ್ಮ' ಎನ್ನುವ ಅಂಶ ಸಮಷ್ಟಿಪ್ರಜ್ಞೆಯಾಗಿ ಒಂದು 'ವರ್ಗ'ದ ವಿರುದ್ಧ ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸಿತು ಎಂಬ ಅಂಶವನ್ನು ಗಮನಿಸಬಹುದಾಗಿದೆ.

ರೈತರ ಸ್ವಾಯತ್ತತೆಯು ಬಹಳ ಪ್ರಬಲವಾಗಲು ೧೯ ಮತ್ತು ೨೦ನೆಯ ಶತಮಾನ... ಗಳಲ್ಲಿ ಬಹಳಷ್ಟು ಅವಕಾಶಗಳಿದ್ದವು. ಆ ಕಾಲಘಟ್ಟದಲ್ಲಿ ನಡೆಯುತ್ತಿದ್ದ ರಾಷ್ಟ್ರೀಯ ಹೋರಾಟಗಳು ರೈತವರ್ಗಕ್ಕೆ ಈ ಬಗೆಯ ಭೂಮಿಕೆಯನ್ನು ಸಿದ್ಧಮಾಡಿಕೊಟ್ಟಿತು... ಗಾಂಧೀಜಿಯವರ ನಾಯಕತ್ವದಲ್ಲಿ ಮಧ್ಯಮವರ್ಗಗಳು ರೈತರನ್ನು ಒಲಿಸಿಕೊಂಡುಹೋಗುವ ರಾಷ್ಟ್ರೀಯ ಹೋರಾಟದ ಮಾರ್ಗಗಳನ್ನು ರೂಪಿಸಿದ್ದವು. ಈ ದಿಸೆಯಲ್ಲಿ ಅಲ್ಪಸ್ವಲ್ಪ ಸಫಲತೆಯೂ ದೊರಕಿತ್ತು. ಆದರೆ ಸಬಾಲ್ಟರ್ನ್ ಅಧ್ಯಯನಗ...

ಗ್ರಾಂಶಿಯು ಪ್ರತಿಪಾದಿಸಿದ ದ್ವಿತೀಯ ರೈತವರ್ಗದ ...ಕತ್ವ ಮಾತ್ರ ಈ ಸಂದರ್ಭದಲ್ಲಿ ಕಾಣಲಿಲ್ಲ. ...ೀಯ ಬೂರ್ಜ್ವಾಗಳು ರೈತವರ್ಗದ ದಾಪುಗಾಲಿಗೆ ...ಕಾದವು. ಗಾಂಧೀಜಿಯವರು ರೈತರ ಒಪ್ಪಿಗೆ/ ...ತದೊಂದಿಗೆ ರೂಪಿಸಬೇಕೆಂದು ಹೊರಟಿದ್ದ ...ಯ ಹೋರಾಟವು ಸಮರ್ಥ ನಾಯಕತ್ವದ ...ತೆಯಿಂದ ಸೊರಗಿತು. ಜ್ಞಾನೇಂದ್ರ ಪಾಂಡೆಯವರು ... ರೈತ ಹೋರಾಟವನ್ನು ವಿಮರ್ಶಿಸಿ ದಂತೆ, ಕಾಂಗ್ರೆಸ್ ...ಕರಿಗೆ ರೈತರ ಬಹುಮುಖ್ಯವಾದ ಬೇಡಿಕೆಗಳನ್ನು ...ವೇ ಈಡೇರಿಸುವುದಕ್ಕಿಂತ ಮುಖ್ಯವಾಗಿ ರಾಷ್ಟ್ರೀಯ ...ಾಗಿ ಅಹಿಂಸೆಯನ್ನು ಪಾಲಿಸುವುದು ಮತ್ತು ...ರ್‌ವರ್ಗಗಳ ನಡುವೆ ಸಹಮತ ಏರ್ಪಡಿಸುವುದು ...ವಾಯಿತು. ಸಮರ್ಥವಾದ ನಾಯಕತ್ವವಿಲ್ಲದೆ ರೈತ ...ಗಳಿಗೆ ಪರಿಪಕ್ವತೆಯ ರಾಜಕೀಯ ಸಂವೇದನೆಯನ್ನು ...ಸಲು ಸಾಧ್ಯವಾಗಲಿಲ್ಲ. ಇದೇ ಸಂದರ್ಭದಲ್ಲಿ ...ಕ ವರ್ಗವು ತನ್ನ ವಾಸ್ತವಿಕತೆಯ ಹಿನ್ನೆಲೆಯಲ್ಲಾಗಲಿ ... ತನ್ನ ಸಂವೇದನೆಯನ್ನು ರೂಪಿಸಿಕೊಳ್ಳುವ ...ಯಲ್ಲಾಗಲಿ ಒಂದು ಶಕ್ತಿಯಾಗಿ ರೂಪುಗೊಳ್ಳಲಿಲ್ಲ ... ರೈತವರ್ಗದ ಜೊತೆ ಸಖ್ಯವನ್ನೂ ಬೆಳೆಸಿಕೊಳ್ಳಲಿಲ್ಲ. ... ಸಂದರ್ಭದಲ್ಲಿ ನಾಯಕತ್ವದ ಹೊರೆ ...ವಾಗಿಯೇ ಎಂಬಂತೆ ಭಾರತೀಯ ಬೂರ್ಜ್ವಾಗಳ ಹೆಗಲ ಮೇಲೆ ಬಿದ್ದಿತು. ಆದರೆ ... ಈ ಹೊರೆಯನ್ನು ನಿಭಾಯಿಸಲು ಸಂಪೂರ್ಣವಾಗಿ ವಿಫಲರಾದರು. ರೈತರ ...ಲಿ ಹೋರಾಟಗಳನ್ನು ಸಾಮಾನ್ಯೀಕರಣಗೊಳಿಸಿ ಸಾಮ್ರಾಜ್ಯಶಾಹಿ ವಿರೋಧಿ ...ರಾಟವನ್ನಾಗಿ ಪರಿವರ್ತಿಸಲು ಅವರಿಗೆ ಸಾಧ್ಯವಾಗಲೇ ಇಲ್ಲ.




**...ರ್ನ್ ಸಿದ್ಧಾಂತದ ಬೆಳವಣಿಗೆ ಮತ್ತು ವಿವಿಧ ಆಯಾಮಗಳು**

...ಾರತದಲ್ಲಿ ವಸಾಹತು ವಿರೋಧಿ ಹೋರಾಟಗಳ ಹಾದಿಗಳು ವಸಾಹತುಶಾಹಿ ... ರಾಷ್ಟ್ರೀಯವಾದಿ ಚರಿತ್ರೆ ಬರವಣಗೆ ಕ್ರಮಗಳನ್ನು ಪ್ರಶ್ನಿಸಿವೆ. ಭಾರತದ ರೈತ ...ಗಳು ಬಂಗಾಳದ ಸಂದರ್ಭದಲ್ಲಿ ಪಾರ್ಥ ಚಟರ್ಜಿಯವರು ಅಧ್ಯಯನ ...ರುವಂತೆ ಎಲೀತ್‌ಗಳ ಹಿತಾಸಕ್ತಿಯನ್ನು ಕಾಪಾಡುವ ಅಥವಾ ಭಾರತೀಯ ...ಯ ಕಾಂಗ್ರೆಸ್‌ನ ರಾಜಕಾರಣದ ಭಾಗಗಳಾಗಿ ಸಂಕ್ಷಿಪ್ತಗೊಳ್ಳದೆ ತನ್ನ ಶಕ್ತಿ ...ರ್ಥ್ಯ ಗಳನ್ನು ಮತ್ತು ತೀವ್ರತೆಯನ್ನು ವಸಾಹತು ವಿರೋಧಿ ಹೋರಾಟಗಳಲ್ಲಿ ...ಸಿರುವುದನ್ನು ಗಮನಿಸ ಬಹುದಾಗಿದೆ. ಈ ಸಂದರ್ಭದಲ್ಲಿ ಪಾರ್ಥ ಚಟರ್ಜಿ ...ರ್ಗದ ಎರಡು ಸ್ವಾಯತ್ತ ವಲಯಗಳನ್ನು ಗುರುತಿಸುತ್ತಾರೆ. ವಸಾಹತುಶಾಹಿ ...ಯು ಕಟ್ಟಿಕೊಟ್ಟಿರುವ ವ್ಯವಸ್ಥೆಯೊಳಗೆ ಇರುವ ಸಂಘಟಿತ ರಾಜಕೀಯ ... ಅದೇ ವ್ಯವಸ್ಥೆಯ ಪರಿಧಿಯಲ್ಲಿ ಜನಹೋರಾಟದ ಮೂಲಕ ...ತುಶಾಹಿ ಸರಕಾರವನ್ನು ಕಿತ್ತೊಗೆದು ತಮ್ಮ ಅಧಿಕಾರವನ್ನು ಕೇಂದ್ರೀಕರಿಸುವುದು ...ನೇ ಬಗೆಯ ಡೊಮೈನ್. ಎರಡನೇ ಬಗೆಯ ಡೊಮೈನ್ ರೈತ ರಾಜಕೀಯ ...ದ್ದಾಗಿದೆ. ಸಂವಿಧಾನಬದ್ಧ ವ್ಯವಸ್ಥೆಯ ಹೊರಗಡೆ ಕಂಡುಬರುವ ಪ್ರಕ್ರಿಯೆ ... ಯಾರ ದಾಳಕ್ಕೂ ಬಲಿಯಾಗದ ಈ ವರ್ಗದ ಅಭಿವ್ಯಕ್ತಿಯು ತತ್‌ಕ್ಷಣದ ...ಯೆಯಿಂದ (ಸ್ಪಾಂಟೇನಿಯಸ್) ಕೂಡಿರುತ್ತದೆ.

...ತರ ಸಂವೇದನೆಗಳು ಬೂರ್ಜ್ವಾ ಸಂವೇದನೆಗಳಿಗೆ ವಿರುದ್ಧವಾಗಿರುತ್ತವೆ ಎಂದು ... ಚಟರ್ಜಿ ವಿಮರ್ಶಿಸಿದ್ದಾರೆ. ಬೂರ್ಜ್ವಾ ಸಂವೇದನೆಗಳು ವ್ಯಕ್ತಿಗತವಾಗಿರುತ್ತವೆ. ...ಂದ್ರವಾಗಿರುವ ಈ ಸಂವೇದನೆಗಳ ಮೂಲಕ ಬೂರ್ಜ್ವಾಗಳು ತಮ್ಮ ತಮ್ಮ ...ಕ್ತಿಗಳನ್ನು ಪ್ರತಿನಿಧೀಕರಿಸಲು ತಮ್ಮ ತಮ್ಮೊಳಗೆ ಒಪ್ಪಂದವನ್ನು ಮಾಡಿಕೊಂಡಿರುತ್ತಾರೆ. ...ತಮ್ಮ ಸಾಮಾನ್ಯ ಹಿತಾಸಕ್ತಿಗಳಿಗಾಗಿ ಅವರೆಲ್ಲ ಒಪ್ಪಂದಗಳನ್ನು ಮಾಡಿಕೊಂಡು ... ಸಹಕರಿಸುತ್ತಿರುತ್ತಾರೆ. ದಂಗೆಯೆದ್ದ ರೈತವರ್ಗಗಳಲ್ಲಿ ಇದಕ್ಕೆ ವಿರುದ್ಧವಾದ ...ಲ್ಲಿ ಸಂವೇದನಾ ನೆಲೆಗಳಿರುತ್ತವೆ. ವೈಯಕ್ತಿಕ ನೆಲೆಯಲ್ಲಿ ಅಥವಾ ವ್ಯಕ್ತಿಕೇಂದ್ರಿತ ...ಲ್ಲಿ ಅವರ ಸಂವೇದನೆಗಳಿಲ್ಲದೆ ಸಾಮುದಾಯಿಕ ನೆಲೆಗಟ್ಟಿನಲ್ಲಿರುತ್ತದೆ ...ದು ಗಮನಾರ್ಹ. ವ್ಯಕ್ತಿಗಳ ನಡುವಿನ ಒಪ್ಪಂದಕ್ಕಿಂತ ಸಮುದಾಯದ ...ಗಳಾಗಿ ರೈತ ವರ್ಗವು ಕಾರ್ಯ ನಿರ್ವಹಿಸುವುದು.

ಇಲ್ಲಿಯವರೆಗೆ ಬೂರ್ಜ್ವಾ ಸಂವೇದನೆಗಳ ಮೂಲಕ ರೈತ ವರ್ಗದ ಸಂವೇದನೆಗಳನ್ನು ಅರ್ಥ ಮಾಡಿಕೊಳ್ಳುತ್ತಿದ್ದ ಕ್ರಮಕ್ಕಿಂತ ರೈತರ ಸಂವೇದನೆಯ ಮೂಲಕವೇ ರೈತರ ಡೊಮೈನ್‌ಅನ್ನು ಅರ್ಥ ಮಾಡಿಕೊಳ್ಳುವ ಕ್ರಮದ ಬಗ್ಗೆ ವ್ಯಾಖ್ಯಾನಿಸಿದ ರಣಜಿತ್ ಗುಹಾ ಅವರ ಕ್ರಮವನ್ನು ಪಾರ್ಥ ಚಟರ್ಜಿ ಅನುಮೋದಿಸಿದ್ದಾರೆ. ಈ ಮೂಲಕ ಅವರು ಬೂರ್ಜ್ವಾ ಅರ್ಥಶಾಸ್ತ್ರಜ್ಞ ಮತ್ತು ಸಮಾಜ ಶಾಸ್ತ್ರಜ್ಞರನ್ನು ಮಾತ್ರವಲ್ಲ 'ಅಗ್ರೇರಿಯನ್' ಪ್ರಶ್ನೆಗಳನ್ನು ಎತ್ತುತ್ತಿರುವ ಮಾರ್ಕ್ಸಿಸ್ಟ್ ವಿದ್ವಾಂಸರಿಗೂ ಸವಾಲನ್ನು ಎಸೆದಿದ್ದಾರೆ.

* * *

ಯೂರೋಪಿನಲ್ಲಿ ಸಾಂಪ್ರದಾಯಿಕವಾಗಿ ರೈತರ ಪ್ರತಿರೋಧಗಳನ್ನು ಅಥವಾ ದಂಗೆಗಳನ್ನು ಅರ್ಥೈಸಿರುವ ಮಾದರಿಗಿಂತ ಭಿನ್ನವಾಗಿ ಭಾರತದ ರೈತರ ಪ್ರತಿರೋಧಗಳ ಘಟನೆಗಳನ್ನು ಅಭ್ಯಸಿಸಬೇಕಿದೆ. ಭಾರತದಲ್ಲಿ ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಮಾಡಲಾದ ರೈತರ ದಂಗೆಗಳ/ಹೋರಾಟದ ಅಧ್ಯಯನ ಕ್ರಮಗಳಿಂದ ಭಿನ್ನವಾಗಿಯೂ ಅಭ್ಯಸಿಸಬೇಕಾದ ಜರೂರಿದೆ. ಚರಿತ್ರೆ ಲೇಖನ ಬರವಣಿಗೆಯಲ್ಲಾದ ಆಮೂಲಾಗ್ರವಾದ ಬದಲಾವಣೆಯೇ ಇದಕ್ಕೆ ಮುಖ್ಯ ಕಾರಣವಾಗಿದೆ. ಜಾಗತಿಕ ಚರಿತ್ರೆಯ ಬರವಣಿಗೆಯ ಸಂದರ್ಭದಲ್ಲಿ ಪ್ರಧಾನವಾಗಿರುವ ಊಳಿಗಮಾನ್ಯ ವ್ಯವಸ್ಥೆಯಿಂದ ಬಂಡವಾಳಶಾಹಿ ವ್ಯವಸ್ಥೆಗೆ ಸ್ಥಿತ್ಯಂತರವಾಗುವ ಪ್ರಮೇಯಗಳಿಗಿಂತ ಭಿನ್ನವಾದ ಪ್ರಮೇಯಗಳ, ಅಧ್ಯಯನ ಕ್ರಮಗಳ ಜರೂರು ಭಾರತ ಚರಿತ್ರೆ ಬರವಣಿಗೆಗೆ ಇದೆ. ಈ ಕಾರಣಕ್ಕಾಗಿಯೇ ಚರಿತ್ರೆ ಬರವಣಿಗೆಯಲ್ಲಿ ಪ್ರಧಾನವಾಗಿರುವ ಇಂತಹ ಪ್ರಮೇಯಗಳನ್ನು ಪ್ರಶ್ನಿಸುವ ಅಥವಾ ಅವಕ್ಕೆ ಸವಾಲೊಡ್ಡುವ ಅಥವಾ ಅವನ್ನು ಸೂಕ್ತವಾಗಿ ಮಾರ್ಪಾಡುಗೊಳಿಸುವ ಅಥವಾ ಅವನ್ನು ಸುಧಾರಣೆಗೊಳಿಸುವ ಅಥವಾ ಅವನ್ನು ಇನ್ನೂ ಶ್ರೀಮಂತಗೊಳಿಸುವ ಪ್ರಯತ್ನವನ್ನು ಮಾಡಬಹುದಾಗಿದೆ ಎಂದು ಪಾರ್ಥ ಚಟರ್ಜಿ ಅಭಿಪ್ರಾಯಪಟ್ಟಿದ್ದಾರೆ.

ಭಾರತದಲ್ಲಿ ರೈತರು ದಂಗೆ ಎದ್ದ ಘಟನೆಗಳನ್ನು ಮಧ್ಯಕಾಲೀನ ಯೂರೋಪ್ ಅಥವಾ ಚೀನಾಕ್ಕೆ ಹೋಲಿಸುತ್ತ ಭಾರತೀಯ ರೈತರ ಸಾಮರ್ಥ್ಯವನ್ನು ಬದಿಗೆ ಸರಿಸುವ ಪ್ರಯತ್ನವನ್ನು ಪಾರ್ಥ ಚಟರ್ಜಿ ಪ್ರಶ್ನಿಸಿರುವುದು ಈ ಸಂದರ್ಭದಲ್ಲಿ ಮುಖ್ಯವಾಗಿದೆ. ಅವರ ಪ್ರಕಾರ ಭಾರತದಲ್ಲಿ ರೈತ ದಂಗೆಗಳು ಆರಂಭವೇ ಆಗಿಲ್ಲ ಎಂಬ ಅಭಿಪ್ರಾಯವನ್ನು ವಿಮರ್ಶಿಸುತ್ತಾ, ಭಾರತದಲ್ಲಿ ನಡೆದ ರೈತರ ಪ್ರತಿಭಟನೆಗಳು ಬಹುತೇಕವಾಗಿ ಸ್ಥಳೀಯವಾದವು ಎಂಬುದನ್ನು ವಿವರಿಸಿದ್ದಾರೆ. ೧೭ನೇ ಶತಮಾನದಿಂದ ಕಾಣಸಿಗುವ ರೈತರ ದಂಗೆಗಳು ಬ್ರಿಟಿಶರ ಆಳ್ವಿಕೆಯಲ್ಲಿ ಮಾತ್ರವಲ್ಲ, ವಸಾಹತೋತ್ತರ ಕಾಲಘಟ್ಟದಲ್ಲಿಯೂ ಮುಂದುವರಿ ದಿರುವುದನ್ನು ಅವರು ಉಲ್ಲೇಖಿಸುತ್ತಾರೆ. ನೂರಾರು ರೈತರು ದೇಶದಲ್ಲೆಲ್ಲ ದಂಗೆ ಎದ್ದ ಬಗೆಗಳನ್ನು ಚಾರಿತ್ರಿಕ ದಾಖಲೆಗಳಲ್ಲಿ ನೋಡಬಹುದಾಗಿದೆ. ಭಾರತದಲ್ಲಿ 'ಸ್ಥಳೀಯವಾಗಿ' ನಡೆದ ಬಹುತೇಕ ದಂಗೆಗಳಲ್ಲಿ ಭಾಗವಹಿಸಿದ ರೈತರ ಸಂಖ್ಯೆಯು ಯುರೋಪಿನ ಬಹುದೊಡ್ಡ ದೇಶಗಳಲ್ಲಿ ನಡೆದ ರೈತ ದಂಗೆಗಳಲ್ಲಿ ಭಾಗವಹಿಸಿದ ಜನರಿಗಿಂತ ಅಗಾಧ ಪ್ರಮಾಣದ್ದು. ಹೀಗಿದ್ದಾಗ್ಯೂ ಯೂರೋಪ್ ಮತ್ತು ಚೀನಾದಲ್ಲಿ ನಡೆದ ರೈತ ದಂಗೆಗಳಿಂದಾಗಿ ಆದ ರಾಜಕೀಯ ಪರಿಣಾಮಗಳೇನೂ ಭಾರತದಲ್ಲಿ ಆಗಲಿಲ್ಲ. ಇದಕ್ಕೂ ಒಂದು ಕಾರಣವಿದೆ. ಭಾರತದಲ್ಲಿ ಸರಕಾರದ ಸಾರ್ವಭೌಮಾಧಿಕಾರದ ನೆಲೆಗಟ್ಟಿನಲ್ಲಿ ರೂಪಿಸಲ್ಪಟ್ಟ ಕಾನೂನಿನ ಮೂಲಕ ಭಾರತೀಯ ಸಮಾಜವನ್ನು ದಮನ ಮಾಡದಿರುವುದೇ ಆ ಕಾರಣ. ರೈತರ ಪ್ರತಿಭಟನೆಗಳಿಗೆ ಸರಕಾರದ ಸಾರ್ವಭೌಮಾಧಿಕಾರದ ಕಾನೂನಿನ ನೆಲೆಗಟ್ಟಿನಲ್ಲಿ ನಿಂತಿರುವ ಆಡಳಿತ ವ್ಯವಸ್ಥೆಯನ್ನು ವಿಫಲಗೊಳಿಸುವುದು ಪರಮಧ್ಯೇಯವಾಗಿರಲಿಲ್ಲ. ಹೀಗಾಗಿ ಮಧ್ಯಕಾಲೀನ ಯೂರೋಪ್ ಅಥವಾ ಚೀನಾದ ರೈತರ ದಂಗೆಗಳಿಗಿಂತ ಭಾರತದ ರೈತರ ದಂಗೆಗಳು ವೈಶಿಷ್ಟ್ಯಪೂರ್ಣವಾಗಿವೆ.

ವಿಜಯ್ ಪೂಣಚ್ಚ ತಂಬಂಡ
ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೫೮೩ ೨೭೬




**ಅವನಿಗೆ ಹೆಚ್ಚು ಹುರುಪು, ಉತ್ಸಾಹ ಬರುತ್ತಿದ್ದುದು ಊರಿನಲ್ಲಿ ಯಾವುದಾದರೂ ಸಭೆ-ಸಮಾರಂಭಗಳು ಏರ್ಪಟ್ಟ ದಿನಗಳಲ್ಲಿ. ಆಗೆಲ್ಲ ಆತ ತನ್ನ ಚಿತ್ರ-ವಿಚಿತ್ರ ವೇಷಭೂಷಣಗಳಿಂದ ಎಲ್ಲರನ್ನೂ ರಂಜಿಸುತ್ತ, ತನ್ನ ವಿಚಿತ್ರವಾದ, ಆದರೆ ಎಲ್ಲರಿಗೂ ಇಷ್ಟವಾಗುವಂತೆ ಕೇಳಿಸುತ್ತಿದ್ದ ಭಾಷಣವನ್ನು ಮೊಳಗಿಸುತ್ತ ಇಡೀ ಸಮಾರಂಭಕ್ಕೊಂದು ವಿಚಿತ್ರ ಶೋಭೆ ತಂದುಬಿಡುತ್ತಿದ್ದ. ಕೆಲವು ವೇಳೆ ಆತನ ಭಾಷಣದ ಆಕರ್ಷಣೆ ಎಷ್ಟರ ಮಟ್ಟಿಗೆ ಇರುತ್ತಿತ್ತೆಂದರೆ ಸಮಾರಂಭಕ್ಕೆ ಸೇರಿದ್ದವರೆಲ್ಲ ಮುಖ್ಯ ಕಾರ್ಯಕ್ರಮವನ್ನು ಬಿಟ್ಟು ಪೆಂಡಾಲ್‌ನ ಯಾವುದೋ ಮೂಲೆಯಲ್ಲಿ ತನ್ನ ಬಟ್ಟೆಯ ಗಂಟಿನ ಮೇಲೆ ನಿಂತು, ತನ್ನ ಎಡಗೈ ಮುಷ್ಟಿಯನ್ನೇ ಮೈಕ್ ಮಾಡಿಕೊಂಡು ಭಾಷಣ ಶುರುವಿಟ್ಟುಕೊಳ್ಳುತ್ತಿದ್ದ ಅವನ ಸುತ್ತ ನೆರೆದುಬಿಡುತ್ತಿದ್ದರು.**

## ಮಂಜುನಾಥ್ ಲತಾ

ಟೀವಿಯಲ್ಲಿ ಹೀಗೆ ಬಂದು ಹಾಗೆ ಹೋದ ಒಂದು ನಿಮಿಷದ ಆ ಸುದ್ದಿಯನ್ನು ನೋಡಿದವರು ...ಷ್ಟೇ ಮಂದಿ ಅಂತ ಯಾಕೋ ಆ ಕ್ಷಣ ಅವರಿಗೆಲ್ಲ ಅನ್ನಿಸಿಬಿಟ್ಟಿತು. ನೋಡುತ್ತಲೇ ಅವರು ಸುದ್ದಿಯನ್ನು ...ದವರಂತೆ ಕುಳಿತುಬಿಟ್ಟರು. ಅವರಲ್ಲಿ ಎಲ್ಲರಿಗಿಂತಲೂ ವೇಗವಾಗಿ ಆಲೋಚಿಸಬಲ್ಲವನಾಗಿದ್ದ ...ಪ್ಪ ಶೆಟ್ಟಿ ಆ ಟೀವಿ ವಾಹಿನಿಯ ನಂಬರ್‌ಗೆ ಫೋನ್ ಮಾಡಿ ಆ ಸುದ್ದಿ ನಿಜವೆಂಬುದನ್ನು ...ತಪಡಿಸಿಕೊಂಡು ಅವರಿಗೆಲ್ಲ ತಿಳಿಸುತ್ತಲೇ ಎಲ್ಲರೂ ಮತ್ತಷ್ಟು ಗಾಬರಿಬಿದ್ದರು. ಅಲ್ಲಿ ಪ್ರಸಾರವಾದ ...ಯ ವಿಚಾರಗಳಿಗೂ ತಮ್ಮೂರಿನಲ್ಲಿ ಹಲವಾರು ದಿನಗಳಿಂದ ಇರುವ ಹುಚ್ಚನೊಬ್ಬನ ದಿನಚರಿಗೂ ...ವಾದ ಸಾಮ್ಯತೆಗಳಿವೆಯೆಂದು ಅವರಿಗೆ ಅನ್ನಿಸಿಬಿಟ್ಟಿತು.

ಅವರೆಲ್ಲ ಆ ಸುದ್ದಿಯನ್ನು ನೋಡುವಾಗ ಅವರೊಂದಿಗೆ ಅಷ್ಟೇನೂ ಮುಖ್ಯನಲ್ಲದ, ಆದರೆ ...ರೆಲ್ಲರಿಗೂ ಖಾಸಗಿ ಸಖನಂತಿದ್ದ, ಅವರ ಬೇಕು ಬೇಡಗಳನ್ನೆಲ್ಲ ಪೂರೈಸುತ್ತಿದ್ದ, ಊರೊಳಗೆಲ್ಲ ...ಕಾಳಿಯೆನಿಸಿಕೊಂಡಿದ್ದ ಭರಮ ಕೂಡ ಇದ್ದ. ಆ ಅಷ್ಟು ಜನ ಭರಮ ತಮ್ಮೊಂದಿಗೆ ಇದ್ದುದಕ್ಕೋ ಏನೋ ...ರಿಗೊಬ್ಬರು ಮುಖ ನೋಡಿಕೊಂಡರು. ಯಾರೊಬ್ಬರೂ ಬಾಯಿಬಿಟ್ಟು ಏನೂ ಮಾತಾಡದಿದ್ದರೂ ...ರೆಲ್ಲರಿಗೆ ಎಲ್ಲವೂ ಅರ್ಥವಾದಂತಿತ್ತು. ಭರಮನೊಬ್ಬ ಇಂದು ತಮ್ಮೊಂದಿಗೆ ಇಲ್ಲದಿದ್ದರೆ ಈ ಸುದ್ದಿ ...ಲ್ಲದೆ ಇನ್ನಾರಿಗೂ ಗೊತ್ತಾಗುತ್ತಿರಲಿಲ್ಲವೇನೋ ಅಂತ ಎಲ್ಲರೂ ಒಳಗೊಳಗೆ ಅಂದುಕೊಳ್ಳುತ್ತಿದ್ದರು. ...ಮ್ಮೊಂದಿಗೆ ಅಷ್ಟು ವರ್ಷಗಳಿಂದ ಇದ್ದರೂ ಯಾವುದೇ ವಿಷಯವನ್ನು ತಕ್ಷಣ ಗ್ರಹಿಸುವುದರಲ್ಲಿ ಕೊಂಚ ...ದಬುದ್ಧಿಯವನಾಗಿದ್ದ ಅವನಿಗೆ ತಕ್ಷಣ ಇದೆಲ್ಲ ಹೊಳೆಯುವುದಿಲ್ಲ ಎನ್ನುವ ಸಮಾಧಾನವೂ ಅವರಿಗೆ ... ನಾವೇನಾದರೂ ಅವನೆದುರೇ ಈ ಕುರಿತು ಮಾತಾಡತೊಡಗಿದರೆ ಇಂತಹ ರೋಚಕ, ಸ್ಫೋಟಕ ...ಗಳನ್ನೆಲ್ಲ ಒಕ್ಕಡೆಯಿಂದ ಊರಿಗೆಲ್ಲ ಸಾರುತ್ತ ಬರುವಲ್ಲಿ ನಿಷ್ಣಾತನಾಗಿದ್ದ ಭರಮನಿಂದ ತಮ್ಮ ...ೋಚನೆಗಳೆಲ್ಲವೂ ತಲೆಕೆಳಗಾಗಬಹುದೆಂದು ಎಲ್ಲರಿಗೂ ಅನ್ನಿಸಿತು. ಅವನನ್ನು ಈ ತಕ್ಷಣ ಇಲ್ಲಿಂದ ...ಹಾಕಲು ಎಲ್ಲರೂ ಯೋಚಿಸತೊಡಗಿದರು.

ಆರು ತಿಂಗಳಿಗೋ ವರ್ಷಕ್ಕೋ ತನ್ನ ಸ್ನೇಹಿತರಿಗೆ ಒಂದು ಬಿಯರ್‌ಅನ್ನೋ, ಒಂದು ಕ್ವಾರ್ಟರ್ ...ಯನ್ನೋ ಕುಡಿಸುವಷ್ಟು ಮಾತ್ರ ಉದಾರಿಯಾಗಿದ್ದ ಕೆಂಚಪ್ಪ ಶೆಟ್ಟಿ ತನ್ನ ಜುಬ್ಬಾದಿಂದ ಪರ್ಸ್ ತೆಗೆದು ...ರ್ಧದಲ್ಲಿ ಐನೂರರ ನೋಟೊಂದನ್ನು ಕಿತ್ತು ಭರಮನಿಗೆ ಕೊಡುತ್ತಾ ''ಒಂದು ಲಾರ್ಜ್ ವಿಸ್ಕಿ; ಫುಲ್ ...ಲ್ ತಗೊಂಬಾ... ನೀನು ಅಲ್ಲೇ ಕೂತ್ಕೊಂಡು ಹಾಕ್ಕೋ... ಇಲ್ಲೆಲ್ಲ ನಿಂದು ಮಾತು ಜಾಸ್ತಿಯಾಗುತ್ತೆ... ... ಫಜೀತಿ ಬೇರೆ ಮಾಡ್ತೀಯಾ...'' ಅಂದ.

ಕೆಂಚಪ್ಪಶೆಟ್ಟಿ ಹಾಗೆ ಒಟ್ಟಿಗೆ ಐನೂರು ಖರ್ಚು ಮಾಡಿದ್ದನ್ನು ನೋಡಿರದ ಉಳಿದವರು ಕ್ಷಣ ಕಣ್ಣರಳಿಸಿದರು. ಹಿಂದೆಯೇ ಶೆಟ್ಟಿ ಯಾವುದೋ ಗಂಭೀರವಾದ ಆಲೋಚನೆಗೆ ವೇದಿಕೆ ಸಿದ್ಧಮಾಡು ತ್ತಿದ್ದಾನೆಂದು ಭಾವಿಸಿ, ಭರಮ ತೊಲಗಿದರೆ ಸಾಕೆಂದು "ಹೌದು... ಹೌದು... ಈ ಭರಮ ಕುಡಿದ್ರೆ ನಾಯ್ ನನ್ಮಗ" ಅಂತ ಒಗಚು ನಗೆ ನಕ್ಕರು. ಭರಮ ಕುಡಿಯಲು ಕುಳಿತನೆಂದರೆ ತಮಗೆ ತರಲು ಕೊಟ್ಟ ದುಡ್ಡು ಮುಗಿಯುವ ತನಕವೂ ಏಳುವುದಿಲ್ಲವೆಂಬುದು ಅವರಿಗೂ ಗೊತ್ತು.

ಅರೆಕ್ಷಣದಲ್ಲಿ ತನ್ನ ಕೈಗೆ ಗರಿಗರಿಯಾದ ನೋಟು ಬೀಳುತ್ತಲೇ ಗರಿಗೆದರಿದಂತಾದ ಭರಮ ಕ್ಷಣಾರ್ಧದಲ್ಲಿ ಅಲ್ಲಿಂದ ಪರಾರಿಯಾದ.

ಎಲ್ಲರೂ ಈಗ ಗುಟ್ಟಿನ ವಿಚಾರ ಮಾತಾಡುವ ವರಂತೆ ತಮ್ಮ ತಮ್ಮ ಕುರ್ಚಿಗಳನ್ನು ಮುಂದಕ್ಕೆ ಎಳೆದುಕೊಂಡು ಒಂದು ಗುಂಪಾದರು.

ಶೆಟ್ಟಿ "ನಿಜಕ್ಕೂ ಇದು ಆ ಹುಚ್ಚನದ್ದೇ ಸ್ಟೋರಿ ಅನ್ಸುತ್ತೆ" ಅಂದ ಎಲ್ಲರ ಮುಖಗಳನ್ನೂ ಗಮನಿಸುತ್ತಾ.

ಹನುಮೇಗೌಡ ಮಾತ್ರ ಎಂದಿನಂತೆ "ಈ ಸ್ಟೋರೀನಾ ನಮ್ಮೂರಲ್ಲಿ ಇನ್ಯಾರೂ ನೋಡಿಲ್ಲ ಅಂತ ಹೆಂಗ್ ಹೇಳ್ತೀರಾ ಶೆಟ್ರೆ?" ಎಂದು ಅನುಮಾನಿಸಿದ.

"ನೋಡ್ರಿ ಬಿಡ್ರಿ, ಊರಲ್ಲಿ ಹೋರಾಟಗಾರರು, ಮುಂದಾಳತ್ವ ತೋರ್ಸೋರು ನಾವೇ ಅಲ್ವೆ...ನಮ್ಮನ್ನ ಬಿಟ್ಟು ಇನ್ನಾರಾದ್ರೂ ಈ ಬಗ್ಗೆ ಮಾತುಕತೆ ಆಡೋಕ್ಕಾಗುತ್ತಾ?" ಅಂದ ರಾಜಣ್ಣ.

"ಟೀವಿಲಿ ತೋರ್ಸಿದ ಫೋಟೋಗೂ ನಮ್ಮೂರ ಆ ಹುಚ್ಚನಿಗೂ ಹೋಲಿಕೇನೇ ಇಲ್ವಲ್ರಿ" ಅಂದ ಹನುಮೇಗೌಡ.

"ನಿಮ್ಗೆ ಯಾವಾಗ್ಲೂ ಅನುಮಾನ ಗೌಡ್ರೆ... ಅಷ್ಟು ನೀಟಾಗಿದ್ರೆ ಗುರುತು ಹಿಡಿದುಬಿಡಲ್ವಾ? ಅದಕ್ಕೆ ಹುಚ್ಚನ ಹಾಗಾಗಿದ್ದಾನೆ ಅಂತ ಯಾಕೆ ಅನ್ಕೋಬಾರ್ದು" ಎಂದ ಶೆಟ್ಟಿ ಸುರೇಶ್‌ಬಾಬು, ಚಿಕ್ಕರಾಜು, ಧನಪಾಲ ಸುಮ್ಮನಿದ್ದುದನ್ನು ನೋಡಿ "ನೀವೇನ್ ಅಂತೀರಿ ಸೇಠ್‌ಜಿ" ಅಂದ.

"ಏನೋ ಮಾಡೀಯಪ್ಪ...ಆದ್ರೆ ನಮಗೆಲ್ಲ ಮುಖಭಂಗ ಆಗ್ಬಾರ್ದು" ಅಂತ ಧನಪಾಲ ಅಂದದ್ದಕ್ಕೆ ಉಳಿದಿಬ್ಬರೂ ತಲೆಯಾಡಿಸಿದರು.

ಅವರ ಮುಂದಿದ್ದ ಟೀವಿಯಲ್ಲಿ ನ್ಯೂಸ್ ಒದರುತ್ತಿದ್ದ ದಪ್ಪ ತುಟಿಗಳ ಹುಡುಗಿ ಎಂದಿನಂತೆ ತನ್ನ ಅಸ್ಖಲಿತ ಭಾಷೆಯಲ್ಲಿ ಬಡಬಡಿಸಿದ್ದ ಸುದ್ದಿ ಹೀಗಿತ್ತು:

'ಕಳೆದ ಐದಾರು ತಿಂಗಳ ಹಿಂದೆ ಮೈಸೂರು ಜಿಲ್ಲೆಗೆ ಪ್ರವೇಶ ಪಡೆದಿರುವ ಈ ವ್ಯಕ್ತಿ ಅಂತರರಾಷ್ಟ್ರೀಯ ಭಯೋತ್ಪಾದಕನೋ, ದರೋಡೆ ಕೋರನೋ, ಗೂಢಚಾರನೋ ಆಗಿರಬಹುದೆಂಬ ಸುಳಿವೊಂದು ರಾಜ್ಯ ಗುಪ್ತಚರ ಇಲಾಖೆಗೆ ಸಿಕ್ಕಿದೆ. ಈತ ಜಿಲ್ಲೆಯ ಯಾವ ಮೂಲೆಯಲ್ಲಿ ಅಡಗಿಕೊಂಡಿದ್ದಾನೆ ಎಂಬುದರ ತನಿಖೆಯನ್ನು ಆರಂಭಿಸಿರುವ ಪೊಲೀಸರು ಅವನಿಗಾಗಿ ತೀವ್ರ ಶೋಧ ಕೈಗೊಂಡಿದ್ದಾರೆ. ಎ... ಹೆಚ್ಚಾಗಿ ಪೊಲೀಸರ ತಲೆಕೆಡ್ಸಿರೋದು ಅಂದ್ರೆ ... ಬಳಿ ಇದೆಯೆನ್ನಲಾಗುತ್ತಿರುವ ಅಪಾರ ಪ್ರಮಾ... ಹಣ ಹಾಗೂ ಚಿನ್ನಾಭರಣ... ಅದರಲ್ಲಿ ಇತ್ತೀ... ತಮಿಳುನಾಡಿನ ಪ್ರಖ್ಯಾತ ದೇವಸ್ಥಾನವೊಂದ... ಕಳುವಾದ ವಜ್ರದ ಕಿರೀಟವೂ ಸೇರಿರಬಹುದೆಂಬುದ... ಸದ್ಯದಲ್ಲೇ ಆತನನ್ನು ಪತ್ತೆಹಚ್ಚಲಾಗುವುದು ... ಪೊಲೀಸರು ತಿಳಿಸಿದ್ದಾರೆ. ಪೊಲೀಸರ ಪ್ರಕಾರ ... ಚಲನವಲನಗಳು ಹೀಗಿವೆ: ಆತ ಹುಚ್ಚನ ... ಗಡ್ಡ, ತಲೆಗೂದಲು ಬೆಳೆಸಿಕೊಂಡಿದ್ದರೂ ದಿನಕ್ಕೊ... ಬಗೆಯ ಬಟ್ಟೆಗಳನ್ನು ಧರಿಸುತ್ತಾನೆ. ಪ್ರತಿದಿನ... ಅವನದು ಒಂದೊಂದು ವೇಷ. ಒಂದು ದಿನ ... ಸೂಟು, ಬೂಟು ಹಾಕ್ಕೊಂಡಿದ್ರೆ ಇನ್ನೊಂ... ರಾಜಕೀಯ ನಾಯಕರ ಹಾಗೆ ಖಾದಿ ಜು... ಪೈಜಾಮ ಧರಿಸ್ತಾನೆ. ಮತ್ತೊಂದಿನ ವಕೀಲರ ವೇ... ಒಂದಿನ ಅಯ್ಯಪ್ಪ ಭಕ್ತನ ಬಟ್ಟೆ, ಇನ್ನೊಂದು ... ಪೊಲೀಸರ ಡ್ರೆಸ್ - ಕ್ಯಾಪ್ ಮಾತ್ರ ಇ... ಮತ್ತೊಂದು ದಿನ ಮಠಾಧಿಪತಿಗಳ ಹಾಗೆ ... ತೊಟ್ಟು ಓಡಾಡುತ್ತಾನೆ... ಈ ಎಲ್ಲಾ ವೇಷಗಳ... ತೊಟ್ಟಾಗಲೂ ಅವನ ಬಳಿ ಬೃಹದಾಕಾರದ ಒ... ಬಟ್ಟೆಯ ಗಂಟು ಮಾತ್ರ ಇದ್ದೇ ಇರುತ್ತದೆ...'

* * *

ತಮ್ಮ ಊರನ್ನು ತಾಲ್ಲೂಕು ಕೇಂದ್ರವನ್ನಾಗಿ ಮೇಲ್ದ... ಗೇರಿಸಬೇಕೆಂದು ಹದಿನೈದು ವರ್ಷಗಳಿಂದಲೂ ...



ರಿನ ಜನ ಹೋರಾಟ ಮಾಡುತ್ತಲೇ ಬಂದಿದ್ದಾರೆ. ತಾಲ್ಲೂಕು ಕೇಂದ್ರದ ರ್ಜೆಗೇರಲು ಬೇಕಾದ ಎಲ್ಲಾ ನಾಗರಿಕ ಸೌಲಭ್ಯಗಳೂ ಅರ್ಹತೆಗಳೂ ಊರಿಗೆ ಇವೆ ಎಂಬುದನ್ನು ಊರಿನ ಮುಖಂಡರು, ರಾಜಕೀಯ ಯಕರು ಸರ್ಕಾರಕ್ಕೆ ಮನವರಿಕೆ ಮಾಡುತ್ತಲೇ ಬಂದಿದ್ದರೂ ಸರ್ಕಾರ ಆ ಇನ್ನೂ ಚಿತ್ತ ಹರಿಸಿದಂತಿಲ್ಲ. ಈ ಬಾರಿಯೂ ರಾಜ್ಯದಲ್ಲಿ ಹೊಸ ಲ್ಲೂಕುಗಳ ರಚನೆಗೆ ಸರ್ಕಾರ ಸಮಿತಿಯೊಂದನ್ನು ನೇಮಿಸಿರುವುದರಿಂದ ರು ಇನ್ನೂ ತನ್ನೊಳಗೆ ಹೋರಾಟದ ಕಿಡಿಯನ್ನು ಇಟ್ಟುಕೊಂಡಿದೆ. ಅದು ಗ್ಗೆ ಹೊತ್ತಿಕೊಂಡು ಎಂದಿನಂತೆ ಪ್ರತಿಭಟನೆ, ರಸ್ತೆ ತಡೆ, ತಾಲ್ಲೂಕು ರಿಗೆ ಮುತ್ತಿಗೆ ಇತ್ಯಾದಿ ಕಾರ್ಯಕ್ರಮಗಳಲ್ಲಿ ತಣ್ಣಗಾಗುವುದಿದೆ. ಅವೆಲ್ಲ ಗಾಗುವುದಿದ್ದರೂ ತಮ್ಮ ಊರನ್ನು ತಾಲ್ಲೂಕು ಕೇಂದ್ರವನ್ನಾಗಿಸುವ ಗೂ ನಾವು ತಣ್ಣಗಾಗುವುದಿಲ್ಲವೆಂದು ಶಪಥಗೈದಿರುವ ಕೆಂಚಪ್ಪ ಶೆಟ್ಟಿ, ಮೇಗೌಡ, ಧನಪಾಲ, ಸುರೇಶ್‌ಬಾಬು, ಚಿಕ್ಕರಾಜು, ರಾಜಣ್ಣನಂಥ ಯಕರು ಹೋರಾಟವನ್ನು ಜೀವಂತವಾಗಿರಿಸಿಕೊಂಡು ತಮ್ಮ ನೇತೃತ್ವದಲ್ಲಿ ಗ್ಗೆ ಪ್ರತಿಭಟನೆ, ಮೆರವಣಿಗೆ ತೆಗೆಯುವುದಿದೆ.

ಇಂತಹ ಚಿತ್ರಣವುಳ್ಳ ಆ ಊರಿಗೆ ಆ ವ್ಯಕ್ತಿ ಎಂದು ಬಂದು ತಳವೂರಿದ ುದರ ಸ್ಪಷ್ಟ ನೆನಪು ಯಾರಿಗೂ ಇದ್ದಂತಿಲ್ಲ. ಇದಕ್ಕೂ ಮುಂಚೆ ಇಂತಹ ಷ್ಟೋ ಮಂದಿ ಹುಚ್ಚರು, ಅರೆಹುಚ್ಚರು, ಭಿಕ್ಷುಕರು, ಅನಾಥರು, ಸ್ಸಾದವರು ಬಂದು ಹೋಗುತ್ತಲೇ ಇರುವುದು, ಕೆಲವರು ಇಲ್ಲೇ ರೂರಿರುವುದು ನಡೆಯುತ್ತಲೇ ಇರುವುದರಿಂದ ಈ ಹೊಸ ಪಾತ್ರದ ಯಾರಿಗೂ ಹೆಚ್ಚಿನ ಕುತೂಹಲವಿರಲಿಲ್ಲ.

ಹಾಗೆ ಎಲ್ಲ ಹುಚ್ಚರಂತೆ ಇವನೂ ಊರಿಗೆ ಹೊಸ ಸೇರ್ಪಡೆ ಎಂದು ಪಾಡಿಗೆ ತಾವು ಇದ್ದ ಊರಮಂದಿ ಅವನ ವರ್ತನೆಗಳ ಬಗ್ಗೆ ದಿನೇ ಕುತೂಹಲ ತಳೆಯತೊಡಗಿದರು. ಅವನು ಊರಿಗೆ ಬಂದ ಸತರಲ್ಲಿ ಇದ್ದಕ್ಕಿದ್ದಂತೆಯೇ ಒಂದು ದಿನ ಸ್ವಾಮೀಜಿಗಳ ಹಾಗೆ ಕಾವಿ ಟ್ಟ ತೊಟ್ಟುಕೊಂಡು, ಕಾವಿ ಪಂಚೆ ಉಟ್ಟುಕೊಂಡು, ಕೈಯಲ್ಲಿ ಜಪಮಾಲೆಯನ್ನು ಹಿಡಿದು ಅಡ್ಡಾಡತೊಡಗಿದ. ಹುಲುಸಾಗಿ ಬೆಳೆದಿದ್ದ ಅವನ ಗಡ್ಡಮೀಸೆಗೂ, ಅವನು ತೊಟ್ಟ ಬಟ್ಟೆಗಳಿಂದಾಗಿ ಅವನ ಮುಖದಲ್ಲಿ ಮೂಡಿಬಿಟ್ಟಿದ್ದ ತೇಜಸ್ಸಿಗೂ ಹೊಂದಿಕೆಯಾಗಿ ಅವನೊಬ್ಬ ಗಣ್ಯಸ್ವಾಮೀಜಿಯಿರ ಬಹುದೇನೋ ಎನ್ನುವ ಅನುಮಾನ ಹುಟ್ಟುವಂತೆ ಕಾಣಿಸಿದ. ಆ ಕ್ಷಣ ನೋಡಿದವರೆಲ್ಲರೂ ಇವನು ಹುಚ್ಚನಿರಲಾರ, ಹಾಗೆ ನಟಿಸುತ್ತಿರಬಹುದೆ ಎಂದುಕೊಂಡು ಅರೆಕ್ಷಣ ನಿಂತು ನೋಡುವ ಕ್ಷಣದಲ್ಲೇ ಆತ ಗಹಗಹಿಸಿ ನಗಲು ತೊಡಗುತ್ತಿದ್ದ. ಅವರೆಲ್ಲರೂ ಬೆಚ್ಚಿ 'ಒಳ್ಳೆ ಹುಚ್ ನನ್ಮಗನ್ ಸಹವಾಸ ಆಯ್ತು' ಎಂದು ಗದರಿಕೊಳ್ಳುತ್ತ ಹೊರಟುಬಿಡುತ್ತಿದ್ದರು. ಆದರೆ ಅವರಾರನ್ನೂ ಗಮನಕ್ಕೆ ತಂದುಕೊಳ್ಳದವನಂತೆ ಆತ ತನ್ನ ದಪ್ಪ ಬಟ್ಟೆಯ ಗಂಟಿನ ಮೇಲೆ ನಿಂತು ತನ್ನಷ್ಟಕ್ಕೆ ತಾನೇ, ಆದರೆ ಎಲ್ಲರಿಗೂ ಕೇಳುವಂತೆ ಮಾತನಾಡಲು ಆರಂಭಿಸುತ್ತಿದ್ದ...

''ಕೇಳಿ ಎಲ್ಲಾ ಭವಿಗಳೇ...ದುರಾಶೆಯ ಪಿಶಾಚಿಗಳೇ... ಮನುಕುಲವೆಂಬುದು ಹೀಗೆಯೇ ಇರುವುದಿಲ್ಲ.. ಇದೊಂಥರಾ ಈಸೀ ಚೇರ್ ಥರಾ.... ಆದರೇನು ಮಾಡಲಿ... ನನ್ನ ಸುತ್ತ ಹಬ್ಬುತ್ತಿರುವ ಮುಳ್ಳು ಬೇಲಿಯನ್ನು ಹೇಗೆ ಕೀಳಲಿ... ?''

ಹೀಗೆ ಏನೋ ಅಸಂಬದ್ಧ ವಾಕ್ಯಗಳನ್ನು ಬಡಬಡಿಸಲು ತೊಡಗುತ್ತಿದ್ದ.

ಆತ ತೊಟ್ಟ ಕಾವಿವಸ್ತ್ರ ತನ್ನ ಬಣ್ಣ, ಹೊಳಪು ಕಳೆದುಕೊಂಡು, ಮಾಸಲಾಗಿ, ಹರಿದು, ಕೊಳೆತು, ಅವನ ಕೈಯಲ್ಲಿರುವ ಜಪಮಾಲೆಯ ಮಣಿಗಳೆಲ್ಲ ಉದುರಿ, ದಾರ ಮಾತ್ರ ಉಳಿದು ಇನ್ನೇನು ಅವನು ವಸ್ತ್ರಹೀನನಾಗುತ್ತಾನೇನೋ ಎನ್ನುವಂಥ ದಿನದಲ್ಲೇ ಅವನ ಮೈಗೆ ಹೊಸ ಬಟ್ಟೆ ಬಂದುಬಿಡುತ್ತಿತ್ತು. ನೆನ್ನೆ ಸಂಜೆ ತಾನೆ ಅವನ ಕೊಳಕುವೇಷ ನೋಡಿದವರೆಲ್ಲರೂ ಬೆಳಗಾಗುತ್ತಲೇ ಬದಲಾಗಿರುವ ಅವನ ಹೊಸತನವನ್ನು ನೋಡಿ ಅವಾಕ್ಕಾಗಿಬಿಡುತ್ತಿದ್ದರು. ಮರುದಿನ ಆತ ದೊಡ್ಡ ದೊಡ್ಡ ಅಧಿಕಾರಿಗಳು ತೊಡುವಂತಹ ಸೂಟು, ಅದಕ್ಕೆ ತಕ್ಕನಾದ ಬೂಟು, ಟೈಗಳನ್ನು ತೊಟ್ಟುಕೊಂಡು, ಕಣ್ಣಿಗೆ ಕಪ್ಪು ಕನ್ನಡಕ ಹಾಕಿಕೊಂಡು ಬಟ್ಟೆಯ ಗಂಟಿನ ಮೇಲೆ ಕುಳಿತೋ, ಒರಗಿಕೊಂಡೋ ಇರುತ್ತಿದ್ದ. ಆದರೆ ಆತ ಸ್ನಾನ ಮಾಡಿ ಶುಚಿಯಾಗಿದ್ದಾನೆ, ಕನಿಷ್ಠ ಮುಖಕ್ಕೆ ನೀರನ್ನಾದರೂ ಹಾಕಿಕೊಂಡಿದ್ದಾನೆ ಎಂಬುದಕ್ಕೆ ಕುರುಹುಗಳು ಇರುತ್ತಿರಲಿಲ್ಲ. ಮಣ್ಣು, ಧೂಳುಗಳಿಂದ ಕೊಳಕಾದ ಅವನ ಗಡ್ಡ, ಮುಖ, ತಲೆಕೂದಲು ಎಲ್ಲವೂ ಎಂದಿನಂತೆ ಜಡ್ಡುಗಟ್ಟಿದಂತೆಯೇ ಇರುತ್ತಿದ್ದವು. ಆತ ಗಂಭೀರವದನನಾಗಿ ಮಾತನಾಡುತ್ತಲೋ ಹಾಡು ಗುನುಗಿಕೊಳ್ಳುತ್ತಲೋ ಇರುತ್ತಿದ್ದ.

ಹಾಗೆ ಅವನು ತನ್ನ ವೇಷ ಬದಲಿಸಿದ ದಿನಗಳಲ್ಲಿ ಆಯಾ ವೇಷಗಳಿಗೆ ತಕ್ಕನಾದ ಭಾಷೆಯಲ್ಲಿ ಮಾತಾಡುವುದನ್ನು ಜನ ಬಹುಬೇಗನೇ ಕಂಡುಹಿಡಿದಿದ್ದರು. ಉದಾಹರಣೆಗೆ, ಆತ ಸೂಟು ಧರಿಸಿದ್ದ ದಿನ ಆಡಿದ ಮಾತುಗಳು ಹೀಗಿದ್ದವು: '...ನಲ್ಮೆಯ ನಾಗರಿಕರೇ... ನಾನೂ ಸಿನ್ನಿಯರ್ ಆಫೀಸರ್ ಥರಾನೇ ಇರ್ಬೇಕು ಅನ್ಕೋತಿನಿ, ಆದ್ರೆ ಏನ್ಮಾಡ್ಲಿ ಕೊಳೆತು ನಾರುತ್ತಿರೋ ಈ ಬ್ಯುರೋಕ್ರಸಿನಲ್ಲಿ.... ಥತ್ ಹಲ್ಕಾ ಜಗತ್! ನಾನೊಂದು ಬಗೆದರೆ ತಾನೊಂದು ಬಗೆದು ತೋರ್ಸುತ್ತೆ... ನನ್ನ ಹೆಂಡ್ತಿ ಹಲ್ಕಾ ರಂಡೆ ಅನ್ನೋದು ನಂಗೂ ಗೊತ್ತು.... ಆದ್ರೆ ಏನ್ಮಾಡ್ಲಿ ಅವಳು ತುಂಬಾ ಸಿನ್ನಿಯರ್...'

ಹೀಗೆ ಆಯಾ ವೇಷಗಳಿಗೆ ತಕ್ಕನಾದ ಒಂದಾದರೂ ಮಾತುಗಳ ತುಣುಕುಗಳು ಅವನ ವಿಚಿತ್ರ ಮಾತುಗಳ ಗೊಂಚಲುಗಳಲ್ಲಿ ಇರುತ್ತಿದ್ದುದನ್ನು ಜನ ಗಮನಿಸಿದ್ದರು.

ಅವನು ಹಾಗೆ ಪದೇಪದೇ ಬಟ್ಟೆಗಳನ್ನು ಬದಲಾಯಿಸುತ್ತಾನೆಂದರೆ ಅವನ ಬಳಿ ಇರುವ ದೊಡ್ಡದಾದ ಬಟ್ಟೆಯ ಪೊಟ್ಟಣದಲ್ಲಿ ಒಂದೋ ಹೊಸ ಹೊಸ ಬಟ್ಟೆಗಳಿರಬೇಕು, ಇಲ್ಲವೇ ಅಪಾರವಾದ ಹಣವಿರಬೇಕು ಎಂತಲೇ ಎಲ್ಲರೂ ಭಾವಿಸತೊಡಗಿದರು. ಹಾಗೆ ಆ ಗಂಟಿನಲ್ಲಿ ಹೊಸ ಹೊಸ ಬಟ್ಟೆಗಳಿದ್ದಲ್ಲಿ ಆತ ಅವುಗಳನ್ನು ತೊಟ್ಟ ನಂತರ ಒಗೆಯಬೇಕು. ಆದರೆ ಇದುವರೆಗೆ ಆತ ಬಟ್ಟೆಗಳನ್ನು ಒಗೆದದ್ದನ್ನು ಯಾರೂ ಗಮನಿಸಿದಂತಿಲ್ಲ. ಹಾಗೆಂದು ಆತನ ಪೊಟ್ಟಣದಲ್ಲಿರುವುದು ಹಣವೂ ಅಲ್ಲ. ಯಾಕೆಂದರೆ ಅದೇ ಅನುಮಾನವಿಟ್ಟುಕೊಂಡು ಒಂದಷ್ಟು ಮಂದಿ ಕೆಲವು ದಿನ ಅವನನ್ನೇ ಕುಂತಲ್ಲಿ ನಿಂತಲ್ಲಿ ಅನುಸರಿಸುತ್ತಾ ಆತ ತನ್ನ ಗಂಟನ್ನು ಬಿಚ್ಚುವುದನ್ನೇ ಕಾದು ನೋಡಿದ್ದರು. ಅಲ್ಲೇನಿತ್ತು? ಕೆಲವು ಮುರುಕು ಪಾತ್ರೆಗಳು, ತುಕ್ಕು ಹಿಡಿದ ಒಂದು ಸ್ಟೌ, ಒಂದಿಷ್ಟು ಹಳೆಯ ಬಟ್ಟೆಗಳು, ಹಳೆಯದಾದ ರಟ್ಟು, ಪೇಪರ್ ಕಟ್ಟುಗಳು, ಕೆಲವು ಪ್ಲಾಸ್ಟಿಕ್ ಚೀಲಗಳು... ಗುರುತಿಸಲಾಗದ ಇನ್ನೂ ಏನೇನೋ ವಿಚಿತ್ರವಾದ ವಸ್ತುಗಳಿದ್ದವು.

ಕೊನೆಗೂ ಅವನ ವೇಷಭೂಷಣಗಳ ಮೂಲ ಯಾವುದೆಂಬುದನ್ನು ಯಾರೂ ಪತ್ತೆ ಹಚ್ಚಲಾಗದ್ದಕ್ಕೋ ಏನೋ ನಿರಾಶೆಯಿಂದ ಅವನ ಬಗ್ಗೆ ಅವರಿಗಿದ್ದ ಆಸಕ್ತಿ ಕ್ರಮೇಣ ಕಡಿಮೆಯಾಗುತ್ತಾ ಸಾಗಿತ್ತು.

ಆತ ಮಾತ್ರ ಜನರ ಯಾವ ಪ್ರತಿಕ್ರಿಯೆಗಳಿಗೂ ತಲೆಕೆಡಿಸಿಕೊಳ್ಳದೆ ಎಂದಿನಂತೆ ತನ್ನ ಹುಚ್ಚಾಟಗಳಲ್ಲಿ ತೊಡಗಿಕೊಂಡಿರುತ್ತಿದ್ದ. ಅವನಿಗೆ ಹೆಚ್ಚು ಹುರುಪು, ಉತ್ಸಾಹ ಬರುತ್ತಿದ್ದುದು ಊರಿನಲ್ಲಿ ಯಾವುದಾದರೂ ಸಭೆ-ಸಮಾರಂಭಗಳು ಏರ್ಪಟ್ಟ ದಿನಗಳಲ್ಲಿ. ಆಗೆಲ್ಲ ಆತ ತನ್ನ

ಚಿತ್ರ-ವಿಚಿತ್ರ ವೇಷಭೂಷಣಗಳಿಂದ ಎಲ್ಲರನ್ನೂ ರಂಜಿಸುತ್ತ, ತನ್ನ ವಿಚಿತ್ರವಾದ, ಆದರೆ ಎಲ್ಲರಿಗೂ ಇಷ್ಟವಾಗುವಂತೆ ಕೇಳಿಸುತ್ತಿದ್ದ ಭಾಷಣವನ್ನು ಮೊಳಗಿಸುತ್ತ ಇಡೀ ಸಮಾರಂಭಕ್ಕೊಂದು ವಿಚಿತ್ರ ಶೋಭೆ ತಂದುಬಿಡುತ್ತಿದ್ದ. ಕೆಲವು ವೇಳೆ ಆತನ ಭಾಷಣದ ಆಕರ್ಷಣೆ ಎಷ್ಟರ ಮಟ್ಟಿಗೆ ಇರುತ್ತಿತ್ತೆಂದರೆ ಸಮಾರಂಭಕ್ಕೆ ಸೇರಿದ್ದವರೆಲ್ಲ ಮುಖ್ಯ ಕಾರ್ಯಕ್ರಮವನ್ನು ಬಿಟ್ಟು ಪೆಂಡಾಲ್‌ನ ಯಾವುದೋ ಮೂಲೆಯಲ್ಲಿ ತನ್ನ ಬಟ್ಟೆಯ ಗಂಟಿನ ಮೇಲೆ ನಿಂತು, ತನ್ನ ಎಡಗೈ ಮುಷ್ಟಿಯನ್ನೇ ಮೈಕ್ ಮಾಡಿಕೊಂಡು ಭಾಷಣ ಶುರುವಿಟ್ಟುಕೊಳ್ಳುತ್ತಿದ್ದ ಅವನ ಸುತ್ತ ನೆರೆದು ಬಿಡುತ್ತಿದ್ದರು. ಆಗೆಲ್ಲ ಕಾರ್ಯಕ್ರಮ ಏರ್ಪಾಟುಗೊಳಿಸಿದ್ದ ಸಂಘಟಕರು ಆತನನ್ನು ಎಳೆದೊಯ್ದು ಮೂಲೆಗೆ ಕುಕ್ಕರಿಸುತ್ತಿದ್ದರು. ಅಲ್ಲಿಂದಲೂ ಆತ ತನ್ನ ಮಾತು ಮುಂದುವರಿಸಲು ಶುರುಮಾಡಿದಾಗ ಕ್ರುದ್ಧರಾಗಿ ಅವನಿಗೆ ಸಿಕ್ಕಸಿಕ್ಕಲ್ಲಿ ಒದ್ದು, ಹೊಡೆದು, ಬಡಿದು ಸುಸ್ತಾಗುತ್ತಿದ್ದರು. ಹೊಡೆತ ತಿಂದು, ನರಳುತ್ತ ಸುಮ್ಮನಾಗಿ ಬಿಡುತ್ತಿದ್ದ ಅವನನ್ನು ನೋಡಿ ಹೊಡೆದವರಿಗೇ ಕನಿಕರ ಹುಟ್ಟಿ ''ಏಯ್ ಈ ಹುಚ್ಚು ಬಡ್ಡೆತ್ತುದ್ಕೆ ಕಾಫೀನೂ ಬನ್ನೂ ತಂದ್ಕೊಡ್ರೋ'' ಎನ್ನುತ್ತಿದ್ದರು.

ಊರಿನಲ್ಲಿ ಯಾವುದೇ ಸಾರ್ವಜನಿಕ ಕಾರ್ಯಕ್ರಮ ನಡೆದಾಗಲೂ ಆತ ಬಂದು ಹೀಗೆ ತೊಂದರೆ ಕೊಡುತ್ತಾನೆಂಬ ಸಿಟ್ಟು ಊರವರಿಗೆ ಇದ್ದರೂ ಅವರೆಲ್ಲ ತಾಲ್ಲೂಕು ಕೇಂದ್ರಕ್ಕಾಗಿ ಒತ್ತಾಯಿಸಿ ಹಮ್ಮಿಕೊಳ್ಳುವ ಯಾವುದೇ ಕಾರ್ಯಕ್ರಮದಲ್ಲಿ ಆತ ತನ್ನ ವಿಚಿತ್ರ, ವಿಶಿಷ್ಟ ಭಾಷಣದಿಂದ ಜನರನ್ನು ಹೆಚ್ಚು ಹೆಚ್ಚು ಸೇರುವಂತೆ ಮಾಡುತ್ತಾನೆನ್ನುವ ಬಗ್ಗೆ ಎಂತಹುದೋ ಮೆಚ್ಚುಗೆಯೂ ಇತ್ತು.

ಜನ ಅವನ ಬಗ್ಗೆ ಅಷ್ಟೇನೂ ಸಿಟ್ಟು ಇಟ್ಟುಕೊಳ್ಳದಿದ್ದುದಕ್ಕೆ ಇನ್ನೊಂದು ಕಾರಣವೂ ಇತ್ತು. ಯಾವುದೇ ಪ್ರತಿಭಟನೆಯ ಸಂದರ್ಭದಲ್ಲಿ ಸರ್ಕಾರದ ಅಥವಾ ಜನಪ್ರತಿನಿಧಿಯ ಅಥವಾ ಯಾರ ವಿರುದ್ಧ ಪ್ರತಿಭಟನೆ ನಡೆಸಲಾಗುತ್ತದೋ ಅವರ ಪ್ರತಿಕೃತಿ ತಯಾರಿಸಿ ರಸ್ತೆ ಮಧ್ಯದಲ್ಲಿ ಸುಡಬೇಕೆಂಬುದನ್ನು ಊರ ಮಂದಿಗೆ ಕಲಿಸಿಕೊಟ್ಟಿದ್ದು ಅವನೇ. ಇದುವರೆಗೆ ಆ ಊರಿನ ಮಂದಿ ನೂರಾರು ಪ್ರತಿಭಟನೆಗಳನ್ನು, ಸತ್ಯಾಗ್ರಹಗಳನ್ನು ಮಾಡಿದ್ದರೂ ಅವರಿಗೆ ಪ್ರತಿಕೃತಿ ದಹನದಂಥ ಪ್ರತಿಭಟನಾ ಮಾದರಿಯೊಂದರ ಪರಿಚಯವೇ ಆಗಿರಲಿಲ್ಲವೆನ್ನಬಹುದು. ಹಾಗೆ ಒಮ್ಮೆ ಅವರು ಪ್ರತಿಭಟನಾ ಮೆರವಣಿಗೆಯೊಂದನ್ನು ಹಮ್ಮಿಕೊಂಡಿದ್ದ ಸಂದರ್ಭದಲ್ಲಿ ಆತ ಹುಲ್ಲು, ಬಟ್ಟೆ, ಮಡಕೆಗಳಿಂದ ಮಾಡಿದ್ದ ಗೊಂಬೆಯೊಂದನ್ನು ಮೆರವಣಿಗೆಯ ಮಧ್ಯಕ್ಕೆ ಹೊತ್ತುಕೊಂಡು ಬಂದಿದ್ದ. ಆ ಗೊಂಬೆಯನ್ನು ಆತ ಎಲ್ಲಿಂದ ಹೊತ್ತು ತಂದಿರಬಹುದೆಂದು ಎಲ್ಲರೂ ಯೋಚಿಸತೊಡಗಿದರು. ಇದುವರೆಗೆ ಹೊಲಗದ್ದೆಗಳಲ್ಲಿ ನಿಲ್ಲಿಸುತ್ತಿದ್ದ ಬೆದರುಗೊಂಬೆಗಳನ್ನು ನೋಡಿದ್ದ ಅವರು ಅದನ್ನು ಈತ ಯಾರದೋ ಹೊಲದಿಂದ ಹೊತ್ತು ತಂದಿರಬಹುದೆ ಅಂತ ಅನುಮಾನಿಸತೊಡಗಿದರು. ಆದರೆ ಅದು ಬೆದರುಗೊಂಬೆಯಂತೆ ಅಡ್ಡಾ[illegible] ಯಾಗಿರದೆ ಅಚ್ಚುಕಟ್ಟಾಗಿ ಮಾಡಲಾಗಿದ್ದ ಪ್ರತಿ[illegible] ಯಾಗಿತ್ತು. ಖಾದಿಯ ಜುಬ್ಬಾ-ಪೈಜಾಮ ತೊಟ್ಟಿದ್ದ [illegible] ಪ್ರತಿಕೃತಿ ಮಡಕೆಯನ್ನು ತಲೆಯನ್ನಾಗಿ ಮಾಡಿಕೊಂಡಿ[illegible] ಆ ಮಡಕೆಗೆ ಸುಣ್ಣ ಬಳಿದು ಅದಕ್ಕೆ ದಪ್ಪ[illegible] ಹುರಿಮೀಸೆ ಬರೆದು ಅದಕ್ಕೆ ರಾಜಕಾರಣಿಯ ಸಿಲು[illegible] ತರಲಾಗಿತ್ತು. ಅದರ ಎದೆಗೊಂದು ರಟ್ಟಿನ ಬೋ[illegible]ಡು ತಗುಲಿಸಿ ಅದರ ಮೇಲೆ 'ಕ್ಷಮಿಸಿ, ನಾನು ಎಲ್ಲ[illegible] ನಾಲಾಯಕ್ಕು' ಎಂದು ಮಸಿಯಿಂದ ಬರೆಯಲಾಗಿತ್ತು.

ಆಗ ಅಲ್ಲಿದ್ದ ಕೆಲವರಿಗೆ ಹೊಳೆಯಿತು. [illegible] ಬೆಳಿಗ್ಗೆಯಿಂದಲೂ ತಾನಿದ್ದ ಸ್ಥಳದಲ್ಲಿ [illegible] ಚಟುವಟಿಕೆ ನಡೆಸಿದ್ದ. ತನ್ನ ಬಟ್ಟೆಯ ಗಂಟಿ[illegible] ಹಳೆಯ ಬಟ್ಟೆಗಳನ್ನು ತೆಗೆದು, ಎಲ್ಲಿಂದಲೋ ತಂ[illegible] ಹುಲ್ಲು ಗುಡ್ಡೆ ಹಾಕಿಕೊಂಡು ಗೊಂಬೆಯ ತಯಾ[illegible] ನಡೆಸಿದ್ದ. ಎಂದಿನಂತೆ ಅದು ಆತನ ಹುಚ್ಚು ಕಸರ[illegible] ಎಂದು ಯಾರೂ ಅದನ್ನು ಗಮನಿಸಲು ಹೋಗಿರಲಿ[illegible] ಈಗ ನೋಡಿದರೆ ಆತ ಒಂದು ಸುಂದರ ಪ್ರತಿಕೃ[illegible] ತಯಾರಿಸಿಕೊಂಡು ತಂದಿದ್ದ. ಅದನ್ನು ನೋಡುತ್ತ[illegible] ಅವರ ಆಕ್ರೋಶ ಮತ್ತಷ್ಟು ಹೆಚ್ಚತೊಡಗಿತು. ಇದುವರೆಗೂ ಕೇವಲ ಘೋಷಣೆಗಳನ್ನು ಮಾ[illegible] ಕೂಗುತ್ತಿದ್ದವರಿಗೆ ಎದುರಿಗೊಬ್ಬ ಶತ್ರು ಮೂರ್ತ[illegible] ರೂಪದಲ್ಲಿ ಸಿಕ್ಕಿದಂತಾಗಿತ್ತು. ಮತ್ತಷ್ಟು ಆವೇಶದಿಂ[illegible] ಧಿಕ್ಕಾರದ ಘೋಷಣೆಗಳನ್ನು ಕೂಗತೊಡಗಿದರು. ಅವರೊಂದಿಗೆ ಅವನೂ ಸೇರಿಕೊಂಡು ಆತನ[illegible]



# ಭೂತದ ಹಾದಿ

**ನೆ**ನಪುಗಳೇ ಹಾಗೆ
ಮಳೆಬಿದ್ದ ನೆಲದಂತೆ
ಕಾದ ಬೀಜಕ್ಕೆ ಗಾಳಿಬೆಳಕಿನ ಹದ ಒದಗಿ
ಜೀವ ಉಸಿರಾಗಿ ಹಸಿರಾಗಿ ಹೂವಾಗುತ್ತವೆ

ನೆನಪುಗಳೇ ಹಾಗೆ
ಮಳೆ ನಿಂತ ಮರದ ಬುಡ
ತೊಟ್ಟಿಕ್ಕುವ ಹನಿಯಾಗಿ
ತಣ್ಣಗೆ ಕೊರೆಯುತ್ತವೆ
ಬಣ್ಣವಿಲ್ಲದೆ ಮಾಸಿದ ರೂಹುಗಳನ್ನೆಲ್ಲ
ಎಳೆಯುತ್ತವೆ ವರ್ತಮಾನಕ್ಕೆ
ಹರಿದು ಅಂತರ್ಗಂಗೆಯಾಗಿ
ಒಳಗೊಳಗೆ ಎದೆಯ ಮರಮರಳಿ ಇರಿಯುತ್ತವೆ
ನೆನಪುಗಳೇ ಹಾಗೆ
ಭೂತದ ಪೊಟ್ಟಣಗಳಿಂದೆದ್ದ
ಬೆಂಕಿಕಡ್ಡಿಗಳಾಗಿ
ಯಾತನೆಯ ರಂಜಕವನ್ನು
ಎದೆಯ ಗೋಡೆಗೆ ತಿಕ್ಕಿ ತಿಕ್ಕಿ
ಕಿಡಿ ಹುಟ್ಟಿಸುತ್ತವೆ
ಉರಿಯುತ್ತವೆ ಉರಿಸುತ್ತವೆ
ಮೊರೆಯುತ್ತವೆ ಮರೆಸುತ್ತವೆ
ಅಳುತ್ತವೆ ಅಳಿಸುತ್ತವೆ
ನೆನಪುಗಳೇ ಹಾಗೆ

ಜಯಶಂಕರ್ ಹಲಗೂರ್
೧೧/೨, ಅಮೃತನಿಲಯ, ಮಹಡಿ, ಮೊದಲನೆಯ ಮುಖ್ಯರಸ್ತೆ, ದೊಡ್ಡಕಲ್ಲಸಂದ್ರ, ಕನಕಪುರ ರಸ್ತೆ, ಬೆಂಗಳೂರು - ೫೬೦ ೦೬೨

ೀಷಣೆ ಕೂಗುತ್ತಾ, ಭಾಷಣ ಅರಚುತ್ತಾ ವಣಿಗೆಯಲ್ಲಿ ಸಾಗಿ ಸರ್ಕಲ್‌ವರೆಗೂ ಬಂದ. ಎಲ್ಲರೂ ನೋಡನೋಡುತ್ತಿದ್ದಂತೆಯೇ ಪ್ರತಿಕೃತಿಗೆ ಕಡ್ಡಿ ಗೀಚಿ ಹಚ್ಚಿದ. ಎಲ್ಲರೂ 'ಓ...ಹೋ...!' ರು ಕೂಗುತ್ತಾ ಚಪ್ಪಾಳೆ ತಟ್ಟಿದರು.

ಪ್ರತಿಭಟನೆ, ಮೆರವಣಿಗೆ ಎಲ್ಲ ಮುಗಿದು ಎಲ್ಲವೂ ಗೊಂಡ ನಂತರ ಊರಿನ ಅನೇಕರಿಗೆ ಆ ಹುಚ್ಚನ ತು ಜಿಜ್ಞಾಸೆ ಹುಟ್ಟಿಕೊಂಡಿತು. 'ಈತ ವಾಗಿಯೂ ಹುಚ್ಚನಿರಲಾರ. ಹುಚ್ಚನಂತೆ ನಟಿಸು ವವನಿರಬೇಕು...ಅದನ್ನು ಸಾಬೀತುಪಡಿಸಿಕೊಳ್ಳು ುದರೂ ಹೇಗೆ?' ಮುಂತಾಗಿ ಯೋಚಿಸುತ್ತಿದ್ದರು. ರೆ ಆತ ಅಲ್ಲಿಂದೀಚೆಗೆ ಊರಲ್ಲಿ ಯಾವುದೇ ಯ ಸಮಾರಂಭ ನಡೆದರೂ ಅಲ್ಲಿಗೊಂದು ಕೃತಿ ತಂದು ಬೆಂಕಿ ಹಚ್ಚಿ ಸುಡುವುದನ್ನು ಅಭ್ಯಾಸ ಡಿಕೊಂಡ ಮೇಲೆ 'ಈತ ನಿಜವಾಗಿಯೂ ಹುಚ್ಚನೆ' ರು ನಿರ್ಧರಿಸಿ ಸುಮ್ಮನಾದರು.

ಮಠಾಧೀಶರೊಬ್ಬರ ಜನ್ಮಶತಾಬ್ದಿ ಸಮಾರಂಭದ ಆತ ಪ್ರತಿಕೃತಿಯೊಂದನ್ನು ಮಾಡಿ ಹೊತ್ತುಕೊಂಡು ಬಿದ್ದ. ಅದು ಮಠಾಧೀಶರ ಪ್ರತಿಕೃತಿಯಾಗಿತ್ತು. ೀಳುತಲೆ, ಕಾವಿ ಜುಬ್ಬಾ-ಪಂಚೆ ಧರಿಸಿತ್ತು. ರು ಅವನ ಹುಚ್ಚಾಟ ನೋಡಿ ನಗತೊಡಗಿದರೆ ದ ಪೈಕಿಯವರು ಗಾಬರಿ ಬಿದ್ದು ಓಡಿಬಂದಿದ್ದರು. ರಲ್ಲಾಗಲೇ ಆತ ಪ್ರತಿಕೃತಿಯ ಕೊರಳಿಗೆ ಚಪ್ಪಲಿಗಳ ವೊಂದನ್ನು ಹಾಕಿ ಅದನ್ನು ಹೆಗಲ ಮೇಲೆ ಹೊತ್ತು ಯತೊಡಗಿದ್ದ. ಅವರೆಲ್ಲ ಸೇರಿ ಪ್ರತಿಕೃತಿಯನ್ನು ಂದ ಕಿತ್ತುಕೊಂಡು ಚಪ್ಪಲಿ ಹಾರವನ್ನು ತೆಗೆಯುವ ಹೇಗೆಂದು ಯೋಚಿಸುತ್ತಾ ನಿಂತಿರುವಾಗಲೇ ಆತ ವುದೋ ಕ್ಷಣದಲ್ಲಿ ಪ್ರತಿಕೃತಿಗೆ ಬೆಂಕಿ ತ್ತಿಸಿಬಿಟ್ಟು ಅದು ಧಗಧಗನೆ ಉರಿಯಹತ್ತಿತು. ನ್ನು ನೋಡುತ್ತ ಉರಿಯತೊಡಗಿದ ಅವರೆಲ್ಲ ಹುಚ್ಚನನ್ನು ಹಿಡಿದು ಮನಬಂದಂತೆ ಥಳಿಸಲು ಶುರು ಮಾಡಿದರು. ಮಠಾಧೀಶರೊಂದಿಗೆ ವೇದಿಕೆಯಲ್ಲಿದ್ದ ಕೆಂಚಪ್ಪ ಶೆಟ್ಟಿ, ಧನಪಾಲ ಹಾಗೂ ಹನುಮೇಗೌಡ ಓಡಿಬಂದು ನೋಡುವಷ್ಟರಲ್ಲಿ ಹುಚ್ಚ ಕೆಳಗೆ ಬಿದ್ದುಕೊಂಡು ನರಳುತ್ತಿದ್ದ.

''ಈ ಹಲ್ಕಾ ಸುವರ್‌ದು ಅತಿಯಾಗ್ಹೋಯ್ತು'' ಅಂತ ಕಣ್ಣು ಮೆಡ್ಡರಿಸಿದ ಕೆಂಚಪ್ಪ ಶೆಟ್ಟಿ ''ಏಯ್ ಯಾವನಾದ್ರೂ ಇವನ್ನ ಎತ್ತಾಕ್ಕಂಡು ಹೋಗಿ ಹುಚ್ಚಾಸ್ಪತ್ರೆಗೆ ಸೇರಿಸ್ರೋ'' ಅಂತ ಕಿರುಚಿದ.

ಹಾಗೆಂದ ಶೆಟ್ಟಿಯನ್ನು ಹುಚ್ಚ ದುರುಗುಟ್ಟಿ ನೋಡಿದ. ಅದನ್ನು ಕಂಡು ಇನ್ನಷ್ಟು ಕೆರಳಿದ ಶೆಟ್ಟಿ ''ಏನೋ ಕೆಕ್ಕರ್‍ಸ್ಕಂಡು ನೋಡ್ತಿಯಾ? ಪಾಗಲ್ ಸೂಳೆ ಮಗ್ನೆ!'' ಅಂತ ಅವನ ಮುಖಕ್ಕೆ ಒದೆಯಲು ಹೋದ. ಅವನನ್ನು ಹಿಡಿದು ಹಿಂದಕ್ಕೆಳೆದುಕೊಂಡ ಧನಪಾಲ ''ಬಿಡಿ ಶೆಟ್ರೆ ಸತ್ ಗಿತ್ತು ಹೋದಾನು... ನಿಮಗ್ಯಾಕೆ ಪಾಪ'' ಅಂದ.

''ಯಾರಾದ್ರೂ ಆ ಪೊಲೀಸ್‌ನವರನ್ನ ಕರಿರ್‍ರಿ... ಇವನ್ನ ಎಳಕ್ಕಂಡು ಹೋಗ್ಲಿ'' ಅಂತ ಹನುಮೇಗೌಡ ಕೂಗಿಕೊಂಡ.

* * *

ಕೆಂಚಪ್ಪ ಶೆಟ್ಟಿ ಹೇಳಿದ್ದನ್ನು ಕೇಳುತ್ತಲೇ ಅವರೆಲ್ಲರೂ ನಂಬದಾದರು. ಟೀವಿಯಲ್ಲಿ ತೋರಿಸಿದ ಆ ವ್ಯಕ್ತಿ ಇವನೇ; ಅವನ ಗಂಟಿನಲ್ಲಿರುವುದು ನಿಜವಾಗಿಯೂ ಆತ ಕದ್ದಿರಬಹುದಾದ ಹಣವೆ ಅಂತ ಶೆಟ್ಟಿ ವಿಶ್ವಾಸದಿಂದ ಹೇಳಿದ್ದು ಕೇಳಿ ಕಣ್ಣು ಬಾಯಿ ಬಿಟ್ಟುಕೊಂಡು ನೋಡತೊಡಗಿದರು.

''ಆ ಗಂಟಿನಲ್ಲಿ ಇಲ್ಲದಿದ್ದರೆ ಹಣಾನ ಅವ್ನು ಇನ್ನೆಲ್ಲೋ ಬಚ್ಚಿಟ್ಟಿದ್ದಾನೆ'' ಅಂದ ಶೆಟ್ಟಿ.

''ಹೌದು... ಆ ನನ್ಮಗ ಕಿಲಾಡಿ... ಸ್ವಿಸ್ ಬ್ಯಾಂಕ್‌ನಲ್ಲಿ ಬೇಕಾದ್ರೂ ಇಟ್ಟಿರ್‍ತಾನೆ... ಊರಲ್ಲಿ ಅವನ ಭಾಷಣ... ಇಂಗ್ಲಿಷು ಎಲ್ಲಾ ನೋಡಿಲ್ವಾ ನಾವು'' ಅಂತ ಸುರೇಶ್‌ಬಾಬು ಅಂದ.

''ಆದ್ರೂ ಅವನನ್ನ ಸಾಯಿಸ್ಬೇಕು ಅನ್ನೋದರ ಬಗ್ಗೆ ನಂಗೇನೋ ಒಪ್ಪಿಗೆ ಇಲ್ಲ'' ಎಂದ ಧನಪಾಲ ಎಲ್ಲರ ಮುಖವನ್ನೂ ನೋಡತೊಡಗಿದ.

ಅವನ ಮಾತು ಕೇಳಿ ಕೊಂಚ ಸಿಟ್ಟಾದ ಶೆಟ್ಟಿ ''ಮತ್ತೇನ್ರಿ? ಅವನನ್ನ ಅಣ್ಣ-ಅಪ್ಪ ಅಂತ ಮುದ್ದಾಡೋಕ್ಕಾಗುತ್ತೇನ್ರಿ... ನೀವೊಂದು'' ಎಂದು ಅತ್ತ ಮುಖ ತಿರುಗಿಸಿದ. ಸ್ವಲ್ಪ ಹೊತ್ತು ಸುಮ್ಮನಿದ್ದು ''ನಾವೇ ನೇರ ಹೋಗಿ ಈ ಕೆಲ್ಸ ಮಾಡ್ತೀವಾ? ನಮ್ಮ ಹುಡುಗರಿದ್ದಾರೆ; ನೋಡ್ಕೋತಾರೆ...ಒಂದಷ್ಟು ಹಣ ಸಿಕ್ಕರೆ ನಮ್ಮ ಹೋರಾಟಗಳಿಗೆ ಹೆಲ್ಪ್ ಆಗಲ್ವಾ? ಹುಚ್ಚನೊಬ್ಬ ರಸ್ತೇಲಿ ಸತ್ರೆ ಯಾರು ತಲೆಕೆಡಿಸ್ಕೋತಾರೆ?'' ಎನ್ನುತ್ತ ಸಿಗರೇಟು ಹೊಗೆ ಬಿಡತೊಡಗಿದ.

* * *

ಶೆಟ್ಟಿ ಮತ್ತು ಅವನ ಗೆಳೆಯರಷ್ಟೇ ಅಲ್ಲ; ಊರ ಹಲವಾರು ಮಂದಿ ಟೀವಿಯಲ್ಲಿ ಆ ಸುದ್ದಿಯನ್ನು ಗಮನಿಸಿದ್ದರು. ಅವರಲ್ಲಿ ಕೆಲವರಿಗೆ ಮಾತ್ರ ಅನುಮಾನ ಬಂದಿತ್ತು. ಅಲ್ಲಿನ ವಿವರಗಳಿಗೂ ಹುಚ್ಚನ ಚಟುವಟಿಕೆಗಳಿಗೂ ಎಲ್ಲೋ ತಾಳೆಯಾಗುತ್ತದೆ ಎಂದೆನ್ನಿಸಿ ಅವನ ಬಗ್ಗೆ ಮತ್ತಷ್ಟು ಕುತೂಹಲ, ಅನುಮಾನ, ಆತಂಕವಾಗತೊಡಗಿತು.

ಭಯಗೊಂಡಿದ್ದ ಕೆಲವರು ಅವನನ್ನು ಕಂಡರೆ ಹತ್ತಿರ ಸುಳಿಯಲು ಹಿಂಜರಿಯತೊಡಗಿದರು. ಅನುಮಾನವಿದ್ದವರು ಪೊಲೀಸರಿಗೆ ತಿಳಿಸಿಬಿಡೋಣ ವೆಂದುಕೊಂಡರೂ ನಾಳೆ ಎಲ್ಲಾ ತನಿಖೆಗಳಿಗೂ ಪೊಲೀಸರು ತಮ್ಮನ್ನು ಕರೆಯಬಹುದೆಂದು ಹೆದರಿ ಸುಮ್ಮನಾದರು. ಕುತೂಹಲವಿದ್ದವರು ದಿನವಿಡೀ ಒಂದಿಲ್ಲೊಂದು ನೆವದೊಂದಿಗೆ ಅವನ ಸುತ್ತಮುತ್ತಲೇ ಸುಳಿದಾಡತೊಡಗಿದರು. ಅವನಿಗೆ ಪ್ರಶ್ನೆಗಳ್ನೋ,

ರೊಟ್ಟಿಯನ್ನೋ, ಬಾಳೆಹಣ್ಣನ್ನೋ ನೀಡುವವರಂತೆ ಅವನಲ್ಲಿಗೆ ಹೋಗುತ್ತಿದ್ದರು. ಕೆಲವರು ರಾತ್ರಿಯ ಸಮಯದಲ್ಲಿ ಅವನಿರುವ ಸ್ಥಳದಿಂದ ದೂರದಲ್ಲಿ ನಿಂತು ಅವನ ಚಲನವಲನವನ್ನು ಗಮನಿಸುತ್ತಿದ್ದರು. ಅವನಾಗಲೇ ತನಗೆ ಸಿಕ್ಕಿದ್ದು ತಿಂದು ಬಟ್ಟೆಯ ಗಂಟಿಗೆ ತಲೆಯಾನಿಸಿ ಗೊರಕೆ ಹೊಡೆಯುತ್ತ ಮಲಗಿಬಿಟ್ಟಿರುತ್ತಿದ್ದ.

ದಿನೇ ದಿನೇ ಊರ ಜನರು ತನ್ನ ಹಿಂದೆ ಹಿಂದೆ ಸುಳಿದಾಡುವುದು ಕಿರಿಕಿರಿ ಎನಿಸಿದವನಂತೆ ಆತ ಪದೇಪದೇ ಜಾಗ ಬದಲಾಯಿಸಲು ತೊಡಗಿದ. ಯಾವಾಗಲೂ ಇರುತ್ತಿದ್ದ ಸರ್ಕಲ್‌ನ ಹಿಂದಿರುವ ಪಾಳು ಶಾಲೆಯ ಜಗುಲಿಯಿಂದ ತನ್ನ ಮೂಟೆಯನ್ನು ಹೊತ್ತು ದಿನಕ್ಕೊಂದು ಜಾಗ ಹುಡುಕಿ ಅಲೆಯತೊಡಗಿದ. ಎಲ್ಲಿಗೆ ಹೋದರೂ ಜನ ಅವನನ್ನು ಹಿಂಬಾಲಿಸುವುದು ಹೆಚ್ಚುತ್ತಲೇ ಹೋಯಿತು. ಯಾವ ಗುಪ್ತ ಸ್ಥಳ ಹುಡುಕಿಕೊಂಡರೂ ಅಲ್ಲೆಲ್ಲ ಜನರು ಕಾಣಿಸಿಕೊಂಡು ಇವನು ಅವರತ್ತ ನೋಡುತ್ತಲೇ ಅವರು ಇನ್ನೇನೋ ಕೆಲಸಕ್ಕೆ ಬಂದವರಂತೆ ಅತ್ತ ಮುಖ ತಿರುಗಿಸಿ ಅಡ್ಡಾಡುತ್ತಿದ್ದರು. ಅವರಲ್ಲಿ ಕೆಂಚಪ್ಪ ಶೆಟ್ಟಿಯ ಹುಡುಗರೂ ಇದ್ದರು.

* * *

ಹೊಸ ತಾಲ್ಲೂಕುಗಳ ರಚನೆಗೆ ಸರ್ಕಾರ ನೇಮಿಸಿದ್ದ ಸಮಿತಿ ಈ ಬಾರಿಯೂ ತಮ್ಮ ಊರನ್ನು ಪಟ್ಟಿಯಿಂದ ಕೈಬಿಟ್ಟಿದ್ದರಿಂದ ಊರ ಜನ ಹಿಂದೆಂದಿಗಿಂತಲೂ ಹೆಚ್ಚು ಆಕ್ರೋಶಿತರಾಗಿದ್ದರು. ಈ ಬಾರಿ ದೊಡ್ಡದಾದ ಪ್ರತಿಭಟನಾ ಮೆರವಣಿಗೆ ಹೊರಡಿಸಿ ಜಿಲ್ಲಾಧಿಕಾರಿಗಳ ಕಚೇರಿಗೆ ಮುತ್ತಿಗೆ ಹಾಕುವ ಕಾರ್ಯಕ್ರಮ ಹಾಕಿಕೊಂಡಿದ್ದರು.

ಹುಚ್ಚನ ಜಾಡನ್ನು ಪತ್ತೆ ಹಚ್ಚಲಾಗದೆ ಹತಾಶೆಯಿಂದ ಓಡಾಡುತ್ತಿದ್ದ ಕೆಂಚಪ್ಪ ಶೆಟ್ಟಿ ಮತ್ತವನ ಸ್ನೇಹಿತರಿಗೆ ಪ್ರತಿಭಟನೆಯ ಮೇಲೆ ಅಷ್ಟೇನೂ ಆಸಕ್ತಿ ಇರಲಿಲ್ಲ. ಆದರೂ ಊರ ಜನ ತಮ್ಮನ್ನು ಅನುಮಾನಿಸಬಹುದೆಂಬ ಭಯದಿಂದ ಮೆರವಣಿಗೆಯ ಮುಂಚೂಣಿಯಲ್ಲಿದ್ದರು.

ಜಿಲ್ಲಾ ಕೇಂದ್ರಕ್ಕೆ ಪ್ರತಿಭಟನಾಕಾರರು ನಾಲ್ಕು ಲಾರಿಗಳಲ್ಲಿ ಹೊರಡುವುದೆಂದು ತೀರ್ಮಾನಿಸಲಾಗಿತ್ತು. ಅದಕ್ಕೂ ಮುಂಚೆ ಊರಲ್ಲಿ ಎಲ್ಲಾ ಅಂಗಡಿ-ಮುಂಗಟ್ಟುಗಳನ್ನು ಬಂದ್ ಮಾಡಿಸಿ, ಬೃಹತ್ ಮೆರವಣಿಗೆ ಮಾಡಬೇಕೆಂದುಕೊಂಡಿದ್ದರಿಂದ ಎಲ್ಲರೂ ಅವಸರದಲ್ಲಿ ಹೊರಟಿದ್ದರು. ಮೆರವಣಿಗೆ ಸರ್ಕಲ್‌ನ ಬಳಿ ಬರುತ್ತಿದ್ದಂತೆ ಪ್ರತಿಭಟನಾಕಾರರಲ್ಲೊಬ್ಬ "ಸರ್ಕಾರದ ಪ್ರತಿಕೃತಿ ತಗೊಂಬನ್ನಿ... ಬೆಂ ಹಾಕೋಣ!" ಅಂತ ಕೂಗಿಕೊಂಡ. ಅಲ್ಲಿದ್ದವರೆಲ್ಲ ಒಬ್ಬರನ್ನೊಬ್ಬರು ನೋಡಿಕೊಂಡರು. ಯಾಕೆಂದರೆ ಯಾರೊಬ್ಬರಿಗೂ ಪ್ರತಿಕೃತಿ ಮಾಡಿ ತರಬೇಕೆಂಬುದು ಹೊಳೆದಿರಲಿಲ್ಲ. ಯಾರೊಬ್ಬರೂ ಮಾತನಾಡದಿದ್ದಾಗ ಮತ್ತೊಬ್ಬ "ಆ ಹುಚ್ಚನ್ನ ಕರೀರೋ... ಅವನ ಯಾವ್ದಾದ್ರೂ ಪ್ರತಿಕೃತಿ ಇರುತ್ತೆ" ಅಂತ ಜೋರಾಗಿ ಕಿರುಚಿ ಹೇಳಿದ. ಏರುತ್ತಲೇ ಇ ತಮ್ಮಟೆಯ ಸದ್ದಿನ ಮಧ್ಯದಲ್ಲಿ ಕುಣಿಯುತ್ತಿದ್ದ ಒಂದಷ್ಟು ಮಂದಿ ಕುಣಿಯುವುದನ್ನು ನಿಲ್ಲಿಸಿ ಏದುಸಿರುಬಿಡುತ್ತ ಅವನನ್ನು ಹುಡುಕಿ ಕರೆತರಲು ಓಡಿದರು.

ದೂರದಿಂದ ಭರಮ ದೊಡ್ಡ ಬಟ್ಟೆಯ ಗಂಟನ್ನು ಹೊತ್ತು ಗುಂಪಿನ ಓಡಿಬರುತ್ತಿದ್ದ. ಅವನನ್ನು ನೋಡಿದ ನಾಲ್ಕಾರು ಜನ "ಆ ಪ್ರತಿಕೃತಿ ಈಸ್ಕೊಂಡು ಬೆಂಕಿ ಹಚ್ಚಿ ಬೇಗ... ಬೇಗ" ಎಂದು ಅವಸರಿಸತೊಡಗಿದರು. ಭರಮ "ಇದು ಪ್ರತಿಕೃತಿ ಅಲ್ಲಾರೀ.... ಆ ಹುಚ್ಚನ ಗಂಟು" ಅಂತ ಮತ್ತೆ ಮತ್ತೆ ಕೂಗಿಕೊಂಡ. ಅವನ ಮಾತಿಗೆ ಕಿವಿಗೊಡದ ಅವರೆಲ್ಲ ಗಂಟನ್ನು ಅವನಿಂದ ಕಸಿದುಕೊಂಡು ಬೆಂಕಿ ಹಚ್ಚಲು ತಯಾರಿ ನಡೆಸಿದರು. 'ಹುಚ್ಚನ ಗಂಟು' ಎನ್ನುವ ಭರಮನ ಮಾತು ಕಿವಿಗೆ ಬಿದ್ದುದೇ ತಡ, ಕೆಂಚಪ್ಪ ಶೆಟ್ಟಿ ಚುರುಕಾದವನಂತೆ ಗುಂಪಿನ ಮಧ್ಯಕ್ಕೆ ಓಡೋಡಿ ಬಂದ ಅಷ್ಟರಲ್ಲಾಗಲೇ ಪ್ರತಿಭಟನಾಕಾರರು ಆ ಗಂಟಿಗೆ ಸೀಮೆಎಣ್ಣೆ ಸುರಿದು ಬೆಂ ಹಚ್ಚಿಬಿಟ್ಟಿದ್ದರು. ಅದನ್ನು ನೋಡಿ ಶೆಟ್ಟಿ "ಅದಕ್ಕೆ ಬೆಂಕಿ ಹಾಕ್ಬೇಡಿ...ಆರ್ಸಿ...ಆರ್ಸಿ!" ಎಂದು ಬಾಯಿ ಹರಿದು ಹೋಗುವಂತೆ ಅರಚುತ್ತಿದ್ದರೆ, ಅಲ್ಲಿಯೇ ಇದ್ದ ಧನಪಾ ಭಯದಿಂದ ಅಯ್ಯಯ್ಯೋ! ಹುಚ್ಚನಿಗೇ ಬೆಂಕಿ ಹಚ್‌ಬಿಟ್ರಲ್ಲೋ! ಅಂತ ಒದರಹತ್ತಿದ

* * *

ಆತ ನಿರ್ವಸ್ತ್ರನಾಗಿ ಇನ್ನೊಂದು ಊರಿನ ದಾರಿ ಹುಡುಕಿ ಹೊರಟಿದ್ದ.

---

**ಮಂಜುನಾಥ್ ಲತಾ**
ಕೇರಾಫ್ : ರೂಪ ಪ್ರಕಾಶನ, ನಂ. ೨೪೦೬-೨೪೦೭/ಕೆ-೧, ೧ನೇ ಕ್ರಾಸ್, ಹೊಸಬಂಡಿಕೇರಿ
ನಂಜುಮಳಿಗೆ, ಕೆ. ಆರ್. ಮೊಹಲ್ಲಾ, ಮೈಸೂರು - ೫೭೦ ೦೦೪

ಭಾರತೀ ಕಾಸರಗೋಡು

**ಮೈ**ಸೂರಿನ ಸದ್ಗೃಹಸ್ಥರೊಬ್ಬರ ನೆಯಲ್ಲಿ ಒಂದು ಪುಟಾಣಿ ಹುಡುಗಿ... ುದ್ದು ಹುಡುಗಿ! ಮುದ್ದು ಅಂದರೆ ಂತಹ ಮುದ್ದು ಅನ್ನುತ್ತೀರಿ? ಹಾಲಿನಲ್ಲಿ ಅದ್ದಿದ ಬಣ್ಣ. ನಡೆದು ರುತ್ತಾ ಇದ್ದರೆ ಕೆನ್ನೆಗಳಲ್ಲಿ ರಕ್ತ ತೊಟ್ಟಿಕ್ಕುವಂತೆ ಕಾಣುತ್ತಿತ್ತು. ಪಿಗೆ ಮೂಗು, ಬಟ್ಟಲು ಕಣ್ಣು, ಮಾರುದ್ದದ ದುಂಬಿಗೂದಲು, ಾಳೆಯುವ ನಗುಮುಖ... ಥೇಟು ಪದ್ಮಾವತಿಯದೇ ರೂಪ!

ಈ ಗೃಹಸ್ಥರು ಜೋಡಿದಾರರಾದ್ದರಿಂದ ಮೈಸೂರಿನ ತ್ತಮುತ್ತ ಸಮೃದ್ಧ ಹೊಲಗದ್ದೆ, ಹುಲುಸಾದ ತೆಂಗಿನ ತೋಟ. ನೆಯಲ್ಲೂ ತುಂಬಿದ ಕುಟುಂಬ. ಜತೆಗೆ ಬಂಧು-ಮಿತ್ರರು, ರಾನ್ನದ ವಿದ್ಯಾರ್ಥಿಗಳು. ಹೊತ್ತಿಗೆ ಇಪ್ಪತ್ತೈದು ಎಲೆ ಬೀಳುತ್ತಿತ್ತು. ಾಟ-ತಿಂಡಿಗಳದೇ ಒಂದು ನಿತ್ಯ-ಮಹೋತ್ಸವ. ಸಣ್ಣಕ್ಕಿ ಅನ್ನ, ಣ್ಣೆ ಕಾಸಿದ ತುಪ್ಪ, ತರಕಾರಿ, ದಿನಾಲೂ ಸೊಗಸಾದ ತೆಂಗಿನ ಯಿ ಚಟ್ನಿ! ಈ ಮುಗುದೆಗೆ ಉಡಲು ಕಂಚಿಸೀರೆಯೇ ಬೇಕು.

ಈ ಮುದ್ದುಬಾಲೆ ಓದಿದ್ದು ಐದನೇ ತರಗತಿವರೆಗೆ ಮಾತ್ರ. ದರೂ ಪುಸ್ತಕಗಳು ರೇಡಿಯೋ ಸದಾ ಸಂಗಾತಿಗಳು. ಜುವನ್ನು ಇಂಗ್ಲಿಷಿನಲ್ಲೂ ಮುದ್ದಾಗಿ ಹಾಕುತ್ತಿದ್ದ ಈ ಪುಟ್ಟ ಡುಗಿಗೆ ಹೆಚ್ಚಿನ ವಿದ್ಯೆಯನ್ನು ಕಲಿಯುವ ಆಸೆಯೇನೋ ಟ್ಟದಷ್ಟೇ ಇತ್ತು. ಆದರೆ ಪರಿಸ್ಥಿತಿ ಪ್ರತಿಕೂಲವಾಗಿ ಇತ್ತು. ನ್ನೆರಡನೇ ವಯಸ್ಸಿಗೇ ವಿವಾಹ ಬಂಧನಕ್ಕೊಳಗಾದ ಈಕೆ ತರ ಊಹಿಸಲೂ ಸಾಧ್ಯವಿರದ ಕಡು ಕಷ್ಟದ ಸಂಸಾರ ರವನ್ನು ಹೆಗಲ ಮೇಲೆ ಹೊರಬೇಕಾಯಿತು, ಹೊತ್ತಳು; ಬಲು ಂದರವಾಗಿ ನಿಭಾಯಿಸಿದಳು ಕೂಡ. ತನ್ನ ಅಪಾರ ಕರ್ಮ ಯುತ್ವದಿಂದ ಧೀರತೆಯಿಂದ ಮಾಗಡಿ ಅವ್ವ ಎಂದು ಹೆಸರಾಗಿ ನೆತನದ ಮಹಿಳೆಯರಿಗೆಲ್ಲ ಮಾದರಿಯೂ ಆದಳು.

ಕೈ ಹಿಡಿದ ಗಂಡ ರಾಮಾಚಾರ್ ತುಂಬ ಸಭ್ಯ ವ್ಯಕ್ತಿ. ಎಫ್.ಎ. ಾಡಿದ್ದರು. ಸಾಹಿತ್ಯವನ್ನು ತುಂಬ ಓದಿಕೊಂಡು ವಿದ್ವತ್ತನ್ನು ಸಿದ್ದ ಇವರು ಮಾಗಡಿಯಲ್ಲಿ ಉಪಾಧ್ಯಾಯರಾಗಿದ್ದರು. ರಾಮಾಚಾರ್ಯರಿಗೆ ಕೋಪವೆಂಬುದೇ ಇಲ್ಲ. ಬಲು ಒಳ್ಳೆಯತನ, ಅನನ್ಯ ದೈವಭಕ್ತಿ. ಇಂಥ ಸಂಭಾವಿತರನ್ನು ಮದುವೆಯಾಗಿ ಮೈಸೂರಿನ ಮುದ್ದುಬಾಲೆ ಮಾಗಡಿಗೆ ಬಂದಿಳಿದಳು. ರಾಮಾಚಾರ್ಯರು ಕೂಡ ವಿಸ್ತಾರವಾಗಿ ಜಮೀನನ್ನು ಹೊಂದಿದ್ದವರೇ. ಆದರೆ ಆಗ ಅವರು ಬೆಳೆಯುತ್ತಿದ್ದ ಭತ್ತ ಅಷ್ಟಕ್ಕಷ್ಟೇ. ಸಣ್ಣಕ್ಕಿ ಅನ್ನ ತಿಂದು ಬೆಳೆದ ಹುಡುಗಿಗೆ ಇಲ್ಲಿ ಕೆಂಪಕ್ಕಿ ಅನ್ನ, ಸೊಪ್ಪಿನ ಹುಳಿ! ಹುಡುಗಿ ಗೊಳೋ ಅಂತ ಅತ್ತುಬಿಟ್ಟಳು. ಗಂಡ ಮರುಗಿ ಪುಟ್ಟ ಹೆಂಡತಿಗಾಗಿ ಒಂದಿಷ್ಟು ಸಣ್ಣಕ್ಕಿ ತರಿಸಿದರು. ಪಟ್ಟಣದ ಹುಡುಗಿ ಅಂತ ಸೋಪು ತರಿಸಿಕೊಟ್ಟರು. ಇದೆಲ್ಲ ಎಷ್ಟು ದಿನ? ''ಪರವಾಗಿಲ್ಲ, ನಾನು ಇಲ್ಲಿಯ ರೀತಿ-ನೀತಿಗಳಿಗೇ ಹೊಂದಿಕೋತೀನಿ'' ಅಂತ ಹಾಗೇ ಹೊಂದಿಕೊಂಡುಬಿಟ್ಟಳು ದಿಟ್ಟ ಹುಡುಗಿ.

ಈ ಕೋಮಲೆಗೆ ಹದಿನಾರನೇ ವಯಸ್ಸಿಗೇ ಮೊದಲ ಮಗು. ಅಲ್ಲಿಂದ ಶುರುವಾಯ್ತು ಹೆರುವ ಪ್ರಕ್ರಿಯೆ! ಸಾಲು ಸಾಲಾಗಿ ಆರು ಹೆಣ್ಣುಮಕ್ಕಳು, ಒಬ್ಬ ಹುಡುಗ. ಸಂಸಾರದಲ್ಲಿನ್ನೂ ಸಾರವನ್ನು ಕಂಡುಕೊಳ್ಳುತ್ತಿರುವಾಗಲೇ, ಅಷ್ಟೊಂದು ಪ್ರೀತಿಸುತ್ತಿದ್ದ ಗಂಡ ಮೂವತ್ತೆಂಟನೇ ವಯಸ್ಸಿಗೇ ದಿಢೀರನೆ ಹೋಗಿಬಿಟ್ಟರು. ತಿರುಪತಿಯ ವಿದ್ವತ್ಸಭೆಯೊಂದರಲ್ಲಿ ಭಾಗವಹಿಸಿ ಬಂದ ಅವರು ನ್ಯುಮೋನಿಯಾ ತಗುಲಿ ತೀರಿಕೊಂಡರು. ಅವ್ವಗೆ ಆಗ ಕೇವಲ ಮೂವತ್ತೆರಡು, ಜತೆಗೆ ಹೊಟ್ಟೆಯಲ್ಲೊಂದು ಮಗು!

ಅಗಾಧ ದುಃಖವನ್ನು ಅವ್ವ ಒಡಲಿನ ಒಂದು ಮೂಲೆಗೆ ತಳ್ಳಿಬಿಟ್ಟರು. ''ಅಳಕ್ಕೆ ನಂಗೆ ಪುರುಸತ್ತಿಲ್ಲ'' ಅಂತ ತಮ್ಮಷ್ಟಕ್ಕೆ ನಿತ್ಯ-ಕರ್ತವ್ಯಗಳಲ್ಲಿ ಮುಳುಗಿಹೋದರು. ಆ ಕರ್ತವ್ಯವಾದರೂ ಎಷ್ಟೊಂದು ಅಪಾರವಾಗಿತ್ತು! ಮೊದಲ ಮಗಳು ಹೆರಿಗೆಗೆ ಬಂದಿದ್ದಳು. ಎರಡನೇ ಮಗಳಿಗೆ ಮದುವೆಯಾಗಿ ನಿಷೇಕ ಬಾಕಿ ಇತ್ತು. ಮೂರನೇ ಮಗಳಿಗೆ ಗಂಡು ಹುಡುಕುತ್ತಿದ್ದರು. ಜತೆಗೆ ಇತರ ಸಣ್ಣಪುಟ್ಟ ಮಕ್ಕಳು, ಮೇಲೊಂದು ಕೈಕೂಸು. ಇವೆಲ್ಲದರ ಜತೆಗೆ ಅವ್ವ ಗಂಡ ಮಾಡುತ್ತಿದ್ದ ಜಮೀನಿನ ಉಸ್ತುವಾರಿಯನ್ನೂ ತಾವೇ ವಹಿಸಿಕೊಂಡರು. ನಾಟಿ, ಬೆಳೆ, ಕುಯಿಲು ಎಲ್ಲ ಸಂದರ್ಭಗಳಲ್ಲಿ ಖುದ್ದಾಗಿ ಹಾಜರಿದ್ದು (ಅನೇಕ ಬಾರಿ ಉಪವಾಸವಿದ್ದು) ಕೆಲಸ ಮಾಡಿಸುತ್ತಿದ್ದರು. ದುಃಖಿಸಲು




ಬೇಜಾರು ಅನ್ನುವುದು ಅವ್ವನಿಗೆ ತಿಳಿಯದ ಮಾತು. ಮೂರು ಹೊತ್ತೂ ಮೈತುಂಬ ಚಟುವಟಿಕೆ. ಮನೆಗೆಲಸ, ಜಮೀನಿನ ಕೆಲಸ, ಮಕ್ಕಳ ಪಾಲನೆ, ಇತರರ ಕಷ್ಟಸುಖ ವಿಚಾರಣೆ... ಹೀಗೆ ನೂರೆಂಟು ಕಾರ್ಯಭಾರ. ಇಂತಿಪ್ಪ ಅವ್ವನಿಗೆ ಬಿಡುವೆಂಬುದು ಎಲ್ಲಿತ್ತೋ? ಅಂತೂ ಅಂಥ ಬಿಡುವಿನಲ್ಲಿ ಹೊಲಿಗೆ-ಕಸೂತಿ ಮಾಡುತ್ತಿದ್ದರು. ಸ್ವೆಟರು ಹೆಣೆಯುತ್ತಿದ್ದರು. ಕಾರ್ಡ್‌ಬೋರ್ಡ್ ಮೇಲೆ ಉಲ್ಲನ್ ಅಂಟಿಸಿ ಕೃಷ್ಣ ರಾಮ ಮುಂತಾದ ಚಿತ್ರ ರಚಿಸುತ್ತಿದ್ದರು. ಸಣ್ಣ ಮೂತಿಯ ಶೀಷೆಯೊಳಗೆ ತಾಮ್ರದ ತಂತಿ – ರಸದ ಗುಂಡು ತೂರಿ ಹೂವು, ಗಿಣಿ, ನವಿಲುಗಳನ್ನು ಮಾಡುತ್ತಿದ್ದರು.

ಸಮುಮವೆಲ್ಲಿ? ಜತೆಗೆ ಸಮಾಜದ ಕಟ್ಟಳೆಗಳು ಬೇರೆ ಕ್ರೂರವಾಗಿದ್ದವು. ಕೊನೆಯ ಮಗುವಿಗೆ ಎರಡು ವರ್ಷ ತುಂಬಿದಾಗ ಅವ್ವನಿಗೆ ಕೇಶಮುಂಡನವಾಯಿತು. ಹೊರಗೂದಲು ಸೂರೆಹೋಯ್ತು; ಕೆಂಪು ಸೀರೆ ಮೈಮೇಲೆ ಬಂತು. ಹೆಣ್ತನದ ಹೊರ ಆಕಾರವನ್ನು ಇವರು ವಿಕಾರ ಮಾಡಿದರೆ ಏನಾಯ್ತು? ಒಳಗಿನ ಸ್ತ್ರೀಧರ್ಮ ಸುಮ್ಮನಿರುತ್ತದೆಯೇ? ಕೆಂಪು ಸೀರೆಯಲ್ಲಿಯೇ ಕೆಂಪು ಬವಣೆಯನ್ನು ಬಹುಕಾಲ ಅನುಭವಿಸಬೇಕಾಯಿತು ಅವ್ವ. ಮುಟ್ಟಿನ ಕೋಣೆಯಲ್ಲಿ, ಪಾಪ, ಮೊದಲೇ ಹುರಿಟ್ಟು, ಅವಲಕ್ಕಿ ಎತ್ತಿಟ್ಟುಕೊಂಡಿರುತ್ತಿದ್ದರಂತೆ.

ಅವ್ವನಿಗೆ ಕಟ್ಟಕಡೆಯ ಹೆರಿಗೆ ಆಗಿದ್ದು ಪತಿ ತೀರಿಹೋದ ನಾಲ್ಕು ತಿಂಗಳ ಮೇಲೆ. ಕಾಕತಾಳೀಯ ಅಂದರೆ ಅವ್ವ ತಮ್ಮ ಕೊನೆಯ ಮಗಳನ್ನು ಹೆತ್ತ ದಿನವೇ, ಅಪರ ಹಿರಿಯ ಮಗಳೂ ಮೊದಲ ಮಗುವನ್ನು ಹೆತ್ತಳು. ಅಮ್ಮ-ಮಗಳು ಒಟ್ಟಿಗೇ ಒಳಗೆ ಬೇನೆ ಅನುಭವಿಸುತ್ತಿದ್ದರೆ ಬಾಗಿಲಲ್ಲೇ ಕೂತ ಅಳಿಯ ಗಡಿಬಿಡಿಯಿಂದ "ಹೆರಿಗೆ ಆಯ್ತೇ? ಹೆರಿಗೆ ಆಯ್ತೇ?" ಎಂದು ಪದೇ ಪದೇ ವಿಚಾರಿಸುತ್ತಿದ್ದರಂತೆ. ಈ ಗಾಬರಿಗೆ ಅವ್ವ ಮೊದಲು ಹಡೆದುಬಿಟ್ಟರು! ಅಲ್ಲೂ ಅಳಿಯನದು ತಕರಾರು - "ನನ್ನ ಹೆಂಡತಿಗೆ ಇನ್ನೂ ಆಗೇ ಇಲ್ಲ, ಅತ್ತೆಮ್ಮನೇ ಮೊದಲು ಹೆತ್ತುಬಿಟ್ಟರು!" ಅತ್ತೆಮ್ಮ ಹೆತ್ತದ್ದು ಹೌದು. ಆದರೆ ಹನ್ನೊಂದನೇ ದಿನ ಪುರುಡಿನ ನೀರು ಹಾಕಿಕೊಂಡವರೇ ಕೆಲಸಕ್ಕೆ ಎದ್ದುಬಿಟ್ಟರು. ಮಗಳಿಗೆ ಬಾಣಂತನ ಮಾಡಬೇಕಲ್ಲ!

ಅವ್ವನ ಕಷ್ಟ ಹೇಳತೀರದು. ಸಂಸಾರದ ತಕ್ಕಡಿಯನ್ನು ತಾವೊಬ್ಬರೇ ತೂಗಿಸ ಬೇಕಿತ್ತು. ದುಡಿದು ತಂದು ಹಾಕುವ ಅನ್ಯ ಸದಸ್ಯರಿಲ್ಲ. ಭತ್ತವೇನೋ ವರ್ಷಕ್ಕಾಗುವಷ್ಟು ಸಿಗುತ್ತಿತ್ತು. ರಾಗಿ ಮಿಗಿಲಾಗಿ ಬರುತ್ತಿತ್ತು. ಆಲೆಮನೆಯಿಂದ ಬೆಲ್ಲ ಸಮೃದ್ಧವಾಗಿ ಬಂದು ಬೀಳುತ್ತಿತ್ತು. ರಾಗಿ ಬೆಲ್ಲ ಮಾರಿ ಕಂದಾಯ ಕಟ್ಟುತ್ತಿದ್ದರು. ರೈತರ ಕೂಲಿ ಕೊಡುತ್ತಿದ್ದರು. ಗಂಡನ ಅಲ್ಪಸ್ವಲ್ಪ ಪೆನ್‌ಶನ್ ಕೂಡ ಬರುತ್ತಿತ್ತು. ವಾಸವಿದ್ದ ಒಂದು ಸ್ವಂತ ದೊಡ್ಡಮನೆ ಅಲ್ಲದೆ ಇನ್ನೆರಡು ಚಿಕ್ಕ ಚಿಕ್ಕ ಮನೆಗಳೂ ಇದ್ದು ಅವುಗಳ ಬಾಡಿಗೆ ಹಣ ಒದಗುತ್ತಿತ್ತು. ಇವಿಷ್ಟು ಆದಾಯದಿಂದ ಅವ್ವನ ದೊಡ್ಡ ಸಂಸಾರದ ನಿರ್ವಹಣೆ.

ಈ ಮೈಸೂರ ತರುಣಿ ಬಲು ಶ್ರಮಜೀವಿ... ಅಷ್ಟೇ ಧೈರ್ಯಶಾಲಿ. "ದೇವ್ರಿದಾನೆ ನಂಗೇನು ಭಯ?" ಅನ್ನೋರು. ಬೆಳಗಿನ ಜಾವವೇ ಎದ್ದು ಜಮೀನು ಉಸ್ತು... ಬೆಳೆ ವಸೂಲಿ-ಸೌದೆ ವಸೂಲಿಗಳಿಗೆ ಹೊರಟುಬಿಡುತ್ತಿದ್ದರು. ಅಷ್ಟೇ ವೇಗವಾಗಿ ... ಹಿಂದಿರುಗಿಯೂ ಬರಬೇಕಿತ್ತು. ಹತ್ತು ಗಂಟೆಗೆ ಶಾಲೆಗೆ ಹೊರಡುವ ಮಕ್ಕಳಿಗೆ ತಿಂ... ಮಾಡಿಕೊಡಬೇಕು; ಜಡೆ ಹೆಣೆಯಬೇಕು. ಮತ್ತೆ ಮಕ್ಕಳು ಒಂದು ಗಂಟೆಗೆ ಊಟ... ಬರುವ ವೇಳೆಗೆ ಪುಷ್ಟಿಕರ ಅಡುಗೆ ಸಿದ್ಧವಾಗಬೇಕು. ಅವ್ವ ಎಂದೂ ಒಂದೆರಡು ... ಅಡಿಗೆ ಮಾಡಿದವರೇ ಅಲ್ಲ. ಬೆಲ್ಲ ಸಮೃದ್ಧವಾಗಿ ಇದ್ದದ್ದರಿಂದ ದಿನಾ ಪಾಯಸ... ಜತೆಗೆ ಹೀರೆಕಾಯಿ ತೊವ್ವೆ, ಸಾರು, ಚಿತ್ರಾನ್ನ, ರಾಯತ, ಅಂಬೊಡೆ, ಹಸಿ ಕಾಳಿ... ಹುಸ್ಲಿ, ಚಟ್ನಿ, ಹಪ್ಪಳ-ಸಂಡಿಗೆ! ಅವರ ಗೆಳತಿಯರು ಅವರಿಗೆ 'ಮಿಶನ್ನು!' ಅಂ... ಹೆಸರಿಟ್ಟಿದ್ದರಂತೆ. ಸುಮ್ಮಾನದಿಂದ "ಏನಿವತ್ತು ಅಡಿಗೆ ನಿಮ್ಮನೇಲಿ?" ಅಂತ ಕೇ... ವಿವರಗಳನ್ನು ನಗುತ್ತಾ ಎಣಿಸಿಕೊಳ್ಳುತ್ತಿದ್ದರಂತೆ.

ಒಂದು ದಿನ ಹೀಗೇ ಅವ್ವ ಬೆಳಗಿನ ಜಾವಕ್ಕೂ ಮುನ್ನವೇ ಎದ್ದು ಜಮೀನಿನ ಕ... ಹೊರಟುಬಿಟ್ಟರು. ಮನೆಯಲ್ಲಿ ಗಡಿಯಾರ ಇಲ್ಲ. ಆದರೆ ಆಗಿನ್ನೂ ನಡುರಾತ್ರಿ ಎರಡು ಗಂಟೆ. ಸುತ್ತಮುತ್ತ ದಟ್ಟ ಕತ್ತಲು... ಗವ್ವೆನ್ನುವ ಗಂಭೀರ ಮೌನ. ಅವ್ವ ಅಳುಕಲಿ... ಅಂದಾಜಿನ ದಾರಿಯಲ್ಲಿ ದೈವಸ್ಮರಣೆ ಮಾಡುತ್ತಾ ಲಾಟೀನು ಹಿಡಿದು ಹೊರಟೇ ಬಿಟ್ಟರು. ದಾರಿಯಲ್ಲಿ ಸಿಕ್ಕ ಕಾವಲಿನ ರೈತ ಹೌಹಾರಿದ. "ಏನಮ್ಮಣ್ಣಿ ಇಷ್ಟೊಂದು ರಾತ್ರಿನಾಗೆ ಹೊಂಟಿದೀರಲ್ಲ? ಈಗ ತಾನೇ ದೊಡ್ಡ ಹುಲಿ ಕಾಡೊಳಗೆ ಹೋಯ್ತು... ಉಸಾರು ನನ್ತಾಯಿ! ಇನ್ಮೇಗೆ ಬೆಳಕು ಉಟ್ಟುದ್ಮೇಲೇ ಹೊರಡಿ" ಎಂದು ವಿನಂತಿಸಿದ...

ಅವ್ವನ ಕಡೇ ಮಗಳು ಹುಟ್ಟಿದ ಎರಡು ವರ್ಷಕ್ಕೆ ಅವ್ವನಿಗೆ 'ಮಡಿ' ಆಯಿತಲ್ಲ... ದುರದೃಷ್ಟವಶಾತ್ ತನ್ನ ಸುತ್ತಮುತ್ತ ಇಂಥದ್ದೇ ನಾಲ್ಕಾರು ಮಡಿ ಹೆಂಗಸರನ್ನು ... ಮಗು ಕಂಡಿತು. ಏನನ್ನಿಸಿತೋ, ಒಂದು ದಿನ ಅಮ್ಮನ ಹತ್ತಿರ ಬಂದು ಮುದ್ದಾ... ಕೇಳಿತು – "ಅಮ್ಮ, ದೊಡ್ಡೋಳಾದ್ಮೇಲೆ ನಾನೂ ಹೀಗೇ ಕೂದಲು ಬೋಡ... ಮಾಡಿಕೊಂಡು ಕೆಂಪು ಸೀರೆ ಉಟ್ಕೋಬೇಕಾ?" ಅವ್ವನ ಕರುಳು ಕಿವುಚಿಹೋಯ್ತು... ಮಗುವನ್ನು ಬಾಚಿ ತಬ್ಬಿ "ಬಿಡ್ತು ಅನ್ನು ಕಂದ... ನಿನಗೆಂದಿಗೂ ಹೀಗೆ ಆಗಲ್ಲ"... ಕಣ್ಣೀರು ಮಿಡಿದು ಮುತ್ತು ಕೊಟ್ಟರು.



ಏಳು ಜನ ಹೆಣ್ಣುಮಕ್ಕಳಿದ್ದರೂ ಆ ಬಗ್ಗೆ ಅವ್ವ ಒಂದು ದಿನವೂ ಸರಿಸಲಿಲ್ಲ. ಯಾರಾದರೂ ''ಇಷ್ಟೊಂದು ಹೆಣ್ಣುಮಕ್ಕಳಾ?'' ಅಂದರೆ ರಿಗೆ ಅಸಮಾಧಾನ. ''ನಿಮಗ್ಯಾಕೆ? ಒಂದು ಬ್ರಾಹ್ಮಣನ ಒಡವೆ. ಳಸೀದಳ ಇಟ್ಟು ಧಾರೆ ಎರೀತೀನಿ.'' ಸಮರ್ಥಿಸಿಕೊಳ್ಳುತ್ತಿದ್ದರು.

ಜೀವನ ಪ್ರೀತಿಯ ಇನ್ನೊಂದು ಮಗ್ಗುಲು ಈ ಮಾಗಡಿ ಅವ್ವ. ಒಂದೇ ದು ಸಣ್ಣ ಹಬ್ಬವನ್ನೂ ಆಚರಿಸದೆ ಬಿಡುತ್ತಿರಲಿಲ್ಲ. ಮಾತೆತ್ತಿದರೆ ಹೋಳಿಗೆ! ರನ್ನು ಮಾಡುವುದಂತೂ ನೀರು ಕುಡಿದಷ್ಟು ಸರಾಗ. ಐವತ್ತು-ಅರವತ್ತು ೀಳಿಗೆ, ತಪ್ಪಲೆಗಟ್ಟಲೆ ಹಬ್ಬದಡಿಗೆ ಪ್ರಯಾಸವಿಲ್ಲದೆ ತಯಾರಿಸಿಬಿಡುತ್ತಿದ್ದರು. ಗಳಲ್ಲಂತೂ ಅವರ ಮನೆಯಲ್ಲಿ ಕನಿಷ್ಠ ಐವತ್ತು ಮಂದಿ. ಅಡಿಗೆ ಅವ್ವನದೇ! ರಿಗೆ, ವಡೆ, ಸುಕ್ಕಿನುಂಡೆ, ಪಲ್ಯಗಳು, ಕೋಸುಂಬರಿಗಳು, ಕೂಟು, ಜ್ಜುಗಳು, ಹೆಸರುಬೇಳೆ ಪಾಯಸ ಅಬಬಬಬಾ!... ಒಂದೊಂದೂ ಅವ್ವನ ಣ್ಣತ ಪಾಕ ಹದದಲ್ಲಿ ಘಮಘಮನೆ ಹೊಮ್ಮುತ್ತಿತ್ತು. ಇಂಥ ಶ್ರದ್ಧೆ, ಇಂಥ ಯುಕ ತಂದಿತ್ತ ನೈತಿಕ ಸ್ಥೈರ್ಯದ ಪರಿಣಾಮವಾಗಿಯೇ ಇರಬೇಕು, ಅವ್ವನ ಂದರ ಮುಖದಲ್ಲಿ ಯಾವಾಗಲೂ ಆತ್ಮವಿಶ್ವಾಸದ ಒಂದು ಅನಂತ ಹೊಳಪು!

ಎಂಟು ಮಕ್ಕಳ ಈ ತುಂಬು ಕುಟುಂಬದಲ್ಲಿ ಆಗಾಗ ಉತ್ಸವಗಳು, ಹುಟ್ಟಿದ ಟ್ಟಗಳು. ಮೊದಲ ದೀಪಾವಳಿ ಹೆಣ್ಣುಮಕ್ಕಳು - ಬೀಗರು ಬಂದು ೀಗುವುದು, ಸೀಮಂತ, ನಾಮಕರಣ, ಮದುವೆ-ಮುಂಜಿಗಳು. ಅವ್ವ ಲ್ಲಿ ಏನೂ ಲೋಪ ಬಾರದ ಹಾಗೆ ಎಲ್ಲ ಕರ್ತವ್ಯಗಳನ್ನು ಅಚ್ಚುಕಟ್ಟಾಗಿ ವೇರಿಸಿದರು. ಗಂಡನಿಲ್ಲದವಳು ಎಂದು ಯಾರೂ ಬೆರಳು ತೋರಿಸದ ಗೆ, ಬೀಗರೆಲ್ಲ ಮೆಚ್ಚುವ ಹಾಗೆ ಶಾಸ್ತ್ರ, ಊಟೋಪಚಾರ, ಅಲಂಕಾರ, ಡುಗೊರೆ ನಡೆದವು. ಹಾಗಾಗಿ ಅವ್ವನ ಮನೆಯಲ್ಲಿ ಆಗಿಂದಾಗ ಟ್ಟಿ-ಹಾಡು-ಹಸೆ. ಹೆಣ್ಣುಮಕ್ಕಳು ಮೈನೆರೆದಾಗಲಂತೂ ಮೊದಲ ಆರು ಗಳು (ಪ್ರತಿ ತಿಂಗಳು ಹೊರಗಾದಾಗ) ಆರತಿ ಸಂಭ್ರಮ. ಮಂದಾರವಲ್ಲಿ ಂಕಾರ, ಕೃಷ್ಣ-ಸರಸ್ವತಿ-ಲಕ್ಷ್ಮಿಯರ ಅಲಂಕಾರ, ಪಾರ್ಸಿ ಅಲಂಕಾರಗಳು. ಗಾರ ಮುಗಿದ ಮೇಲೆ ಕಂಚಿ ಕುಂಕುಮಕ್ಕೆ ನೀರು ಬೆರೆಸಿ ಅಂಟು ಮಾಡಿ ಟಗಳಿಗೆ ಸವರುತ್ತಿದ್ದರಂತೆ ರಸಿಕ ಅವ್ವ! ತಮ್ಮ ಈ ಲಕ್ಷ್ಮಿ-ಸರಸ್ವತಿಯರನ್ನು ೀಡಬಂದ ಬಂಧು-ಮಿತ್ರರಿಗೆ ಬಾಳೆಹಣ್ಣು, ಸವಿಯಾದ ಪುರಿಉಂಡೆ. ಲ್ಲ ಅಲ್ಲದೆ ಆಗಾಗ ಮನೆಯಲ್ಲಿ ವಿಶೇಷ ಪೂಜೆಗಳು, ಸಂತರ್ಪಣೆ. ಇನ್ನು ತವರಿಗೆ ಬಂದ ಹೆಣ್ಣುಮಕ್ಕಳು ಅತ್ತೆ ಮನೆಗೆ ಹಿಂದಿರುಗುವಾಗ ಅವ್ವ ತಿಂಡಿ ಕಳಿಸುತ್ತಿದ್ದ ವೈಖರಿ ಉಲ್ಲೇಖಾರ್ಹ. ಹದಿನೆಂಟು ಮೊಳದ ದೊಡ್ಡ ಸೀರೆಯನ್ನು ಉದ್ದವಾಗಿ ಹಾಸಿಬಿಡುತ್ತಿದ್ದರಂತೆ. ಅದರಲ್ಲಿ ಅಲ್ಲಲ್ಲಿ ಪೇಪರು ಹಾಸಿ ಸೀ ಅವಲಕ್ಕಿ, ಖಾರದವಲಕ್ಕಿ, ಅಂಗೈ ಗಾತ್ರದ ಕೊಬರಿ ಮಿಠಾಯಿ, ಚಕ್ಕುಲಿ-ಕೋಡುಬಳೆ, ಹುರಿಟ್ಟು ಎಲ್ಲವನ್ನೂ ಬೇರೆ ಬೇರೆ ಗಂಟುಗಳಾಗಿ ಕಟ್ಟಿ 'ಪ್ಯಾಕ್' ಮಾಡುತ್ತಿದ್ದರಂತೆ! ಹಲವಾರು ಗಂಟುಗಳ ಈ ಒಂದು ದೊಡ್ಡ ಗಂಟು ಮೊಮ್ಮಕ್ಕಳ ಬಾಯಲ್ಲಿ ನೀರೂರಿಸುತ್ತಿತ್ತು.

ಮಾಗಡಿ ರಂಗನಾಥ ಅವ್ವ ಸೇರಿದ ಮನೆಯ ಮನೆ ದೈವ. ವರ್ಷದ ತೇರಿನ ಸಂದರ್ಭದಲ್ಲಿ ಐದಾರು ದಿನ ಮನೆ ತುಂಬ ಬಂಧುಗಳು... ಹಾಡು ಹರಿಕಥೆ ಸ್ನೇಹ ಸೌಹಾರ್ದ! ಅವ್ವನ ಸಡಗರಕ್ಕೆ ಸೀಮೆಯಿಲ್ಲ. ಉತ್ಸಾಹದೊಂದು ಮಿಂಚಾಗಿ ಮನೆತುಂಬ ಸುಳಿದಾಡುತ್ತಿದ್ದರು. ಬಂದವರಿಗೆ ಪರಾತಗಟ್ಟಲೆ ಕೋಸುಂಬರಿ- ರಸಾಯನ, ಕೊಳಗಗಳಲ್ಲಿ ಪಾನಕ. ಮಕ್ಕಳಿಗಂತೂ ಅದೊಂದು ಸಂತೋಷದ ಸಂತೆ.

ಗೌರೀ ಹಬ್ಬ ಊರಿಗೇ ದೊಡ್ಡ ಹಬ್ಬ. ಇನ್ನು ಹೆಂಗಳೆಯರದೇ ಕಲರವ ತುಂಬಿರುವ ಅವ್ವನ ಮನೆಯಲ್ಲಿ ಕೇಳಬೇಕೇ? ತಳಿರು-ತೋರಣ, ರೇಷ್ಮೆಯ ಸರಭರ, ಹೂಗಳ ಹಾರಾಟ, ಪೂಜೆ ಬಾಗಿನ ಎಲ್ಲ ವಿಶೇಷವೇ. ಅವ್ವ ಆ ದಿನ ತಮ್ಮ ಪ್ರೀತಿ- ಪಾತ್ರ ರೈತರನ್ನೆಲ್ಲ ಊಟಕ್ಕೆ ಕರೆಯುತ್ತಿದ್ದರು. ತಾವೇ ತಯಾರಿಸಿದ ಹೋಳಿಗೆ- ಪಾಯಸವನ್ನು ಕೈಯಾರ ಪ್ರೀತಿಯಿಂದ ಬಡಿಸುತ್ತಿದ್ದರು. ಹೋಗುವಾಗ ಬೊಗಸೆ ತುಂಬ ಅಡಿಕೆ-ವೀಳೆಯದೆಲೆ ಕೊಟ್ಟು ಕಳಿಸುತ್ತಿದ್ದರು. ''ಬತ್ತೀವಿ ಅವ್ವ... ಒಬ್ಬಟ್ಟೂಟ ಬೋ ಗಡದ್ದಾಗಿತ್ತು!'' ಭೋಜನ ಭಾರದ ಆನಂದದಲ್ಲಿ ಆ ಬಾಂಧವರು ಕೈ ಮುಗಿದು ಹೊರಟರೆ ಈ ತಾಯಿಯ ಮೊಗದಲ್ಲಿ ಸಂತೃಪ್ತಿಯ ಮಿನುಗು!

ಅನಂತನ ವ್ರತವೂ ಅವ್ವನ ಮನೆಯಲ್ಲಿ ಹೆಚ್ಚುಗಾರಿಕೆ. ಗಂಡ ಬದುಕಿದ್ದಾಗ ವಿಜೃಂಭಣೆ ಹೆಚ್ಚು. ಪೂಜೆಗಾಗಿ ಯಮುನಾ ಕಳಶ ತರಲು ಈ ಕುಟುಂಬ ಓಲಗ ಸಮೇತ ಕೆರೆಗೆ ಹೋಗುತ್ತಿತ್ತಂತೆ. ನಳ ದಮಯಂತಿಯರಂಥ ಸ್ಫುರದ್ರೂಪದ ಗಂಡ-ಹೆಂಡತಿ, ಚೆಲುವಿನಲ್ಲಿ ಒಂದನ್ನೊಂದು ಮೀರಿಸುವ ಆರೇಳು ರಸಪುತ್ಥಳಿಗಳು! ಈ ಸಂಸಾರದ ಚಂದವನ್ನು ಊರವರು ನಿಂತು ನೋಡುತ್ತಿದ್ದರಂತೆ.

ಬೇಜಾರು ಅನ್ನುವುದು ಅವ್ವನಿಗೆ ತಿಳಿಯದ ಮಾತು. ಮೂರು ಹೊತ್ತೂ ಮೈತುಂಬ ಚಟುವಟಿಕೆ. ಮನೆಗೆಲಸ, ಜಮೀನಿನ ಕೆಲಸ, ಮಕ್ಕಳ ಪಾಲನೆ, ಇತರರ ಕಷ್ಟಸುಖ ವಿಚಾರಣೆ... ಹೀಗೆ ನೂರೆಂಟು ಕಾರ್ಯಭಾರ. ಇಂತಿಪ್ಪ ಅವ್ವನಿಗೆ ಬಿಡುವೆಂಬುದು ಎಲ್ಲಿತ್ತೋ? ಅಂತೂ ಅಂಥ ಬಿಡುವಿನಲ್ಲಿ ಹೊಲಿಗೆ-ಕಸೂತಿ ಮಾಡುತ್ತಿದ್ದರು. ಸ್ವೆಟರು ಹೆಣೆಯುತ್ತಿದ್ದರು. ಕಾರ್ಡ್‌ಬೋರ್ಡ್ ಮೇಲೆ ಉಲ್ಲನ್ ಅಂಟಿಸಿ ಕೃಷ್ಣ ರಾಮ ಮುಂತಾದ ಚಿತ್ರ ರಚಿಸುತ್ತಿದ್ದರು. ಸಣ್ಣ ಮೂತಿಯ ಶೀಷೆಯೊಳಗೆ ತಾಮ್ರದ ತಂತಿ - ರಸದ ಗುಂಡು ತೂರಿ ಹೂವು, ಗಿಣಿ, ನವಿಲುಗಳನ್ನು ಮಾಡುತ್ತಿದ್ದರು. ಅವರ ಉತ್ಸಾಹ ಎಷ್ಟಿತ್ತೆಂದರೆ ಒಂದು ಸಾರಿ ಮಾಗಡಿ ರಂಗನಾಥನ ಶಯನೋತ್ಸವದ ಅಲಂಕಾರ ನೋಡಿ ಬಂದು ತಮ್ಮ ಒಬ್ಬ ಮಗಳ ಮೊದಲ ರಾತ್ರಿಗೆ ಅಂಥದ್ದೇ ಅಲಂಕಾರ ಮಾಡಿದ್ದರಂತೆ!

ಅವ್ವನಿಗೆ ಬೇಕಾದಷ್ಟು ಹಾಡುಗಳು – ಅದೂ ಸುದೀರ್ಘವಾದವು – ಬರುತ್ತಿದ್ದವು. ಶಶಿರೇಖಾ ಪರಿಣಯ, ಧ್ರುವರಾಜ ಚರಿತ್ರೆ, ಹರಿಶ್ಚಂದ್ರ ಕಥನ, ಶ್ರೀನಿವಾಸ ಕಲ್ಯಾಣ, ಸುಭದ್ರಾ ವಿವಾಹ ಅಲ್ಲದೆ ದಾಸರ ಎಷ್ಟೋ ಹಾಡುಗಳು ಅವರಿಗೆ ಕಂಠಪಾಠ. ಮಧ್ಯಾಹ್ನ ಊಟ ಆದ ಮೇಲೆ ಮುಗದೆ ಅಕ್ಕ-ಪಕ್ಕದ ಹೆಣ್ಣು ಮಕ್ಕಳನ್ನು ಕರೆದು ಕೂರಿಸಿಕೊಂಡು ಈ ಹಾಡುಗಳನ್ನು ಹೇಳಿಕೊಡುತ್ತಿದ್ದರು. ಕತೆ ಹೇಳುವುದರಲ್ಲಂತೂ ಅವರು ನಿಸ್ಸೀಮರು. ರಾತ್ರಿ ಮಕ್ಕಳನ್ನು ಪಕ್ಕ ಹಾಕಿಕೊಂಡು ರಾಮಾಯಣ-ಮಹಾಭಾರತದ, ಇತರ ವೀರ ವ್ಯಕ್ತಿತ್ವಗಳ ಕತೆಗಳನ್ನು ರಸವತ್ತಾಗಿ ಹೇಳುತ್ತಿದ್ದರು. ಕತೆಯ ರುಚಿಗೆ ಮಕ್ಕಳು ಬಹಳ ಹೊತ್ತು ಮಲಗುತ್ತಲೇ ಇರಲಿಲ್ಲ.

ಅವ್ವನಿಗೆ ಪಾದರಸ ಅನ್ನುವ ಬಿರುದೂ ಇತ್ತು! ಕೆಲಸಗಳಲ್ಲೇ ಅವರಿಗೆ ಆನಂದ ಅನ್ನುವುದನ್ನು ಹೇಳಿದ್ದಾಯಿತು. ಈ ಕೆಲಸಗಳಲ್ಲಿನ ವೈವಿಧ್ಯತೆಯೇ ಅವರಿಗೆ ಮನರಂಜನೆ. ಮಲ್ಲಿಗೆ ಕಾಲದಲ್ಲಿ ಮೊಗ್ಗಿನ ಜಡೆಯನ್ನು ಮನೆ ಮಕ್ಕಳಿಗೆ ಮಾತ್ರವಲ್ಲದೆ ಗುರುತಿನ ಹೆಣ್ಣುಮಕ್ಕಳಿಗೆಲ್ಲ ಹಾಕಿ ನೋಡಿ ಸಂತೋಷಪಡುತ್ತಿದ್ದರು. ಬಾಣಂತಿತನವನ್ನಂತೂ ಅದೆಷ್ಟು ಮಾಡಿದ್ದಾರೋ! ಮನೆಯಲ್ಲಿ ಹೆಣ್ಣು ಮಕ್ಕಳಿಗೆ ಹೆರಿಗೆಗಳಾದಾಗ ಬಾಣಂತಿ - ಮಗುವಿನ ಮಲಿನ ಬಟ್ಟೆಗಳನ್ನು ತಾವೇ ಊರಾಚೆಗಿನ ಕೆರೆಗೆ ಹೊತ್ತುಕೊಂಡು ಹೋಗಿ ಶುಚಿಮಾಡಿ ತರುತ್ತಿದ್ದರಂತೆ. ಮಕ್ಕಳು ಮರಿಗಳ ಸೇವೆಯಲ್ಲಿ ಅನವರತ ನುರಿತ ಈ ಅವ್ವ ಹೆರಿಗೆ ಮಾಡಿಸುವುದರಲ್ಲೂ ಮುಂದು! ನೋವು ಅಂದ ಕೂಡಲೇ ಓಡಿಬಿಡುತ್ತಿದ್ದರು. ತನ್ನ ಅಖಂಡ ಆಚಾರ-ವಿಚಾರ ಮಡಿ-ಹುಡಿಗಳ ನಡುವೆಯೇ ಇಂತಿಂಥ ಪರೋಪಕಾರ.

ಅವ್ವ ಮಾಗಡಿಯಲ್ಲಿ ವಾಸಿಸುತ್ತಾ ಇದ್ದದ್ದು ಪೂರ್ವಕಾಲದ ದೊಡ್ಡ ಮನೆ. ಅಲ್ಲಿನ ಅಡಿಗೆಮನೆ ತುಂಬಾ ವಿಶಾಲವಾಗಿದ್ದು, ಅದಕ್ಕೆ ಮುಚ್ಚುಮರೆ ಏನೂ ಇರಲಿಲ್ಲ. ಯಾವುದೋ ಒಂದು ಗಳಿಗೆಯಲ್ಲಿ ಅದಕ್ಕೊಂದು ಚಿಕ್ಕ ಅಡ್ಡಗೋಡೆಯನ್ನು ಕಟ್ಟಬೇಕೆಂದು ಅವ್ವನಿಗೆ ಅನ್ನಿಸಿತು. ಕಾರ್ಯೋನ್ಮುಖರಾಗಿಯೇಬಿಟ್ಟರು. ಮನೆಯಲ್ಲಿ ಇಟ್ಟಿಗೆ ಇತ್ತು. ಗಾರೆ ತರಿಸಿಕೊಂಡರು. ಕರಣೆ ಕೈಗೆ ತೆಗೆದುಕೊಂಡರು. ಒಂದು ಇಡೀ ರಾತ್ರಿ ಒಬ್ಬರೇ ನಿಂತು ಆಳುದ್ದದ ಗೋಡೆ ಎಬ್ಬಿಸಿಯೇ ಬಿಟ್ಟರು. ಮರುದಿನ ಸುಣ್ಣವನ್ನೂ ಅವರೇ ಹೊಡೆದರು. ಆ ಗೋಡೆಯಲ್ಲಿ ಹಪ್ಪಳ-ಸಂಡಿಗೆ ದೇವರ ಸಾಮಾನು ಮುಂತಾದುವನ್ನು ಇಡಲು ಹನ್ನೆರಡು ಗೂಡುಗಳನ್ನು ಚಾಕಚಕ್ಯತೆಯಿಂದ ನಿರ್ಮಿಸಿದ್ದರು. ಎಲ್ಲಿ ನೋಡಿದ್ದರೋ ಈ ವಿನ್ಯಾಸವನ್ನು! ಆಮೇಲೆ ಅವರ ಕಂಟ್ರ್ಯಾಕ್ಟರ್ ಮೈದುನ ಬಂದು ಈ ಸಾಹಸವನ್ನು ನೋಡಿ ದಂಗು ಬಡಿದು ಹೋದರು. ''ನಿಮ್ಮ ಮುಂದೆ ಯಾವ ಇಂಜಿನಿಯರ್ರು ಬಿಡಿ ಅತ್ತಿಗಮ್ಮ!'' ಅಂತ ಸರ್ಟಿಫಿಕೇಟನ್ನೂ ಕೊಟ್ಟರು.

ವಿದ್ಯೆಯ ಬೆಲೆ ಅವ್ವನಿಗೆ ಗೊತ್ತು. ತಮ್ಮೆಲ್ಲ ಹೆಣ್ಣುಮಕ್ಕಳಿಗೆ ತಕ್ಕಮಟ್ಟಿಗಾದರೂ ವಿದ್ಯಾಭ್ಯಾಸ ಮಾಡಿಸಬೇಕೆಂಬುದು ಅವರ ಆಶಯ. ಆಗಿನ ಕಾಲದಲ್ಲೇ ಎಲ್ಲ ಹೆಣ್ಣುಮಕ್ಕಳಿಗೂ ಕಡ್ಡಾಯವಾಗಿ ಲೋವರ್ ಸೆಕೆಂಡರಿ ಮಾಡಿಸಿದ್ದರು. ಒಬ್ಬಿಬ್ಬರು ಎಸ್‌ಎಸ್‌ಎಲ್‌ಸಿ ಕೂಡ ಪೂರೈಸಿದರು. ಇದಲ್ಲದೆ ನಾಟಕ-ಸಂಗೀತ ಮುಂತಾದ ಪಠ್ಯೇತರ ಚಟುವಟಿಕೆಗಳಿಗೂ ಅವರ ಪ್ರೋತ್ಸಾಹ ಇತ್ತು. ಮನೆಯಲ್ಲಿ ಹಾರ್ಮೋನಿಯಂ ಹೇಳಿಸುತ್ತಿದ್ದರು. ಒಂದು ಸಾರಿ ಮಿಡ್ಲ್‌ಸ್ಕೂಲ್ ಓದುತ್ತಿದ್ದ ಹೆಣ್ಣುಮಕ್ಕಳಿಗೆ ನಾಟಕ ಆಡುವಾಗ ಹುಡುಗರ ಪಾರ್ಟಿಗೆ ಅಂಗಿ-ಚಡ್ಡಿ ಬೇಕಾಗಿತ್ತು. ಅವ್ವ ಹೊಲಿಸಿಕೊಟ್ಟರು!

ಸ್ವತಃ ಅವ್ವನ ಓದುವ ದಾಹ ದೊಡ್ಡದು. ಮನೆಗೆ ಬರುವ ಪತ್ರಿಕೆಗಳಲ್ಲದೆ ಬೆಂಗಳೂರು ಲೈಬ್ರರಿಯಿಂದ ಒಳ್ಳೊಳ್ಳೆಯ ಪುಸ್ತಕಗಳನ್ನು ತರಿಸಿಕೊಂಡು ಓದುತ್ತಿದ್ದರು. ಹಲವಾರು ಹಳಗನ್ನಡ ಕಾವ್ಯಗಳನ್ನು ಅವರು ಓದಿಕೊಂಡಿದ್ದರು. ರಾಜಕೀಯದಲ್ಲಿ ಅವರಿಗೆ ತುಂಬ ಆಸಕ್ತಿ. ರಾಜಕೀಯ ವಿಷಯಗಳನ್ನು ಉತ್ಸಾಹದಿಂದ ಮೊಮ್ಮಕ್ಕಳೊಡನೆ ಚರ್ಚಿಸುತ್ತಿದ್ದರು. ಸಿನಿಮಾ ಅಂದರೂ ಕುತೂಹಲವೇ. ಮಾಗಡಿಯಲ್ಲಿದ್ದಾಗ ಅಂದಿನ ಪರಿಸರದ ಮಹಿಳೆ ಥಿಯೇಟರಿಗೆ ಹೋಗುವುದು





ಸಾಧ್ಯವಿರಲಿಲ್ಲವಲ್ಲ, ಹಾಗಾಗಿ ರಜೆಗೆ ಬಂದ ಮೊಮ್ಮಕ್ಕಳಿಗೆ ದುಡ್ಡು ಕೊಟ್ಟು ಪಿಕ್ಚರ್‌ಗೆ ಕಳಿಸಿ, ಅವರು ಬಂದ ಮೇಲೆ ಕೈತುತ್ತು ಹಾಕುತ್ತಾ ಕತೆ ಕೇಳಿ ಹಿಗ್ಗುತ್ತಿದ್ದರು.

ಅವ್ವನದು ಒಂದು ಶುಭ್ರಶೀಲ ಮನಸ್ಸು. ಎಂದೂ ಯಾರೊಂದಿಗೂ ನಿಷ್ಠು ಕಟ್ಟಿಕೊಂಡವರಲ್ಲ. ಸ್ವತಃ ಯಾವಾಗಲೂ ಮೃದು ಮಧುರ ವಚನಗಳನ್ನಾಡುತ್ತಾ ಬೇರೆಯವರಿಗೂ ''ಒಳ್ಳೇ ಮಾತಾಡಿ ಒಳ್ಳೇ ಮಾತಾಡಿ'' ಎಂದು ಪ್ರೇರೇಪಿಸುತ್ತಿದ್ದ ಅವ್ವ ''ನಾಯೀನ ಕೂಡ ನಾಯಣ್ಣ ಅನ್ನಬೇಕು'' ಅನ್ನುತ್ತಿದ್ದರಂತೆ! ಕರುಣೆ ಅವರ ಸ್ವಭಾವದ ಮುಖ್ಯ ಗುಣ. ಯಾರೂ ಕಷ್ಟಪಡಬಾರದು. ನೋವು ಅನ್ನಬಾರದು. ಅವರ ಕರುಳು ಕರಗಿಬಿಡುತ್ತಿತ್ತು. ಕೂಡಲೇ ಸಹಾಯಹಸ್ತ ಚಾಚಿಬಿಡುತ್ತಿದ್ದರು. ಎಷ್ಟೋ ಬಾರಿ ಮಾಡಿದ ಅಡುಗೆಯಲ್ಲಿ ಹಸಿದವರಿಗೆ ಭಾಗ ಕೊಟ್ಟದ್ದಿದೆ. ಬಡ ವಿದ್ಯಾರ್ಥಿಗಳಿಗೆ ನೆರವು ನೀಡುವುದರಲ್ಲಂತೂ ಅವರು ಕೊಡುಗೈ. ಮದುವೆ- ಮುಂಜಿಗಳಿಗೆ, ನೆಲೆನಿಂತ ಹೊಸ ಸಂಸಾರಗಳಿಗೆ ಕೈಲಾದಷ್ಟು ಸಹಾಯ ಮಾಡುತ್ತಿದ್ದರು. ಆದರೆ ಪ್ರತಿಯೊಂದೂ ಗುಪ್ತದಾನ. ಪ್ರತಿಫಲದ ನಿರೀಕ್ಷೆಯಂತೂ ಇಲ್ಲವೇ ಇಲ್ಲ.

ಮೊಮ್ಮಕ್ಕಳನ್ನು ಕಂಡರೆ ಅವ್ವನಿಗೆ ಜೀವ. ಈ ಸಕ್ಕರೆ ಗೊಂಬೆಗಳು ತಮ್ಮ ಸುತ್ತ ಕುಣಿಯುತ್ತಿದ್ದರೆ ಅವರಿಗೆ ಆನೆಬಲ, ಮಿಗಿಲಾದ ಪ್ರೀತಿ, ಕಾಳಜಿ. ಅವರು ಬೆಳಿಗ್ಗೆ ಏಳುವ ಮುನ್ನವೇ ತಲೆ ದಿಸೆಯಲ್ಲಿ ಕಲಸಿದ ಹುರಿಟ್ಟು, ನೀರು ಇಟ್ಟಿರುತ್ತಿದ್ದರು. ಬೆಳಗಿನ ಜಾವ ಎದ್ದು ಅತ್ತರೆ ಮಕ್ಕಳು ಅದನ್ನು ತಿಂದು ಹಾಗೇ ಮಲಗಿಬಿಡಬೇಕು. ಮಕ್ಕಳು ಅಳಬಾರದು ಅವ್ವನಿಗೆ; ಆಡಬೇಕು. ಕೆಲವು ಬಾರಿ ಮಕ್ಕಳು ಹಟ ಮಾಡಿದರೆ ದೊಡ್ಡ ಹಾಲಿನಲ್ಲಿ ಸಾಲಾಗಿ ಕೂರಿಸಿ ಮುಂದೆ ಅಕ್ಕಿ ರಾಶಿ ಹಾಕುತ್ತಿದ್ದರು. ''ಕೈ ಸವೆಯುತ್ತೇ? ಕ್ಲೀನ್ ಮಾಡಿಕೊಳ್ಳೋಣ. ಆಡಲಿ ಮಕ್ಕಳು!'' ಅನ್ನುತ್ತಿದ್ದರು.

ಈ ಅವ್ವನಿಗೆ ಊರ ತುಂಬ ಬಂಧು-ಮಿತ್ರರು. ಜಾತಿ ಕುಲ ಗೋತ್ರ ಯಾವುದನ್ನೂ ಅವರು ಲೆಕ್ಕಿಸುತ್ತಿರಲಿಲ್ಲ. ಮಾನವೀಯತೆ ಇದ್ದರೆ ಮುಗಿಯಿತು. ಎಲ್ಲರೂ ಸ್ನೇಹಿತರೇ! ಹೀಗೆ ಮರಿ ಅನ್ನುವ ಒಬ್ಬ ರೈತ ಮಹಿಳೆ ಅವ್ವನ ಪರಮಾಪ್ತ ಸಖಿ. ಅವಳಿಗೆ ಮಕ್ಕಳಿರಲಿಲ್ಲ. ಅವಳ ಬಹು ಸಮಯ ಅವ್ವನ ಮನೆಯಲ್ಲೇ ಕಳೆಯುತ್ತಿತ್ತು. ಚಟಾಕು-ಪಾವುಗಳಂತಹ ಮುದ್ದು ಮುದ್ದು ಮಕ್ಕಳನ್ನು ಆಡಿಸಿಕೊಂಡು ಕಾಲಕಳೆದುಬಿಡುತ್ತಿದ್ದಳು. ಎಷ್ಟೋ ಬಾರಿ ಈ ಚಿಣ್ಣರನ್ನು ತನ್ನ ಮನೆಗೂ ಕರೆದುಕೊಂಡು ಹೋಗಿ ಕೊಬರಿ ಬೆಲ್ಲ ಕೊಟ್ಟು ಉಪಚರಿಸುತ್ತ ಇದ್ದದ್ದೂ ಉಂಟು. ಅವ್ವನಿಗೆ ಅವಳಲ್ಲಿ ಬಲು ಆತ್ಮೀಯಭಾವ. ಅವರವರಲ್ಲಿ ಆಗಾಗ ಆಪ್ತ ಸಂಭಾಷಣೆ ಕೂಡ ನಡೆಯುತ್ತಿತ್ತು. ಒಂದು ಸಾರಿ ಅವ್ವ ತಮ್ಮ ಈ ಗೆಳತಿಯೊಂದಿಗೆ ''ನೋಡಿದ್ಯಾ ಮರೀ, ಅಯ್ಯಾ ಅವರನ್ನು ದೇವರು ಎಷ್ಟು ಬೇಗ ಕರೆಸಿಕೊಂಡುಬಿಟ್ಟ!'' ಅಂತ ಮಾಮೂಲು ದುಃಖ ತೋಡಿಕೊಂಡರು. ಮರಿಯಾದರೋ ಕೇವಲ ನಿಷ್ಠುರಳಾಗಿ ''ಬಿಡಿ ಅಮ್ಮಾವ್ರೇ, ಅಯ್ಯಾ ಅವ್ರು ಇದ್ದಿದ್ರೆ ಏನಾಗಿಬಿಡ್ತಾ ಇತ್ತು? ನಿಮ್ಗೆ ಇನ್ನೂ

್ಯದು ಮಕ್ಕಳು ಆಗ್ತಾ ಇತ್ತು... ಅಷ್ಟೇ !'' ಅಂದುಬಿಟ್ಟಳು.

ಅವ್ವನ ಇನ್ನೊಬ್ಬ ಪ್ರಿಯಬಂಧು ಒಬ್ಬ ಪುಟ್ಟ ಮುಸ್ಲಿಂ ಹುಡುಗ. ಅವನೂ ಅಷ್ಟೇ. ಪುಟಾಣಿಗಳನ್ನು ತುಂಬ ಹಚ್ಚಿಕೊಂಡಿದ್ದ. ಮಕ್ಕಳಿಗೂ ಈ ಎಳೆಯನನ್ನು ಕಂಡರೆ ಮನೆಗೆ ಬಂದು ಮಕ್ಕಳನ್ನು ಆಡಿಸಿಕೊಂಡು ಇರುತ್ತಿದ್ದ. ಅವ್ವನ ಸುತ್ತಮುತ್ತ ಡುತ್ತಾ ಅವರಿಗೆ ಸಣ್ಣಪುಟ್ಟ ಕೆಲಸಗಳನ್ನು ಮಾಡಿಕೊಡುತ್ತಿದ್ದ. ಅವ್ವ ಅವನನ್ನು ಯಿಂದ ಮಾತನಾಡಿಸುತ್ತಿದ್ದರು. ತಿಂಡಿ-ತೀರ್ಥ ಕೊಟ್ಟು ಆದರಿಸುತ್ತಿದ್ದರು. ಪ್ರಾಜ್ಞರ ವೇ ಹಾಗಂತೆ : ಒಂದು ಸಿದ್ಧ ಸಂತೋಷವನ್ನು ತಮ್ಮ ಸುತ್ತ ಹಂಚುತ್ತಿರುತ್ತಾರಂತೆ. ಧರ್ಮೋ ರಕ್ಷತಿ ರಕ್ಷಿತಃ' ಅನ್ನುವ ಮಾತಿಗೆ ಯಾವಾಗಲೂ ಮೋಸವೇನಿಲ್ಲ ೂಪವಾಗಿ ಒಮ್ಮೊಮ್ಮೆ ಅದು ನಿಜವಾಗಿಬಿಡುವುದೂ ಉಂಟು. ಜೀವನದುದ್ದಕ್ಕೂ ುತನವನ್ನೇ ಪ್ರಸಾರ ಮಾಡಿದ ಅವ್ವ, ಜೀವಿತದ ಕಡೆಯ ಕೆಲವು ದಶಕಗಳ ಕಾಲ ುದನ್ನೇ ಕಂಡರು. ಅವರು ಹಳ್ಳಿಯಲ್ಲಿದ್ದಾಗ ಕಷ್ಟಪಟ್ಟಿದ್ದೆಷ್ಟೋ ಅಷ್ಟೇ. ಆಮೇಲೆ ದು ಸುಖಜೀವನ. ವಿದ್ಯಾಭ್ಯಾಸ ಪೂರೈಸಿ ನೆಲೆಯಾಗುತ್ತಿದ್ದಂತೆ ಮಗ ಅಮ್ಮನನ್ನು ಊರಿಗೆ ಕರಕೊಂಡು ಬಂದು ನೆಮ್ಮದಿಯ ಜೀವನ ದೊರಕಿಸಿಕೊಟ್ಟರು. ುಲ್ಲಿದ್ದ ಸಮೃದ್ಧಿಗೆ, ಸ್ವಾತಂತ್ರ್ಯಕ್ಕೆ ಯತ್ಕಿಂಚಿತ್ತೂ ಲೋಪ ಬಾರದಂತೆ ನೋಡಿ ಡರು. ಎಲ್ಲಕ್ಕಿಂತ ಹೆಚ್ಚಿಗೆ ಅವ್ವನ ಓದುವ ಹಸಿವಿಗೆ ಇಲ್ಲಿ ಸಮೃದ್ಧ ಗ್ರಾಸ. ಅವರ ರಿಯ ಬಹುಪಾಲು ಓದುವುದಕ್ಕೆ ಮೀಸಲು. ಶಾಲೆಯಲ್ಲಿ ಕೇವಲ ಐದನೇ ತರಗತಿ ಕಲಿತಿದ್ದ ಅವ್ವ ತಾವು ಸ್ವಂತವಾಗಿ ರೂಢಿಸಿಕೊಂಡಿದ್ದ ಅಧ್ಯಯನ ಬಲದಿಂದಾಗಿ ಜಿನಲ್ಲಿ ಓದುತ್ತಿದ್ದ ಮೊಮ್ಮಕ್ಕಳಿಗೆ ಸೊಗಸಾಗಿ ಕನ್ನಡ ಪಾಠ ಹೇಳಿಕೊಡುತ್ತಿದ್ದರು.

ಅವ್ವನ ತಾಯ್ತನಕ್ಕೆ ಪಕ್ಷಪಾತವಿಲ್ಲ. ತಮ್ಮ ಹೆಣ್ಣುಮಕ್ಕಳಂತೆಯೇ ತಮ್ಮ ಸೊಸೆಯನ್ನೂ ಿಸಿದರು. ಅದರಂತೆ ಆದರಿಸಿದರು. ಹೆಣ್ಣುಮಕ್ಕಳಿಗೆ ಬಾಣಂತನ ಗಳನ್ನು ದಂತೆ ಸೊಸೆಗೂ ಅಮ್ಮನಾಗಿ ಬಾಣಂತನಗಳನ್ನು ಮಾಡಿದರು. ಅಷ್ಟೇಕೆ ? ಸೊಸೆಗೆ ಬಂದ ಮೇಲೂ ಅವರ ಅಡಿಗೆ ಕೆಲಸ ನಿಲ್ಲಲಿಲ್ಲ. ಅವರ ಅಡಿಗೆ ಕಾಯಕ ನ್ನು ಕೇವಲ ಅವರು ಸಾಯುವ ಒಂದು ವರ್ಷ ಮುನ್ನ: ಅಂದರೆ ಅವರ ತ್ತೊಂಬತ್ತನೇ ವಯಸ್ಸಿನಲ್ಲಿ! ಅಲ್ಲಿಯವರೆಗೂ ಮೊಮ್ಮಕ್ಕಳಿಗೆ ಎಂದಿನ ಉತ್ಸಾಹದಲ್ಲಿ ಗೆಯ ಭಕ್ಷ್ಯ ಭೋಜ್ಯಗಳನ್ನು ಮಾಡಿ ಮಾಡಿ ಬಡಿಸುತ್ತಿದ್ದರು. ಅಡಿಗೆಯೊಂದು ಕಲೆಗಾರಿಕೆ ಅವರಿಗೆ... ಒಂದು ಖುರೆಯ ಆಟ ! ಯಾರೇನೇ ಕೇಳಿದರೂ ಕೂಡಲೇ ಸೈ! ''ಅವ್ವ, ಲಾಡು ಬೇಕು !'' ''ಆಗಲಿ ಮಗೂ ಈಗಲೇ ಮಾಡಿಕೊಡ್ತೀನಿ'' ''ಅವ್ವ, ಜಿಲೇಬಿ ತಿನ್ನಬೇಕು'' ''ಅದಕ್ಕೇನು ಬಂಗಾರ, ಬೆಳಿಗ್ಗೇನೇ ಮಾಡೋಣ.'' ಅದರಂತೆ ಆಯಾ ತಿಂಡಿಗಳು ಆಗಿಂದಾಗ ರೆಡಿ! ಇಷ್ಟೊಂದು ಸತತ ಕರ್ತವ್ಯಗಳನ್ನು, ಉಳಿದೆಲ್ಲ ತಮ್ಮ ಜವಾಬ್ದಾರಿಗಳನ್ನು ಕಡೆಯವರೆಗೂ ಅವ್ವ ನಗುನಗುತ್ತಲೇ ನಿರ್ವಹಿಸಿಬಿಟ್ಟರು. ''ಜೀವನದಲ್ಲಿ ನಾನು ಕಷ್ಟಪಟ್ಟೆ!'' ಎಂದವರು ಎಂದೂ ಅನ್ನಲೇ ಇಲ್ಲ.

ಒಂದು ಸುದೀರ್ಘ ಸಾರ್ಥಕ ಜೀವನ ನಡೆಸಿದ ಅವ್ವ ಐದನೇ ತಲೆಮಾರನ್ನೂ ಕಂಡವರು. ಅವರ ಪುಣ್ಯ ದೊಡ್ಡದು. ಪ್ರೀತಿಸಿದವರಿಂದ ಪ್ರೀತಿ ವಾಪಸು ಬಂತು. ತಮ್ಮನ್ನು ಎತ್ತಿ ಮೆರೆಸಿದ ಅವ್ವನಲ್ಲಿ ಮೊಮ್ಮಕ್ಕಳಿಗೆ ಅತ್ಯಂತ ಪ್ರೀತಿ, ಗೌರವ. ಅವರ ಮಾತಿಗೆ ಎದುರುತ್ತರವಿಲ್ಲ. ಅವರು ಹೇಳಿದ ಯಾವುದೇ ಕೆಲಸವನ್ನು ವಿನಯದಿಂದ ಪೂರೈಸುತ್ತಿದ್ದರು. ಮಗನಿಗಂತೂ ಈ ಅಮ್ಮ ಪ್ರತ್ಯಕ್ಷ ದೇವತೆಯೇ! ಯಾರಾದರೂ ಅವ್ವನನ್ನು ಇನ್ನೊಬ್ಬರಿಗೆ ಹೋಲಿಸಿದರೆ ಕೋಪವೇ ಬರುತ್ತಿತ್ತು. ''ಹಾಗೆ ಹೇಳ್ಬೇಡಿ. ನನ್ನ ಅಮ್ಮನಿಗೆ ಹೋಲಿಕೆಯೇ ಇಲ್ಲ'' ಅನ್ನುತ್ತಿದ್ದರು.

ನಿರಂತರ ಚೈತನ್ಯದ ಚಿಲುಮೆಯಾಗಿದ್ದ ಮಾಗಡಿ ಅವ್ವ ಕಡೆಗಾಲದಲ್ಲಿ ಹಾಸಿಗೆ ಹಿಡಿದು ಮಲಗಿದ್ದು ಕೇವಲ ಕೆಲವು ವಾರಗಳು ಮಾತ್ರ. ಆಗ ಮಗುವಿನಲ್ಲಿ ತಾಯಿ ತನ್ನನ್ನು ನೋಡಿಕೊಂಡ ಹಾಗೆ ಮಗ ತಾಯಿಯನ್ನು ನೋಡಿಕೊಂಡರು. ಅದೇ ಪ್ರೀತಿ... ಅದೇ ಜೋಪಾನ. ತೊಂಬತ್ತರ ಪ್ರಬುದ್ಧ ವಯಸ್ಸಿನಲ್ಲಿ ಮಕ್ಕಳ ಮಡಿಲಲ್ಲಿ ನೆಮ್ಮದಿಯಾಗಿ ಕೊನೆಯುಸಿರೆಳೆದರು ಅವ್ವ. ಪಕ್ವವಾಗಿ ಮಾಗಿದ ಒಂದು ಹಿರಿ ಹಣ್ಣು ಸಹಜವಾಗಿ ತೊಟ್ಟು ಕಳಚಿಕೊಂಡಿತು. ನಿರ್ಮಲ ವ್ಯಕ್ತಿತ್ವದ ಒಂದು ಸರಳ ಸುಂದರ ಬದುಕು ಶಾಂತವಾಗಿ ಮುಗಿದುಹೋಯಿತು. ಅಂದ ಹಾಗೆ ನಕ್ಕರೆ ಬೆಳದಿಂಗಳು ಚಿಮ್ಮುವ ಈ ಮೈಸೂರ ಚೆಲುವೆಗೆ ಪದ್ಮಾವತಿಯದೇ ರೂಪ ಅಂದಿದ್ದೆನಲ್ಲ, ಅವರ ಹೆಸರು ಪದ್ಮಾವತಿ!

**ಭಾರತೀ ಕಾಸರಗೋಡು**
ನಂ. ೭೩೧, ೧೪ನೇ ಅಡ್ಡರಸ್ತೆ, 'ಭಾರತಿನಗರ', ೭ನೇ ಹಂತ, ಬಿ.ಇ.ಎಲ್. ಬಡಾವಣೆ, ಮಾಗಡಿ ರಸ್ತೆ
ಬೆಂಗಳೂರು - ೫೬೦ ೦೯೧

## ಏಸುವಿಗೆ ಸಾವಿಲ್ಲ



ತಿಳಿದಂತೆ ನಾವು
ಶಿಲುಬೆಯಲಿ ಆಯ್ತೆ
ಏಸುವಿಗೆ ಸಾವು ?!

ನಾನೂ
ತಿಳಿದದ್ದು ಹಾಗೆ -
ಶಿಲುಬೆಗೇರಿಸಿ
ಕೈಕಾಲುಗಳಿಗೆ ಹೊಡೆದ ಮೊಳೆ
ತಲೆಗಿಟ್ಟ ಮುಳ್ಳಿನ ಬಳ್ಳಿ
ಸಾವಿಗೆ ಕಾರಣ ಎಂದು !

ನಿಜ ತಿಳಿಯಲೆಂದು
ತಹತಹಿಸಿ
ಪರಕಾಯ ಪ್ರವೇಶ ಮಾಡಿ
ಏಸುವಿನ ಹೃದಯ ನೋಡಿ
ನಿಬ್ಬೆರಗಾದೆ !

ಆ ಮಹಿಮಾನ್ವಿತನ
ಹೃದಯದಾಳ ಅಗಲಗಳ
ಅರಿಯಲಳವೇ ?!
ಕರುಣೆಯ ಕಡಲು
ಪ್ರೀತಿಯ ಒಡಲು
ಮಮತೆಯ ಮಡಿಲು
ಆಕಾಶದ ಶಾಂತತೆ
ಸಮುದ್ರ ಪ್ರಶಾಂತತೆ
ಪರ್ವತ ಸ್ಥೈರ್ಯ
ತುಂಬಿದ ಧೈರ್ಯ
ಅರಿತಷ್ಟು ಆಳ ಆಳ !

ಅಜ್ಞರು ಹೊರಿಸಿದ
ಯೂಪಸ್ತಂಭವ ಹೊತ್ತು
ಬರಿಗಾಲಲಿ
ಕಲ್ಮುಳ್ಳುಗಳ ಮೇಲಾಯ್ದು
ನಡೆದ ನಿರ್ಮಲ ಚಿತ್ತ
ದಿವ್ಯ ಬೆಳಕು ಸುತ್ತ

ಅದು
ಕಂಡೀತು ಹೇಗೆ
ಅಮಲಿನ ಜನಕೆ ?
ಎಳೆದೊಯ್ದರು ಬಲಿಗೆ
ಕೋಡ್ಗಲ್ಲಿನ ಬನಕೆ

ಚಾಟಿಯ ಏಟು
ಭರ್ಜಿಯ ತಿವಿತ
ಸುತ್ತ
ಗಾವಿಲರ ಗಲಭೆ
ಎಲ್ಲವನು ನುಂಗಿತ್ತು
ಹೊತ್ತ ಶಿಲುಬೆ

ಎನಿಸಿತೆ ಏಸುವಿಗೆ
ಶಿಲುಬೆ ಭಾರ ?

ಹೊಡೆದ ಮೊಳೆ
ನೋವಿಗೆ ದೂರ
ತಲೆಗಿಟ್ಟ ಮುಳ್ಳು
ಚುಚ್ಚಿದ್ದು ಸುಳ್ಳು
'ಓ ದೇವರೆ,
ಕ್ಷಮಿಸು ಅವರನ್ನು;
ಏನು ಮಾಡುತ್ತಿದ್ದಾರೆಂದು
ತಿಳಿಯದವರಿಗೆ'

ತಿಳಿಯ ಮನ
ತಿಳಿಯದು ಜನ !

ಏಸುವಿಗೆ ಸಾವು
ಜನರ ಅಜ್ಞಾನದ ನೋವು

ನಿಜ ತಿಳಿದು ಹೊರ ಬಂದೆ
ಶ್ರೀ ಪಾದಕೆ ಎರಗಿ ನಿಂದೆ

ನೋವಿಲ್ಲ ಸಾವಿಲ್ಲ
ಜೀಸಸ್ ನಿಜದಿ ಸಂತ
ಸಾನ್ನಿಧ್ಯ, ನಿತ್ಯ ವಸಂತ.

**ಜ. ಹೊ. ನಾರಾಯಣಸ್ವಾಮಿ,** ನಂ. ೨೦೬೪/೪, 'ಮಾನವ', ಉತ್ತರ ಬಡಾವಣೆ, ಹಾಸನ - ೫೭೩ ೨೦೧

# ಸರಕಾರದ ಜವಾಬ್ದಾರಿಯನ್ನು ವಹಿಸಿಕೊಳ್ಳುವುದು ಸರಕಾರೇತರ ಸಂಸ್ಥೆಯ ಕೆಲಸವಾಗಬಾರದು

## ಸೋಮನಾಥ ನಾಯಕ್



**ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನಲ್ಲಿರುವ ನಾಗರಿಕ ಸೇವಾ ಟ್ರಸ್ಟ್‌ನ ಮುಖ್ಯಸ್ಥರು ಶ್ರೀ ಸೋಮನಾಥ ನಾಯಕ್. ಗುರುವಾಯನಕೆರೆಯನ್ನು ಕೇಂದ್ರವಾಗಿರಿಸಿಕೊಂಡು ೧೯೭೭ರಲ್ಲಿ ಈ ಸಂಸ್ಥೆ ಪ್ರಾರಂಭವಾಯಿತು. ಸರಕಾರೇತರ ಸಂಸ್ಥೆಯಾಗಿ ನಾಗರಿಕ ಸೇವಾ ಟ್ರಸ್ಟ್ (ಎನ್‌ಎಸ್‌ಟಿ) ಸಾರ್ವಜನಿಕ ಕೆಲಸಕಾರ್ಯಗಳನ್ನು ಮಾಡುತ್ತಾ ಬಂದಿದೆ. 'ಹೊಸತು'ಗಾಗಿ ಮೂಡುಬಿದಿರೆಯ ಲೇಖಕ-ಅಧ್ಯಾಪಕ ಶ್ರೀ ಅರವಿಂದ ಚೊಕ್ಕಾಡಿ ಸಂದರ್ಶಿಸಿದ್ದಾರೆ. ಪ್ರಜಾಪ್ರಭುತ್ವದ ಇಂದಿನ ಕಾರ್ಯಾಚರಣೆಯ ಬಗ್ಗೆ ಎಷ್ಟೇ ಅಸಮಾಧಾನ ಇದ್ದರೂ ಅದನ್ನು ಬಿಟ್ಟು ಬೇರೆ ಯಾವ ವ್ಯವಸ್ಥೆಯತ್ತಲೂ ನಾವು ಹೋಗುವಂತಿಲ್ಲವೆಂಬ ಎಚ್ಚರ ಇಂದಿನ ಅವಶ್ಯಕತೆ ಎಂಬುದನ್ನು ಶ್ರೀ ನಾಯಕ್ ಸ್ಪಷ್ಟಪಡಿಸಿದ್ದಾರೆ.**

ಸಂದರ್ಶನ ಮತ್ತು ನಿರೂಪಣೆ : **ಅರವಿಂದ ಚೊಕ್ಕಾಡಿ**

**ಅರವಿಂದ ಚೊಕ್ಕಾಡಿ** : ಸರ್, ಎನ್‌ಎಸ್‌ಟಿಯ ...ನೆಯ ಹಿನ್ನೆಲೆ ಹೇಗೆ ಅಥವಾ ನಿಮ್ಮಲ್ಲಿ ಇಂತಹ ...ರ ಹೇಗೆ ಬಂತು ?

**...ರೀ ಸೋಮನಾಥ ನಾಯಕ್** : ನೀವು ನಮ್ಮ ...ವಾಯನಕೆರೆ ಬಸ್‌ಸ್ಟ್ಯಾಂಡ್ ಅನ್ನು ನೋಡಿದ್ದೀರಿ. ...ಗಡಿ, ಮಂಗಳೂರು, ಪುತ್ತೂರು, ಮೂಡುಬಿದಿರೆ, ...ಳ ಎಲ್ಲಾ ಕಡೆಗೂ ಹೋಗುವ ಮಾರ್ಗಗಳು ...ೂಡೆಯುವ ಜಂಕ್ಷನ್ ಇದು. ಇಲ್ಲಿಯ ...ಸ್ಟ್ಯಾಂಡ್‌ನಲ್ಲಿ ಒಂದು ಶೌಚಾಲಯ ಇರಲಿಲ್ಲ. ..., ರಂಜನ್‌ರಾವ್ ಎಲ್ಲ ಸೇರಿ ಇಲ್ಲಿ ಒಂದು ...ಾಲಯ ಮಾಡಬೇಕು ಎಂದುಕೊಂಡೆವು. ಸಾಕಷ್ಟು ...ದಿ ಹಿರಿಯರು ನಮಗೆ ನೆರವಾದರು. ಉದ್ದೇಶಿತ ...ಾಲಯವನ್ನು ಮಾಡಿದ್ದೂ ಆಯಿತು. ಆಗ ಸೇವೆ ...ತ್ತ ನಮ್ಮ ಉದ್ದೇಶವಾಗಿತ್ತು. ಸರಿಯಾದ ಪರಿಕಲ್ಪನೆ ...ಲ್ಲ. ಆಮೇಲೆ ಜೀವಂತಿಕೆ ಇಲ್ಲದ ಊರನ್ನು ...ಡಿ ಜೀವಂತಿಕೆ ತರಬೇಕೆನಿಸಿತು. ಬಸ್‌ಸ್ಟ್ಯಾಂಡ್ ...ವನ್ನು ಕಟ್ಟಿದೆವು. ಬಾಡಿಗೆಗೆ ಕೊಟ್ಟೆವು. ಒಂದು ...ಕ್ಕಲ್ ಆಗಬೇಕೆನಿಸಿತು. ಆಗ ಶಾಸಕರಾಗಿದ್ದ ...ಯ್ಯಶೆಟ್ಟಿಯವರ ಮೇಲೆ ಒತ್ತಡ ತಂದು ಒಂದು ...ಕಲ್ ಮಾಡಿಸಿದೆವು. ನಂತರ ಸರಕಾರದ ಸೌಲಭ್ಯ ... ಕುರಿತು ಜನರಿಗೆ ತಿಳಿವಳಿಕೆ ಮೂಡಿಸು ವುದಕ್ಕಾಗಿ ...ತ್ತಿ ಕೇಂದ್ರವನ್ನು ಮಾಡಿದೆವು. ಮಿಲ್ಕ್ ಸೊಸೈಟಿ ...ದೆವು. ಪಶುಪಾಲನೆಯ ತರಬೇತಿ ನೀಡಿದೆವು. ...ಾ ವಿವಿಧೋದ್ದೇಶ ಸಹಕಾರಿ ಸಂಘವನ್ನು ಸ್ಥಾಪಿಸಿದೆವು. ನಂತರ ಅದು ಬೆಳೆಯುತ್ತಾ ಹೋಯಿತು.

**ಅ** : 'ಆಗ ಒಂದು ಪರಿಕಲ್ಪನೆ ಇರಲಿಲ್ಲ' ಎಂದಿರಿ. 'ಸರಿಯಾದ ಪರಿಕಲ್ಪನೆ' ಎಂದು ನೀವು ಅಂದು ಕೊಂಡಿರುವ, ಆ ನಂತರದ ಪರಿಕಲ್ಪನೆ ಏನು ?

**ನಾ** : ಹಾಂ, ಇದು ಬಹಳ ಮುಖ್ಯ ಪ್ರಶ್ನೆ. ನಮ್ಮ ಪ್ರಕಾರ ಎನ್‌ಎಸ್‌ಟಿ ಎನ್ನುವುದು ಒಂದು ಸಂಸ್ಥೆಯಲ್ಲ. ಇದು ಒಂದು ಚಳವಳಿ. ನಾವು ಚುನಾವಣಾ ರಾಜಕೀಯವನ್ನು ಮಾಡುವುದಿಲ್ಲ. ಆದರೆ ಒತ್ತಡ ರಾಜಕೀಯವನ್ನು ಮಾಡುತ್ತೇವೆ. ಚುನಾವಣೆಗೆ ಮೊದಲು ಅಭ್ಯರ್ಥಿಗಳನ್ನು ಕರೆಸಿ ನಿರ್ದಿಷ್ಟ ವಿಷಯದಲ್ಲಿ ಅವರ ನಿಲುವು ಏನು ಎಂಬ ಬಗ್ಗೆ ಜನರು ಪ್ರಶ್ನೆ ಕೇಳುವ ವ್ಯವಸ್ಥೆ ಮಾಡುತ್ತೇವೆ. ಆಗ ಅವರು ಕೊಟ್ಟ ಉತ್ತರದಿಂದ ಅವರು ತಪ್ಪಿಸಿಕೊಂಡರೆ ಆರು ತಿಂಗಳು ಕಳೆದು ಮತ್ತೆ ಪ್ರಶ್ನಿಸುತ್ತೇವೆ. ಜನವಿರೋಧಿ ತೀರ್ಮಾನ ತೆಗೆದುಕೊಳ್ಳುವ ಅಭಿಪ್ರಾಯ ಪ್ರಕಟಿಸಿದವನಿಗೆ ವೋಟು ಹಾಕಬಾರದೆಂದು ಕರೆ ಕೊಡಲಿರುವುದಾಗಿ ಎಚ್ಚರಿಸುತ್ತೇವೆ. ಆದರೆ ಯಾರಿಗೆ ವೋಟು ಹಾಕ ಬೇಕೆಂದು ಹೇಳುವುದಿಲ್ಲ. ಈ ದಕ್ಷಿಣ ಕನ್ನಡದಲ್ಲಿ ಸರ್ಟಿಫಿಕೇಟ್ ಶಿಕ್ಷಣ ಪಡೆದವರಲ್ಲಿ ಮತ್ತು ನಗರ ವಾಸಿಗಳಲ್ಲಿ ''ನಾವು ಎಷ್ಟು ಮಾಡಿದರೂ ಇಷ್ಟೇ'' ಎಂದು ವ್ಯವಸ್ಥೆಯೊಂದಿಗೆ ರಾಜಿಯಾಗುವ ಸ್ವಭಾವ ಜಾಸ್ತಿ. ನಾವು ರಾಜಿ ಆಗುವುದಿಲ್ಲ. ದಲಿತರು, ಬೀಡಿ ಕಾರ್ಮಿಕ ಮಹಿಳೆಯರು ಎಲ್ಲ ಪ್ರಶ್ನಿಸುವ ಹಾಗೆ ಪ್ರೇರಣೆ ಕೊಡುತ್ತೇವೆ. ಪ್ರಜಾಪ್ರಭುತ್ವದ ದುಃಸ್ಥಿತಿಯನ್ನು ನೋಡಿ ಮಿಲಿಟರಿ ಆಡಳಿತ ಒಳ್ಳೆಯದು ಎಂಬ ಭಾವನೆ ನಮ್ಮಲ್ಲಿಲ್ಲ. ಪ್ರಜಾಪ್ರಭುತ್ವದಲ್ಲಿ ನಮಗೆ ನಂಬಿಕೆ ಇದೆ. ಅದರ ಯಶಸ್ಸಿಗೆ ಜನ ಪ್ರಶ್ನಿಸುವಂತಾಗ ಬೇಕು. ಪ್ರಶ್ನಿಸುವ ಮನೋಭಾವವನ್ನು ಬೆಳೆಸಿದ್ದೇ ನಮ್ಮ ಬಹುದೊಡ್ಡ ಸಾಧನೆ. ಇದೇ ನಮ್ಮ ಪರಿಕಲ್ಪನೆ. ಅಂದರೆ ಸಶಕ್ತೀಕರಣ ನಮ್ಮ ಮೂಲ ಪರಿಕಲ್ಪನೆಯಾಗಿದೆ. 'ಸೇವೆ' ಇಲ್ಲವೆಂದಲ್ಲ. ಆದರದು ಆ ನಂತರದ್ದು.

**ಅ** : ನಿಮ್ಮ ಪರಿಕಲ್ಪನೆಯ ಸಾಧನೆಯ ಹಾದಿಯನ್ನು ವಿವರಿಸುತ್ತೀರಾ ?

**ನಾ** : ೧೯೮೩ರಲ್ಲಿ ಪಟ್ರಮೆಯಲ್ಲಿ ಮಂಗನಕಾಯಿಲೆ ಬಂತು. ಪ್ರಾರಂಭದಲ್ಲಿ ಅದರ ಬಗ್ಗೆ ಮೂಢನಂಬಿಕೆ ಗಳಿದ್ದವು. ಆಮೇಲೆ ನಾವದನ್ನು ಅಭ್ಯಾಸ ಮಾಡಿದೆವು. ಶಂಪಾ ದೈತೋಟ, ಡಾ॥ ಶಿವರಾಮ ಕಾರಂತ, ಡಾ॥ ಎಚ್. ಆರ್. ಭಟ್ ಅಂತಹವರೆಲ್ಲ ಬಹಳ ಸಹಕಾರ ನೀಡಿದರು. ಅಂದಿನ ಡಿ.ಸಿ. ಮತ್ತು ತಹಶೀಲ್ದಾರ ರೊಂದಿಗೆ ಸೇರಿಕೊಂಡು ಮಂಗನಕಾಯಿಲೆ ನಿವಾರಣಾ ಸಮಿತಿ ಮಾಡಿದೆವು. ವೀರೇಂದ್ರ ಹೆಗ್ಗಡೆ ಅದರ ಗೌರವಾಧ್ಯಕ್ಷರೇನೋ ಆಗಿದ್ದರು. ತಾತ್ಕಾಲಿಕ ಆಸ್ಪತ್ರೆ ಮಾಡಿದೆವು. ಅದಕ್ಕೆ ಸಂಗ್ರಹಿಸಿದ ರಕ್ತ ಉಪಯೋಗ ವಾಗುತ್ತಿರಲಿಲ್ಲವಾದ್ದರಿಂದ ಆ ಕ್ಷಣಕ್ಕೆ ರಕ್ತದಾನ ಮಾಡುವ ವ್ಯವಸ್ಥೆ ಮಾಡಿದೆವು.

ಮಂಗನಕಾಯಿಲೆ ಅಧ್ಯಯನದಿಂದ ನಮಗೆ ಗೊತ್ತಾದದ್ದು, ಆದಾಯಕ್ಕಾಗಿ ವಿದೇಶಕ್ಕೆ ಮಾರುವ ಉದ್ದೇಶದಿಂದ ಗೇರು ಬೆಳೆಸಲು ೧೦೦೦ ಎಕ್ರೆ

ಅರಣ್ಯವನ್ನು ಗೇರು ಅಭಿವೃದ್ಧಿಯವರು ಕಡಿದುದರಿಂದಾಗಿ ಮಂಗನಕಾಯಿಲೆ ಬಂದಿದೆ ಎನ್ನುವುದು. ಆಗ ನಮಗೆ ಅಭಿವೃದ್ಧಿ ಅಂದರೆ ಏನು ಎಂಬ ಪ್ರಶ್ನೆ ಎದುರಾಯಿತು. ಪರಿಸರ ಜಾಗೃತಿಯ ಚಿಂತನೆಗಳು ಬೆಳೆದವು. 'ಪಶ್ಚಿಮ ಘಟ್ಟ ಉಳಿಸಿ' ಅಭಿಯಾನ ನಡೆಯಿತು. ಪರಿಸರಾಸಕ್ತರ ಒಕ್ಕೂಟ ಸ್ಥಾಪನೆಯಾಗಿ ೩೭ ಪರಿಸರ ಜಾಗೃತಿ ಸಮಿತಿಗಳನ್ನು ಮಾಡಲಾಯಿತು. ಆ ಹೊತ್ತಿಗೆ ದಕ್ಷಿಣ ಕನ್ನಡದಲ್ಲಿ ೨೫ ಸಾವಿರ ಕೋಟಿ ರೂಪಾಯಿ ಹೂಡಿಕೆಯ ೩೫ ಬೃಹತ್ ಕೈಗಾರಿಕೆಗಳು ಬರುವ ಸಿದ್ಧತೆಗಳಾಗಿದ್ದವು. ಅದು ಇಲ್ಲಿನ ಕೃಷಿಕರ ಮತ್ತು ಮೀನುಗಾರರ ಮೇಲೆ ದುಷ್ಪರಿಣಾಮವನ್ನು ಬೀರುವಂತಹದಾಗಿತ್ತು. ಆಗ ನಮಗೆ ಕೇವಲ ಪರಿಸರದ ವಿಚಾರದಿಂದ ಜನರನ್ನು ಒಟ್ಟು ಸೇರಿಸಲು ಸಾಧ್ಯವಿಲ್ಲವೆನಿಸಿತು. 'ಕೃಷಿಕರ ವೇದಿಕೆ'ಯನ್ನು ಹುಟ್ಟುಹಾಕಿದೆವು. ನೇತ್ರಾವತಿ ನದಿ ನೀರಿನ ಮೇಲೆ ಹಕ್ಕು ಇರುವ ಕೃಷಿಕರಿಗೆ ಜನವರಿಯಿಂದ ಮೇವರೆಗೆ ನೀರು ತೆಗೆಯಲು ಬಿಡದೆ ಎಂಆರ್‌ಪಿಎಲ್‌ಗೆ ನೀರು ಕೊಡುತ್ತಿರುವುದನ್ನು ಮನವರಿಕೆ ಮಾಡಿಕೊಟ್ಟೆವು. ೨೦-೩೦ ಕೃಷಿಕರ ಘಟಕಗಳಾದವು. ಮಂಗಳೂರಿನಲ್ಲಿ ೨೩ ಸಾವಿರ ಕೃಷಿಕರನ್ನು ಸೇರಿಸಿ ಶಿವರಾಮ ಕಾರಂತ, ಅನಂತಮೂರ್ತಿಯಂತಹವರನ್ನೆಲ್ಲ ಸೇರಿಸಿ ಸಮಾವೇಶ ಮಾಡಿದೆವು. ನಾವು ಕೈಗಾರಿಕೆಯ ವಿರೋಧಿಗಳಲ್ಲ, ಆದರೆ ದಕ್ಷಿಣ ಕನ್ನಡಕ್ಕೆ ಎಷ್ಟು ಕೈಗಾರಿಕೆಗಳ ಧಾರಣಾ ಸಾಮರ್ಥ್ಯವಿದೆ ಎಂದು ಅಧ್ಯಯನ ಮಾಡಿ ಅದರ ಶಿಫಾರಸ್ಸಿನಂತೆ ಕೈಗಾರಿಕೆಗಳನ್ನು ತರಬೇಕು ಎಂಬ ಹಕ್ಕೊತ್ತಾಯ ಮಂಡಿಸಿದೆವು. ಯು. ಆರ್. ಸಭಾಪತಿ, ವಸಂತ ಬಂಗೇರ, ಯೋಗೀಶ್ ಭಟ್ ಮೊದಲಾಗಿ ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಯ ಶಾಸಕರುಗಳೂ ವಿಧಾನಸಭೆಯಲ್ಲಿ ಗದ್ದಲ ಮಾಡಿದರು. ಆಗ ಜೆ. ಎಚ್. ಪಟೇಲ್ ಅವರದು, 'ಅಭಿವೃದ್ಧಿಯನ್ನು ತಡೆಯುವವರು ಅಭಿವೃದ್ಧಿ ಚಕ್ರದ ಅಡಿಯಲ್ಲಿ ಅಪ್ಪಚ್ಚಿಯಾಗುತ್ತಾರೆ' ಎಂಬ ಘೋಷಣೆ ಇತ್ತು. ಆದರೆ ಅದೇ ಜೆ. ಎಚ್. ಪಟೇಲ್ ಸರಕಾರ ಧಾರಣಾ ಸಾಮರ್ಥ್ಯ ಅಧ್ಯಯನಕ್ಕಾಗಿ ಮಾಧವ ಗಾಡ್ಗೀಳ್ ಸಮಿತಿಯನ್ನು ನೇಮಿಸಿತು. ನಂತರ ದಕ್ಷಿಣ ಕನ್ನಡದಿಂದ ಪಶ್ಚಿಮ ಬಂಗಾಳದತ್ತ ಹೊರಟು ಹೋಗಲಿದ್ದ ಬೀಡಿ ಉದ್ಯಮದಿಂದಾಗಿ ೪ ಲಕ್ಷ ಬೀಡಿ ಕಾರ್ಮಿಕರ ಸಮಸ್ಯೆ ಎದುರಾಯಿತು. ಬೀಡಿ ಕಾರ್ಮಿಕರ ಹಿತರಕ್ಷಣಾ ವೇದಿಕೆಯನ್ನು ಮಾಡಿ ೭೫ ಸಾವಿರ ಜನ ಸೇರಿ ಮಂಗಳೂರಿನಲ್ಲಿ ಸಮಾವೇಶ ಮಾಡಿದೆವು. ಸಿಗರೇಟು ಕಂಪ... ಹುನ್ನಾರಕ್ಕೆ ಎದುರಾಗಿ ನಿಂತು ಬೀಡಿ ಉದ್ಯಮವನ್ನು ಉಳಿಸಿಕೊಂಡೆವು. ನಾ... ಬೀಡಿಯ ಪರ ಅಲ್ಲ. ಆದರೆ ೪ ಲಕ್ಷ ಜನರಿಗೆ ಪರ್ಯಾಯ ಉದ್ಯೋಗ... ಏಕಾಏಕಿ ಒದಗಿಸಲು ಸಾಧ್ಯವಿಲ್ಲ. ನಿಧಾನವಾಗಿ ಪರ್ಯಾಯ ಉದ್ಯೋಗ... ಬೀಡಿ ಕಾರ್ಮಿಕರ ವರ್ಗಾವಣೆ ಆಗಬೇಕು. ಆಗ...

ಅ : ಸರ್ ಸರ್, ಒಂದು ನಿಮಿಷ. ಈ ಪರ್ಯಾಯ ಉದ್ಯೋಗ ಎನ್ನುತ್ತೀ... ಅದರ ಬಗ್ಗೆ ನಿಮ್ಮ ಕಲ್ಪನೆ ಏನು ?

ನಾ : ಹಲವು ಇವೆ. ಒಂದನ್ನು ಹೇಳುತ್ತೇನೆ. ನಾವು 'ನನ್ನ ಭೂಮಿ-ನನ್ನ ಕೃ... ಎಂಬ ಪ್ರಾಜೆಕ್ಟ್ ಮಾಡಿದ್ದೇವೆ. ನಮ್ಮಲ್ಲಿ ಸಣ್ಣ ಕೃಷಿ ಉತ್ಪಾದಕ ಅಲ್ಲ ಎಂಬ ... ರೋಗ ಇದೆ. ಯಾಂತ್ರೀಕೃತ ಬೇಸಾಯದ ಪ್ರವರ್ತಕರ ಚಿಂತನೆ ಇದು. ಆದರೆ ನ... ಶೇಕಡ ೭೫ ಕೃಷಿಕರು ಸಣ್ಣ ಹಿಡುವಳಿದಾರರು. ೫೦ ಸೆಂಟ್ಸ್ ಕೃಷಿಯನ್ನು ನ... ಬದುಕುವ ದಲಿತ ಕುಟುಂಬಗಳಿವೆ. ಇದನ್ನು ಉತ್ಪಾದಕವಾಗುವ ಹಾಗೆ ಮಾಡು... ಕಾರ್ಯಯೋಜನೆ ಮಾಡಿದ್ದೇವೆ. ಇದನ್ನು ಆರ್ಥಿಕ ವಿಶ್ಲೇಷಣೆಗೊಳಪಡಿ... ನಬಾರ್ಡ್‌ನವರಿಗೆ 'ಹೀಗೂ ಸಾಧ್ಯವೇ' ಎಂದು ಅಚ್ಚರಿಯಾಗಿತ್ತು. ಕೃಷಿಕರಿಗೆ ಒಳ್ಳೆ... ಬೆಳೆ ತೆಗೆಯಲು ಸಾಧ್ಯವಾದರೆ ಅವರು ಬೇರೆ ಉದ್ಯೋಗಕ್ಕೆ ಹೋಗಬೇಕಾಗಿ... ನಮ್ಮಲ್ಲಿ ವಿದ್ಯಾವಂತ ನಿರುದ್ಯೋಗಿಗಳೇ ದೊಡ್ಡ ಸಂಖ್ಯೆಯಲ್ಲಿದ್ದಾರೆ. ಇ... ಅವಿದ್ಯಾವಂತರಿಗೆ ಏನು ಗತಿ ? ಅವರಿಗೆ ಟೈಲರಿಂಗ್‌ನಂತಹ ತರಬೇತಿ ನೀಡುತ್ತೇ... ಹೀಗೆ ಪರ್ಯಾಯಗಳು ಬೆಳೆಯಬೇಕು.

ಅ : ಸರಕಾರೇತರ ಸಂಸ್ಥೆಗಳು ಯಾವ ರೀತಿ ಕಾರ್ಯ ನಿರ್ವಹಿಸಬೇಕು ?

ನಾ : ಸರಕಾರವೇ ದೊಡ್ಡದು. ಸರಕಾರ ಮಾಡಬೇಕಾದ್ದನ್ನು ಸರಕಾರೇ... ಸಂಸ್ಥೆಗಳು ಮಾಡುವುದಲ್ಲ. ಸರಕಾರ ಮಾಡಬೇಕಾದ್ದನ್ನು ಸರಕಾರವೇ ಮಾಡುವ... ಮಾಡುವ ಕೆಲಸವನ್ನು ಸರಕಾರೇತರ ಸಂಸ್ಥೆಗಳು ಮಾಡಬೇಕು. ಆರೋಗ್ಯ, ನೀರ... ವಸತಿಗಳೆಲ್ಲ ಸರಕಾರದ ಜವಾಬ್ದಾರಿಗಳು. ನೀರಿನ ಖಾಸಗೀಕರಣ, ನೀರು ಪೂರೈಕೆಯ... ಸರಕಾರೇತರ ಸಂಸ್ಥೆಗಳಿಗೆ ಬಿಟ್ಟುಕೊಡುವುದೆಲ್ಲ ತಪ್ಪು. ನಮ್ಮ 'ನನ್ನ ಭೂಮಿ - ನ...

ಪ್ರಾಜೆಕ್ಟ್ ಅನ್ನು ಕೃಷಿ ಇಲಾಖೆ ಒಪ್ಪುತ್ತದೆ. ಆದರೆ ನಾವೇ ಕೃಷಿ ...ಖೆ ಅಲ್ಲ. ಅಥವಾ ಅದಕ್ಕೆ ಬದಲಿಯಾಗಿ ಕೆಲಸ ಮಾಡುವವರೂ ... ಸರಕಾರಿ ಸಂಸ್ಥೆ ಮಾಡಲು ಆಗದ ಕೆಲಸವನ್ನು ನಾವು ...ಡಬೇಕು. ನಮ್ಮ ೩೦ನೇ ವರ್ಷಾಚರಣೆಗೆ ಪ್ರಜಾಧಿಕಾರ ...ಾವೇಶ ಮಾಡಿದೆವು. ಈಗ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ 'ಪ್ರಜಾಧಿ... ವೇದಿಕೆ' ಇದೆ. ೨೪೦ ಸಂಸ್ಥೆಗಳು ಕೆಲಸ ಮಾಡುತ್ತಿವೆ. ಆದರೆ ...ಾರದ ಅಗತ್ಯಕ್ಕೆ ಬೇಕಾದ ಕೆಲವು ಮಾಡ್ಯೂಲ್‌ಗಳನ್ನು ...ಾರೇತರ ಸಂಸ್ಥೆಗಳು ಸಣ್ಣ ಪ್ರಮಾಣದಲ್ಲಿ ಮಾಡಿಕೊಡಬಹುದು.

ಇನ್ನೊಂದು ವಿಷಯ ಹೇಳಲು ಮರೆತೆ. ಮಹಿಳಾ ಜಾಗೃತಿ ವೇದಿಕೆ...ನ್ನು ನಾವು ಮಾಡಿದ್ದೇವೆ. ಮಹಿಳೆಯರ ಸಮಸ್ಯೆ 'ಬದುಕು' ಮತ್ತು ...ೀಷಣೆ'. ಗೃಹಕೈಗಾರಿಕೆ, ಕೃಷಿ ಮುಂತಾದವುಗಳ ಮೂಲಕ ...ಳೆಯರ ಬದುಕನ್ನು ಭದ್ರಪಡಿಸಬಹುದು. ಅದರ ಬಗ್ಗೆ ಈಗಾಗಲೇ ...ದ್ದೇನೆ. ಪುರುಷಪ್ರಧಾನ ಮನೋಧರ್ಮದಿಂದ ನಡೆಯುವ ...ಷಣೆಯಿಂದ ನಲುಗುವ ಮಹಿಳೆಯರಿಗಾಗಿ 'ಮಹಿಳಾ ಸಾಂತ್ವನ ...ದ್ರ'ಗಳನ್ನು ಮಾಡಿದ್ದೇವೆ. ಇದಕ್ಕೆ ಸಮಾಜದಲ್ಲೂ ಮಾನ್ಯತೆ ಇದೆ, ...ಾರದಿಂದಲೂ ಮಾನ್ಯತೆ ಇದೆ. ಇದನ್ನೆಲ್ಲ ಸಾಧಿಸಲು ಸಾಧ್ಯವಾದದ್ದು ...ೀರಾಟದಿಂದ. ವೈಯಕ್ತಿಕ ಹೋರಾಟ ಹೆಚ್ಚು ಪ್ರಯೋಜನ ...ಯಲ್ಲ. ಸಂಘಟಿತ ಹೋರಾಟ ಆಗಬೇಕು. ಪ್ರಜಾಪ್ರಭುತ್ವ ...ಸ್ಥೆಯಲ್ಲಿ ಹೋರಾಟವೆಂದರೆ ಬಡವ ಮತ್ತು ಶ್ರೀಮಂತರ ...ವಿನ ಹೋರಾಟವೇ. ಪ್ರಾಕೃತಿಕ ಸಂಪನ್ಮೂಲವನ್ನು ಆಧರಿಸಿದವರ ...ಕಿಗಾಗಿ ನಾವು ಹೋರಾಡುತ್ತೇವೆ. ಮಂಗಳೂರಿನ ಪೆಟ್ರೋ ...ಕಲ್ ಯೋಜನೆ ನೋಡಿ, ೭೪ ಸಾವಿರ ಎಕರೆ ಕೃಷಿ ಭೂಮಿಯನ್ನು ... ಕಬಳಿಸುತ್ತದೆ. ಎಸ್‌ಇಝೆಡ್ ಅಂತ ಇನ್ನೊಂದು ೨೫ ಸಾವಿರ ... ಒಟ್ಟು ಒಂದು ಲಕ್ಷ ಎಕರೆ ಹೊರಟುಹೋಗುತ್ತದೆ. ಬದುಕು, ...ಸರದ ನಾಶಕ್ಕೆ ಎಣೆಯೇ ಇಲ್ಲ. ಇದಕ್ಕೆಲ್ಲ ನೀರು ಎಲ್ಲಿಂದ ? ಕಡೆಗೆ ...ಯಲು ನೀರೂ ಇರುವುದಿಲ್ಲ. ಇಂಥಲ್ಲಿ ಹೋರಾಟ ಅನಿವಾರ್ಯ. ... ಇಷ್ಟೆಲ್ಲ ಹೋರಾಟ ಮಾಡಿಯೂ ಕಬಳಿಕೆ ನಡೆಯುತ್ತಿದೆ. ...ರುವಾಗ ಏನೂ ಮಾಡದಿದ್ದರೆ ಹೇಗಿದ್ದೀತು! ೭ ವರ್ಷಗಳ ...ಿ ವಾರ್ಷಿಕ ೩೩ ಸಾವಿರ ಕೋಟಿ ರೂಪಾಯಿ ಮಾರುಕಟ್ಟೆ ...ಯೆಂಬ ಕಂಪನಿಗಳ ಲೆಕ್ಕಾಚಾರದ ಹುನ್ನಾರಗಳಿಂದ ಬೀಜ ...ೂದೆ ಪ್ರಸ್ತಾಪವಾಯಿತು. ಪ್ರತಿಭಟನೆ ಆಯಿತು. ನಾವೂ ಮಾಡಿದೆವು. ... ಬದಲಾದ ರೂಪದಲ್ಲಿ ಅದು ಬರುತ್ತಿದೆಯೆಂದು ಹೇಳಲಾಗಿದೆ. ... ಕೇಳಿದರೂ ಜಾಗತೀಕರಣಕ್ಕೆ ಸಹಿ ಮಾಡಿದ್ದೇವೆ ಎನ್ನುತ್ತಾರಲ್ಲ, ...ತೀಕರಣಕ್ಕೆ ಸಹಿ ಮಾಡಿದ್ದರೆ ದೇಶವನ್ನು ಮಾರಾಟ ಮಾಡಿದ್ದೇವೆ ...ು ಅರ್ಥವಾ ? ಇವರು ಸಾರ್ವಜನಿಕ ನಲ್ಲಿಯನ್ನು ತೆಗೆಯುತ್ತಾರೆ. ...ರಿ ಕೊಕ್ಕೋಕೋಲಾ ಕಂಪನಿಗಳಿಗೆ ಕೊಡಲು ನೀರು ಇದೆ. ...ಷ್ಟೆಲ್ಲಿ ಹೋರಾಟದ ಹೊರತು ಬೇರೆ ಮಾರ್ಗದಿಂದ ತಡೆಯಲು ...ು. ಹೋರಾಟ ಆಗಬೇಕಾದರೆ ಸಶಕ್ತೀಕರಣ ನಡೆಯಬೇಕು.

...ಅ: ಸಶಕ್ತೀಕರಣದ ಬಗ್ಗೆ ಹೇಳಿದ್ದೀರಿ. ನಿಮ್ಮ ಎರಡನೆ ...ಯಾಗಿರುವ ಸೇವಾ ಕಾರ್ಯಗಳ ಬಗ್ಗೆ ಹೇಳುತ್ತೀರಾ ?

...ನಾ: ಮಹಿಳಾ ಸಾಂತ್ವನ ಕೇಂದ್ರವು ರಾಷ್ಟ್ರೀಯ ಕಾನೂನು ...ಕಾರದೊಂದಿಗೆ ಸೇರಿ ಸೇವಾ ಪೂರೈಕೆದಾರರಾಗಿದ್ದೇವೆ. ೧೩ ...ಗಳಲ್ಲಿ ಪಂಪ್ ರಿಪೇರಿ, ಟೈಲರಿಂಗ್, ಮೊಬೈಲ್ ರಿಪೇರಿ ...ತಾದವುಗಳ ಬಗ್ಗೆ ತರಬೇತಿ ಕೊಡುತ್ತೇವೆ. ಅದಕ್ಕೆ ಕೇಂದ್ರ ...ರದ ಅನುದಾನವಿದೆ. ಸ್ವಸಹಾಯ ಸಂಘ ಮಾಡಿದ್ದೇವೆ. ...ದು ಧರ್ಮಸ್ಥಳ ಗ್ರಾಮೋದ್ಯೋಗದವರ ಸ್ವಸಹಾಯ ...ಕ್ಕಿಂತ ಭಿನ್ನವಾಗಿದೆ. ಧರ್ಮಸ್ಥಳದವರದ್ದು ೬೨ ಸಾವಿರ ...ಾಯ ಸಂಘಗಳು ಇವೆ. ಆದರೆ ದಕ್ಷಿಣ ಕನ್ನಡ ಉಡುಪಿ ಜಿಲ್ಲೆಗಳ ...ಂಖ್ಯೆಗೆ ಗರಿಷ್ಠ ೨೨ ಸಾವಿರಕ್ಕಿಂತ ಹೆಚ್ಚು ಸ್ವಸಹಾಯ ಸಂಘಗಳು ... ನವೋದಯ ಸ್ವಸಹಾಯ ಸಂಘದವರದ್ದು ಧರ್ಮಸ್ಥಳ


ಅರವಿಂದ ಚೊಕ್ಕಾಡಿ. ಸೋಮನಾಥ ನಾಯಕ

ಸ್ವಸಹಾಯ ಸಂಘದೊಂದಿಗೆ ಕಾಂಪಿಟೇಷನ್, ಸ್ವಲ್ಪ ಬಡ್ಡಿ ಕಡಿಮೆ ಅಷ್ಟೆ. ಧರ್ಮಸ್ಥಳ ಸ್ವಸಹಾಯ ಸಂಘವು ವೀರೇಂದ್ರ ಹೆಗ್ಗಡೆ ಆಧಾರಿತ. ಅವರ ಇರುವಿಕೆ ಅದಕ್ಕೆ ಅನಿವಾರ್ಯ. ನಮ್ಮ ಸ್ವಸಹಾಯ ಸಂಘ ಜನಶಕ್ತಿ ಆಧಾರಿತ. ಯಾರ ಇರುವಿಕೆಯೂ ಅದಕ್ಕೆ ಅನಿವಾರ್ಯವಲ್ಲ. ನಾವು ಸಾಲ ಕೊಡುವುದಿಲ್ಲ. ಬ್ಯಾಂಕಿಗೆ ಶಿಫಾರಸು ಮಾಡಿ ಸಾಲ ಕೊಡಿಸುತ್ತೇವೆ, ಅಷ್ಟೆ. ಯಾಕೆಂದರೆ ನಮ್ಮದು ಸರಕಾರೇತರ ಸಂಸ್ಥೆಯೇ ಹೊರತು ಬ್ಯಾಂಕ್ ಅಲ್ಲ. ಬ್ಯಾಂಕ್ ಮಾಡುವ ಕೆಲಸವನ್ನು ಬ್ಯಾಂಕೇ ಮಾಡಬೇಕು. ನಮ್ಮ ಸ್ವಸಹಾಯ ಸಂಘದ ಲೇಬಲ್ ಪಡೆಯಬೇಕಾದರೆ ನಾವು ನಿಗದಿಪಡಿಸಿದ ಮಾನದಂಡಗಳನ್ನು ಪೂರೈಸಬೇಕು. ಮತ್ತು ಮಿತಿ ಮೀರಿ ಸಾಲ ಪಡೆಯಬಾರದು.

ಅ : ನಿಮ್ಮ ಕಾರ್ಯನಿರ್ವಹಣೆಯಲ್ಲಿ ಎದುರಾದ ಅಡ್ಡಿ ಆತಂಕಗಳು...

ನಾ : ಬಹಳ ಇವೆ. ಒಂದನ್ನು ಹೇಳುತ್ತೇನೆ. ಧನಂಜಯಕುಮಾರ್ ಕೇಂದ್ರ ಸಚಿವರಾಗಿದ್ದಾಗ 'ಕುದ್ರೆಮುಖ ಅಭಯಾರಣ್ಯ ಯೋಜನೆಯಲ್ಲಿ ಆದಿವಾಸಿಗಳನ್ನು ಒಕ್ಕಲೆಬ್ಬಿಸಬಾರದು' ಎಂದು ನಾವು ನಡೆಸಿದ ಹೋರಾಟ ಅಭಿವೃದ್ಧಿ ವಿರೋಧಿ ಹೋರಾಟವೆಂದು ತನಿಖೆಗೆ ಆದೇಶಿಸಿದ್ದರು. ತನಿಖೆ ನಡೆಸಿದವರು ನಮಗೆ 'ಎ' ಸರ್ಟಿಫಿಕೇಟ್ ಕೊಟ್ಟರು. ವಿದೇಶೀ ಬಂಡವಾಳ ನಿಂತರೆ ನಮ್ಮ ಕಾರ್ಯ ಸ್ಥಗಿತವಾಗಬಹುದೆಂದು ಅವರ ಲೆಕ್ಕಾಚಾರ. ಹಣ ಮುಖ್ಯ. ಆದರೆ ಹಣ ಒಂದೇ ಬಂಡವಾಳವಲ್ಲ. ನಮ್ಮ ಸ್ವಯಂಸೇವಾ ಕಾರ್ಯಕರ್ತರೇ ನಮ್ಮ ಬಂಡವಾಳ. ಕೆಲಸವನ್ನು ನಿಲ್ಲಿಸಲು ಆಗಲಿಲ್ಲ. ಅದಕ್ಕೆ ಕಾರಣ ಎನ್‌ಎಸ್‌ಟಿಯ ರಚನೆ. ಇದರಲ್ಲಿ ೨೫ ಮಂದಿ ಟ್ರಸ್ಟಿಗಳಿದ್ದಾರೆ. ೧೮ ಮಂದಿಯ ಸಲಹಾ ಸಮಿತಿ ಇದೆ. ಇದರಲ್ಲಿ ಎಲ್ಲಾ ವಿಭಾಗಗಳವರು ಇದ್ದಾರೆ. ಆಹ್ವಾನಿತರಿದ್ದಾರೆ. ಆಜೀವರು ೭ ಮಂದಿ ಟ್ರಸ್ಟಿಗಳು. ಈ ಪ್ರಜಾಸತ್ತಾತ್ಮಕ ರಚನೆಯೇ ನಮ್ಮ ಶಕ್ತಿ. ಜಿಲ್ಲೆಯಲ್ಲಿ ೮೦೦ ಕೃಷಿ ಘಟಕಗಳಿವೆ. ಮಹಿಳಾ ಜಾಗೃತಿ ವೇದಿಕೆಗಳಿವೆ. ಸಾರ್ವಜನಿಕ ಸ್ಪಂದಿಸುವಿಕೆ ಚೆನ್ನಾಗಿದೆ. ಸಂಘಟನೆಯ ಸದಸ್ಯರಲ್ಲಿರುವ 'ಇದು ನಮ್ಮ ಸಂಘಟನೆ' ಎಂಬ ತುಡಿತ ಸಂಘಟನೆಯನ್ನು ಉಳಿಸಿಕೊಳ್ಳುತ್ತದೆ. ಸರಕಾರದ ಜಿಲ್ಲಾ ಮತ್ತು ತಾಲೂಕು ಮಟ್ಟದ ಬಹುತೇಕ ಎಲ್ಲಾ ಸಮಿತಿಗಳಲ್ಲಿ ನಾವು ಇದ್ದೇವೆ. ವಿಮರ್ಶಾತ್ಮಕ ಸಹಕಾರವನ್ನು ನೀಡುತ್ತೇವೆ. ಆದರೆ ಸರಕಾರಿ ಅಧಿಕಾರಿ ಮತ್ತು ನೌಕರರಿಗೂ ಅಲ್ಲಿ ನಮ್ಮ ಅಗತ್ಯವಿದೆ ಎಂಬ ಭಾವನೆ ಇದೆ.

ಅ : ನೀವು ವಿದೇಶೀ ಬಂಡವಾಳದ ಬಗ್ಗೆ ಹೇಳಿದಿರಿ. ನಿಮ್ಮ ಈ ವ್ಯಾಪಕ ಕೆಲಸ-ಕಾರ್ಯಗಳಿಗೆ ವಿದೇಶೀ ಬಂಡವಾಳ ಎಷ್ಟು ನೆರವಾಗಿದೆ ?

ನಾ : ಪ್ರಾರಂಭದಲ್ಲಿ ನಾವು ವಿದೇಶೀ ಬಂಡವಾಳವನ್ನು ತೆಗೆದುಕೊಳ್ಳುವುದಿಲ್ಲ ಎಂದು



ಕೊಂಡವರು. ನಾವು ೩೫ ಬೃಹತ್ ಕೈಗಾರಿಕೆಗಳ ಸ್ಥಾಪನೆಯ ವಿರುದ್ಧ ಹೋರಾಟ ಮಾಡುವಾಗ ಆಕ್ಸ್‌ಫಾಮ್ ಸಂಸ್ಥೆಯ ಡಾ|| ಜೆರ್ರಿ ಪಾಯಸ್ ಅವರು ''ಇಷ್ಟು ಒಳ್ಳೆಯ ಕೆಲಸ ಮಾಡುತ್ತಿದ್ದೀರಿ. ವಿದೇಶೀ ಬಂಡವಾಳವನ್ನು ಯಾಕೆ ತೆಗೆದುಕೊಳ್ಳಬಾರದು'' ಎಂದು ೨೦ ಸಾವಿರ ರೂಪಾಯಿ ಕೊಡಲು ಬಂದರು. ಆ ವರ್ಷ ನಾವದನ್ನು ತೆಗೆದುಕೊಳ್ಳಲಿಲ್ಲ. ಆಗ ಶಂಪಾ ಅವರು ''ನಮ್ಮ ಷರತ್ತುಗಳಿಗೆ ಒಪ್ಪಿ ಕೊಡುವುದಾದರೆ ಒಳ್ಳೆಯದಕ್ಕೆ ವಿದೇಶೀ ಬಂಡವಾಳವನ್ನು ತೆಗೆದು ಕೊಳ್ಳೋಣ'' ಎಂದರು. ಮುಂದಿನ ಕಶ್ಮಲಗೊಳಿಸುವ ಬೃಹತ್ ಕೈಗಾರಿಕೆಗಳ ವಿರುದ್ಧದ ಆಂದೋಲನಕ್ಕೆಂದು ೨ ಲಕ್ಷ ೭೫ ಸಾವಿರ ರೂಪಾಯಿ ವಿದೇಶೀ ಬಂಡವಾಳವನ್ನು ತೆಗೆದುಕೊಂಡೆವು. ನಂತರ ಡಾ|| ಎಂ. ಕೆ. ಭಟ್ ಸಂಪರ್ಕಕ್ಕೆ ಬಂದರು. ಅವರು ಡ್ಯಾನ್‌ನ ಕನ್ವೀನರ್ ಆಗಿದ್ದರು. ಫಂಡಿಂಗ್‌ಗೆ ಪ್ರಪೋಸಲ್ ಕೇಳಿದರು. ಡ್ಯಾನಿಡಾಕ್ಕಾಗಿ ಸರಕಾರ ಇಲ್ಲಿ ಮಾಡಿದ ಅಧ್ಯಯನದ ಸಲಹಾ ಸಮಿತಿಯಲ್ಲಿ ನಾವಿದ್ದೆವು. ಒಮ್ಮೆ ''ಜನರಲ್ಲಿ ಅರಿವು ಬೆಳೆಸಿ. ಆದರೆ ಪ್ರತಿಭಟನೆ ಬೇಡ'' ಎಂಬ ಷರತ್ತು ಮುಂದಿಟ್ಟಾಗ ನಾವದನ್ನು ಒಪ್ಪಲಿಲ್ಲ. ವಿದೇಶೀ ಬಂಡವಾಳ ಸಿಗಲಿಲ್ಲ. ನಂತರ ನಮ್ಮ ಷರತ್ತಿಗೆ ಒಳಪಟ್ಟು ೩ ವರ್ಷಕ್ಕೆ ೪೫ ಲಕ್ಷ ರೂಪಾಯಿ ಬಂತು. ಸಂಘಟನೆಯನ್ನು ಬೆಳೆಯಿಸುವುದರಲ್ಲಿ ವಿದೇಶೀ ಬಂಡವಾಳವೂ ನೆರವಾಗಿದೆ. ಆದರೆ ಈಗ ನಾವು ವಿದೇಶೀ ಬಂಡವಾಳವನ್ನು ತೆಗೆದುಕೊಳ್ಳುತ್ತಿಲ್ಲ. ನಮ್ಮ ಷರತ್ತುಗಳಿಗೊಳಪಟ್ಟೇ ತೆಗೆದುಕೊಂಡರೂ ಒಂದು ಸಣ್ಣ ಋಣ ಇರುತ್ತದೆ ಎಂಬ ಕಾರಣದಿಂದ ವಿದೇಶೀ ಬಂಡವಾಳ ಬೇಡ ಎಂಬ ನಿರ್ಧಾರಕ್ಕೆ ಬಂದಿದ್ದೇವೆ. ಈಗ ಟ್ರಸ್ಟಿಗಳು, ಸಾರ್ವಜನಿಕರು ಮತ್ತು ಸರಕಾರದ ಹಣವನ್ನು ಮಾತ್ರ ಬಳಸುತ್ತಿದ್ದೇವೆ. ವೈಯಕ್ತಿಕವಾಗಿ ನಾನು ತೀರಾ ಸರಳವಾಗಿ ಬದುಕುತ್ತಿಲ್ಲ. ವೈಭವವೂ ಬೇಕಾಗಿಲ್ಲ. ನಾನು ಬೈಕ್‌ನಲ್ಲೇ ಓಡಾಡುತ್ತೇನೆ. ನನ್ನ ಪತ್ನಿಯೂ ಸಾಮಾಜಿಕ ಕಾರ್ಯಕರ್ತೆಯಾಗಿದ್ದು ಇದರಲ್ಲಿ ಇದ್ದಾರೆ. ಇಬ್ಬರು ಮಕ್ಕಳಿದ್ದಾರೆ. ನಮ್ಮ ಹಳೆ ಮನೆಯನ್ನು ಹಾಸ್ಟೆಲ್ ಆಗಿ ಮಾಡಿದ್ದೇವೆ. ನಾನು ಸಂಸ್ಥೆಯಿಂದ ಸಂಬಳ ತೆಗೆದುಕೊಳ್ಳುವುದಿಲ್ಲ. ನನ್ನ ಆದಾಯವೂ ಇದಕ್ಕೆ ಬಳಕೆ ಆಗುತ್ತಿದೆ. ರಂಜನ್‌ರಾವ್ ಅವರು ಅವಿವಾಹಿತರು. ಅವರೀಗ ಸ್ವಯಂ ಸೇವಾ ಸಂಸ್ಥೆಗಳ ಮಾನದಂಡ ಸಮಿತಿಯಲ್ಲಿ ಇದ್ದಾರೆ. ಮೊದಲು ೩ ತಿಂಗಳು ಮಾಲಿ... ನಿಯಂತ್ರಣಾ ಮಂಡಳಿಯಲ್ಲಿದ್ದರು. ಸಾರ್ವಜನಿಕ ಹಿತಾಸಕ್ತಿ ಮೊಕ್ಕದ್ದಮೆ ವಿಚಾರದ... ಅವರು ಪರಿಣತರು. ಅವರ ಆದಾಯದ ಕೊಡುಗೆಯೂ ಸಂಸ್ಥೆಗಿದೆ. ಎಲ್ಲಕ್ಕಿಂ... ಹೆಚ್ಚಾಗಿ ಇದಕ್ಕೆ ಜನಶಕ್ತಿಯ ಬೆಂಬಲವಿದೆ.



**RAYಗಳು**

ಯಾರೇ ಇದ್ದರು
ಕ್ಯಾರೇ ಎನ್ನದೆ
ನಿರ್ಭಯದಿಂದ
ಒಳನುಗ್ಗಿ
ನಿಧಾನವಾಗಿ ಕೊಲ್ಲುವ
ಕೊಲೆಗಾರರು

**ಅ :** ನಿಮ್ಮಲ್ಲಿ ಇಂತಹ ಚಟುವಟಿಕೆಗಳ ಆಸಕ್ತಿ ಹೇಗೆ ಬಂತು ?

**ನಾ :** ನಾನು ಹಿಂದೆ ಆರ್.ಎಸ್.ಎಸ್.ನಲ್ಲಿದ್ದೆ. ಎಮರ್ಜೆನ್ಸಿಯಲ್ಲಿ 'ಕಹಳೆ' ಎಂ... ಗುಪ್ತ ಪತ್ರಿಕೆಯನ್ನು ನಡೆಸುತ್ತಿದ್ದೆವು. ಎಮರ್ಜೆನ್ಸಿಯಲ್ಲಿ ಜೈಲಿಗೂ ಹೋಗಿದ್ದೆ. ಈ... ನಾನು ಈ ಸಂಸ್ಥೆಯ ಸದಸ್ಯ ಮಾತ್ರ. ಕೋಮುವಾದವನ್ನು ನಾವು ಒಪ್ಪುವುದಿ... ನಮ್ಮಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತರೆಲ್ಲರೂ ಇದ್ದಾರೆ. ಬಿಜೆಪಿ, ಕಾಂಗ್ರೆಸ್, ಕಮ್ಯುನಿಸ್... ಜೆಡಿಎಸ್‌ನವರೂ ಇದ್ದಾರೆ. ಎಲ್ಲ ಧರ್ಮಗಳ ಬಗ್ಗೆ ಗೌರವವಿದೆ. ಆದರೆ ಯಾವುದೇ... ಮತೀಯ ಆಚರಣೆಗಳನ್ನು ಸಂಸ್ಥೆಯು ನಡೆಸುವುದಿಲ್ಲ. ಬಿ. ಎಂ. ಇದಿನಬ್ಬ ಅವ... ನಮ್ಮ ಸಂಸ್ಥೆಯನ್ನು ಕೋಮು ಸೌಹಾರ್ದತೆಯ ಮಹಾನ್ ದೇಗುಲವೆಂದ... ಕರೆದಿದ್ದರು. ಯುವಕರು ಎಂಗೇಜ್ ಆಗದಿರುವುದರಿಂದ ಕೋಮುವಾ... ಬೆಳೆಯುತ್ತದೆ. ಯುವಕರನ್ನು ಎಂಗೇಜ್ ಆಗಿರುವಂತೆ ಮಾಡಲು ನಾವು ಕೆಲ... ಮಾಡುತ್ತಿದ್ದೇವೆ. ಮಾನವ ಧರ್ಮ ನಮಗೆ ಮುಖ್ಯ.

**ಅ :** ಸರ್, ನಿಮ್ಮ ಪ್ರಕಾರ ಸ್ವಾವಲಂಬನೆ ಹೇಗೆ ಸಾಧ್ಯ ?

**ನಾ :** ಜನರ ಸಶಕ್ತೀಕರಣವೇ ಸ್ವಾವಲಂಬನೆಯ ಶಕ್ತಿ. ಅದು ಸಂಘಟ... ಹೋರಾಟದ ರೂಪವನ್ನು ಕಂಡುಕೊಳ್ಳುವುದು ಸ್ವಾವಲಂಬನೆಯ ದಾರಿ. ಹೋರಾಟ... ಪರಿಣಾಮ ಆಗಿಯೇ ಆಗುತ್ತದೆ. ನಾವೆಲ್ಲ ಸೇರಿ ಹೋರಾಟ ಮಾಡಿದ್ದರ ಪರಿಣಾಮವಾ... ಈಗ ಮಂಗಳೂರಿನ ಪೆಟ್ರೋ ಕೆಮಿಕಲ್ ಯೋಜನೆಯನ್ನು ಕೈಬಿಟ್ಟಿದ್ದಾರೆ. ಅದರಿಂದಾ... ೭೯ ಸಾವಿರ ಎಕರೆ ಕೃಷಿಭೂಮಿ ಉಳಿದಿದೆ. ನಮ್ಮ ದೇಶಕ್ಕೆ, ಸರಕಾರೇತರ ಸಂಸ್ಥೆಗಳಿ... ವಾರ್ಷಿಕ ಸುಮಾರು ೫ ಸಾವಿರ ಕೋಟಿ ರೂಪಾಯಿ ವಿದೇಶೀ ಬಂಡವಾಳ ಬರುತ್ತ... ಅದೆಲ್ಲ ಜನರ ಸಶಕ್ತೀಕರಣಕ್ಕಾಗಿ ಬಳಕೆಯಾದರೆ ಎಷ್ಟು ಚೆನ್ನಾಗಿತ್ತು ಎನಿಸುತ್ತ... ಸಶಕ್ತೀಕರಣದ ಪರಿಣಾಮವಾಗಿ ಬಡಜನರ ಸಾಮೂಹಿಕ ಮಾಲಕತ್ವ ಬರಬೇಕ... ಅದು ಸಂಘಟನೆಯ ಶಕ್ತಿಯಾಗುತ್ತದೆ. ಇದೊಂದು ನಿಲ್ಲದ ಪ್ರಕ್ರಿಯೆ. ಈ ಪ್ರಕ್ರಿಯೆ... ಊಳಿಗಮಾನ್ಯ ವ್ಯವಸ್ಥೆಯನ್ನು ನಾಶಪಡಿಸಲೇಬೇಕು. ಅದೊಂದು ಚಾರಿ... ಅನಿವಾರ್ಯತೆಯಾಗಿರುತ್ತದೆ.

**ಅ :** ಸರಿ ಸಾರ್, ಸಾಕಷ್ಟು ವಿಚಾರಗಳನ್ನು ತಿಳಿಸಿಕೊಟ್ಟಿದ್ದೀರಿ. ಕೃತಜ್ಞತೆಗಳು ಮ... ನಮಸ್ಕಾರ.

**ನಾ :** ನಮಸ್ಕಾರ.

ಸಂದರ್ಶನ ಮತ್ತು ನಿರೂಪಣೆ : **ಅರವಿಂದ ಚೊಕ್ಕಾಡಿ**
ಕೋಡಂಗಲ್ಲು ಅಂಚೆ, ಮೂಡುಬಿದಿರೆ - ೫೭೪ ೧೯೭. ದಕ್ಷಿಣ ಕನ್ನಡ ಜಿಲ್ಲೆ

# ಗ್ರಾಹಕ ಸಂರಕ್ಷಣಾ ಕಾನೂನು ಹಾಗೂ ಉತ್ತಮ ಆಡಳಿತ

## ವೈ. ಜಿ. ಮುರಳೀಧರ

ಗ್ರಾಹಕ ಸಂರಕ್ಷಣಾ ಕಾನೂನು ಜಾರಿಗೆ ಬಂದು ...ು ದಶಕಗಳು ಕಳೆದಿವೆ. ಈ ಅವಧಿಯಲ್ಲಿ ಇದನ್ನು ...ಳಿತದ ಮೌಲ್ಯ ಹೆಚ್ಚಿಸುವ ದೃಷ್ಟಿಯಿಂದ ವಿಶ್ಲೇಷಣೆ ...ಡಿರುವ ಉದಾಹರಣೆಗಳು ಕಡಿಮೆ. ನಾಗರಿಕರು ... ದಿನನಿತ್ಯದ ವ್ಯವಹಾರಗಳಲ್ಲಿ ಉಂಟಾಗುವ ...ಸ್ಯೆಗಳನ್ನು ಪರಿಹರಿಸಿಕೊಳ್ಳಲು ಅಥವಾ ತಮಗಾದ ...ವನ್ನು ತುಂಬಿಕೊಳ್ಳಲು ಈ ಕಾನೂನನ್ನು ಬಳಸಿ ...ಂಡಿದ್ದಾರೆ. ಬಹುತೇಕ ನಾಗರಿಕರು ಈ ಕಾನೂನನ್ನು ...ಸಗಿ ವಲಯದಲ್ಲಾಗುವ ಮೋಸ, ವಂಚನೆ ...್ಯದಿಗೆ ಪರಿಹಾರ ಪಡೆಯುವ ಒಂದು ಮಾರ್ಗ ...ಮು ಭಾವಿಸಿದ್ದಾರೆ. ಇದು ಗ್ರಾಹಕ ಸಂರಕ್ಷಣಾ ...ೂನಿನ ಮೂಲ ಉದ್ದೇಶ ಎಂಬುದು ನಿಜವಾದರೂ ...ನ್ನು ಸರ್ಕಾರಿ ಕಚೇರಿಗಳಲ್ಲಿ ದೊರೆಯುವ ಸೇವೆಯ ...ಮಟ್ಟ ಹೆಚ್ಚಿಸಲು ಸಹ ಬಳಸ ಬಹುದೆಂಬ ಅಂಶ ...್ಟ ನಾಗರಿಕರಿಗೆ ತಿಳಿದಿರಲಾರದು. ಗ್ರಾಹಕ ಸಂರಕ್ಷಣಾ ...ೂನಿನ ಅಡಿಯಲ್ಲಿ ಅನೇಕ ವೇದಿಕೆಗಳು, ಆಯೋಗ ...ಗೂ ನ್ಯಾಯಾಲಯಗಳು ನೀಡಿರುವ ತೀರ್ಪು ಈ ...ೂನಿನ ವ್ಯಾಪ್ತಿಯನ್ನು ವಿಸ್ತರಿಸಿದೆ. ನೊಂದ ನಾಗರಿಕರಿಗೆ ...ಹಾರ ನೀಡುವುದರ ಮೂಲಕ ಸರ್ಕಾರಿ ಅಧಿ...ಗಳ ಹಾಗೂ ಸಿಬ್ಬಂದಿಯ ಜವಾಬ್ದಾರಿಯನ್ನು ...್ಸಿದೆ. ಒಟ್ಟಾರೆ ಆಡಳಿತವನ್ನು ಉತ್ತಮ ಗೊಳಿಸುವಲ್ಲಿ ...ಹಕ ಸಂರಕ್ಷಣಾ ಕಾನೂನು ಸದ್ದುಗದ್ದಲವಿಲ್ಲದೆ ...ರ್ಯ ನಿರ್ವಹಿಸಿದೆ.

...ಸರ್ಕಾರಿ ಕಚೇರಿಗಳಲ್ಲಿ ನಾಗರಿಕರು ಎದುರಿಸುವ ...ೇಕ ಸಮಸ್ಯೆಗಳಲ್ಲಿ ವಿಳಂಬವೂ ಒಂದು. ಯಾವುದೇ ...ಸದಲ್ಲೂ ಸರ್ಕಾರಿ ಸಿಬ್ಬಂದಿ ಚುರುಕಾಗಿ ಕಾರ್ಯ ನಿರ್ವಹಿಸುವುದಿಲ್ಲ. ಏನಾದರೂ ಒಂದು ನೆಪವೊಡ್ಡಿ ನಾಗರಿಕರನ್ನು ಮತ್ತೊಂದು ದಿನ ಬರುವಂತೆ ಹೊರ ದೂಡದಿದ್ದರೆ ಅವರಿಗೆ ಸಮಾಧಾನವಿರುವುದಿಲ್ಲ. ವಿಳಂಬದ ಹಿಂದಿನ ಉದ್ದೇಶ ಏನೆಂದು ಹೇಳಬೇಕಿಲ್ಲ. ಲಂಚ ನೀಡಿದಾಕ್ಷಣ ಯಾವುದೇ ಸಮಸ್ಯೆ ಇಲ್ಲದೆ ಕೆಲಸ ಆಗಿಬಿಡುತ್ತದೆ. ಒರಿಸ್ಸಾ ರಾಜ್ಯದ ಕಂದಾಪುರ ಎಂಬ ಜಿಲ್ಲೆಯ ಮಿಶ್ರಾ ಎಂಬುವವರು ತಾಲ್ಲೂಕು ಕಚೇರಿಯಿಂದ ಯಾವುದೋ ಪ್ರಮಾಣಪತ್ರ ಪಡೆಯಬೇಕಿತ್ತು. ಅದಕ್ಕೆ ತಗಲುವ ಶುಲ್ಕವನ್ನು ಪಾವತಿಸಿದ್ದರೂ ಸಿಬ್ಬಂದಿ ಅದನ್ನು ನೀಡಲಿಲ್ಲ. ಸುಮಾರು ೧೦ ತಿಂಗಳಲ್ಲಿ ೧೬ ಬಾರಿ ಕಚೇರಿಗೆ ಅಲೆದರೂ ಅವರಿಗೆ ಅಗತ್ಯವಿದ್ದ ಪ್ರಮಾಣ ಪತ್ರ ದೊರೆಯಲಿಲ್ಲ. ಯಾರದೋ ಸಲಹೆ ಮೇರೆಗೆ ಮಿಶ್ರಾ ಅವರು ಜಿಲ್ಲಾ ವೇದಿಕೆಯಲ್ಲಿ ದೂರು ಸಲ್ಲಿಸಿದರು ಹಾಗೂ ಅದರ ಬಗ್ಗೆ ಒರಿಸ್ಸಾ ರಾಜ್ಯ ಗ್ರಾಹಕ ಕುಂದು ಕೊರತೆ ಪರಿಹಾರ ಆಯೋಗದಲ್ಲಿ ಮೇಲ್ಮನವಿ ಸಲ್ಲಿಸಿದರು. ಪ್ರಮಾಣಪತ್ರದ ನಕಲನ್ನು ಪಡೆಯಲು ತಾವು ಪ್ರತ್ಯೇಕ ಶುಲ್ಕ ಪಾವತಿಸಿರುವ ಕಾರಣ ತಾವು ಗ್ರಾಹಕ ಸಂರಕ್ಷಣಾ ಕಾನೂನಿನ ಪ್ರಕಾರ ಗ್ರಾಹಕ ನಾಗುತ್ತೇನೆ ಎಂದು, ಹಾಗೂ ಈ ವಿಳಂಬ ಸೇವೆಯಲ್ಲಿನ ದೋಷ ಎಂದು ಪರಿಗಣಿಸ ಬೇಕೆಂದು ವಾದ ಮಂಡಿಸಿದರು. ಈ ವಿಳಂಬಕ್ಕೆ ತಹಶಿಲ್ದಾರ್, ಉಪ ವಿಭಾಗದ ಅಧಿಕಾರಿ ಹಾಗೂ ಜಿಲ್ಲಾಧಿಕಾರಿಯನ್ನು ಒಟ್ಟಾಗಿ ಕಾರಣರೆಂದು ಆಯೋಗ ನಿರ್ಧರಿಸಿತು. ಅರ್ಜಿದಾರರಿಗೆ ನೀಡಬೇಕಾದ ದಾಖಲೆಯನ್ನು ಕೂಡಲೆ ಒದಗಿಸಬೇಕೆಂದು ಆದೇಶ ನೀಡಿದುದಲ್ಲದೆ, ಅರ್ಜಿದಾರರಿಗೆ ರೂ. ೧,೨೦೦ ಪರಿಹಾರ ನೀಡ ಬೇಕೆಂದು ತೀರ್ಮಾನಿಸಿತು. ಈ ಮೊತ್ತವನ್ನು ಅಧಿಕಾರಿಗಳು ತಮ್ಮ ಸ್ವಂತ ಹಣದಿಂದ ನೀಡಬೇಕು ಇಲ್ಲವೆ ಅವರ ಸಂಬಳದಿಂದ ಮುರಿದುಕೊಳ್ಳಬೇಕೆಂದು ಹೇಳಿತು.

ನಗರಾಭಿವೃದ್ಧಿ ಪ್ರಾಧಿಕಾರಗಳ ಕಾರ್ಯವೈಖರಿ ಬಗ್ಗೆ ಹೆಚ್ಚಿಗೆ ಹೇಳುವ ಅಗತ್ಯವಿಲ್ಲ. ಭ್ರಷ್ಟಾಚಾರ, ವಿಳಂಬ, ಅದಕ್ಷತೆ ಇತ್ಯಾದಿಯಿಂದ ಕೂಡಿರುವ ಈ ಸಂಸ್ಥೆಗಳು ನಾಗರಿಕರನ್ನು ಮಾನವರೆಂದು ಭಾವಿಸುವುದೇ ಅಪರೂಪ. ಲಂಚವಿಲ್ಲದಿದ್ದರೆ ಯಾವುದೇ ಕೆಲಸವೂ ಆಗದ ಹಂತ ತಲುಪಿದೆ ಈ ಪ್ರಾಧಿಕಾರಗಳು. ಲಕ್ನೋ ನಗರದ ಎಮ್. ಕೆ. ಗುಪ್ತಾ ಎಂಬುವವರು ಅಲ್ಲಿನ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ಕಾನೂನಿನಂತೆ ಎಲ್ಲ ನಿಯಮಗಳನ್ನು ಪಾಲಿಸಿದ್ದರೂ ಅವರಿಗೆ ಹಂಚಿಕೆಯಾಗಿದ್ದ ಮನೆ ನೀಡುವಲ್ಲಿ ವಿಳಂಬ ಮಾಡುತ್ತಿತ್ತು. ಅಲ್ಲದೆ ಹಂಚಿಕೆಯಾಗಿದ್ದ ಮನೆಯಲ್ಲಿ ಅನೇಕ ಲೋಪದೋಷಗಳಿದ್ದವು. ಅದನ್ನು ದುರಸ್ತಿ ಮಾಡಬೇಕೆಂದು ಕೇಳಿದರು. ಅರ್ಜಿದಾರರು ಈ ವಿಳಂಬ ಸಹಿಸಲಾರದೆ ರಾಜ್ಯ ಆಯೋಗದಲ್ಲಿ ದೂರು ಸಲ್ಲಿಸಿ ಪರಿಹಾರ ಕೊಡಿಸಬೇಕೆಂದು ಕೇಳಿದರು. ಆಯೋಗವು ಅರ್ಜಿದಾರರ ಪರ ತೀರ್ಪು ನೀಡಿ ಪ್ರಾಧಿಕಾರ ಪರಿಹಾರ ಹಣ ನೀಡಬೇಕೆಂದು ಹೇಳಿತು. ಇದರ ವಿರುದ್ಧ ಪ್ರಾಧಿಕಾರವು ಸುಪ್ರೀಂ ಕೋರ್ಟಿನಲ್ಲಿ ಮೇಲ್ಮನವಿ ಸಲ್ಲಿಸಿತು. ಅಲ್ಲಿಯೂ ಪ್ರಾಧಿಕಾರಕ್ಕೆ ಮುಖಭಂಗವಾಯಿತು. ಮನೆ ರಿಪೇರಿ ಜೊತೆಗೆ ಅರ್ಜಿದಾರರಿಗೆ ರೂ. ೧೦,೦೦೦ ಪರಿಹಾರ ನೀಡುವಂತೆ ತೀರ್ಮಾನಿಸಿತು. ಈ ಹಣವನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ವಸೂಲು ಮಾಡಬೇಕೆಂದು ಹೇಳಿದ್ದು ವಿಶೇಷ. ಇದೇ ಮಾದರಿ ತೀರ್ಪನ್ನು ಗಾಜಿಯಾಬಾದ್ ಅಭಿವೃದ್ಧಿ ಪ್ರಾಧಿಕಾರದ ವಿರುದ್ಧವೂ ನೀಡಲಾಗಿದೆ. ಈ ಪ್ರಕರಣದಲ್ಲಿ ನಷ್ಟ ಅನುಭವಿಸಿದ ಎಲ್ಲ ಅರ್ಜಿದಾರರಿಗೂ ರೂ. ೧೫,೦೦೦ ಪರಿಹಾರ ನೀಡುವಂತೆ ರಾಷ್ಟ್ರೀಯ ಆಯೋಗ ತೀರ್ಪು ನೀಡಿದೆ. ಇಲ್ಲಿಯೂ ಸಹ ಈ ಮೊತ್ತವನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ವಸೂಲು ಮಾಡಬೇಕೆಂದು ಆಯೋಗ ಹೇಳಿದೆ.

ಈಗ ಎಲ್ಲೆಲ್ಲಿಯೂ ಮೊಬೈಲ್ ದೂರವಾಣಿಯ ಕ್ರಾಂತಿ ಕಂಡುಬರುತ್ತಿದೆ. ನೀವು ಕೇಳುವುದೇ ಬೇಡ.



ಕಂಪನಿಯವರೇ ಬಲವಂತವಾಗಿ ಮೊಬೈಲ್ ನೀಡಲು ಮುಂದಾಗಿದ್ದಾರೆ. ಆದರೆ ೯೦ರ ದಶಕದಲ್ಲಿ ಪರಿಸ್ಥಿತಿ ಹೀಗಿರಲಿಲ್ಲ. ಬಳಕೆದಾರರು ಇರುವ ಒಂದೇ ಒಂದು ದೂರವಾಣಿ ಇಲಾಖೆ ಎದುರು ಸಾಲುಗಟ್ಟಿ ನಿಂತು ಅರ್ಜಿ ಸಲ್ಲಿಸಿ ಅನೇಕ ವರ್ಷಗಳು ಕಾದು ದೂರವಾಣಿ ಪಡೆಯಬೇಕಿತ್ತು. ಇಲ್ಲವೆ ರಾಜಕಾರಣಿಗೆ ಲಂಚ ತೆತ್ತು ಸಂಪರ್ಕ ಪಡೆಯಬೇಕಿತ್ತು. ತಮಿಳುನಾಡಿನ ಕಂಪನಿಯೊಂದು ದೂರವಾಣಿ ಅಪೇಕ್ಷಿಸಿ ೧೯೮೮ರಲ್ಲಿ ಅರ್ಜಿ ಸಲ್ಲಿಸಿತ್ತು. ಮೂರು ವರ್ಷಗಳಾದರೂ ದೂರವಾಣಿ ಸಂಪರ್ಕ ದೊರೆಯದ ಕಾರಣ ಗ್ರಾಹಕ ವೇದಿಕೆಯಲ್ಲಿ ದೂರು ಸಲ್ಲಿಸಲಾಯಿತು. ದೂರವಾಣಿ ಇಲಾಖೆಯು ಆಗಷ್ಟೇ ಎಚ್ಚೆತ್ತು ಅರ್ಜಿಯಲ್ಲಿ ಲೋಪವಿದೆ ಎಂದು ವಾದ ಮಂಡಿಸಿತು. ಅರ್ಜಿಯಲ್ಲಿ ಕಂಪನಿಯ ಮ್ಯಾನೇಜಿಂಗ್ ಪಾರ್ಟ್‌ನರ್ ಸಹಿ ಮಾಡಿಲ್ಲದ ಕಾರಣ ಸಂಪರ್ಕ ನೀಡಿಲ್ಲವೆಂದು ಹೇಳಿತು. ಪ್ರಕರಣ ರಾಷ್ಟ್ರೀಯ ಆಯೋಗದ ಮುಂದೆ ದಾಖಲಾಯಿತು. ದೂರ ಸಂಪರ್ಕ ಇಲಾಖೆಯ ದೋಷವನ್ನು ಗುರುತಿಸಿದ ಆಯೋಗ ಅರ್ಜಿದಾರರಿಗೆ ರೂ. ೧೦,೦೦೦ ಪರಿಹಾರ ನೀಡಬೇಕೆಂದು ಹಾಗೂ ಈ ಮೊತ್ತವನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆಯಬೇಕೆಂದು ತೀರ್ಮಾನಿಸಿತು.

ವಿದ್ಯುಚ್ಛಕ್ತಿ ನಿಗಮದ ಅಧಿಕಾರಿಗಳಿಂದ ಆಗಿರುವ ದೋಷವನ್ನು ಸರಿಪಡಿಸಲು ಪರಿಹಾರ ಮೊತ್ತವನ್ನು ಅವರ ಸಂಬಳದಿಂದ ಮುರಿದುಕೊಳ್ಳಬೇಕೆಂದು ರಾಜಸ್ಥಾನದ ಜಿಲ್ಲಾ ವೇದಿಕೆಯೊಂದು ತೀರ್ಪು ನೀಡಿರುವ ಪ್ರಸಂಗ ೧೯೯೬ರಲ್ಲಿ ನಡೆದಿದೆ. ಕೃಷಿಕರೊಬ್ಬರು ತಮ್ಮ ಜಮೀನಿನಲ್ಲಿರುವ ಪಂಪ್‌ಸೆಟ್‌ಗೆ ವಿದ್ಯುಚ್ಛಕ್ತಿ ಕೋರಿ ೧೯೯೩ರಲ್ಲಿ ಅರ್ಜಿ ಹಾಗೂ ಅದರ ಶುಲ್ಕ ರೂ. ೨,೫೦೦ ಸಲ್ಲಿಸಿದ್ದರು. ಮೂರು ವರ್ಷಗಳ ನಂತರ ರೂ. ೮,೫೦೦ ಪಾವತಿಸಬೇಕೆಂದು ವಿದ್ಯುಚ್ಛಕ್ತಿ ನಿಗಮವು ಮತ್ತೊಂದು ನೋಟೀಸ್ ನೀಡಿತು. ಇದರ ವಿರುದ್ಧ ಗ್ರಾಹಕರು ಜಿಲ್ಲಾ ವೇದಿಕೆಯಲ್ಲಿ ದೂರು ದಾಖಲಿಸಿದರು. ಹೆಚ್ಚುವರಿ ಹಣ ಪಾವತಿಸುವುದಿಲ್ಲವೆಂದು ವಾದ ಮಾಡಿದರು. ನಿಗಮದ ನಿಯಮದ ಪ್ರಕಾರ ರೂ. ೮,೫೦೦ ಸರಿಯಾದ ಮೊತ್ತವಾಗಿತ್ತು. ಆದರೆ ಅದನ್ನು ತಿಳಿಸಲು ಮೂರು ವರ್ಷ ತೆಗೆದುಕೊಂಡಿದ್ದು ದೋಷವೆಂದು ವೇದಿ[ಕೆ] ತೀರ್ಮಾನಿಸಿತು. ಅರ್ಜಿದಾರರ ಪಂಪ್‌ಸೆಟ್‌ಗೆ ಕೂಡಲೆ ವಿದ್ಯುತ್ ಪೂರೈಕೆ ಮಾಡಬೇಕೆಂದು ಹಾಗೂ ಅವರಿಗೆ ರೂ. ೧೦,೦೦೦ ಪರಿಹಾರ ಕೊಡಬೇಕೆಂದು ಹೇಳಿತು. ಅಲ್ಲದೆ ಈ ಮೊತ್ತವನ್ನು ವಿದ್ಯುಚ್ಛಕ್ತಿ ನಿಗಮದ ಅಧಿಕಾರಿಗಳಿಂದ ವಸೂಲು ಮಾಡಬೇಕೆಂದು ಸಹ ಆದೇಶ ನೀಡಿತು.

ಶಶಿಕಲಾ ನಾರಾಯಣ್ ಪ್ರಭು ಎಂಬುವವರು ಮುಂಬೈ ನಗರದ ಸಿಂಡಿಕೇಟ್ ಬ್ಯಾಂಕೊಂದರಲ್ಲಿ ಖಾತೆ ಹೊಂದಿದ್ದರು. ಅವರಿಗೆ ಎರಡು ಚೆಕ್ ಪುಸ್ತಕಗಳನ್ನು ನೀಡ[ಲಾ]ಗಿತ್ತು. ಆದರೆ ಯಾರೋ ಇವರ ಖಾತೆಯಿಂದ ರೂ. ೧,೦೫,೦೦೦ ಹಿಂತೆಗೆದು[ಕೊಂ]ಡಿದ್ದರು. ಇದಕ್ಕೆ ಬಳಸಿದ ಚೆಕ್ ಶಶಿಕಲಾ ಅವರದ್ದಾಗಿರಲಿಲ್ಲ. ಫೋರ್ಜರಿ ಮಾಡಿದ ಚೆಕ್‌ಗೆ ಹಣ ನೀಡಿದ್ದು ದೋಷಯುಕ್ತ ಸೇವೆ ಎಂದು ದೂರು ದಾಖಲು ಮಾಡಿದರು. ವೇದಿಕೆಯು ಅರ್ಜಿದಾರರ ವಾದವನ್ನು ಒಪ್ಪಿ ಅವರಿಗೆ ರೂ. ೧,೦೫,೦೦೦ ನೀಡುವಂತೆ ಹಾಗೂ ಆ ಮೊತ್ತವನ್ನು ದೋಷಕ್ಕೆ ಕಾರಣರಾದ ಬ್ಯಾಂಕ್ ಅಧಿಕಾರಿಗಳಿಂದ ವಸೂಲು ಮಾಡುವಂತೆ ಆದೇಶ ನೀಡಿತು. ಇದೇ ರೀತಿ ಪ್ರವಾಸೋದ್ಯಮ ಮಂಡಳಿಯು ತಾನು ಹೇಳಿದಂತೆ ಪ್ರೇಕ್ಷಣೀಯ ಪ್ರದೇಶಗಳಿಗೆ ಪ್ರವಾಸಿಯೊಬ್ಬರನ್ನು ಕರೆದುಕೊಂಡು ಹೋಗದ ಕಾರಣ ಅದಕ್ಕೆ ಕಾರಣರಾದ ಅಧಿಕಾರಿಯಿಂದ ರೂ. ೧೦,೦೦೦ ವಸೂಲು ಮಾಡಬೇಕೆಂದು ದಕ್ಷಿಣ ಮುಂಬಯಿ ಗ್ರಾಹಕ ವೇದಿಕೆ ತೀರ್ಪು ನೀಡಿದೆ.

ಅನೇಕ ಸರ್ಕಾರಿ ಕಚೇರಿಗಳು, ನಿಗಮಗಳು ಇತ್ಯಾದಿ ತನ್ನ ಸಿಬ್ಬಂದಿ ಹಾಗೂ ನೌಕರರಿಗೆ ಜೀವ ವಿಮೆ ಪಾಲಿಸಿ ತೆಗೆದುಕೊಂಡಿರುತ್ತದೆ. ಸಿಬ್ಬಂದಿಯ ಸಂಬಳದಲ್ಲಿ ಪ್ರೀಮಿಯಂ ಹಿಡಿದುಕೊಂಡು ಅದನ್ನು ಎಲ್.ಐ.ಸಿ.ಗೆ ಪಾವತಿ ಮಾಡುವುದು ನಿಯಮ. ಆದರೆ ಮೇಲೆ ಹೇಳಿದಂತೆ ಉದಾಸೀನ, ಆಲಸ್ಯ ನಮ್ಮ ಸರ್ಕಾರಿ ಇಲಾಖೆಯ ಸಂಸ್ಕೃತಿ. ಪ್ರೀಮಿಯಂ ಪಾವತಿ ಮಾಡುವುದರಲ್ಲಿ ವಿಳಂಬವಾದರೆ ಅದರ ನಷ್ಟ ಭರಿಸಬೇಕಾದ್ದು ಯಾವುದೇ ತಪ್ಪು ಮಾಡದ ಸಿಬ್ಬಂದಿ. ಶ್ರೀಮತಿ ಕಾವೇರಮ್ಮ ಎಂಬುವವರು ವಿರಾಜಪೇಟೆಯ ಸರ್ಕಾರಿ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಯಾವುದೋ ಕಾಯಿಲೆಗೆ ತುತ್ತಾದ ಅವರು ಸಾವನ್ನಪ್ಪಿದರು. ಆಕೆಯ ಮನೆಯವರು ಎಲ್.ಐ.ಸಿ.ಯಿಂದ ಪಾಲಿಸಿ ಹಣ ಪಡೆಯಲು ಅರ್ಜಿ ಸಲ್ಲಿಸಿದರು. ಶ್ರೀಮತಿ ಕಾವೇರಮ್ಮನವರ ಪಾಲಿಸಿಗೆ ಪ್ರೀಮಿಯಂ ಬಾರದ ಕಾರಣ ಪಾಲಿಸಿ ಲ್ಯಾಪ್ಸ್ ಆಗಿದೆಯೆಂಬ ಉತ್ತರ ದೊರೆಯಿತು. ಬಿ.ಇ.ಓ. ವಿರುದ್ಧ ಜಿಲ್ಲಾ ವೇದಿಕೆಯಲ್ಲಿ ದೂರು ದಾಖಲಿಸಿದಾಗ ಅವರು ಶಿಕ್ಷಕಿಯ ಸಂಬಳದಿಂದ ವಿಮೆ ಮುರಿದುಕೊಂಡಿದ್ದರೂ ಅದನ್ನು ಎಲ್.ಐ.ಸಿ.ಗೆ ಪಾವತಿ ಮಾಡದಿರುವುದು ಬೆಳಕಿಗೆ ಬಂತು. ಆದರೆ ಇದರಲ್ಲಿ ಎಲ್.ಐ.ಸಿ.ಯಿಂದ ಯಾವುದೇ ದೋಷವಿರಲಿಲ್ಲ. ಬಿ.ಇ.ಓ. ಅವರು ರೂ. ೫,೦೦೦ ಪರಿಹಾರ ನೀಡಬೇಕೆಂದು ಹಾಗೂ ಅದನ್ನು ಅವರ ಸಂಬಳದಿಂದ ನೀಡಬೇಕೆಂದು ವೇದಿಕೆ ತೀರ್ಮಾನಿಸಿತು.

ಈ ರೀತಿ ಅನೇಕ ಪ್ರಕರಣಗಳು ದಾಖಲಾಗಿವೆ. ಸರ್ಕಾರದ ಅಧಿಕಾರಿಗಳು ಹೆಚ್ಚು ಜಾಗೃತರಾಗಿ ಕಾರ್ಯ ನಿರ್ವಹಿಸಲಿ ಎಂಬುದು ಈ ತೀರ್ಪುಗಳ ಹಿಂದಿನ ಉದ್ದೇಶ.

ವೈ. ಜಿ. ಮುರಳೀಧರ
ನಂ. ೨೫೯, ೫ನೇ 'ಬಿ' ರಸ್ತೆ, ಹಂಪಿನಗರ, ಬೆಂಗಳೂರು - ೫೬೦ ೧೦೪

**ಹೊಂದಿಸು**

ನಿನ್ನೊಂದಿಗೆ ನೀನೆ
ಹೊಂದಿಕೊಳ್ಳದ
ನೀನು
ಪರೀಕ್ಷೆಯಲಿ
ಮಾತ್ರ
ಹೊಂದಿಸಲು
ಏಕೆ
ಪ್ರಯತ್ನಿಸುವೆ ?



ಕೆಲವೇ ತಿಂಗಳುಗಳಲ್ಲಿ ವಿಶ್ವ ಫುಟ್‌ಬಾಲ್ ಕಪ್‌ಗಾಗಿ ಹಣಾಹಣಿ ಪಂದ್ಯಗಳು ಆರಂಭವಾಗಲಿವೆ. ಈ ಬಾರಿ ಅದು ನಡೆಯುವುದು ದಕ್ಷಿಣ ಆಫ್ರಿಕಾದಲ್ಲಿ. ಮೊಟ್ಟಮೊದಲ ಅವಕಾಶ ಇದು ಆಫ್ರಿಕಾ ಖಂಡಕ್ಕೆ, ಅಂತಹ ಪ್ರಚಂಡ ತಂಡಗಳ ನಡುವಣ ಸೆಣಸಾಟಗಳನ್ನು ಆಯೋಜಿಸಲು. ಈವರೆಗೆ ಅದು ಯೂರೋಪ್ ಮತ್ತು ಲ್ಯಾಟಿನ್ ಅಮೆರಿಕಾಗಳ ಏಕಸ್ವಾಮ್ಯದಲ್ಲಿತ್ತು, ಬಹುಮಟ್ಟಿಗೆ. ಆಗ್ನೇಯ ಏಷ್ಯದ ಎರಡು ಕೊರಿಯಾಗಳನ್ನು ಬಿಟ್ಟರೆ ಏಷ್ಯಕ್ಕೆ ಇದರಲ್ಲಿ ಪ್ರಾತಿನಿಧ್ಯ ಸೊನ್ನೆ. ಜಪಾನೇನೋ ಸ್ಥಾನ ಗಿಟ್ಟಿಸಿಕೊಳ್ಳುತ್ತದೆ. ಪ್ರಪಂಚದಲ್ಲಿ ಇರುವುದೇ ಒಂದು ಆಟ, ಅದು ಕ್ರಿಕೆಟ್, ಎಂದು ನಮ್ಮ ದೇಶದ ಜನರನ್ನು ನಂಬಿಸಲು ಮಾಧ್ಯಮಗಳು ಪ್ರಯಾಸಪಟ್ಟು ಅಸಹ್ಯವೆನಿಸುವಷ್ಟು ಯಶಸ್ವಿಯಾಗಿವೆ. ವೆಸ್ಟ್ ಇಂಡೀಸ್‌ನಲ್ಲಿ ಪಂದ್ಯ ನಡೆದರೆ ರಾತ್ರಿ ಎರಡು ಗಂಟೆಯಲ್ಲಿ ನಮ್ಮೂರಿನ ರೇಡಿಯೋ ಅರಚಿಕೊಳ್ಳುತ್ತಿರುತ್ತದೆ, 'ವೀಕ್ಷಕ ವಿವರಣೆ' ನೀಡುವುದರಲ್ಲಿ! ೧೯೬೦ರ ದಶಕದಲ್ಲಿ ಭಾರತವು ಏಷ್ಯನ್ ಗೇಮ್ಸ್‌ನಲ್ಲಿ ಉನ್ನತ ಸ್ಥಾನದವರೆಗೆ ತಲುಪಿದ್ದುದು ಫುಟ್‌ಬಾಲ್‌ನಲ್ಲಿ, ಜಕಾರ್ತಾದಲ್ಲಿ ಕ್ರೀಡೆಗಳು ನಡೆದಿದ್ದ ಸಂದರ್ಭದಲ್ಲಿ. ಆಗ ಪಿ. ಕೆ. ಬ್ಯಾನರ್ಜಿಯಂತಹ ಆಟಗಾರರಿದ್ದರು. ಹಾಕಿಯಲ್ಲಿ ಯಾವಾಗಲೂ ಉನ್ನತ ಸ್ಥಾನ ಪಡೆಯುತ್ತಿದ್ದ ಕಾಲ ಮುಗಿದ ನಂತರ ಕಾಲ್ಚೆಂಡಿನ ಆಟದಲ್ಲಾದರೂ ನಾವು ಪ್ರಗತಿ ಹೊಂದಬಹುದಿತ್ತು. ಆದರೆ ಅದು "ಪ್ರತಿಷ್ಠಿತ ಕುಟುಂಬಗಳ" ಆಟವೆಂದು ಕರೆಸಿಕೊಳ್ಳಲಿಲ್ಲ, ಸರ್ಕಾರವಾಗಲಿ-ಖಾಸಗಿಯವರಾಗಲಿ ಅದಕ್ಕೆ ಉತ್ತೇಜನ ನೀಡಲಿಲ್ಲ. ನಮ್ಮ ದೇಶದಲ್ಲಿ ಬೆರಳೆಣಿಕೆಯಷ್ಟು ಉತ್ತಮ ಕಾಲ್ಚೆಂಡಿನ ಕ್ರೀಡಾಂಗಣಗಳಿವೆ, ಸುಮಾರು ೨೦ ಉನ್ನತ ಹಂತದ ಕ್ಲಬ್ಬುಗಳಿವೆ, ಅಷ್ಟೆ. ಬಹುತೇಕ ಕ್ಲಬ್ಬುಗಳು ಆಟಗಾರರಲ್ಲದವರಿಂದ ತುಂಬಿದ್ದು ಅವು ಅವರಿಗೆ ಮೋಜಿನ ಕೂಟಗಳು, ಅಲಂಕಾರದ ಸ್ಥಾನಗಳು. ಇತ್ತೀಚೆಗಷ್ಟೆ ಬೈಚುಂಗ್ ಬೂಟಿಯ ಅಂಥವನನ್ನು ಅವನ ಕೊಲ್ಕತಾ ಕ್ಲಬ್ಬು ಅಮಾನತ್ತಿನಲ್ಲಿಟ್ಟಿತ್ತು! ಕೆಸರಿನ ಮಡುವುಗಳಲ್ಲಿ ಕಾಲ್ಚೆಂಡು ಆಡುವ ಮಕ್ಕಳು-ಯುವಕರು ಬೇಕಾದಷ್ಟಿದ್ದಾರೆ. ಉತ್ತಮ ಸೌಲಭ್ಯವಿದ್ದರೆ ನಮ್ಮ ರಾಜ್ಯ ಎಷ್ಟೋ ವರದರಾಜರನ್ನು, ಎತಿರಾಜರನ್ನು ಕ್ರೀಡೆಗೆ ನೀಡಬಲ್ಲುದು. ಬರುವ ವರ್ಷಗಳಲ್ಲಿ ಒಮ್ಮೆಯಾದರೂ ವಿಶ್ವ ಫುಟ್‌ಬಾಲ್ ಕಪ್‌ಗಾಗಿ ಅಂತಿಮಘಟ್ಟದಲ್ಲಿ ಆಡುವ ಅವಕಾಶ ದೊರೆಯುವಂತಾಗಬೇಕಾಗಿದ್ದರೆ ನಮ್ಮ ಕ್ರೀಡಾಲೋಕವು ಬಹಳ ಶ್ರಮಿಸಬೇಕು, ಕ್ರೀಡೆಯನ್ನು ಪ್ರತಿಷ್ಠಿತ ವ್ಯಕ್ತಿಗಳಿಂದ ವಿಮೋಚನೆಗೊಳಿಸಬೇಕು.

# ಫುಟ್‌ಬಾಲ್ ಆಟಗಾರ ಡಿ. ಎತಿರಾಜು

ಪರಂಜ್ಯೋತಿ

ನಮ್ಮ ಮಾಧ್ಯಮಗಳು ಕ್ರಿಕೆಟ್ ಆಟಕ್ಕೆ, ಆ ಕುರಿತ ...ದ್ದಿಗಳಿಗೆ ಪ್ರಾಮುಖ್ಯ ನೀಡುವಂತೆ ಬೇರೆ ಕ್ರೀಡೆಗಳಿಗೆ ...ಷ್ಟು ಪ್ರಾಮುಖ್ಯ ನೀಡುವುದಿಲ್ಲ. ಇತ್ತೀಚೆಗೆ ಟಿ.ವಿ.ಯ ...ಾವದಿಂದ ಕ್ರಿಕೆಟ್ ಮಾತ್ರವೇ ನಮ್ಮ ಏಕೈಕ ರಾಷ್ಟ್ರೀಯ ...ತೆ ಎಂದು ಭಾವಿಸುವಂತಾಗಿದೆ. ಕ್ರಿಕೆಟ್ ಸಂಬಂಧದ ...ದ್ದಿಗಳು, ಆಟದ ವರ್ಣನೆಗಳು, ಮುರಿದ ದಾಖಲೆಗಳು, ...ತೆಗೆ ಸಣ್ಣಪುಟ್ಟ ಹಗರಣಗಳು ರಾಷ್ಟ್ರೀಯ ಮಹತ್ವದ ...ದ್ದಿಯಾಗಿ ಚರ್ಚೆಯ ವಸ್ತುವಾಗುತ್ತವೆ. ನಮ್ಮ ಕ್ರಿಕೆಟ್ ...ಗಾರರು ತಮ್ಮದೇ ಶೈಲಿಯ ಆಟದಿಂದ ದಿನಬೆಳಗಾಗು ...ರೊಳಗೆ ಅಂತರರಾಷ್ಟ್ರೀಯ ಖ್ಯಾತಿ ಗಳಿಸುತ್ತಾರೆ. ...ತೆಗೆ ವಾಣಿಜ್ಯ ಸರಕುಗಳ ಪ್ರೋತ್ಸಾಹಕರಾಗಿ, ...ಪದರ್ಶಿಗಳಾಗಿ ಮೆರೆದು ಅವರ ಹಣದ ...ಟೆಗಳೂ ಉಬ್ಬುತ್ತವೆ!

ನಮ್ಮ ಮಾಧ್ಯಮಗಳ ಕಣ್ಣಿಗೆ ಹಾಕಿ, ಫುಟ್‌ಬಾಲ್, ...ಲಿಬಾಲ್, ಕಬಡ್ಡಿ, ಕುಸ್ತಿ, ಓಟ, ಈಜು – ಮುಂತಾದ ಕ್ರೀಡೆಗಳು ಹಾಗೂ ಆಟಗಾರರು ಸ್ವಲ್ಪ ಮಂಜು ಮಂಜಾಗಿ ಕಾಣಿಸುತ್ತಾರೆ! ಆದರೂ ಇಂಥ ಹಲವು ಕ್ರೀಡೆಗಳಲ್ಲಿ ಆಸಕ್ತರಾಗಿರುವ, ಅವನ್ನು ಪ್ರೋತ್ಸಾಹಿಸುವ ಸಾಕಷ್ಟು ಪ್ರೇಕ್ಷಕರು ಅಭಿಮಾನಿಗಳಿದ್ದಾರೆ ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಫುಟ್‌ಬಾಲ್ ಆಟಗಾರನಾಗಿ, ಹಲವು ಪ್ರತಿಷ್ಠಿತ ಟೀಮುಗಳ ಕೋಚ್ ಹಾಗೂ ಮ್ಯಾನೇಜರ್ ಆಗಿ ಕಾರ್ಯ ನಿರ್ವಹಿಸುತ್ತ ಫುಟ್‌ಬಾಲ್ ಆಟಕ್ಕೆ ತಮ್ಮದೇ ರೀತಿಯಲ್ಲಿ ಮಹತ್ವದ ಕೊಡುಗೆ ನೀಡಿರುವ, ಆದರೂ ಎಲೆಮರೆಯ ಕಾಯಿಯಂತಿರುವ, ವ್ಯಕ್ತಿ ನಮ್ಮ ಮಧ್ಯೆ ಇದ್ದಾರೆ. ಇವರು ಡಿ. ಎತಿರಾಜ್.

ಎತಿರಾಜು ೧೯೩೩ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಅವರ ತಂದೆ ದೊರೆರಾಜ್ ಮಿಲಿಟರಿ ಸೇವೆಯಲ್ಲಿದ್ದರು. ಹೀಗಾಗಿ ಎತಿರಾಜರ ಬಾಲ್ಯ ಮತ್ತು ಶಿಕ್ಷಣ ಮಿಲಿಟರಿ ಪರಿಸರದಲ್ಲಿಯೇ ಕಳೆಯಿತು. ಶಿಕ್ಷಣದಲ್ಲಿ ಮಿಲಿಟರಿ ಶಿಸ್ತು, ಜೊತೆಗೆ ಬೇರೆ ಬೇರೆ ಆಟಗಳಿಗೆ ಪ್ರೋತ್ಸಾಹವಿದ್ದ ಪರಿಸರ. ಬಾಲಕ ಎತಿರಾಜ್‌ಗೆ ಚಿಕ್ಕಂದಿನಿಂದಲೇ ಫುಟ್‌ಬಾಲ್ ನಂಟು. ಜೊತೆಗೆ ಬಾಕ್ಸಿಂಗ್, ಹಾಕಿ



ಮತ್ತು ಬಾಲ್‌ಬ್ಯಾಡ್ ಮಿಂಟನ್ನಲ್ಲಿಯೂ ಆಸಕ್ತಿ ಬೆಳೆಯಿತು.

ಹದಿನೈದನೇ ವಯಸ್ಸಿನಲ್ಲಿ ಹೈಸ್ಕೂಲು ಶಿಕ್ಷಣ ಮುಗಿಸಿದ ಎತಿರಾಜು ಮಿಲಿಟರಿ ಸೇವೆಗೆ (ಬಾಯ್ಸ್ ಕಂಪೆನಿ) ಸೇರಿದರು. ಎರಡು ವರ್ಷಗಳ ತರಬೇತಿ ಅವಧಿಯಲ್ಲಿ ಆಟಗಳಲ್ಲಿದ್ದ ಇವರ ಆಸಕ್ತಿ ಅಧಿಕಾರಿಗಳ ಗಮನಕ್ಕೆ ಬಂದಿತು.

ಮಿಲಿಟರಿ ಶಾಲೆಯ ಬಹಳ ಮುಖ್ಯವಾದ ಅನುಕೂಲವೆಂದರೆ, ಬೇರೆ ಬೇರೆ ಕ್ರೀಡೆಗಳಲ್ಲಿ ಆಸಕ್ತಿ ಇರುವವರನ್ನು ಗುರುತಿಸಿ, ಅವರಿಗೆ ಮತ್ತಷ್ಟು ತರಬೇತಿ ನೀಡಿ ಆಟಗಾರರ ಸಾಮರ್ಥ್ಯವನ್ನು ಹೆಚ್ಚಿಸಲು ಸಹಾಯಕವಾಗುವ ಪರಿಪಾಠ. ಎತಿರಾಜುರಂಥವರ ಸಾಮರ್ಥ್ಯಗಳು ಬೆಳಕಿಗೆ ಬರಲು ಅದರಿಂದ ಸಾಧ್ಯವಾಯಿತು.

ಆ ಸಂದರ್ಭದಲ್ಲಿ ನಡೆದ ಒಂದು ಬಾಕ್ಸಿಂಗ್ ಪಂದ್ಯದಲ್ಲಿ ಎತಿರಾಜು ಭಾಗವಹಿಸಿದ್ದರು. ಪಂದ್ಯವನ್ನು ನೋಡಿದ ಅವರ ತಾಯಿ, ಮುಖಕ್ಕೆ ಚಚ್ಚುವ ಈ ಆಟವನ್ನು ಬಿಟ್ಟು ಬೇರೆ ಆಟವನ್ನು ಆಯ್ಕೆ ಮಾಡಿಕೊಳ್ಳುವಂತೆ ದುಂಬಾಲು ಬಿದ್ದುದುಂಟು!

ಶಾಲೆಯ ದಿನಗಳಿಂದಲೇ ಫುಟ್‌ಬಾಲ್ ಆಟದಲ್ಲಿ ಭರವಸೆದಾಯಕ ಆಟಗಾರನಾಗಿ ಬೆಳೆದಿದ್ದ ಎತಿರಾಜುವನ್ನು ಅಧಿಕಾರಿಗಳು ಸರ್ವೀಸಸ್ ಟೀಮಿನ ತರಬೇತು ವೃಂದಕ್ಕೆ ಆಯ್ಕೆ ಮಾಡಿದರು.

ತರಬೇತು ಅವಧಿಯಲ್ಲಿ, ಬೇರೆ ಬೇರೆ ಪ್ರಾಂತಗಳಿಂದ, ಬೇರೆ ಬೇರೆ ಸೈನ್ಯ ವಿಭಾಗಗಳಿಂದ ಬಂದಿದ್ದ ಆಟಗಾರರ ತಂಡದಲ್ಲಿಯೂ ಎತಿರಾಜು ತಮ್ಮ ಚುರುಕಿನ ಆಟದಿಂದ ಎಲ್ಲರ ಗಮನ ಸೆಳೆದರು.

ಪ್ರಾರಂಭದಲ್ಲಿ ಡಿ.ಡಬ್ಲ್ಯು. ಮೆಕ್ರಾತ್ ಎಂಬ ಅಧಿಕಾರಿ ಇವರಿಗೆ ಗೋಲ್ ಕೀಪಿಂಗ್ ತರಬೇತಿ ನೀಡಿದರು. ಗೋಲಿನ ಕಂಬಗಳ ನಡುವೆ ನಿಂತಿರುವ ಗೋಲಿ ಯಾವಾಗಲೂ ಒಂದನೇ ನಂಬರ್ ಆಟಗಾರನೆಂದು ಗುರುತಿಸಲ್ಪಡುತ್ತಾನಷ್ಟೆ! ಆ ಸಂದರ್ಭದಲ್ಲಿ ಇವರು ಸರ್ವೀಸಸ್ ಟೀಮಿನಿಂದ ಡಿಸಿಎಮ್ ಟೂರ್ನಮೆಂಟ್‌ನಲ್ಲಿ, ಪೂರ್ವ ಬಂಗಾಳ ಟೀಮುಗಳ ಮಧ್ಯೆ ನಡೆದ ಪಂದ್ಯಗಳಲ್ಲಿ ಭಾಗವಹಿಸಿದರು.

ಮುಂದೆ, ತರಬೇತು ಅಧಿಕಾರಿ ಇವರನ್ನು ಸೆಂಟರ್ ಫಾರ್ವರ್ಡ್ ಆಟಗಾರನಾಗಿ ಬದಲಾಯಿಸಿದರು. ಅದು ಗೋಲ್ ಕೀಪರ್‌ಗಿಂತಲೂ ಹೆಚ್ಚು ದೈಹಿಕ ಶ್ರಮ ಬೇಡುವ ಸ್ಥಾನ. ಎದುರು ಟೀಮಿನ ಆಟಗಾರ ಬಾರಿಸಿದ ಚೆಂಡನ್ನು ತಡೆದು, ಅಡ್ಡಬರುವವರಿಂದ ತಪ್ಪಿಸಿಕೊಂಡು, ಸಾಧ್ಯವಾದರೆ ತಾನೇ ಸಾಕಷ್ಟು ದೂರ ಮುಂದೊಯ್ದು ಗೋಲು ಬಾರಿಸುವ, ಹಾಗಿಲ್ಲದಿದ್ದರೆ ತನ್ನ ಕಡೆಯ ಆಟಗಾರರು ಇರುವ ಸ್ಥಳವನ್ನು ಗುರುತಿಸಿ ಅವರ ಕಡೆ ಚೆಂಡನ್ನು ದಾಟಿಸಿ ಗೋಲು ಬಾರಿಸಲು ಸಹಾಯಕವಾಗುವ ಸ್ಥಾನ. ಹಿಂದಕ್ಕೂ-ಮುಂದಕ್ಕೂ ಬಿರುಸಿನ ಓಟ, ಚೆಂಡು ಬರಬಹುದಾದ ಸ್ಥಳವನ್ನು ಅಂದಾಜು ಮಾಡುವ ಚಾಕಚಕ್ಯತೆ ಅಗತ್ಯವಾಗುತ್ತದೆ. ಎತಿರಾಜು ಸೆಂಟರ್ ಫಾರ್ವರ್ಡ್ ಆಟಗಾರನಾಗಿಯೂ ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸಿದರು.

ಮುಂದೆ ಎತಿರಾಜು ಸರ್ವೀಸಸ್ ಟೀಮಿನಿಂದ ಇಂಡಿಯನ್ ಫುಟ್‌ಬಾಲ್ ಟೀಮಿಗೆ ಆಯ್ಕೆಯಾದರು. ಸೈನ್ಯ ಸೇವೆಯಿಂದ ಆಯ್ಕೆಯಾದ ಮೂರು ಮಂದಿಯಲ್ಲಿ ಇವರೂ ಒಬ್ಬರು. ಈಗ ಸಿವಿಲಿಯನ್ ಆಟಗಾರರೊಂದಿಗೆ ತರಬೇತು ಪಡೆಯುವ,



*ಲೆಫ್ಟಿನೆಂಟ್ ಜನರಲ್ ಎನ್. ಪಿ. ಅಪುಲ್, ಎತಿರಾಜು ಸ್ಟೇಡಿಯಂ ಉದ್ಘಾಟಿಸಿದ ಸಂದರ್ಭದ*

ಅವರ ಕೌಶಲಗಳನ್ನು ಕಲಿತುಕೊಳ್ಳುವ ಅವಕಾಶ. ಮದರಾಸಿನ ಎಸ್. ಎಮ್ ರಹೀಮ್ ಎಂಬುವವರು ಈ ಟೀಮಿನ ತರಬೇತುದಾರರು.

ಇವರು ಎಂ.ಇ.ಜಿ. (ಮದರಾಸ್ ಎಂಜಿನಿಯರ್ಸ್ ಗ್ರೂಪ್), ಸದರ್ನ್ ಕಮ್ಯಾಂಡ್ ಮತ್ತು ಸರ್ವೀಸಸ್ ಟೀಮ್‌ಗಳಲ್ಲಿ, ನ್ಯಾಷನಲ್ ಫುಟ್‌ಬಾಲ್ ಟೂರ್ನಮೆಂಟ್‌ಗಳಿಗಾಗಿ ಮತ್ತು ಕರ್ನಾಟಕ ರಾಜ್ಯ ಫುಟ್‌ಬಾಲ್ ಟೀಮಿನ ಆಡಿದರು. ಕೇರಳದ ಕೊಲ್ಲಮ್‌ನಲ್ಲಿ ನಡೆದ ಫುಟ್‌ಬಾಲ್ ಪಂದ್ಯಗಳಲ್ಲಿ ಟೀಮ್ ಕ್ಯಾಪ್ಟನ್ ಆಗಿ ಕಾರ್ಯ ನಿರ್ವಹಿಸಿದರು.

೧೯೬೨ರಲ್ಲಿ ಇಂಡೋನೇಶಿಯಾದ ಜಕಾರ್ತಾದಲ್ಲಿ ನಾಲ್ಕನೇ ಏಶಿಯ ಕ್ರೀಡೆಗಳು ನಡೆದ ಸಂದರ್ಭದಲ್ಲಿ ಎತಿರಾಜು ಭಾರತೀಯ ಫುಟ್‌ಬಾಲ್ ಟೀಮಿ ಸದಸ್ಯರಲ್ಲೊಬ್ಬರು. ಆ ಟೀಮಿನಲ್ಲಿ ಸರ್ವೀಸಸ್‌ನಿಂದ ಹೋದ ಇಬ್ಬರು ಆಟಗಾ ಪೈಕಿ ಬೆಂಗಳೂರಿನವರು ಇವರೊಬ್ಬರೇ. ಲೀಗ್ ರೌಂಡಿನ ಆಟದಲ್ಲಿ ಕೊರಿಯಾ ವಿರುದ್ಧ ಆಡಿದ ಭಾರತದ ವೃಂದ ೨-೧ ಗೋಲಿನಿಂದ ಸೋತಿತು. ಆದರೆ ಫೈನಲ್ಸ್ ಅದೇ ೨-೧ ಗೋಲುಗಳಿಂದ ಕೊರಿಯಾವನ್ನು ಸೋಲಿಸಿ ಚಿನ್ನದ ಪದಕ ಗಳಿಸಿತು!

ಇಂಡಿಯನ್ ಫುಟ್‌ಬಾಲ್ ಟೀಂ ಚಿನ್ನದ ಪದಕಗಳೊಂದಿಗೆ ಕಲ್ಕತ್ತಾ ಬಂದಿಳಿದಾಗ ಟೀಮಿಗೆ ದೊರೆತ ಸ್ವಾಗತ ಅಷ್ಟೇನೂ ಉತ್ಸಾಹದಾಯ ವಾಗಿರದಿದ್ದರೂ ಬೆಂಗಳೂರಿಗೆ ಬಂದಾಗ ಅವರಿಗೆ ಸಂಭ್ರಮದ ಸ್ವಾಗತ ಸಿಕ್ಕಿತು!

ಸೈನ್ಯ ಸೇವೆಯಲ್ಲಿದ್ದು ಫುಟ್‌ಬಾಲ್ ಆಟಕ್ಕೇ ತಮ್ಮನ್ನು ಸಮರ್ಪಿಸಿಕೊಂಡ ಇವರು ಆಟದ ಸಂದರ್ಭದ ಅಪಘಾತಗಳಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಫುಟ್‌ಬಾ

ದಲ್ಲಿ ಇದು ಅನಿವಾರ್ಯ, ಸಹಜ ಎನ್ನುತ್ತಾರೆ ಅವರು.

ಸಿಂಗಾಪುರದಲ್ಲಿ ನಡೆದ ಒಂದು ಮೈತ್ರಿ ಪಂದ್ಯದಲ್ಲಿ ಇವರ ಮಂಡಿಗೆ ತೀವ್ರ ಟ್ಟಾಯಿತು. ಗುಣವಾದನಂತರ ಮತ್ತೆ ಆಟ. ಬೇರೆಬೇರೆ ಪಂದ್ಯಗಳಲ್ಲಿ, ರಾಸಿನಲ್ಲಿ ನಡೆದ ಸಂತೋಷ್ ಟ್ರೋಫಿ ಪಂದ್ಯಗಳಲ್ಲಿ ಆಡಿದರು. ಸುಮಾರು ವರ್ಷ ಇವರು ಬೆಂಗಳೂರಿನ ಬಿ.ಇ.ಎಲ್. ಟೀಮಿನಲ್ಲಿ ಸಕ್ರಿಯ ಗಾರರಾಗಿದ್ದರು.

ಮಂಡಿಯ ನೋವು ಮರುಕಳಿಸಿ ಪಂದ್ಯಗಳಲ್ಲಿ ಆಡಲು ತೊಡಕಾಯಿತು. ರೂ ಅವರು ಫುಟ್‌ಬಾಲ್ ಮೈದಾನದಿಂದ ಹೊರಗುಳಿದಿಲ್ಲ. ಆಟ ಆಡಲು ಧ್ಯವಾಗದ ನಂತರ, ಬಿ.ಇ.ಎಲ್. ಮತ್ತು ಬಿ.ಎಚ್.ಇ.ಎಲ್. ಸಂಸ್ಥೆಗಳು ಹೊಸ ಟ್‌ಬಾಲ್ ಟೀಮುಗಳನ್ನು ಸಂಘಟಿಸಲು ಇವರ ಸೇವೆಯನ್ನು ಬಳಸಿಕೊಂಡವು. ತೆಗೆ ಕರ್ನಾಟಕ ರಾಜ್ಯ ಫುಟ್‌ಬಾಲ್ ಅಸೋಸಿಯೇಷನ್ನಿನ ಆಜೀವ ಸದಸ್ಯರಾಗಿ, ಮ್‌ಗಳನ್ನು ಆಯ್ಕೆಮಾಡುವ ಸದಸ್ಯರಾಗಿ ಚಟುವಟಿಕೆ ನಡೆಸುವ ಅವಕಾಶ ರಿಗೆ ಒದಗಿಬಂದಿತು.

ಎಂಜಿನಿಯರಿಂಗ್ ರೆಜಿಮೆಂಟಿನಲ್ಲಿ ಸುಬೇದಾರ್ ಶ್ರೇಣಿಯಲ್ಲಿದ್ದ ಇವರು ಂಗ್ಲಾದೇಶ ವಿಮೋಚನೆಯ ಸಂದರ್ಭದಲ್ಲಿ ಸಿಲಿಗುರಿಯಲ್ಲಿದ್ದರು. ಗಳೂರಿನಿಂದ ಹೊರಗಿದ್ದುದು ಆ ಎರಡು ವರ್ಷಗಳು ಮಾತ್ರ. ಮುಂದೆ ಗಳೂರು ಮತ್ತು ಫುಟ್‌ಬಾಲ್ ಮೈದಾನ ಅವರ ಕಾರ್ಯಕ್ಷೇತ್ರವಾಯಿತು. ುಕಳಿಸಿದ ಮಂಡಿನೋವಿನ ಕಾರಣ ಅವರ ಸಕ್ರಿಯ ಆಟಕ್ಕೆ ತಡೆಬಿದ್ದಿತು. ಅವರು ಮಂ ನಿವೃತ್ತಿ ಪಡೆದರು.

ಆದರೆ ಫುಟ್‌ಬಾಲ್ ಮೈದಾನದ ಅವರ ಚಟುವಟಿಕೆಗಳು ಎಂದಿನಂತೆ ಂದುವರಿದವು. ಹೊಸ ಟೀಮುಗಳನ್ನು ಸಂಘಟಿಸುವುದರಲ್ಲಿ, ಯುವ ಗಾರರನ್ನು ಗುರುತಿಸಿ ಅವರಿಗೆ ಮತ್ತಷ್ಟು ತರಬೇತಿ ನೀಡುವುದರಲ್ಲಿ ನಿರತರಾದ ಈ ಜಿ ಸೈನಿಕನನ್ನು, ಇತರರು ಮರೆತರೂ ಮಿಲಿಟರಿ ಸಂಸ್ಥಾಪನೆ ಮರೆತಿರಲಿಲ್ಲ.

ಫುಟ್‌ಬಾಲ್ ಕ್ರೀಡೆಗೆ ಎತಿರಾಜು ನೀಡಿದ ಕೊಡುಗೆಯನ್ನು ಮಾನ್ಯ ಮಾಡಿ ಡು ಪ್ರದೇಶದಲ್ಲಿರುವ ಎಂ.ಇ.ಜಿ. ಸ್ಟೇಡಿಯಂಅನ್ನು 'ಎತಿರಾಜ್ ಸ್ಟೇಡಿಯಂ' ದು ಮರು ನಾಮಕರಣ ಮಾಡಿ ಗೌರವಿಸಲಾಯಿತು! ೨೦೦೩ರಲ್ಲಿ ಲೆಫ್ಟಿನೆಂಟ್ ರಲ್ ಎಸ್. ವಿ. ಅವುಲ್ ಸ್ಟೇಡಿಯಂಅನ್ನು ಉದ್ಘಾಟಿಸಿದರು. ಇವರ ರವಾರ್ಥ ಅಂದು ಫುಟ್‌ಬಾಲ್ ಪಂದ್ಯಗಳೂ ನಡೆದವು. ಎತಿರಾಜು ಅವರ ವನದಲ್ಲಿ ಅದು ಮರೆಯಲಾಗದ ಸಾರ್ಥಕ ದಿನ! ಸರ್ವೀಸಸ್ ಹೊರತುಪಡಿಸಿ



ಬಿರುಸಿನ ಒದೆತ



ಶ್ರೀ ಎತಿರಾಜು ಜೊತೆಗೆ ಕೈಕುಲುಕುತ್ತಿರುವವರು ಫೀಲ್ಡ್ ಮಾರ್ಷಲ್ ಮಾಣೆಕ್ ಷಾ.

ಬೇರೆ ಕ್ಲಬ್ಬುಗಳು ಅಥವಾ ಸಂಸ್ಥೆಗಳ ಟೀಮಿನಲ್ಲಿದ್ದು ಆಟ ಆಡಿದ್ದ ಪಕ್ಷದಲ್ಲಿ ಇಂಥಾ ಮನ್ನಣೆ ಸಾಧ್ಯವಾಗುತ್ತಿರಲಿಲ್ಲ– ಎನ್ನುತ್ತಾರೆ ಅವರು.

ಹೀಗೆ ಫುಟ್‌ಬಾಲ್ ಮೈದಾನಗಳಲ್ಲಿಯೇ ಇರುತ್ತಿದ್ದ ಎತಿರಾಜು ಅವರ ಮನೆಯನ್ನು ನಿಭಾಯಿಸಿ, ಮಕ್ಕಳನ್ನು ಸಾಕಿ, ಕುಟುಂಬದ ಭಾರ ಅವರ ಮೇಲೆ ಬೀಳದಂತೆ ಸಹಕರಿಸಿದ ಶ್ರೀಮತಿ ನಾಗಪುಷ್ಪಂ ಅವರ ಸಹಕಾರವನ್ನು ಮರೆಯುವಂತಿಲ್ಲ. ನಾಗಪುಷ್ಪಂ ಇದಕ್ಕೆ ತಮ್ಮ ಅತ್ತೆ ನೀಡಿದ ಸಹಕಾರವನ್ನು ಸ್ಮರಿಸಿಕೊಳ್ಳುತ್ತಾರೆ.

ಇತ್ತೀಚಿನ ವರ್ಷಗಳಲ್ಲಿ ಎಳೆಯರನ್ನು ಕ್ರಿಕೆಟ್ ಆಕರ್ಷಿಸುವ ರೀತಿಯಲ್ಲಿ ಫುಟ್‌ಬಾಲ್ ಆಕರ್ಷಿಸುತ್ತಿಲ್ಲ. ಫುಟ್‌ಬಾಲ್ ದೈಹಿಕ ಶ್ರಮವನ್ನು ಬೇಡುವ ಆಟ. ಒಮ್ಮೆ ಪ್ರಾರಂಭವಾದರೆ ನಿಗದಿತ ವೇಳೆಯಲ್ಲಿ ಮುಗಿಯುವಂಥದ್ದು. ಅಲ್ಲದೆ ಮೊದಲಿನಿಂದಲೂ ಫುಟ್‌ಬಾಲ್ ಸಾಮಾನ್ಯ ಜನವರ್ಗದ ಆಟವಾಗಿದೆ. ಮೇಲ್ವರ್ಗದವರು ಫುಟ್‌ಬಾಲ್ ಆಟದ ಬಗ್ಗೆ ಆಸಕ್ತಿ ತೋರಿಸಿದ್ದು ಬಹಳ ಅಪರೂಪ ಎನ್ನುತ್ತಾರೆ ಅವರು.

ಅವರ ಅಭಿಪ್ರಾಯದಂತೆ ದಕ್ಷಿಣದಲ್ಲಿ ಕರ್ನಾಟಕ, ತಮಿಳ್ನಾಡು, ಕೇರಳ ಮತ್ತು ಗೋವಾ ರಾಜ್ಯಗಳಲ್ಲಿ, ಪಶ್ಚಿಮ ಬಂಗಾಳ, ಅಸ್ಸಾಂ ಮತ್ತು ಈಶಾನ್ಯ ರಾಜ್ಯಗಳಲ್ಲಿ ಈ ಆಟದ ಬಗ್ಗೆ ಹೆಚ್ಚು ಆಸಕ್ತಿ ತೋರುವ ಜನರಿದ್ದಾರೆ. ಆದರೆ ಈಗ ಪರಿಸ್ಥಿತಿ ಬದಲಾಗುತ್ತಿದೆ.

ಯೂರೋಪ್ ದೇಶಗಳಂತೆ ಲೀಗ್ ಮ್ಯಾಚ್‌ಗಳಿಗೆ ಪ್ರೇಕ್ಷಕರನ್ನು ಆಕರ್ಷಿಸಲು ನಾವು ಏನು ಮಾಡಬಹುದು ಎಂಬ ಪ್ರಶ್ನೆಗೆ ಅವರ ಉತ್ತರ ಹೀಗಿದೆ: ನಮ್ಮಲ್ಲಿ ಪ್ರಾಯೋಜಕರ ಕೊರತೆ ಇದೆ. ಪ್ರಾಯೋಜಕರು ಪ್ರಾಯಶಃ ತಮಗೆ ಬರುವ ಲಾಭದ ಬಗ್ಗೆ ಗಮನವಿಟ್ಟಿರುತ್ತಾರೆ. ಕಡಿಮೆ ಲಾಭದ ಆಟಗಳು ಅವರಿಗೆ ಬೇಕಾಗುವುದಿಲ್ಲ.

ಎತಿರಾಜು ಅವರ ಮೂರು ಗಂಡು ಮಕ್ಕಳ ಪೈಕಿ ಇಬ್ಬರು ಫುಟ್‌ಬಾಲ್ ಆಟಗಾರರಿದ್ದಾರೆ. ಇ. ಪರಮೇಶ ಬಿ.ಎಸ್.ಎನ್.ಎಲ್. ಟೀಮಿನಲ್ಲಿ ಜ್ಯೂನಿಯರ್ ವಿಭಾಗದಲ್ಲಿ, ಮತ್ತೊಬ್ಬ ಮಗ ಇ. ನಾಗರಾಜ್ ಬಿ.ಇ.ಎಲ್. ಟೀಮಿನಲ್ಲಿ ಸ್ಟೇಟ್ ಜ್ಯೂನಿಯರ್ ವಿಭಾಗದಲ್ಲಿ ಆಡುತ್ತಾರೆ.

ಕಾಲೇಜು ಕಲಿಯುತ್ತಿರುವ ಎತಿರಾಜು ಅವರ ಮೊಮ್ಮಗ ಶ್ರೀನಿವಾಸನ್ ಸಹ ಫುಟ್‌ಬಾಲ್ ಆಟದಲ್ಲಿ ತಮ್ಮ ಕೌಶಲ ತೋರಿಸಲು ಸಜ್ಜಾಗುತ್ತಿದ್ದಾನೆ.



[illegible]

[illegible]

# ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು

## ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯಿಂದ ರಚಿತವಾದ ಕೃತಿಗಳು




ಪ್ರಸ್ತುತ ಭೂಗೋಳ ಸಂಗಾತಿ ಪುಸ್ತಕವನ್ನು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ [illegible] ವಿಶ್ವ, ಸೌರವ್ಯೂಹ ಹಾಗೂ ಮಾನವನ ವಾಸಸ್ಥಾನವಾದ ಪೃಥ್ವಿ [illegible] ಆಳವಾದ ಅಧ್ಯಯನ ಮಾಡಲು ವಿಶೇಷವಾಗಿ ರಚಿಸಲಾಗಿದೆ. ಶಿಲೆಗಳು ಮತ್ತು ಭೂಮೇಲ್ಮೈ ಸ್ವರೂಪಗಳನ್ನು ರೂಪಿಸಿ ಹಾಗೂ ಬದಲಾಯಿಸಿ ವೈವಿಧ್ಯಮಯವಾದ ಸ್ವರೂಪಗಳನ್ನು ಸೃಷ್ಟಿಸುವ ಶಕ್ತಿಗಳಿಂದ ಗೋಚರಿತ ಮತ್ತು ಆಕರ್ಷಣೀಯ ವಿವಿಧ ಮಜಲುಗಳನ್ನು ಈ ಪುಸ್ತಕವು ಪ್ರತಿಪಾದಿಸುತ್ತದೆ.

ಸಂಪುಟ 1 : ರೂ. 320/-




ಸಂಪುಟ 2 ; ರೂ. 250/-

... ಈ ಸಂಪುಟದಲ್ಲಿ ನಾವು ಜೀವಮಂಡಲವೆಂಬ ನಾಲ್ಕನೆಯ ಮಂಡಲದ ಬಗ್ಗೆ ಪರಿಚಯ ಮಾಡಲು ಪ್ರಯತ್ನಿಸಿದ್ದೇವೆ.. ಇಲ್ಲಿ ಜೀವಮಂಡಲದ ಪ್ರಾಮುಖ್ಯತೆ ಹಾಗೂ ಪರಿಸರದ ಮೇಲೆ ಮಾನವನ ಪ್ರಭಾವದಿಂದುಂಟಾದ ಪರಿಸರದ ನಾಶ ಮತ್ತು ಪರಿಸರ ಮಾಲಿನ್ಯ ಕುರಿತು ಸವಿಸ್ತಾರವಾಗಿ ಬರೆಯಲಾಗಿದೆ

... 'ಭೂಗೋಳ ಸಂಗಾತಿ ಸಂಪುಟ 3 'ಪೃಥ್ವಿಯ ಮೇಲೆ ದೊರೆಯುವ ವಿವಿಧ ಬಗೆಯ ಸಂಪನ್ಮೂಲಗಳು, ವಿವಿಧ ಪ್ರದೇಶಗಳಲ್ಲಿ ಮಾನವ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳು ಹಾಗೂ ಅವುಗಳ ಪರಿಣಾಮ ಸ್ವರೂಪವಾಗಿ ಮಾನವನ ವಿವಿಧ ಉದ್ಯೋಗಗಳ, ಉಂಟಾದ ಸಂಪನ್ಮೂಲಗಳ ಅಭಿವೃದ್ಧಿಗಳನ್ನು ವಿವರಿಸುತ್ತದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸೃಜನಾತ್ಮಕ ಶಕ್ತಿಯನ್ನು ಹೆಚ್ಚಿಸಲು ಹಾಗೂ ಭೂಗೋಳ ಶಾಸ್ತ್ರದ ಅಧ್ಯಯನವನ್ನು ಚಟುವಟಿಕೆ ಆಧಾರಿತವನ್ನಾಗಿ ಮಾಡಲು ಸೂಕ್ತ ಚಟುವಟಿಕೆಗಳನ್ನು ಸೂಚಿಸಲಾಗಿದೆ.



ಸಂಪುಟ 3 ; ರೂ. 425/

...ಮಾನವನ ಚಟುವಟಿಕೆಗಳ ಮೇಲೆ ನೈಸರ್ಗಿಕ ಪರಿಸರವು ಪ್ರಭಾವ ಬೀರುತ್ತದೆ ಹಾಗೂ ಮಾನವನು ನೈಸರ್ಗಿಕ ಪರಿಸರದೊಳಗೆ ತನ್ನ ಲಾಭಕ್ಕಾಗಿ ಮಧ್ಯೆ ಪ್ರವೇಶಿಸುತ್ತಾನೆ ಎಂಬುದನ್ನು ಈ ಸಂಪುಟವು ವಿವರಿಸುತ್ತದೆ.



ಬೆಲೆ : ರೂ. 995/-

... ಈ ಪುಸ್ತಕದ ವಿಷಯವು ಪ್ರೌಢಶಾಲಾ ಹಂತದ ಪಠ್ಯವಸ್ತುವನ್ನು ಒಳಗೊಂಡಿದೆ. ಭೂಮಿಯ ಉಗಮದಿಂದ, ಜೀವಿಗಳ ವಿಕಾಸದಿಂದ ಹಿಡಿದು ಆಧುನಿಕ ಯುಗದ ಘಟನೆಗಳನ್ನು ಒಳಗೊಂಡಿದೆ... ಚಿತ್ರ ನೋಡಿ ನಿರೂಪಣೆ ಓದುತ್ತ ಹೋದರೆ ಗತಕಾಲದ ವಾಸ್ತವ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ... ಚರಿತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಸಾಧನೆಗಳ ದರ್ಶನ, ಜನತೆಯ ಜೀವನ ರೂಪುಗೊಂಡ ವಿಧಾನದ ಪರಿಚಯ, ಮಾನವ ಜನಾಂಗದ ಅಧ್ಯಯನ, ಕಾಲದೊಂದಿಗೆ ಮಾನವನ ಪಯಣ ಎಂಬ ಮಹತ್ವದ ಅಂಶಗಳನ್ನು ಮಕ್ಕಳಿಗೆ ತಿಳಿಯಹೇಳಿ, ಚರಿತ್ರೆಯ ಬೋಧನೆಗೆ ಹೊಸ ಆಯಾಮಗಳನ್ನೂ ಸೂಚಿಸುವುದು. ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವುದು ಹಾಗೂ ಚರಿತ್ರೆಯ ಅಭ್ಯಾಸವನ್ನು ಸುಸಂಗತಗೊಳಿಸುವುದೇ ಈ ಪುಸ್ತಕ ರಚನೆಯ ಮೂಲ ಆಶಯವಾಗಿದೆ

ಪ್ರಕಾಶಕರು

**ಶ್ರೀ ಗಾಯತ್ರಿ ಎಂಟರ್‌ಪ್ರೈಸಸ್**

483, ಎಂ.ಜಿ. ರಸ್ತೆ, ಪೋರ್ಟ್ ಮೊಹಲ್ಲಾ, ಮೈಸೂರು-4.

ಫೋನ್. : 2448023, 244343

ಮೊಬೈಲ್ : 9448074435

---

MANOJ KANKARIA
Director

**With
Best Wishes
From**

M/s Magnum
Threads
Pvt. Ltd.

No. 79/B, 8th Cross, Magadi Road
Shankarappa Garden, Bangalore - 560 023

# ಮಿಜೋರಾಂನಲ್ಲಿ



ಮಿಜೋ ಛಾವಣಿ ಆಕಾಶದ ಕೆಳಗೆ ರಾತ್ರಿ ಕಳೆದು
ಮತ್ತೊಂದು ದಿನ ಬಿದ್ದುಹೋಯಿತು.

ಸಾಯಂಕಾಲ ಐದಕ್ಕೆ ಸೂರ್ಯಕಿರಣಗಳು ಸಾಯುವಾಗ
ದಿನದ ಬಸಿರು ಮಿಲನಗೊಳ್ಳುತ್ತದೆ ರಾತ್ರಿಯೊಂದಿಗೆ,
ಹೊಂಬಣ್ಣ ಮುಸುಕಿದ ಇಳಿಜಾರು ಕಣಿವೆಗಳ
ಬಾಹ್ಯರೇಖೆಗಳು ಮಂಜಿನಿಂದ ಆವೃತಗೊಳ್ಳುತ್ತವೆ.

ನಡೆಯುವ ದಾರಿಗಳು
ಗಲ್ಲಿ ಓಣಿ ಸಾಗಿ ಆಕಾಶದ ಬಾಗಿಲಲ್ಲಿ ಇಣಿಕಿ,
ಹೆದರಿಕೆಯಿಲ್ಲದೆ ನಿಶ್ಯಬ್ದ, ವಿದ್ಯುತ್ ದೀಪ-ಕಂಬಗಳ ಕೆಳಗೆ
ನೇಯ್ದುಕೊಳ್ಳುತ್ತದೆ: ಶೋಕದ ಗರ್ಭದಿಂದ
ಮೇಳದ ಹಾಡುಗಳು ಹುಟ್ಟಿ ಬರುತ್ತವೆ.

ಬದುಕಿದ್ದ ಮತ್ತೊಬ್ಬ ಸತ್ತ.

ಶೋಕಿಸುವ ಮನೆಯೊಳಗೆ
ನಗಾರಿ ಮೊಳಗಿ ದಿನ ಜಾರಿಕೊಳ್ಳುತ್ತದೆ ಕತ್ತಲಿಗೆ.
ಹೇಳಿದರು ಅವರು ಮುದುಕನಿಗೆ ಕ್ಯಾನ್ಸರ್ ಎಂದು;
ಪತ್ನಿ ಕಿರಿಚಿದಳು, ಇಬ್ಬರು ಹೆಣ್ಣು ಮಕ್ಕಳು ಅಳತೊಡಗಿದರು,
ಬಂದಿದ್ದವರು ಪ್ರಾರ್ಥನೆ ಮಾಡುತ್ತ ಧೈರ್ಯ ಹೇಳಿದರು.
ಅವನು ನಿದ್ದೆ ಮಾಡುತ್ತಾನೆ ಎಂದುಕೊಂಡರು ಮಕ್ಕಳು.

ನಿಜವಾದ ಸ್ಮರಣೆಯೆಂದರೆ
ಎರಡು ಹೂವು ಗೊಂಚಲು ಆತನ ನಿಂತ
ಹೃದಯದ ಮೇಲೆ ಕುಳಿತು ಅವನ ಸಾವನ್ನು ಸಾರುತ್ತಿದ್ದವು.
ಒಬ್ಬ ಮಗಳು ಅಳುತ್ತಲೆ ಇದ್ದಳು.

ಎಲ್ಲೊ ಕಾಂಕ್ರೀಟ್ ನಗರದ ಆಚೆ ಇರುವ
ಇಳಿಜಾರು ಕಣಿವೆಯಲ್ಲಿನ ಗುಡಿಸಿಲುಗಳ
ನಡುವಿನ ಜೂಮ್ ಕೃಷಿಯ ಹೊಲಗಳಿಂದ
ಹೊಗೆ ಏಳುತ್ತಿತ್ತು ಸುರಳಿಯಾಕಾರದಲ್ಲಿ
ಮೋಡಗಳನ್ನು ಮದುವೆಯಾಗಲು.

ಬಿದುರು ಮೆಳೆಗಳು ಉಜ್ಜಿಕೊಳ್ಳುತ್ತಿವೆ,
ಒಂದರ ಮೇಲೆ ಒಂದು ಬಿದ್ದು; ಒಯ್ಯಾರವಾಗಿ
ನಡೆಯುವ ವೇಗದ ಹೆಜ್ಜೆಗಳ ಹುಡುಗಿಯರ
ದೇಹಗಳಲ್ಲಿ ಏರು ತಗ್ಗುಗಳು ಎದ್ದು ಕಾಣುತ್ತಿವೆ
ಕುಸಿರಿ ಮಾಡಿದ ಬಣ್ಣ ಬಣ್ಣದ ಗೆರೆಗಳಲ್ಲಿ.

ಜಾಗಟೆಗಳು ಪ್ರತಿಧ್ವನಿಸಿ ಎಳೆ ಹುಡುಗರು ಪ್ರೇಮ
ಗೀತೆಗಳನ್ನು ಹಾಡುತ್ತಾರೆ ಪದೇ ಪದೇ
ಸೂರ್ಯಾಸ್ತ ನೋಡುತ್ತ, ಹುಡುಗಿಯರು
ಕ್ರಿಸ್ತನ ಕುರಿತ ಹಾಡುಗಳನ್ನು ಹಾಡುತ್ತಾರೆ.

ನಗರದ ಮತ್ತೊಂದು ಮೂಲೆಯಲ್ಲಿ
ದಣಿದ ಮಹಿಳೆಯರು ಗಂಡಸರು ಮನೆಗಳಿಗೆ
ಹಿಂದಿರುಗುತ್ತಾರೆ, ಪ್ರಿಯ ಪ್ರಿಯತಮರು ಒಂದು
ಕಡೆ ಸೇರುತ್ತಿದ್ದಂತೆ ಚರ್ಚ್ ಗಂಟೆ ಮೊಳಗುತ್ತದೆ.

ಬದುಕಿರುವ ಜೀವನ ಮುಂದುವರಿಯುತ್ತದೆ;
ಶೋಕದ ಮನೆಯಲ್ಲಿ ಕೆಂಪು ಚಹ ಸರಬರಾಜಾಗುತ್ತದೆ,
ಪ್ರಾರ್ಥನೆ ಹಾಡುಗಳು ಮುಂದುವರಿಯುತ್ತವೆ
ಸತ್ತ ಆತ್ಮಕ್ಕಾಗಿ. ನಾನು ಪ್ರಾರ್ಥಿಸುತ್ತೇನೆ
ಬದುಕಿರುವ ಆತ್ಮಗಳಿಗೆ.

ಹೋಟಲ್ ಕೋಣೆಯೊಳಗೆ ರಾತ್ರಿ ಬೆಳೆಯುತ್ತದೆ
ನನ್ನ ಕೈಗಳಲ್ಲಿ; ನನ್ನ ಕವಿತೆಯ ಕನಸಿನಲ್ಲಿ.
ಮಿಲಿಯಗಟ್ಟಲೆ ಜನರು ಪರ್ವತ ಕಣಿವೆಗಳಲ್ಲಿ
ಸಾಗುತ್ತಿದ್ದಾರೆ ರಥಗಳಲ್ಲಿ ಕುಳಿತು ಅಂಕುಡೊಂಕು
ಸಾಗಿರುವ ಕ್ಷಿತಿಜದ ಕಡೆಗೆ.

ನೆನ್ನೆಯ ನಾಯಕರು ಕುದುರೆಗಳ ಮೇಲೆ
ಸಾಗುತ್ತ ಜಯಶಾಲಿಗಳ ಮೇಲೆ ಗುಂಡು ಹಾರಿಸುವುದನ್ನು
ನೋಡಿದೆ. ಸೌಮ್ಯ ನಿಶ್ಯಬ್ದ, ಗಂಡು ಹೆಣ್ಣಿನ ಕೈಗಳಲ್ಲಿ
ಕಷ್ಟದ ಬೆವರು ಸುರಿಯುತ್ತಿದೆ. ನಿದ್ದೆಯಿಂದ ಎದ್ದಾಗ
ಹೀರೋಗಳು ಆಗಲೆ ಮನೆಯಲ್ಲಿದ್ದರು.

ಮೂಲ ಇಂಗ್ಲಿಷ್ : **ಆಲ್ಮಂಡ್ ಡಿ.ಸ್ಯಿಯೆಂ**, ಕನ್ನಡಕ್ಕೆ : **ಡಾ|| ಎಂ. ವೆಂಕಟಸ್ವಾಮಿ**
ಸಂಖ್ಯೆ ೫೧೯, ೩ನೇ ಬ್ಲಾಕ್, ಸಿ.ಪಿ.ಡಬ್ಲ್ಯು.ಡಿ.ಕ್ವಾರ್ಟರ್ಸ್,
ಟೈಪ್ - ೫, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು - ೫೬೦೧೦೨

# ಜಾತ್ಯಂತರ

೨೦೦೯ರ ಸೆಪ್ಟೆಂಬರ್ ೧೧ರ 'ಪ್ರಜಾವಾಣಿ' ಪತ್ರಿಕೆಯಲ್ಲಿ ಸಲೀಂ ಶೇಖ್ ಅವರು ಸಂಗಮಾನಂದ ಸ್ವಾಮಿ ಆದ ವಿಷಯ ವರದಿಯಾಯಿತು. ಕನ್ನಡ ಎಂ.ಎ. ಓದಿ ಕನ್ನಡ ಸಾಹಿತ್ಯ ಮತ್ತು ಕರ್ನಾಟಕದ ಬಗ್ಗೆ ತಿಳಿದಿದ್ದ ಸಲೀಂ ಶೇಖ್ ಅವರಿಗೆ ಲಿಂಗದೀಕ್ಷೆ ನೀಡಿದವರು ಕೂಡಲಸಂಗಮದ ಪಂಚಮಸಾಲಿ ಗುರುಪೀಠದ ಬಸವ ಜಯ ಮೃತ್ಯುಂಜಯ ಸ್ವಾಮಿಗಳು. ಈ ಮತಾಂತರ ಸಲೀಂ ಶೇಖ್ ಅವರ ವೈಯಕ್ತಿಕ ಇಚ್ಛೆ ಎಂದು ಭಾವಿಸಲಾಗಿದೆ. ಸನ್ಯಾಸಿಗಳಿಗೆ ವೈಯಕ್ತಿಕವಾಗಿ ಕುಟುಂಬ ಎನ್ನುವುದು ಇರುವುದಿಲ್ಲವಾದ್ದರಿಂದ ಈ ಮತಾಂತರವು ನಂಟಿಗೆ ಸಂಬಂಧಿಸುವುದಿಲ್ಲ.

ಆದರೆ, ಯಾವುದೇ ಮತಾಂತರವು ಹುಟ್ಟಿನ ಜೊತೆಗಿನ ಸಂಬಂಧಗಳಿಗೆ ತೊಂದರೆ ಮಾಡಿದರೆ, ಆಗ ಮಾನಸಿಕ ಕುದಿತ ಇರುತ್ತದೆ. ಕೆಲವು ವರ್ಷಗಳ ಹಿಂದೆ ಕೇಳಿದ್ದ ಇಂತಹ ಮಾನಸಿಕ ಕುದಿತದ ವಿಷಯವು ಈ ಲೇಖನಕ್ಕೆ ದಾರಿ ಮಾಡಿದೆ.

ಧರ್ಮಾಂತರ ಮತ್ತು ಮತಾಂತರದ ಬಗ್ಗೆ ಈಚಿನ ದಿನಗಳಲ್ಲಿ ಹೆಚ್ಚು ಚರ್ಚೆಗಳಾಗುತ್ತಿವೆ. ಈ ಮಾತಿನಿಂದ ಮತಾಂತರ ಮತ್ತು ಆ ಬಗೆಗಿನ ಚರ್ಚೆ ಹಿಂದೆಯೂ ಇತ್ತು; ಇನ್ನು ಮುಂದೆಯೂ ಇರುತ್ತದೆ. ಇದನ್ನು ತಡೆಯುತ್ತೇವೆ ಎಂಬುದು ಹಠದ ಮಾತಾಗಬಹುದು. ಗಂಭೀರವಾಗಿ ಇತಿಹಾಸದ ಅಧ್ಯಯನ ಮಾಡಿರುವ ಯಾರಿಗೇ ಆದರೂ ಈ ಸತ್ಯ ತಿಳಿದಿರುತ್ತದೆ. ಪ್ರಪಂಚದ ಯಾವುದೇ ಭಾಗದಲ್ಲಾದರೂ ಮತಾಂತರ ಆಗಿರಬಹುದು. ಮತಾಂತರ ಆಗದಿದ್ದರೆ, ಪ್ರಪಂಚದ ಎಲ್ಲರೂ ಒಂದೇ ಮತ ಅಥವಾ ಧರ್ಮದವರಾಗಿದ್ದರೆ ಸಂಘರ್ಷಕ್ಕೆ ಎಡೆ ಇರುತ್ತಿರಲಿಲ್ಲ. ಒಂದುಮಾಡುತ್ತದೆ ಎಂದು ಬಲವಾದ ನಂಬಿಕೆ ಮೂಡಿಸುವ ಧರ್ಮ ಅಥವಾ ಮತವು ಒಡೆಯುವ ಪ್ರಕ್ರಿಯೆಯಲ್ಲೂ ಹಿಂದೆ ಬೀಳುವುದಿಲ್ಲ. ಒಡೆಯುವ ಕೆಲಸದಲ್ಲಿ ಧರ್ಮದಷ್ಟು ಹರಿತವಾದ ಆಯುಧ ಬೇರೊಂದಿಲ್ಲ. ಮನುಷ್ಯ ನಿರ್ಮಿತ ಎಲ್ಲ ಆಯುಧಗಳಂತೆ ಅದು ರಚನಾತ್ಮಕವೂ ಹೌದು; ವಿನಾಶಾತ್ಮಕವೂ ಹೌದು. ಇಂತಹ ಅಭಿಪ್ರಾಯಗಳನ್ನು ಕೆಲವರು ವಿಚಾರ ವಾದಿಗಳ ಅಭಿಪ್ರಾಯ ಎಂಬ ಹಣೆಪಟ್ಟಿ ನೀಡಿ ನಿರಾಕರಿಸಬಹುದು. ಕೆಲವು ಸಂಪ್ರದಾಯವಾದಿಗಳಿಗೂ ಈ ಅಭಿಪ್ರಾಯ ಇರುವುದು ನಿಜ. ಮತಾಂತರವನ್ನು ಒಪ್ಪಲೇಬೇಕಾಗಿಲ್ಲ. ಆದರೆ, ಅದು ಯಾವುದೇ ಬಲಾತ್ಕಾರವಿಲ್ಲದೆ ಸ್ವಇಚ್ಛೆಯಿಂದ ಆದಾಗ ಅದನ್ನು ವಿರೋಧಿಸುವುದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಂವಿಧಾನ ವಿರೋಧಿ ಆಗುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ ದತ್ತವಾಗಿರುವ ಮೂಲಭೂತ ಹಕ್ಕುಗಳನ್ನು ಮೊಟಕುಗೊಳಿಸುವುದು ಸಾಧುವಲ್ಲ. ಆದ್ದರಿಂದ ಧರ್ಮ ಅಥವಾ ಮತದ ಆಯ್ಕೆಯು ಆಯಾ ವ್ಯಕ್ತಿಯನ್ನು ಅವಲಂಬಿಸುತ್ತದೆ. ಇದರಿಂದ ಒಂದು ಕುಟುಂಬದಲ್ಲಿ ಯಾರಾದರೂ ಒಬ್ಬರೋ, ಇಬ್ಬರೋ ಮತಾಂತರ ಹೊಂದಿ ಉಳಿದವರು ತಮ್ಮ ಮೂಲ ಧರ್ಮದಲ್ಲೇ ಉಳಿಯಬಹುದು. ಅಂತಹ ಸಂದರ್ಭದಲ್ಲಿ ಎದುರಾಗುವ ಕೌಟುಂಬಿಕ ಸಮಸ್ಯೆಗಳು ಬಾಂಧವ್ಯವನ್ನು ಸುಸ್ಥಿತಿಯಲ್ಲಿರಲು ಬಿಡುವುದಿಲ್ಲ. ಎಲ್ಲವನ್ನೂ ಕಾಲವೇ ಸರಿಪಡಿಸುತ್ತದೆ ಎಂಬ ವಾಡಿಕೆಯ ಮಾತಿಗೆ ತಲೆಬಾಗಿ ಸುಮ್ಮನಿರ ಬಹುದಾದರೂ, ಬಾಂಧವ್ಯ ಸರಿ ಹೋಗುವವರೆಗಿನ ಮಾನಸಿಕ ಕುದಿತವನ್ನು ಅನುಭವಿಸಲೇಬೇಕಾಗುತ್ತದೆ. ಹುಟ್ಟಿನಿಂದ ಬಂದ ಸಂಬಂಧಗಳನ್ನು ನಿರಾಕರಿಸಿ ಬಾಳುತ್ತೇವೆ ಎನ್ನುವುದು ಸಮಾಧಾನದ ಮಾತಾಗ ಬಹುದು, ಅಷ್ಟೆ.

ಧರ್ಮ ಅಥವಾ ಮತಾಂತರವು ನಂಬಿದ ದೇವರನ್ನು, ಒಪ್ಪಿಕೊಂಡ ತತ್ವವನ್ನು ಹಾಗೂ ನಡೆದು ಬಂದ ಆಚಾರ-ವಿಚಾರಗಳನ್ನು ಬದಲಾಯಿಸಿಕೊಳ್ಳಲು ಅವಕಾಶ ನೀಡುತ್ತದೆ. ಮತಾಂತರಗೊಳ್ಳುವವರು ಮಾನಸಿಕವಾಗಿ ಈ ಬದಲಾವಣೆಗೆ ಸಿದ್ಧರಾಗಬೇಕಾಗುತ್ತದೆ. ಮತಾಂತರದ ನಂತರವೂ ಮೊದಲಿನ ದೇವರುಗಳನ್ನೇ ಪೂಜಿಸುವಂತಿಲ್ಲ; ಅದೇ ಆಚಾರ ವಿಚಾರಗಳನ್ನು ಅನುಸರಿಸುವಂತಿಲ್ಲ. ಒಟ್ಟು ಬದಲಾವಣೆ ಆದ ನಂತರವೇ ಮತಾಂತರ ಪೂರ್ಣ; ಇಲ್ಲವಾದರೆ ಎಡಬಿಡಂಗಿತನ ಕಾಡುತ್ತದೆ. ಮತಾಂತರಗೊಂಡವರು ಎಲ್ಲಿಯೂ ಸಲ್ಲದಂತಾಗುತ್ತಾರೆ. ಈ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆಗಳಾಗಿವೆ. ಮತಾಂತರ ನಿಲ್ಲುವ ಸೂಚನೆಗಳೂ ಇಲ್ಲ. ಮತಾಂತರವೇ ಅಲ್ಲದೆ ಜಾತ್ಯಂತರವೂ ಆಗುತ್ತಿರುವುದು ಗುಟ್ಟಿನ ಮಾತಲ್ಲ. ಹಿಂದೂ ಧರ್ಮದ ಅಡಿಯಲ್ಲೇ ಅನೇಕ ಜಾತಿಗಳಿವೆ; ಅವುಗಳನ್ನು ಪಟ್ಟಿ ಮಾಡುವುದೂ ಸುಲಭದ ಮಾತಲ್ಲ. ಪಟ್ಟಿ ಮುಗಿಯಿತು ಎನ್ನುವ ಹೊತ್ತಿಗೆ ಇನ್ನೊಂದು ಹೊಸ ಜಾತಿ ಬೆಳಕಿಗೆ ಬರುತ್ತದೆ.

ಶಾಖೆ, ಉಪಶಾಖೆಗಳು ಎಲ್ಲ ಜಾತಿ ಮತ್ತು ಉಪಜಾತಿಗಳಲ್ಲೂ ಇರುವುದು ತಿಳಿದಿದೆ. ನಾವು ಒಂದೇ ಎಂದು ಹೇಳುವ ಎದೆಗಾರಿಕೆ ಯಾವ ಜಾತಿಗೂ ಇಲ್ಲ. ಸಂಬಂಧ ಬೆಳೆಸುವಾಗ, ಊಟ, ಉಪಚಾರದ ಸಂದರ್ಭದಲ್ಲಿ ತಮ್ಮ ಭೇದಗಳನ್ನು ನೆನಪು ಮಾಡಿಕೊಂಡು ಸಂಭ್ರಮಪಡುತ್ತಾರೆ. ತಮ್ಮ ಪಂಗಡವೇ ಶ್ರೇಷ್ಠ ಎಂಬ ಹೆಮ್ಮೆ ಯಾರನ್ನೂ ಬಿಟ್ಟಿಲ್ಲ; ತಮ್ಮ ಶಾಖೆ ಮತ್ತು ಶಾಖೆಗಳ ಬಗ್ಗೆ ಅಧ್ಯಯನ ಮಾಡುವುದು ಇತಿಹಾಸದ ಅಧ್ಯಯನದ ಒಂದು ಭಾಗವೇ ಆಗುತ್ತದೆ; ಆ ಅಧ್ಯಯನವು ವಸ್ತುನಿಷ್ಠವಾಗ ಬೇಕೆ ಹೊರತು, ವ್ಯಕ್ತಿನಿಷ್ಠ ಮತ್ತು ಉತ್ಪ್ರೇಕ್ಷೆ ಆಗಬಾರದು; ದೊಡ್ಡತನದ ಮೆರವಣಿಗೆಗಾಗಿ ಯಾವುದೇ ಅಧ್ಯಯನ ನಡೆದಾಗ ಅದು ಹಾದಿ ತಪ್ಪಿಸುವ ಸಂದರ್ಭಗಳೇ ಹೆಚ್ಚು.

ಹಿಂದೂ ಧರ್ಮದಿಂದ ಕ್ರೈಸ್ತ, ಇಸ್ಲಾಂ ಅಥವಾ



ಶಾಖೆ, ಉಪಶಾಖೆಗಳು ಎಲ್ಲ ಜಾತಿ ಮತ್ತು ಉಪಜಾತಿಗಳಲ್ಲೂ ಇರುವುದು ತಿಳಿದಿದೆ. ನಾವು ಒಂದೇ ಎಂದು ಹೇಳುವ ಎದೆಗಾರಿಕೆ ಯಾವ ಜಾತಿಗೂ ಇಲ್ಲ. ಸಂಬಂಧ ಬೆಳೆಸುವಾಗ, ಊಟ, ಉಪಚಾರದ ಸಂದರ್ಭದಲ್ಲಿ ತಮ್ಮ ಭೇದಗಳನ್ನು ನೆನಪು ಮಾಡಿಕೊಂಡು ಸಂಭ್ರಮಪಡುತ್ತಾರೆ. ತಮ್ಮ ಪಂಗಡವೇ ಶ್ರೇಷ್ಠ ಎಂಬ ಹೆಮ್ಮೆ ಯಾರನ್ನೂ ಬಿಟ್ಟಿಲ್ಲ; ತಮ್ಮ ಶಾಖೆ ಮತ್ತು ಶಾಖೆಗಳ ಬಗ್ಗೆ ಅಧ್ಯಯನ ಮಾಡುವುದು ಇತಿಹಾಸದ ಅಧ್ಯಯನದ ಒಂದು ಭಾಗವೇ ಆಗುತ್ತದೆ; ಆ ಅಧ್ಯಯನವು ವಸ್ತುನಿಷ್ಠವಾಗಬೇಕೆ ಹೊರತು, ವ್ಯಕ್ತಿನಿಷ್ಠ ಮತ್ತು ಉತ್ಪ್ರೇಕ್ಷೆ ಆಗಬಾರದು; ದೊಡ್ಡತನದ ಮೆರವಣಿಗೆಗಾಗಿ ಯಾವುದೇ ಅಧ್ಯಯನ ನಡೆದಾಗ ಅದು ಹಾದಿ ತಪ್ಪಿಸುವ ಸಂದರ್ಭಗಳೇ ಹೆಚ್ಚು.

**ಡಾ|| ಎಚ್. ಎಸ್. ಗೋಪಾಲ ರಾವ್**

# ೨೦೦೨ರಲ್ಲಿ ಪ್ರಶಸ್ತಿ ಪಡೆದ ನವಕರ್ನಾಟಕ ಕೃತಿಗಳು




ಡಾ॥ ಹಾ.ಮಾ.ನಾ. ಪ್ರಶಸ್ತಿ
(ಕನ್ನಡ ಸಾಹಿತ್ಯ ಪರಿಷತ್ತು)



ಡಾ॥ ಎಚ್. ಎಲ್. ದತ್ತಿನಿಧಿ ಪ್ರಶಸ್ತಿ
(ಕನ್ನಡ ಸಾಹಿತ್ಯ ಪರಿಷತ್ತು)



ಅಕ್ಕ ಪ್ರಶಸ್ತಿ
(ಶ್ರೀಮತಿ ಗಂಗಮ್ಮ ಸೋಮಪ್ಪ ಬೊಮ್ಮಾಯಿ ಪ್ರತಿಷ್ಠಾನ)




ಪಿ. ಲಂಕೇಶ್ ಪ್ರಶಸ್ತಿ
(ಕರ್ನಾಟಕ ಸಂಘ, ಶಿವಮೊಗ್ಗ)



ಕುವೆಂಪು ವೈದ್ಯ ಸಾಹಿತ್ಯ ಪ್ರಶಸ್ತಿ
(ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು)




ಕುವೆಂಪು ವೈದ್ಯ ಸಾಹಿತ್ಯ ಪ್ರಶಸ್ತಿ
(ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು)




ಕುವೆಂಪು ವೈದ್ಯ ಸಾಹಿತ್ಯ ಪ್ರಶಸ್ತಿ
(ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು)



ಕುವೆಂಪು ವೈದ್ಯ ಸಾಹಿತ್ಯ ಪ್ರಶಸ್ತಿ
(ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು)




ಅಕಲಂಕ ಪುಸ್ತಕ ಪುರಸ್ಕಾರ
(ಅಕಲಂಕ ಪ್ರತಿಷ್ಠಾನ, ಉಡುಪಿ)



ಅಕಲಂಕ ಪುಸ್ತಕ ಪುರಸ್ಕಾರ
(ಅಕಲಂಕ ಪ್ರತಿಷ್ಠಾನ, ಉಡುಪಿ)




ಶ್ರೇಷ್ಠ ವೈದ್ಯ ಸಾಹಿತ್ಯ ಪ್ರಶಸ್ತಿ
(ಡಾ॥ ಪಿ. ಎಸ್. ಶಂಕರ ಪ್ರತಿಷ್ಠಾನ)



'ಪುಸ್ತಕ ಸೊಗಸು' ಬಹುಮಾನ
(ಕನ್ನಡ ಪುಸ್ತಕ ಪ್ರಾಧಿಕಾರ)

ೌದ್ಧ ಮತಕ್ಕೆ ಧರ್ಮಾಂತರ ಅಥವಾ ಮತಾಂತರ ಆಗಿರುವ ಂದರ್ಭಗಳೇ ಹೆಚ್ಚು. ಇದಕ್ಕೆ ಕಾರಣ ಗಳೇನು ಎಂದು ರಿಶೀಲಿಸುವ ಪ್ರಯತ್ನ ಈ ಲೇಖನದ್ದಲ್ಲ. ಚರ್ಚೆಗೆ ರಣವಾಗಿರುವ ಮತಾಂತರ/ಧರ್ಮಾಂತರವನ್ನು ಹೊರತು ಡಿಸಿ ಆಗುತ್ತಿರುವ ಜಾತ್ಯಂತರದ ಬಗ್ಗೆ ಕೆಲವು ವರ್ಷಗಳ ಂದೆ ಕೇಳಿದ್ದ ಒಂದು ಪ್ರಸಂಗವು ಈ ಲೇಖನಕ್ಕೆ ರಣವಾಗಿದೆ. ಜಾತ್ಯಂತರವೂ ಹೊಸದಲ್ಲ; ಇತಿಹಾಸದ ಭ್ಯಾಸಿಗಳಿಗೆ ಇದು ತಿಳಿದಿದೆ. ಕರ್ನಾಟಕದಲ್ಲೇ ಮತೀಯ ೂಪಾಂತರಗಳಿಗೆ ಹಲವು ಉದಾಹರಣೆಗಳಿವೆ. ಕಲ್ಯಾಣ ಲುಕ್ಯರ ಆಳ್ವಿಕೆಯ ಅವಧಿಯಲ್ಲಿ ಕರ್ನಾಟಕದ ಉತ್ತರ ಗದಲ್ಲಿ, ಬಸವೇಶ್ವರರ ನೇತೃತ್ವದಲ್ಲಿ ವೀರಶೈವ ಅಥವಾ ಂಗಾಯತ ಧರ್ಮ ಪ್ರಬಲವಾದರೆ, ದಕ್ಷಿಣದಲ್ಲಿ ಮಾನುಜಾಚಾರ್ಯರ ನೇತೃತ್ವದಲ್ಲಿ ಶ್ರೀವೈಷ್ಣವ ಧರ್ಮ ಬಲವಾಯಿತು. ಎರಡೂ ಧರ್ಮಗಳ ಉದ್ದೇಶವು ಜನರನ್ನು ಮಾನತೆಯತ್ತ ಕೊಂಡೊಯ್ಯುವುದೇ ಆಗಿತ್ತು. ಸವಣ್ಣನವರು ಕಾಯಕ ತತ್ವಕ್ಕೆ ಮನ್ನಣೆ ನೀಡಿದರೆ, ಮಾನುಜರು ಭಕ್ತಿ ತತ್ವಕ್ಕೆ ಆದ್ಯತೆ ನೀಡಿದರು. ಇಬ್ಬರೂ ಗ್ರಹಾರಾಧನೆಯನ್ನು ನಿರಾಕರಿಸಲಿಲ್ಲ. ಬಸವಣ್ಣನವರು ್ಥಾವರ ಲಿಂಗಕ್ಕಿಂತ ಜಂಗಮ ಲಿಂಗಕ್ಕೆ ಗೌರವ ತರುವ ನಿಟ್ಟಿನಲ್ಲಿ ಕಾರ್ಯತತ್ಪರರಾದರೆ, ಷ್ಣು ಎಲ್ಲರಿಗೂ ಸೇರಿದವನು ಎಂಬ ಭಾವದೊಂದಿಗೆ ಭಕ್ತಿಯ ಮೂಲಕ ಭಗವಂತನ ಕ್ಷಾತ್ಕಾರವಾಗುತ್ತದೆ ಎಂಬ ಪ್ರಪತ್ತಿ ಮಾರ್ಗವನ್ನು ರಾಮಾನುಜರು ತೋರಿಸಿದರು.




ಕ್ರಿ.ಶ. ೧೨ನೆಯ ಶತಮಾನದಲ್ಲಿ ಅನ್ಯಮತ ದೂಷಣೆಗೆ ಅವಕಾಶ ಕಲ್ಪಿಸಿತ್ತು; ಅದೇ ಸಮಯದಲ್ಲಿ ಶೈವದಿಂದ ವೀರಶೈವಕ್ಕೆ ತಿರುಗಿದ ಧರ್ಮವು ವೃತ್ತಿಗಳ ನಡುವೆ ಸಾಮರಸ್ಯ ವನ್ನೂ ತರಲು ಪ್ರಯತ್ನಿಸುತ್ತಿತ್ತು ಎಂಬ ಮಹತ್ವದ ಅಂಶವನ್ನೂ ಮರೆಯಲು ಸಾಧ್ಯವಿಲ್ಲ. ಅಂತಹ ಒಂದು ವಿಶಿಷ್ಟ ಪರಿವರ್ತನೆಗೆ ದಾರಿ ಮಾಡಿದವರು ಬಸವಣ್ಣನವರು. ನೆಲೆದೇಗುಲಗಳಾದ ದೇವಾಲಯಗಳನ್ನು ತಿರಸ್ಕರಿಸಿ, ಶರಣರನ್ನೇ ನಡೆದೇಗುಲಗಳು ಎಂದು ಪರಿಗಣಿಸಿ, ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ ಎಂಬ ಘೋಷ ವಾಕ್ಯವನ್ನು ನೀಡಿದ ಬಸವಣ್ಣನವರು ಧರ್ಮವು ಸಾಮಾನ್ಯ ಜನರಿಗೂ ದಕ್ಕುವಂತೆ ಮಾಡಿದರು; ಅರ್ಥವಾಗುವ ಪದಗಳಲ್ಲಿ ಜನರ ಬದುಕಿಗೊಂದು ಮಾರ್ಗ ತೋರಿದರು.

ಭಾರತದಲ್ಲಿ ಮಾತ್ರವಲ್ಲದೆ, ಬಹುತೇಕ ವಿಶ್ವದ ಎಲ್ಲೆಡೆಯೂ ಒಂದಲ್ಲ ಒಂದು ರೀತಿಯಲ್ಲಿ ಜಾತಿ ವ್ಯವಸ್ಥೆ ಇದೆ ಎಂದು ತಿಳಿದಿದೆ. ಸಮಾಜದಲ್ಲಿ ಜಾತಿ ಎನ್ನುವುದು ಹಾಸುಹೊಕ್ಕಾಗಿದೆ, ಬೇರು ಬಿಟ್ಟಿದೆ. ಇದನ್ನು ಸರಿ ಅಥವಾ ತಪ್ಪು ಎಂದು ನಿರ್ಧರಿಸುವುದು ಸುಲಭವಲ್ಲ. ವೃತ್ತಿಗೆ ತಕ್ಕಂತೆ ವರ್ಗೀಕರಣ ಆಗಿದ್ದರೆ ಅದನ್ನು ಒಪ್ಪುವುದು ಅನಿವಾರ್ಯ; ಒಂದು ಕಾಲಕ್ಕೆ ಪಾರಂಪರಿಕವಾಗಿ ಅನುಸರಿಸುತ್ತಿದ್ದ ವೃತ್ತಿಯು ಜಾತಿಯನ್ನು ನಿರ್ಧರಿಸುತ್ತದೆ; ಆದರೆ, ಆ ಪಾರಂಪರಿಕ ಅನುಸರಣೆ ಇಂದು ಇಲ್ಲ. ವರ್ಣಗಳನ್ನು ಆಧರಿಸಿದ ಜಾತಿ ವ್ಯವಸ್ಥೆ ಈಗ ಇಲ್ಲ.

ಆ ಸಂದರ್ಭದಲ್ಲೂ ಮತೀಯ ವಿರಸಗಳು ದಾಖಲಾಗುವಷ್ಟರ ಮಟ್ಟಿಗೆ ಅನಾವರಣ ೊಂಡಿವೆ. ಒಂದು ಹಂತಕ್ಕೆ ಬಸವಣ್ಣನವರು ದೇವಾಲಯಗಳನ್ನು ನಿರಾಕರಿಸಿದರೂ ೀವರನ್ನೇನೂ ಬೇಡ ಎನ್ನಲಿಲ್ಲ; ಶೋಷಣೆ ಮಾಡುವ ದೇವರು ಮತ್ತು ದೇವರ ತಿನಿಧಿಗಳೆಂದು ಭಾವಿಸಿಕೊಂಡಿದ್ದ ಅರ್ಚಕರು ಹಾಗೂ ಗುರುಗಳನ್ನು ಬಸವಣ್ಣ ರಾಕರಿಸಿದರು. ರಾಮಾನುಜರು ದೇವಾಲಯವನ್ನು ಬೇಡ ಎನ್ನಲಿಲ್ಲ; ದೇವರು ಎಲ್ಲರಿಗೂ ೀರಿದವನು ಎಂಬ ನಂಬಿಕೆ ಮತ್ತು ವಿಶ್ವಾಸವನ್ನು ಬಿತ್ತುವ ಪ್ರಯತ್ನ ಅವರದಾಗಿತ್ತು.

ಮೊದಲಿದ್ದ ಶೈವವೇ ಕೆಲವು ಬದಲಾವಣೆಗಳೊಂದಿಗೆ ವೀರಶೈವವಾದಂತೆ, ೊದಲಿದ್ದ ವೈಷ್ಣವವು ಕೆಲವು ಬದಲಾವಣೆಗಳೊಡನೆ ಶ್ರೀವೈಷ್ಣವವಾಯಿತು. ನಂಬಿದ ೀವರು ಒಬ್ಬನೇ ಆದರೂ, ಅರ್ಚನಾ ವಿಧಾನಗಳು ಮತ್ತು ಕೆಲವು ಆಚಾರ ವಿಚಾರಗಳು ದಲಾದವು. ಇದನ್ನು ಮತೀಯ ರೂಪಾಂತರ ಎನ್ನಬಹುದಷ್ಟೇ ಹೊರತು, ಹೊಸ ರ್ಮ ಎಂದು ಒಪ್ಪಲೇಬೇಕಾಗಿಲ್ಲ. ರೂಪಾಂತರಗೊಂಡ ವೀರಶೈವ ಮತವು ಜೈನ ರ್ಮವನ್ನು ಒಪ್ಪಲಿಲ್ಲ; ಅದನ್ನು ಬ್ರಹ್ಮಶಿವನ 'ಸಮಯಪರೀಕ್ಷೆ' ಮತ್ತು ನಯಸೇನನ ರ್ಮಾಮೃತ'ಗಳು ಮನದಟ್ಟುಮಾಡಿವೆ. ಅಬ್ಬಲೂರಿನ ಏಕಾಂತ ರಾಮಯ್ಯನ ಸನವೂ ಈ ವಿಷಯದ ಬಗ್ಗೆ ವಿವರವಾದ ಮಾಹಿತಿಯನ್ನೇ ನೀಡಿದೆ. ಕೆಲವು ಸನಗಳೂ ಮತೀಯ ವಿರಸಗಳ ಬಗ್ಗೆ ಮಾಹಿತಿ ನೀಡಿವೆ. ಕೋಗಳಿಯ ಒಂದು ಸನವು 'ತೊಲಗದೆ ಜೈನಮಾರ್ಗ್ಗದೊಳ್ ನಿಶ್ಚಳರಪ್ಪುದು ದೇವಪುತ್ರರಂ ಸಲೆ ನೆಗಳಿಲ್ಚಿ ೀಗಳಿಯ ಬರ್ದ್ದಿನ ವೃತ್ತಿಯ ಮಾನ್ಯಕಾಱುಂ ತೊಲಗಿಸುವ ಧರ್ಮಮಂ ಮಱೆದು ಪ್ಪುಕೆ ಕಾಳುಕುಱಿಯಿಕ್ಕಿದವಪ್ಪೊರ್ಲೆ ಯರವರ್ಗೆ ವೃತ್ತಿಯಣಮಾಗದು ವೃತ್ತಿಗೆ ಾರ್ಕೆ ಭವ್ಯರಂ॥ ಅಡಗಿನ ಬಸನಿಗರ್ಗ್ಗಂ ಕಳ್ಗುಡಿವವರ್ಗ್ಗಂ ವೃತ್ತಿಲೋಪಮೆಂಬ ಡಿಯಂ ಕಡೆಗಣ್ಣಣಿಸದೆ ಮೊದಲಿಂದಂ ಕಿಡಿಪುದವಂ ಸ್ಥಾನಗುರುಗಳುಂ ಪೂರ್ಬ್ಬಿಗರುಂ' ಂಬ ಮಾತುಗಳನ್ನು ದಾಖಲಿಸಿದೆ. ಸ್ಥಾನಗುರುಗಳು ಮತ್ತು ಹಿರಿಯರು ವಹಿಸಬೇಕಾದ ಚ್ಚರವನ್ನು ಶಾಸನ ಸೂಚಿಸಿದೆ. ಜೈನ ಮತದ ಮಹತ್ವವನ್ನು ಒತ್ತಿ ಹೇಳುವ ಸಮಯದಲ್ಲಿ ದ ಮತವನ್ನು ತೆಗಳಲು ಶಾಸನ ಕವಿ ಯಾವುದೇ ನಿರ್ಬಂಧಕ್ಕೆ ಒಳಗಾಗಿಲ್ಲ. 'ಆಳಾಪಂ ೀಡ ನಯ್ಯಾಯಿಕ ನಿಜಮತಮಂ ನಚ್ಚದಿರ್ಸ್ಸಾಂಖ್ಯ ಮಾಣ್ಪಾಚಾಳತ್ವಮಂ ಸಲ್ಲ ೀಮಾಂಸಕ ತೊಡರದೆಲೆ ಬೌದ್ಧ ಪೋಪೋಗು' ಎಂದು ಶಾಬನೂರಿನ ಶಾಸನವು ನ ಗುರುವನ್ನು ಹೊಗಳುವ ಸಂದರ್ಭದಲ್ಲಿ ಅನ್ಯ ಮತಗಳನ್ನು ತೆಗಳಿದೆ. ತಾಳಿಕೋಟೆಯ ಂದು ಶಾಸನವು ಅಸಂಖ್ಯಾತ ಗಣಗಳು ಅನ್ಯಮತ ದ್ವೇಷಕ್ಕೆಂದೇ ಜನ್ಮತಾಳಿದವರು ಎಂಬ ರ್ಥವನ್ನು ನೀಡುತ್ತದೆ. ಈ ಗಣಗಳು 'ಅನನ್ತ ದೇಶಾನ್ತರದಲಿದಿರಾದ ಪರಸಮಯಿಗಳಂ ತಲ್ವಡ್ಡಿ ಲೋಕಮನಾಕಂಪಗೊಳ್ಳಿ ಬಸದಿಗಳಂ ಹೊಸದು ಮುಕ್ತಿ ಶಿವಲಿಂಗ ಹಾಸನಮುಂ (ಕ)ಣ್ಗೊಳ್ಳಿ ಚಲಮಂ ಮೆಱೆದು' ತೋರಿದವರು. ಹೀಗೆ ಕರ್ನಾಟಕವು

ಹುಟ್ಟಿನಿಂದ ಜಾತಿಯನ್ನು ಗುರುತಿಸುವ ವ್ಯವಸ್ಥೆ ಇರುವವರೆಗೆ ಈ ಗೊಂದಲಕ್ಕೆ ವಿರಾಮವಿಲ್ಲ. ಈಗ ಹುಟ್ಟಿನಿಂದ ಬಂದ ಜಾತಿಯ ಪ್ರಕಾರ ಸಾಮಾನ್ಯವಾಗಿ ಯಾರೂ ಯಾವ ವೃತ್ತಿಯನ್ನೂ ಅವಲಂಬಿಸಿಲ್ಲ. ಹುಟ್ಟನ್ನು ಗುರುತಿಸಲು ಮಾತ್ರ ಜಾತಿ ವ್ಯವಸ್ಥೆ ಉಳಿದಿದೆ. ಹುಟ್ಟಿನಿಂದ ಬ್ರಾಹ್ಮಣರು ಎಂದು ಗುರುತಿಸಲ್ಪಡುವ ಯಾರು ಬ್ರಾಹ್ಮಣಿಕೆಯನ್ನು ಅವಲಂಬಿಸಿದ್ದಾರೆ ? ಒಂದು ಸರಳ ಶಾಂತಿ ಮಂತ್ರವೂ ತಿಳಿಯದ ಕೃಷಿಕ ಬ್ರಾಹ್ಮಣರಿದ್ದಾರೆ. ಅಂತೆಯೇ ಬ್ರಾಹ್ಮಣ ಆಚರಣೆಗಳನ್ನು ಬಲ್ಲ ಮಾತ್ರವಲ್ಲದೆ, ಆಚರಿಸುವ ಬ್ರಾಹ್ಮಣೇತರರಿದ್ದಾರೆ. ಈ ವಿಚಾರಗಳನ್ನು ಗಮನಿಸಿದಾಗ ಜಾತಿ ವ್ಯವಸ್ಥೆ ಈಗ ಅಸ್ತಿತ್ವದಲ್ಲಿಲ್ಲ ಎಂಬ ಮಾತನ್ನು ಒಪ್ಪಬೇಕಾಗುತ್ತದೆ. ಆದರೆ, ಹುಟ್ಟಿನಿಂದ ಅಂಟಿಕೊಂಡು ಬಂದ ಜಾತಿಯನ್ನು ಬಿಟ್ಟು ಯಾರೂ ಬದುಕಲೊಲ್ಲರು; ಅದು ಒಂದಲ್ಲ ಒಂದು ರೀತಿ ಪ್ರತಿಷ್ಠೆಯನ್ನೂ, ಸಾಮಾಜಿಕ ಅಥವಾ ಆರ್ಥಿಕ ಅನುಕೂಲತೆಗಳನ್ನೂ ಒದಗಿಸುತ್ತದೆ. ಈ ಜಾತಿಗಳನ್ನು ಧರ್ಮಗಳು ನಿಯಂತ್ರಿಸುತ್ತವೆ. ಭಾರತದಲ್ಲಿ ಹಿಂದೂ ಎಂಬ ಹೆಸರಿನ ವೈದಿಕ ಧರ್ಮವು ಜಾತಿಗಳನ್ನು ನಿಯಂತ್ರಿಸುತ್ತದೆ ಎಂಬ ಸಾಮಾನ್ಯ ತಿಳುವಳಿಕೆಯ ಹಿನ್ನೆಲೆಯಲ್ಲಿ ಜಾತಿ ಮತ್ತು ಧರ್ಮಗಳಿವೆ. ನಾಲ್ಕು ವರ್ಣಗಳ ಪೈಕಿ, ಜಾತಿ ವ್ಯವಸ್ಥೆಯನ್ನು ಹೆಚ್ಚಾಗಿ ಶೂದ್ರ ವರ್ಣದಲ್ಲೇ ಕಾಣುತ್ತೇವೆ. ಇನ್ನುಳಿದ ಮೂರು ವರ್ಣಗಳಲ್ಲಿ ಶಾಖೆ, ಉಪಶಾಖೆಗಳಿರ ಬಹುದಾದರೂ, ಜಾತಿ ಎನ್ನುವುದಿಲ್ಲ. ಸಾಮಾನ್ಯವಾಗಿ ಆ ಮೂರು ವರ್ಣಗಳ ಆಚಾರ, ವಿಚಾರಗಳಲ್ಲಿ ಸಾಮ್ಯತೆಗಳಿರುತ್ತವೆ. ವ್ಯತ್ಯಾಸಗಳಿದ್ದರೂ, ಅವು ಸಮಸ್ಯಾತ್ಮಕವಲ್ಲ.

ಮತಾಂತರಗೊಂಡವರು ಹೊಸದಾಗಿ ಸೇರಿದ ಮತದವರಾಗಿ 'ಮತೀಯರು' ಎಂಬ ಹೆಸರು ಪಡೆಯುತ್ತಿದ್ದರು. ಡಾ॥ ಕಲಬುರ್ಗಿ ಅವರ ಪ್ರಕಾರ ಇವರೇ 'ಒಕ್ಕಲು'ಗಳು. ಅವರ ಪ್ರಕಾರ ಪ್ರಾಚೀನ ಕಾಲದಲ್ಲಿ 'ಮತಾಂತರ ದೀಕ್ಷೆ' ಇಲ್ಲವೆ 'ಮಂತ್ರದೀಕ್ಷೆ'ಗಳ ಮೂಲಕ ವ್ಯಕ್ತಿ ತನ್ನನ್ನು ಉದಾತ್ತೀಕರಿಸಿಕೊಳ್ಳುತ್ತಿದ್ದರು. ಮತಾಂತರ ದೀಕ್ಷೆಯವರು ತಾವು ಹೊಸದಾಗಿ ಒಪ್ಪಿಕೊಂಡ ಧರ್ಮದಲ್ಲಿ ಸೇರಿಹೋಗಿ 'ಮತೀಯರು' ಆಗುತ್ತಿದ್ದರು. ಮಂತ್ರದೀಕ್ಷೆಯವರು ಹೀಗೆ ಸೇರಿಹೋಗದೆ ಹೊರಗೇ ನಿಂತು 'ಒಕ್ಕಲು' ಆಗುತ್ತಿದ್ದರು. '(ಪ್ರಾಚೀನ ಜೈನ ಸಮಾಜ: ಮತಾಂತರ ದೀಕ್ಷೆ-ಮಂತ್ರದೀಕ್ಷೆ, ಸಂಸ್ಕೃತಿ-ವಿಕೃತಿ, ಬೆಂಗಳೂರು, ೨೦೦೬, ಪು. ೧೪೮). ಪ್ರಾಚೀನ ಜೈನ ಸಮಾಜದಲ್ಲಿ ಮತಾಂತರ ದೀಕ್ಷೆ ಇದ್ದರೆ, ಶ್ರೀವೈಷ್ಣವ ಸಮಾಜದಲ್ಲಿ ಮಂತ್ರದೀಕ್ಷೆ ಇತ್ತು. ಮಂತ್ರದೀಕ್ಷೆ ಪಡೆದವರು ತಮ್ಮ ಮೊದಲಿನ ಜಾತಿಯಲ್ಲೇ ಉಳಿಯುತ್ತಾರೆ; ಅವರ ಆಚಾರ ವಿಚಾರಗಳು ಮಾತ್ರ ಬದಲಾಗುತ್ತವೆ. ಈಗಲೂ ಮತಾಂತರ ದೀಕ್ಷೆ ಆಗುತ್ತಿದೆ. ಮತಾಂತರಗೊಂಡವರು ತಮ್ಮ ಮೂಲ ಜಾತಿಯಿಂದ ಬೇರೆ ಆಗಿ ಹೊಸದಾಗಿ ಸೇರಿಕೊಂಡ ಮತದವ ರಾಗುತ್ತಿದ್ದಾರೆ. ಲಿಂಗಾಯತಕ್ಕೆ ಮತಾಂತರಗೊಂಡವರು ಲಿಂಗಾಯತರೇ ಆಗುತ್ತಿದ್ದಾರೆ.

ಬಸವಣ್ಣನವರ ನಿರೀಕ್ಷೆಯೂ ಇದೇ ಆಗಿದ್ದಂತೆ ಕಾಣುತ್ತದೆ. ಜಾತಿ ಯಾವುದೇ ಆದರೂ ಮತ ಒಂದೇ ಎನ್ನುವ ತತ್ವ ಬಸವಣ್ಣನವರದು. ತಮ್ಮ ತೆಕ್ಕೆಗೆ ಬಂದ ಎಲ್ಲ ಜಾತಿಗಳವರಿಗೆ ಜಂಗಮ ಲಿಂಗದ ಪರಿಕಲ್ಪನೆಯನ್ನು ತಿಳಿಸಿ, ಲಿಂಗದೀಕ್ಷೆ ನೀಡಿದ ಬಸವಣ್ಣನವರು ಆ ಮತದ ಮೂಲಕ ಸಮಾನತೆಯನ್ನು ತರಲು ಶ್ರಮಿಸಿದರು.

ಕರ್ನಾಟಕದಲ್ಲಿ ಒಕ್ಕಲಿಗರು ಎಂಬ ವರ್ಗವಿದೆ. ಇದನ್ನು ಜಾತಿ ಎಂದೇ ಪರಿಗಣಿಸಲಾಗಿದೆ. 'ಒಕ್ಕಲು' ಎಂಬ ಶಬ್ದಕ್ಕೆ ನಿವಾಸಿ, ಮನೆಯ ವಾಸಿ ('ಒಕ್ಕಲಿಲ್ಲದ ಮನೆಯು' ಗಮನಿಸಿ) ಮುಂತಾದ ಅರ್ಥಗಳಿದ್ದರೂ ಮೂಲ ಅರ್ಥ ಒಕ್ಕಲು ಎಂದರೆ ಕೃಷಿಕ ಎಂದೇ ಇದೆ. ('ಒಕ್ಕಲಿಗ ಒಕ್ಕದಿರೆ ಜಗವೆಲ್ಲ ಬಿಕ್ಕುವುದು' ಗಮನಿಸಿ). ಹಳ್ಳಿಯಲ್ಲಿ ಒಕ್ಕುವ ಅಥವಾ ಕೃಷಿ ಕಾರ್ಯ ಮಾಡುವವರಾಗಿ ಮನೆಗಳನ್ನು ಹೊಂದಿದ್ದವರು ಎಂಬ ಅರ್ಥದಲ್ಲಿ 'ಒಕ್ಕಲು' ಎಂಬ ಶಬ್ದ ಬಂದು ಮುಂದೆ ನಿವಾಸಿಗಳು ಎಂಬ ಅರ್ಥ ಕೂಡ ರೂಢಿಯಲ್ಲಿ ಬಂತು. ಹಳ್ಳಿಯ ಸಮುದಾಯದಲ್ಲಿ ಒಕ್ಕಲು ಎಂಬ ಅರ್ಥ 'ಊರ ಕೃಷಿಕರು' ಎಂಬ ಅರ್ಥದಲ್ಲೇ ಶಾಸನಗಳಲ್ಲಿ ಬಂದಿದೆ.' (ಡಾ॥ ಕಾಮತ್, ಒಕ್ಕಲುತನ ಮತ್ತು ಒಕ್ಕಲಿಗರು : ಇತಿಹಾಸ ಅನ್ವೇಷಣೆ, ಬೆಂಗಳೂರು, ೨೦೦೬, ಪು. ೯೬). ಈ ಒಕ್ಕಲುಗಳು ತಮಗೆ ಒಪ್ಪಿಗೆಯಾದ ಯಾವುದೇ ಮತವನ್ನೂ ಅನುಸರಿಸಬಹುದಿತ್ತು. ಈ ಬಗ್ಗೆ ಡಾ॥ ಪಾಂಡುಕುಮಾರ್ ಅವರ ಅಭಿಪ್ರಾಯ ಈ ಕೆಳಕಂಡಂತಿದೆ: 'ಬಸವಣ್ಣನವರು ಜಾತಿರಹಿತ ಸಮಾಜವನ್ನು ನಿರ್ಮಾಣ ಮಾಡಲು ಕ್ರಾಂತಿಯನ್ನೇ ಮಾಡಿದರು. ಮಾದಿಗರ (ಮಾದರ ಇರಬೇಕು) ಚನ್ನಯ್ಯ, ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ ಇನ್ನೂ ಮುಂತಾದ ನಿಮ್ನ ಇಲ್ಲವೇ ಹಿಂದುಳಿದ ವರ್ಗದ ಜನಗಳನ್ನು ಸೇರಿಸಿಕೊಂಡು ಹೊಸ ಸಮಾಜವನ್ನು ಕಟ್ಟಿದರು. ಇವರನ್ನು ಲಿಂಗಾಯತ ಅಥವಾ ವೀರಶೈವರೆಂದು ಕರೆಯಲಾಯಿತು'. ಪಾಂಡುಕುಮಾರ್ ಅವರ ಪ್ರಕಾರ ಉತ್ತರ ಕರ್ನಾಟಕದಲ್ಲಿ ಹಿಂದುಳಿದ ವರ್ಗದ ಜನರು ಮಾತ್ರವಲ್ಲದೆ ಒಕ್ಕಲಿಗ ಜನಾಂಗದಲ್ಲಿಯೂ ಹಿಂದುಳಿದಿದ್ದ ಮಾತ್ರವಲ್ಲದೆ, ಪ್ರತಿಷ್ಠಿತರು ಮತ್ತು ನಾಡಪ್ರಭುಗಳೂ ವೀರಶೈವ ಧರ್ಮ ಅಥವಾ ಜಾತಿಗೆ ಸೇರಿದರು. (ಡಾ॥ ಪಾಂಡುಕುಮಾರ್, ೧೦೦ ವರ್ಷಗಳ ಒಕ್ಕಲಿಗರ ಇತಿಹಾಸ, ಬೆಂಗಳೂರು, ೨೦೦೭, ಪು. ೨೭೫)

ಮಾಕೋನಹಳ್ಳಿ ದೊಡ್ಡಪ್ಪಗೌಡರ ಪ್ರಕಾರ ಒಕ್ಕಲಿಗ ಎಂಬುದು ಕರ್ನಾಟಕದ ದೊಡ್ಡ ಜಾತಿಗಳಲ್ಲಿ ಒಂದು. ಇದರಲ್ಲಿ ಅನೇಕ ಉಪಪಂಗಡಗಳಿವೆ. ಉಪಪಂಗಡಗಳಲ್ಲಿ ಪ್ರಮುಖವಾಗಿ ಗಂಗಡಿಕಾರ, ಮೊರಸು, ಸಾದ, ರ... ಕುಂಚಟಿಗ, ನೊಣಬ, ಹಳೆಪೈಕ, ಹಾಲು ಮತ್ತು ಹಳ್ಳಿಕಾರ ಸೇರಿವೆ. ದೊಡ್ಡಪ್ಪಗೌ... ಪ್ರಕಾರವೇ ಪ್ರಾದೇಶಿಕವಾಗಿ ಬಯಲು ಸೀಮೆಯ ಗೌಡರು, ಮಲೆನಾಡ ಗೌಡ... ಮತ್ತು ತುಳುನಾಡ ಗೌಡರು ಎಂಬ ವಿಂಗಡಣೆ ಇದೆ. ಬಯಲು ಸೀಮೆಯ ಗೌಡ... ಬೆಂಗಳೂರು ಮೈಸೂರು, ಮಂಡ್ಯ, ತುಮಕೂರು, ಕೋಲಾರ, ಹಾಸನ ಮ... ಶಿವಮೊಗ್ಗ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ನೆಲೆಸಿದ್ದಾರೆ. ಇಲ್ಲಿ ಗಂಗಡಿಕಾ... ಪಂಗಡದವರು ಹೆಚ್ಚಾಗಿದ್ದರೂ, ದಾಸ, ಮುಳ್ಳ, ಮೊರಸು, ಪೆಟ್ಟಿಗೆ, ಉಪ್ಪಿನ ಕೊಳ... ಚೇಳೂರು ನಾಮಧಾರಿ ಮೊದಲಾದ ಉಪಪಂಗಡಗಳಿವೆ. (ಸಂಪಾದಕ : ಡಾ॥ ... ಎಸ್. ಜಯಪ್ಪ ಗೌಡ, ಭೈರವ ಬಾಗಿನ, ಸಮುದಾಯ ಭವನದ ಉದ್ಘಾಟನೆ... ನೆನಪಿನ ಗ್ರಂಥ, ಚಿಕ್ಕಮಗಳೂರು, ೧೯೯೯, ಪು. ೯೦)

ಗಂಗಡಿಕಾರರ ಒಂದು ಉಪಪಂಗಡವಾದ ಚೇಳೂರು ಒಕ್ಕಲಿಗರ ಬ... ಸಿ. ಹಯವದನರಾಯರು ಮೈಸೂರು ಗೆಜೆಟಿಯರ್‌ನ ಮೊದಲ ಸಂಪುಟದ... ಪ್ರಸ್ತಾಪಿಸುತ್ತಾ, ಗಂಗವಾಡಿಯ ಮೂಲನಿವಾಸಿಗಳಾದ ಗಂಗಡಿಕಾರರಲ್ಲಿ ಪ್ರಮುಖ ವಾ... ಪೆಟ್ಟಿಗೆಯವರು ಮತ್ತು ಬುಜ್ಜಣಿಗೆಯವರು ಎಂಬ ಎರಡು ಉಪಪಂಗಡ ಗಳಿವ... ಜೊತೆಗೆ ಶುದ್ಧ ಸಸ್ಯಾಹಾರಿಗಳೂ, ಮದ್ಯವನ್ನು ವರ್ಜಿಸಿದವರೂ ಆದ ಚೇಳೂ... ಗಂಗಡಿಕಾರರು ಎಂಬ ಮೂರನೆಯ ಒಂದು ಉಪಪಂಗಡವಿದೆ ಎಂದು ತಿಳಿಸಿದ್ದಾರೆ. (... ಹಯವದನರಾವ್, ಮೈಸೂರು ಗೆಜೆಟಿಯರ್, ಸಂಪುಟ-೧, ಬೆಂಗಳೂರು, ೧೯೨೭, ಪ... ೨೪೩). ಈ ಚೇಳೂರು ಒಕ್ಕಲಿಗರು ಶುದ್ಧ ಸಸ್ಯಾಹಾರಿಗಳು.

ಚೇಳೂರು ಒಕ್ಕಲಿಗರು ಹೆಚ್ಚಿಗೆ ಇರುವುದು ನೆಲಮಂಗಲ ತಾಲ್ಲೂಕಿನ ಸೋಂಪು... ಹೋಬಳಿ ಮತ್ತು ಅದಕ್ಕೆ ಹೊಂದಿಕೊಂಡ ಮಾಗಡಿ, ದೊಡ್ಡಬಳ್ಳಾಪುರ ಹಾಗೂ ತುಮಕೂರು ತಾಲ್ಲೂಕುಗಳ ಕೆಲವು ಗ್ರಾಮಗಳಲ್ಲಿ ಮಾತ್ರ. ಸಾಮಾನ್ಯವಾಗಿ ಇವ... ಸ್ಮಾರ್ತ ಸಂಪ್ರದಾಯವನ್ನು ಅನುಸರಿಸುತ್ತಾರೆ. ಮಹಿಮಾಪುರದ ರಂಗನಾ... ಮಾಗಡಿಯ ರಂಗನಾಥ, ಶಿವಗಂಗೆಯ ಗಂಗಾಧರೇಶ್ವರ ಇವರಲ್ಲಿ ಯಾರಾದರೂ ಇವರ ಮನೆದೇವರಾಗಬಹುದು. ಚೇಳೂರು ಒಕ್ಕಲಿಗರ ಕೆಲವು ಕುಟುಂಬಗ...

# ನಮ್ಮನ್ನಗಲಿದ



ಸುಗಮ ಸಂಗೀತ ಕ್ಷೇತ್ರದ ಗಾರುಡಿಗ

**ಡಾ|| ಸಿ. ಅಶ್ವತ್ಥ್**

(೧೯೩೭-೨೦೦೯)

ಮತ್ತು

ಚಲನಚಿತ್ರ ಕಲಾವಿದ 'ಸಾಹಸಸಿಂಹ'

**ಡಾ|| ವಿಷ್ಣುವರ್ಧನ್**

(೧೯೫೦-೨೦೦೯)

ಇವರ ನೆನಪಿಗೆ 'ಹೊಸತು' ಗೌರವ ಸಲ್ಲಿಸುತ್ತದೆ.



೭೫೫ರ ಆಸುಪಾಸಿನಲ್ಲಿ ಲಿಂಗಧಾರಣೆ ಮಾಡಿಸಿಕೊಂಡರು. ಆ ಸಂದರ್ಭದಲ್ಲಿ ಂದೇ ಕುಟುಂಬದ ಕೆಲವರು ಲಿಂಗಧಾರಣೆ ಮಾಡಿಸಿಕೊಳ್ಳದೆ ಮೊದಲಿನಂತೆಯೇ ಳೂರು ಒಕ್ಕಲಿಗರಾಗಿಯೇ ಉಳಿಯುವ ನಿರ್ಧಾರ ಮಾಡಿದರು. ಹುಟ್ಟಿನಿಂದ ಣ್ಣ-ತಮ್ಮ, ಅಣ್ಣ-ತಂಗಿ, ಅಕ್ಕ-ತಂಗಿ, ಅಕ್ಕ-ತಮ್ಮನಾಗಿ ಬೆಳೆದವರು ಹುಟ್ಟಿನಿಂದ ಂದಿದ್ದ ಕರುಳು-ಬಳ್ಳಿಯ ಸಂಬಂಧವನ್ನು ದೂರವಿಟ್ಟು ಜೊತೆಯಾಗಿ ಊಟ ಾಡುವ ಬಾಂಧವ್ಯದಿಂದಲೂ ದೂರವಾದರು. ಮತಾಂತರಗೊಂಡಿದ್ದ ಹೆಣ್ಣು ಕ್ಕಳು ತವರು ಮನೆಗೆ ಬಂದಾಗ ಪ್ರತ್ಯೇಕವಾಗಿ ಅಡುಗೆ ಮಾಡಿಕೊಂಡು ಊಟ ಾಡುವಂತಹ ಪರಿಸ್ಥಿತಿ ನಿರ್ಮಾಣವಾಯಿತು. ಒಮ್ಮೆ ತಮ್ಮದೇ ಆಗಿದ್ದ ಅಡುಗೆ ಮನೆಗೆ ರಕೀಯರಾದರು. ಸಹಭೋಜನದ ಮಾತೂ ದೂರ ಉಳಿಯಿತು. ಇನ್ನು ಕೊಟ್ಟು ತಂದು ಬಂಧ ಬೆಳೆಸುವ ಮಾತಿಗೆ ಅವಕಾಶವೇ ಇರಲಿಲ್ಲ. ಸೋದರಿಕೆಯ ಸಂಬಂಧಗಳೂ ತರ್ಜಾತೀಯ ವಿವಾಹಗಳೆಂದು ಪರಿಗಣಿಸಬೇಕಾದ ಪರಿಸ್ಥಿತಿ ಎದುರಾಯಿತು. ಈ ಗೆ ಜಾತ್ಯಂತರಗೊಳ್ಳದ ಕುಟುಂಬ ಸದಸ್ಯನೊಬ್ಬನನ್ನು ಆ ಸಂದರ್ಭದಲ್ಲೇ ಷಿಸಿದ್ದಾಗ, ಜಾತಿ ಬಿಟ್ಟರು ಎಂದರೆ ಕುಲ ಬಿಟ್ಟರು ಎಂದೇ ಅರ್ಥ; ಅಂತಹ ುಟುಂಬಗಳೊಡನೆ ಸಂಬಂಧ ಬೆಳೆಸುವುದಿಲ್ಲ, ಎಂದು ಅಸಮಾಧಾನ ದಿಂದಲೇ ಳಿದ್ದರು. ಹಾಗೆಂದಿದ್ದ ವ್ಯಕ್ತಿ ಈಗ ಇಲ್ಲ. ಪೂರ್ವಿಕರು ಅನುಸರಿಸಿದ ಧರ್ಮವನ್ನು, ತವನ್ನು ಬಿಡುವುದು ಎಂದರೆ ಆ ಪರಂಪರೆಯನ್ನೇ ಬಿಟ್ಟಂತೆ ಎನ್ನುವುದು ಆ ವ್ಯಕ್ತಿಯ ದವಾಗಿತ್ತು. ಜಾತ್ಯಂತರಗೊಂಡಿದ್ದ ಕುಟುಂಬಗಳು ಹೆಚ್ಚು ಸಂಖ್ಯೆಯಲ್ಲಿದ್ದ ಗ್ರಾಮಕ್ಕೆ ರವಾ ನಾನು ಚೆನ್ನಾಗಿ ತಿಳಿದಿದ್ದ ಗ್ರಾಮಕ್ಕೆ ಹೋಗಿ, ಜಾತ್ಯಂತರಗೊಂಡವರಲ್ಲಿ ಬ್ಬಿಬ್ಬರನ್ನು ಮತ್ತು ಈಗ ಜಾತ್ಯಂತರಗೊಳ್ಳಲು ಇಚ್ಛಿಸುವವರ ಪೈಕಿ ಒಬ್ಬಿಬ್ಬರನ್ನು ಕಾರಿಸಿದೆ. ಈಗಾಗಲೇ ಜಾತಿ ಬದಲಾವಣೆ ಮಾಡಿಕೊಂಡಿರುವವರು, ಜಾತಿ ದಲಾವಣೆಯಿಂದ ಒಳ್ಳೆಯದೇ ಆಗಿದೆ ಎಂದರು. ಶುದ್ಧ ಸಸ್ಯಾಹಾರಿಗಳಾಗಿದ್ದ ಳೂರು ಒಕ್ಕಲಿಗರು ಈಗಲೂ ಸಸ್ಯಾಹಾರಿಗಳಾಗಿಯೇ ಉಳಿದಿದ್ದಾರೆ. ಆಹಾರ ದ್ಧತಿಯಲ್ಲಿ ಯಾವುದೇ ಬದಲಾವಣೆ ಇಲ್ಲ. ಈಗಲೂ ಮೊದಲಿನ ಮನೆದೇವತೆಗಳನ್ನೇ ಜಿಸುತ್ತಾರೆ. ಮಂತ್ರದೀಕ್ಷೆ ಆಗಿರುವುದರಿಂದ ವೀರಶೈವರಾಗಿದ್ದಾರೆ. ಆದ್ದರಿಂದ ನಿತ್ಯ ಇಷ್ಟಲಿಂಗಪೂಜೆ ಮಾಡುತ್ತಾರೆ. ಪರಿವರ್ತನೆಗೊಂಡವರು ಹೊಸ ಆಚಾರ ಚಾರಗಳಿಗೆ ಹೊಂದಿಕೊಂಡಿದ್ದಾರೆ. ಮೊದಲಿನಿಂದಲೂ ವೀರಶೈವರಾಗಿದ್ದವರಿಗಿಂತ ಚ್ಚುನಿಷ್ಠಾಗಿ ಇಷ್ಟಲಿಂಗಪೂಜೆ ಮಾಡುತ್ತಾರೆ. ಈ ಹೊಂದಾಣಿಕೆಯು ಅವರಲ್ಲಿ ರಿಗೂ ಕಷ್ಟ ಎನಿಸಿಲ್ಲ. ಮೊದಲಿನ ಜಾತಿಯವರೊಡನೆ ಸಂಬಂಧ ಮಾಡುವುದನ್ನು ಕರಿಸಲಾಗುತ್ತಿದೆ. ಕೊಟ್ಟು ತಂದು ಮಾಡುವುದು ವೀರಶೈವವರೊಡನೆ ಮಾತ್ರ; ದಲಿನಿಂದ ವೀರಶೈವರಾಗಿದ್ದವರು ಮೊದಲಿಗೆ ಈಚೆಗೆ ವೀರಶೈವರಾದವರೊಡನೆ ಪಂಕ್ತಿ ಭೋಜನವನ್ನೂ ನಿರಾಕರಿಸುತ್ತಿದ್ದರು, ಈಗ ಪರಿಸ್ಥಿತಿ ಬದಲಾಗಿದೆ. ಸಹಪಂಕ್ತಿ ೀಜನ ಮಾತ್ರವಲ್ಲದೆ ಸಂಬಂಧ ಬೆಳೆಸಲೂ ಸಹ ಯಾವುದೇ ಅಡ್ಡಿಯಿಲ್ಲ.

ವೀರಶೈವರಾಗಿ ಬದಲಾದ ಚೇಳೂರು ಒಕ್ಕಲಿಗರು ಇನ್ನೂ ಬದಲಾಗದ ಚೇಳೂರು ಲಿಗರಿಂದ ದೂರವಿದ್ದಾರೆ. ಹಬ್ಬ ಹರಿದಿನಗಳಲ್ಲೂ ಒಂದಾಗುವುದಿಲ್ಲ. ಆಚಾರ ಚಾರಗಳು ಬೇರೆಯೇ ಆಗಿವೆ. ಇಂತಹ ಉಸಿರುಕಟ್ಟಿಸುವ ಪರಿಸ್ಥಿತಿಯನ್ನು ರಮಾಡಲು ಹಿಂದೆ ಜಾತ್ಯಂತರಗೊಳ್ಳದಿದ್ದ ಕೆಲವು ಕುಟುಂಬಗಳೂ ಬದಲಾವಣೆಗೆ ಸಿದ್ಧವಾಗಿವೆ. ಕಡಿದುಹೋಗಿದ್ದ ಬಾಂಧವ್ಯವನ್ನು ಸರಿಪಡಿಸಿಕೊಳ್ಳುವ ಪ್ರಯತ್ನ ನಡೆದಿದೆ. ಮುಂದೆ ಒಂದು ಸಂದರ್ಭದಲ್ಲಿ ಚೇಳೂರು ಒಕ್ಕಲಿಗರು ಎಂಬ ಒಂದು ಪಂಗಡವು ಇತಿಹಾಸದಲ್ಲಿ ಮಾತ್ರ ಉಳಿಯುತ್ತದೆ; ವರ್ತಮಾನದಲ್ಲಿ ಅದಕ್ಕೆ ಸ್ಥಾನ ಇರುವುದಿಲ್ಲ. ಒಂದು ಜಾತಿಯಿಂದ ಅದೇ ಧರ್ಮದ ಮತ್ತೊಂದು ಜಾತಿಗೆ ಬದಲಾವಣೆಗೊಳ್ಳುವ ಅನಿವಾರ್ಯತೆ ಏನಿತ್ತು ಎಂದು ತಿಳಿಯುವ ಕುತೂಹಲ ಕೆಲವರಿಗಾದರೂ ಇರುತ್ತದೆ. ಇಂತಹ ಜಾತ್ಯಂತರಗಳಿಂದ ಆರ್ಥಿಕ ಅಥವಾ ರಾಜಕೀಯ ಅನುಕೂಲಗಳೇನೂ ಲಭಿಸುವ ಸಾಧ್ಯತೆಯಿಲ್ಲ ಎಂದು ಮೇಲ್ನೋಟಕ್ಕೇ ತಿಳಿಯುತ್ತದೆ. ಹಾಗಾದರೆ ಬದಲಾವಣೆ ಏಕೆ ?

ಬದಲಾವಣೆಗೊಂಡ ಒಬ್ಬ ವ್ಯಕ್ತಿಯನ್ನು ಸಂದರ್ಶಿಸಿದಾಗ ತಿಳಿದುಬಂದ ಪ್ರಕಾರ, ಚೇಳೂರು ಒಕ್ಕಲಿಗರಿಗೆ ತಮ್ಮದೇ ಆದ ಒಬ್ಬ ಗುರು ಮತ್ತು ಒಂದು ಗುರುಪೀಠ ಇರಲಿಲ್ಲ. ತಮ್ಮ ಜಾತಿಯ ಹೆಸರನ್ನು 'ಒಕ್ಕಲಿಗ' ಎಂದೇ ದಾಖಲಿಸಬೇಕಾಗಿತ್ತು; ಇದರಿಂದ ತಮಗೂ ಮಾಂಸಾಹಾರಿ ಒಕ್ಕಲಿಗರಿಗೂ ವ್ಯತ್ಯಾಸವೇ ಇಲ್ಲವೆನ್ನುವಂತಾಗಿತ್ತು. ಎಲ್ಲರೂ ಇವರನ್ನೂ ಮಾಂಸಾಹಾರಿ ಒಕ್ಕಲಿಗರೆಂದೇ ಭಾವಿಸುತ್ತಿದ್ದರು. ಧಾರ್ಮಿಕ ಮತ್ತುಸಾರ್ವಜನಿಕ ಸಮಾರಂಭಗಳಲ್ಲಿ ಕೀಳರಿಮೆ ಕಾಡುತ್ತಿತ್ತು. ತಮ್ಮನ್ನು ತಾವು ಚೋಳ ರಾಜಮನೆತನಕ್ಕೆ ಸೇರಿದವರು ಎಂದು ತಿಳಿದು ತಮ್ಮ ಶ್ರೇಷ್ಠತೆಯನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಿದರು. ವಾಸ್ತವವಾಗಿ ಚೇಳೂರು ಒಕ್ಕಲಿಗರಿಗೂ ಚೋಳರಿಗೂ ಯಾವುದೇ ಸಂಬಂಧ ಇಲ್ಲ; ಸಾಮಾಜಿಕ ಗೌರವಕ್ಕಾಗಿ ಚೇಳೂರು ಒಕ್ಕಲಿಗರು ತಮಗೊಬ್ಬ ಗುರು ಮತ್ತು ಒಂದು ಗುರುಪೀಠವನ್ನು ಅಪೇಕ್ಷಿಸಿದರು; ಆ ಹೊತ್ತಿಗೆ ಒಕ್ಕಲಿಗರಲ್ಲೇ ಕೆಲವು ಉಪಪಂಗಡಗಳಿಗೆ ಗುರುಪೀಠಗಳು ರೂಪುಗೊಂಡಿದ್ದವು. ಆದರೆ, ಅವೆಲ್ಲವೂ ಮಾಂಸಾಹಾರಿ ಒಕ್ಕಲಿಗರಿಗೆ ಸಂಬಂಧಿಸಿದ ಗುರುಪೀಠಗಳು ಎಂಬ ಕಾರಣದಿಂದ ತಮ್ಮ ಆಚಾರ ವಿಚಾರಗಳಿಗೆ ಹೊಂದಿಕೆಯಾಗುವ ಸಿದ್ಧಗಂಗೆಯ ಗುರುಪೀಠವನ್ನು ಆಶ್ರಯಿಸಿದರು. ಶುದ್ಧ ಶಾಕಾಹಾರಿಗಳಾಗಿದ್ದ ಚೇಳೂರು ಒಕ್ಕಲಿಗರಿಗೆ ಗುರುಪೀಠದ ಆಶ್ರಯ ನೀಡಲು ಸಿದ್ಧಗಂಗೆಯ ಶ್ರೀ ಶಿವಕುಮಾರ ಸ್ವಾಮಿಗಳು ಒಪ್ಪಿ, ಲಿಂಗಧಾರಣೆಗೆ ಅವಕಾಶ ನೀಡಿದರು; ಅಲ್ಲದೆ, ಮೊದಲಿಗೆ ಭೇದ ಭಾವ ತೋರಿದ ಕೆಲವು ವೀರಶೈವರಿಗೆ ಅದು ತಪ್ಪೆಂದೂ, ಲಿಂಗಧಾರಣೆ ಮಾಡಿಸಿಕೊಂಡವರೆಲ್ಲರೂ ಒಂದೇ ಎಂದೂ ಮನವರಿಕೆ ಮಾಡಿದರು. ಈಗ ಜಾತ್ಯಂತರಗೊಂಡ ಮತ್ತು ಮೊದಲಿನಿಂದಲೂ ಲಿಂಗಾಯತ ರಾಗಿದ್ದವರೆಲ್ಲರೂ ಒಂದೇ ಎಂಬ ಭಾವ ತಾಳಿರಬಹುದು; ಆದರೆ, ಜಾತ್ಯಂತರಗೊಳ್ಳದ ಮತ್ತು ಜಾತ್ಯಂತರಗೊಂಡ ಚೇಳೂರು ಒಕ್ಕಲಿಗರು ಬೇರೆಬೇರೆಯಾಗಿಯೇ ಉಳಿದಿದ್ದಾರೆ. ಸಂಬಂಧಗಳನ್ನು ಉಳಿಸಿಕೊಳ್ಳಬೇಕೆಂಬ ಕಾರಣದಿಂದ ಕೆಲವು ಕುಟುಂಬಗಳು ಜಾತ್ಯಂತರಗೊಳ್ಳಲು ಸಿದ್ಧವಾಗಿವೆ ಎಂದು ತಿಳಿದುಬಂದಿದೆ. ಮೊದಲಿಗೆ ಚೇಳೂರು ಕುಟುಂಬದವರ ಕೊಳುಕೊಡುಗೆಯ ಸಂಬಂಧಗಳು ಕೆಲವು ಗ್ರಾಮಗಳು ಮತ್ತು ಕೆಲವು ಕುಟುಂಬಗಳಿಗೆ ಮಾತ್ರ ಸೀಮಿತಗೊಂಡಿದ್ದವು. ಈಗ ಈ ಕೊಳುಕೊಡುಗೆಯ ಸಂಬಂಧಗಳು ವಿಸ್ತಾರಗೊಂಡಿವೆ ಎಂಬುದು ಜಾತ್ಯಂತರಗೊಂಡ ಕೆಲವರ ಅಭಿಪ್ರಾಯ. ಜಾತ್ಯಂತರವಾಗದಿದ್ದರೆ, ಹುಟ್ಟಿನಿಂದ ಬಂದ ಸಂಬಂಧಗಳು ಅಸ್ತಿತ್ವ ಕಳೆದುಕೊಳ್ಳುತ್ತವೆ ಎಂಬ ವಿಷಾದವಂತೂ ಎರಡು ಬಣದವರಿಗೂ ಇದೆ.

**ಡಾ|| ಎಚ್. ಎಸ್. ಗೋಪಾಲ ರಾವ್**

''ಸ್ವಸ್ತಿಶ್ರೀ ಸ್ಕಂದ', ನಂ. ೧೪೪, ಐ.ವೈ.ಡಿ. ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲೂಕು,
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

# ಯಾವುದು ವೈಚಾರಿಕತೆ ಮತ್ತು ಅದು ಏಕೆ ಬೇಕು ?

**ಎ. ಎಸ್. ನಟರಾಜ್**

**೧. ವೈಚಾರಿಕತೆ ಮತ್ತು ವಿಜ್ಞಾನ ಹಾಗೂ ಪ್ರದಾಯ ಮತ್ತು ಧರ್ಮ :** ವೈಚಾರಿಕತೆ ಹಾಗೂ ಂಪ್ರದಾಯಗಳು ಪ್ರಾಚೀನ ಕಾಲದಿಂದಲೂ ಪರಸ್ಪರ ನ್ನವಾದ ದಾರಿಯಲ್ಲಿಯೇ ಜೊತೆಯಾಗಿಯೇ ನಡೆದು ಂಡು ಬಂದಿವೆ. ಅಂತೆಯೇ ವಿಜ್ಞಾನ ಹಾಗೂ ರ್ಮವೂ ಕೂಡ ಪರಸ್ಪರ ವಿರುದ್ಧ ಚಿಂತನೆಯಲ್ಲಿಯೇ ಟ್ಟಿಗೆ ಬೆಳೆದುಕೊಂಡು ಬಂದಿವೆ. ಹೆಚ್ಚಿನವರು ದುಕೊಂಡಂತೆ ವಿಜ್ಞಾನ ಹಾಗೂ ವಿಚಾರವಾದಗಳು ಧುನಿಕೋದ್ಭವ ಚಿಂತನೆಗಳಲ್ಲ. ಅವು ಪ್ರಾಚೀನ ದುವೇ ಆಗಿವೆ. ಅವು ಸಂಪ್ರದಾಯ ಹಾಗೂ ರ್ಮಗಳಿಗಿಂತಲೂ ಹಳೆಯ ಚಿಂತನೆಗಳೆ. ಆದಿಮಾನವ ನ್ನ ಆಹಾರ ಹಾಗೂ ಜೀವನಕ್ಕಾಗಿ ಎಂದು ಮೊದಲು ಂಕಿಯ ಉಪಯೋಗಗಳನ್ನು, ಆಹಾರ ಗಳಿಸಲು ಯುಧಗಳ ಉಪಯೋಗಗಳನ್ನು ಕಂಡುಕೊಂಡನೋ ಲ್ಲಿಯೆ ಒಳಗಿದ್ದ ವಿಜ್ಞಾನ ಹೊರಗೆ ಆವಿರ್ಭವಿಸಿತು ಥವಾ ಅವನು ಜ್ಞಾನದ ಪ್ರಥಮ ಹೆಜ್ಜೆಯನ್ನು ಇಟ್ಟನು. ಲ್ಲಿಯೆ ಆತನಿಗೆ ಪ್ರಕೃತಿಯ ಇರುವಿಕೆಯ ಅರಿವಾಯಿತು. ದರೆ ಆಗ ಅವನಿಗೆ ಧರ್ಮದ ಗಂಧಗಾಳಿಯ ನುಭವ ಇನ್ನೂ ಬರಲಿಲ್ಲ. ವಿಜ್ಞಾನದ ಜೊತೆಯಲ್ಲಿಯೇ ಚಾರಿಕತೆಯ ಪ್ರಥಮ ಹೆಜ್ಜೆಯನ್ನು ಆತ ೊತೆಯಲ್ಲಿಯೆ ಹಾಕಿದ. ಆದಿಮಾನವ ತನ್ನ ಆಹಾರ, ಸ ಹಾಗೂ ಜೀವನಕ್ಕಾಗಿ ಅಸ್ತಿತ್ವದಲ್ಲಿರುವ ವಸ್ತುವನ್ನು ಪಯೋಗಿಸಿಕೊಳ್ಳಲು ವಿಜ್ಞಾನದ ಬೆಳಕನ್ನು ಡೆದನು. ಆ ಬೆಳಕನ್ನು ಪಡೆಯಲು ಆತ ಆಗ ತನ್ನ ನಸ್ಸಿನಲ್ಲಿ ಅನೇಕ ಪ್ರಶ್ನೆಗಳನ್ನು ಅಥವಾ ವಿಚಾರಗಳನ್ನು ಂತಿಸಿದನು. ಅಲ್ಲಿಯೇ ಅಂಕುರಿಸಿತು ವೈಚಾರಿಕತೆ ಂಬ ಅರಿವಿನ ಪ್ರಭೆ. ಅರಿವು ಅಥವಾ ಚಾರಿಕತೆಯೆಂಬ ಪ್ರಭೆಯನ್ನು ಹೊತ್ತಿಸಿದಾಗಲೇ ಜ್ಞಾನವೆಂಬ ಬೆಂಕಿ ಅಥವಾ ಬೆಳಕು ಪ್ರಜ್ವಲಿಸುತ್ತದೆ. ಚಾರಿಕತೆಯೆಂಬ ಅರಿವಿನ ಪ್ರಭೆಯಿಲ್ಲದಿದ್ದರೆ, ಆ ಜ್ಞಾನವು ಸಂಪ್ರದಾಯ ಮೌಢ್ಯವನ್ನು ಹೊಂದಿದ್ದಾದರೆ ವಿಜ್ಞಾನವೂ ಕೂಡ ಪ್ರಭೆಯಿಲ್ಲದ ಪ್ರಜ್ವಲಿಸದ ಬ್ಬುಕವಿದ ಕೆಂಡದೋಪಾದಿಯಲ್ಲಿ ವ್ಯರ್ಥವಾಗ ಹುದು. ಆದುದರಿಂದ ವೈಚಾರಿಕತೆ ಹಾಗೂ ಜ್ಞಾನಗಳು ಒಂದೇ ನಾಣ್ಯದ ಎರಡು ಮುಖಗಳು. ಂತೆಯೆ, ಧರ್ಮ ಯಾವುದೇ ಆಗಿರಲಿ ಎಲ್ಲ ರ್ಮಗಳ ತಳಪಾಯವೇ ಸಂಪ್ರದಾಯಗಳಿಂದ ಡಿದೆ. ಸಂಪ್ರದಾಯಗಳನ್ನು ಬಿಟ್ಟು ಧರ್ಮವಿಲ್ಲ. ರ್ಮವಿಲ್ಲದ ಸಂಪ್ರದಾಯಗಳು ಅರ್ಥಹೀನ ಗುತ್ತವೆ. ಆದುದರಿಂದ ವೈಚಾರಿಕತೆ ಹಾಗೂ ವಿಜ್ಞಾನ ರಸ್ಪರ ಪೂರಕವಾಗಿವೆ; ಅಂತೆಯೇ ಧರ್ಮ ಹಾಗೂ ಂಪ್ರದಾಯಗಳು ಕೂಡ ಪರಸ್ಪರ ಅವಲಂಬಿತಗಳೇ. ದರೆ ವೈಚಾರಿಕತೆ ಹಾಗೂ ಸಂಪ್ರದಾಯಗಳು ಎಂದೂ ಂದಾಗಲು ಸಾಧ್ಯವಿಲ್ಲ. ಅವು ಪರಸ್ಪರ ಎಂದೂ ಡದ ಎರಡು ಸರಳ ರೇಖೆಗಳಿದ್ದಂತೆ, ಸರ್ವಕಾಲ ಳಲ್ಲೂ ವಿರುದ್ಧವಾಗಿವೆ. ಆದರೆ ಒಂದು ಆಶ್ಚರ್ಯದ ಂಗತಿಯೆಂದರೆ ಈ ಎರಡೂ ಪ್ರಾಚೀನಕಾಲ ಂದಲೂ ಒಂದೇ ಸಾಮಾಜಿಕ ವ್ಯವಸ್ಥೆಯಲ್ಲಿ ಒಟ್ಟಿಗೆ ದ್ದು ಬೇರಾಗಿಯೇ ಬಾಳಿಕೊಂಡು ಬಂದಿವೆ. ಪ್ರಾಚೀನ ಲದಲ್ಲಿ ವಿಚಾರವಾದದ ಕೋಲ್ಮಿಂಚಿನ ಪ್ರಭೆ ರಿತ್ರೆಯ ನಿರಂತರ ಪ್ರವಾಹದಲ್ಲಿ ಎದ್ದುಕಾಣುತ್ತಿರುವ ಪ್ರಮುಖ ಅಂಶ. ವೇದಗಳಲ್ಲಿ, ಮುಖ್ಯವಾಗಿ ಅದರ ಋತದ ಕಲ್ಪನೆಯಲ್ಲಿ, ವಿಚಾರವಾದದ ಮೂಲ ಹಾಗೂ ವಿಜ್ಞಾನದ ಬೆಳಕಿದೆ, ಖಗೋಲ ವಿಜ್ಞಾನದ ಕೋಲ್ಮಿಂಚಿದೆ. ವೇದದಲ್ಲಿ ಭೌತವಾದದ ಬೇರನ್ನು ಕಾಣಬಹುದು. ಉಪನಿಷತ್ತುಗಳಲ್ಲಿ ಭೌತವಾದ ಹಾಗೂ ವಿಜ್ಞಾನದ ಚಿಗುರು ಒಡೆದಿದೆ. ದೇವಗುರುವಾದ ಬೃಹಸ್ಪತಿಯು ಮೊದಲ ವಿಚಾರವಾದಿ; ಅವನು ನಿರೀಶ್ವರವಾದಿ ಚಾರ್ವಾಕನೆಂದು ಹೇಳುವುದಿದೆ. ಭೃಗು ಭಾರದ್ವಾಜರ ಸಂವಾದದಲ್ಲಿ ಭೌತದ ಬೆಳಕಿದೆ. ಛಾಂದೋಗ್ಯ ಉಪನಿಷತ್‌ನ ತತ್ವಮಸಿಯ ನಿಗೂಢತೆಯಲ್ಲಿ, ಉದ್ದಾಲಕ ಆರುಣಿಯ ದ್ರವ್ಯ ಚೇತನ ಅಣು ಭೌತವಾದ ಹಾಗೂ ವಿಶ್ವ ಮೂಲದ ಶೋಧದ ಸೂಕ್ಷ್ಮತೆಯಲ್ಲಿಯೂ ವಿಜ್ಞಾನದ ಹಾಗೂ ವೈಚಾರಿಕತೆಯ ಪ್ರಭೆ ಪ್ರಜ್ವಲಿಸಿದೆ. ಚಾರ್ವಾಕರಂತೂ ಪ್ರಾಚೀನ ಶುದ್ಧ ವಿಚಾರವಾದಿಗಳು. ಕಪಿಲನ ಸಾಂಖ್ಯದರ್ಶನದಲ್ಲಿಯ ಪ್ರಕೃತಿ ಪ್ರಧಾನವಾದ ತ್ರಿತತ್ವ ಸ್ವಭಾವವಾದ, ವೈಶೇಷಿಕ ದರ್ಶನದ ಅಣು ಮೂಲದ ವಿಶ್ವ ಸೃಷ್ಟಿಯ ವಾದ, ಕರ್ಮವಾದಿಗಳಾದರೂ ನಿರೀಶ್ವರವಾದಿಗಳಾದ ಜೈಮಿನಿ, ಶಬರ, ಕುಮಾರಿಲ ಎಂಬ ಮೀಮಾಂಸಕರು ಇವರೆಲ್ಲರೂ ವಿಚಾರವಾದಿಗಳಾಗಿದ್ದು ವೈಚಾರಿಕತೆಯ ಪರಾಕಾಷ್ಠೆಯಲ್ಲಿದ್ದವರು. ರತ್ನಪ್ರಾಯವಾದ ಬುದ್ಧನ ಬೋಧನೆಗಳೆಲ್ಲವೂ ಹಾಗೂ ಅವನ ಕ್ಷಣಿಕವಾದವು ವೈಚಾರಿಕತೆಯಿಂದಲೇ ಕೂಡಿದೆ. ಮಹಾವೀರ, ಜೈನರು ನಾಸ್ತಿಕವಾದಿಗಳು. ಬಸವಣ್ಣ ದೈವಭಕ್ತನಾದರೂ ಪರಮವಿಚಾರವಾದಿಯೆ. ಹಾಗಾಗಿ ಭಾರತದಲ್ಲಿ ಧರ್ಮ ಹಾಗೂ ಸಂಪ್ರದಾಯಗಳು ಎಷ್ಟು ಪ್ರಾಚೀನವೋ ಅದಕ್ಕಿಂತ ಪ್ರಾಚೀನ ವೈಚಾರಿಕತೆ. ಭಾರತದಲ್ಲಿ ಈ ಎಲ್ಲ ದರ್ಶನಗಳು, ದಾರ್ಶನಿಕರು ಒಂದು ಕಡೆ ನಿಂತು ವಿಚಾರವಾದದ ಗಿಡಗಳಿಗೆ ನೀರೆರೆದರೆ ಮತ್ತೊಂದು ಕಡೆ ಪ್ರಸ್ಥಾನ ತ್ರಯಗಳ ವೇದಾಂತ ದರ್ಶನವು ವೈಚಾರಿಕತೆ ಹಾಗೂ ವಿಜ್ಞಾನದ ಬೆಳವಣಿಗೆಗೆ ಎದುರಾಗಿ ನಿಂತು ತನ್ನದೆ ಆದ ದೈವ ವಿಧಿ, ಪೂರ್ವಕರ್ಮ, ಪುನರ್ಜನ್ಮ, ಸ್ವರ್ಗ, ನರಕ, ಪರಲೋಕ, ಮೋಕ್ಷ, ಗ್ರಹಚಾರ, ಬಹುದೇವರ ಗೊಂದಲದಲ್ಲಿ ವಿಗ್ರಹಾರಾಧನೆ, ಪುರಾಣ, ಆಗಮಗಳ ಭ್ರಮಾಲೋಕದಲ್ಲಿ, ಪರಸ್ಪರ ವಿರೋಧದ ಪಂಥಗಳ ಕೊಳೆಯಲ್ಲಿ ದಾಸ್ಯ, ಕೀಳರಿಮೆ, ಉಚ್ಚ, ನೀಚ, ನಾಲ್ಕು ವರ್ಣಗಳ ಭೇದ, ಸ್ತ್ರೀ ಮತ್ತು ದಲಿತ ಶೋಷಣೆ, ಅಸಮತೆಯ ಕಟ್ಟುಪಾಡಿನ ನೆಲೆಯಲ್ಲಿ ನಿಂತು ಮೌಢ್ಯ, ಭ್ರಮೆ, ಸಂಪ್ರದಾಯ ಕರ್ಮಕಾಂಡಗಳಿಗೆ ನೀರು ಗೊಬ್ಬರ ಹಾಕಿ ಹೆಮ್ಮರವಾಗಿ ಬೆಳಸಿ ಅದರ ಅಡಿಯಲ್ಲಿ ವೈಚಾರಿಕ ಚಿಂತನೆಯ ಜೀವ-ಉಸಿರನ್ನು ಕಟ್ಟಿಸಿರುವುದು ಚಾರಿತ್ರಿಕ ಸತ್ಯವಾಗಿದೆ.

**೨. ವಿಚಾರವಾದ ಎಂದರೆ ಏನು ?** (೧) ಯಾವುದೇ ವಿಷಯ, ವಿಚಾರ, ಕಾರ್ಯ, ಸಾಧನೆ, ಶೋಧನೆ ಎಲ್ಲವನ್ನು ಸತ್ಯಾಸತ್ಯತೆಯಡಿ ನಿಷ್ಪಕ್ಷಪಾತವಾಗಿ, ಯಾವುದೇ ಪೂರ್ವಗ್ರಹ ಪೀಡನೆಯಿಲ್ಲದೆ ಯೋಚಿಸಿ, ವಿಚಾರಿಸಿ, ವಿವೇಕದ ಒರೆಗಲ್ಲಿಗೆ ಹಚ್ಚಿ ನೋಡಿ ಮಾಡುವುದು ವಿಚಾರವಾದ. (೨) ವೈಜ್ಞಾನಿಕ, ವಾಸ್ತವಿಕ, ವಸ್ತುನಿಷ್ಠ, ಹಾಗೂ ತಾರ್ಕಿಕ ನೆಲೆಯಲ್ಲಿ ಸತ್ಯಶೋಧನೆಯೆ ವೈಚಾರಿಕತೆ. (೩) ಯಾವುದೇ ಧರ್ಮನಿಷ್ಠೆ, ವ್ಯಕ್ತಿನಿಷ್ಠೆ ಇಲ್ಲದೆ ಕ್ರಿಯಾನಿಷ್ಠೆಯಿಂದ ಮಾಡುವುದೇ ವಿಚಾರವಾದ. (೪) ಪ್ರತಿಯೊಂದು ಕಾರ್ಯವನ್ನು ತಾನೇ ಪ್ರಶ್ನಿಸಿ, ಎಲ್ಲಾ ಸಂಶಯ, ಅನುಮಾನಗಳಿಗೆ ಸಮರ್ಪಕವಾದ, ಸಾರ್ವತ್ರಿಕವಾಗಿ ಒಪ್ಪುವ ಉತ್ತರವನ್ನು ಕಂಡುಕೊಂಡು ಮಾಡುವುದು, ಚಿಂತಿಸುವುದು ವಿಚಾರವಾದ. (೫) ವಿಚಾರವಾದವೆಂದರೆ ಯಾರ, ಯಾವುದರ ದೂಷಣೆ, ವಿರೋಧ, ವಿತಂಡವಾದವಲ್ಲ. ಪ್ರಾಮಾಣ್ಯದಿಂದ ಭ್ರಮರಹಿತ, ವೈಜ್ಞಾನಿಕ, ವಾಸ್ತವಿಕ, ತಾರ್ಕಿಕ, ಸ್ವಾತಂತ್ರ್ಯ ಸಮಾನತೆಯ ಶೋಷಣಾ ಮುಕ್ತ ಮಾನವೀಯ ನೆಲೆಯಿಂದ ವಿಶ್ಲೇಷಿಸಿ ಸತ್ಯವನ್ನು ಪೂರ್ವಗ್ರಹವಿಲ್ಲದೆ ಒಪ್ಪುವುದೇ ವೈಚಾರಿಕತೆ.

**೩. ಯಾರು ವಿಚಾರವಾದಿಗಳು ?** ವೈಜ್ಞಾನಿಕ, ವೈಚಾರಿಕ ಮನೋಭಾವ ಹೊಂದಿರುವವರು ವಿಚಾರವಾದಿಗಳು. ಇವರಲ್ಲಿ ದೇವರ ಅಸ್ತಿತ್ವವನ್ನು ನಂಬದ ನಾಸ್ತಿಕರೂ, ದೇವರ ಅಸ್ತಿತ್ವದ ಬಗ್ಗೆ ದ್ವಂದ್ವ, ಅನುಮಾನಪಡುವ, ಗೊಂದಲವಿರುವ ಅರೆ ನಾಸ್ತಿಕರು ಅಥವಾ ಸಂಶಯವಾದಿಗಳು ಹಾಗೂ ದೇವರೆಂದರೆ ಒಂದು ಅಗೋಚರ ಶಕ್ತಿಯೆಂದು, ತತ್ವ, ಅನುಭವ, ಜ್ಞಾನ, ಸತ್ಯ, ಒಳಿತು, ವಿಶ್ವ ಪ್ರಜ್ಞೆ, ವಿಶ್ವ ಭೌತಿಕ ಶಕ್ತಿ ಹೀಗೆ ಒಂದು ಅಮೂರ್ತ ದೇವರ ಅಸ್ತಿತ್ವದ ಬಗ್ಗೆ ನಂಬಿಕೆ ಇದ್ದು ಕೂಡ ಧಾರ್ಮಿಕ ಕಂದಾಚಾರ, ಮೂಢನಂಬಿಕೆ, ಜಾತಿ, ವರ್ಣ, ಮತಭೇದ ಇಲ್ಲದ ವೈಚಾರಿಕ ವೈಜ್ಞಾನಿಕ ಮನೋಭಾವ ಇರುವವರು ವಿಚಾರವಾದಿಗಳೆಂದರೆ ತಪ್ಪಿಲ್ಲ. ಹೆಚ್ಚಿನ ವಿಚಾರವಾದಿಗಳು ನಿರೀಶ್ವರವಾದಿಗಳಾಗಿರುವುದರಿಂದ ಸಾಮಾನ್ಯವಾಗಿ ದೇವರ ನಿರಾಕರಣೆ ಮಾಡದವರನ್ನು ವಿಚಾರವಾದಿಗಳೆಂದು ಸ್ವೀಕರಿಸಲು ಬಹುಮಂದಿ ಸಿದ್ಧರಿರುವುದಿಲ್ಲ. ಆದರೆ ವಿಚಾರವಾದಿಗಳಿಗೂ ನಾಸ್ತಿಕರಿಗೂ ವ್ಯತ್ಯಾಸವಿದೆ. ವಿಚಾರವಾದಿಗಳಲ್ಲಿ ಹೆಚ್ಚಿನವರು ನಾಸ್ತಿಕರಿರಬಹುದು ಆದರೆ ವಿಚಾರವಾದಿಗಳೆಲ್ಲರೂ

ಸ್ತಿಕರಾಗಬೇಕೆಂದಿಲ್ಲ. ಆದರೆ ನಾಸ್ತಿಕರೆಲ್ಲರೂ ಸಾಮಾನ್ಯವಾಗಿ ವಿಚಾರವಾದಿಗಳಾಗಿರುತ್ತಾರೆ. ಅಂಥ ಆಚರಣೆಗಳಿಲ್ಲದೆ, ಜಾತ್ಯತೀತ ನಿಲುವನ್ನು ಹೊಂದಿರುವ, ಮಾನತೆ, ಸ್ವಾತಂತ್ರ್ಯವನ್ನು ಗೌರವಿಸುವ ಆಸ್ತಿಕರೂ, ವಿಜ್ಞಾನದಲ್ಲಿ ಸಂಪೂರ್ಣವಾದ ಚಲವಾದ ನಂಬಿಕೆಯನ್ನು ಇಟ್ಟಿರುವ ಭೌತವಾದಿಗಳು, ವಾಸ್ತವವಾದಿಗಳು, ಮಾನವತಾವಾದಿಗಳು ಇವರೆಲ್ಲರನ್ನೂ ವಿಚಾರವಾದಿಗಳೆಂದರೆ ಯಾವ ತಪ್ಪೂ ಇಲ್ಲ.

೪. **ಯಾವುದು ವಿಚಾರವಾದ?** ಆ ವಾದದ ನಿಲುವಿನಲ್ಲಿ, ಕಾರ್ಯ, ಕ್ರಿಯೆಗಳಲ್ಲಿ ೧೩. ಗುಣಗಳು ಇರಬೇಕು : (೧) ನಿಯಮಬದ್ಧವಾದ ಸುವ್ಯವಸ್ಥೆ ಕಾಣಬೇಕು ) ಭೌತಿಕ ವಸ್ತುನಿಷ್ಠತೆಯುಳ್ಳದ್ದಾಗಿರಬೇಕು (೩) ಪ್ರತಿಯೊಂದರಲ್ಲೂ ಾರ್ಯಕಾರಣ ಸಂಬಂಧ ಇರಲೇಬೇಕು (೪) ಪ್ರತ್ಯಕ್ಷಾನುಭವವು ಸಾರ್ವತ್ರಿಕತೆಗೆ ಲುಕುವಂತಿರಬೇಕು (೫) ಪ್ರಯೋಗಕ್ಕೆ ಸಿಲುಕುವಂತಹ ವ್ಯಕ್ತಸ್ವರೂಪದ್ದಾಗಿರಬೇಕು ) ಪ್ರಾಮಾಣ್ಯ - ಪುರಾವೆಗೆ ಬದ್ಧವಾಗಿರಬೇಕು (೭) ವಾಸ್ತವತೆ ಅಥವಾ ಥಾರ್ಥತೆಯ ನೆಲೆಯುಳ್ಳದ್ದಾಗಿರಬೇಕು. (೮) ತಾರ್ಕಿಕತೆಗೆ ಒಳಗೊಂಡಿರಬೇಕು ) ವೈಜ್ಞಾನಿಕ ಬದ್ಧತೆ ಅದರಲ್ಲಿರಬೇಕು (೧೦) ದೈವಕೇಂದ್ರವಾಗದೆ ಅದು ಸಮಾಜ ಾಗೂ ಮಾನವ ಕೇಂದ್ರವಾಗಿರಬೇಕು ೧) ಎಲ್ಲ ಸಂಶಯ, ಪ್ರಶ್ನೆ, ಅನುಮಾನಗಳಿಗೆ ುರ್ಪಕವಾದ ಉತ್ತರವನ್ನು ಕೊಡುವಂತಿರ ೇಕು (೧೨) ಅರಿವಿನಂತೆ (ಅಂತರ್ಮುಖಿ ಾನೆ) ಇರವು ಎಂದು ಹೇಳದೆ ಅದು ಇರವು ಸ್ತುವಿನಿಂದ) ಅರಿವನ್ನು (ಜ್ಞಾನವನ್ನು) ುಟ್ಟಿಸಿತು ಎಂದು ಹೇಳುತ್ತದೆ ವಿಚಾರವಾದ ೩) ಶಾಂತಿ-ಸತ್ಯ, ಸಾಮಾಜಿಕ ನ್ಯಾಯ, ೌಲಿಕ ನೀತಿ, ಸ್ವಾತಂತ್ರ್ಯಪ್ರಜ್ಞೆ, ಹಾಗೂ ಮಾನತೆ ಎಂಬ ಪಂಚ ವೈಚಾರಿಕ ರೀತಿ ರಬೇಕು.



೫. **ವಿಚಾರವಾದದಲ್ಲಿ ಏನು ಇರಾರದು?** ಸಾಂಪ್ರದಾಯಿಕವಾದದಲ್ಲಿ ಇರುವಂತೆ ) ಪಕ್ಷಪಾತದಿಂದ ಕೂಡಿರಬಾರದು ) ಪೂರ್ವಗ್ರಹ ಪೀಡಿತವಾಗಿರಬಾರದು ) ಅದು ಯಾವುದೋ ಒಂದು ಧರ್ಮ ಷ್ಠತೆಗೆ ತಲೆಬಾಗಿರಬಾರದು (೪) ಯಾವುದೋ ವ್ಯಕ್ತಿನಿಷ್ಠತೆಯಲ್ಲಿರಬಾರದು ) ಭೇದ, ದಾಸ್ಯತ್ವ, ಕೀಳರಿಮೆಗೆ ಎಡೆಯಿರಬಾರದು (೬) ಭ್ರಮೆ ಅಥವಾ ಲ್ಪನೆಯಿಂದ ಕೂಡಿರಬಾರದು (೭) ಮೂಢನಂಬಿಕೆಗಳಿಂದ ಕೂಡಿರ ಬಾರದು ) ನಿಗೂಢತೆಗೆ ಆಸ್ಪದವಿರಬಾರದು.

೬. **ವಿಚಾರವಾದಿಗಳಲ್ಲಿ ವರ್ಗಗಳು** : ವಿಚಾರವಾದಿಗಳಲ್ಲಿ ವರ್ಗ ಇಲ್ಲ ಎಂದು ೇಳಿದರೂ ಸಾಮಾನ್ಯವಾಗಿ ಮೂರು ವರ್ಗಗಳು ಸೂಕ್ಷ್ಮವಾಗಿ ಪರಿಶೀಲಿಸಿದರೆ ಂಡುಬರುತ್ತವೆ. (೧) ನಾಸ್ತಿಕ-ಭೌತವಾದಿ ವಿಚಾರವಾದಿಗಳು-ನಿರೀಶ್ವರವಾದಿಗಳು, ಕೃತಿವಾದಿಗಳು, ಸ್ವಭಾವವಾದಿಗಳು ಇವರು ಈ ವರ್ಗದಲ್ಲಿ ಬರುತ್ತಾರೆ. ಇವರು ೇವರ ಅಸ್ತಿತ್ವವನ್ನು ಖಂಡತುಂಡವಾಗಿ ವಿರೋಧಿಸುತ್ತಾರೆ. ದೇವರ ಅಸ್ತಿತ್ವವನ್ನು ಾವುದೇ ರೀತಿಯಲ್ಲಿ ಒಪ್ಪಿದರೂ ಇವರು ಅದರಿಂದ ದೂರ ಉಳಿಯುತ್ತಾರೆ. ) ಸಂಶಯ- ಭೌತವಾದಿ ವಿಚಾರವಾದಿಗಳು: ಯಾವುದೋ ಭೌತಶಕ್ತಿ, ೌತವಸ್ತುವಿನಲ್ಲಿ ವಿಶ್ವಪ್ರಜ್ಞೆಯನ್ನು ಹುಡುಕುವವರು ಇವರು. ಆದರೆ ಅವರು ಆ ಯಲ್ಲಿ ದೈವೀಗುಣಕಲ್ಪನೆಯನ್ನು ಹುಡುಕುವುದಿಲ್ಲ, ಬರಿ ಪ್ರಜ್ಞೆಯನ್ನು ಕಾಣಲು ಯತ್ನಿಸುತ್ತಾರೆ. ಕೆಲವು ವಿಜ್ಞಾನಿಗಳು, ಕಾಪ್ರ, ಲಿಂಕನ್ ಬರ್ನೆಟ್, ಶಾರ್ದಾನ್, ನ್‌ಸ್ಟೈನ್, ಡಾ|| ಎಚ್. ನರಸಿಂಹಯ್ಯ, ನಿಸರ್ಗದಲ್ಲಿಯೇ ದೇವರನ್ನು ಕಾಣುವ ುವೆಂಪು ಹಾಗೂ ಇತರರು. ಇವರ ನಿಲುವು ಕೆಲವೊಮ್ಮೆ ನಾಸ್ತಿಕರಂತೆ ಕಂಡರೆ ಇನ್ನು ಲವೊಮ್ಮೆ ಇವರು ಆಸ್ತಿಕರಂತೆ ಕಾಣುತ್ತಾರೆ. (೩) ಆಸ್ತಿಕವಾದಿ ವಿಚಾರವಾದಿಗಳು - ವರು ಮೂಢನಂಬಿಕೆ, ಕಂದಾಚಾರ, ಆಚಾರ, ಪೂಜೆ, ಧಾರ್ಮಿಕ ಕಟ್ಟುಕಟ್ಟಳೆಯನ್ನು ನುಸರಿಸುವುದು ಇಲ್ಲ, ಆದರೆ ಯಾವುದೋ ಒಂದು ದಿವ್ಯ ಶಕ್ತಿ ಅಥವಾ ಅದ್ಭುತ ಯೊಂದು ದೇವರಾಗಿ ವಿಶ್ವವನ್ನು ನಿಯಂತ್ರಿಸುತ್ತದೆ ಎಂಬ ನಂಬಿಕೆಯಲ್ಲಿ ುವವರು. ಅಥವಾ ಈ ಪ್ರಕೃತಿಯೇ ದೇವರು ಎಂದು ನಂಬಿರುವವರು ಈ ರ್ಗದಲ್ಲಿ ಬರುತ್ತಾರೆ. ಅಥವಾ ದೇವರ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದವರು ಈ ವರ್ಗದಲ್ಲಿ ಬರುತ್ತಾರೆ. ಅಂದರೆ ಇವರು ಯಾವುದೇ ಧರ್ಮದ ಆಚಾರ ಆಚರಣೆಯನ್ನು ಮಾಡುವುದಿಲ್ಲ ಹಾಗೂ ದೇವರು ಇಲ್ಲ ಎಂದೂ ಹೇಳುವುದಿಲ್ಲ. ದೇವರು ಧರ್ಮಗಳ ಬಗ್ಗೆ ನಿರ್ಲಿಪ್ತ ಭಾವದವರು. ಇವರು ಆಸ್ತಿಕರೊಂದಿಗೂ ಬೆರೆಯುತ್ತಾರೆ, ನಾಸ್ತಿಕರೊಂದಿಗೂ ಬೆರೆಯುತ್ತಾರೆ. ಆದರೆ ಯಾವುದೋ ಒಂದು ಶಕ್ತಿಯನ್ನು ಬಲವಾಗಿ ನಂಬುತ್ತಾರೆ.

೭. **ಸತ್ಯವಿಚಾರಗಳ ಶೋಧನೆಯೇ ವಿಚಾರವಾದಿಗಳ ಗುರಿ**: ಪ್ರಾಚೀನವಾದುದು ಅಥವಾ ಧರ್ಮ ಅಧ್ಯಾತ್ಮದಲ್ಲಿ ಹೇಳಿದುದೆಲ್ಲವೂ ಅವೈಜ್ಞಾನಿಕವೆಂಬ ಪೂರ್ವಗ್ರಹ ಪೀಡನೆಯಿಂದ ವಿಚಾರವಾದಿಗಳು ಹೊರಬರಬೇಕು. ಪ್ರಾಚೀನವೇ ಆಗಿರಲಿ, ಯೋಗವೇ ಆಗಿರಲಿ, ವೇದ, ಉಪನಿಷತ್, ಗೀತೆ, ಕುರಾನ್, ಪುರಾಣ, ಬೈಬಲ್, ತ್ರಿಪಿಟಕವೇ ಆಗಿರಲಿ – ಅದು ಮತಧರ್ಮದ ಗ್ರಂಥ, ಆಧ್ಯಾತ್ಮಿಕವಾದುದು ಎಂಬ ಒಂದೇ ಒಂದು ಪೂರ್ವಗ್ರಹ ಪೀಡನೆಯ ವಿಚಾರಗಳನ್ನು ಬಿಟ್ಟು ಅದರಲ್ಲಿ ವಸ್ತುನಿಷ್ಠ, ಸತ್ಯನಿಷ್ಠ, ವೈಜ್ಞಾನಿಕ ಹಾಗೂ ಪ್ರಾಮಾಣ್ಯಬದ್ಧ ಸತ್ಯವಿದ್ದು ಅದು ಸಮಾಜವನ್ನು ಶೋಷಿಸದೆ, ಭೇದಮಾಡದೆ, ಲಿಂಗ, ಜಾತಿ, ವರ್ಗಗಳ ತಾರತಮ್ಯ ಮಾಡದೆ ಸಮಾಜಕ್ಕೆ ಹಿತವಾದ ಅಂಶಗಳಿದ್ದುದೇ ಆದರೆ ಅಂಥ ವಿಚಾರಗಳನ್ನು ಹೃದಯಪೂರ್ವಕವಾಗಿ ಒಪ್ಪುವುದು ವಿಚಾರವಾದಿಗಳ ಪರಮ ಕರ್ತವ್ಯವಾಗಿದೆ. ವಿಚಾರವಾದಿ ಎಂದರೆ ಆತ ಈಶ್ವರವಾದಿಯೇ ಆಗಿರಲಿ (ಆಸ್ತಿಕ), ಸಂಶಯವಾದಿಯೇ ಆಗಿರಲಿ (ಎಗ್ನೋಸ್ಟಿಕ್) ಅಥವಾ ನಿರೀಶ್ವರವಾದಿಯಾಗಿರಲಿ (ನಾಸ್ತಿಕ) ಎಲ್ಲವನ್ನೂ ಕಾರ್ಯಕಾರಣ ಸಂಬಂಧದ ಆಧಾರದ ಮೇಲೆ ಪ್ರಶ್ನಿಸಿ, ವಿಚಾರಿಸಿ, ವಸ್ತುನಿಷ್ಠ ಸತ್ಯದ ಒರೆಗಲ್ಲಿಗೆ ಹಚ್ಚಿ ಸತ್ಯವನ್ನು ಶೋಧಿಸುವ, ಜಾತಿ-ಧರ್ಮ- ದೇವರುಗಳ ಹೆಸರಿನಲ್ಲಿ ಭೇದ, ಶೋಷಣೆ, ಮೂಢನಂಬಿಕೆ, ಕಂದಾಚಾರಗಳಿಂದ ದೂರ ಉಳಿದವರೆಲ್ಲರೂ ವಿಚಾರವಾದಿಗಳು. ಅಂದರೆ ನಿಷ್ಪಕ್ಷಪಾತ ಸತ್ಯವಾದಿಯೇ ವಿಚಾರವಾದಿ. ಪೂರ್ವಗ್ರಹ ಪೀಡನೆ ಇದ್ದರೆ ಸಾಂಪ್ರದಾಯಿಕ ವಾದಿಗಳಿಗೂ ವಿಚಾರವಾದಿಗಳಿಗೂ ಯಾವ ವ್ಯತ್ಯಾಸವಿರದು.

೮. **ವೈಚಾರಿಕತೆ ಏಕೆ ಬೇಕು? ಅದರ ಲಾಭಗಳೇನು?** ವೈಚಾರಿಕತೆಯು ವಸ್ತುನಿಷ್ಠ ಸತ್ಯದ, ವಾಸ್ತವಿಕತೆಯ ನಿಜ ಜ್ಞಾನವನ್ನು ಕೊಡುವುದರಿಂದ ಜೀವನದಲ್ಲಿ ಮಹಾ ಧೈರ್ಯ ತುಂಬುತ್ತದೆ, ಸಮರ್ಥರನ್ನಾಗಿ ಮಾಡುತ್ತದೆ. ಸ್ವತಂತ್ರ ವ್ಯಕ್ತಿತ್ವ, ಪ್ರವೃತ್ತಿ, ಸ್ವಾಭಿಮಾನ, ಸ್ವಾವಲಂಬನೆ ಬೆಳೆಯಲು ಸಹಾಯ ಮಾಡುತ್ತದೆ. ಮಾನವ ಸಮಾನತೆಯ ಭಾವನೆಯು ಉಂಟಾಗುವುದರಿಂದ ಒಡೆಯ, ಜೀತ, ದಾಸ್ಯ, ವರ್ಗ ಭೇದ ಮನೋಭಾವವನ್ನು ಹೋಗಲಾಡಿಸಲು ಪೂರಕ ವಾತಾವರಣವನ್ನು ನಿರ್ಮಿಸುತ್ತದೆ. ಸಕಲ ಕಾರ್ಯಕ್ಕೆ ಪೂರಕ ಶಕ್ತಿಯನ್ನು ಕೊಡುತ್ತದೆ. ಸಾಧನೆಗೆ ಪೂರಕ ಚಿಂತನೆಯನ್ನು ಕೊಡುತ್ತದೆ. ವೈಜ್ಞಾನಿಕ ಮನೋಭಾವವನ್ನು, ಪ್ರಾಯೋಗಿಕ ಬುದ್ಧಿಯನ್ನು ಬೆಳೆಸುವಲ್ಲಿ ಮೂಲ ಅಡಿಪಾಯವೇ ವೈಚಾರಿಕತೆಯಾಗಿದೆ. ವೈಚಾರಿಕ ಬುದ್ಧಿಯು ಪ್ರತಿಯೊಂದನ್ನೂ ವಸ್ತುನಿಷ್ಠವಾಗಿ ಪ್ರಶ್ನೆಯ ಒರೆಗಲ್ಲಿನಲ್ಲಿ ತಿಕ್ಕಿ ನೋಡುವುದರಿಂದ ಎಲ್ಲ ಕಂದಾಚಾರ, ಸಾಂಪ್ರದಾಯಿಕ ಮೌಢ್ಯಗಳನ್ನು ಹೋಗಲಾಡಿಸಲು ಪ್ರಬಲವಾದ ಸಾಧನದಂತೆ ಕೆಲಸಮಾಡುತ್ತದೆ. ಯಾವುದೇ ಮಹಾ ವ್ಯಕ್ತಿ ಹೇಳಿದನೆಂದಾಗಲೀ, ಯಾವುದೋ ಪವಿತ್ರ ಗ್ರಂಥದಲ್ಲಿ ಹೇಳಿದೆ ಎಂದಾಗಲಿ ಕಣ್ಮುಚ್ಚಿ ಒಪ್ಪುವ ದಾಸ್ಯಬುದ್ಧಿಯನ್ನು ಹೋಗಲಾಡಿಸಿ ಪ್ರತಿಯೊಂದನ್ನೂ ಪ್ರಶ್ನಿಸಿ ಸತ್ಯ ಅರಿತು ಒಪ್ಪುವ ಸ್ವತಂತ್ರ ಸಮರ್ಥ ಗುಣ ಬೆಳೆಯುತ್ತದೆ. ಕೀಳರಿಮೆಯನ್ನು ಹೋಗಲಾಡಿಸುತ್ತದೆ. ಆತ್ಮವಿಶ್ವಾಸವನ್ನು ಬೆಳೆಸುತ್ತದೆ. ಸತತ ಪ್ರಯತ್ನಕ್ಕೆ, ಯೋಗ್ಯಮಾರ್ಗ ಹುಮ್ಮಸ್ಸನ್ನು ಇಚ್ಛೆಯನ್ನು ಕೊಡುತ್ತದೆ. ಎಂಥವರೊಡನೆಯೂ ಚರ್ಚಿಸಲು, ವಾದಿಸಲು ಸಾಕಷ್ಟು ಜ್ಞಾನ ಕೊಡುತ್ತದೆ. ನಾವು ಏತಕ್ಕಾಗಿ ಜೀವಿಸಬೇಕು ಎಂಬ ಜೀವನ ಮೌಲ್ಯವನ್ನು ಹೆಚ್ಚಿಸುತ್ತದೆ, ಭ್ರಮಾ ಜೀವನದ ಮರೀಚಿಕೆಯ ಬೆನ್ನ ಏರದೆ, ದೂರೀಕರಿಸಿ ಜೀವನದ ನಿಜವಾದ ಅರ್ಥವನ್ನು ತಿಳಿಸುತ್ತದೆ, ಜೀವನದಲ್ಲಿ ತನ್ನ ಪ್ರಾಮುಖ್ಯತೆ, ತನ್ನ ಜವಾಬ್ದಾರಿಯನ್ನು ಹೆಚ್ಚಿಸುತ್ತದೆ. ಇಹ ಜೀವ-ಜೀವನ ಪ್ರೀತಿ, ಆಸೆ, ಆಕಾಂಕ್ಷೆ, ಮಹತ್ವವನ್ನು ಹೆಚ್ಚಿಸುತ್ತದೆ. ದೇವರು ಧರ್ಮ

ವೈರಾಗ್ಯವೆಂದು ವ್ಯರ್ಥ ಕಾಲಹರಣ ಮಾಡಿಸುವುದಿಲ್ಲ. ಸೇವೆ, ಕಾಣಿಕೆ, ಪೂಜೆ ಹರಕೆಯಿಂದ ಅಪವ್ಯಯವನ್ನು ತಡೆಯುತ್ತದೆ. ಪುಣ್ಯಗಳಿಕೆಯ ಹೆಸರಿನಲ್ಲಿ ಸುಲಭದಲ್ಲಿ ನಂಬಿ ವಂಚಿತರಾಗುವುದಿಲ್ಲ. ತನ್ನಂತೆ ಪರರೆಂದು ಕಂಡಾಗ ಕರುಣೆ, ಪ್ರೀತಿ, ಮಾನವೀಯತೆ, ಬಂಧುತ್ವ, ಸಮಾನತೆ ಬೆಳೆಯುತ್ತದೆ. ಪರಸ್ಪರ ಅರಿವು, ಸಹಾಯ, ಸಹಕಾರ, ಹೊಂದಾಣಿಕೆಯ ಪ್ರಜ್ಞೆ ಹೆಚ್ಚುತ್ತದೆ. ಉಚ್ಚನೀಚ ಭೇದವಿಲ್ಲದ ಸಮಾನ ಗೌರವಾದರವನ್ನು ಪುರಸ್ಕರಿಸುತ್ತದೆ. ಮಾನವ ಸಂಬಂಧ ಪ್ರೇಮಗಳನ್ನು ಸರಿಯಾಗಿ ಅರ್ಥಮಾಡಿಸಿಕೊಡುತ್ತದೆ. ತನ್ನ ಸಾಮಾಜಿಕ ಕರ್ತವ್ಯದ ಪ್ರಜ್ಞೆಯನ್ನು ಬೆಳೆಸುತ್ತದೆ. ವಿಶ್ವಬಂಧುತ್ವ, ಮನುಜಮತ, ಐಕ್ಯತಾಭಾವ, ಮಾನವ ಪ್ರೀತಿ ಹೆಚ್ಚುತ್ತದೆ. ಆಪತ್ಕಾಲದಲ್ಲಿ ಧೈರ್ಯಗೊಂಡು ಹೋರಾಡಲು ಉತ್ತೇಜಿಸುತ್ತದೆ. ರಾಷ್ಟ್ರಪ್ರೇಮದ ಜೊತೆಯಲ್ಲಿ ವಿಶ್ವಬಂಧುತ್ವ, ಸಮಾಜಪ್ರೇಮ ಬೆಳೆಸುತ್ತದೆ. ಜಾತಿ, ಮತ, ಲಿಂಗ-ಭೇದ ದ್ವೇಷಗಳನ್ನು ಬಿಟ್ಟು ನಿಜಮಾನವರಾಗುವಿರಿ. ಭ್ರಮಾಪರಕ್ಕಿಂತ ಇಹದ ಸತ್ಯಕರ್ಮಗಳಿಗೆ ಪ್ರಾಮುಖ್ಯತೆ ಕೊಡುತ್ತದೆ. ಭಾವನೆಗಿಂತ ಭೌತ, ಪ್ರಾಮಾಣ್ಯ, ವೈಜ್ಞಾನಿಕ ಸತ್ಯದ ನಂಬಿಕೆ ಹೆಚ್ಚುತ್ತದೆ. ದಾಂಪತ್ಯ ಜೀವನದಲ್ಲಿ ಸಮಾನತೆ ಪ್ರೀತಿ ಗೌರವ ಸಹಕಾರ ನೀಡುತ್ತದೆ. ಲಿಂಗ ಸಮಾನತೆಯಿಂದ ಸ್ತ್ರೀಗೆ ಗೌರವಾದರ ಕೊಡುವ ಬುದ್ಧಿ ಬೆಳೆಯುತ್ತದೆ. ತನ್ನಂತೆ ಇತರರನ್ನು ಕಾಣುವುದರಿಂದ ಸ್ವಾರ್ಥಬುದ್ಧಿ ಕಡಿಮೆ ಮಾಡುತ್ತದೆ. ಶಾಸ್ತ್ರ-ನಿಯಮ ಬದ್ಧತೆಗಿಂತ ಶಿಸ್ತುಬದ್ಧತೆ, ನ್ಯಾಯಬದ್ಧತೆ ಮುಖ್ಯವಾಗುತ್ತದೆ. ಒಂದೇ ಜನ್ಮವೆಂದಾಗ ಜೀವನ ಪ್ರೀತಿ ಹಾಗೂ ಜೀವನವನ್ನು ಹೆಚ್ಚು ಸುಖಕರವಾಗಿ ಮಾಡಿಸುತ್ತದೆ. ಮಂತ್ರ, ತಂತ್ರ, ಪೂಜೆ, ಭಜನೆ, ಪ್ರಾರ್ಥನೆ ಮೊದಲಾದ ಭಾವನಾ ಜೀವನದ ದಾಸ್ಯತ್ವದಿಂದ ಬಿಡುಗಡೆಗೊಳಿಸುತ್ತದೆ. ಜೀವನದ ನಿಜ ಗುರಿ, ಉದ್ದೇಶದ ಅರಿವಿನಿಂದಾಗಿ ಜೀವನದ ವಿಮುಖತೆ, ಶೂನ್ಯತೆ, ನಿರಾಶೆಯನ್ನು ಹೋಗಲಾಡಿಸುತ್ತದೆ. ಸೋಲಿಗೆ ವಿಧಿ, ಗ್ರಹಚಾರ, ಅದೃಷ್ಟವೆನ್ನದೆ ಸನ್ನಿವೇಶ, ಅಸಮರ್ಥತೆ ಮೊದಲಾದ ಕಾರ್ಯ ಕಾರಣ ಭಾವವನ್ನು ಹುಡುಕುತ್ತದೆ. ಎಲ್ಲರಿಗೂ ಸಮಬಾಳು ಸಮಪಾಲಿನ ಸಾಮಾಜಿಕ ಪ್ರಜ್ಞೆಯ ನಿಜ ಅರಿವಾಗುವುದು. ದೇವರು ಧರ್ಮದ ಹೆಸರಿನಲ್ಲಿ ನಡೆಯುವ ಶೋಷಣೆಯನ್ನು ತಡೆಯುತ್ತದೆ. ಲಂಚದ ಭ್ರಷ್ಟಾಚಾರದ ವಂಚನಾಮೂಲದ ಅರಿವಾಗುವುದು. ಸಿಕ್ಕಸಿಕ್ಕ ಠಕ್ಕರು, ಸನ್ಯಾಸಿ, ಅಯೋಗ್ಯರ ಕಾಲಿಗೆ ಬಿದ್ದು ದೇವರೆನ್ನುವುದಿಲ್ಲ. ಸಿಕ್ಕಸಿಕ್ಕ ಕಲ್ಲು, ಮೂರ್ತಿ, ಪ್ರಾಣಿ, ಮರ, ಸ್ವಾಮಿಗಳಿಗೆ ಪೊಡಮಡುವುದಿಲ್ಲ. ಮತದ್ವೇಷ, ಭಯೋತ್ಪಾದನೆ, ಮೂಲಭೂತವಾದಗಳನ್ನು ವಿರೋಧಿಸುತ್ತದೆ. ಬದಲಾವಣೆಯನ್ನು ಸ್ವಾಗತಿಸುವ ಬುದ್ಧಿ ಬೆಳೆಯುತ್ತದೆ. ಪ್ರಕೃತಿ ಪರಿಸರದ ಮಹತ್ವದ ಪ್ರಜ್ಞೆಯು ಉಂಟಾಗುವುದರಿಂದ ಪ್ರಕೃತಿ ವಿರೋಧ ಕೃತ್ಯಗಳನ್ನು ತಡೆಯುವುದು. ವೈಚಾರಿಕತೆ ಹಾಗೂ ವೈಜ್ಞಾನಿಕತೆಯು ಮಾನವನ ಜೀವನಕ್ಕೆ ಕೊಡುವ ಸತ್ ಕೊಡುಗೆ ಬೇರೆ ಇನ್ನಾವುದೂ ಕೊಡಲು ಸಾಧ್ಯವೇ ಇಲ್ಲ.

**೯. ಮೌಢ್ಯದಲ್ಲಿ ಕಾಣುವ ಸಂಘಟನೆ ವೈಚಾರಿಕತೆಯಲ್ಲಿ ಕಾಣದು ಏಕೆ?** ನಿಜ, ಮೂಢರಲ್ಲಿರುವ ಸಂಘಟನೆ ವಿಚಾರವಾದಿಗಳಲ್ಲಿ ಕಾಣುವುದಿಲ್ಲ. ಸಾಮಾನ್ಯವಾಗಿ ಮೂಢರು ಓರ್ವ ಬುದ್ಧಿವಂತನ ಕೆಳಗೆ ಸಂಘಟಿತರಾಗುತ್ತಾರೆ. ಆದರೆ ವಿಚಾರವಂತರು ಸಂಘಟಿತರಾಗುವುದು ಕಡಿಮೆ. ಸಂಘಟನೆಗೆ ಕಾರಣ ಅಗತ್ಯ, ಅನಿವಾರ್ಯತೆ ಹಾಗೂ ಸ್ವಾತಂತ್ರ್ಯ. ವಿಚಾರವಂತ ತನ್ನ ಜೀವನದ ಸಮಸ್ಯೆಗಳಲ್ಲಿ ಇತರರ ಮೇಲೆ ಅವಲಂಬಿತರಾಗುವುದು ಕಡಿಮೆ. ಕಾರಣ ತನ್ನ ಸಮಸ್ಯೆಗಳಿಗೆ ಅವನ ವೈಚಾರಿಕ ಬುದ್ಧಿ ದಾರಿಯನ್ನು ಹುಡುಕುತ್ತದೆ. ತನ್ನ ಸಮಸ್ಯೆಗೆ ತನಗಿಂತಲೂ ಇನ್ನೂ ಹೆಚ್ಚಿನ ಬುದ್ಧಿವಂತನ ಅಗತ್ಯ ಅನಿವಾರ್ಯತೆ ಅವನಿಗೆ ಕಾಣದು. ಹಾಗಾಗಿ ಅವನು ಜೀವನದಲ್ಲಿ ಸ್ವತಂತ್ರ ಹಾಗೂ ಸ್ವಾವಲಂಬಿಯಾಗಿದ್ದಾನೆ.

**೧೦. ಭಾರತದ ವಿಚಾರವಾದಿ ಸಂಘಗಳು:** ಜಗತ್ತಿನ ಜನಸಂಖ್ಯೆಯಲ್ಲಿಯ ೭೦೦ ಕೋಟಿ ಜನರಲ್ಲಿ ಈಗ ಸುಮಾರು ೧೧೦ ಕೋಟಿ ಜನರು ಧರ್ಮ ನಿರಪೇಕ್ಷಿತರು, ವಿಚಾರವಾದಿಗಳು, ನಾಸ್ತಿಕರು, ಯಾವುದೇ ದೇವರನ್ನು ಪೂಜಿಸದವರೆಂದು ಇತ್ತೀಚಿನ ಅಂಕೆಸಂಖ್ಯೆ ತಿಳಿಸುತ್ತದೆ. ಅಂದರೆ ಜನಸಂಖ್ಯೆಯಲ್ಲಿ ವಿಶ್ವದ ೩ನೇ ಸ್ಥಾನದಲ್ಲಿರುವ ಹಿಂದುಗಳ ಒಟ್ಟು ಸಂಖ್ಯೆ (೯೫ ಕೋಟಿ)ಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ವಿಚಾರವಾದಿ-ನಾಸ್ತಿಕರು ಇದ್ದರೂ ಅವರ ಸಂಘಟನೆ ಮಾತ್ರ ಬೆರಳೆಣಿಕೆಯಲ್ಲಿ ಇವೆ. ಭಾರತದಲ್ಲಿ ಸುಮಾರು ಎಂಟು ಕೋಟಿ ಜನರು ನಿರೀಶ್ವರವಾದಿಗಳು ಅಥವಾ ವಿಚಾರವಾದಿಗಳು ಎಂದು ಅಂಕಿ-ಸಂಖ್ಯೆ ಹೇಳುತ್ತದೆ. ಆದರೆ ವಿಚಾರವಾದಿಗಳ ಸಂಘಟನೆ ಎಲ್ಲಿದೆ ಎಂದು ಕೇಳಿದರೆ ಲೆಕ್ಕಮಾಡಲು ನಮ್ಮ ಬೆರಳುಗಳೇ ಸಾಕು. ವಿಚಾರವಾದಿಗಳ ಪ್ರಥಮ ಸಂಘಟನೆ ೧೯೪೯ರಲ್ಲಿ ಇಂಡಿಯನ್ ರ್‍ಯಾಶನಲಿಸ್ಟ್ ಅಸೋಸಿಯೇಶನ್ ಎಂದು ಮದ್ರಾಸಿನಲ್ಲಿ ಪ್ರಾರಂಭವಾಯಿತು. ಅನಂತರ ಅ… ದಿಲ್ಲಿಗೆ ವರ್ಗವಾಗಿ ಅಲ್ಲಿ ಕಾರ್ಯ ನಿರ್ವಹಿಸಿತು. ೧೯೯೫ರಲ್ಲಿ ದಿಲ್ಲಿಯಲ್ಲಿ ರ್‍ಯಾಶನಲಿ… ಇಂಟರ್‌ನ್ಯಾಶನಲ್ ಎಂದು ಸ್ಥಾಪಿಸಲಾಯಿತು. ೧೯೯೭ರಲ್ಲಿ ಫೆಡರೇಷನ್ ಆ… ಇಂಡಿಯನ್ ರ್‍ಯಾಶನಲ್ ಅಸೋಸಿಯೇಶನ್ ಎಂದು ವಿಚಾರವಾದ ಸಂಘಗಳ ಒಂದ… ಒಕ್ಕೂಟವನ್ನು ಸ್ಥಾಪಿಸಲಾಯಿತು. ಅದರ ಕೆಳಗೆ ಇಂದು ಭಾರತದ ವಿ… ಪ್ರದೇಶದಿಂದ ಸುಮಾರು ೭೦ ವಿಚಾರವಾದಿ ಸಂಸ್ಥೆಗಳು ನೋಂದಣಿಗೊಂಡಿ… ಅದರಲ್ಲಿ ನಮ್ಮ 'ಅಖಿಲ ಕರ್ನಾಟಕ ವಿಚಾರವಾದಿ ಸಂಘ'ವೂ ಒಂದು. ಆದರೆ ಈ ವಿ… ವಿಚಾರವಾದಿ ಸಂಘಗಳು ನಿರೀಕ್ಷಿತ ಮಟ್ಟದಲ್ಲಿ ಬೆಳೆಯಲೇ ಇಲ್ಲ. ಕೆಲವು ಮಾ… ಉಸಿರಾಡುತ್ತಿವೆ ಹಾಗೂ ಮಾತನಾಡುತ್ತಿವೆ. ಕೆಲವಂತೂ ಕೇವಲ ಉಸಿರಾಡುತ್ತಿ… ಮಾತನ್ನೂ ಕೂಡ ಆಡದ ಪರಿಸ್ಥಿತಿಯಲ್ಲಿವೆ. ಕೆಲವಕ್ಕೆ ಉಸಿರೇ ಇಲ್ಲ. ಇ… ಅಬ್ಬರಿಸುವುದೆಲ್ಲಿಂದ ಬಂತು.

**೧೧. ಅಖಿಲ ಕರ್ನಾಟಕ ವಿಚಾರವಾದಿ ಸಂಘ, ಬೆಂಗಳೂರು:** ಕರ್ನಾಟಕದ… ವಿಚಾರವಾದಿ ಸಂಘಟನೆ ಹಾಗೂ ಚಳವಳಿ ನಡೆದುದು ಕಡಿಮೆ. ಬಹುತೇಕ ಅದ… ದಕ್ಷಿಣ ಕನ್ನಡ ಜಿಲ್ಲೆಗೆ ಸೀಮಿತವಾಗಿ ಚಟುವಟಿಕೆಗಳು ನಡೆಯುತ್ತಿದ್ದವು. ಈಗಲೂ ಅ… ಅದು ಮುಂದುವರಿದಿದೆ. ಪವಾಡಗಳ ರಹಸ್ಯ ಬಯಲು ಕಾರ್ಯಕ್ರಮಗಳು ಹೆಚ… ಪ್ರಧಾನವಾಗಿರುತ್ತವೆ. ಕರ್ನಾಟಕದ ಇತರ ಕಡೆ ವಿಚಾರವಾದದ ಸಂಘಟನೆಗಳ… ಇವೆಯೆ ಎನ್ನುವುದೇ ಗೊತ್ತಿಲ್ಲ. ಇಂತಹ ಪರಿಸ್ಥಿತಿಯಲ್ಲಿ ೨೦೦೭ರಲ್ಲಿ ಕೆಲವ… ವಿಚಾರವಾದಿಗಳು ಸಭೆ ಸೇರಿ ಬೆಂಗಳೂರಿನಲ್ಲಿ ಒಂದು ವಿಚಾರವಾದಿ ಅಥವಾ ನಾಸ್ತಿ… ಮಾನವತಾವಾದಿ ಸಂಘವನ್ನು ಸ್ಥಾಪಿಸಬೇಕೆಂದು ಚರ್ಚಿಸಿದರು. ಮುಂದೆ ಅಕ್ಟೋಬರ… ೨೦೦೭ರಲ್ಲಿ ಅದಕ್ಕೊಂದು ಸಂಘಟನೆಯ ರೂಪವನ್ನು ಕೊಟ್ಟು ನಿಯಮಾವಳಿಯನ್ನ… ಕ್ರೋಡೀಕರಿಸಿ 'ವಿಚಾರವಾದ ಸಂಘ, ಬೆಂಗಳೂರು' ಎಂದು ಸ್ಥಾಪಿಸಲಾಯಿತು. ಆದ… ಕರ್ನಾಟಕ ರಾಜ್ಯದ ವ್ಯಾಪ್ತಿಯಲ್ಲಿ ಅದನ್ನು ಬೆಳೆಸಬೇಕೆಂಬ ಉದ್ದೇಶದಿಂದ ೨೦೦೮ರ… ಆ ಸಂಘವನ್ನು ವ್ಯಾಪಕವಾದ ಹೊಸ ನಿಯಮಾವಳಿಯ ಕೆಳಗೆ ''ಅಖಿಲ ಕರ್ನಾಟ… ವಿಚಾರವಾದಿ ಸಂಘ''ವೆಂಬ ನಾಮಕರಣದಿಂದ ಕಟ್ಟಲಾಯಿತು. ಕಳೆದ ಎರಡ… ವರ್ಷಗಳಿಂದ ಪ್ರತಿ ತಿಂಗಳು ವಿಚಾರವಾದಿಗಳ ತಿಂಗಳ ಸಭೆ ಕರೆದು ವಿವಿಧ ಖ್ಯಾ… ವಿಚಾರವಾದಿಗಳು, ವಿಮರ್ಶಕರು, ಸಾಹಿತಿಗಳು, ವಿಜ್ಞಾನಿಗಳನ್ನು ಕರ… ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ಇದರಿಂದ ವಿಚಾರವಾದಿಗಳು ಕನಿ… ತಿಂಗಳಿಗೊಮ್ಮೆಯಾದರೂ ಒಟ್ಟಿಗೆ ಸೇರುವ, ವಿಚಾರ ವಿನಿಮಯಗಳನ್ನು ಮಾಡುವ… ಸಮಸ್ಯೆಗಳಿಗೆ ಸ್ಪಂದಿಸುವ ಒಂದು ಪ್ರಯತ್ನವನ್ನು ಯಶಸ್ವಿಯಾಗಿ ಮಾಡಿಕೊಂಡ… ಬರಲು ಸಾಧ್ಯವಾಗಿದೆ. ಪ್ರತಿ ತಿಂಗಳು ಒಂದು ಉಪನ್ಯಾಸ ಕಾರ್ಯಕ್ರಮಕ್ಕಾ… ಯಾದರೂ ಸೇರುತ್ತಿರುವುದರಿಂದ ಸಂಘವು ಗಟ್ಟಿಯಾಗಿ ಉಸಿರಾಡುತ್ತಿದೆ ಹಾಗ… ಜೋರಾಗಿ ಮಾತನಾಡುತ್ತಿದೆ. ಸಂಘವು ಯಾವುದೋ ಉದ್ದೇಶಕ್ಕಾಗಿ ಒಮ್ಮೆ ಕೂ… ಘರ್ಜಿಸಿ ಅಬ್ಬರ ಮಾಡಿ ತಣ್ಣಗಾಗಬಾರದು. ಅದು ಸತತ ಉಸಿರಾಡಬೇಕು… ಮಾತನಾಡಬೇಕು. ಈ ರೀತಿಯಲ್ಲಿ ಸತತ ಉಸಿರಾಡುವ ಮಾತನಾಡು… ಕಾರ್ಯಕ್ರಮಗಳನ್ನು ಸತತವಾಗಿ ನಡೆಸಬೇಕು. ಆಗ ಮಾತ್ರ ಸಂಘಟನೆಯ… ಉಳಿಯುವುದು, ಬೆಳೆಯುವುದು. ಅಖಿಲ ಕರ್ನಾಟಕ ವಿಚಾರವಾದಿ ಸಂಘವು ಈ… ನೋಂದಣಿಗೊಂಡು ಅದಕ್ಕೆ ವ್ಯಾಪಕವಾದ, ಸುವ್ಯವಸ್ಥಿತವಾದ ಸಂವಿಧಾನಾತ್ಮ… ಸಂರಚನೆ ಇದೆ. ಯಾವುದೇ ವಿಚಾರವಾದಿಗಳ ಒಂದು ಘಟಕಕ್ಕೆ ಉದಾಹರಣೆಗೆ… ರಾಜ್ಯ ಘಟಕಕ್ಕೆ ಸದಸ್ಯನಾದರೆ ಉಳಿದ ಮೂರು ಘಟಕವಾದ ಜಿಲ್ಲೆ, ತಾಲ್ಲೂಕು… ಹಾಗೂ ಕ್ಷೇತ್ರೀಯ ಘಟಕಗಳಿಗೂ ಏಕಕಾಲಕ್ಕೆ ತಾನೇ ತಾನಾಗಿ ಸದಸ್ಯನಾಗುತ್ತಾ… ಸ್ಥಳೀಯ ಸ್ವತಂತ್ರವಾದ ವಿಚಾರವಾದಿ ಸಂಘಗಳು ಕೂಡ ಸ್ವತಂತ್ರವಾಗಿ ಮತ… ಒಕ್ಕೂಟದ ಸದಸ್ಯತ್ವದಂತೆಯೂ ಕಾರ್ಯ ನಿರ್ವಹಿಸುವ ಅವಕಾಶವೂ ಇದ… ವಿಚಾರವಾದಿಗಳು ತಮಗೇನೂ ಸಂಘಟನೆಯ ಅವಶ್ಯವಿಲ್ಲವೆಂದು ನಿರ್ಲಿಪ್ತವಾ… ಕುಳಿತುಕೊಳ್ಳದೆ ಈ ಅಖಿಲ ಕರ್ನಾಟಕ ವಿಚಾರವಾದಿ ಸಂಘಕ್ಕೆ ರಾಜ್ಯ, ಜಿಲ್ಲೆ… ತಾಲ್ಲೂಕು ಹಾಗೂ ಕ್ಷೇತ್ರೀಯ ಘಟಕಗಳಿಗೆ ಏಕಕಾಲದಲ್ಲಿ ಸದಸ್ಯರಾ… ಸಂಘಟನೆಯನ್ನು ಬಲಪಡಿಸಬೇಕೆಂದು ವಿನಂತಿಸಲಾಗಿದೆ.

**ಎ. ಎಸ್. ನಟರಾಜ್**
ಅಧ್ಯಕ್ಷರು, ಅಖಿಲ ಕರ್ನಾಟಕ ವಿಚಾರವಾದಿ ಸಂಘ (ರಿ)
ನಂ. ೪೩, 'ರೋಹಿಣಿ', ೫ನೇ ಮುಖ್ಯರಸ್ತೆ, ಪದ್ಮನಾಭನಗರ
ಬೆಂಗಳೂರು - ೫೬೦ ೦೭೦




# ತಿಳಿವು = ತಿಳಿದದ್ದು + ತಿಳಿಯುವವನು

**ತಿ**ಳಿವು ಅಥವಾ ಜ್ಞಾನ ಚೈತನ್ಯದ ಮುಖ್ಯ ಲಕ್ಷಣ. ಭೌತವಾದಕ್ಕೂ ಚೇತನಾವಾದಕ್ಕೂ ಇರುವ ದೊಡ್ಡ ಸವಾಲೆಂದರೆ ಒಬ್ಬರು ಇನ್ನೊಂದನ್ನು ಹೇಗೆ ವಿವರಿಸುತ್ತಾರೆ ಎನ್ನುವುದು. ಚೇತನ-ಅಚೇತನಗಳಲ್ಲಿ ಯಾವುದರಿಂದ ಯಾವುದು ಹುಟ್ಟಿತು ಎನ್ನುವುದಷ್ಟೆ ಮುಖ್ಯವಲ್ಲ, ಅವುಗಳು ಹಾಗೂ ಅವುಗಳ ಪರಸ್ಪರ ಸಂಬಂಧ ಮತ್ತು ಅದರಿಂದಾಗುವ ಬೆಳವಣಿಗೆಯು ಜ್ಞಾನ ಮೀಮಾಂಸೆಯಲ್ಲಿ ಮುಖ್ಯ. ಲೋಕಾಯತ ವಾದಗಳನ್ನು ನಾಲ್ಕು ಎಂದು ಪರಂಪರೆ ಗುರುತಿಸುತ್ತದೆ. ಅವು ದೇಹಾತ್ಮವಾದ, ಇಂದ್ರಿಯಾತ್ಮವಾದ, ಪ್ರಾಣಾತ್ಮವಾದ ಮತ್ತು ಮನೋ ಆತ್ಮವಾದ. ಜಡವಾದ ಭೂತಪ್ರಪಂಚಕ್ಕಿಂತ ಇವು ಹೆಚ್ಚು ಸೂಕ್ಷ್ಮವಾಗುತ್ತಾ ಹೋಗುವುದನ್ನು ಗಮನಿಸಬೇಕು. ಹಾಗೆಯೆ ಸೂಕ್ಷ್ಮವಾದದ್ದು ಸ್ಥೂಲವಾದದ್ದರ ಮೇಲೆ ಪರಿಣಾಮ ಬೀರಬಹುದಾಗಿರುತ್ತದೆ. ನಮ್ಮ ದೇಶದಲ್ಲಿ ವೈಶೇಷಿಕರು ಮನಸ್ಸು, ಪೃಥ್ವಿ ಮುಂತಾದವುಗಳಂತೆ ಅಣುರೂಪೀ ಎಂದೂ ಆತ್ಮ, ಆಕಾಶದಂತೆ ವಿಭು ಎಂದೂ ಇವೆಲ್ಲವನ್ನೂ ಸಮಾನವಾಗಿ ದ್ರವ್ಯಗಳೆಂದು ಪರಿಗಣಿಸಿತು. ಮತ್ತು ಇದೆಲ್ಲವೂ ತಿಳಿಯಬಹುದಾದವು – ಜ್ಞೇಯ. ಇದಕ್ಕೆ ಪ್ರತಿಯಾಗಿ ವೇದಾಂತಿಗಳ ದೇವರು 'ಅಣೋರಣೀಯಾನ್ ಮಹತೋ ಮಹೀಯಾನ್' ಆದ.

ತಿಳಿಯುವವನು ಮತ್ತು ತಿಳಿಯುವುದು ಎಂಬ ಎರಡನ್ನು ಸ್ವತಂತ್ರ ದ್ರವ್ಯಗಳೆನ್ನದೆ ಒಂದೇ ದ್ರವ್ಯದ ಸಂತತ ಧಾರೆ ಎಂಬ ನಿಲುವು ಸಾಂಖ್ಯ ದರ್ಶನದ್ದು. ಹೊರಗಿನ ಜಡವಸ್ತು ಪ್ರಪಂಚ, ಅದನ್ನು ತಿಳಿಯುವ ಇಂದ್ರಿಯಗಳು, ಹಲವು ತಿಳುವಳಿಕೆಗಳನ್ನು ಒಗ್ಗೂಡಿಸುವ ಮನಸ್ಸು, ಅದರಿಂದ ಕೆಲಸಕ್ಕೆ ತೊಡಗಿಸುವ ಪ್ರಾಣ ಇವೆಲ್ಲವೂ ಒಂದೇ ದ್ರವ್ಯದ ಹೊರಚಾಚುಗಳು ಎನ್ನುತ್ತದೆ ಸಾಂಖ್ಯ. ಮನಸ್ಸಿನ ಹಿಂದೆ ಅಹಂಕಾರವೂ ಆ ಅಹಂಕಾರದ ಮೂಲಕ ಬೇಕು ಬೇಡ ಎಂದು ನಿಶ್ಚಯಿಸುವ ಬುದ್ಧಿಯೂ (ಅದಕ್ಕೆ ಮಹತ್ ಎಂದು ಇನ್ನೊಂದು ಹೆಸರು) ಇರುತ್ತವೆ. ಇವೆಲ್ಲವೂ ತ್ರಿಗುಣಗಳಿಂದ ಕೂಡಿದವೇ. ತಿಳಿವು ಎಂಬ ಒಳಹರಿವು, ಕೆಲಸವೆಂಬ ಹೊರ ಹರಿವು ಮನೋದೇಹಗಳಲ್ಲಿ ಸದಾ ನಡೆಯುತ್ತಿರುತ್ತದೆ.

ತಿಳಿಯುವವನು ಮತ್ತು ತಿಳಿಯುವುದು ಎಂಬ ಎರಡನ್ನು ಸ್ವತಂತ್ರ ದ್ರವ್ಯಗಳೆನ್ನದೆ ಒಂದೇ ದ್ರವ್ಯದ ಸಂತತ ಧಾರೆ ಎಂಬ ನಿಲುವು ಸಾಂಖ್ಯ ದರ್ಶನದ್ದು. ಹೊರಗಿನ ಜಡವಸ್ತು ಪ್ರಪಂಚ, ಅದನ್ನು ತಿಳಿಯುವ ಇಂದ್ರಿಯಗಳು, ಹಲವು ತಿಳುವಳಿಕೆಗಳನ್ನು ಒಗ್ಗೂಡಿಸುವ ಮನಸ್ಸು, ಅದರಿಂದ ಕೆಲಸಕ್ಕೆ ತೊಡಗಿಸುವ ಪ್ರಾಣ ಇವೆಲ್ಲವೂ ಒಂದೇ ದ್ರವ್ಯದ ಹೊರಚಾಚುಗಳು ಎನ್ನುತ್ತದೆ ಸಾಂಖ್ಯ. ಮನಸ್ಸಿನ ಹಿಂದೆ ಅಹಂಕಾರವೂ ಆ ಅಹಂಕಾರದ ಮೂಲಕ ಬೇಕು ಬೇಡ ಎಂದು ನಿಶ್ಚಯಿಸುವ ಬುದ್ಧಿಯೂ ಇರುತ್ತವೆ. ಇವೆಲ್ಲವೂ ತ್ರಿಗುಣಗಳಿಂದ ಕೂಡಿದವೇ. ತಿಳಿವು ಎಂಬ ಒಳಹರಿವು, ಕೆಲಸವೆಂಬ ಹೊರಹರಿವು ಮನೋದೇಹಗಳಲ್ಲಿ ಸದಾ ನಡೆಯುತ್ತಿರುತ್ತದೆ.

ತಿಳಿಯಬೇಕಾದದ್ದು ವಿಷಯ, ತಿಳಿದುಕೊಂಡದ್ದು ವಿಷಯೀ ಎಂದೂ ಒಂದು ವಿಭಾಗ. ಕಣ್ಣು ಎಂಬ ಇಂದ್ರಿಯಕ್ಕೆ ಬೆಳಕಿನ ಸೂಕ್ಷ್ಮ (ತನ್ಮಾತ್ರ) ರೂಪವೇ ವಿಷಯ. ಇಂದ್ರಿಯ ಮನಸ್ಸಿಗೆ, ಮನಸ್ಸು ಅಹಂಕಾರಕ್ಕೆ, ಇವೆಲ್ಲವೂ ಬುದ್ಧಿ/ಮಹತ್‌ಗೆ ವಿಷಯ. ಮಹತ್, ಅಹಂಕಾರ, ಮನಸ್ಸುಗಳೇ ಪ್ರಾಣರೂಪವಾಗಿ ದೇಹದಲ್ಲಿ ಹರಿದು ಇಂದ್ರಿಯಗಳ ಮುಖೇನ ವಿಷಯ ತಿಳಿಯುವುದರಿಂದ ವಿಷಯಕ್ಕೆ ಕ್ಷೇತ್ರ (ಹೊಲ) ಎಂದು ಹೆಸರು. ಇದನ್ನು ತಿಳಿಯುವವನು ಕ್ಷೇತ್ರಜ್ಞ (ಹೊಲೆಯ ?). ಮನಸ್ಸು (+ಬುದ್ಧಿ+ಅಹಂಕಾರ) ತನ್ನನ್ನೂ ತಾನು ತಿಳಿಯುವುದರಿಂದ ಅದು ವಿಷಯ ವಿಷಯೀ ಎರಡೂ ಹೌದು. ಇದರ ಮೂಲವೇ ಪ್ರಕೃತಿ ಅಥವಾ ಪ್ರಧಾನ. ಸಾಂಖ್ಯ ತತ್ವ ಮನೋದೈಹಿಕ ಪ್ರಪಂಚವನ್ನು ಒಟ್ಟಾಗಿ ಹೇಳಿದರೆ, ಇದರ ಜೋಡು ಶಾಸ್ತ್ರ ಯೋಗ ಮನಸ್ಸು, ಅಹಂಕಾರ, ಬುದ್ಧಿ ಸೇರಿದ ಚಿತ್ತದ ಬಗ್ಗೆ ಹೇಳುತ್ತದೆ. ಸಾಂಖ್ಯ-ಯೋಗ, ವೇದಾಂತ ದರ್ಶನಗಳಲ್ಲಿ ಮನಸ್ಸು ಮುಂತಾದವನ್ನು ತಿಳಿಯಬಹುದಾದ್ದರಿಂದ ಅದನ್ನು ತಿಳಿಯುವ 'ಪುರುಷ/ ಆತ್ಮ' ಇನ್ನೊಬ್ಬನಿದ್ದಾನೆಂದು, ಅವನೇ 'ಕ್ಷೇತ್ರಜ್ಞ' ಎಂದಿದೆ. ಆದರೆ ಅವನು ತಿಳಿಯುವವನು ಮಾತ್ರ, ಅವನಲ್ಲಿ ಕೆಲಸದ ಹಂಗಿಲ್ಲ. ತಿಳಿದು ನಡೆಯುವವನು ಮನಸ್ಸು-ಅಹಂಕಾರ-ಬುದ್ಧಿಯ ಕರ್ಮಪುರುಷನೇ. ಸುಶ್ರುತನೂ ಸಹ ಚಿಕಿತ್ಸೆಗೆ ಅಧಿಕಾರಿ (ಏನಾದರು ಮಾಡುವುದು) ಈ ಕರ್ಮಪುರುಷನೇ ಎನ್ನುತ್ತಾನೆ.

ಭಗವದ್ಗೀತೆಯ ೧೩ನೆಯ ಅಧ್ಯಾಯ ಕ್ಷೇತ್ರ ಕ್ಷೇತ್ರಜ್ಞ ಯೋಗವೇ. ಅದರ ಮೊದಲಿಗೆ ಕೃಷ್ಣ ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೆ ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದುಃ (೧); ಈ ಶರೀರವೇ ಕ್ಷೇತ್ರ, ಇದನ್ನು ತಿಳಿದವನೇ ಕ್ಷೇತ್ರಜ್ಞ ಎಂದು ಮುಂದಿನ ಶ್ಲೋಕದಲ್ಲಿ ಕ್ಷೇತ್ರ. ಕ್ಷೇತ್ರಜ್ಞರ ಜ್ಞಾನವೇ ನಿಜವಾದ ಜ್ಞಾನ ಎನ್ನುತ್ತಾನೆ. (ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತತ್ ಜ್ಞಾನಂ ಮತಂ ಮಮ) (೨). ಆ ಜ್ಞಾನವನ್ನು ಒಟ್ಟು ಮಾಡಿ ಹೇಳುತ್ತೇನೆ ಕೇಳು – ತತ್ ಸಮಾಸೇನ ಮೇ ಶೃಣು (೩) ಎಂದು ಹೇಳುವುದು ಸಾಂಖ್ಯ ತತ್ವವನ್ನೆ. ಅದರಲ್ಲಿ 'ಹೊರ ಪ್ರಪಂಚದ ೫ ಮಹಾಭೂತಗಳು, ಒಳಗಿನ ನನ್ನತನ/ ಅಹಂಕಾರ, ಅದರ ಹಿಂದಿನ ಬುದ್ಧಿ, ಅದರ ಹಿಂದಿನ ಅವ್ಯಕ್ತ (ಪ್ರಧಾನ), ೧೧ ಇಂದ್ರಿಯಗಳು, ೫ ಜ್ಞಾನೇಂದ್ರಿಯ, ೫ ಕರ್ಮೇಂದ್ರಿಯ ಮತ್ತು ಮನಸ್ಸು ಅಲ್ಲದೆ ವ್ಯಕ್ತಿತ್ವದ ಅಂಶಗಳಾದ ಇಚ್ಛಾ, ದ್ವೇಷ, ಸುಖ, ದುಃಖ, ಇವುಗಳ ಮೊತ್ತ **ಚೇತನಾ** ಮತ್ತು ಧೃತಿ ಎಲ್ಲ ಸೇರಿ ಕ್ಷೇತ್ರ' ಎಂದು ಚುಟುಕದಲ್ಲಿ ವಿವರಿಸಿದ್ದಾನೆ.

ಈ ಜ್ಞಾನದ ಪರಂಪರೆ ಹೇಳುವಲ್ಲಿ ವೇದದಲ್ಲಿಯೇ ಇದರ ಮೂಲವಿದೆ ಎಂದು ಹೇಳುವುದು ಸ್ವಾರಸ್ಯಕರ ಸಂಗತಿ. ಇದು ತಿಳುವಳಿಕೆಯ ಬೆಳವಣಿಗೆಯನ್ನೂ ಗುರುತಿಸುತ್ತದೆ. ಕೃಷ್ಣ ಹೇಳುವುದು ಋಷಿಭಿರ್ಬಹುಧಾ ಗೀತಂ



ಭನ್ನೋಭಿರ್ಬಹುಧಾ ಪೃಥಕ್। ಬ್ರಹ್ಮಸೂತ್ರಪದನ್ಯಾಸೈಃ ಹೇತುಮದ್ಭಿರ್ವಿನಿಶ್ಚಿತೈಃ॥ ಎಂದು. ಇಲ್ಲಿ ವೇದದಲ್ಲಿ ಹಲವು ಕಡೆ, ಬೇರೆ ಬೇರೆಯಾಗಿ ಬಹು ವಿಧದಲ್ಲಿ ಇದನ್ನು ಹೇಳಿದೆ ಎಂದಿದ್ದಾನೆ. ವೇದದ ಸ್ವರೂಪವೇ ಬಹುಮುಖೀತ್ವ ಎನ್ನುವುದೂ ಇದರಿಂದ ಸ್ಪಷ್ಟ. ಆದರೆ ಹೀಗೆ ಹಲವು ವಿಧದಲ್ಲಿರುವುದನ್ನು ಏಕಾಕಾರಕ್ಕೆ ತರುವ ಪ್ರಯತ್ನವೂ ಪುರಾತನವಾದದ್ದೆ. ಅದಕ್ಕೆ ಕಾರಣಗಳ ಬಳಕೆ. ಇಲ್ಲಿ ಬ್ರಹ್ಮಸೂತ್ರದ ಪದಗಳಲ್ಲಿ ಹೀಗೆ ನಿಶ್ಚಯಿಸಿದೆ ಎಂದಿದೆ. ಬ್ರಹ್ಮಸೂತ್ರ ಎಂದರೆ ಆ ಹೆಸರಿನ ಪ್ರಸ್ಥಾನ ಗ್ರಂಥ ಎಂದು ಕೆಲವರು, ಉಪನಿಷತ್ತುಗಳೆಂದು ಕೆಲವರು ಅರ್ಥಮಾಡಿದ್ದಾರೆ. ಬ್ರಹ್ಮಸೂತ್ರ ಗ್ರಂಥದಲ್ಲಿ ಶಾಸ್ತ್ರ ಬೇರೆಬೇರೆ ಹೇಳಿದ್ದನ್ನು ಸಮನ್ವಯ ಮಾಡಿ ಅರ್ಥೈಸಬೇಕು (ತತ್ತು ಸಮನ್ವಯಾತ್) ಎಂದಿದೆ. ಆದರೆ ಆ ಸೂತ್ರಗಳಿಗೂ ಅರ್ಥ ಹೇಳುವಾಗ ದ್ವೈತ ಅದ್ವೈತ ಮುಂತಾಗಿ ನಿಲುವುಗಳೂ, ಜ್ಞಾನ ಮುಖ್ಯ, ಜ್ಞಾನ ಕರ್ಮಗಳೆರಡೂ ಮುಖ್ಯ ಮುಂತಾಗಿ ಬೇರೆ ಬೇರೆ ನಿಲುವುಗಳಿವೆ. ಜ್ಞಾನರಾಶಿ ಬೆಳೆದಂತೆಲ್ಲ, ಸಮಸ್ತ ಮತ್ತು ವ್ಯಸ್ತವಾಗಿ ಎಂದರೆ ಒಟ್ಟಾಗಿ ಮತ್ತು ಬಿಡಿಯಾಗಿ ನೋಡುವುದು ಅನಿವಾರ್ಯ. ಜೀವ ಜಗತ್ತುಗಳ ವೈವಿಧ್ಯದಂತೆ ಅದರ ಜ್ಞಾನವೂ ವೈವಿಧ್ಯದಿಂದ ಕೂಡಿದ್ದು. ಯಾವ ಜ್ಞಾನ ವ್ಯವಸ್ಥೆಗೂ ಏಕಾಭಿಪ್ರಾಯ ಸಾಧ್ಯವಿಲ್ಲ. ಹಲವು ಅಭಿಪ್ರಾಯಗಳ ಸಂಶ್ಲೇಷಣ-ವಿಶ್ಲೇಷಣದಿಂದಲೇ ತಿಳುವಳಿಕೆ ಹೆಚ್ಚುವುದು, ಅದು ಜ್ಞಾನದ ಗತಿತಾರ್ಕಿಕತೆ. ೧೩ನೇ ಅಧ್ಯಾಯದಲ್ಲೆ ಸಾಂಖ್ಯ ಯೋಗಗಳ ಬಗ್ಗೆ ಹೇಳಿ ಇದನ್ನು ತಿಳಿದುಕೊಳ್ಳುವ ರೀತಿಗಳು ಹಲವು ಎಂದ. ಕೆಲವರು ಧ್ಯಾನದಿಂದ ತನ್ನಲ್ಲಿ ತಾನು ತಿಳಿದರೆ ಕೆಲವರು ಸಾಂಖ್ಯದಿಂದ ಯೋಗದಿಂದ, ಮತ್ತೆ ಕೆಲವರು ಕರ್ಮ ಯೋಗದಿಂದ ತಿಳಿಯುತ್ತಾರೆ. ಹೀಗೆ ತಿಳಿಯಲಾಗದವರು ಬೇರೆಯವರಿಂದ ಕೇಳಿಸಿಕೊಂಡು ಉಪಾಸನೆ ಮಾಡಿ ಸಾವನ್ನು ದಾಟುತ್ತಾರೆ' ಎನ್ನುತ್ತಾನೆ. (೧೩-೨೪, ೨೫) ವೇದದ ಅಭಿಪ್ರಾಯವು ಒಂದೇ ಅಲ್ಲ, ಅದನ್ನು ತಿಳಿಯಲು ಒಂದೇ ಮಾರ್ಗವಿಲ್ಲ ಅದನ್ನು ನೇರವಾಗಿ ಅಧ್ಯಯನ ಮಾಡಬೇಕೆಂದೇನಿಲ್ಲ! ಇದು ಭಗವದ್ಗೀತೆಯಲ್ಲಿ ಕೃಷ್ಣನೇ ಹೇಳಿದ್ದು. ಹಾಗಿಲ್ಲದೆ ವೇದಕ್ಕೆ ಏಕಾಭಿಪ್ರಾಯ ಮೂಡಿಸುವ ಬಹುಮುಖಿತ್ವಕ್ಕೆ ವಿರೋಧಿಸುವ ಧರ್ಮಾಂಧರು ನಮ್ಮ ಸಂಪ್ರದಾಯದ ವಿರೋಧಿಗಳು, ವೇದ ವಿರೋಧಿಗಳು. ಎಷ್ಟೆಂದರೂ ವೇದವೆಂದರೆ ಜ್ಞಾನವಲ್ಲವೆ ?

ಎಲ್ಲ ಕಾಲಕ್ಕೂ ವಿವಿಧಾಭಿಪ್ರಾಯಗಳನ್ನು ಹೇಳಿದಾಗ ಹೆದರಿ ಆತಂಕಪಡುತ್ತಾರೆ. ಅರ್ಜುನನೂ ಕೃಷ್ಣನಿಗೆ 'ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ' ಎಲ್ಲ ಬೆರಸಿ ನನಗೆ ಕನ್‌ಫ್ಯೂಜ್ ಮಾಡ್ತಿದ್ದೀಯೆ. 'ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಹಮಾಪ್ನುಯಾಮ್' ಒಳ್ಳೆಯದೊಂದೇ ಮಾತು ಹೇಳು ಎಂದ (೩-೨) ಕೃಷ್ಣ ಮತ್ತೆ ೧೬ ಅಧ್ಯಾಯ ಬೋಧನೆ ಮಾಡಿ ಕೊನೆಗೆ 'ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು'. ಎಲ್ಲ ವಿಮರ್ಶಿಸಿ ನಿನ್ನಿಚ್ಛೆಯಂತೆ ಮಾಡು ಎಂದ. ನಾವೂ ಕೇವಲ ಸಾಕ್ಷಿಯಾದ ಚೈತನ್ಯದ ಕಡೆ ಗಮನವೋ ಜ್ಞಾನ ಕರ್ಮಗಳೆರಡೂ ಇರುವ ಚೈತನ್ಯದ ಕಡೆಗೆ ಗಮನವೋ ಆರಿಸಿಕೊಳ್ಳಬಹುದು. ತಿಳುವಳಿಕಸ್ಥರು ಮಾತ್ರ ಆಯ್ಕೆ ಮಾಡಿಕೊಳ್ಳಬಲ್ಲರು. ನಮ್ಮ ಬಹುತೇಕ ದರ್ಶನಗಳಲ್ಲಿ ಹೇಳುವುದೂ ಜ್ಞಾನ ಒಂದು ವೃತ್ತಿ, ಸದಾ ಚಲನಶೀಲ ವಾದದ್ದು ಎಂದು. ಅದಕ್ಕೆ ಸ್ಥಗಿತ ಮಾದರಿಗಳು ಸಲ್ಲವು. ದರ್ಶನಗಳ ವೈವಿಧ್ಯತೆ ಆಯ್ಕೆಯ ಸ್ವಾತಂತ್ರ್ಯಗಳೇ ಒಂದು ಸಂಸ್ಕೃತಿಯ ತಿಳುವಳಿಕೆ ಮಟ್ಟದ ದ್ಯೋತಕಗಳು.

ಡಾ|| ಜೆ. ಶ್ರೀನಿವಾಸಮೂರ್ತಿ
ನಂ. ೩೫, ೩ನೇ ಅಡ್ಡರಸ್ತೆ, ಕೋದಂಡರಾಮಪುರ
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

**ಮುಂಗಾರು ಮಣ್ಣ ವಾಸನೆಗೆ**
**ಪುಳಕಿತನಾಗುವ ನಾನು**
**ನಡೆದಾಡುತ್ತಿರುವ ಮಣ್ಣು**

ಡಾ|| ಸಿ. ರವೀಂದ್ರನಾಥ್
ನಂ.೧೩೩, ೫ನೇ ಕ್ರಾಸ್, ೨ನೇ ಹಂತ
ಬೃಂದಾವನ ಬಡಾವಣೆ, ಮೈಸೂರು

## ತೊಟ್ಟಿಲು ತೂಗುವ ತಾಯಿಗೆ

ತೊಟ್ಟಿಲನು ತೂಗವ್ವ ತೊಟ್ಟಿಲನು ತೂಗು;
ಕನ್ನಡದ ತಾಯವ್ವ ತೊಟ್ಟಿಲನು ತೂಗು;
ಬದುಕು ಸಾಗುವ ವೇಗ, ವಿಸ್ಮಯಕೆ ಬಾಗು.

ಬಾಗುತ್ತ ತೂಗುತ್ತ ಸಾಂಗತ್ಯ ಕಲಿಸು;
ಕನ್ನಡವು ಬರಿ ಮಾತೆ ? ಏಕತೆಯ ಸೂತ್ರ;
ಜನಮನವ ಬೆಸೆಯುವುದು ನಾಡನುಡಿ ಮಾತ್ರ.

ಸ್ವಾರ್ಥಮೂಲದ ಜಾಲದೊಡನಾಟ ಸಾಕು;
ಸ್ವಾಭಿಮಾನದ ಮಾತು ಕೃತಿಯಾಗಬೇಕು;
ತೊಟ್ಟಿಲಲಿ ಪಥ್ಯಗಳು ಹುಟ್ಟುತಿರಬೇಕು.

ದೊಡ್ಡವರ ಎಚ್ಚರಿಸಿ ಮಕ್ಕಳನು ತೂಗು;
ನೋಡಿಕೊಳ್ಳಲಿ ತೆರೆದು ಸ್ವಂತಿಕೆಯ ಗಂಟು;
ಆಕಾಶವೇ ಮಿತಿಯು ಅವಕಾಶವುಂಟು.

ನಿಜದ ದನಿ ಎದೆಯೊಳಗೆ ಜೋಪಾನವಿರಲಿ;
ನಿಜದ ನಿಜ ಹಾಡಿನಲಿ ಹದಗೊಂಡು ಬರಲಿ;
ಸುಖದ ನಾಳೆಯ ಕನಸು ನಿಜವಾಗುತಿರಲಿ.

**ಕುತ್ಯಾಳ ನಾಗಪ್ಪ ಗೌಡ (ಕಿರಣ)**
'ಕಿರಣ ಕುಟೀರ', ಸುಳ್ಯ - ೫೭೪ ೨೩೯, ದಕ್ಷಿಣ ಕನ್ನಡ ಜಿಲ್ಲೆ, ವಿದ್ಯಾರಣ್ಯ - ೫೮೩ ೨೭೬, ಕರ್ನಾಟಕ

# OUR ADVERTISERS

# OUR ADVERTISERS

# ನವಕರ್ನಾಟಕ ೫೦ರ ಸಂಭ್ರಮದಲ್ಲಿ

ತ್ವರಿತ ಗತಿಯಲ್ಲಿ ಸಿದ್ಧವಾಗುತ್ತಿದೆ, ನಿರೀಕ್ಷಿಸಿ!

## ಚಿನ್ನದ ಹಬ್ಬಕ್ಕೆ ಚಂದದ ಕೊಡುಗೆ




ಸಂಪಾದಕರು : ಪ್ರೊ॥ ಎಂ. ಎಚ್. ಕೃಷ್ಣಯ್ಯ, ಡಾ॥ ವಿಜಯಾ, ಶ್ರೀ ಸಿ. ಆರ್. ಕೃಷ್ಣರಾವ್

ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕರ್ನಾಟಕದ ಎರಡು ಸಾವಿರ ವರ್ಷಗಳ ಬೆಳವಣಿಗೆ – ಸಾಧನೆಗಳ ದರ್ಶನ ಈ 'ಕರ್ನಾಟಕ ಕಲಾದರ್ಶನ'. ಕನ್ನಡ ಸಾಹಿತ್ಯಕ್ಕೆ ಒಂದೂವರೆ ಸಾವಿರ ವರ್ಷಗಳ ಶ್ರೀಮಂತ ಪರಂಪರೆ ಇರುವಂತೆ ಸಾಹಿತ್ಯೇತರ ಕಲಾಕ್ಷೇತ್ರಗಳಲ್ಲಿ ಅದಕ್ಕೂ ಮೀರಿದ ಅವಧಿಯಲ್ಲಿ ವೈವಿಧ್ಯಪೂರ್ಣ ಮೌಲಿಕ ಸಾಧನೆಗಳಿವೆ. ಇವು ಭಾರತೀಯ ಸಂಸ್ಕೃತಿಗೆ ಕರ್ನಾಟಕ ನೀಡಿದ ವಿಶಿಷ್ಟ ಕೊಡುಗೆಗಳಾಗಿವೆ. ಆ ಸಾಧನೆ, ಆ ಕೊಡುಗೆ, ಆ ಕಾಣ್ಕೆಗಳ ಒಂದು ನೋಟ ಮೊದಲ ಬಾರಿಗೆ ಈ ಬೃಹತ್ ಸಂಪುಟದಲ್ಲಿ ದಾಖಲಾಗುತ್ತಿದೆ. ಸುವರ್ಣ ಕರ್ನಾಟಕ ವರ್ಷಾಚರಣೆಯ ಸಂದರ್ಭಕ್ಕೆ ನವಕರ್ನಾಟಕ ಪ್ರಕಾಶನದ ಔಚಿತ್ಯಪೂರ್ಣ ಕೊಡುಗೆಯಾಗಿ ಈ ಸುವರ್ಣ ಸಂಪುಟ ರೂಪ ತಳೆದಿರುವುದು ಅಭಿಮಾನದ ವಿಷಯ. ಈ ಸಂಪುಟದ ಒಂಬತ್ತು ಅಧ್ಯಾಯಗಳು ವಿವಿಧ ಕಲಾಪ್ರಕಾರಗಳು, ವಿಭಿನ್ನ ಅಭಿವ್ಯಕ್ತಿ ಶೈಲಿಗಳು, ಅನನ್ಯ ಪ್ರತಿಭೆಯ ಹೊಳಹುಗಳನ್ನು ವಿವರಿಸುವ ಹಲವಾರು ಲೇಖನಗಳನ್ನು ಒಳಗೊಂಡಿವೆ; ಸಾವಿರಾರು ಕಣ್ಮನ ತಣಿಸುವ ವರ್ಣಚಿತ್ರಗಳಿಂದ ಕನ್ನಡ ಭಾಷೆ ತಿಳಿಯದವರಿಗೂ ಸಾವಿರಾರು ವರ್ಷಗಳ ಬೆಳವಣಿಗೆ, ಸಾಧನೆಗಳನ್ನು ಪರಿಚಯಿಸುತ್ತವೆ. ಚಿತ್ರಾನುಭವವೇ ವಿಶಿಷ್ಟ ಸೌಂದರ್ಯಾನುಭವವಾಗುತ್ತದೆ. ಲೇಖನಗಳನ್ನು ಆಯಾ ಕ್ಷೇತ್ರದ ತಜ್ಞರು ಬರೆದಿರುವುದರಿಂದ ಮಾಹಿತಿ ಮತ್ತು ವಿವರಣೆಗೆ ಅಧಿಕೃತತೆ ಒದಗಿದೆ.




ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001.
ದೂರವಾಣಿ : 30578022, 22203580. ಫ್ಯಾಕ್ಸ್ : 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /JANUARY 2010 Rs. 35
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614